# ಸ್ತ್ರೀಧರ್ಮ

(ಸ್ತ್ರೀಯರ ಧರ್ಮಾಚರಣೆ ಬಗ್ಗೆ ಸಮಗ್ರ ಮಾಹಿತಿ ನೀಡುವ ಗ್ರಂಥ)



ಕೋಟಿ ಕೋಟಿ ಭೃತ್ಯರಿರಲು ಹಾಟಕಾಂಬರನ ಸೇವೆ
ಸಾಟಿಯಿಲ್ಲದೆ ಮಾಡಿ ಪೂರ್ಣ ನೋಟದಿಂದ ಸುಖಿಸುತಿಹಳೋ ॥

ಸಂಗ್ರಾಹಕರು :

ಡಾ॥ ಚತುರ್ವೇದಿ ವಿದ್ವಾನ್ ಎಸ್. ವೇದವ್ಯಾಸಾಚಾರ್ಯ

ಪ್ರಕಾಶನ : ಚತುರ್ವೇದಿ ಸೇವಾ ಟ್ರಸ್ಟ್ (ರಿ)

# स्त्री धर्म

# ಸ್ತ್ರೀಧರ್ಮ

(ಸ್ತ್ರೀಯರ ಧರ್ಮಾಚರಣೆ ಬಗ್ಗೆ ಸಮಗ್ರ ಮಾಹಿತಿ ನೀಡುವ ಗ್ರಂಥ)

**ಸಂಗ್ರಾಹಕರು :**

**ಡಾ|| ಚತುರ್ವೇದಿ ವಿದ್ವಾನ್ ಎಸ್. ವೇದವ್ಯಾಸಾಚಾರ್ಯ,** ಎಂ.ಎ., ಬಿಎಡ್.

**ಪ್ರಕಾಶನ :**

**ಚತುರ್ವೇದಿ ಸೇವಾ ಟ್ರಸ್ಟ್ (ರಿ)**

184, ಭಾಗವತ ಮಂದಿರಮ್, 22ನೇ ಮುಖ್ಯರಸ್ತೆ,

12ನೇ 'ಎ' ಅಡ್ಡರಸ್ತೆ, ರಾಘವೇಂದ್ರ ಲೇ ಔಟ್

ಪದ್ಮನಾಭನಗರ, ಬೆಂಗಳೂರು – 560 070.

***ಫೋನ್ :*** 26393950, 94492 13797.

## Streedharma by

Dr. Chaturvedi Vidwan S. VEDAVYASACHARYA, M.A., B.Ed., Phd.,
Bengaluru



Edition : 2022

Copies : 1000

Price : Rs. 500/-

*Type Setting by -*

S.N. RAMESHA
Mob.: 90356 36847
rameshasn02@gmail.com

Cover Page Design :
SHESHGIRI .K.M.

*Printing by -*

SRI YANTHRODHARAKA PRINTERS & PUBLISHERS
K.B. Nagar, Rudrappa Garden
Bangalore 560 026.
Mob. : 94487 95121, 98860 71144
sypp2019@gmail.com

## ಪರಮಪೂಜ್ಯ ಶ್ರೀ 108 ಶ್ರೀ ವಿಶ್ವೇಶ್ವತೀರ್ಥರ

# ಅನುಗ್ರಹ ವಾಣಿ



*ಶ್ರೀ ಶ್ರೀ 108 ಶ್ರೀ ವಿಶ್ವೇಶತೀರ್ಥರು*
ಪೇಜಾವರ ಅಧೋಕ್ಷಜ ಮಠ
ಉಡುಪಿ
ದಕ್ಷಿಣ ಕನ್ನಡ

ಸ್ತ್ರೀಯರು ಬೆಳಗ್ಗೆ ಎದ್ದಗಿನಿಂದ ಹಿಡಿದು, ರಾತ್ರಿ ಮಲಗುವ ತನಕ ಯಾವ ರೀತಿ ಧರ್ಮಮಾರ್ಗದಲ್ಲೀ ನಡೆಯಬೇಕು, ಹೆಣ್ಣು ಮಕ್ಕಳು ಹುಟ್ಟಿದಾಗಿನ ಸಂಪ್ರದಾಯ, ಅವರು ರಜಸ್ವಲೆಯಾದಾಗಿನ ಆಚರಣೆ, ಮದುವೆಯ ಆಚರಣೆಯ ಸಂಪ್ರದಾಯ, ಅವರ ಪೂಜಾಕೈಂಕರ್ಯ ಹೀಗೆ ಹಲವು ವಿಷಯಗಳ ಬಗ್ಗೆ ಮಹಿಳೆಯ ಜೀವನದಲ್ಲಿ ನಡೆಯುವ ಎಲ್ಲಾ ರೀತಿಯ ಸಿಹಿ-ಕಹಿಗಳ ಕುರಿತ್ತು ಸಂಪ್ರದಾಯದ ಚೌಕಟ್ಟಿನಲ್ಲಿ ಮಾಡಬಹುದಾದ ಎಲ್ಲಾ ಕಾರ್ಯಗಳನ್ನು ಈ ಗ್ರಂಥದಲ್ಲಿ ಸವಿಸ್ತಾರವಾಗಿ ಹೇಳಲಾಗಿದೆ. ಸ್ತ್ರೀಧರ್ಮ ಗ್ರಂಥವು ಒಂದು ಉಪಯುಕ್ತವಾದ ಗ್ರಂಥವಾಗಿದ್ದು, ಎಲ್ಲ ಸ್ತ್ರೀಯರು ದಿನನಿತ್ಯದ ತಮ್ಮ ಕಾರ್ಯಗಳಲ್ಲಿ ಬಿಟ್ಟು ಹೋಗಿರುವ ಮತ್ತು ಬಿಟ್ಟಿರುವ ಹಲವು ಸಂಪ್ರದಾಯದ ಬಗ್ಗೆ ಈ ಗ್ರಂಥ ಬೆಳಕು ಚೆಲ್ಲುತ್ತದೆ.

ಇಂತಹ ಗ್ರಂಥವನ್ನು ನಮ್ಮ ಶಿಷ್ಯರಾದ ಶ್ರೀ ಚತುರ್ವೇದಿ ವೇದವ್ಯಾಸಾಚಾರ್ಯರು ಸಂಗ್ರಹ ಮಾಡಿರುವುದು ನಮಗೆ ಸಂತಸವಾಗಿದೆ. ಇವರು ನಮ್ಮ ವಿದ್ಯಾಪೀಠದಲ್ಲಿ ಹನ್ನೆರಡು ವರ್ಷ ಅಧ್ಯಯನ ಮಾಡಿ, ನಮ್ಮಲ್ಲಿ ಸುಧಾಂತ ಅಧ್ಯಯನವನ್ನು ಮಾಡಿ ನಮಗೆ ಅತಿಪ್ರಿಯ ಶಿಷ್ಯರಾಗಿರುವರು. ಇವರು ಈ ಗ್ರಂಥವನ್ನಲ್ಲದೆ ದೀಪ, ನಮಸ್ಕಾರ, ದೇವಪೂಜೆ, ಸಂಧ್ಯಾವಂದನೆ, ಭೋಜನ ಪದ್ಧತಿ ಮೊದಲಾದ ಅತ್ಯುಪಯುಕ್ತಗಳಾದ ಪುಸ್ತಕಗಳನ್ನು ಬರೆದು ಪ್ರಕಾಶನವನ್ನು ಮಾಡಿರುವರು. ಈಗ ಮತ್ತೊಂದು ಗ್ರಂಥವನ್ನು ಕನ್ನಡದಲ್ಲಿ ಪ್ರಕಾಶನ ಮಾಡಿ ಮಾಧ್ವ ಜನಾಂಗಕ್ಕೆ ಮಹದುಪಕಾರ ಮಾಡಿದ್ದಾರೆ.

ಮನೆಯಲ್ಲಿ ಪಾಠ, ಪ್ರವಚನ, ಗ್ರಂಥ ಪ್ರಕಾಶನ ಮೊದಲಾದವುಗಳಿಂದ ತಮ್ಮನ್ನು ಸಮಾಜಕ್ಕೆ ಅರ್ಪಿಸಿಕೊಂಡಿರುವ ವೇದವ್ಯಾಸಾಚಾರ್ಯರಿಗೆ ನಮ್ಮ ಪೂರ್ಣ ಆಶೀರ್ವಾದದ ಜೊತೆಗೆ ಮುಂದೆಯೂ ಇಂತಹ ಅನೇಕ ಗ್ರಂಥಗಳನ್ನು ಬರೆದು ಪ್ರಕಟಣೆಯನ್ನು ಮಾಡುವಂತೆ ಭಗವಂತನು ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ.

*ಇತಿ ನಾರಾಯಣ ಸ್ಮರಣೆಗಳು*

*ಶ್ರೀ 108 ಶ್ರೀ ವಿಶ್ವೇಶತೀರ್ಥ ಶ್ರೀಪಾದಾಃ*

## ಪರಿವಿಡಿ


| ವಿಷಯ ಸೂಚಿ | ಪುಟ ಸಂಖ್ಯೆ |
|---|---|
| ಅನುಗ್ರಹ ವಾಣಿ | iii |
| ಸಂಗ್ರಹಕಾರರ ಮುನ್ನುಡಿ | xx |
| ಪೀಠಿಕೆ | 1-122 |


## 1. ಧರ್ಮದ ಅವಶ್ಯಕತೆ


- ಧರ್ಮದ ಅವಶ್ಯಕತೆ 125
- ಮಾನವ ಜನ್ಮ ದೊಡ್ಡದೋ 126
- ಭಾರತಭೂಮಿ – ಕರ್ಮಭೂಮಿ 127
- ಧರ್ಮ ಎಂದರೇನು? 128
- ಬ್ರಾಹ್ಮಣರ ವಾಕ್ಯ ಪ್ರಮಾಣ 129
- ಸಂಪ್ರದಾಯವೂ ಪ್ರಮಾಣ 130
- ಚಲಾಚಲಪ್ರತಿಮಾ ಪೂಜೆ 131
- ಗೋಪಿಯರು – ಹರಿಧ್ಯಾನ 132


## 2. ಸ್ತ್ರೀ ಧರ್ಮದ ಪ್ರಾಮುಖ್ಯತೆ


- ಪತಿವ್ರತೆಯ ಧರ್ಮ 133
- ಪತ್ನಿಯಿಲ್ಲದೆ ಮಾಡಿದ ಶ್ರಾದ್ಧ ವ್ಯರ್ಥ 135
- ವಿವಾಹದ ಅವಶ್ಯಕತೆ 136
- ಪ್ರಾತಃ ಕೃತ್ಯ 138
- ಪತಿಯ ಆದೇಶ ಪಾಲನ ಮುಖ್ಯಧರ್ಮ 139

## 3. ಸ್ತ್ರೀಯರ ನಿತ್ಯಕೃತ್ಯ


- ಬ್ರಾಹ್ಮಿ ಮುಹೂರ್ತ ಎಂದರೇನು? 140
- ಎದ್ದ ಕೂಡಲೇ ಮಾಡಬೇಕಾದದ್ದೇನು? 141
- ಪತಿಯಲ್ಲಿ ಹರಿಯ ಚಿಂತನೆ 142
- ನೋಡಬಾರದ ವಸ್ತುಗಳು 143
- ಮೂತ್ರ-ಪುರೀಷಗಳಿಗೆ ನಿಷೇಧ ಸ್ಥಳ 144
- ಅರ್ಧಶೌಚ ಸ್ತ್ರೀಯರಿಗೆ 145
- ಉಗುಳುವುದು ಎಡಗಡೆ 146
- ಕಾಲು ತೊಳೆಯುವಾಗ ವಿಶೇಷ 147
- ದಂತಧಾವನದಲ್ಲಿ ಕಾಷ್ಠಗಳು 148
- ದಂತಧಾವನದಲ್ಲಿ ಮೌನ 149
- ದಂತಧಾವನ ಕಾಲ 151
- ಸ್ನಾನ 152
- ತಣ್ಣೀರು ಸ್ನಾನ 153
- ನದೀ ಸ್ನಾನ 155
- ಸ್ನಾನಾನಂತರ ಮುಟ್ಟಬಾರದ ವಸ್ತುಗಳು 156
- ಅಭ್ಯಂಜನದ ದಿವಸಗಳು 157
- ಅಭ್ಯಂಜನಕ್ಕೆ ಎಣ್ಣೆ 158
- ದ್ವಾದಶೀ ಸರ್ವಥಾ ನಿಷಿದ್ಧ 159
- ಆಮಲಕ ಸ್ನಾನ 160
- ಗಂಗಾ ಸ್ತೋತ್ರಂ 161
- ಸ್ನಾನಾ ನಂತರದಲ್ಲಿ ಸಂಕಲ್ಪ 162
- ಸ್ನಾನ ಮಾಡುವಾಗ ವಸ್ತ್ರ 163
- ವಸ್ತ್ರಧಾರಣೆ 164
- ಪುಷ್ಪಧಾರಣೆ 165
- ಆಭರಣಧಾರಣಮ್ 166
- ಧರಿಸುವ ಕ್ರಮ 167

- ಪತಿವ್ರತೆಯ ಗೃಹಕೃತ್ಯ 168
- ದ್ವಾರದೇವತಾ ಪೂಜೆ 169
- ಹೊಸ್ತಿಲಿನ ಮೇಲೆ ಕಾಲಿಡಬಾರದು 170
- ಕಸಗುಡಿಸುವಾಗ ಪ್ರಾಣಿಹಿಂಸೆ ಆಗದಿರಲಿ 171
- ದೇವರ ಮನೆಯ ಶುದ್ಧಿ 172
- ಧನ, ಧಾನ್ಯ, ಭೂಷಣಗಳನ್ನು ಹಾಳು ಮಾಡಬಾರದು 173
- ಜ್ಯೇಷ್ಠ ಮಹಾಲಕ್ಷ್ಮೀ ಪೂಜೆಯಿಂದ ಆಹಾರ ರುಚಿ 174
- ಗೃಹಿಣೀ ಎಂಬ ಶಬ್ದಾರ್ಥ 175
- ಧರ್ಮಚಾರಿಣೀ ಪತಿವ್ರತೆ 176
- ಅಧರ್ಮಚಾರಿಣಿ 177
- ಪತ್ನಿಯು ಯಾವ ಭಾಗದಲ್ಲಿರಬೇಕು? 178
- ಪತಿಸೇವಾ ಫಲ 179
- ಪತಿಗೃಹವೇ ಸ್ವರ್ಗ 180
- ಅರ್ಧಾಂಗಿ – ಅರ್ಧ ಪುಣ್ಯಭಾಗಿ 181
- ಗಂಡನು ಹೊಡೆದಾಗ 182
- ಪತಿಯನ್ನು ಧಿಕ್ಕರಿಸಿದರೆ ಆಗುವ ಅನರ್ಥ 183
- ಲಕ್ಷ್ಮೀದೇವಿಯು ವಾಸಿಸುವ ಸ್ತ್ರೀಯರು 184
- ಸ್ತ್ರೀಯರ ಪ್ರಾವಿತ್ರ್ಯತೆ 185
- ಬಲಾತ್ಕಾರಕ್ಕೊಳಗಾದರೂ ಸ್ತ್ರೀಯನ್ನು ಬಿಡಬಾರದು 186
- ಸ್ತ್ರೀಯರ ನಿಷಿದ್ಧ ಕರ್ಮಗಳು 187
- ಹಲ್ಲಿನಿಂದ ಉಗುರು ಕತ್ತರಿಸಬಾರದು 188


## 4. ಸ್ತ್ರೀಯರ ಪ್ರಾತರಾಹ್ನಿಕ


- ಪ್ರಾತಃ ಸ್ತೋತ್ರಗಳು 190
- ಶೌಚವಿಧಿಃ 191
- ದ್ವಾರ ಪ್ರಾರ್ಥನೆ 192

- ಸ್ನಾನಾರ್ಘ್ಯಮಂತ್ರ 193
- ಗಂಗಾ ಪೂಜೆ 194
- ವಸ್ತ್ರಧಾರಣೆ – ಕಚ್ಚೆ 195
- ನಗ್ನ ಕಾರಣಗಳು 196
- ಗೋಪಿಚಂದನ ಕುಂಕುಮ ಧಾರಣ 197
- ಗದಾ ನಾರಾಯಣ ಮುದ್ರಧಾರಣ ಮಂತ್ರ 198


## ಸ್ತ್ರೀ ಜಪ ಪದ್ಧತಿಃ


- ಆಚಮನ 199
- ಸಂಕಲ್ಪ 200
- ಗುರು ನಮಸ್ಕಾರಃ 201
- ಪುಣ್ಯಪುರುಷಧ್ಯಾನಮ್ 202
- ಪ್ರಾಣಾಯಾಮ 203
- ಧ್ಯಾನಮ್ 204
- ಹರಿಗುರು ಸ್ಮರಣೆ 205
- ಅಂಗನ್ಯಾಸಃ 206
- ತಪ್ತಮುದ್ರಾಧಾರಣ 207
- ಶಾಕಲ್ಯ ಸಂಹಿತೆಯಲಿ 208


## 5. ಭಗವಂತನ ಸ್ಮರಣೆ –ಸ್ತ್ರೀಯರು


- ಕಾಲನಿಯಾಮಕನ ಉಪಾಸನೆ 209
- ಅಡಿಗೆ ಮಾಡುವಾಗ ಭಗವದ್ರೂಪ ಭೀಮಸೇನರ ಚಿಂತನ 213
- ಪಂಚಕೋಶಗಳಲ್ಲಿಯ ರೂಪಗಳ ಸಂಖ್ಯೆ 215
- ವೈಶ್ವಾನರಿಗೆ ಆಹುತಿ ಪ್ರದಾನ 216
- ದೈನಂದಿನ ಕರ್ಮಗಳಲ್ಲಿ ಸ್ತ್ರೀಯರು ಚಿಂತಿಸಬೇಕಾದ ಭಗವದ್ರೂಪಗಳು 217

## 6. ಮಂಗಳ ದ್ರವ್ಯಗಳು – ಸ್ತ್ರೀ


- ಅರಿಷಿಣ 219
- ಕುಂಕುಮ 221
- ಕರೀಮಣೀ 224
- ಬೆಂಡೋಲೆ 224
- ಬಳೆಗಳು 226
- ಮೂಗುತಿ 227
- ಕಾಲುಂಗುರ 228
- ಹೂವು 229
- ಜಡೆ 231
- ವೇಣೀದಾನ ಸಂಕಲ್ಪ 233
- ಚೌರೀ 234
- ಕುಪ್ಪಸ ಸೀರೆ 235
- ಕಚ್ಚೆ ಎಂದರೇನು? 236
- ಒದ್ದೆ ಬಟ್ಟೆ 238
- ಕುಪ್ಪಸ 239
- ಕಾಡಿಗೆ 240
- ಗೋಪೀಚಂದನ 242
- ಗೋ ಪೂಜೆ 244
- ಇತರ ಬಲಿಗಳು 249


## 7. ರಜಸ್ವಲಾ ಧರ್ಮ


- ಭೂಮಿ 250
- ನಾಲ್ಕನೇ ದಿನ ಶುದ್ಧಿ 252
- ರಜಸ್ವಲೆಯರ ಧರ್ಮ 253
- ರಜಸ್ವಲೆ ಏನು ಮಾಡಬೇಕು? 254

- ಅಕಾಲದಲ್ಲಿ ರಜಸ್ಸುಂಟಾದರೆ ಹೇಗೆ ಆಚರಣೆ? 256
- ತಾಯಿ ಮಗಳು ರಜಸ್ವಲೆಯಾದಾಗ ಒಟ್ಟಿಗೆ ಕೂಡಬಹುದೇ? 257
- ದೇವರಿಗೆ ನಮಸ್ಕಾರ ಮಾಡಬಾರದೆ? 258
- ರಜಸ್ವಲಾ ನಿರ್ಣಯ 259
- ಹನ್ನೆರಡರಿಂದ ಐವತ್ತು ವರ್ಷದವರೆಗೂ ರಜಸ್ವಲಾಧರ್ಮ 260
- ರಜಸ್ವಲೆಯು ಕುಳಿತಿದ್ದ ಸ್ಥಳ ಶುದ್ಧವಾಗುವ ರೀತಿ 261
- ಬ್ರಹ್ಮಹತ್ಯೆಯ ಪ್ರಭಾವ 263
- ಸ್ತ್ರೀಯರಿಗೆ ವ್ರತ ವಿಧಾನ 264


## 8. ಋಷಿ ಪಂಚಮೀ ವ್ರತ


- ಋಷಿ ಪಂಚಮೀ ವ್ರತ 265
- ಋಷಿ ಪಂಚಮೀ ಕಥೆ 267


## 9. ವಿವಾಹ ಪ್ರಕ್ರಿಯೆ


- ವಿವಾಹದ ಅವಶ್ಯಕತೆ 276
- ಹಿರಿಯರಿರುವಾಗ ಕಿರಿಯರ ವಿವಾಹ ನಿಷಿದ್ಧವಾಗಿದೆ 278
- ಕನ್ಯೆಯ ವಿವಾಹ ಕಾಲ 279
- ಕನ್ಯೆಯ ನಕ್ಷತ್ರ ಪರೀಕ್ಷೆ 281
- ಪ್ರತ್ಯುದ್ವಾಹ ನಿಷಿದ್ಧ 283
- ತಂದೆ-ತಾಯಿಯರ ಮೃತಿಯಲ್ಲಿ ಮಗಳ ವಿವಾಹ 284


## 10. ವಿವಾಹ ಕಾರ್ಯ


- ವಿವಾಹ ಸಂಸ್ಕಾರದ ಮುಖ್ಯಕ್ರಿಯೆಗಳು 286
- ಲಗ್ನಪತ್ರಿಕೆ 287

- ನಾಂದಿ ಸಮಾರಾಧನೆ 288
- ಗೌರೀಪೂಜೆ 289
- ಜೀರಿಗೆ ಬೆಲ್ಲ 290
- ಕನ್ಯಾದಾನ 291
- ಕಂಕಣ ಬಂಧನ 293
- ಮಾಂಗಲ್ಯಧಾರಣ 294
- ವಿವಾಹ ಹೋಮ 296
- ಪ್ರಾಣಿಗ್ರಹಣ 296
- ಸಪ್ತಪದಿ 297
- ಗೃಹ ಪ್ರವೇಶನೀಯ ಹೋಮ 299
- ನಾಕಬಲಿ 301
- ವಧುವನ್ನು ಮನೆಗೆ ತುಂಬಿಸಿಕೊಳ್ಳುವುದು 302
- ವಿವಾಹಿತ ಸ್ತ್ರೀಯರ ನಿಯಮಗಳು 303


## 11. ಗರ್ಭಿಣಿಯ ಧರ್ಮಗಳು


- ಗರ್ಭಿಣಿಯ ನಿಯಮಗಳು 307
- ಸಂತಾನ ಗೋಪಾಲಕೃಷ್ಣ ಮಂತ್ರ 308
- ನಿಷಿದ್ಧ ದಿನಗಳಲ್ಲಿ ಗರ್ಭಧಾನ ದುಷ್ಫಲ 309
- ಗರ್ಭಿಣಿಯ ಕರ್ತವ್ಯ 310
- ಗರ್ಭಿಣಿಯ ಆಹಾರ – ವಿಹಾರಗಳು 311
- ಗಂಡೋ ಹೆಣ್ಣೋ? 312
- ಗರ್ಭಿಣಿಯ ಧರ್ಮಗಳು 313
- ಬಸುರಿಯ ಬಯಕೆ 314
- ಮಂಗಳವಸ್ತುಗಳನ್ನು ಧರಿಸಬೇಕು 315
- ಅಷ್ಟಮಂಗಲ ದಾನ 316
- ಗರ್ಭಿಣೀ ಸಂಸ್ಕಾರಗಳು 317
- ಒಂದು ಬಾರಿ ಮಾತ್ರ ಸೀಮಂತ 318

## 12. ಸಂಸ್ಕಾರಗಳು – ಸ್ತ್ರೀಯರು


- ತೊಟ್ಟಿಲು ಶಾಸ್ತ್ರ 320
- ನಿಷ್ಕ್ರಮಣ 321
- ಉಡುದಾರ ಕಟ್ಟುವುದು 322
- ವರ್ಷಪೂರ್ತಿ 323
- ವಿವಾಹ 324
- ವಿವಾಹಕ್ಕೆ ಯೋಗ್ಯ ವಧೂ–ವರರು 325
- ಜ್ಯೇಷ್ಠಪುತ್ರ – ಪುತ್ರೀ ವಿವಾಹ ನಿಷಿದ್ಧ 327
- ಕನ್ಯೆ ಹೇಗಿರಬೇಕು? 328
- ಐದು ಲಕಾರವಿರುವ ಲಲನೆ 329
- ವಿವಾಹ ವರ ಯೋಗ್ಯತೆ 331
- ಪತ್ನಿಯ ಪತಿಸೇವೆ – ವಿಷ್ಣು ಪೂಜೆ 332
- ಪತಿಯ ಉಚ್ಛಿಷ್ಟ ಭೋಜನ 333
- ಪುರಾಣ ಶ್ರವಣ – ಪಠನ 334


## 13. ತುಳಸೀ ಸ್ತ್ರೀ


- ತುಳಸೀ ಕಥಾ 335
- ತುಳಸಿಯೆಂದು ಹೆಸರು ಬರಲು ಕಾರಣ 337
- ತುಳಸಿಯನ್ನು ಮುಟ್ಟಿ ಪೂಜಿಸಬಹುದೆ? 340
- ತಾರತಮ್ಯದಲ್ಲಿ ತುಳಸೀ 341
- ತುಳಸೀ ಬೆಳೆಸುವುದು 342
- ಸ್ತ್ರೀಯರು ಸಾಲಿಗ್ರಾಮ ಪೂಜೆ 343


## 14. ಗೌರೀಪೂಜೆ ಸ್ತ್ರೀ


- ರುಗ್ಮಿಣಿಯಿಂದ ಗೌರೀಪೂಜೆ 347

- ನಿತ್ಯ ಗೌರೀ ಪೂಜೆ 349
- ಪ್ರತಿತಿಥಿ ಗೌರೀ ವ್ರತ 350
- ಚೈತ್ರ ಗೌರೀ 351
- ಸುವರ್ಣಗೌರೀ ವ್ರತ 352
- ಶೀಗೀ ಗೌರೀ 353
- ಶಂಕರ ಪಾರ್ವತೀ ಪೂಜೆ 354


## 15. ಬಾಗಿಣ


- ಬಾಗಿಣ – ಸ್ತ್ರೀಯರು 356
- ಬಾಗಿಣದಲ್ಲಿರಬೇಕಾದ ವಸ್ತುಗಳು 356
- ಬಾಗಿಣದ ಅರ್ಥ 359


## 16. ಸ್ತ್ರೀಯರ ಪಾಕ


- ಅಡಿಗೆಯಲ್ಲಿ ಸ್ತ್ರೀ ಪಾತ್ರ 361
- ಪಾಕವು ಏಳು ವಿಧ 362
- ಕಬ್ಬಿಣದ ಪಾತ್ರೆಯಲ್ಲಿ ನಿಷಿದ್ಧ 363
- ಗೃಹಿಣಿಯೇ ಶುದ್ಧಿಕರಿಸಬೇಕು 365
- ಕಂಚಿನ ಶ್ರೇಷ್ಠತೆ 366
- ಅಡಿಗೆಯಲ್ಲಿ ನಿಷಿದ್ಧ ವಸ್ತುಗಳನ್ನು ಬಳಸಬಾರದು 367
- ಅಡಿಗೆಯ ಸ್ಥಳ ಶುದ್ಧಿ 368
- ನೈವೇದ್ಯದಲ್ಲಿ ಏನೇನಿರಬೇಕು 369
- ನೈವೇದ್ಯ ಮಂಡಲ 369
- ದ್ವಾದಶಿ ಬಾಳೆ ಎಲೆ ನಿಷಿದ್ಧ 371
- ಕೈಯ್ಯಲ್ಲಿ ಬಡಿಸಬಾರದ ವಸ್ತುಗಳು 372

- ಹಸಿವೆಗೊಂಡ ಪತಿಗೆ ಉಚಿತ ಸತ್ಕಾರ ಧರ್ಮ 373
- ಐದು ಒದ್ದೆಯಾಗಬೇಕು 374
- ಕೈ ತುತ್ತು ನಿಷಿದ್ಧ 375
- ಪರಾನ್ನದ ಬಗ್ಗೆ ಎಚ್ಚರವಿರಲಿ 377


## 17. ಪತಿವ್ರತೆಯರ ನಡೆ-ನುಡಿಗಳು- ಪತಿವ್ರತೆಯರ ಕಥೆಗಳು


- ಸ್ತ್ರೀಯರು ದಿನಚರಿ : ದ್ರೌಪದಿಯ ಪಾತಿವ್ರತ್ಯ 379
- ಪತಿವ್ರತೆಯಲ್ಲಿ ಲಕ್ಷ್ಮೀ ಸನ್ನಿಧಾನ 380
- ಸ್ತ್ರೀಯರ ವ್ಯವಹಾರ 390
- ಪಿಂಗಲೆಯ ಕಥೆ 394
- ಸುಕಲೆ ಕಥೆ 395
- ಕನ್ಯೆಯ ಶಕ್ತಿ 397
- ಸತೀಗಾಲವಿ 398
- ಸತೀ ಅರುಂಧತೀ 400
- ಸತೀ ಸುಕನ್ಯಾ 403
- ಶತರೂಪಾದೇವಿ – ಸ್ತ್ರೀಯರಿಗೆ ಬ್ರಹ್ಮದೇವರ ವರ 406
- ಪಾತಿವ್ರತ್ಯವು ದಯಾಗುಣವು 409
- ಶಾಂಡಿಲೀ ಸುಮನೆಯರ ವೃತ್ತಾಂತ 411
- ಲಕ್ಷಬತ್ತಿ ವ್ರತ – ಪತಿವ್ರತೆ 413
- ಪಾತಿವ್ರತ್ಯ ಪ್ರಭಾವ ಭವಿಷ್ಯದ್ ಜ್ಞಾನ 415
- ಸತಿ ಸಾವಿತ್ರೀ 418
- ಸುವರ್ಚಲೆ 420
- ಮೈತ್ರೇಯಿಯ ಅಧ್ಯಾತ್ಮ ನಿಷ್ಠೆ 421
- ಸೀತಾ ಕೌಸಲ್ಯೆಯರ ಸಂವಾದ 423
- ಸ್ತ್ರೀಯರ ಕರ್ತವ್ಯಗಳು – ಮಹಾಭಾರತ 425

## 18. ವಿಧವಾ ಧರ್ಮ


- ವಿಧವಾ ಎಂದರೆ ಯಾರು? 429
- ವಿಧವೆಯರು ದಾನ ನೇರವಾಗಿ ನೀಡಬಹುದೇ? 431
- ಪತಿಗೆ ತರ್ಪಣ 432
- ಕುಂತಿಯ ಆದರ್ಶ ಪಾಲನೆ 433
- ಒಪ್ಪತ್ತು ಮಾತ್ರ ಭೋಜನ 434
- ತೈಲಾಭ್ಯಂಗ ನಿಷೇಧ 435
- ಹರಿನಿವೇದಿತ ಭೋಜನ 436
- ಮುಂಡನ ವಿಹಿತವೇ? 437
- ಸ್ವರ್ಗಪ್ರಾಪ್ತಿ – ಭರ್ತೃಪ್ರಾಪ್ತಿ 438
- ಮುಂಡನ ಐಚ್ಛಿಕವೇ? 439
- ವಿಧವಾ ಧರ್ಮ ಸಂಗ್ರಹ 442
- ಕರ್ಮಕಾಲದಲ್ಲಿಯೂ ಭಗವತ್ಸ್ಮರಣೆ 445
- ದಂತಧಾವನ 446
- ಸ್ನಾನದ ಅವಶ್ಯಕತೆ 447
- ತನ್ನ ವಸ್ತ್ರ ತಾನೇ ಒಗೆಯಬೇಕು 449
- ಶ್ರೀಕೃಷ್ಣಮಂತ್ರದಿಂದಲೇ ಸರ್ವಸಿದ್ಧಿ 450
- ಕಂಚುಕಧಾರಣೆ ನಿಷಿದ್ಧ 451
- ಪ್ರಸ್ತುತ ಸ್ಥಿತಿ : ವಿಧವಾ ವಿವಾಹ 452
- ದೇವತಾ – ಬ್ರಾಹ್ಮಣ – ಗುರುಗಳ ಸೇವೆ 453


## 19. ಸ್ವಪ್ನ ಫಲ


- ಸ್ವಪ್ನಗಳ ಫಲ 456
- ಸ್ತ್ರೀಯರ ಸ್ವಪ್ನಗಳು 457

- ಶುಭಸ್ವಪ್ನಗಳು 458
- ದುಃಸ್ವಪ್ನಗಳು 462


## 20. ವಿಧಿ-ನಿಷೇಧ


- ಸ್ತ್ರೀಯರ ವಿಧಿ ನಿಷೇಧಗಳು 465
- ಸಂಧ್ಯಾಕಾಲದಲ್ಲಿ ಮಾಡಬಾರದ್ದು 466
- ಮಲಗುವ ದಿಕ್ಕು 467
- ಮಲ-ಮೂತ್ರ ನಿಯಮಗಳು 468
- ಸ್ನಾನದ ಮಹತ್ವ 471
- ಸ್ನಾನ ಸಂಕಲ್ಪ 473
- ವಸ್ತ್ರಗಳ ಶುದ್ಧಿ 474
- ಆರ್ದ್ರವಸ್ತ್ರ ಮಹಾನಿಷಿದ್ಧ 475
- ಸ್ತ್ರೀಯರ ಅರ್ಚನ ವಿಧಿ 476
- ಸ್ತ್ರೀಯರು ಯಾವ ಮಂತ್ರ ಜಪಿಸಬೇಕು 477
- ಪ್ರಾತಃಕಾಲೀನ ಜಪ 478
- ಅನಾರೋಗ್ಯದಿಂದ ಬಳಲುತ್ತಿರುವಾಗ 479
- ನ್ಯಾಯ ಸಂಪಾದಿತವಾಗಿರಬೇಕು 480
- ಶ್ರೀಕೃಷ್ಣಮಂತ್ರ ಅತ್ಯಂತ ಪ್ರಿಯ 481
- ಲಕ್ಷ್ಮೀದೇವಿ, ಗೌರೀಪೂಜೆ 482
- ಶುಕ್ರವಾರದಂದು ಆರತಿ 483
- ಜಪಸಿದ್ಧಿಯಾಗಬೇಕಾದರೆ ತ್ರಿಕರಣ ಶುದ್ಧಿ ಬೇಕು 484
- ಮನಸ್ಸೇ ಸರ್ವಕಾರಣ 485
- ಪ್ರಾತಃಕಾಲೀನ ವಸ್ತುಗಳ ದರ್ಶನ 486
- ಜಿಪುಣತನ ಸ್ತ್ರೀಯರಿಗೆ ಕೂಡದು 490
- ಪೂಜೆ ಮಾಡುವ ಅಧಿಕಾರವಿದೆ 491

- ಸ್ತ್ರೀಯರಿಗೆ ಶಿಕ್ಷಣ 492
- ಸ್ತ್ರೀಗೆ ಸ್ವಾತಂತ್ರ್ಯವಿಲ್ಲ – ಇದರರ್ಥ 494


## 21. ರಂಗೋಲೆ


- ರಂಗೋಲೆ 496
- ಲಕ್ಷ್ಮೀ ಪಾದ – ನಾರಾಯಣಪಾದ 500
- ನಾಗಮಂಡಲ 501
- ರಂಗೋಲಿಯ ಫಲ 502
- ಚಕ್ರಾಬ್ಜ ಮಂಡಲ 505
- ದೀಪಾವಳೀ ರಂಗೋಲೆ 507


## 22. ದಾಸರ ಪದಗಳು


- ದಾಸರ ಪದಗಳು 509
- ಉದಯರಾಗ 510
- ಗಜೇಂದ್ರ ಮೋಕ್ಷ 510
- ತುಳಸಿ ಸ್ತೋತ್ರ –1 ಉದಯರಾಗ 513
- ಬೃಂದಾವನ ಸ್ತೋತ್ರ 516
- ತುಳಸೀ ಸ್ತೋತ್ರ – 2 517
- ತಾರತಮ್ಯ 518
- ಶ್ರೀನಾರಾಯಣವರ್ಮ – 1 521
- ನಾರಾಯಣ ವರ್ಮ – 2 522
- ಲಕ್ಷ್ಮೀ ಹೃದಯ 524
- ಫಲವಿದು ಬಾಳ್ವುದಕೆ 524
- ಮಂಗಳಮ್ 529

- ಗಂಗಾನದಿಯ ಸ್ತೋತ್ರ 530
- ಸ್ತ್ರೀಧರ್ಮ ಕೋಲು ಪದ್ಯ 530
- ಕೇಶವಾದಿ ನಾಮಗಳು 536


## 23. ಚಾತುರ್ಮಾಸ್ಯ ಆಚರಣೆ


- ಚಾತುರ್ಮಾಸ್ಯ ವ್ರತಾರಂಭ – ಅದರ ಶ್ರೇಷ್ಠತೆ 539
- ಚಾತುರ್ಮಾಸ್ಯ – ದೇವತೆಗಳು 540
- ಚಾತುರ್ಮಾಸ್ಯ ಸ್ವರೂಪ 541
- ವ್ರತಬಿಟ್ಟರೆ ಮಹಾದೋಷ 542
- ಚಾತುರ್ಮಾಸ್ಯದ ಆಚರಣೆ 543
- ವಿವಾಹಾದಿಗಳಿಗೆ ವರ್ಜ್ಯ 544
- ಶಯನೈಕಾದಶೀ ವ್ರತಸಂಕಲ್ಪ 545
- ಶಾಕವ್ರತ ಸಂಕಲ್ಪ 546
- ಇತರ ವ್ರತಗಳು 547
- ಲಕ್ಷ ಪ್ರದಕ್ಷಿಣ ವ್ರತ 549
- ಧಾರಣ–ಪಾರಣವ್ರತ 550
- ಲಕ್ಷ ನಮಸ್ಕಾರ 551
- ಲಕ್ಷ ಬತ್ತಿ ವ್ರತ 552
- ಪರಾಕ ವ್ರತ 553
- ಷಷ್ಠಿಕಾಲ ವ್ರತ 554
- ಶಾಕವ್ರತದಲ್ಲಿ ಸ್ವೀಕಾರಾರ್ಹಗಳು 555
- ಚಾತುರ್ಮಾಸ್ಯದಲ್ಲಿ ತಿನ್ನಬಾರದ್ದು 557
- ಚಾತುರ್ಮಾಸ್ಯದಲ್ಲಿ ಶ್ರಾದ್ಧ 558
- ದಧಿ ವ್ರತ 559
- ಕ್ಷೀರ ವ್ರತ 560

- ದ್ವಿದಲ ವ್ರತ 561
- ತಪ್ತ ಮುದ್ರಧಾರಣೆ 564
- ಅರಿಶಿಣ-ಕುಂಕುಮ ದಾನ 567
- ತಾಂಬೂಲ ದಾನ 567


## 24. ಅಧಿಕ ಮಾಸ ಕರ್ತವ್ಯಗಳು


- ಅಧಿಕಮಾಸದ ಅರ್ಥ 574
- ದ್ವಾದಶಾದಿತ್ಯರು 576
- ಪುರುಷೋತ್ತಮ ಮಾಸದ ಶ್ರೇಷ್ಠತೆ 577
- ಅಧಿಕಮಾಸದಲ್ಲಿ ಕರ್ತವ್ಯಗಳು 581
- ಅಪೂಪದಾನ – ಹಣ್ಣುಗಳ ದಾನ 582
- ಅಧಿಕ, ನಿಜ ಎರಡರಲ್ಲೂ ಮಾಡಲೇಬೇಕಾದ್ದು 585
- ವರ್ಜ್ಯ ಸಂಗ್ರಹ 586
- ತೀರ್ಥಯಾತ್ರೆ 587
- ಚಾತುರ್ಮಾಸ್ಯ 589
- ಮುಂದೆ ಬರುವ ಕ್ಷಯಮಾಸಗಳು 593


* * * * * *

# ಮುನ್ನುಡಿ

## ಶ್ರೀರಸ್ತು

**ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್ ।**
**ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ ॥**

ಎಂಬ ಶ್ರೀಮದಾಚಾರ್ಯರ ಉಕ್ತಿಯಂತೆ ಪ್ರತಿಯೊಂದು ದೇವತೆಗಳಲ್ಲಿ ಅಂತರ್ಯಾಮಿಯಾಗಿರುವ ಚರಾಚರ ಪ್ರಪಂಚನಿಯಾಮಕನಾದ ಸಕಲ ಶಕ್ತಿಗಳಿಗೆ ಕೇಂದ್ರಬಿಂದುವಾಗಿರುವ ಭಗವಂತನಿಗೆ ಸಕಲ ಪೂಜೆಗಳೂ ಸಲ್ಲುತ್ತಿರುತ್ತವೆ.

ಗಣಪತಿಯಲ್ಲಿರುವ ಇಂದ್ರಿಯ ಗಣಗಳಿಗೆ ಅಧಿಪತಿಯಾದ ಹೃಷೀಕೇಶನೇ ಗಣಪತಿ ಶಬ್ದವಾಚ್ಯನಾಗಿದ್ದು ಗಣಪತಿಯಲ್ಲಿರುವ ವಿಘ್ನನಿವಾರಕತ್ವ ಶಕ್ತಿಯನ್ನು ಈ ತತ್ತ್ವದ ಮೂಲಕ ಉಪಾಸಕರಿಗೆ ನೀಡುವವನೂ ಭಗವಂತನೇ ಆಗಿರುವನು.

ಹಾಗೆಯೇ ಸೂರ್ಯನಲ್ಲಿರುವ ದಾಹಕತ್ವಶಕ್ತಿಯೂ ಭಗವಂತನದೇ. ಸೂರಿ (ಜ್ಞಾನಿ)ಗಳಿಂದ ಗಮ್ಯನಾದ್ದರಿಂದಲೂ ಮುಖ್ಯತಃ ಸೂರ್ಯ ಶಬ್ದವಾಚ್ಯನು ವಿಷ್ಣುವೇ. ಹೀಗೆಯೇ ಯಾವುದೇ ದೇವತೆಯ ಉಪಾಸನೆ ಮಾಡುವ ಉಪಾಸಕರು ಅಂತರ್ಯಾಮಿತ್ವವನ್ನು ಗುರುತಿಸಿಕೊಂಡು ಭಗವಂತನಿಗೆ ಪೂಜೆ ತಲುಪುವಂತೆ ಆರಾಧಿಸಿದರೆ ಮಾತ್ರ ಮುಖ್ಯಫಲಕ್ಕೆ ಭಾಗಿಯಾಗುವರು.

ಈ ನಿಟ್ಟಿನಲ್ಲಿ ಶ್ರೀಮದಾಚಾರ್ಯರು ಗೋಲಕತ್ರಯ ಚಿಂತನೆಯನ್ನು ತಿಳಿಸಿ ಅಂತರ್ಯಾಮಿತ್ವದ ಮಹತ್ವವನ್ನು ಹೆಚ್ಚಿಸಿರುವರು. ಯಾವುದೇ ಉಪಾಸನೆಯು ನಡೆಯುವಾಗ ಪ್ರಕೃತವಾದ ದೇವತೆಯ ಪ್ರತಿಮೆ, ದೇವತೆ, ನಿಯಾಮಕರಾದ ಪ್ರಧಾನವಾಯುತತ್ತ್ವ (ಮುಖ್ಯಪ್ರಾಣ), ನಂತರ ಸರ್ವಪ್ರೇರಕನಾದ ಭಗವಂತನ ಉಪಾಸನೆಯು ನಡೆಯಬೇಕು.

ಪ್ರಧಾನವಾಯುತತ್ತ್ವವಾದರೋ ಉಪಾಸಕ ಹಾಗೂ ಉಪಾಸ್ಯದೇವತೆಯ ಮಧ್ಯದ ಸೇತುವೆಯಂತಿರುವುದು. ಅಲ್ಲದೆ ಉಪಾಸಕನು ಮಾಡುವ ಪೂಜೆಯನ್ನು ಭಗವಂತನಿಗೆ ತಲುಪಿಸುವರು. ಇದನ್ನೇ ಉಪನಿಷತ್ತು –

"*ತಸ್ಮಿನ್ನಪೋ ಮಾತರಿಶ್ವಾ ದದಾತಿ*" ಎಂದಿದೆ.

ಈ ಕಾರಣದಿಂದಲೇ ಪ್ರತಿಯೊಂದು ಕರ್ಮಗಳಲ್ಲಿ 'ಭಾರತೀರಮಣ– ಮುಖ್ಯಪ್ರಾಣಾಂತರ್ಗತ' ಎಂದು ಹೇಳುವುದು ವಾಡಿಕೆಯಲ್ಲಿದೆ.

ಪ್ರತಿಯೊಂದು ಮತದವರೂ ಈ ವಿಷಯದ ಮಹತ್ವವನ್ನು ಕಂಡು, ಅದರಂತೆ ಆಚರಿಸಿದರೆ ಸರ್ವೋತ್ತಮನಾದ ಭಗವಂತನು ಸುಪ್ರೀತನಾಗುವನು.

ಯಾವುದೇ ವ್ರತದ ಕೊನೆಯಲ್ಲಿಯೂ ತಮಗೆ ಅರಿವಿದ್ದೋ, ಅರಿವಿಲ್ಲದೆಯೋ '**ಶ್ರೀಕೃಷ್ಣಾರ್ಪಣಮಸ್ತು**' ಎಂದು ಹೇಳಿ ಭಗವಂತನಿಗೆ ಅರ್ಪಿಸುವುದಿದೆ. ಹಾಗೆಯೇ ಸಂಧ್ಯಾವಂದನೆಯಲ್ಲಿಯೂ ಕೂಡ.

**ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್ ।**
**ಸರ್ವದೇವನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ ॥**

'ಉಪಾಸಿಸಲಾಗುವ ಇಂದ್ರಾದಿ ದಿಕ್ಪಾಲದೇವತೆಗಳ ಹಾಗೂ ಜಲಾಭಿ-ಮಾನಿ ದೇವತೆಗಳ ವಂದನೆಗಳೆಲ್ಲವೂ ಭಗವಂತನಿಗೆ ಸೇರುತ್ತವೆ' ಎಂದು ತಿಳಿಸುವ ಶ್ಲೋಕದಲ್ಲಿ 'ಹೇಗೆ ಎಲ್ಲ ನದಿಗಳ ನೀರು ಸಮುದ್ರವನ್ನು ಸೇರುತ್ತದೋ ಹಾಗೆ ಸರ್ವದೇವತೆಗಳಿಗೆ ಮಾಡಿದ ನಮಸ್ಕಾರಾದಿಗಳು ಕೇಶವನಿಗೆ ಸೇರುತ್ತವೆ' ಎಂದು ದೃಷ್ಟಾಂತಪೂರ್ವಕವಾಗಿ ವಿವರಿಸಲಾಗಿದೆ. ಭಾಗವತದಲ್ಲಿನ ಕೆಳಗಿನ ಮಾತು ಸಹ ಗಮನಾರ್ಹ –

**ಪ್ರಾಜ್ಞೈಃಪರಸ್ಮೈ ಪುರುಷಾಯ ಚೇತಸಾ**
**ಗುಹಾಶಯಾಯೈವ ನ ದೇಹಮಾನಿನೇ ।**

ಈ ವಿಚಾರಗಳನ್ನು ವಿಮರ್ಶಿಸಿದಾಗ ಶ್ರೀಮದಾಚಾರ್ಯರು ಯಾವುದೇ ವಿಚಾರವನ್ನು ಪ್ರಮಾಣವಿಲ್ಲದೇ, ಆಗ್ರಹಪೂರ್ವಕವಾಗಿ ಹೇಳುತ್ತಿರುವರು ಎನ್ನುವುದು ತಪ್ಪೆಂದು ತಿಳಿಯುತ್ತದೆ. ಅವರ ವಿಚಾರಧಾರೆ ಪ್ರಮಾಣಪುರಃಸರ-ವೆಂದೇ ತೀರ್ಮಾನಿಸಬಹುದು.

**ದೇವನೊಬ್ಬ ನಾಮ ಹಲವು –**

ಸಕಲದೇವತೆಗಳ ನಾಮಗಳನ್ನು ಧರಿಸಿದವನು ಭಗವಂತನೆಂದು ಆಚಾರ್ಯರು ತಿಳಿಸಿದ್ದಾರೆ.

**'ಯೋ ದೇವಾನಾಂ ನಾಮಧಾ ಏಕ ಏವ'**

ಆದ್ದರಿಂದ ಅಂತರ್ಯಾಮಿ ವಿವಕ್ಷೆಯಿಂದ ಆಯಾಯ ಪ್ರತೀಕಗಳಲ್ಲಿ ಪೂಜಿಸಿದಾಗ ಭಗವಂತನು ಸಂತುಷ್ಟನಾದರೆ ಇತರ ಸಕಲ ಭಗವಂತನ ಪರಿವಾರ ದೇವತೆಗಳೆಲ್ಲಾ ತೃಪ್ತರಾಗುವರು. ಭಗವಂತನನ್ನು ಮರೆತು ಕೇವಲ ಸೂರ್ಯಾದಿ-ಗಳನ್ನು ಮಾತ್ರ ಪ್ರಧಾನವಾಗಿ ಪೂಜಿಸಿದರೆ ಕೊಂಬೆಗಳಿಗೆ ನೀರೆರೆದಂತಾಗಿ ಫಲಗಳಿಂದ ವಂಚಿತರಾಗುವೆವು. ಭಗವಂತನಿಗೆ ಪೂಜೆಯನ್ನು ಆಯಾಯ

ಪ್ರತೀಕದಲ್ಲಿ ಸಮರ್ಪಿಸಿದರೆ ಜಗದ್ವೃಕ್ಷದ ಮೂಲದಂತಿರುವ ಭಗವಂತನಿಗೆ ಸೇರಿ ಶಾಖೋಪಶಾಖೆಗಳೂ ತೋಯ್ದು ಉಬ್ಬಿ ಫಲಭರಿತವಾಗುವುವು.

**ಯಥಾ ಹಿ ಸ್ಕಂಧಶಾಖಾನಾಂ ತರೋರ್ಮೂಲಾವಸೇಚನಮ್ ।**
**ಏವಮಾರಾಧನಂ ವಿಷ್ಣೋಃ ಸರ್ವೇಷಾಮಾತ್ಮನಶ್ಚ ಹಿ ॥**

ಭಗವಂತನ ಸ್ಮೃತಿ ಇರದ ಕರ್ಮವು ಆಸುರವೆನಿಸಿ, ದುಷ್ಫಲವೇ ಲಭಿಸುವುದು.

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ಮತಾ ।**

ಪರಮವಿಷ್ಣುಭಕ್ತರಾದ ಗಣಪತ್ಯಾದಿ ದೇವತೆಗಳು ಪೂಜಕರು ತಮಗೆ ಅರ್ಪಿಸಿದ ಪೂಜೆಯನ್ನು ತಮಗೆ ನಿಯಾಮಕನಾದ ದೇವದೇವನಲ್ಲಿ ಅರ್ಪಿಸಿ ಬಿಡುವರು. ಇದನ್ನು ಗರುಡಪುರಾಣ ಬ್ರಹ್ಮಕಾಂಡವು ಹೀಗೆ ತಿಳಿಸಿದೆ – **'ನಿವೇದಯಿತ್ವಾ ಪರದೇವತಾಯೈ'**.

ಯಾರು ಅನ್ಯದೇವತೆಗಳ ಭಕ್ತರಾಗಿದ್ದು ಅವರನ್ನು ಪೂಜಿಸುವರೋ, ವಿಧಿವತ್ತಾಗಿ ಅಲ್ಲದಿದ್ದರೂ ಕಡೆಗೆ ನನ್ನನ್ನೇ ಪೂಜಿಸುವರು. ಆದರೆ ಬೇರೆ ದೇವತೆಗಳ ಆರಾಧನೆಯನ್ನು ಸ್ವೀಕರಿಸುವವನು ಭಗವಂತನೇ ಎಂಬ ಜ್ಞಾನರಹಿತರಾಗಿರುವರು. ಆದ್ದರಿಂದ ಅವರಿಗೆ ನಶ್ವರವಾದ ಸ್ವರ್ಗಾದಿಗಳು ಫಲವಾಗಿ ಲಭಿಸುವುವು. ಜ್ಞಾನಪೂರ್ವಕವಾಗಿ ಆರಾಧನೆ ಮಾಡುವವರಿಗೆ ಶಾಶ್ವತವಾದ ಫಲವು ಲಭಿಸುವುದು.

ಅಶ್ವಮೇಧಾದಿಯಾಗಗಳನ್ನು ಮಾಡಿದರೂ ಆಯಾಯ ಯಾಗಗಳಿಗೆ ಪರಮಾತ್ಮನೇ ದೇವತೆಯೆಂದು ತಿಳಿದು ಅವನನ್ನೇ ಉಪಾಸಿಸಬೇಕು. ಇತರ ದೇವತೆಗಳನ್ನು ವಿಷ್ಣುಭಕ್ತರೆಂಬ ಭಾವನೆಯಿಂದಲೇ ಗೌರವಿಸಬೇಕು. ಈ ಮಾರ್ಗವು ಶ್ರೇಷ್ಠಮಾರ್ಗವಾಗಿದೆ.

**ಅಶ್ವಮೇಧಾದಿಭಿರ್ಯಜ್ಞೈರಪಿ ಕೇಶವಯಾಜಿನಃ ।**
**ವೈಷ್ಣವಾ ಇತಿ ಬುದ್ಧ್ಯೈವ ಮಾನಯಂತ್ಯನ್ಯದೇವತಾಃ ॥**

ಏಕೆಂದರೆ ಎಲ್ಲ ಯಜ್ಞಯಾಗಗಳ ಫಲಭೋಕ್ತೃಭಗವಂತನೇ ಆಗಿರುವನು.

**'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ'**

ಅನ್ಯದೇವತೆಗಳ ಪೂಜೆಯನ್ನು ಮಾಡಿದರೂ ಅಂತ್ಯದಲ್ಲಿ ಭಗವಂತನಿಗೆ ಸಮರ್ಪಣೆಯನ್ನು ಮಾಡಲ್ಪಟ್ಟಾಗಲೇ ಸ್ವರ್ಗಾದಿಫಲವು ಲಭಿಸುವುದು. ಇಲ್ಲದಿದ್ದರೆ ಇಲ್ಲ. ಆದ್ದರಿಂದ ಅಂತಹ ಶ್ರೀಹರಿಯನ್ನು ಪೂಜಿಸಬೇಕು ಎಂದು ಆಗ್ನೇಯದಲ್ಲಿ ಹೇಳಲಾಗಿದೆ.

**ಅನ್ಯದೇವತಾಪೂಜಾಪಿ ಯಸ್ಮಿನ್ನಂತೇ ಸಮರ್ಪಿತಾಃ ।**
**ಸ್ವರ್ಗಾದಿಫಲಹೇತುಃ ಸ್ಯಾತ್ ನಾನ್ಯಥಾ ತಂ ಭಜೇದ್ ಹರಿಮ್ ॥**

ಈ ಮೇಲೆ ಹೇಳದಂತೆ ಯಾವುದೇ ಅನ್ಯದೇವತೆಯನ್ನು ಉಪಾಸಿಸುವಾಗಲೂ ತದಂತರ್ಗತನಾದ ಭಗವಂತನ ಪೂಜೆಯನ್ನು ಮಾಡಿದರೆ ಮಾತ್ರ ಐಹಿಕಪಾರತ್ರಿಕ-ಲಾಭವೆಂದು ತಿಳಿದು ಶುದ್ಧವೈಷ್ಣವ ಸಂಪ್ರದಾಯಕ್ಕೆ ಅನುಸರಿಯಾಗಿ **'ಸ್ತ್ರೀಧರ್ಮ'** ಎಂಬ ಈ ಪುಸ್ತಕವನ್ನು ಸಜ್ಜನರಿಗಾಗಿ ಬರೆಯಲಾಗಿದೆ.

ಈ ಸ್ತ್ರೀಧರ್ಮಕ್ಕೆ ಕೃಪೆ ಮಾಡಿ ಅನುಗ್ರಹವಚನವನ್ನು ನೀಡಿ ಪ್ರೋತ್ಸಾಹಿಸಿರುವ ನನ್ನ ವಿದ್ಯಾಗುರುಗಳಾದ 108 ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ಭಕ್ತ್ಯಾದರ ಪೂರ್ವಕವಾಗಿ ಕೃತಜ್ಞತೆ ಹಾಗೂ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುವೆ.

ಈ ಗ್ರಂಥದ ಡಿ.ಟಿ.ಪಿ. ಕಾರ್ಯವನ್ನು ಆಸಕ್ತಿಯಿಂದ ಮಾಡಿದ ಶ್ರೀ ಎಸ್.ಎನ್.ರಮೇಶ್‌ರವರಿಗೂ ಹಾಗೂ ಈ ಪುಸ್ತಕವನ್ನು ಸುಂದರವಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟ ಶ್ರೀ ಯಂತ್ರೋದ್ಧಾರಕ ಪ್ರಿಂಟಿಂಗ್ ಮತ್ತು ಪಬ್ಲೀಷರ್ಸ್‌ನ ಮಾಲೀಕರಾದ ಶ್ರೀಯುತ ಅನಿಲ್‌ಕುಮಾರ್‌ವರಿಗೂ, ಚತುರ್ವೇದಿ ಸೇವಾ ಟ್ರಸ್ಟ್ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಇತಿ ಸಜ್ಜನವಿಧೇಯ,
***ಡಾ|| ಎಸ್. ಚತುರ್ವೇದಿ ವೇದವ್ಯಾಸಾಚಾರ್ಯ***

## ಪೀಠಿಕೆ

- ***ಧರ್ಮದ ಎಚ್ಚರಿಕೆ :***

**ಯತ್ರ ಪುತ್ರೋ ಗುರೋಃ ಪೂಜಾಂ ದೇವಾನಾಂ ಚ ತಥಾಪಿತುಃ ।**

**ಪತ್ನೀ ಚ ಭರ್ತುಃ ಕುರುತೇ ತತ್ರಾಲಕ್ಷ್ಮೀಭಯಂ ಕುತಃ ॥**

ಯಾರ ಮನೆಯಲ್ಲಿ ಪುತ್ರನು ಗುರುಗಳ ಹಾಗೂ ದೇವತೆಗಳ ಪೂಜೆಯನ್ನು, ತಂದೆ ತಾಯಿಗಳ ಸೇವೆಯನ್ನು ಮಾಡುವನೋ, ಪತ್ನಿಯಾದವಳು ಪತಿಯ ಹಾಗೂ ಪತಿಯ ಸಂಬಂಧಿಗಳ ಪೂಜೆ ಗೌರವದಲ್ಲಿ ಆಸಕ್ತಳಾಗಿರುವಳೋ ಆ ಮನೆಯಲ್ಲಿ ಅಲಕ್ಷ್ಮಿಯ ಭಯವೆಲ್ಲಿಂದ ಬರುವುದು?

ಸರ್ವದಾ ಸಂಪತ್ತೇ ತುಂಬಿರುವುದು.

- ***ಧರ್ಮವೇ ಪತ್ನಿಗೆ ಗತಿ :***

ಪುರುಷರೇ ಪ್ರಧಾನವಾದ ಸ್ತ್ರೀಯರಿಗೂ, ದ್ವಿಜರಿಗೂ ಇತರ ಸಮಸ್ತ ಪುರುಷರಿಗೂ ಧರ್ಮವೆ ಉತ್ತಮ ಗತಿ ನೀಡುವಂತಹುದು.

**ಸ್ತ್ರೀಣಾಂ ಪುರುಷ ಮುಖ್ಯಾನಾಂ ದ್ವಿಜಾನಾಮಗ್ರಜನ್ಮನಾಂ ।**

ಧರ್ಮ ಸಂಸ್ಥಾಪಕನು ಶ್ರೀಹರಿಯೇ.

**ಧರ್ಮಮೂಲಂ ಹಿ ಭಗವಾನ್ ।**

- ***ಶ್ರುತೀ ಸಮೃತೀ ಹರೇರಾಜ್ಞೇ :***

ಇಂತಹ ಧರ್ಮಗಳು ಶ್ರುತಿ ಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ. ಹೀಗಾಗಿ ಶ್ರುತಿ– ಸ್ಮೃತಿಗಳು ಹರಿಯ ಆಜ್ಞಾರೂಪಗಳು.

- ***ತಸ್ಯಾಹಮನುಗಃ ಸದಾ :***

ಈ ಶ್ರುತಿ ಸ್ಮೃತಿಗಳಲ್ಲಿ ಆದೇಶಿಸಿದಂತೆ ನಡೆಯುವವನು ನಾನು. ಹೀಗೆಂದು ತಿಳಿದು ಸ್ತ್ರೀ– ಪುರುಷರೂ ಧರ್ಮಗಳನ್ನು ಆಚರಿಸಬೇಕು.

- ***ಆಜ್ಞಾಚ್ಛೇದೀ ಮಮ ದ್ರೋಹೀ :***

ಶ್ರುತಿ ಸ್ಮೃತ್ಯುಕ್ತ ಆದೇಶವನ್ನು ಗಾಳಿಗೆ ತೂರಿಬಿಡುವವನು ನನ್ನ ದ್ರೋಹಿಯು.

ಹೀಗೆ ತಿಳಿದು ಧರ್ಮವನ್ನು ಆಚರಿಸುವವನಿಗೆ ಹರಿಯು ಸಂತುಷ್ಟನಾಗುವನು. ಹರಿಯು ತುಷ್ಟನಾದರೆ ಅಲಭ್ಯವಾದದ್ದೇನಿದೆ?

**'ತುಷ್ಟೇಚ ತತ್ರ ಕಿಮುಲಭ್ಯಮನಂತ ಈಶೇ'**

ಹಿಗ್ಗುವ ಮುಗ್ಗುವ ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ ಹಿಗ್ಗಬಾರದು.

ವೃಕ್ಷದ ಹಣ್ಣು, ಎಲೆಗಳು ಉದರಿ ಬಿದ್ದ ಮೇಲೆ ಪುನಃ ಅವು ಗಿಡದ ಸಂಬಂಧ ಹೊಂದಲಾರವು. ಈ ದೇಹವೆಂಬ ವೃಕ್ಷದ ಪತ್ರಸ್ಥಾನೀಯಗಳಾದ ಇಂದ್ರಿಯಗಳು ಗಳಿತವಾದ ಮೇಲೆ ಪುನಃ ಪಾಟವವನ್ನು ಹೊಂದಲಾರವು.

**ಗಲಿತಾನಿ ಪರ್ಣಾನಿ ವೃಕ್ಷಸಂಗಂ ನಾಪ್ನುವಂತಿ ।**

**ತಥಾ ದೇಹೇಂದ್ರಿಯಾಣಿ ।**

- ***ಮುಖ್ಯ ಧರ್ಮ :***

ಪರರಿಗೆ ಸಂತಾಪ ನೀಡದೆ, ನೀಚರ ಮನೆಗೆ ಹೋಗದೆ, ತಾನೂ ಧಾವಂತ ಪಡದೆ ಸ್ವಲ್ಪ ಧರ್ಮ ಮಾಡಿದರೂ ಅದು ಬಹು ಸುಖವನ್ನು ನೀಡುತ್ತದೆ. ಇಂತಹ ಧರ್ಮವನ್ನು ಲೋಕದಲ್ಲಿ ಬೆಳೆಸುವವರು ಸ್ತ್ರೀಯರು-ತಾಯಂದಿರು.

**ಅಕೃತ್ವಾ ಪರಸಂತಾಪಂ ಅಗತ್ವಾಖಿಲ ಮಂದಿರಮ್ ।**

**ಅಕ್ಲೇಶಯಿತ್ವಾ ಚಾತ್ಮಾನಂ ಯದಲ್ಪಮಪಿ ತದ್ಬಹು ॥**

- ***ಮಾತಾ ಸಾಕ್ಷಾತ್ ಕ್ಷಿತೇಃ ತನುಃ :***

ಇಂತಹ ತಾಯಂದಿರು ಭೂಮಿಯಂತೆ ಸಹನಾ ಗುಣವುಳ್ಳವರು. ಇಂತಹ ತಾಯಂದಿರಲ್ಲಿ ಶ್ರೀಹರಿಯೇ ಮಾತಾಯೆಂಬ ರೂಪದಿಂದಿದ್ದು ಜಗತ್ತನ್ನೂ ತನ್ನ ಪತ್ಯಾದಿಗಳನ್ನು, ಮಕ್ಕಳನ್ನೂ ಬಾಲ್ಯದಿಂದಲೂ ಸರ್ವ ರೀತಿಯಿಂದಲೂ ರಕ್ಷಿಸುತ್ತಾ ಮಕ್ಕಳನ್ನು ಉತ್ತಮ ಧರ್ಮಿಷ್ಠರನ್ನಾಗಿ ಮಾಡುವನು. ಧ್ರುವ, ಉದ್ಧವ, ಪ್ರಹ್ಲಾದರು ದೃಷ್ಟಾಂತರು. ಇವರು ದೊಡ್ಡವರಾದ ಮೇಲೆ ಧರ್ಮಾಸಕ್ತರಾಗಿ ಜಗತ್ತಿಗೆ ಸುಖದಾಯಕರಾಗಿರುವರು.

ಹೀಗೆ ತನ್ನ ಪತಿಯನ್ನು, ತನ್ನ ಮಕ್ಕಳನ್ನು ಧರ್ಮವಂತರನ್ನಾಗಿ ಮಾಡುವವಳು ಉತ್ತಮ ಸ್ತ್ರೀಯು

- ***ಉತ್ತಮ ಸ್ತ್ರೀಯರಿಗೆ ವಿಹಿತ ಧರ್ಮಗಳು :***

ಹಿಂದೆ ಚತುರ್ಮುಖರು ತಮ್ಮ ಮಾನಸಪುತ್ರಿ 'ಲೋಪಾಮುದ್ರೆ'ಯನ್ನು ಅಗಸ್ತ್ಯರಿಗೆ ಪಾಣಿಗ್ರಹಣ ಮಾಡಿಕೊಟ್ಟರು.

ಈ ವಿವಾಹಕ್ಕೆ ಸಕಲ ದೇವತಾ ಸಂಘ, ಋಷಿ ಸಂಘ ದಯ ಮಾಡಿಸಿ ತಮ್ಮ ಪೀಠಗಳಲ್ಲಿ ಸುಖಾಸೀನರಾಗಿದ್ದರು. ಲೋಪಾಮುದ್ರೆ ಬಂದಿದ್ದ ಸಕಲ ಋಷಿವರ್ಯರಿಗೂ ನಮಸ್ಕರಿಸಿ ಆಶೀರ್ವಾದ ಪಡೆದಳು.

ತರುವಾಯ ತಾಯಿಯಾದ ಸರಸ್ವತಿಗೆ ನಮಸ್ಕರಿಸಿದಳು. ತಾಯಿಯಾದ ಸರಸ್ವತಿಯು ತನ್ನ ಮಗಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮಗಳಿಗೆ ಪಾತಿವ್ರತ್ಯ ಧರ್ಮಗಳನ್ನು ತಿಳಿಸಿದಳು.

- ***ಪಾತಿವ್ರತ್ಯ ಧರ್ಮಗಳು :***

**ನಿಜಾಂಕಮಾರೋಪ್ಯ ಜಗತ್ತ್ರಯೋಜ್ವಲಾಂ ಸುಶಿಕ್ಷಯಂತೀ ಪ್ರಬಭಾಷಭಾರತೀ ।**

**ಸಾಧ್ವೀನಾಮಪ್ಯಗ್ರಹಗಣ್ಯಾಭವಸ್ವಃ**

ಸಕಲ ಸಾಧ್ವಿಯರ ಮುಂದೆ ನೀನು ಅಗ್ರಗಣ್ಯಳಾಗು.

**ಮಾ ಬ್ರೂಯಾಃ ತ್ವಂ ವಿಪ್ರಿಯಂ ।**

ನಿನ್ನ ಪತಿ ಕೋಪಿಸಿಕೊಂಡು ನಿನ್ನನ್ನು ಗದರಿಸಿದರೂ ಪತಿಗೆ ವಿಪ್ರಿಯ ಮಾತನ್ನು ಯಾವ ಕಾಲದಲ್ಲಿಯೂ ಆಡಬೇಡ.

**'ಭರ್ತುರಗ್ರೇ ಕುರದ್ಧೇ ಪತ್ಯೌ ಭರ್ತ್ಸಿತಾ ವಾ ಕದಾಪಿ'**

- ***ದುಷ್ಟ ಸ್ತ್ರೀ ಸಹವಾಸ ಬೇಡ :***

ಯಾವ ಕಾಲದಲ್ಲಿಯೂ ಕೆಟ್ಟ ಸ್ತ್ರೀಯರ ಸಂಬಂಧ ಮಾಡಬೇಡಮ್ಮಾ.

**ಮಾ ದುಷ್ಟಾನಾಂ ಗಚ್ಛ ಪಾರ್ಶ್ವಂ ಕದಾಪಿ ।**

- ***ಮೃದು–ಮಧುರ ಮಾತು ನಿನ್ನದಾಗಿರಲಿ :***

**ವದಸ್ವ ವಾಚಾ ಮೃದು ಚೈವ ಸರ್ವದಾ ।**

- ***ವಿಷ್ಣುಕತೇ ನಿರಂತರ ನಡೆಯಲಿ :***

ಬಿಡುವು ಇದ್ದಾಗ ಹರಿಯ ಮಹಿಮಾದ್ಯೋತಕ ಕಥೆಗಳನ್ನು ಕೇಳುತ್ತಿರಬೇಕು.

ಮಧ್ವರ ತಾಯಿ ವೇದವತಿಯು ಯಾವುದೋ ಉತ್ಸವಕ್ಕೇ ಹೋಗಿದ್ದಾಗ ಮಡಿನಾಯ ವಂಶದ ಶಿವಪುರಾಣಿಕನ ಕಥೆಗೆ ಹೋಗಿದ್ದಳು.

- ***ಹರಿಕಥಾ ಶ್ರವಣ ಅಮೃತಪಾನ :***

  ಹರಿಕಥಾ ಶ್ರವಣವು ಅಮೃತಪಾನಕ್ಕಿಂತಲೂ ಶ್ರೇಷ್ಠವು. ಕಥೆಯನ್ನು ಕೇಳಿದವಳ ಕುಲವೇ ಉದ್ಧಾರವಾಗುವುದು.

  **ಸರ್ವದಾ ಶ್ರುಣುಷ್ವ ವಿಷ್ಣೋಶ್ಚರಿತಂ ಶುಭಾವಹಂ ।**

- ***ಪತಿಭೂಷಣಾಂ ವಾಚಂ ವದಸ್ವ :***

  ಪತಿಯನ್ನು ನಿಂದಾ ಮಾಡುದೆ ಪತಿಯ ಸುಗುಣಗಳನ್ನು ನಿನ್ನ ಆಪ್ತರಲ್ಲಿ ಹೇಳು. ಇದೇ ನಿನ್ನ ಪತಿಯನ್ನು ಅಲಂಕರಿಸುವ ಮಾತು.

- ***ನಿನ್ನ ಪತಿಯ ಪಾದ ಪದ್ಮಗಳನ್ನು ಧ್ಯಾನಿಸು :***

  **ಧ್ಯಾಯಸ್ವ ಭಕ್ತ್ಯಾ ಪತಿಪಾದ ಪಂಕಜಂ ।**

- ***ಧರ್ಮಗಳನ್ನು ನಿನ್ನ ಪತಿಯಿಂದ ತಿಳಿದುಕೋ :***

  ಗಂಡನು ಪಂಡಿತನಲ್ಲದಿದ್ದರೂ ಧರ್ಮದ ಬಗ್ಗೆ ಅವನನ್ನೇ ಕೇಳು.

  **ಪೃಚ್ಛಸ್ವ ಧರ್ಮಾನ್ ಪತಿಮೇವ ಸರ್ವದಾ ।**

- ***ಗೃಹವಸ್ತು ರಕ್ಷಣೆ ಸಂಗ್ರಹದಲ್ಲಿ ದಕ್ಷತೆ ಇರಲಿ :***

  ಮನೆಯ ಪ್ರತಿಯೊಂದು ವಸ್ತುವೂ ಪತ್ಯಂತರ್ಗತ ಹರಿಯ ನಿವೇದನೆಗಾಗಿ ಇರುವುದೆಂದು ತಿಳಿ. ಅದನ್ನು ವ್ಯರ್ಥ ಹಾಳು ಮಾಡಬೇಡ.

  **ಭಜಸ್ವ ದಾಕ್ಷ್ಯಂ ಗೃಹವಸ್ತು ಸಂಗ್ರಹೇ ।**

- ***ನಾಮತ್ರಯ ಜಪ ನಿರಂತರವಾಗಿರಲಿ :***

  ಸಮಸ್ತ ರೋಗ ಪರಿಹಾರಕ ಮಂತ್ರವೆಂದರೆ 'ಅಚ್ಯುತಾನಂತಗೋವಿಂದ'ವೆಂಬ ಮಂತ್ರ, ಈ ಮಂತ್ರವನ್ನು ಸದಾ ಜಪಿಸುತ್ತಿರು.

  **ಭಜಸ್ವ ನಾಮತ್ರಯ ಮಿಷ್ಟದಂ ಹರೇಃ ।**

  ಪತಿಯು ಅನ್ಯತ್ರ ಹೋದಾಗ ಜಾಗರೂಕಳಾಗಿರು –

ಪತಿಯು ಕಾರ್ಯಾರ್ಥಿಯಾಗಿ ಹೊರಗೆ ಹೋಗಿದ್ದಾಗ ಮನೆ, ವಸ್ತುಗಳು, ಅಗ್ನಿ, ದೇವಪೂಜಾದಿಗಳ ಬಗ್ಗೆ ಜಾಗರೂಕಳಾಗಿರಬೇಕು.

**ವಿನಿರ್ಗತೇ ಭರ್ತರಿ ಜಾಗರೂಕಾ ಭವ ವಹ್ನಿರಕ್ಷಣೆ ।**

- ***ಅತಿಥಿ ಅಭ್ಯಾಗತರ ಸೇವೆಯಲ್ಲಿ ಎಚ್ಚರಿಕೆ ಇರಲಿ :***

ಅತಿಥಿಗಳು ಬಂದಾಗ ಅವರಿಗೆ ಯೋಗ್ಯ ಸತ್ಕಾರವನ್ನು ಮಾಡದೆ ಇರಬೇಡ. ಭಯಭೀತಳಾಗಿ ಆದರವನ್ನು ಮಾಡು. ನಚಿಕೇತ ಬಂದಾಗ ಯಮಧರ್ಮ ಅನ್ಯತ್ರ ಹೋಗಿದ್ದಾಗ ಶ್ಯಾಮಲೆಯು ಸತ್ಕಾರವನ್ನು ಸ್ವೀಕರಿಸಬೇಕೆಂದು ಕೇಳಿಕೊಂಡಳು.

ಅಭ್ಯಾಗತನು ಅಗ್ನಿಯ ಮೂರ್ತಿಯು. ಅವನು ಸ್ವೀಕರಿಸದಿದ್ದಾಗ ಪತಿಗೆ 'ಹರ ವೈವಸ್ವತೋದಕಂ' ಎನ್ನುವಳು.

**ವಿಷ್ಣು ಕಾರ್ಯದಲ್ಲಿ ಸಾವಧಾನತೆ ಇರಲಿ :**

**ಸುಸಾವಧಾನಾ ಭವ ವಿಷ್ಣುಕಾರ್ಯೇ ।**

- ***ಪತಿಯ ಬಂಧುಗಳ ರಕ್ಷಣೆ :***

ಪತಿಯ ಬಂಧುಗಳನ್ನು ಪತಿ ಭಕ್ತಿಯಿಂದ ಭಕ್ತಿಯಿಂದ ಗೌರವಿಸಬೇಕು. ಇದರಿಂದ ಪತಿಯ ಪ್ರೀತಿಯ ಸಂಪಾದನೆವುಂಟಾಗುತ್ತದೆ.

**ತ್ರಾಯಸ್ವಭಕ್ತ್ಯಾ ಪತಿಬಾಂಧವಾನ್ ।**

- ***ಪತಿಯು ಮಲಗಿದ ನಂತರ ಮಲಗು :***

ಪತಿಯು ಮಲಗಿದ ನಂತರ ಮಲಗುವುದೂ ಒಂದು ರೀತಿ ಪ್ರೀತ್ಯಾದಾಯಕ. ಗಂಡನು ನೀನು ಮಲಗು ಎಂದರೂ ಮಲಗದೆ ನಂತರವೆ ಮಲಗುವುದು ಕರ್ತವ್ಯ.

**ಶಯಿಷ್ವಪಶ್ಚಾತ್ ಪತಿಪಾದಪಂಕಜೇ ।**

- ***ಪತಿಗಿಂತ ಮೊದಲು ಏಳುವುದು :***

ಲಕ್ಷ್ಮೀದೇವಿಯೂ ಪ್ರಲಯ ಕಾಲದಲ್ಲಿ ಭಗವಂತನನ್ನು ಎಬ್ಬಿಸಲು ತಾನು ಮೊದಲು ಏಳುವಳು.

**ಬಧ್ಯಸ್ವಭರ್ತುಃ ಸಭಯಾ ಪುರೈವ ।**

ಬ್ರಾಹ್ಮ ಮುಹೂರ್ತದಲ್ಲಿ ಮಾಡುತ್ತಿರುವ ನಿದ್ರೆಯು ಪುಣ್ಯ ಕ್ಷಯಕಾರಿಣೀಯಾಗಿದೆ. ಹೀಗಾಗಿ ಬೇಗ ಏಳಬೇಕು.

**ಬ್ರಾಹ್ಮೇಮುಹೂರ್ತೇಯಾ ನಿದ್ರಾ ಸಾ ಪುಣ್ಯಕ್ಷಯಕಾರಿಣೀ ।**

- ***ಹೊಸ್ತಿಲು ಪೂಜೆ :***

ಪ್ರಾತಃ ಕಾಲದಲ್ಲಿ ಹೊಸ್ತಿಲನ್ನು ಗೋಮಯಾದಿಗಳಿಂದ ಸಾರಿಸಿ ರಂಗವಲ್ಲಿಯಿಂದ ಅಲಂಕರಿಸಬೇಕು. ಯಾರ ಮನೆಯ ಹೊಸ್ತಿಲು ಸಾರಿಸಿ ಇರುವುದಿಲ್ಲವೋ ಅವರ ವಂಶಕ್ಕೆ ಹಾನಿಯಾಗುತ್ತದೆ.

**ಅಶೂನ್ಯಾ ದೆಹಲೀ ಕಾರ್ಯಾ ಪ್ರಾತಃಕಾಲೇ ವಿಶೇಷತಃ ।**
**ಯಸ್ಯ ಶೂನ್ಯಾ ಭವೇತ್ ಸಾ ತು ತಸ್ಯ ಶೂನ್ಯಂಕುಲಂ ಭವೇತ್ ॥**

- ***ಹೊಸ್ತಿಲನ್ನು ತುಳಿಯದಿರು :***

ಹೊಸ್ತಿಲನ್ನು ಮೆಟ್ಟಿ ಒಳಗೆ ಹೋಗಬಾರದು. ಹೊಸ್ತಿಲನ್ನು ಪೂಜಿಸದೆ ದಾಟಬಾರದು. ನರಕ ಹೊಂದಬೇಕಾದೀತು.

**ಪಾದಸ್ಯ ಸ್ಪರ್ಶನಂ ತತ್ರ ಅಸಂಪೂಜ್ಯ ಚ ಲಂಘನಂ ।**
**ಕುರ್ವನ್ ನರಕಮಾಪ್ನೋತಿ ।**

- ***ಗೋಮಯದಿಂದ ಸಾರಿಸು :***

ಪ್ರತಿದಿನ ಗೋಮಯದಿಂದ ಮನೆಯನ್ನು ಹಾಗೂ ಮನೆಯ ಮುಂಭಾಗವನ್ನು ಗೋಮಯದಿಂದ ಸಾರಿಸಬೇಕು. ಹೀಗಾಗಿ ಲಕ್ಷ್ಮಿಯ ಸನ್ನಿಧಾನವೇರ್ಪಟ್ಟು ಮನೆ ದುಃಖವನ್ನೇ ಕಾಣಲಾರಳು.

**ಪ್ರಾತಃಕಾಲೇ ಸ್ತ್ರಿಯಾ ಕಾರ್ಯಂ ಗೋಮಯೇನಾನುಲೇಪನಂ ।**
**ಪ್ರತ್ಯಹಂ ಸದನೇ ತಸ್ಮಾನ್ನೈವ ದುಃಖಾನಿ ಪಶ್ಯತಿ ॥**

- ***ಗೋಮಯವಿಲ್ಲದ ಮನೆ ರಾಕ್ಷಸಮಯ :***

ಗೋಮಯದಿಂದ ಸಾರಿಸದ ಮನೆಯಲ್ಲಿ ಭೂತಪ್ರೇತ ರಾಕ್ಷಸರು ಬಂದು ನೆಲೆಸುವರು. ಗೋಮ ಮಾಡುವಾಗಲೂ ಗೋಮಯದಿಂದ ಶುದ್ಧೀಕರಿಸಬೇಕು.

**ರಾಕ್ಷಸಾಶ್ಚ ಪಿಶಾಚಾಶ್ಚ ಭೂತಾಃ ಪ್ರೇತಾಃ ಯಮನಾನುಗಾಃ ।**
**ಅಲಿಪ್ತದೇಶೇ ಖಟ್ವಾಯಾಂ ಅಂತರಿಕ್ಷೇ ವಿಶಂತಿ ಚ ॥**

- ***ಸೂರ್ಯರಶ್ಮಿ ಬೀಳುವ ಮೊದಲು ಮನೆ ಶುದ್ಧಿ :***

ಸೂರ್ಯಕಿರಣಗಳ ಮನೆಯೊಳಗೆ ಬೀಳುವ ಮೊದಲು ಮನೆ ಒಳಗೆ, ಹೊರಗೆ ಕಸವನ್ನು ತೆಗೆದು ಗೋಮಯ ಜಲದಿಂದ ಶುದ್ಧಿಯಾಗಿರಬೇಕು. ಹಾಗಾಗದಿದ್ದಲ್ಲಿ ಮನೆಯಲ್ಲಿರುವ ಪಿತೃ ದೇವತೆಗಳು, ಮಾತೃ ದೇವತೆಗಳೂ ಮನೆಯಿಂದ ಹೊರಟು ಹೋಗುತ್ತಾರೆ. ನಂತರ ಅನರ್ಥ ಪರಂಪರೆ ನಿಶ್ಚಿತ.

**ಭವಂತಿ ವಿಮುಖಾಸ್ತಸ್ಯ ಪಿತರೋ ದೇವಮಾತರಃ ।**

- ***ಸೂರ್ಯನ ಕಿರಣಗಳಲ್ಲಿ ಪಂಚರೂಪ :***

ಸೂರ್ಯಮಂಡಲದ ನಾಲ್ಕೂ ದಿಕ್ಕುಗಳಲ್ಲಿ ಹಾಗೂ ಮಧ್ಯೆ ವಾಸುದೇವಾದಿ ಹರಿಯ ರೂಪಗಳೂ ಋಗಾದಿ ವೇದಾದಿಭಿಮಾನಿಗಳೂ ಇತಿಹಾಸ ಪುರಾಣಗಳೂ ಇವೆ. ಇಂತಹ ಪವಿತ್ರ ಕಿರಣಗಳು ಬೀಳುವ ಸ್ಥಳವು ಗೋಮಯಾದಿಗಳಿಂದ ಶುದ್ಧವಾಗಿರಬೇಕು. ಅಲಂಕೃತವಾದ ಮನೆಯಲ್ಲಿ ಸೂರ್ಯರಶ್ಮಿಯು ಪ್ರವೇಶಿಸುವುದು ಪರಮಮಂಗಳಕರ.

- ***ಪ್ರದೋಷ ಕಾಲದಲ್ಲಿ ಧಾನ್ಯ ಸಂಸ್ಕರಣ ನಿಷಿದ್ಧವು :***

ರಾತ್ರಿಯ ಪಶ್ಚಿಮಯಾಮ (6 ರಿಂದ 9)ದಲ್ಲಿ ಅಜ್ಞಾನದಿಂದಲೂ ಸಹ ಹೆಂಗಸರು ಅಕ್ಕಿ ಕುಟ್ಟುವುದು, ಕೇರುವುದು, ಜಡೆ ಹಾಕಿಕೊಳ್ಳುವುದು, ಮೊಸರು ಕಡೆಯುವುದು ಇತ್ಯಾದಿ ಮಾಡಬಾರದು. ಅಲಕ್ಷ್ಮಿಯ ಸನ್ನಿದಾನವೇರ್ಪಡುತ್ತದೆ. ಸಂತಾನಕ್ಕೆ ತೊಂದರೆಯಾಗುತ್ತದೆ.

**ನಿಶಾಯಾಃ ಪಶ್ಚಿಮೇಯಾಮೆ ಧಾನ್ಯ ಸಂಸ್ಕರಣಾದಿಕಂ ।**
**ಕುರುತೇ ಯಾ ತು ಮೋಹೇನ ವಂಧ್ಯಾ ಜನ್ಮನಿಕಜನ್ಮನಿ ॥**

- ***ಸಂಧ್ಯಾಕಾಲದಲ್ಲಿ ಕಸ ಬಳೆಯಬೇಕು :***

ಸಂಧ್ಯಾಕಾಲದಲ್ಲಿ ಸಂಜೆ ಸೂರ್ಯ ಮುಳುಗುವುದೊರಳಗೆ (5 ರಿಂದ 6) ಮನೆಯ ಕಸ ಬಳಿಯದ ಸ್ತ್ರಿಯೂ ದರಿದ್ರಳಾಗುವಳು. ತನ್ನ ಪತಿಗೆ ಬಾಧಕಳಾಗುವಳು.

**ಸಂಧ್ಯಾಕಾಲೇತು ಸಂಪ್ರಾಪ್ತೇ ಮಾರ್ಜನಂ ನ ಕರೋತಿ ಯಾ ।**
**ಭರ್ತೃಹೀನಾ ಭವೇತ್ ಸಾ ತು ನಿಸ್ಸ್ವಾ ಜನ್ಮನಿ ಜನ್ಮನಿ ॥**

- ***ಮನೆಯು ಸರ್ವದ ಸ್ವಚ್ಛವಾಗಿರಬೇಕು :***

ಕೊಳೆ ಮುತ್ತಿಕೊಂಡಿರುವ ಮನೆಯ ನೆಲವನ್ನು ಕಸ ತೆಗೆದು ಗೋಮಯದಿಂದ ಚೆನ್ನಾಗಿ ಸಾರಿಸಿ ಪದ್ಮವನ್ನು ರಂಗವಲ್ಲಿಯಿಂದ ಹಾಕುವ ಸ್ತ್ರೀಯು ಧನಾದಿ ಸಂಪತ್ತನ್ನೂ ಕೀರ್ತಿಯನ್ನು, ದೀರ್ಘಾಯುಸ್ಸನ್ನೂ ಹೊಂದುವಳು. ಅನ್ಯಥಾ ದಾರಿದ್ರ್ಯ, ಅಪಕೀರ್ತಿ, ಅಲ್ಪಾಯುಷ್ಯ ಹೊಂದುವಳು.

**ಅಕೃತ ಸ್ವಸ್ತಿಕಾಂ ಯಾ ತು ಕಾಮಲಿಪ್ತಾಂ ಚ ಮೇದಿನೀಂ ।**
**ತಸ್ಯಾ ಸ್ತ್ರಿಯಾಃ ವಿನಶ್ಯಂತಿ ವಿತ್ತಮಾಯುರ್ಯಶಸ್ತಥಾ ॥**

- ***ಕಾಲಿನಿಂದ ಇವುಗಳನ್ನು ಸ್ಪರ್ಶಿಸಬೇಡ :***

ಕಸಪೊರಕೆ, ಅಗ್ನಿಷ್ಠಿಕೆ, ಬೀಸುಕಲ್ಲು, ಒರಳುಕಲ್ಲು, ಒನಕೆ ಇವುಗಳನ್ನು ಎಂದು ಕಾಲಿನಿಂದ ತುಳಿಯಬಾರದು. ಅದರ ಮೇಲೆ ಕೂಡಬಾರದು. ಹೆಂಡತಿ, ಪುತ್ರ, ಧನ ನಾಶವಾದೀತು. ಲಕ್ಷ್ಮಿಯ ಸನ್ನಿಧಾನವಿರುತ್ತದೆ.

**ಮಾರ್ಜನೀ ಚುಲ್ಲಿಕಾಷ್ಠೀವದ್ದೃಷದೋಪಲಂ ತಥಾ ।**
**ನಾಕ್ರಮೇದಂಘ್ರಿಣಾ ಜಾತು ಪುತ್ರ ದಾರಧನಕ್ಷಯಾತ್ ॥**
**ಉಲೂಖಲಂ ಚ ಮುಸಲಂ ತಥಾ ಚೈವಾನುಘರ್ಷಣಂ ॥**

* * * * *

## ವಿವಾಹ ರೂಪರೇಷೆಗಳು

- ***ವಿವಾಹ ಯೋಗ್ಯ ಮನುಷ್ಯ :***

ಮನುಷ್ಯನ ಶರೀರ ಸಾಮರ್ಥ್ಯ, ಯೌವ್ವನ, ವಿದ್ಯೆ, ಸಂಪತ್ತು ಇವುಗಳನ್ನು ನೋಡಿ ಕನ್ಯೆಯನ್ನು ನೀಡುವುದು ಇಂದಿನ ರೀತಿ. ಇದರೊಂದಿಗೆ ವರನು ಸದಾಚಾರಿ, ಸದ್ವಿಚಾರಿ ಗುಣವಂತನಾಗಿರಬೇಕು, ಬುದ್ಧಿವಂತನಾಗಿರಬೇಕು.

**ಬುದ್ಧಿಮತೇ ಕನ್ಯಾಂ ಪ್ರಯಚ್ಛೇತ** *[ಆ.ಸೂ. 15]*

ಹರಿಭಕ್ತ್ಯಾದಿ ಗುಣಗಳಿಲ್ಲದವನಿಗೆ ಕನ್ಯೆಯನ್ನು ಕೊಡಬಾರದು. –ಮನು *–9/89*

**ನ ಚೈವೈನಾಂ ಪ್ರಯಚ್ಛೇತ ಗುಣಹೀನಾಯ ಕರ್ಹಿಚಿತ್ ।**

ದುರಾಚಾರಿ, ದುರ್ಬುದ್ಧಿಯ ಧನವಂತನಿಗಿಂತ, ಗುಣವಂತ ದರಿದ್ರನು ಶ್ಲಾಘ್ಯನಾಗಿರುವನು.

**ದರಿದ್ರೋऽಪಿ ಗುಣೀ ಶ್ಲಾಘ್ಯಃ ದುರ್ಬುದ್ಧೇಃ ಧನದಾದಪಿ ।**

- ***ರಜಸ್ವಲಾ ವಿವಾಹ ನಿಷೇಧ :***

ತಂದೆಯ ಮನೆಯಲ್ಲಿದ್ದಾಗಲೇ ಕನ್ಯೆಯು ರಜಸ್ವಲೆಯಾದರೆ ಅವಳು 'ವೃಷಲೀ' ಎನಿಸುತ್ತಾಳೆ. ಇವಳನ್ನು ವಿವಾಹವಾದ ವರನು 'ವೃಷಲೀಪತಿ' ಎನಿಸಿ ಹವ್ಯಕವ್ಯಗಳಲ್ಲಿ ಗರ್ಹಿತನಾಗಿರುತ್ತಾನೆ.

**ಪಿತೃಗೇಹೇಷು ಯಾ ಕನ್ಯಾ ರಜಃ ಪಶ್ಯತ್ಯಸಂಸ್ಕೃತಾ ।**
**ಸಾ ಕನ್ಯಾ ವೃಷಲೀ ನಾಮ ತತ್ಪತಿಃ ವೃಷಲೀಪತಿಃ ॥**

- ***ಕನ್ಯೆಯು ಹೇಗಿರಬೇಕು :***

ಕನ್ಯೆಯು ಸವರ್ಣಳಾಗಿರಬೇಕು. ಬ್ರಾಹ್ಮಣನಿಗೆ ಬ್ರಾಹ್ಮಣ ಕನ್ಯೆಯು ಸವರ್ಣಳು. ಹಾಗೂ ತಂದೆ ತಾಯಿಗಳಿಂದ ಏಳು ತಲೆಯ ತನಕ ಸಪಿಂಡಳೆನಿಸುವಳು.

**ಸಾಪಿಂಡ್ಯಂ ಸಾಪ್ತಪೌರುಷಮ್ ।**

ಗೋತ್ರಗಳು ಭಿನ್ನಭಿನ್ನವಾಗಿರಬೇಕು.

**ಆ ಸಪ್ತಮಾತ್ ಪಂಚಮಾಚ್ಚ ಬಂಧುಭ್ಯಃ ಪಿತೃಮಾತೃತಃ ।**
**ಅವಿವಾಹ್ಯಾಃ ಸಗೋತ್ರಾಃ ಸ್ಯುಃ ಸಮಾನ ಪ್ರವರಾಸ್ತಥಾ ॥**

–ಮನು *12/7*

ಯಜ್ಞವಲ್ಕರು – 'ಅಕ್ಷತಯೋನಿಯವಳೂ, ಸೌಂದರ್ಯವತಿಯೂ, ತನ್ನ ವಂಶದವಳಲ್ಲದ, ತನಗಿಂತಲೂ ಚಿಕ್ಕವಳಾದ, ರೋಗರಹಿತಳಾದ ಸ್ತ್ರೀಯನ್ನು ವಿವಾಹವಾಗಬೇಕು.'

ಕುಲ, ಶೀಲ, ಶರೀರ, ವಯಸ್ಸು, ವಿದ್ಯೆ, ಧನ, ರಕ್ಷಕರು ಇವುಗಳನ್ನು ನೋಡಿ ವರನು ಕನ್ಯೆಯನ್ನು ವರಿಸಬೇಕು.

*ಬೃಹತ್ ಪರಾಶರ [6/26–27]ರಲ್ಲಿ–* ದೂರ ಇರುವ, ಅತೀ ಸಮೀಪವಿರುವ, ಮೂರ್ಖನು, ವಿರಕ್ತನೂ, ದರಿದ್ರನೂ, ಅತೀ ಧನವಂತನೂ, ಶಾರೀರಿಕ ದುರ್ಬಲನಿಗೂ, ಕೆಲಸವಿಲ್ಲದವನಿಗೆ ಕನ್ಯೆಯನ್ನು ಕೊಡಬಾರದು.

ಹಾಗೆಯೇ ಸ್ಮೃತಿ ಚಂದ್ರಿಕಾ (1/59ರಲ್ಲಿ) – ಉನ್ಮತ್ತನೂ, ಪತಿತನೂ, ನಪುಂಸಕ, ಕುಷ್ಠರೋಗೀ, ಕುರುಡ, ಕೆಪ್ಪ, ಮೂರ್ಛಾರೋಗಿಯಾದವನಿಗೆ ಕನ್ಯೆಯನ್ನು ಕೊಡಬಾರದು.

- ***ವಿವಾಹ ಕಾಲ :***

ಇದರಲ್ಲಿ ಸ್ಮೃತಿಕಾರರಲ್ಲಿ ಏಕಾಭಿಪ್ರಾಯ ಕಂಡುಬಂದಿಲ್ಲ. ಮನುವು – ಶ್ರೇಷ್ಠನೂ, ಸುಂದರನೂ, ಯೋಗ್ಯನಾದ ವರ ಲಭಿಸಿದಾಗ ಕನ್ಯೆಯು ಬಹಳ ಚಿಕ್ಕವಳಿದ್ದರೂ ವಿವಾಹ ಮಾಡಬಹುದು. *[ಮನು 9/88]*

ಗುಣಹೀನ ವರನಿಗೆ ಕನ್ಯೆ ನೀಡಬಾರದು. ಕನ್ಯೆಯು ರಜಸ್ವಲೆಯಾದ ಮೇಲೆಯೂ ಮೂರು ವರ್ಷ ತಂದೆಯ ಮನೆಯಲ್ಲಿರಲು ಅನುಮತಿಯಿದೆ.

ತಂದೆ, ಅಣ್ಣಂದಿರು ವಿವಾಹ ಮಾಡದಿದ್ದರೆ, ತಾನೇ ಕನ್ಯೆಯು ಸಮಾನ ವರ್ಣ ಯೋಗ್ಯತಾವುಳ್ಳ ವರನನ್ನು ಆರಿಸಿಕೊಳ್ಳಬಹುದು.

ಗೌತಮರ [18/8–9] ಪ್ರಕಾರ – ಮೂರು ಬಾರಿ ರಜಸ್ವಲೆಯಾದಾಗ್ಯೂ ತಂದೆ ವಿವಾಹ ಮಾಡದಿದ್ದರೆ, ಕನ್ಯೆಯು ತನಗಾಗಿ ಮಾಡಿಸಿದ್ದ ಆಭರಣಗಳನ್ನು ಮನೆಯಲ್ಲಿಯೆ ಇಟ್ಟು ಸತ್ಪಾತ್ರ ಪತಿಯನ್ನು ತಾನೇ ಆರಿಸಿ ವಿವಾಹವಾಗಬಹುದು ಎಂದು.

ರಜಸ್ವಲೆಯಾದ ಮೇಲೂ ವಿವಾಹ ಮಾಡದೆ ಇರುವ ತಂದೆಗೆ ಗರ್ಭಪಾತ ಮಾಡಿಸಿದ ಪಾಪ, ಭ್ರೂಣಹತ್ಯಾ ತಗಲುತ್ತದೆ.

**ಅಪಯಚ್ಛನ್ ಸಮಾಪ್ನೋತಿ ಭ್ರೂಣಹತ್ಯಾಮೃತಾವೃತೌ ।**

ಎಂಟು ವರ್ಷ ಗೌರೀ, ಒಂಭತ್ತು ರೋಹಿಣೀ, ಹತ್ತು ವರ್ಷ ಕನ್ಯಾ. ಹತ್ತರಿಂದ ಮುಂದೆ ರಜಸ್ವಲೆಯು, ಹನ್ನೆರಡು ವರ್ಷವಾದರೂ ವಿವಾಹ ಮಾಡಿಲ್ಲವಾದರೆ ಪ್ರತಿತಿಂಗಳೂ ರಜಸ್ಸನ್ನು ಕೂಡಿದ ಪಾಪ ಭಾಗಿಗಳಾಗುವರು. ವೃಷಲೀಯೆನಿಸಿದ ಇವಳನ್ನು ಪ್ರಾಯಶ್ಚಿತ್ತವಿಲ್ಲದೆ ವಿವಾಹವಾದವನು ವೃಷಲೀಪತಿಯೆನಿಸುವನು. ಇವನು ಇತರರೊಂದಿಗೆ ಇವನಿಗೆ ವಾಗ್ ವ್ಯವಹಾರ ನಿಷೇಧಿಸಿದೆ. ಪಂಕ್ತಿಯಲ್ಲಿ ಭೋಜನಕ್ಕೆ ಕೂಡುವಂತಿಲ್ಲ.

ಋತುಮತಿಯಾದ ಕನ್ಯೆಯನ್ನು ವಿವಾಹ ಮಾಡಿಕೊಳ್ಳುವವನು ಕನ್ಯಾಪಿತೃವಿಗೆ ಯಾವುದೇ ಧನಾದಿಗಳನ್ನು ನೀಡಬೇಕಾಗಿಲ್ಲ. ಯಾಕೆಂದರೆ ಯೋಗ್ಯ

ಕಾಲದಲ್ಲಿ ವಿವಾಹ ಮಾಡದ ತಂದೆಯು ಕನ್ಯಾ ಸ್ವಾಮಿತ್ವವನ್ನೇ ಕಳೆದುಕೊಂಡಿರುತ್ತಾನೆ.

- ***ಕನ್ಯೆಯ ವಯಸ್ಸು :***

ಅಪತ್ಕಾಲದಲ್ಲಿ ಹನ್ನೆರಡು ವರ್ಷ ಕನ್ಯೆಯನ್ನು ಮುವ್ವತ್ತು ವರ್ಷದವನಿಗೂ ವಿವಾಹ ಮಾಡಬಹುದು.

**ತ್ರಿಂಶದ್ ವರ್ಷೋ಼ ಉದ್ವಹೇತ್ ಕನ್ಯಾಂ ಹೃದ್ಯಾಂ ದ್ವಾದಶ ವಾರ್ಷಿಕೀಮ್ ।**

ಅಥವಾ ಇಪ್ಪತ್ತನಾಲ್ಕು ವರ್ಷದವನು ಎಂಟು ವರ್ಷದವಳನ್ನು ವಿವಾಹವಾಗಬಹುದು. ಇದೂ ಸಹ ಆಪತ್ಕಾಲ ವಿಷಯವು.

- ***ಸದೋಷ ವಿವಾಹ ಸಲ್ಲದು :***

ಯಾವುದಾದರೂ ತೊನ್ನು, ಮೂರ್ಛೆ ಮೊದಲಾದ ರೋಗಗಳನ್ನು ಮುಚ್ಚಿಟ್ಟು ವಿವಾಹ ಮಾಡಿದರೆ ವರನು ಇವಳನ್ನು ಬಿಡಬಹುದು. ವರನ ದೋಷವನ್ನು ಮುಚ್ಚಿಟ್ಟು ವಿವಾಹ ಮಾಡಿದರೂ ಕನ್ಯೆಯು ವರನನ್ನು ಬಿಡಬಹುದು.

- ***ಸವರ್ಣ ವಿವಾಹ ಶ್ರೇಷ್ಠವು :***

ಎಂತಹ ಆಪತ್ತಿನಲ್ಲಿಯೂ ಬ್ರಾಹ್ಮಣನು ಶೂದ್ರ ಸ್ತ್ರೀಯನ್ನು ವಿವಾಹ ಮಾಡಿಕೊಳ್ಳಬಾರದು. ಬ್ರಾಹ್ಮಣನು ಧಾರ್ಮಿಕ ವಿಧಿಗಳಿಗಾಗಿ ಬ್ರಾಹ್ಮಣ ಜಾತಿಯವಳನ್ನು ವಿವಾಹವಾಗಬೇಕು. ಶೂದ್ರ ಸ್ತ್ರಿಯು ಬ್ರಾಹ್ಮಣ ಕ್ಷತ್ರಿಯರಿಗೆ ಧಾರ್ಮಿಕ ವಿವಾಹಕ್ಕೆ ಯೋಗ್ಯಳಲ್ಲ.

**ನ ಬ್ರಾಹ್ಮಣ ಕ್ಷತ್ರಿಯಯೋಃ ಆಪದ್ಯಪಿ ಹಿತಿಷ್ಠತೋಃ ।**
**ಕಸ್ಮಿಂಶ್ಚಿದಪಿ ವೃತ್ತಾಂತೇ ಶೂದ್ರಾಬಾರ್ಯೋ಼ಪದಿಶ್ಯತೇ ॥**

- ***ಶೂದ್ರ ಜಾತಿ ಯಾಕೆ ಬೇಡ?***

ಮೋಹದಿಂದ ಬ್ರಾಹ್ಮಣನು ಶೂದ್ರ ಸ್ರೀಯನ್ನು ವಿವಾಹವಾದರೆ ತಮ್ಮ ಕುಲವನ್ನೆಲ್ಲ ಶೂದ್ರ ವಂಶಕ್ಕೆ ಸೇರಿಸಿದಂತಾಗುತ್ತದೆ.

**ಕುಲಾನ್ಯೇವ ನಯಂತ್ಯಾಶು ಸಸಂತಾನಾನಿ ಶೂದ್ರತಾಂ ।**

ಬ್ರಾಹ್ಮಣನು ಶೂದ್ರ ಸ್ತ್ರೀಯಲ್ಲಿ ಸಂತಾನ ಪಡೆದರೆ ಬ್ರಾಹ್ಮಣ್ಯವನ್ನು ಕಳೆದುಕೊಂಡು ಅಧೋಗತಿ ಹೊಂದುವನು.

ಇಂತಹ ಸಂಗದಿಂದಾಗಿ ಇವರ ಮನೆಯಲ್ಲಿ ನಡೆದ ದೇವ ಪಿತೃ ಕಾರ್ಯಗಳಲ್ಲಿ ಹವ್ಯಕವ್ಯಗಳನ್ನು ಪಿತೃ ದೇವತೆಗಳು ಸ್ವೀಕರಿಸುವುದಿಲ್ಲ. ಪಿತೃ ಶಾಪ ನಿಶ್ಚಿತ.

**ನಾಶ್ನಂ ತಿ ಪಿತೃ ದೇವಾಸ್ತತ್ ನ ಚ ಸ್ವರ್ಗಂ ಚ ಗಚ್ಛತಿ ।**

- ***ಪ್ರಾಯಶ್ಚಿತ್ತ :***

ಬ್ರಾಹ್ಮಣನು ಶೂದ್ರ ಸ್ತ್ರೀಯನ್ನು ಸಂಗ ಮಾಡಿದರೆ ಗೋಮೂತ್ರದಲ್ಲಿ ಜವೆಗೋಧಿ ಬೇಯಿಸಿ ಗಂಜಿ ಮಾಡಿ ಒಂದೂವರೆ ತಿಂಗಳು ತಿಂದು ಜೀವಿಸಬೇಕು.

**ಶೂದ್ರೀಂ ತು ಬ್ರಾಹ್ಮಣೋ ಗತ್ವಾ ಮಾಸಂ ಮಾಸಾರ್ಧಮೇವ ವಾ ॥**
**ಗೋಮೂತ್ರ ಯಾವಕಾಹಾರೋ ಮಾಸಾರ್ಧೇನ ಶುದ್ಧ್ಯತಿ ॥**

– *ಸಾಂವರ್ತಸ್ಮತಿ 1/35*

**ಅಥ ದ್ವಿಜೋಽಭ್ಯನುಜ್ಞಾತಃ ಸವರ್ಣಾಂ ಸ್ತ್ರಿಯಮುದ್ವಹೇತ್ ॥**

– *ಮನುವು 3/63*

ನೀಚ ವಿವಾಹ, ವೈದಿಕ ಸಂಸ್ಕಾರ ತ್ಯಾಗ, ವೇದಾಧ್ಯಯನ ಮಾಡದಿರುವುದು ಇವುಗಳಿಂದ ಉಚ್ಚ ಕುಲವೂ ನೀಚಕುಲವಾಗುತ್ತದೆ.

**ಕುವಿವಾಹೈಃ ಕ್ರಿಯಾಲೋಪೈಃ ವೇದಾನಧ್ಯಯನೇನ ಚ ।**
**ಕುಲಾನ್ಯಾಕುಲತಾಂ ಯಾಂತಿ ಬ್ರಾಹ್ಮಣಾತಿಕ್ರಮಣೇನ ಚ ॥**

- ***ವಂಶೋದ್ಧಾರಕ ಯಾರು?***

ವರ–ವಧೂ ಒಂದೇ ಜಾತಿಯಾದರೆ ಮಾತ್ರ ಪತಿ–ಪತ್ನಿ ಎನಿಸುವರು. ಇವರಿಗೆ ಮಾತ್ರ ಹೋಮಾದಿಗಳಲ್ಲಿ ಅಧಿಕಾರ ಹೊಂದಿರುತ್ತಾರೆ ***[ಪತ್ಯುರ್ನೋಯಜ್ಞಸಂಯೋಗೇ]***

ಪೂಜೆ, ಶ್ರಾದ್ಧ ದೇವ ಕಾರ್ಯಗಳಲ್ಲಿ ಅಧಿಕಾರ ಪ್ರಾಪ್ತವಾಗುತ್ತದೆ. ಪತಿ ಪತ್ನಿಯರು ವಿಭಿನ್ನ ಜಾತಿಯಾದರೆ ದಾನ ಧರ್ಮ, ಶ್ರಾದ್ಧ, ಶ್ರಾದ್ಧ ಭೋಜನಾದಿಗಳಲ್ಲಿ ಅಧಿಕಾರವಿಲ್ಲ. ಇವರಿಬ್ಬರೂ ಕೂತು ಯಾವುದೇ ಹೋಮ ಹವನ ನಡೆಸುವಂತಿಲ್ಲ.

ಒಬ್ಬ ಬ್ರಾಹ್ಮಣ – ನಾಯುಡು ಸ್ತ್ರೀಯನ್ನು ಮದುವೆಯಾದ. ಅವನ

ತಾಯಿ ಸತ್ತಾಗ ಅವನು ಹಿರಿಯನಾದರೂ ಉತ್ತರ ಕ್ರಿಯೆಗಳಲ್ಲಿ ಪಾಲ್ಗೊಳ್ಳಲು ಬಿಡಲಿಲ್ಲ.

ಗಂಡು–ಹೆಣ್ಣು ಸವರ್ಣ ಜಾತಿಯವರಾದರೆ ಮಾತ್ರ ಅವರಲ್ಲಿ ಹುಟ್ಟುವ ಮಗನು ಉತ್ತರಾಧಿಕಾರಿಯಾಗಿ ವಂಶೋದ್ಧಾರಕನೆನಿಸುವನು. ಇತರ ಜಾತಿಯಲ್ಲಿ ಹುಟ್ಟಿದವನು ಉತ್ತರಾಧಿಕಾರಿಯಾಗುವುದಿಲ್ಲ. ತಂದೆಯ ಅಂತ್ಯಕ್ರಿಯೆ ಮೊದಲಾದವುಗಳಲ್ಲಿ ಅಧಿಕಾರವಿರುವುದಿಲ್ಲ. ಅಂತ್ಯಜಾತಿಯ ಕನ್ಯೆಯನ್ನು ವಿವಾಹವಾಗುವ ಮೊದಲು ಇದನ್ನು ವಿಮರ್ಶಿಸಬೇಕು. ತಾಯಿಯ ಜಾತಿ ಮಗನಿಗೆ ಎಂಬುದು ಸಾಮಾನ್ಯ ನಿಯಮ. ನೀಚ ಜಾತಿಯ ಸ್ತ್ರೀಯ ಜಾತಿಯೆ ಮಗನಿಗೆ ಬರುತ್ತದೆ. ಕಾಮಮೋಹಿತರಾದ ಇವರಿಂದಾಗಿ ಇಡೀ ನಮ್ಮ ಕುಲಧರ್ಮವೆ ಹದಗೆಡುತ್ತದೆ. ಇದು ಮಹಾಪಾಪಾದಾಯಕ, ವರ್ಣಸಾಂಕರ್ಯ ಮಹಾದೋಷ, ನರಕಪ್ರದ.

**ಸಂಕರೋ ನರಕಾಕೈವ ಕುಲಘ್ನಾನಾಂ ಕುಲಸ್ಯ ಚ ।**

- ***ಪರಿವೇದನಃ ಪರಿವಿತ್ತಿ ದೋಷಃ –***

ಯಾರ ಮನೆಯಲ್ಲಿ ಹಿರಿಯ ಅಥವಾ ಹಿರಿಯಣ್ಣ ಇದ್ದು ಮದುವೆಗೆ ಸಿದ್ಧನಿರುವಾಗ ತಮ್ಮನು ಅಥವಾ ಕಿರಿಯನು ತಾನು ವಿವಾಹವಾಗುವನೋ ಅಥವಾ ಮದುವೆಗೆ ಯೋಗ್ಯಳಾದ ಅಕ್ಕ ಇರುವಾಗ ತಂಗಿಯು ವಿವಾಹ ಮಾಡಿಕೊಳ್ಳುವಳೋ ಅವಳು 'ಪರಿವೇದನ' ಎನಿಸುವನು/ಎನಿಸುವಳು. ಇದೊಂದು ಘೋರ ಪಾಪವೆಂದು ಸ್ಮೃತಿ ತಿಳಿಸಿದೆ.

*ಮನು 3/17ರಲ್ಲಿ–*

**ದಾರಾಗ್ನಿಹೋತ್ರ ಸಂಯೋಗಂ ಕುರುತೇ ಯೋ ಅಗ್ರಜೇ ಸ್ಥಿತೇ ।**
**ಪರಿವೇತ್ತ ಸ್ಸ ವಿಜ್ಞೇಯಃ ಪರಿವಿತ್ತಿಸ್ತು ಪೂರ್ವಜಃ ।**

ತಮ್ಮನು ಪರಿವೇತ್ತಾ ಆದರೆ ಅಣ್ಣನು ಪರಿವಿತ್ತಿ ಎನಿಸುವನು. ಯಾಜ್ಞವಲ್ಕ್ಯರು ಪರಿವೇತೃವನ್ನು 'ಪರಿವಿಂದಕ' ಎಂದಿದ್ದಾರೆ. ಪರಿವೇತ್ತ, ಪರಿವಿತ್ತಿ, ಕನ್ಯಾದಾನ ಮಾಡುವವ, ಕನ್ಯೆ, ವಿವಾಹ ಮಾಡಿಸುವ ಪುರೋಹಿತ ಈ ಐವರೂ ನರಕ ಹೊಂದುವರು.

**ಪರಿವಿತ್ತಿಃ ಪರಿವೇತ್ತಾ ಯಯಾ ಚ ಪರಿವಿದ್ಯತೇ ।**
**ಸರ್ವೇತೇ ನರಕಂ ಯಾಂತಿ ದಾತೃಯಾಜಕ ಪಂಚಮಾಃ ॥**

*– ಲಘುಶಾತಾತಪ 40*

ಶ್ರೀರಾಮನು ಜ್ಯೇಷ್ಠನಾಗಿದ್ದು ಅವನು ರಾಜ್ಯಲಕ್ಷ್ಮಿಯನ್ನು ಕೈ ಹಿಡಿಯಲು ಯೋಗ್ಯನಿರುವಾಗ ಭರತ ತಮ್ಮನಿಗೆ ರಾಜ್ಯಲಕ್ಷ್ಮಿಯೊಂದಿಗೆ ಸಂಬಂಧ ತನಗೆ ಪರಿವೇತೃತ್ವ ದೋಷ ಬರುವುದೆಂದೇ ಅದನ್ನು ಒಪ್ಪದೆ ಪಾದುಕಾ ಪಟ್ಟಾಭಿಷೇಕ ಮಾಡಿ ಧನ್ಯನಾದ.

ಭೀಮನೂ ಸಹ ಧರ್ಮರಾಜನಿರುವಾಗ ಹಿಡಿಂಬಿಯನ್ನು ವಿವಾಹವಾಗಲೂ ಒಪ್ಪದಿರಲು ಇದೇ ಕಾರಣ. ವ್ಯಾಸರ ಅಣತಿಯಿಂದಾಗಿ ಒಪ್ಪಿದ ಅಷ್ಟೆ.

ಹಿರಿಯನಾಗಿದ್ದರೂ ಅಣ್ಣನೂ ಯಾವುದಾದರೂ ಮಹಾರೋಗಕ್ಕೆ ಒಳಗಾಗಿದ್ದರೆ ಅವನ ಅನುಮತಿ ಪಡೆದು ತಮ್ಮನು ವಿವಾಹವಾಗಬಹುದು.

ಪ್ರತೀಪರಾಜನ ಮೂರು ಪುತ್ರರರಲ್ಲಿ ಬಾಹ್ಲೀಕ ರಾಜನು ಗುಣ ಜ್ಯೇಷ್ಠನಾಗಿದ್ದರೂ, ಚರ್ಮರೋಗಕ್ಕೆ ಒಳಗಾದದ್ದರಿಂದ ತಮ್ಮ ಶಂತನು ಗಂಗೆಯನ್ನು ವಿವಾಹವಾದ.

ಇದರೊಂದಿಗೆ ಪರದೇಶ ವಾಸವಾಗಿರುವ, ನಪುಂಸಕ, ಒಂದೇ ಅಂಡಕೋಶವುಳ್ಳ, ವೇಶ್ಯಾಸ್ತ್ರೀಲೋಲನಾಗಿದ್ದರೆ, ಪತಿತನೂ, ಶೂದ್ರತುಲ್ಯನೂ ಮೂರ್ಖನೂ, ಕುರುಡ, ಕಿವುಡ, ಕುಬ್ಜನೂ, ಕುಷ್ಠಿಯೂ, ಮೃತಭಾರ್ಯನೂ, ವೃದ್ಧನೂ ಚೋರನೂ, ರಾಜಸೇವಕನೂ, ಧನಸಂಪಾದನಾಸಕ್ತನೂ ಅತಿಲೋಲುಪನೂ ಆಗಿದ್ದಲ್ಲಿ ತಮ್ಮನು ವಿವಾಹವಾದರೆ ಪರಿವೇದನ ದೋಷವಿಲ್ಲ.

**ದೇಶಾಂತರಸ್ಥ ಕ್ಲೀಬೈಕ ವೃಷಣಾನ್ ಅಸಹೋದರಾನ್ ।**
**ವೇಶ್ಯಾಸಕ್ತ ಪತಿತ ಶೂದ್ರತುಲ್ಯತಿರೋಗಿಣಃ ॥**
**ಪರಿವಿಂದನ್ ನ ದುಷ್ಯತಿ ॥** – *ಗೋಭಿಲ 1/71–73*

ಪರಿವೇತೃವು ಶಾಸ್ತ್ರೋಕ್ತ ಪ್ರಾಯಶ್ಚಿತ್ತ ಮಾಡಿಕೊಂಡರೂ ಕಾಲುಭಾಗ ಪಾಪ ಪರಿಹಾರವಾದೀತು, ಪೂರ್ಣವಲ್ಲ.

**ಅಪಿ ಚೀರ್ಣ ಪ್ರಾಯಶ್ಚಿತ್ತೌ ಪಾದೋನ ಫಲಭಾಗಿನೌ ।**

ಪರದೇಶಕ್ಕೆ ಹೋಗಿದ್ದಾಗ ಅಣ್ಣನನ್ನು ಮೂರು ವರ್ಷ ಕಾದು ಬರದಿದ್ದರೆ ವಿವಾಹ ದೋಷಾದಾಯಕವಲ್ಲ.

**ಪ್ರೋಷಿತಂ ಚ ಪ್ರತೀಕ್ಷೇತ ವರ್ಷತ್ರಯಮಪಿ ತ್ವರನ್ ।**

ಈ ಮೇಲಿನ ಪರಿವೇದನ ದೋಷ ಒಂದೇ ತಾಯಿಯಲ್ಲಿ ಹುಟ್ಟಿದ ಅಣ್ಣ ತಮ್ಮಂದಿರಿಗೆ ಮಾತ್ರ [ಪರಾಶರ – 4/28]

ಪರಸ್ತ್ರೀ ಪುತ್ರ, ಸವತಿ ಪುತ್ರರಿಗೆ ಇದು ಅನನ್ವಯ.

- ***ಪ್ರತಿದಿನ ಬ್ರಹ್ಮಹತ್ಯೆ :***

ಗುಣಹೀನನಾಗದೆ ಗುಣ ಜ್ಯೇಷ್ಠನಿರುವಾಗ ಸಹೋದರನು ವಿವಾಹವಾದರೆ ಪ್ರತಿದಿನ ಬ್ರಹ್ಮಹತ್ಯೆ ಪಡೆಯುವನು.

**ಜ್ಯೇಷ್ಠಶ್ಚೇದ್ ಯದಿ ನಿರ್ದೋಷೋ ಗೃಹ್ಣಾತ್ಯಗ್ನಿಂ ಯವೀಯಕಃ ।**
**ನಿತ್ಯಂ ನಿತ್ಯಂ ಭವೇತ್ ತಸ್ಯ ಬ್ರಹ್ಮಹತ್ಯಾ ನ ಸಂಶಯಃ ॥**

– *ಅತ್ರಿ 1/258*

- ***ಮೈದುನನಿಂದ ಸಂತಾನ ?***

**ನಿಯೋಗ ಪದ್ಧತಿ :**

ಕೃತಾದಿ ಯುಗಗಳಲ್ಲಿ ತನಗೆ ಸಂತಾನವಾಗದಿದ್ದಾಗ ತನಗಿಂತ ಉತ್ತಮರಿಂದ ತನ್ನ ಪತ್ನಿಯಲ್ಲಾಗಲೀ, ವಿಧವಾಸ್ತ್ರೀಯಲ್ಲಾಗಲಿ ಸಂತಾನ ಪಡೆಯುವ ಪದ್ಧತಿಯನ್ನು ನಿಯೋಗ ಪದ್ಧತಿಯೆನ್ನುವರು.

ಸಂತಾನ ರಹಿತಳಾದವಳು ತಮ್ಮ ಪತಿಯಿಂದ ಸಂತಾನ ಪಡೆಯದಿದ್ದಾಗ ಸಪಿಂಡ ಗೋತ್ರದವರು, ಋಷಿಗಳು, ಪತಿ ಕುಲದ ಸಂಬಂಧಿಗಳಿಂದ ಸಂತಾನ ಪಡೆಯಬಹುದೆಂದು ಬೋಧಾಯರು [2/2/68]ರಲ್ಲಿ

**ಅತ ಊರ್ಧ್ವಂ ಗುರುಭಿರನುಜ್ಞಾತಾ ದೇವರಾಜ್ಜನಯೇತ್ ಪುತ್ರಮ-ಪುತ್ರಾ ॥**

ಮಾವ ಮೊದಲಾದ ಹಿರಿಯರ ಅನುಜ್ಞೆಯಿಂದ ಮೈದುನನಿಂದಲೇ ಸಂತಾನ ಪಡೆಯಬಹುದೆಂದು ತಿಳಿಸಿರುವರು. ಮನುಸ್ಮೃತಿಯೂ (9/57–59) ಹೇಳಿದೆ. ಯಾಜ್ಞವಲ್ಕ್ಯರೂ (1–68)ರಲ್ಲಿ ಹೇಳಿರುವರು.

ಇತಿಹಾಸದಲ್ಲಿಯೂ ಪಾಂಡವರು ಧರ್ಮ, ವಾಯು, ಇಂದ್ರ, ಅಶ್ವಿನಿಗಳಿಂದ ನಿಯೋಗದಿಂದಲೇ ಜನಿಸಿರುವರು.

ಧೃತರಾಷ್ಟ್ರ – ಪಾಂಡು – ವಿದುರರೂ ವ್ಯಾಸರಿಂದ ಅಂಬಾಲೆ – ಅಂಬಾಲಿಕೆಯಲ್ಲಿ ಜನಿಸಿರುವರು.

ಗೌತಮರು [18–23] ದೇವರನಿಂದಲೇ ಸುತನನ್ನು ಪಡೆಯಬೇಕೆಂದು ಹೇಳಿ, ಕೆಲವರು ದೇವರನನ್ನು ಬಿಟ್ಟು ಎಂದಿದ್ದಾರೆ ಎನ್ನುವರು.

**ಪತಿರಪತ್ಯಲಿಪ್ಸುಃ ದೇವರಾದ್ ಗುರುಪ್ರಸೂತಾ ನರ್ತುಮತೀಯಾತ್।**

**'ನ ದೇವರಾದಿತ್ಯೇಕೆ'**

**ನಿಯೋಗ ನಿಯಮ :**

ಪತಿ ಹಾಗೂ ಮಾವ ಮೊದಲಾದವರ ಅನುಮತಿ ಅವಶ್ಯ. ಹದಿನಾರು ವರ್ಷಕ್ಕಿಂತ ಕಮ್ಮಿ ವಯಸ್ಸಿನವರಲ್ಲಿ ನಿಯೋಗವಿಲ್ಲ.

ಸ್ತ್ರೀಗಿಂತಲೂ ಕಡಿಮೆ ವಯಸ್ಸಿನವರಿಂದ ನಿಯೋಗವಿಲ್ಲ. ಉನ್ಮತ್ತಳು, ರೋಗಿ, ಸ್ವೇಚ್ಛಾಚಾರಿಣಿಯಾಗಿದ್ದಲ್ಲಿ ನಿಯೋಗವಿಲ್ಲ – ವಸಿಷ್ಠರು [17–50–51]

ಮನುವು [9/51–52]ರಲ್ಲಿ ನಿಯೋಗ ಸ್ತ್ರೀಗೆ ಘೃತಲೇಪನವನ್ನು ವಿಧಿಸಿರುವನು.

ನಿಯೋಗದಿಂದ ಸಂತಾನ ಪಡೆಯುವುದಾದರೂ ಒಂದೇ ಸಂತಾನ. ಕೆಲವರ ಪ್ರಕಾರ ಎರಡು ಸಂತಾನ. ಗರ್ಭ ನಿಂತ ಮೇಲೆಯೂ ಗಮನ ಮಾಡಿದರೇ, ಪತತನಾಗುವನು [ಯಾಜ್ಞ –2/68]

**ಆಗರ್ಭಸಂಭವಾದ್ ಗಚ್ಛೇತ್ ಪತಿತಸ್ತ್ವನ್ಯಥಾ ಭವೇತ್ ।**

ಇಂತಹ ದೇವರನಿಂದ ಹುಟ್ಟಿದವನು 'ಕ್ಷೇತ್ರಜ' ಎನಿಸುವನು.

ಸ್ತ್ರೀಯಾದರು ಮನೆಯ ಹಿರಿಯರಿಂದ ಅನುಜ್ಞೆ ಪಡೆಯದೆ ಮೈದುನನಿಂದ ಮಗನನ್ನು ಪಡೆದರೆ ಅವನು 'ಜಾರಜ' ಜಾರತನದಿಂದ ಜನಿಸಿದವನೆಂದು ಅರ್ಥ.

ಕುಲಸಂತಾನಕ್ಕಾಗಿ ನಿಯೋಗ ಪದ್ಧತಿ ಹೊರತು ಭೋಗಕ್ಕಾಗಿ ಅಲ್ಲ. ನಾರದೀಯ ಮನುಸ್ಮೃತಿ [12/81–86]

**ಕುಲ ಸಂತಾನ ರಕ್ಷಾ ತು ಫಲಂ ಪಮಧಿ ಗಚ್ಛತಃ ।**
**ಕುಲೇ ತದವಶೇಷೇತು ಸಂತಾನಾರ್ಥಂ ನ ಕಾಮತಃ ॥**

- ***ವಿಧವೆಗೆ ನಿಯೋಗವಿಲ್ಲ :***

ಮನುವು ವಿಧವೆಗೆ ನಿಯೋಗ ಪದ್ಧತಿ ನಿಷಿದ್ಧವು. ಇದು ಸನಾತನ ಹಾಗೂ ಮೂಲ ಧರ್ಮವೆ ನಷ್ಟವಾದಂತೆ ಎಂದಿರುವನು.

**ನಾನ್ಯಸ್ಮಿನ್ ವಿಧವಾ ನಾರೀ ನಿಯೋಕ್ತವಾಯ ।**
**ನಿಯಂಜಾನಾ ಧರ್ಮಂ ಹನ್ಯುಃ ಸನಾತನಂ ॥**

ವಿವಾಹ ಮಂತ್ರಗಳಲ್ಲಿ ಎಲ್ಲಿಯೂ ನಿಯೋಗ ವಿಧಾನವಿರುವುದಿಲ್ಲ ಹಾಗೂ ವಿಧವೆಗೆ ಪುನರ್ವಿವಾಹವೂ ಹೇಳಲ್ಪಟ್ಟಿರುವುದಿಲ್ಲ.

ವೇನನು ಕಾಮ ವಶನಾಗಿ ನಿಯೋಗವನ್ನು ಜಾರಿಗೆ ತಂದ ವರ್ಣಸಂಕರ ಕಾರಣನಾದ. ಜ್ಞಾನಿಗಳು ಇದನ್ನು 'ಪಶುಧರ್ಮ'ವೆಂದಿದ್ದಾರೆ.

**ನೋದ್ವಾಹಿಕೇಷು ಮಂತ್ರೇಷು ನಿಯೋಗಃ ಕೀರ್ತ್ಯತೇ ಕ್ವಚಿತ್ ।**
**ಅಯಂ ದ್ವಿಜೈರ್ಹಿ ವಿದ್ವದ್ಭಿಃ ಪಶುಧರ್ಮಃ ವಿಗರ್ಹಿತಃ ॥**
**ಮನುಷ್ಯಾಣಾಮಪಿ ಪ್ರೋಕ್ತಃ ವೇನೇ ರಾಜ್ಯಂ ಪ್ರಶಾಸತಿ ॥**

–ಮನು *9/64–67*

ಮನುವು ನಿಯೋಗವನ್ನು ಹೇಳಿ ಪುನಃ ನಿಷೇಧಿಸಿರುವನು. ಪ್ರಾಚೀನ ಕಾಲದಲ್ಲಿ ಎಲ್ಲರೂ ತಪೋಬಲ, ಜ್ಞಾನಬಲ ಹೊಂದಿದ್ದರು. ಹೀಗಾಗಿ ಕಾಮ ವಾಸನೆಯಿಲ್ಲದೆ ಅನ್ಯ ಸ್ತ್ರೀಯೊಂದಿಗೆ ಸಂಗ ಹೊಂದಿದರೂ ಯಾವುದೇ ದೋಷವನ್ನು ಹೊಂದುತ್ತಿರಲಿಲ್ಲ. ಕಲಿಯುಗದಲ್ಲಿ ತಪಸ್ಸು, ಜ್ಞಾನ ಬಲವಾವುದನ್ನೂ ನಿರೀಕ್ಷಿಸುವಂತಿಲ್ಲ. ಹಾಗಾಗಿ ಕಲಿಯುಗದಲ್ಲಿ ನಿಷೇಧಿಸಲಾಗಿದೆ. ನಿಯೋಗ ಪದ್ಧತಿಯ ನಿಯಮ ಪಾಲನೆ ಅಷ್ಟು ಸುಲಭವಲ್ಲ.

**ದೇವರಾಚ್ಚ ಸುತೋತ್ಪತ್ತಿಃ ॥**

* * * *

- ***ವಿಧವಾ ವಿವಾಹ :***

ಸ್ಮೃತಿಗಳಲ್ಲಿ 'ಪುನರ್ಭೂ' ಎಂಬ ಶಬ್ದವು ವಿಧವೆಯರಿಗಾಗಿಯೆ ಪ್ರಯುಕ್ತವಾಗಿದೆ. ಪುರುಷನೊಂದಿಗೆ ಸ್ತ್ರೀಯ ವಿವಾಹವಾದಾಗ ಸ್ತ್ರೀಯರಿಗೆ ಏಳು ಪ್ರಕಾರಗಳು ಬರುತ್ತವೆ. ಇವುಗಳಲ್ಲಿ ಮೂರನೇ ಪ್ರಕಾರವು 'ಪುನರ್ಭೂ' ಆದರೆ 'ಸ್ವೈರಿಣೀ' ಎಂಬುದು ಚತುರ್ಥ ಪ್ರಕಾರವು.

- ***ಪುನರ್ವಿವಾಹ ಯುಕ್ತವೆ ?***

ಒಬ್ಬ ಕನ್ಯೆಯು ಒಬ್ಬ ಪುರುಷನೊಂದಿಗೆ ವಿವಾಹವಾದಾಗ ಪತಿಪತ್ನಿಯರ

ಸಂಗಮವಾಗದಿದ್ದರೆ ಪುನಃ ಬೇರೊಬ್ಬನೊಂದಿಗೆ ವಿವಾಹ ಮಾಡಬಹುದು. ಯಾಜ್ಞವಲ್ಕ್ಯರು ಕನ್ಯೆಯು ಅನನ್ಯ ಪೂರ್ವಿಕೆಯಾಗಿರಬೇಕು ಎಂದಿರುವರು.

**ಅನ್ಯಪೂರ್ವಿಕಾ ಸ್ತ್ರೀಯು ಪುನರ್ಭೂಃ, ಸ್ವೈರಿಣೀ** ಎಂದು ಇಬ್ಬರು **ಪುನರ್ಭೂಗಳೂ ಸಹ ಕ್ಷತಾ – ಅಕ್ಷತಾ** ಎಂದು ದ್ವಿವಿಧಳು. ವಿವಾಹ ಸಂಸ್ಕಾರಕ್ಕಿಂತ ಮೊದಲೆ ಪರರೊಂದಿಗೆ ಇದ್ದವಳು ಕ್ಷತಳು. ವಿವಾಹವಾದ ಮೇಲೆ ಸಂಗ ಪಡೆದವಳು ಅಕ್ಷತಾ.

ಕುಂತಿಯು ವಿವಾಹಕ್ಕಿಂತ ಮೊದಲೆ ಸೂರ್ಯನಿಂದ ಕರ್ಣನನ್ನು ಪಡೆದಳು. ವಸ್ತುತ ಕ್ಷತ್ರ ಯೋನಿಯಾದರೂ ಸೂರ್ಯನು ಅಕ್ಷತ ಯೋನಿತ್ವ ನೀಡಿದ. ಹೀಗಾಗಿ ಪಾಂಡುವಿನೊಂದಿಗೆ ವಿವಾಹವಾಯಿತು.

**ಅಕ್ಷತಾ ಚ ಕ್ಷತಾ ಚೈವ ಪುನರ್ಭೂಃ ಸಂಸ್ಕೃತಾ ಪುನಃ ।**
**ಸ್ವೈರಿಣೀ ಯಾ ಪತಿಂ ಹಿತ್ವಾ ಸವರ್ಣಂ ಕಾಮತಃ ಶ್ರಯೇತ್ ॥**

–ಮನು *1/67*

- ***ಪುನಃ ವಿವಾಹವಾದವಳು 7 ವಿಧ :***

ಪುನರ್ಭೂ ಸ್ತ್ರೀಯು ಏಳು ರೀತಿ ಇರುವಳು. ಇವಳನ್ನು ಕೈ ಹಿಡಿದು ಧರ್ಮ ಪ್ರಜೆಗಳನ್ನು ಪಡೆಯಬಾರದು.

1) ವಾಗ್ದತ್ತಳು, 2) ಮನೋದತ್ತ, 3) ಅಗ್ನಿಗೆ ಸುತ್ತು ಬಂದವಳು, 4) ಸಪ್ತಪದಿ ಮುಗಿಸಿದವಳು, 5) ಭೋಗಿಸಲ್ಪಟ್ಟವಳು, 6) ಗರ್ಭ ಧರಿಸಿದವಳು, 7) ಮಗುವಿಗೆ ಜನ್ಮ ನೀಡಿದವಳು.

ಇವಳನ್ನು ವಿವಾಹವಾಗಬಾರದು. ವಾಗ್ದತ್ತ, ಮನೋದತ್ತಳಾದ ಪುನರ್ಭೂ ಸ್ತ್ರೀಯು ಪ್ರಾಯಶ್ಚಿತ್ತದಿಂದ ವಿವಾಹ ಕಂಡಿದೆಯಾದರೂ ಉಳಿದವರು ಯೋಗ್ಯರಲ್ಲ.

ಬೋಧಾಯನರು –

**ಅತಸ್ತಾಂ ಗೃಹೀತ್ವಾ ನ ಪ್ರಜಾಂ ಧರ್ಮಂ ಚ ವಿಂದೇತ್** ॥ ಎಂದಿರುವರು.

ವಸಿಷ್ಠ ಸ್ಮೃತಿಯಲ್ಲಿ [17/64–65] – ವಾಗ್ದಾನ ಹಾಗೂ ನೀರನ್ನು ಬಿಟ್ಟು ಕನ್ಯೆಯರನ್ನು ನೀಡಿದ್ದರೂ, ಮಂತ್ರಗಳಿಂದ ನಡೆಯದೆ ಇದ್ದಾಗ, ಪತಿಯು ಮೃತನಾದರೂ ಅವಳು ಕನ್ಯೆಯೇ ಎಂದು ಹೇಳಿರುವರು.

**ಅದ್ಭಿಃ ವಾಚಾ ಚ ದತ್ತಾಯಾಂ ಮ್ರಿಯೇತऽऽದೌ ವರೋಽಯದಿ ।**
**ಅನ್ಯಸ್ಮೈ ವಿಧಿವದ್ ದೇಯಾ ಯಥಾ ಕನ್ಯಾ ತಥೈವ ಸಾ ॥**

ನಾರದೀಯ ಮನುಸ್ಮೃತಿಯಲ್ಲಿ [12/24]–

ಕನ್ಯೆಯನ್ನು ವಿವಾಹವಾಗಿ ಪತಿಯು ದೇಶಾಂತರ ಹೊರಟು ಹೋದರೆ, ಮೂರು ಋತುಕಾಲ, ಮುಗಿದ ಮೇಲೆ ಬೇರೆ ವರನನ್ನು ಅರಿಸಬಹುದು.

**ಪ್ರತಿಗೃಹ್ಯ ಚ ಯಃ ಕನ್ಯಾಂ ನರೋ ದೇಶಾಂತರಂ ವ್ರಜೇತ್ ।**
**ತ್ರೀನ್ ಋತೂನ್ ಸಮತಿಕ್ರಮ್ಯ ಕನ್ಯಾನ್ಯಂ ವರಯೇದ್ ವರಂ ॥**

**ಪೌನರ್ಭವಃ**– ಮರು ವಿವಾಹವಾದವಳ ಪುತ್ರನೇ ಪೌನರ್ಭವ.

***ಪುನರ್ವಿವಾಹಕ್ಕೆ ಸಮ್ಮತಿ :***

ವಿವಾಹವಾದ ಪತಿಯು ಸನ್ಯಾಸಿಯಾದರೆ, ದೇಶಾಂತರ ಹೋದವನ ಸುಳಿವೆ ಸಿಗದಿದ್ದರೇ, ನಪುಂಸಕನಾಗಿದ್ದರೆ, ಪತಿತನಾಗಿದ್ದರೆ, ಮೃತನಾದರೆ, ಈ ಐದು ಸಂದರ್ಭದಲ್ಲಿ ಕನ್ಯೆಯು ಬೇರೆ ಸವರ್ಣನನ್ನು ವಿವಾಹವಾಗಬಹುದೆಂದು ಪರಾಶರ ಸ್ಮೃತಿ 4/30 ತಿಳಿಸಿದೆ.

**ಪತ್ಯೌ ಪ್ರವ್ರಜಿತೇ ನಷ್ಟೇ ಕ್ಲೀಬೇऽಥ ಪತಿತೇ ಮೃತೇ ।**
**ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥**

ಶಾತಾತಪರು [44–45]ರಲ್ಲಿ –ಈ ಮೇಲಿನ ವಿಚಾರವನ್ನು ವಿಮರ್ಶಿಸಿರುವರು.

ವಿವಾಹವಾದ ಮೇಲೆ ನಪುಂಸಕನೋ, ಪತಿತನೆಂದೋ ಸನ್ಯಾಸಿಯೋ ಆಗಿದ್ದಾನೆಂದು ತಿಳಿದರೆ ಇನ್ನೊಂದು ವಿವಾಹ ಮಾಡಬೇಕಾದರೆ ಸಪ್ತಪದಿ ಕಾರ್ಯ ನಡೆದಿರಬಾರದು, ಅಥವಾ ನಡೆದಿದ್ದರೂ ಪತಿಯಿಂದ ಭುಕ್ತಳಾಗಿರದಿದ್ದರೆ ಮಾತ್ರ ಮತ್ತೊಬ್ಬ ಸವರ್ಣನನ್ನು ಹೊಂದಬಹುದು.

ಮನುವು [9/69], ವಾಗ್ದಾನ ನಡೆದ ಮೇಲೆ ವರನು ಮೃತನಾದರೆ ಅವನ ತಮ್ಮನನ್ನು ವಿವಾಹವಾಗಬಹುದೆಂದಿರುವನು. [ಇದು ಕಲಿಯುಗದಲ್ಲಿ ನಿಷಿದ್ಧ]

ಪರಪುರುಷನಿಂದ ಪಡೆದ ಸಂತಾನ ಹಾಗೂ ಪರಸ್ತ್ರೀಯಲ್ಲಿ ಜನಿಸಿದ ಮಗ ಶಾಸ್ತ್ರೋಕ್ತ ಸಂತಾನವಲ್ಲವೆಂದಿರುವನು. [ಮನು–3/174]

- ***ಕನ್ಯಾದಾನ ಒಂದೇ ಬಾರಿ [ಯಜ್ಞವಲ್ಕ್ಯರು – 1/65]***

ಮನುವು [9/147]ರಲ್ಲಿ– **'ಸಕೃತ್ ಕನ್ಯಾ ಪ್ರದೀಯತೇ'** ಎಂದು ಹೇಳಿ, ಒಂದು ಬಾರಿ ವಿವಾಹ ಮಾಡಿಕೊಟ್ಟ ಮೇಲೆ ಪುನಃ ಮತ್ತೊಬ್ಬನನ್ನು ವರಿಸುವಂತಿಲ್ಲ. ಬ್ರಾಹ್ಮಣ ಸ್ತ್ರೀಯಂತೂ ವಿವಾಹವಾದ ಮೇಲೆ ಪುನಃ ಮತ್ತೊಬ್ಬನಿಗೆ ಕನ್ಯಾದಾನ ಮಾಡಿ ಕೊಡುವಂತಿಲ್ಲ.

ಪತಿವ್ರತಾ ಸ್ತ್ರೀಯರಿಗಂತೂ ಎಂತಹ ಸಂದರ್ಭದಲ್ಲಿಯೂ ಎರಡನೇ ಪತಿಯನ್ನರಸುವುದು ಒಪ್ಪದ ಸಂಗತಿ. ಅವರು ಬ್ರಹ್ಮಚರ್ಯದಿಂದ ಇರುತ್ತಾರೆ. [ಮನು –5/1, 62]

**ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ ।**
**ಸ್ವರ್ಗಂ ಗಚ್ಛತ್ಯ ಪುತ್ರಾಪಿ ಯಥಾ ತೇ ಬ್ರಹ್ಮಚಾರಿಣಃ ॥**

ಯಾವ ಸ್ತ್ರೀಯು ಪುತ್ರನಾದರೆ ಅವನಿಂದ ನನಗೆ ಸ್ವರ್ಗ ಲಭಿಸಬಹುದೆಂಬ ಲೋಭದಿಂದ ಪರಪುರುಷನ ಸಂಗ ಮಾಡಿದರೆ ಅವಳಿಗೆ ಪುತ್ರನಿಂದ ಸ್ವರ್ಗವೂ ಇಲ್ಲ. ಪತಿ ವಂಚನೆಯಿಂದಾಗಿ ಪತಿಲೋಕವೂ ಇಲ್ಲ.

**ಅಪತ್ಯಲೋಭಾದ್ ಯಾತು ಸ್ತ್ರೀ ಭರ್ತಾರ ಮತಿವರ್ತತೇ ।**
**ಸೇಹ ನಿಂದಾಮವಾಪ್ನೋತಿ ಪತಿಲೋಕಾಚ್ಚ ಹೀಯತೇ ॥**

ವಿವಾಹ ಸಂಬಂಧಿಯಾದ ಮಂತ್ರ ಕನ್ಯೆಯನ್ನು ಮಾತ್ರ ಕುರಿತು ಇದೆ ಹೊರತು ವಿವಾಹಿತಳಾದವಳನ್ನಲ್ಲ.

**ಪಾಣಿಗ್ರಹಣೀಕಾ ಮಂತ್ರ ಕನ್ಯಾಸ್ವೇವ ಪ್ರತಿಷ್ಠಿತಾಃ ।**
**ನಾಕನ್ಯಾಸು ಕ್ವಚಿದ್ ನೃಣಾಂ ಲುಪ್ತ ಧರ್ಮಕ್ರಿಯಾ ಹಿ ತಾಃ ॥**

ಏಕೆಂದರೆ ವಿವಾಹಿತಳು ಮತ್ತೊಬ್ಬನನ್ನು ಹೊಂದುವುದೆಂದರೆ ಧರ್ಮದ ಕಟ್ಟಲೆಯೆಲ್ಲವನ್ನೂ ತೂರಿ ಬಿಟ್ಟಂತೆ.

- ***ಪುರುಷನ ಮರುವಿವಾಹ :***

**ಮನುವು [9/81]** ರಲ್ಲಿ –ಗರ್ಭಿಣಿಯಾಗದವಳನ್ನು ಎಂಟು ವರ್ಷ, ಸಾಯುವ ಮಕ್ಕಳನ್ನು ಹೆರುವವಳನ್ನು ಹತ್ತು ವರ್ಷಾ ನಂತರವೂ, ಹೆಣ್ಣು ಮಕ್ಕಳನ್ನೆ ಹಡೆಯುವವಳನ್ನು ಹನ್ನೊಂದು ವರ್ಷ ಕಾದು ನೋಡಿ ಮತ್ತೆ

ಬೇರೆ ವಿವಾಹವಾಗಬಹುದು. ಪರುಷ ಮಾತು ವಿರುದ್ಧ ಮಾತನ್ನಾಡುವವಳನ್ನು ಕೂಡಲೇ ಬಿಡಬೇಕು.

**ವಂಧ್ಯಾಷ್ಟಮೇಽಧಿವೇದ್ಯಾಬ್ಧೇ ದಶಮೇ ತು ಮೃತಪ್ರಜಾ ।**
**ಏಕಾದಶೇ ಸ್ತ್ರೀ ಜನನಿ ಸದ್ಯಸ್ತ್ವ ಪ್ರಿಯವಾದಿನೀ ॥**

ಬೋಧಾಯನರು [2/2/65] – ಬಂಜೆಗೆ 10 ವರ್ಷವನ್ನೂ, ಕನ್ಯಾ ಸಂತಾನಿಗೆ 12 ವರ್ಷವನ್ನೂ, ಮೃತ ಪ್ರಜಾಳನ್ನು 15 ವರ್ಷ ಕಾಯಬೇಕೆಂದಿರುವರು.

ವ್ಯಾಸಸ್ಮೃತಿಯು [2/50–51]– ಧೂರ್ತಳು, ಧರ್ಮ–ಕಾಮಗಳನ್ನು ನಾಶ ಮಾಡುವವಳು, ಪುತ್ರಹೀನಳೂ, ರೋಗಿಣಿಯು, ಅತೀ ದುಷ್ಟಳೂ, ಮದ್ಯಪಾನಾಸಕ್ತಳೂ, ಗಂಡನಿಗೆ ಯಾವುದೇ ಹಿತಕರ ಕಾರ್ಯ ಮಾಡದವಳನ್ನು ತ್ಯಜಿಸಿ ಮರುವಿವಾಹವಾಗಬಹುದು.

**ಧೂರ್ತಾಂ ಚ ಧರ್ಮಕಾಮಘ್ನೀಂ ಅಪುತ್ರಾಂ ದೀರ್ಘರೋಗಿಣೀಂ।**
**ಸುದುಷ್ಟಾಂ ವ್ಯಸನಾಸಕ್ತಾಮಹಿತಾಂ ಅಧಿವಾಸಯೇತ್ ॥**

ಪತಿ ಹಿತವನ್ನು ಬಯಸುವವಳೂ, ಶೀಲವತಿಯೂ ಆಗಿದ್ದು, ರೋಗಿಣಿ–ಯಾಗಿದ್ದರೆ ಪತಿಯು ಇವಳ ಅನುಮತಿ ಪಡೆದು ಮರುವಿವಾಹ–ವಾಗಬಹುದು. ಇದು ಮನುವಿನ [9–82]ಅಭಿಪ್ರಾಯ. ಪತಿಯು ಮರುವಿವಾಹವಾದರೂ ಇವಳನ್ನು ಎಂದೂ ಅಪಮಾನ ಮಾಡಬಾರದು.

ಯಾಜ್ಞವಲ್ಕ್ಯರು [1/74]– ಪತಿಯು ಮರುವಿವಾಹವಾದರೂ ಮೊದಲು ವಿವಾಹವಾದ ಪತ್ನಿಯ ಪಾಲನ–ಪೋಷಣ ಮಾಡಲೇಬೇಕು. ಅನ್ಯಥಾ ಮಹಾಘೋರ ಪಾಪವು.

**ಅಧಿವಿನ್ನಾ ತು ಭರ್ತವ್ಯಾ ಮಹದೇನೋಽನ್ಯಥಾ ಭವೇತ್ ।**

**ವರ್ಣಸಂಕರ –**

ಮನುಸ್ಮೃತಿಯಲ್ಲಿ ವರ್ಣಸಾಂಕರ್ಯದ ಸವಿಸ್ತಾರ ವರ್ಣನೆ ಇದೆ.

ಮನುವಿನ ಪ್ರಕಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ನಾಲ್ಕು ಬಿಟ್ಟು ಐದನೇ ಜಾತಿಯೇ ಇಲ್ಲ.

ಈ ನಾಲ್ಕು ವರ್ಣದವರೂ ತಮ್ಮ ತಮ್ಮ ಜಾತಿಯ ಸ್ತ್ರೀಯರನ್ನು

ವಿವಾಹವಾದರೆ 'ಸಜಾತೀಯ ವಿವಾಹ'ವೆಂದೂ, ಇವರಲ್ಲಿ ಹುಟ್ಟಿದ ಸಂತಾನ 'ಸಜಾತೀಯ'ವೆಂದು ಹೇಳಲ್ಪಡುತ್ತದೆ.

ತಮ್ಮ ಜಾತಿಗಳಿಂದ ಭಿನ್ನ ಜಾತಿಯ ಸ್ತ್ರೀಯನ್ನು ವಿವಾಹವಾಗುವುದು ಅತ್ಯಂತ ಹೀನವು. ಇದು ಎರಡು ವಿಧ.

- ***ಅನುಲೋಮ – ಪ್ರತಿಲೋಮ :***

ಅನುಲೋಮವೆಂದರೆ ತನ್ನ ಜಾತಿಕ್ಕಿಂತ ನಿಮ್ನ ಜಾತಿ ಸ್ತ್ರೀ ವಿವಾಹ-ವಾಗುವುದು. ಪ್ರತಿಲೋಮವೆಂದರೆ ತನ್ನ ಜಾತಿಗಿಂತ ಉತ್ತಮ ಜಾತಿಯ ಸ್ತ್ರೀ ವಿವಾಹವು. ಬ್ರಾಹ್ಮಣನು ಕ್ಷತ್ರಿಯ-ವೈಶ್ಯ-ಶೂದ್ರ ವಿವಾಹವಾದರೆ ಅನುಲೋಮ, ಶೂದ್ರನು-ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಸ್ತ್ರೀಯ ವಿವಾಹವಾಗುವುದು ಪ್ರತಿಲೋಮವು.

- ***ವಿಧವಾ ಧರ್ಮ :***

ವಿಧವಾ ಎಂಬ ಶಬ್ದ ಋಗ್ವೇದದಲ್ಲಿ ಸುಮಾರು ಬಾರಿ ಪ್ರಯುಕ್ತವಾಗಿದೆ. [ಋ 4/18/12] [10/18/7] [10/40/2/8]

ಬೋಧಯನರು ವಿಧವೆಯು ಪತಿಮೃತನಾಗಿ ಒಂದು ವರ್ಷವಾಗುವವರೆಗೂ ಮಧುಮಾಂಸ ಮದ್ಯ ಅಷ್ಟೇಕೆ? ಉಪ್ಪನ್ನೂ ತಿನ್ನಬಾರದೆಂದು ತಿಳಿಸಿರುವರು.

**ಸಂವತ್ಸರಂ ಪ್ರೇತಪತ್ನೀ ಮಧುಮಾಂಸ ಮದ್ಯಲವಣಾನಿ ವರ್ಜಯೇ ದಧಃ ಶಯಿತಾ ।** *–ಬೋಧ–2/2/67–68*

ವಮೌದ್ಗಲ್ಯರು ಆರು ತಿಂಗಳ ಮಾತ್ರ ಎಂದಿರುವರು. ಹಾಗೂ ಪುತ್ರಾಕಾಂಕ್ಷಿಯಾಗಿದ್ದರೆ ಮೈದುನನಿಂದ ಪಡೆಯ-ಬಹುದೆಂದಿದ್ದರೂ ಇದು ಕಲಿಯುಗದಲ್ಲಿ ವರ್ಜ್ಯವು.

ಮನುವು [5–157–160] ವಿಧವೆಯು ಪುಷ್ಪ, ಫಲ, ಕಂದ ಮೂಲಗಳ ಮೂಲಕ ಜೀವನ ನಡೆಸುತ್ತಾ ಶಾರೀರಿಕ ತಪಸ್ಸನ್ನಾಚರಿಸಬೇಕು.

ಪರಪುರುಷರ ನಾಮವನ್ನೂ ಉಚ್ಚರಿಸಬಾರದು. ಪರಮ ಪುರುಷನ ಮಂಗಳ ನಾಮ ಹೊರತು.

**ನ ತು ನಾಮಾಪಿ ಗೃಹ್ಣೀಯಾತ್ ಪತ್ಯೌ ಪ್ರೇತೇ ಪರಸ್ಯತು ।**

ಸಂತತಿ ಇಲ್ಲದಿದ್ದರೂ ಸ್ವಧರ್ಮನಿರತರು ಸದ್ಗತಿ ಪಡೆದಿರುವರು.

ಸಹಸ್ರಾರು ಬ್ರಹ್ಮಚಾರಿಗಳು ಸ್ವಧರ್ಮನಿಷ್ಠರಾಗಿ ಸದ್ಗತಿ ಪಡೆದಂತೆ, ಹೆಂಗಸರೂ ಪತಿ ಮೃತನಾದ ಮೇಲೆ ಬ್ರಹ್ಮಚಾರಿಗಳಾಗಿದ್ದು ಸದ್ಗತಿ ಪಡೆಯಬಹುದಾಗಿದೆ.

ಚಿತ್ತಶುದ್ಧಿ ಇರುವ ಸ್ತ್ರೀಯರಿಗೆ ಬೇರೆಯವನಿಂದಾಗುವ ಸಂತತಿಯು ತನ್ನದಾಗುವುದಿಲ್ಲ. ಇದನ್ನು ಅವರು ಮೆಚ್ಚುವುದಿಲ್ಲ.

**ನ ದ್ವಿತೀಯಶ್ಚ ಸಾಧ್ವೀನಾಂ ಕ್ವಚಿದ್ ಭರ್ತೋಪದಿಶ್ಯತೇ ।**

ಬಹು ಪುರುಷರನ್ನು ಸೇವಿಸಿದ ಸ್ತ್ರೀಯು ಶೃಗಾಲಯೋನಿ ಹೊಂದುವಳೂ. ಪಾಪದಿಂದಾಗಿ ಮಹಾರೋಗಕ್ಕೆ ತುತ್ತಾಗುವಳು.

**ಪಾಪರೋಗೈಶ್ಚ ಪೀಡ್ಯತೇ ।**

ಪತಿ ಪರಾಯಣಳು ಪತಿಲೋಕವನ್ನು ಹೊಂದುವಳು. ಇವಳನ್ನೆ ಸಜ್ಜನರು **'ಸಾಧ್ವೀ'** ಎನ್ನುವರು. [ಮ 5/165]

ವಿಧವೆಯರಿಗೆ ಪತಿ ಮೃತನಾದ ಮೇಲೆ ಸದ್ಗತಿ ಹೊಂದಲಿರುವ ಮಾರ್ಗ ಎರಡೇ. ಗಂಡನೊಂದಿಗೆ ವಹ್ನಿ ಪ್ರವೇಶ, ಮುಂಡನ ಮಾಡಿಕೊಂಡು ದೈಹಿಕ ತಪಸ್ಸನ್ನಾಚರಿಸುವುದು. [ವ್ಯಾಸ – 2/53]

**ಮೃತಂ ಭರ್ತಾರಮಾದಾಯ ಬ್ರಾಹ್ಮಣೀ ವಹ್ನಿಮಾವಿಶೇತ್ ।**

**ಜೀವಂತೀ ಚೇತ್ ತ್ಯಕ್ತಕೇಶಾ ತಪಸಾ ಶೋಧಯೇದ್ ವಪುಃ ॥**

ಬೃಹಸ್ಪತಿ ಸ್ಮೃತಿ [25–14]ರಲ್ಲಿ – ಪತ್ನಿಯು ಅರ್ಧಾಂಗಿಯೆನಿಸಿರುವಳು. ಹಾಗಾಗಿ ಪತಿಯ ಪುಣ್ಯದ ಅರ್ಧ ಭಾಗಕ್ಕೆ ಭಾಗಿಯು. ಒಬ್ಬ ಸದ್ಗುಣೀ ಪತ್ನಿಯು ಪತಿವ್ರತೆಯ ಪಟ್ಟ ಹೊಂದುವಳು. ಇವಳಿಗೆ ಮಾತ್ರ ಪತಿಯ ಆಧ್ಯಾತ್ಮಕಾರ್ಧ ಪುಣ್ಯ ಲಾಭವು.

ಬೃಹಸ್ಪತಿ ಸ್ಮೃತಿ – ವಿಧವೆಗೆ ಧಾರ್ಮಿಕ ವ್ರತ, ಉಪವಾಸ ಹಾಗೂ ಇತರ ನಿಯಮಗಳೊಂದಿಗೆ ಬ್ರಹ್ಮಚರ್ಯವೂ ಅತ್ಯವಶ್ಯವಾಗಿದೆ. ಇಂದ್ರಿಯ ನಿಗ್ರಹ ದಾನ ಧರ್ಮಗಳನ್ನಾಚರಿಸುತ್ತಾ ಪತಿಲೋಕ ಹೊಂದುವುದು.

ವೃದ್ಧಹಾರೀತರು [11/206–209] ವಿಸ್ತಾರವಾಗಿ ವಿಧವಾ ಧರ್ಮ ರೂಪಿಸಿರುವರು.

ಪತಿಯು ದುಃಖಿತನಾದಾಗ ತಾನೂ ದುಃಖಿತಳಾಗುವುದು, ಹೃಷ್ಟನಾದಾಗ ಹೃಷ್ಟಳೂ, ಬೇರೆ ಊರಿಗೆ ಹೋದಾಗ ಮಲಿನಾಂಬರಳೂ ಮೃತಳಾದಾಗ ತಾನೂ ಮೃತಳಾದವಳೇ ಪತಿವ್ರತೆ.

ವಿವಿಧ ಪಾನೀಯಗಳು, ವಿವಿಧ ಭಕ್ಷ್ಯಗಳು, ಗಂಧಲೇಪನ, ಪುಷ್ಪಧಾರಣ, ಆಭರಣ ಧರಿಸುವುದು, ನೀಲಿವಸ್ತ್ರ ಧರಿಸುವುದು ಇವೆಲ್ಲ ನಿಷಿದ್ಧವು.

ದಿನಕ್ಕೆರಡು ಬಾರಿ ಭೋಜನ, ಕೋಪತಾಪ ನಿಷ್ಠುರಗಳನ್ನು ದೂರ ಮಾಡಬೇಕು. ಪರರ ನಿಂದೆ ಅನ್ಯ ವಿಷಯಗಳ ಬಗ್ಗೆ ಚರ್ಚಿಸದೆ ನಿರಂತರ ಹರಿಕಥಾ ಶ್ರವಣ, ನಾಮಸ್ಮರಣಾದಿಗಳಿಂದ ಜೀವನ ನಡೆಸುವುದು. ತಾನು ಪವಿತ್ರಳಾಗಿದ್ದು ಸದಾಚಾರಿಣೀಯಾಗಿದ್ದು ಹರಿ ಪೂಜೆಯಲ್ಲಿಯೇ ನಿರತಳಾಗಬೇಕು. ಭೂಮಿಯ ಮೇಲೆ, ದರ್ಭಾಸನ ಚಾಪೆ ಇವುಗಳ ಮೇಲೆ ಮಲಗಬೇಕು.

- ***ಸಕೇಶೀ ವಿಧವಾ ಪಾಕ ನಿಷಿದ್ಧ [ಕಪಿಲ ಸ್ಮೃತಿ] :***

**ರಂಡಾಭಿಃ ತಾದೃಶೀಭಿಸ್ತು ಕೃತಂ ಪಾಕಂ ವಿಗರ್ಹಿತಮ್ ।**
**ಗೃಹೀ ತ್ಯಜೇದ್ ವಿಶೇಷೇಣ ದೈವೇ ಪಿತ್ರೇ ಚ ಕರ್ಮಣಿ ॥**

* * * *

## ಸ್ತ್ರೀಯ ಮಹತ್ವ

ಮನುವು – ಸ್ತ್ರೀಯೆಂಬ ರತ್ನ ಎಲ್ಲಿಂದಲೇ ಬಂದಿರಲಿ ಅದನ್ನು ಸ್ವೀಕರಿಸಬೇಕು ಎಂದಿರುವನು.

ಪರಾಶರಸ್ಮೃತಿ[1/30]ಯಲ್ಲಿ – ಕಲಿಯುಗದಲ್ಲಿ ಸ್ತ್ರೀಯರಿಗೆ ಅತೀ ಮಹತ್ವವಿದೆ. ಸ್ತ್ರೀಯರು ಪುರುಷರ ಮೇಲೆ ಅಧಿಕಾರ ಹೂಡುವರು.

**ಸ್ತ್ರೀಭಿಶ್ಚ ಪುರುಷಾಃ ಜಿತಾಃ ।**

ಇದು ಯುಕ್ತವೆಂದೆ ತೋರುತ್ತದೆ. ಈ ಕಾಲದಲ್ಲಿ ಕಾಮಭಾವನೆ, ರತಿ ಸುಖಕ್ಕೆ ಅತಿ ಮಹತ್ವ ನೀಡುತ್ತಿರುವರು.

ಬೃಹತ್ ಪರಾಶರ [5/195]ರಲ್ಲಿ –ವಸ್ತುತಃ ಸ್ತ್ರೀಯರು ಗೃಹವೇ ಆಗಿರುವರು.

**ಗೃಹಂ ಹಿ ಗೃಹಿಣೀಮಾಹುಃ ।**

ಪುರುಷನು ಮನೆಯಲ್ಲಿದ್ದ ಮಾತ್ರಕ್ಕೆ ಗೃಹಸ್ಥನೆನಿಸುವುದಿಲ್ಲ. ಭಾರ್ಯೆಯಿಂದ ಗೃಹಸ್ಥನೆನಿಸುವನು.

**ನ ಗೃಹೇಣ ಗೃಹಸ್ಥಃ ಸ್ಯಾದ್ ಭಾರ್ಯಯಾ ಕಥ್ಯತೇಗೃಹೀ ।**

ಯಾರ ಮನೆಯಲ್ಲಿ ಭಾರ್ಯೆಯಿರುವುಳೋ ಅದು ನಿಜವಾದ ಗೃಹವು. ಭಾರ್ಯಾಹೀನ ಮನೆಯು ವನವೆ. **"ಭಾರ್ಯಾಹೀನಂ ಗೃಹಂ ವನಮ್"** ಪುರುಷರಿಗೆ ಭಾರ್ಯೆಯಿಂದಲೇ ಸುಖ, ಶುಭೋದಯ.

**ಭಾರ್ಯಾಧೀನಂ ಸುಖಂ ಪುಂಸಾಂ ಭಾರ್ಯಾದೀನಂ ಗೃಹಂಧನಂ।**
**ಭಾರ್ಯಾದೀನಾ ಸುಖೋತ್ಪತ್ತಿಃ ಭಾರ್ಯಾಧೀನಃ ಶುಭೋದಯಃ ॥**

ಬೃಹತ್ ಪರಾಶರರು [6–44] – ಸ್ತ್ರೀಯರಿಗೆ ಭೂಷಣಾದಿಗಳು ಬಹು ಇಷ್ಟವಾದವುಗಳು. ಇವುಗಳನ್ನು ನೀಡುತ್ತಾ ಸಂತೋಷಪಡಿಸಿದರೆ ದೇವತೆಗಳು, ಪಿತೃಗಳು, ಮನುಷ್ಯರೂ ಆ ಮನೆಯಲ್ಲಿ ಸಂತುಷ್ಟರಾಗಿರುತ್ತಾರೆ.

**ಸ್ತ್ರೀಯಶ್ಚ ಯತ್ರ ಪೂಜ್ಯಂತೇ ಸರ್ವದಾ ಭೂಷಣಾದಿಭಿಃ ।**
**ದೇವಾಃ ಪಿತೃ ಮನುಷ್ಯಾಶ್ಚ ಮೋದಂತೇ ತತ್ರ ವೇಶ್ಮನಿ ॥**

ಸ್ತ್ರಿಯರು ಸಂತುಷ್ಟರಾದರೆ ಲಕ್ಷ್ಮೀ ತುಷ್ಟಳಾದಂತೆ. ಸಂಪತ್ತಿಗೆ ಕಾರಣ–ರಾಗುವರು. ಅಸಂತುಷ್ಟರಾದರೆ ದುಷ್ಟ ದೇವತೆಗಳಂತೆ ಆಪತ್ತಿಗೆ ಕಾರಣರಾಗುವರು.

**ಸ್ತ್ರಿಯಃ ತುಷ್ಟಾಃ ಶ್ರಿಯಃ ಸಾಕ್ಷಾತ್ ರುಷ್ಟಾಶ್ಚ ದುಷ್ಟದೇವತಾಃ ॥**

ಪತಿವ್ರತೆಯಾದ ಭಾರ್ಯೆಯಿರುವ ಗೃಹದಲ್ಲಿ ಷಟ್ ಕರ್ಮಗಳೂ ಪುರುಷರಿಂದ ನಡೆಸಲ್ಪಡುತ್ತವೆ.

ಆಯುಸ್ಸು, ಧನಾದಿಗಳು, ಕೀರ್ತಿ, ಸಂತಾನ, ಇವುಗಳು ಪುರುಷರಿಗೆ ಸ್ತ್ರೀಯರ ಪ್ರೀತಿಯಿಂದಾಗಿ ಲಭಿಸುತ್ತವೆ. ಅವರು ಅಪ್ರೀತರಾದರೆ ಅವರ ನಿಟ್ಟುಸಿರಿನಿಂದಾಗಿ ಇವೆಲ್ಲ ನಾಶ ಹೊಂದುತ್ತವೆ.

**ಆಯುರ್ವಿತ್ತಂ ಯಶಃ ಪುತ್ರಾಃ ಸ್ತ್ರೀಪ್ರೀತ್ಯಾ ಸ್ಯುರ್ನೃಣಾಂಸದಾ ।**
**ನಶ್ಯಂತೇ ತೇ ತದಪ್ರೀತೌ ತಾಸಾಂ ಶಾಪಾದ ಸಂಶಯಮ್ ॥**
*– ಬೃಹತ್‌ಪಾರಾ[6/43]*

- ***ಸ್ತ್ರೀಯರಿಗೆ ಅಪಮಾನ ಸಲ್ಲದು :***

ಸ್ತ್ರೀಯರಿಂದಲೇ ಧನಾದಿ ಶುಭೋದಯ ಉಂಟಾಗುವುದರಿಂದ ಪತಿ ಅಣ್ಣಂದಿರು, ತಂದೆ–ತಾಯಿ ಹಾಗೂ ಇತರ ಬಂಧುಗಳು ಇವಳನ್ನು ಅಪಮಾನ ಮಾಡಬಾರದು.

**ನಾಪಮಾನ್ಯಾಃ ಸ್ತ್ರೀಯಃ ಸದ್ಭಿಃ ಪತಿಶ್ವಶುರ ದೇವರೈಃ ।**
**ಭ್ರಾತ್ರಾ ಪಿತ್ರಾ ಚ ಮಾತ್ರಾ ಚ ತಥಾ ಬಂಧುಭಿರೇವ ಚ ॥**

- ***ಸ್ತ್ರೀಯಿಂದಲೇ ತ್ರಿವರ್ಗ ಸಿದ್ಧಿ :***

ಯಾವ ಮನೆಯಲ್ಲಿ ಪತಿಪತ್ನಿಯರು ಅನ್ಯೋನ್ಯ ಹೊಂದಿ ಇರುವರೋ ಅಲ್ಲಿಯೇ ಧರ್ಮ ಅರ್ಥ ಕಾಮಗಳು ಸಿದ್ಧಿಸುತ್ತವೆ. ಈ ಮೂರೂ ಸ್ತ್ರೀಯರ ಅಧೀನವಾಗಿರುತ್ತವೆ.

**ತತ್ರ ಧರ್ಮಾರ್ಥಕಾಮಾಃ ಸ್ಯುಃ ತದಧೀನಾ ಯತಸ್ತ್ವಮೀ ।**

ತಾನು ಹಿರಿಯನಾಗಿದ್ದರೂ ತಾಯಿಯ ತಂಗಿ, ಮಾತುಲ ಪತ್ನಿ, ಪತ್ನಿಯ ತಾಯಿ, ತಂದೆಯ ತಂಗಿಯರು ತನಗಿಂತ ಕಿರಿಯರಾದರೂ ಗುರುಪತ್ನಿಯಂತೆ ಪಾದಗ್ರಹಣಾರ್ಹರು.

- ***ಸ್ತ್ರೀಯರ ಪಾವಿತ್ರ್ಯತೆ :***

ಸ್ತ್ರೀಯರ ಪಾವಿತ್ರ್ಯತೆ ಬಗ್ಗೆ ಅನೇಕ ಪ್ರಕಾರದಿಂದ ವರ್ಣಿಸಲಾಗಿದೆ.

ಹೇಗೆ ಬಾಲಕರ, ವೃದ್ಧರ ಬಾಯಿ ಪವಿತ್ರವೋ ಹಾಗೆ ಸ್ತ್ರೀಯರ ಬಾಯಿ ಪವಿತ್ರವೆ.

**ಸ್ತ್ರೀಮುಖಂ ಬಾಲವೃದ್ಧೌ ಚ ನ ದುಷ್ಯಂತಿ ಕದಾಚನ ।**

*–ಬೃಹತ್ ಪಾರಾ–8/303*

**ಸ್ತ್ರೀಮುಖಂ ಚ ಸದಾ ಶುದ್ಧಮ್ ।**

ಮನುವು [5–130] –ಸ್ತ್ರೀಮುಖ, ಪಕ್ಷಿಮುಖ ಪವಿತ್ರ. ತನಗೆ ತನ್ನ ಸ್ತ್ರೀ, ತನ್ನ ಮಕ್ಕಳು. ತನ್ನ ವೃದ್ಧ ಮಾತಾಪಿತೃಗಳು ಪವಿತ್ರರೇ ಬೇರೆಯವರಿಗೆ ಅಪವಿತ್ರರು.

**ಆತ್ಮನಃ ಶುಚಯಃ ಸರ್ವೇ ಪರೇಷಾಮಶುಚೀನಿ ತೇ ।**

- ***ಸೋಮಾಗ್ನಿ ಗಂಧರ್ವರಿಂದ ಪಾವಿತ್ರ್ಯ :***

ಸ್ತ್ರೀಯರು ಪವಿತ್ರರಾಗಿರಲಿ ಅಪವಿತ್ರರಾಗಿರಲಿ, ಶುದ್ಧರೋ ಅಶುದ್ಧರೋ ಆದರೂ ಯಾವಾಗಲೂ ಪವಿತ್ರರೆ. ಏಕೆಂದರೆ ಚಂದ್ರ, ಗಂಧರ್ವ, ಅಗ್ನಿಗಳು ಇವರನ್ನು ಪವಿತ್ರಗೊಳಿಸುವರು.

**ಅಶೌಚಾಶ್ಚ ಸಶೌಚಾಶ್ಚ ಅಮೇಧ್ಯಾ ಅಪಿ ಪಾವನಾಃ ।**
**ಶೌಚಂ ವಾಚಂ ಚ ಮೇಧ್ಯತ್ವಂ ಸೋಮ ಗಂಧರ್ವಪಾವಕಾಃ ।**
**ದದುಸ್ತಾಸಾಂ ವರಾನೇತಾಂಸ್ತಸ್ಮಾನ್ ಮೇಧ್ಯತರಾಃ ಸ್ತ್ರಿಯಃ ॥**

ವಸಿಷ್ಠರು [3/44]ರಲ್ಲಿ – ಪಕ್ಷಿಯ ಮುಖದಂತೆ ರತಿಕಾಲದಲ್ಲಿ ಸ್ತ್ರೀಯರ ಮುಖ ಪವಿತ್ರವು.

- ***ಸರ್ವಾಂಗ ಪವಿತ್ರತೆ :***

ಗೋವು, ಬ್ರಾಹ್ಮಣ, ಮೇಕೆಗಳು ಕ್ರಮವಾಗಿ ಹಿಂಭಾಗ, ಪಾದ, ಬಾಯಿಯಲ್ಲಿ ಮಾತ್ರ ಪವಿತ್ರವೆನಿಸಿದರೆ ಸ್ತ್ರೀಯರು ಸರ್ವಾಂಗಗಳಲ್ಲಿ ಪವಿತ್ರರು.

**ಸ್ತ್ರಿಯಃ ಮೇಧ್ಯಾಸ್ತು ಸರ್ವತಃ ।** –ವಸಿಷ್ಠ – *28/8–9*

ನದಿಯು ಮಾತ್ರ ಪುರೀಷಾದಿಗಳಿಂದ ಅಪವಿತ್ರವಾಗದಂತೆ, ವೇದೋಕ್ತ ಹಿಂಸೆಯಿಂದ ಬ್ರಾಹ್ಮಣನು ಅಪವಿತ್ರನಾಗದಂತೆ ಜಾರನು ಇವಳನ್ನು ಭೋಗಿಸಿದರೆ ಅವಳ ಪಾವಿತ್ರ್ಯತೆಗೆ ಕುಂದಿಲ್ಲ.

**ನ ಸ್ತ್ರೀ ದುಷ್ಯತಿ ಜಾರೇಣ ।** – *ಬೃಹತ್ ಪರಾ 2/110*

ಪ್ರತಿ ತಿಂಗಳು ರಜಸ್ಸು ಹೋಗುವಾಗ ಈ ಪಾಪಗಳನ್ನು ಹೋಗಲಾಡಿಸುತ್ತವೆ.

**ಮಾಸಿ ಮಾಸಿ ರಜೋ ಸ್ತ್ರೀಣಾಂ ದುರಿತಾನ್ಯಪಕರ್ಶತಿ ॥**
– *ಬೋಧಾ–2/2/63*

ಬೇರೆಯವರಿಂದ ಬಲಾತ್ಕಾರವಾಗಿ ಭೋಗಿಲಸ್ಪಟ್ಟರೂ ಸ್ತ್ರೀ ಪತಿತಳಾಗ–ಲಾರಳು. ಹೀಗಾಗಿ ಅವಳನ್ನು ಬಿಡಬಾರದು. ಆದರೂ ಪ್ರಾಜಾಪತ್ಯ ವ್ರತದಿಂದ ಶುದ್ಧಳಾಗುವಳು. [ಅತ್ರಿ ಸಂಹಿತಾ 195–196] ರಾಮ ಪಾದ ಸ್ಪರ್ಶದಿಂದ ಅಹಲ್ಯೆ ಶುದ್ಧಳಾದಂತೆ.

- ***ಸ್ತ್ರೀಯರ ರಕ್ಷಣೆ ಅವಶ್ಯ :***

ಸ್ತ್ರೀಯರನ್ನು ಯಾವಾಲಗೂ ರಕ್ಷಿಸುತ್ತಿರಬೇಕು. ನಾರಿಯರ ಹಾಗೂ ನದಿಗಳ ಗತಿ ತಿಳಿದವರ್ಯಾರು? ಸ್ತ್ರೀಯರ ಚೇಷ್ಟೆ, ಚಾರಿತ್ರ್ಯ, ಚಿತ್ರಗಳನ್ನು ದೇವತೆಗಳಿಗೆ ತಿಳಿಯಲಸಾಧ್ಯ.

**ಚೇಷ್ಟಾ ಚಾರಿತ್ರ್ಯ ಚಿತ್ರಾಣಿ ದೇವಾ ನೈವ ವಿದುಃ ಸ್ತ್ರಿಯಾಂ ।**
**ತಸ್ಮಾತ್ತಾಃ ಸರ್ವಥಾ ರಕ್ಷ್ಯಾಃ ಸರ್ವೋಪಾಯೈಃ ನೃಭಿಃ ಸದಾ ॥**

ಸ್ತ್ರೀಯರಿಗೆ ಸ್ವಾತಂತ್ರ ನೀಡಿದರೆ ಕುಲಸ್ತ್ರೀಯರೂ ಹಾಳಾಗುವ ಸಂದರ್ಭವಿದೆ. ಪ್ರಜಾಪತಿಯು ಇದಕ್ಕಾಗಿಯೇ ಇವರನ್ನು ಬಾಲ್ಯದಲ್ಲಿ ತಂದೆ, ಯೌವ್ವನದಲ್ಲಿ ಪತಿ, ವೃದ್ಧಾಪ್ಯದಲ್ಲಿ ಮಕ್ಕಳು. ಇವರ ಕಾಪಿನಲ್ಲಿಯೇ ಇಟ್ಟಿರುವನು.

**ಸ್ವಾತಂತ್ರೇಣ ವಿನಶ್ಯಂತಿ ಕುಲಜಾ ಅಪಿ ಯೋಷಿತಃ ।**
**ಅಸ್ವಾತಂತ್ರ್ಯಮತಃ ಸ್ತ್ರೀಣಾಂ ಪ್ರಜಾಪತಿರಕಲ್ಪಯತ್ ॥**

ಪತಿ ಪುತ್ರರಿಗೆ ಕಠೋರ ವಿಪತ್ತಿನಲ್ಲಿಯೂ ಆಭರಣಾದಿ ಭೋಜನ, ವಸ್ತ್ರಾದಿಗಳಿಂದ ಸ್ತ್ರೀಯರನ್ನು ರಕ್ಷಿಸಬೇಕು.

ಅರುಣ ಸ್ಮೃತಿ [1/96–97]ರಲ್ಲಿ – ತನ್ನ ಪತ್ನಿ, ತಾಯಿ, ಗುರುಪತ್ನೀ ಹಾಗೂ ಮಾತೃಭೂಮಿ ಇವುಗಳ ಅಪಹರಣ ನಡೆದಾಗ ತನ್ನ ಪ್ರಾಣವನ್ನು ಒತ್ತೆ ಇಟ್ಟಾದರೂ ಇವರ ರಕ್ಷಣೆ ಮಾಡಬೇಕು.

ಸ್ತ್ರೀಯು ಯಾವ ವರ್ಣದವಳಾಗಿದ್ದರೂ ಅವಳನ್ನು ರಕ್ಷಿಸಬೇಕು. ಇದಕ್ಕಾಗಿ ಬಹು ಹಣ ವ್ಯಯ ಮಾಡಬೇಕಾದರೂ ಹಿಂಜರಿಯಬಾರದು. [ಬೋಧಾ 2/2/61]

**ಸರ್ವೇಷಾ ಮೇವ ವರ್ಣಾನಾಂ ದಾರಾ ರಕ್ಷ್ಯತಮಾ ಧನಾತ್ ।**

- ***ಸ್ತ್ರೀಯರಿಗೆ ಸವಲತ್ತು :***

ಸ್ತ್ರೀಯರಿಗೆ ಮಾರ್ಗವನ್ನು ಮೊದಲು ಕೊಡಬೇಕು. ಪುರುಷರಿಗಿಂತಲೂ ಸ್ತ್ರೀಗೆ ಅರ್ಧ ಪ್ರಾಯಶ್ಚಿತ್ತ.

**ಪ್ರಾಯಶ್ಚಿತ್ತಾರ್ಧಮರ್ಹಂತಿ ಸ್ತ್ರೀಯೋರೋಗಿಣ ಏವಚ ।**
– ಮನುವು *[8/407]*

ಗರ್ಭಿಣೀ ಸ್ತ್ರೀಯನ್ನು ನದಿ ದಾಟಿಸಲು ಶುಲ್ಕ ಸ್ವೀಕರಿಸಬಾರದು.

**ಗರ್ಭಿಣೀತು ದ್ವಿಮಾಸಾದಿಃ ನ ದಾಪ್ಯಾಃ ತಾರಿಕಂ ತರೇ ।**

- ***ಮೊದಲು ಭೋಜನ :***

ನವ ವಿವಾಹಿತಳು, ಕುಮಾರಿಯು, ಗರ್ಭಿಣೀ ಸ್ತ್ರೀ, ಗೋರಿಣೀ ಪಿತೃಗೃಹದಲ್ಲಿಯೇ ಇರುವವಳು, ವೃದ್ಧಳು ಇವರುಗಳಿಗೆ ಅತಿಥಿಗಳಿಗಂತಲೂ ಪೂರ್ವದಲ್ಲಿ ಭೋಜನ ನೀಡಬೇಕು. [ವಿಷ್ಣು ಸ್ಮೃತಿ 67/32] [ಗೌತಮರೂ 5/23]

**ಸುವಾಸಿನೀ ಕುಮಾರೀಂ ಚ ರೋಗಿನೀಂ ಗುರ್ವಿಣೀಂ ತಥಾ ।**
**ಅತಿಥಿಭ್ಯೋऽಗ್ರ ಏವೈತಾನ್ ಭೋಜಯೇದ ವಿಚಾರಯನ್ ॥**

*– ನಾರದೀಯ ಮನುಸ್ಮೃತಿ [1/37]*

ರಾತ್ರಿಯಲ್ಲಿ, ಗ್ರಾಮದ ಹೊರಗೆ, ಮನೆಯೊಳಗೆ, ಶತ್ರು ಮಧ್ಯದಲ್ಲಿ ಯಾವುದಾದರೂ ಸ್ತ್ರೀ ಸಂಬಂಧಿ ವ್ಯವಹಾರ ನಡೆದಿದ್ದರೆ ಅದನ್ನು ಪುನಃ ವಿಚಾರಕ್ಕೆ ಒಳಪಡಿಸಬೇಕು.

**ಸ್ತ್ರೀಷು ರಾತ್ರೌ ಬಹಿರ್ಗ್ರಾಮಾದಂತರ್ವೇಶ್ಮನ್ಯರಾತಿಷು ।**
**ವ್ಯವಹಾರಃ ಕೃತೋऽಪ್ಯೇಷು ಪುನಃ ಕರ್ತವ್ಯತಾಮಿಯಾತ್ ॥**

- ***ಪತಿತ ಕುಲ ಸ್ತ್ರೀ ಸ್ವೀಕಾರ :***

ವಸಿಷ್ಠ 13/20–21– ಪತಿತರಿಂದ ಹುಟ್ಟಿದವರು ಪತಿತರೆ ಆಗುವುದೆಂದು ಹೇಳುವರು. ಆದರೆ ಸ್ತ್ರೀಯನ್ನು ಬಿಟ್ಟು ಅಂದರೆ ಸ್ತ್ರೀರತ್ನವಾಗಿದ್ದರೆ ದುಷ್ಕುಲದಲ್ಲಿರೂ ವಿವಾಹ ಯೋಗ್ಯಳೇ.

**ಸ್ತ್ರೀ ರತ್ನಂ ದುಷ್ಕುಲಾದಪಿ ।**

ಪತಿತಾವಸ್ಥೆಯಲ್ಲಿ ಜನಿಸಿದ, ಪ್ರಾಯಶ್ಚಿತ್ತ ರೂಪವಾಗಿ ಉಪವಾಸಾದಿಗಳಿಂದ ತನ್ನನ್ನು ಶುದ್ಧೀಕರಿಸಿ ಕೊಂಡವಳು ಹಾಗೂ ಪತಿತ ತಂದೆಯ ವಸ್ತ್ರಾಲಂಕಾರಾದಿ ಪಿತೃಧನವನ್ನೂ ಸ್ವೀಕರಿಸದಿದ್ದವಳನ್ನು ವಿವಾಹವಾಗ–ಬಹುದು.

**ಕನ್ಯಾಂ ಸಮುದ್ವಹೇದೇಷಾಂ ಸೋಪವಾಸಾಮಕಿಂಚನಾಂ ।**

* * * *

## ಸ್ತ್ರೀಯರ ಅಧಿಕಾರ ಕರ್ತವ್ಯಗಳು

- ***ಗೃಹಸ್ಥಾಶ್ರಮ ಪ್ರಾಧಾನ್ಯತೇ :***

**ದಕ್ಷಸ್ಮೃತಿಯಲ್ಲಿ [2/3–4]** ರಲ್ಲಿ ಗೃಹಸ್ಥಾಶ್ರಮದ ವಿಸ್ತೃತ ವರ್ಣನೆ ಇದೆ. ಗೃಹಸ್ಥಾಶ್ರಮವು ಉಳಿದ ಮೂರು ಆಶ್ರಮಗಳಿಗೂ ಆಧಾರವಾಗಿದ್ದು ಅವುಗಳನ್ನು ರಕ್ಷಿಸುತ್ತದೆ. ಹೀಗಾಗಿ ಗೃಹಸ್ಥಾಶ್ರಮ ಸರ್ವಶ್ರೇಷ್ಠಾಶ್ರಮವು.

**ತ್ರಯಾಣಾಮಾಶ್ರಮಾಣಾಂ ತು ಗೃಹಸ್ಥೋ ಯೋನಿರುಚ್ಯತೇ ।**

ಮನವು [3–77]ರಲ್ಲಿ ವಾಯುವು ಪ್ರಾಣಿಗಳಿಗೆ ಪ್ರಾಣಾಧಾರವಾದಂತೆ ಗೃಹಸ್ಥನಿಲ್ಲದೆ ಬ್ರಹ್ಮಚಾರಿ, ಸನ್ಯಾಸಿಗಳು ಜೀವಿಸಲಾರರು.

**ಯಥಾ ವಾಯುಂ ಸಮಾಶ್ರಿತ್ಯ ವರ್ತಂತೇ ಸರ್ವಜಂತವಃ ।**

**ತಥಾ ಗೃಹಸ್ಥ ಮಾಶ್ರಿತ್ಯ ವರ್ತಂತೇ ಸರ್ವ ಆಶ್ರಮಾಃ ॥**

ಜ್ಞಾನದಾನ, ಅನ್ನದಾನಗಳನ್ನು ಗೃಹಸ್ಥನೇ ಮಾಡಬೇಕಾಗಿರುವುದರಿಂದ ಗೃಹಸ್ಥಾಶ್ರಮವೇ ಶ್ರೇಷ್ಠ.

ವಿಷ್ಣುಸ್ಮೃತಿ 59ರಲ್ಲಿ –

**ತಸ್ಮಾಜ್ಜ್ಯೇಷ್ಠೋ ಗೃಹಾಶ್ರಮೀ ತಸ್ಮಾಚ್ಛ್ರೇಷ್ಠೋಗೃಹಾಶ್ರಮೀ ।**ಎಂದಿದ್ದಾರೆ.

ಋಷಿಗಳು, ಪಿತೃಗಳು, ದೇವತೆಗಳು, ಪ್ರಾಣಿಗಳು ಅತಿಥಿಗಳು ಗೃಹಸ್ಥನಿಂದ ಕೆಲವನ್ನು ಇಚ್ಛಿಸುತ್ತಾರೆ. ಗೃಹಸ್ಥನು ಈಡೇರಿಸುತ್ತಾನೆ.

**ಆಶಾಸತೇ ಕುಟುಂಬಿಭ್ಯಃ ತೇಭ್ಯಃ ಕಾರ್ಯಂ ವಿಜಾನತಾ ।**

ಯಜ್ಞದಾನ ತಪಃ ಕರ್ಮ ನಡೆಯುವುದು ಗೃಹಸ್ಥನಿಂದಲೇ ಹೀಗಾಗಿ ಸರ್ವಶ್ರೇಷ್ಠವಾಗಿದೆ.

ನದಿಗಳಿಗೆಲ್ಲ ಆಧಾರ ಸಮುದ್ರವು ಹೇಗೋ ಹಾಗೆ ಪ್ರಾಣಿಗಳಿಗೆಲ್ಲ ತಾಯಿಯಂತೆ ಅನ್ಯಾಶ್ರಮಗಳಿಗೆ ಗೃಹಸ್ಥಾಶ್ರಮ ಆಧಾರವೆನಿಸಿದೆ.

ಸನ್ಯಾಸಿಗಳು ಭಿಕ್ಷೆ ಸ್ವೀಕರಿಸುವುದು ಗೃಹಸ್ಥನಿಂದ.

**ಗೃಹಸ್ಥಾಶ್ರಮಮಾಶ್ರಿತ್ಯ ಸರ್ವೇಜೀವಂತಿ ಭಿಕ್ಷವಃ ।**

- ***ಗೃಹಸ್ಥ ಯಾರು?***

ದಕ್ಷ ಸ್ಮೃತಿಯಲ್ಲಿ [2/48–49] – ಗೃಹಸ್ಥನ ಲಕ್ಷಣವನ್ನು ಹೀಗೆ ಹೇಳಿದ್ದಾರೆ.

ದಯೆ, ಲಜ್ಜೆ, ಕ್ಷಮೆ, ಶ್ರದ್ಧೆ, ಪ್ರಜ್ಞೆ, ತ್ಯಾಗ, ಕೃತಜ್ಞತೆ, ಮೊದಲಾದ ಗುಣವುಳ್ಳವನು ನಿಜವಾದ ಗೃಹಸ್ಥನು.

**ಏತೇ ಯಸ್ಯ ಗುಣಾಃ ಸಂತಿ ಗೃಹಸ್ಥೋ ಮುಖ್ಯ ಉಚ್ಯತೇ ।**

ಗೃಹಸ್ಥನು ತಮ್ಮನ್ನು ಅವಲಂಬಿಸಿರುವ ವ್ಯಕ್ತಿಗಳಿಗೆ ದೇವಾತಿಥಿಗಳಿಗೆ ಆಹಾರ ವಿಭಾಗ ಮಾಡಿ ಉಳಿದ ಶೇಷ ಭಾಗವನ್ನು ಭುಂಜಿಸಬೇಕು. [ದಕ್ಷ 2/ 49–5]

**ಸಂವಿಭಾಗಂ ತತಃ ಕೃತ್ವಾ ಗೃಹಸ್ಥಃ ಶೇಷಭುಗ್ ಭವೇತ್ ।**

ವ್ಯಕ್ತಿಯು ವಿವಾಹವಾದ ಮಾತ್ರಕ್ಕೆ ಗೃಹಸ್ಥನಾಗಲಾರ. ಗೃಹಸ್ಥಾಶ್ರಮದಲ್ಲಿ ಹೇಳಿರುವ ಕಾರ್ಯಗಳನ್ನು ನಿಶ್ಚಿತ ರೂಪದಲ್ಲಿ ಕಾರ್ಯಗತಗೊಳಿಸಬೇಕು.

**ಗೃಹಸ್ಥೋಽಪಿ ಕ್ರಿಯಾಯುಕ್ತಃ ನ ಗೃಹೇಣ ಗೃಹಾಶ್ರಮೀ ।**

ಗೃಹಸ್ಥನಿಗೆ ಹೇಳಿದ ಸ್ನಾನ, ಹವನ, ದಾನ, ಜಪಾದಿಗಳನ್ನು ಮಾಡದೆ ಸ್ತ್ರೀ ಪುತ್ರರಿಂದ ಕೂಡಿದ ಮಾತ್ರಕ್ಕೆ ಗೃಹಸ್ಥನಾಗಲಾರ. ನರಕ ಭಾಗಿಯೂ ಆಗುವನು.

**ನ ಚೈವ ಪುತ್ರದಾರೇಣ ಸ್ವಕರ್ಮ ಪರಿವರ್ಜಿತಃ ।**

- ***ಗೃಹಸ್ಥ ಕರ್ತವ್ಯ :***

ಗೃಹಸ್ಥನು ಒಂದು ವೇದ ಶಾಖೆಯನ್ನಾದರೂ ಅಧ್ಯಯನ ಮಾಡಬೇಕು. ಬ್ರಹ್ಮಚರ್ಯ ಪಾಲನ ಅವಶ್ಯ. ಗೃಹಸ್ಥನ ಧರ್ಮಪಾಲನೆ ಅತ್ಯವಶ್ಯ.

ಪ್ರಸನ್ನ ಮನಸ್ಸು, ವಾಣೀ, ಕರ್ಮಗಳಿಂದ ಧರ್ಮ ಪಾಲನೆಯಾಗಬೇಕು. ತ್ರಿಕರಣ ಶುದ್ಧಿಯಿಂದ ನಡೆಸಿದ ಧರ್ಮಗಳಿಂದ ಆಯುಸ್ಸು ಪ್ರಜೆ, ಸಮೃದ್ಧಿ, ಗೌರವ ಭೋಗಾದಿಗಳೂ ಲಭಿಸುತ್ತದೆ. [ಬೃಹತ್ ಪರಾಶರ 6/380]

**ಯತ್ನೇನ ಧರ್ಮೋಗೃಹಮೇಧಿವಿಪ್ರಯಃ ಪ್ರೀತೇನ ವಾಚಾ ವಪುಷಾಚ ಕಾರ್ಯಃ ।**

**ಆಯುಃ ಪ್ರಜಾ ಶ್ರೀರ್ಭುವಿ ಪೂಜಿತತ್ವಂ ತಸ್ಮಾಲ್ಲಭಂತೇ ದಿವಿ ದೇವಭಾಗಾನ್ ॥**

- ***ಗೃಹಸ್ಥನ ಧರ್ಮ :***

ಗೃಹಸ್ಥನು ಸರ್ವದಾ ಸರ್ವಪ್ರಾಣಿ ಹಿತವನ್ನೆ ಬಯಸುವುದು. ಜೊತೆಗೆ ಯಾರಿಗೂ ಮರ್ಮಭೇದಕ ಕಟು ವಚನವನ್ನಾಡಬಾರದು. *[ಬೃಹತ್ ಪರಾಶರ 6/378]*

**ಶ್ರಿಯಂ ಕಾಮಂ ಸಮಾಕಾಂಕ್ಷೇನ್ನ ಸ್ಪೃಶೇನ್ ಮರ್ಮ ಕಸ್ಯಚಿತ್ ।**

- ***ಸದಾಚಾರ ತತ್ಪರತೆ :***

ಗೃಹಸ್ಥನು ಸದಾಚಾರಿಯಾಗಿದ್ದು ಸದಾಚಾರ ಪಾಲನೆಯನ್ನೂ ಮಾಡುತ್ತಿರಬೇಕು.

**ಆಚಾರಮೇವಾಶ್ರಯ ಯತ್ನಪೂರ್ವಂ ।**

ಇದರಿಂದಾಗಿ ಸುಖ ಕೀರ್ತ್ಯಾದಿಗಳು ಲಭಿಸುತ್ತದೆ. ಇದರೊಂದಿಗೆ ಪಂಚಮಹಾಯಜ್ಞ ಬಿಡದಿರುವುದು.

**ಗೃಹೀ ಸ್ಯಾದ್ ಗೃಹಧರ್ಮೇಣ ಸರ್ವೈ ಪಂಚಮುಖಾದಿಕಃ ।**
**ತದ್ಧೀನೊ ನ ಗೃಹಸ್ಥಃ ಸ್ಯತ್ ಕುರ್ಯಾತ್ತಂ ಯತ್ನತಸ್ತತಃ ॥**

ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯ ಯಜ್ಞ ಇವುಗಳು ನಿರಂತರ ನಡೆಯಬೇಕು.

ಪಂಚಯಜ್ಞದೊಂದಿಗೆ ಗೃಹಸ್ಥನು ಸ್ನಾನ, ಸಂಧ್ಯಾ, ಜಪ, ಹವನ, ದಾನ ಮಾಡುತ್ತಾನಾದರೆ ಅವನ ಭೋಜನ ಅಮೃತಪಾನ. ಸ್ನಾನಾದಿ ರಹಿತನಾಗಿ ಮಾಡುವ ಭೋಜನ ಮಲಮೂತ್ರ ಭೋಜನವು.

**ಸ್ನಾತ್ವಾ ಜಪ್ತ್ವಾ ಚ ಹುತ್ವಾ ಚ ದತ್ವಾ ಚೈವ ತು ಯೋಽಶ್ನುತೇ ।**
**ಸೋಽಮೃತಂ ನಿತ್ಯಮಶ್ನಾತಿ ತಸ್ಯ ಸ್ಥಾನಮನಾಮಯಂ ॥**
– *ಬೃ.ಪಾರಾ. 2/224*

**ಪುಲಸ್ತ್ಯರು [1/15–16] –**

ಧರ್ಮದಾನ, ಧರ್ಮಪಾಲನ, ಅಗ್ನಿಹೋತ್ರ, ಪಂಚಯಜ್ಞ ಪ್ರಾಣಿಗಳ ಮೇಲೆ ದಯಾ ಕೂಡ ಗೃಹಸ್ಥನ ಧರ್ಮವು. ವಸಿಷ್ಠರು ಹೇಳುವಂತೆ ಸ್ವಾಧ್ಯಾಯ, ಅತಿಥಿಗಳು ಮನೆಗೆ ಬಂದಾಗ ಸಿಡಿಮಿಡಿಗೊಳ್ಳದೆ ಆಸನಾದಿಗಳಿಂದ, ಮೃದು ಮಧುರ ವಚನಗಳಿಂದಲೂ ಸಂತೋಷಪಡಿಸಿ ಅನ್ನಾದಿಗಳಿಂದಲೂ ತೃಪ್ತಿಪಡಿಸುವುದು.

- ***ಪತಿಪತ್ನಿಯರ ಏಕಚಿತ್ತತೆ :***

ವ್ಯಾಸಸ್ಮೃತಿಯಲ್ಲಿ ಧರ್ಮಾರ್ಥಕಾಮಗಳ ವಿಷಯದಲ್ಲಿ ಪತಿ–ಪತ್ನಿಯರು ಒಂದೇ ಅಭಿಪ್ರಾಯವುಳ್ಳವರಾಗಿರಬೇಕು. ಪ್ರತ್ಯೇಕ ಪ್ರತ್ಯೇಕವಾಗಿಯಲ್ಲ.

**ಸಮ್ಯಗ್ ಧರ್ಮಾರ್ಥಕಾಮೇಷು ದಂಪತಿಭ್ಯಾಮಹರ್ನಿಶಂ ।**
**ಏಕಚಿತ್ತತಯಾ ಭಾವ್ಯಂ ಸಮಾನವ್ರತ ವೃತ್ತಿತಃ ॥** *–2/18–19*

- ***ಅತಿಥಿ ಸತ್ಕಾರ :***

ಅತಿಥಿ ಸತ್ಕಾರದ ಬಗ್ಗೆ ಸ್ಮೃತಿಕಾರರು ಬಹಳ ಮಹತ್ವ ನೀಡಿರುವರು.

ಬಂದ ಅತಿಥಿಗಳಿಗೆ ಆಸನಾದಿಗಳು, ಮಧುರ ಮಾತುಗಳು ಅನ್ನಾದಿಗಳಿಂದ ಸಂತೋಷಪಡಿಸಬೇಕು.

ಮನುವು [3/94] – ಅತಿಥಿಗೆ ಮೊದಲು ಭೋಜನ, ನಂತರ ಬ್ರಹ್ಮಚಾರಿ, ಭಿಕ್ಷುಕಾದಿಗಳಿಗೂ ಭಿಕ್ಷೆ ನೀಡಬೇಕು. ಅತಿಥಿಯು ಯಾವುದೇ ವರ್ಣದವನಾಗಿದ್ದರೂ ಯಥಾ ಶಕ್ತಿ ದಾನ ನೀಡಬೇಕು. [ಯಾಜ್ಞ 1/107–8]

ವಿಷ್ಣುಸ್ಮೃತಿ [ಅ 59]ಯಲ್ಲಿ – ಬ್ರಹ್ಮಚಾರಿ, ಯತಿ, ಭಿಕ್ಷುಗಳು ಗೃಹಸ್ಥಾಶ್ರಮವನ್ನೆ ಜೀವಿಸಿಕೊಂಡಿರುವವರು. ಅದಕ್ಕಾಗಿ ಗೃಹಸ್ಥ ಅಭ್ಯಾಗತರನ್ನು ಅವಮಾನಿಸಬಾರದು.

**ಬ್ರಹ್ಮಚಾರೀ ಯತಿರ್ಭಿಕ್ಷುಃ ಜೀವಂತ್ಯೇತೇ ಗೃಹಾಶ್ರಮಾತ್ ।**
**ತಸ್ಮಾದಭ್ಯಾಗತಾನೇತಾನ್ ಗೃಹಸ್ಥೋ ನಾವಮಾನಯೇತ್ ॥**

ಅತಿಥಿ ಸತ್ಕಾರದಿಂದ ಸ್ವರ್ಗಪ್ರಾಪ್ತಿ ನಿಶ್ಚಿತ.

- ***ಅತಿಥಿ ಯಾರು?***

**ಅನಿತ್ಯಾ ಹಿ ಸ್ಥಿತಿರ್ಯಸ್ಮಾತ್ ತಸ್ಮಾದತಿಥಿರುಚ್ಯತೇ ।**

ಯಾವನಿಗೆ ಗೃಹಸ್ಥನ ಮನೆಗೆ ಬರಲು ನಿಶ್ಚಿತ ತಿಥಿ ಇರುವುದಿಲ್ಲವೋ ಅವನು ಅತಿಥಿ.

ಅತಿಥಿಯು ಯಾರ ಮನೆಗೆ ಬಂದು ಸತ್ಕಾರ ಹೊಂದದೆ, ನಿರಾಶನಾಗಿ ಹೋಗುವನೋ ಅವನು ಆ ಮನೆಯಿಂದ ಹೋಗುವಲ್ಲಿ ಮನೆಯಲ್ಲಿ ಈ ಹಿಂದೆ ನಡೆದ ಸಮಸ್ತ ಪುಣ್ಯವನ್ನು ದೋಚಿಕೊಂಡೇ ಹೋಗುವನು. ಹಾಗೂ ಇವರಿಗಾಗಿ ಪಾಪ ಮೂಟೆ ನೀಡಿ ಹೋಗುವನು.

**ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ ಪ್ರತಿ ನಿವರ್ತತೇ ।**
**ತಸ್ಮಾತ್ ಸುಕೃತಮಾದಾಯ ದುಷ್ಕೃತಂ ತು ಪ್ರಯಚ್ಛತಿ ॥**

–ವಿಷ್ಣು *67/32*

ದಕ್ಷರು [3/4–7] – ಯಾರಾದರೂ ವಿಶಿಷ್ಟ ಅತಿಥಿ ಮನೆಗೆ ಬಂದಾಗ ಮನಸ್ಸು, ಮಾತು, ದೃಷ್ಟಿ, ಮುಖ ಈ ನಾಲ್ಕೂ ಪ್ರಸನ್ನವಾಗಿಟ್ಟು ಸ್ವಾಗತ ಮಾಡಬೇಕು.

ದಂಪತಿಗಳು ದೇವ–ಪಿತೃ–ಮನುಷ್ಯರಿಗೆ ಉಣಬಡಿಸಿ ನಂತರ ತಾವು ಭುಂಜಿಸಬೇಕು. ಯಾರಾದರೂ ತಾವೇ ಮಾಡಿ ತಾವೊಬ್ಬರೇ ತಿಂದರೆ ಅದು ಪಾಪವನ್ನೆ ಉಂಡಂತೆ.

**ಯಸ್ತು ಆತ್ಮ ಕಾರಣಾತ್ ಭುಂಕ್ತೇ ಸ ಅಘ ಏವ ಭುಂಕ್ತೇ ।**

ಬ್ರಹ್ಮಚಾರಿಗೆ ಭಿಕ್ಷೆ ನೀಡಿದರೆ ಗುರುವಿಗೆ ಗೋದಾನ ಮಾಡಿದ ಪುಣ್ಯವು. –ಮನು *3/105–6*

ವೇದಜ್ಞಾನಿಗೆ ತತ್ವಜ್ಞಾನಿಗೆ ಸತ್ಕಾರಪೂರ್ವಕ ಭಿಕ್ಷೆ ನೀಡಬೇಕು. ಅನ್ನಾದಿಗಳಿಲ್ಲದಿದ್ದರೆ ನೀರಿನಿಂದಾದರೂ ಸತ್ಕಾರ ಮಾಡಬೇಕು.

ಸಜ್ಜನರ ಮನೆಯಲ್ಲಿ ಅತಿಥಿಗಳಿಗಾಗಿ ತೃಣಚಾಪೆ, ನೆಲ, ನೀರು, ಒಳ್ಳೆಯ ಮಾತು ಇವುಗಳಿಗೆ ಬರವಿಲ್ಲ.

**ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ ।**
**ಏತಾನ್ಯಪಿ ಸತಾಂಗೇಹೇ ನೋಚ್ಛಿದ್ಯಂತೇ ಕದಾಚನ ॥**

–ಮನು *3/101*

- ***ಸ್ತ್ರೀ ಕರ್ತವ್ಯತೆ :***

  ಪ್ರತಿ ಸ್ಮೃತಿಯೂ ಸ್ತ್ರೀಯ ಕರ್ತವ್ಯವೆಂದರೆ 'ಪತಿಸೇವೆ' ಎಂದಿದೆ. ಸ್ತ್ರೀಯರಿಗೆ ಪತಿಯು ದೇವರಂತೆ, ದೇವರಲ್ಲ, ದೇವತಾ ಪ್ರತೀಕ. ಹೀಗಾಗಿ ಸ್ತ್ರೀಯರು ಸದಾ ಪತಿವ್ರತೆಯಾಗಿರಬೇಕು.

  ಪತಿಗೂ ಒಂದು ನಿಯಮವಿದೆ. ಪತಿಯು ತನ್ನ ಪತ್ನಿ ಬಿಟ್ಟು ಬೇರೆ ಸ್ತ್ರೀಯರನ್ನು ಕಾಮದೃಷ್ಟಿಯಿಂದ ನೋಡುವುದು, ಕಾಮಿಸುವುದು ನಿಷಿದ್ಧವು. ಇದು ಪತ್ನೀ ವ್ರತವು.

  ವಸಿಷ್ಠ ಸ್ಮೃತಿ[5/31]ರಲ್ಲಿ – ಪತಿಯು ವೃದ್ಧನೂ, ವಾಧಿಗ್ರಸ್ತನೂ, ಧನಹೀನನೂ, ಕುರೂಪಿಯಾಗಿದ್ದರೂ ಕೈ ಹಿಡಿದ ಮೇಲೆ ಅವನನ್ನು ತನ್ನ ದೇವರಂತೆ ಗೌರವಿಸುವುದು.

  **ಕೋಽಪಿ ವಾಪಿ ಭವೇದ್ ಭರ್ತಾ ತಂ ದೇವಮಿವ ಪೂಜಯೇತ್ ॥**

  ಬೃಹತ್ ಪರಾಶರರು [6/50] – ಸ್ತ್ರೀಯರಿಗೆ ಬದುಕಿದ್ದಾಗಲೂ, ಸತ್ತಾಗಲೂ ಪತಿಯೇ ಸ್ವಾಮಿಯು. ಬೇರೆ ಯಾರೂ ಈ ಸ್ಥಾನ ಹೊಂದಲಾರರು. ಆದ್ದರಿಂದ ಪತಿಯನ್ನೇ ಆದರಿಸಬೇಕು.

**ಜೀವನ್ ವಾಪಿ ಮೃತೋ ವಾಪಿ ಪತಿರೇವ ಪ್ರಭುಃ ಸ್ತ್ರಿಯಾಃ ।**
**ನಾನ್ಯಚ್ಚ ದೈವತಂ ತಾಸಾಂ ತಮೇವ ಪ್ರಭುಮರ್ಚಯೇತ್ ॥**

- ***ಪತಿ ದ್ರೋಹ – ಮಹಾನರಕ [ಬೃ.ಪರಾ.–6/51] :***

ಯಾವ ಸ್ತ್ರೀಯೂ ತನ್ನ ಪತಿಗೆ ದ್ರೋಹ, ವಂಚನೆ, ಕೆಟ್ಟದ್ದನ್ನು ಬಯಸುವಳೋ ಘೋರ ನರಕದಲ್ಲಿ ಮಹಾ ದುಃಖವಾಗುತ್ತದೆ.

**ಮನಸಾಪಿ ಹಿ ದುಷ್ಟಾ ಸ್ತ್ರೀ ಯಾನ್ಯಭಾವಪ್ರಿಯಂ ಪತಿಂ ।**
**ಸಾ ಯಾತಿ ನರಕಂ ಘೋರಂ ತದ್ ದ್ರೋಹಾದಣುತೋಪಿ ಚ ॥**

- ***ಪತಿವ್ರತೆಯ ಮಹತ್ವ :***

ಪತಿವ್ರತೆಯಾದರೂ ತನ್ನ ಪುಣ್ಯದಿಂದಾಗಿ ಪಾಪಿಷ್ಠನಿಗೂ ಸದ್ಗತಿ ನೀಡಬಲ್ಲಳು. ಸ್ವರ್ಗ ಹೊಂದಿಸಬಲ್ಲಳು. ಸಾವಿತ್ರಿಯ ಪುಣ್ಯದಿಂದಾಗಿ ಅಲ್ಪಾಯು ಸತ್ಯವಾನನು ದೀರ್ಘಾಯುಷ್ಮಂತನಾದದ್ದು ಇತಿಹಾಸ.

**ಪತಿವ್ರತಾ ತು ಸಾಧ್ವೀ ಸ್ತ್ರೀ ಅಪಿ ದುಷ್ಕೃತ ಕಾರಿಣಮ್ ।**
**ಪತಿಮುದ್ಧೃತ್ಯ ಯಾತಿ ದ್ಯಾಂ ಕೇಕೀವ ಪತಿತೋರಗಾಮ್ ॥**

ಯಾರ ಪತ್ನಿ ಪತಿವ್ರತೆಯೋ ಅವನ ಸಕಲ ಕಾರ್ಯಗಳೂ ಸಿದ್ಧಿಸುತ್ತವೆ. ಪತಿವ್ರತೆಯು ತಪಸ್ಸಿನಿಂದಾಗಿ ಯೋಗಿಗಳಂತೆ ಪತಿಲೋಕವನ್ನೇ ಹೊಂದುವಳು.

**ಪತಿಲೋಕಂ ತು ಸಾ ಯಾತಿ ತಪಸಾ ಯೇನ ಯೋಗವಿತ್ ।**

ಸಾವಿತ್ರಿಯಿಂದ ಸತ್ಯವಾನನಂತೆ.

ಶಂಖಸ್ಮೃತಿ[5–8]ಯಲ್ಲಿ – ಸ್ತ್ರೀಯು ವ್ರತೋಪವಾಸಗಳಿಂದಾಗಲಿ ವಿವಿಧ ಧರ್ಮಾಚರಣೆಯಿಂದಾಗಲೀ ಸ್ವರ್ಗಕ್ಕೆ ಹೋಗಲಾರಳು. ಪತಿಸೇವೆಯಿಂದಲೇ ಸ್ವರ್ಗ ಸೇರಬಲ್ಲಳು.

**ನಾರೀ ಸ್ವರ್ಗಮವಾಪ್ನೋತಿ ಪ್ರಾಪ್ನೋತಿ ಪತಿಪೂಜನಾತ್ ।**

ಔಶನಸರು [7/32] – ನಾರಿಗೆ ಮುಖ್ಯ ಹಾಗೂ ಪ್ರಧಾನ ಕರ್ತವ್ಯ ಪತಿಯನ್ನು ನಿರ್ವ್ಯಾಜವಾಗಿ ಸೇವಿಸುವುದು.

**ಸ್ತ್ರೀಣಾಂ ಚ ಭರ್ತೃಶುಶ್ರೂಷಾ ಧರ್ಮೋ ನಾನ್ಯೋ ಇಹೇಷ್ಯತೇ ।**

- ***ಸ್ತ್ರೀಯರಿಗೆ ಸೌಭಾಗ್ಯದಿಂದ ಜ್ಯೇಷ್ಠತ್ವ [ಕಾತ್ಯಾ 19/6–7] :***

ಬ್ರಾಹ್ಮಣನಿಗೆ ವಿದ್ಯೆಯಿಂದ ಜ್ಯೇಷ್ಠತೆಯಾದರೆ ಪತಿವ್ರತಾ ಸ್ತ್ರೀಗೆ ಸೌಭಾಗ್ಯದಿಂದಲೇ ಜ್ಯೇಷ್ಠತ್ವ.

**ಸ್ತ್ರೀಣಾಂ ಸೌಭಾಗ್ಯತೋ ಜ್ಯೇಷ್ಠಂ ।**

- ***ನಾರಿಯ ಪರಮಧರ್ಮ [ವೃದ್ಧಹಾರೀತ – 8/195–196] –***

ಸ್ತ್ರೀಯ ಪರಮಧರ್ಮವೆಂದರೆ ಸುಶೀಲತೆ. ಯಾವ ಸ್ತ್ರೀಯು ಶೀಲವನ್ನು ನಷ್ಟ ಮಾಡಿಕೊಳ್ಳುವಳೋ ಅವಳಿಗೆ ನರಕ.

- ***ಪತಿ ಮಾತ್ರ ಧರ್ಮಿಣೀ :***

ಬೃಹಸ್ಪತಿ [25–12]ರಲ್ಲಿ – ಪತಿಯು ದುಃಖಿತನಾದಾಗ ತಾನೂ ದುಃಖಿತಳಾಗಿ, ಸಂತೋಷ ಹೊಂದಿದಾಗ ಸಂತೋಷದಿಂದಿರುವ, ಮೃತನಾದಾಗ ಗಂಡನೊಂದಿಗೆ ಸಹಗಮನ, ಅಥವಾ ಬ್ರಹ್ಮಚರ್ಯ ಅನುಸರಿಸುವವಳೆ ನಿಜವಾದ ಪತಿವ್ರತೆ.

**ಆರ್ತಾರ್ತೇ ಮುದಿತೇ ಹೃಷ್ಟಾ ಪ್ರೋಷಿತೇ ಮಲಿನಾ ಕೃಶಾ ।**
**ಮೃತೇ ಮ್ರಿಯತೇ ಯಾ ಪತ್ಯೌ ಸಾ ಸ್ತ್ರೀಜ್ಞೇಯಾ ಪತಿವ್ರತಾ ॥**

ಮನುವು [9/29] – ಕಾಯಾ ಮನಸಾ ವಾಚಾ ಪತಿಯನ್ನು ಅನುಸರಿಸುತ್ತಾ ನಿಯತೇಂದ್ರಿಯಳೂ, ಪತಿಗೆ ಅನಾದರ ಮಾಡದಿರುವ ಸಾಧ್ವಿಯು ಪತಿಲೋಕ ಹೊಂದುವಳು.

**ಪತಿಂ ಯಾ ನಾಭಿಚರತಿ ಸದ್ಭಿಃ ಸಾಧ್ವೀತಿ ಚೋಚ್ಯತೇ ।**

ವ್ಯಭಿಚಾರಿಣಿಯು ನಿಂದೆಗೊಳಗಾಗುವಳು ಮುಂದಿನ ಜನ್ಮದಲ್ಲಿ ನರಿಯಾಗಿಯೂ, ಕುಷ್ಠಾದಿರೋಗ ಪೀಡಿತಲೂ ಆಗುವಳು. – ಮನು– *9/30*

ಯಾಜ್ಞವಲ್ಕ್ಯ [1/95] – ಯಾವ ಸ್ತ್ರೀಯು ಪತಿಯು ಬದುಕಿರುವಾಗಲೀ, ಮೃತನಾದ ಮೇಲಾಗಲೀ ಪರಪುರುಷ ಸಂಗ ಮಾಡುವುದಿಲ್ಲವೋ ಅವಳು ಈ ಜನ್ಮದಲ್ಲಿ ಮಹಾಕೀರ್ತಿವಂತಳಾಗುವಳು.

ಮನುವು [5–156] – ಪತಿಲೋಕ ಹೊಂದಬೇಕೆಂಬ ಇಚ್ಛೆವುಳ್ಳ ಪತ್ನಿಯು, ಪತಿಗೆ ಅಪ್ರಿಯ ಮಾತನ್ನಾಗಲೀ, ವ್ಯಭಿಚಾರಾದಿಗಳನ್ನು ಆಚರಿಸಬಾರದು ಎಂದಿರುವನು.

ಸ್ತ್ರೀಗೆ ಉಪವಾಸ ವ್ರತಗಳಿಂದ ಸ್ವರ್ಗ ಸಿಗದು, ಪತಿ ಸೇವೆಯಿಂದ ಮಾತ್ರ. *–ಶಂಖ 5/8*

**ನಾರಿ ಸ್ವರ್ಗಮವಾಪ್ನೋತಿ ಪ್ರಾಪ್ನೋತಿ ಪತಿಸೇವನಾತ್ ।**

- ***ನಾಯಿ ಹಂದಿ ಜನ್ಮ [ಪರಾಶರ ಸ್ಮೃತಿ 4/16] –***

ಪತಿಯು ಬಡವನಾಗಿದ್ದು, ರೋಗೀ, ಧೂರ್ತನಾಗಿದ್ದರೂ ಅವನಂತರ್ಯಾಮಿ ಸೇವೆ ಮಾಡಲೇಬೇಕು. ಅವನನ್ನು ಧನಹೀನನೆಂದೂ, ರೋಗಿಯೆಂದು ಮಾತುಮಾತಿಗೂ ಹಂಗಿಸುತ್ತಿರುವವಳಿಗೆ ಮುಂದಿನ ಜನ್ಮ ನಾಯಿ / ಹಂದಿ ಜನ್ಮ ನಿಶ್ಚಿತ.

**ದರಿದ್ರಂ ವ್ಯಾಧಿತಂ ಚೈವ ಭರ್ತಾರಂ ಯಾಽವಮನ್ಯತೇ ।**
**ಸಾ ಶುನೀ ಜಾಯತೇಽನ್ಯತ್ರ ಸೂಕರೀ ವಾ ಮಹಾವನೇ ॥**

ದಕ್ಷಸ್ಮೃತಿ [4–18]ರಲ್ಲಿ ಬಡವನೂ ರೋಗಿಯೂ ಆದ ಪತಿಯನ್ನು ಅವಮಾನ ಮಾಡುವವಳು ಸತ್ತ ಮೇಲೆ ನರಕ ದುಃಖ ಅನುಭವಿಸಿ ನಂತರ ಅನೇಕ ಬಾರಿ ನಾಯಿಯಾಗಿಯೂ, ಹದ್ದು, ಮೊಸಳೆಯಾಗಿ ಹುಟ್ಟುವಳು.

**ಶುನೀ ಗೃಧ್ರೀ ಚ ಮಕರೀ ಜಾಯತೇ ಚ ಪುನಃ ಪುನಃ ।**

ಪತ್ನಿಯು ಅಜ್ಞಾನ ಮೋಹಿತಳಾಗಿ ಪತ್ಯುಲ್ಲಂಘನ ಮಾಡಿದರೂ ನರಕ ಹೊಂದಿ ಮುಂದೆ ಅನೇಕ ದುಃಖವನ್ನನುಭವಿಸುವಳು.

ಕಾತ್ಯಾಯನರು [19–11–12]ರಲ್ಲಿ – ಪತಿಯಾಜ್ಞೆ ತಿರಸ್ಕರಿಸಿದ ಸ್ತ್ರಿಯು ಯಾವ ಯಾವ ನರಕ ಹೊಂದುವುದಿಲ್ಲ? ಎಲ್ಲವನ್ನು ಮುಂದೆ ಕಷ್ಟದಿಂದ ಮನುಷ್ಯಳಾಗೂ ಹುಟ್ಟಿದ ಮೇಲೆ ಯಾವ ಯಾವ ದುಃಖ ಅನುಭವಿಸುವುದಿಲ್ಲ? ಎಲ್ಲವನ್ನು.

**ಪತಿ ಮುಲ್ಲಂಘ್ಯ ಮೋಹಾತ್ ಸ್ತ್ರೀ ಕಂ ಕಂ ನ ನರಕಂ ವ್ರಜೇತ್ ।**
**ಕೃಚ್ಛ್ರಾತ್ ಮನುಷ್ಯತಾಂ ಪ್ರಾಪ್ಯ ಕಿಂಕಿಂ ದುಃಖಂ ನ ವಿಂದತಿ ॥**

ಪತಿ ಶುಶ್ರೂಷೆಯಿಂದ ಪತ್ನಿಯು ಯಾವ ಲೋಕ ಹೊಂದಲಾರಳು? ಸ್ವರ್ಗದಿಂದ ಪುನಃ ಭೂಮಿಗೆ ಬಂದವಳಾಗಿ ಸುಖ ಸಮುದ್ರದಲ್ಲಿಯೇ ತೇಲಾಡುವಳು.

**ಪತಿ ಶುಶ್ರೂಷಯೈವ ಸ್ತ್ರೀ ಕಾನ್ ಲೋಕಾನ್ ನ ಸಮಶ್ನುತೇ ।**
**ದಿವಃ ಪುನರಿಹಾಯಾತಾ ಸುಖಾನಾಮಂಬುಧಿರ್ಭವೇತ್ ॥**

ಲಘು ಯಮಸ್ಮೃತಿ (17)ರಲ್ಲಿ – ಪತಿ ಸೇವೆ ಮಾಡದವಳನ್ನು ಧನಾದಿಗಳನ್ನು ನೀಡದೆ ಹನ್ನೆರಡು ವರ್ಷ ದೂರವಿಟ್ಟಿರಬೇಕೆಂದಿದೆ.

- ***ಸ್ತ್ರೀಯು ಪುರುಷಳಾಗುವಳು [ಕಾತ್ಯಾಯನ 20/13] :***

ಪತಿವ್ರತೆಯು ಪತಿಯಿಂದ ಅವಮಾನಿತಳಾಗಿ ಪತಿಯ ಮೊದಲು ಮೃತಳಾದರೆ ಅವಳು ಮೂರು ಜನ್ಮ ಪುರುಷಳಾಗುವಳು, ಪುರುಷನು ಮೂರು ಜನ್ಮ ಸ್ತ್ರೀಯಾಗುವನು.

**ಮಾನ್ಯಾಚೇನ್ ಮ್ರಿಯತೇ ಪೂರ್ವಂ ಭಾರ್ಯಾ ಪತಿವಿಮಾನಿತಾ ।**
**ತ್ರೀಣಿ ಜನ್ಮಾನಿ ಸಾ ಪುಂಸ್ತ್ವಂ ಪುರುಷಃ ಸ್ತ್ರೀತ್ವಮಶ್ನುತೇ ॥**

- ***ಸ್ತ್ರೀಯರ ಕರ್ತವ್ಯಗಳು :***

ಸ್ತ್ರೀಯ ಪ್ರತಿದಿನ ಕರ್ತವ್ಯವನ್ನು ವಸಿಷ್ಠ ಸ್ಮೃತಿ [5/60–61] ತಿಳಿಸಿದೆ. ಪತ್ನಿಯು ತನ್ನ ಪತಿ ಭೋಜನ ಮಾಡಿದ ಮೇಲೆ ತಾನು ಮಾಡಬೇಕು. ಪಾಂಡವರದು ಊಟವಾದ ಮೇಲೆ ದ್ರೌಪದಿ ಭುಂಜಿಸುತ್ತಿದ್ದಳಂತೆ. ಅತ್ತೆ ಮಾವಂದಿರು, ಗುರುಗಳು, ಅತಿಥಿಗಳಿಗೆ ಬಡಿಸಿ ನಂತರ ತಾನೂ ಭುಂಜಿಸಬೇಕು.

**ಸ್ವಭರ್ತಾರಂ ಭೋಜಯಿತ್ವಾ ಸ್ವಯಂ ಭುಂಜೀತ ಯೋಷಿತಃ ।**

ಸ್ತ್ರೀಯರು ತನ್ನ ಪತಿಯನ್ನು ಸಂತುಷ್ಟನನ್ನಾಗಿ ಇಡಬೇಕು. ಪತಿ ಪರಾಯಣಳಾಗಿ ಧರ್ಮ ಮಾರ್ಗದಲ್ಲಿ ನಡೆಯಬೇಕು.

ಸ್ತ್ರೀಯರ ಮನೆಯೊಳಗಿನ ಸಕಲ ವಸ್ತುಗಳ ಮೇಲ್ವಿಚಾರಣೆ ಮಾಡುತ್ತಿರಬೇಕು. ಕುಲಧರ್ಮ ನಾಶವಾಗಬಾರದು.

ನಾಲ್ಕೂ ವರ್ಣದ ಸ್ತ್ರೀಯರಿಗೂ ಸಾಮಾನ್ಯ ಧರ್ಮವೆಂದರೆ ಪತಿ ಹಾಗೂ ಬ್ರಾಹ್ಮಣರ ಸೇವೆ ಮಾಡುವುದು.

ಬೃಹತ್ಪರಾಶರ [6–39]ರಲ್ಲಿ – ಸ್ತ್ರೀಯರು ಪ್ರಾತಃ ಸಾಯಂ ಸಂಧ್ಯಾವಂದನ ಹಾಗೂ ಹವನಾದಿಗಳನ್ನು ನಡೆಸಬೇಕು ಎಂದಿದೆ.

**ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಹುತ್ವಾಚೈವ ಹುತಾಶನಂ ।**

ಇದರರ್ಥ ತಾನು ಕೃಷ್ಣಮಂತ್ರ ಜಪ ಮಾಡಬೇಕು. ಉಪನಯನವಾಗಿರುವ ತನ್ನ ಮಕ್ಕಳಿಗೆ ಸಂಧ್ಯಾವಂದನೆ ಕಾಲಕಾಲಗಳಲ್ಲಿ ನಿಂತು ಮಾಡಿಸಬೇಕು. ಪತಿಯೊಂದಿಗೆ ತಾನೂ ಯಜ್ಞ ಸಂಯೋಗದಲ್ಲಿ ಭಾಗಿಯಾಗಬೇಕೆಂದು.

ವಸಿಷ್ಠ ಸ್ಮೃತಿ [5.1–83], ದಕ್ಷಸ್ಮೃತಿ 3/4 ಅಧ್ಯಾಯಗಳಲ್ಲಿಯೂ, ವ್ಯಾಸಸ್ಮೃತಿಯ ಎರಡನೆ ಅಧ್ಯಾಯಗಳಲ್ಲಿ ಸ್ತ್ರೀ ಧರ್ಮ ಚಿಂತನೆ ಇದೆ.

***ಅವುಗಳ ಸಂಗ್ರಹ :***

ಸ್ತ್ರೀಯು ಸುಶೀಲಳಾಗಿರಬೇಕು. ಪತಿಯಲ್ಲಿ ಅಂತರ್ಯಾಮಿಯನ್ನು ನೋಡಬೇಕು. ತ್ರಿಕರಣಗಳಿಂದಲೂ ಪತಿಸೇವಾತತ್ಪರಳಾಗಿರಬೇಕು. ಪ್ರತಿದಿನವೂ ಅತ್ತೆ–ಮಾವಂದಿರ ಸೇವೆ ಹಾಗೂ ಅವರಿಗೆ ಇಷ್ಟವಾದ ಭೋಜನದಿಂದ ತೃಪ್ತಿಪಡಿಸಬೇಕು. ಇಂದಿನ ಸೊಸೆಯೇ ಮುಂದಿನ ಅತ್ತೆಯೆಂಬುದನ್ನು ಮರೆಯಲಾಗದು. ಮನೆ ಯಾವಾಗಲೂ ಸ್ವಚ್ಛವಾಗಿರಬೇಕು. ತನ್ನನ್ನೂ ಗಂಧ ಪುಷ್ಪ ಆಭರಣಗಳಿಂದ ಅಲಂಕರಿಸಿಕೊಳ್ಳಬೇಕು.

ನೃತ್ಯ, ಗೀತೆ, ಉತ್ಸವ, ಸಭೆಗಳಿಗೆ ಗಂಡನೊಂದಿಗೆ ಹೋಗತಕ್ಕದ್ದು.

ಮನುವು [9/101–102]ರಲ್ಲಿ –ದಂಪತಿಗಳು ಕಾಯವಾಚಾ ಮನಸ್ಸುಗಳಲ್ಲಿ ಅನ್ಯೋನ್ಯ ಮೀರದಿರುವುದೇ ಧರ್ಮದ ಮರ್ಮ. ಸ್ಥಿರ ಬುದ್ಧಿಯು ಪವಿತ್ರ ಸಂಕೇತ.

**ಅನ್ಯೋನ್ಯಸ್ಯವ್ಯಭಿಚಾರೋ ಭವೇದಾಮರಣಾಂತಿಕಃ ।**
**ಏಷ ಧರ್ಮಃ ಸಮಾಸೇನ ಜ್ಞೇಯಃ ಸ್ತ್ರೀಪುಂಸಯೋಃ ಪರಃ ॥**

ಸ್ತ್ರೀಯು ರಾತ್ರಿ ಭೋಜನ ತಯಾರಿಸಿದ ಅನ್ನವನ್ನು ಮಂತ್ರವಿಲ್ಲದೆ ಆಹುತಿ ನೀಡಬೇಕು. ಇದು ಪುರುಷನು ಅನ್ಯತ್ರ ಹೋಗಿದ್ದಾಗ ಮಾತ್ರ. *[ಮನು–3/121]*

**ಸಾಯಂ ಸಿದ್ಧಸ್ಯ ತ್ವನ್ನಸ್ಯ ಪತ್ನ್ಯಮಂತ್ರಂ ಬಲಿಂ ಹರೇತ್ ।**

ಪತ್ನಿ ಶಬ್ದವು ಯಜ್ಞ ಸಂಯೋಗವಿದ್ದಾಗಲೇ ಉತ್ಪನ್ನವಾಗುತ್ತದೆ. ಅಂದರೆ ಯಾರು ಯಜ್ಞದಲ್ಲಿ ಗಂಡನೊಂದಿಗೆ ಯಜ್ಞದಲ್ಲಿ ಭಾಗಿಯಾಗುವಳೋ ಅವಳು ಮಾತ್ರವೇ 'ಪತ್ನೀ' ಎನಿಸುವಳು. ಯಜ್ಞದಲ್ಲಿ ಪಾಲಿಲ್ಲದ ಸ್ತ್ರೀಯು ಭಾರ್ಯಾ ಎನಿಸುವರಷ್ಟೆ ಬ್ರಾಹ್ಮಣನೊಂದಿಗೆ ಸವರ್ಣಳು ಮಾತ್ರ ಧಾರ್ಮಿಕ

ವಿಧಿಗಳಲ್ಲಿ ಅಧಿಕಾರ ಇತರರಿಗೆ ಅದರಲ್ಲೂ ಶೂದ್ರ ಸ್ತ್ರೀಗೆ ಯಜ್ಞದಲ್ಲಿ ಅಧಿಕಾರವೇ ಇರುವುದಿಲ್ಲ.

ಸವರ್ಣಭಾರ್ಯೆ ಇರುವಾಗ ಇತರ ಅಸವರ್ಣಭಾರ್ಯೆಯೊಂದಿಗೆ ಧರ್ಮ ಕಾರ್ಯವನ್ನು ನಡೆಸಬಾರದು.

ಬಹಳ ಸವರ್ಣ ಸ್ತ್ರೀಯರಿದ್ದಾಗ ಜ್ಯೇಷ್ಠಭಾರ್ಯೆಯೊಂದಿಗೆ ಧರ್ಮ ಕಾರ್ಯ ವಿಹಿತ.

**ಸತ್ಯಾಮನ್ಯಾಂ ಸವರ್ಣಾಯಾಂ ಧರ್ಮಕಾರ್ಯಂ ನ ಕಾರಯೇ ತ್।**
**ಸವರ್ಣಾಸು ಧರ್ಮ್ಯೇ ಜ್ಯೇಷ್ಠಯಾ ನ ವಿನೇತರಾ ॥**

ಸವರ್ಣಭಾಯೇ ಇಲ್ಲದಿರುವಾಗ ಕ್ಷತ್ರಿಯ, ವೈಶ್ಯ ಸ್ತ್ರೀರೊಂದಿಗೆ ಧರ್ಮ ಕಾರ್ಯ ನಡೆಸಬೇಕು. ಆದರೆ ವೈದಿಕಾಧಿಕಾರ ಹೊಂದದ ಅಸವರ್ಣ ಶೂದ್ರ ಸ್ತ್ರೀಯೊಂದಿಗೆ ನಡೆಸಲೇಬಾರದು. ಇವರು ಕೇವಲ ಭೋಗಕ್ಕಾಗಿ ಮಾತ್ರ.

**ಕೃಷ್ಣವರ್ಣಾ ವೈ ರಾಮಾ ರಮಣಾಯೈವ ನ ಧರ್ಮಾಯ ।**
–ವಸಿಷ್ಠರು

ಗೋಭಿಲರು [3/9] – ಬೇರೆ ಜಾತಿಯವಳೊಂದಿಗೆ ಧಾರ್ಮಿಕ ಕಾರ್ಯ ನಡೆಸಿದರೆ ಅವನು ಚಂಡಾಲನಾಗುವನು ಎಂದಿರುವರು.

- ***ಪತಿಯೊಂದಿಗೆ ಯಜ್ಞ ಕಾರ್ಯ [ವಿಷ್ಣು 25/25] :***

ಪತ್ನಿಯು ಪತಿಯ ಅನುಪಸ್ಥಿತಿ ಅಥವಾ ಅವನ ಆಜ್ಞೆಯಿಲ್ಲದೆ ತಾನೆ ಸ್ವತಂತ್ರವಾಗಿ ಧಾರ್ಮಿಕ ಕಾರ್ಯ, ಯಜ್ಞ, ಉಪವಾಸಾದಿ ವ್ರತಗಳನ್ನಾಚರಿಸಬಾರದು.

**ಪತ್ಯೌ ಜೀವತಿ ಯಾ ಯೋಷಿದುಪವಾಸ ವ್ರತಂ ಚರೇತ್ ।**
**ಆಯುಃ ಸಾ ಹರತೇ ಭರ್ತುಃ ನರಕಂ ಚೈವ ಗಚ್ಛತಿ ॥**

- ***ಸ್ತ್ರೀಯರಿಗೆ ಪತಿ ಸೇವೆ ಮುಖ್ಯ [ವಿಷ್ಣು 25/10] :***

ಸ್ತ್ರೀಯರಿಗೆ ಪ್ರತ್ಯೇಕ ಯಜ್ಞಾದಿಗಳಿಲ್ಲ, ವ್ರತಾದಿಗಳಿಲ್ಲ, ಉಪವಾಸಾದಿಗಳಿಲ್ಲ. ಇವುಗಳನ್ನೂ ಮಾಡುತ್ತಾ ಪತಿಯ ಸೇವೆಯಿಂದ ವಂಚಿತರಾಗಬಾರದು. ಪತಿಯು ಮೆಚ್ಚಿದರೆ ಸಾಕು ಸ್ವರ್ಗ ಹಸ್ತಗತ.

**ಪತಿಂ ಶುಶ್ರೂಷತೇ ಯಾ ತು ತೇನ ಸ್ವರ್ಗೇ ಮಹೀಯತೇ ।**

ಕಾತ್ಯಾಯನವರು [8/5] – ಪತ್ನಿಯು ಪತಿಯೊಂದಿಗೆ ಹೋಮಗಳಿಗೆ ಕೂಡದಿದ್ದರೆ, ಅವಳು ಯಜ್ಞ ಮಾಡದಿರುವುದಕ್ಕೆ ಸಮ. ಈ ಯಜ್ಞದಿಂದ ಇವಳಿಗೆ ಏನೂ ಲಾಭವಿಲ್ಲ.

**ನೈಕಯಾಪಿ ವಿನಾ ಕಾರ್ಯಮಾಧಾನಂ ಭಾರ್ಯಯಾ ಸಹ ।**
**ಅಕೃತಂ ತದ್ ವಿಜಾನೀಯಾತ್ ।**

ಬೋಧಾಯನರು [1/7/9]ರಲ್ಲಿ – ಪತಿಪತ್ನಿಯರೂ ಸಹ ಋತ್ವಕ್ಕುಗಳಂತೆ ಇರುವರು. ಪತಿಪತ್ನಿಯರು ಸೇರಿಯೆ ಯಜ್ಞ ಮಾಡತಕ್ಕದ್ದು.

**ಯಜ್ಞಕ್ಕಾಗಿ ದ್ವಿತೀಯ ವಿವಾಹ :**

ಯಾಜ್ಞವಲ್ಕ್ಯರು [1/80] –ಉತ್ತಮಾಚಾರಶೀಲಳಾದ ಪತ್ನಿ ದೈವಾಧೀನಳಾದಾಗ ಪತಿಯು ಅಗ್ನಿಹೋತ್ರಾಗ್ನಿಯಿಂದ ಅಂತಿಮ ಸಂಸ್ಕಾರ ನಡೆಸಬೇಕು. ಮರು ವಿವಾಹವಾಗಿ ಅಗ್ನ್ಯಾಧಾನ ಮಾಡಬೇಕು.

ಮನುವು [9–27–28]ರಲ್ಲಿ – ಸ್ತ್ರೀಧರ್ಮ ಸಂಗ್ರಹ ಮಾಡಿರುವನು. ಮುಖ್ಯಕರ್ತವ್ಯ ಸಂತಾನೋತ್ಪತ್ತಿ ಮಾಡಿ ಅದರ ಪಾಲನೆ, ಅತಿಥಿ ಸತ್ಕಾರ, ಧಾರ್ಮಿಕ ವಿಧಿವಿಧಾನ ಅಗ್ನಿಹೋತ್ರಾದಿಗಳಲ್ಲಿ ಪತಿಗೆ ಸಹಕಾರ, ಹಿರಿಯರ ಶುಶ್ರೂಷೆ ಮಾಡುವುದು.

***ಪತಿಯ ಆಜ್ಞಾಪಾಲನೆ :*** ಇದು ಪ್ರಧಾನ ಕಾರ್ಯವು ದೇವತೆಯ ಪ್ರತಿಮಾಸ್ಥಾನ ಪತಿಗೆ ನೀಡಬೇಕು. ಪತಿಯ ಮಾತುಗಳನ್ನು ಗೌರವದಿಂದ ಕಾಣಬೇಕು.

**ಸ್ತ್ರೀಭಿಸ್ತು ಭರ್ತೃವಚಃ ಕಾರ್ಯಮೇಷ ಧರ್ಮಃ ಸನಾತನ ।**

- ***ಗುಣಹೀನ ಪತಿಗೂ ಗೌರವ :*** *[ಮನುವು [5–150–151–154]*

ಸದಾಚಾರಹೀನನೂ, ಪರಕಾಂತಾ ವಿಮೋಹಿತನೂ, ವಿದ್ಯಾ ಶೂನ್ಯನಾಗಿದ್ದರೂ ಪತ್ನಿಯು ಪತಿಯನ್ನು ದೇವತೆಯಂತೆ ಪೂಜಿಸುವುದು.

ಸ್ತ್ರೀಯು ಯಾವ ವರ್ಣದವನನ್ನೇ ವಿವಾಹವಾದರೂ ಇವನ ಸೇವೆ ಮಾಡಬೇಕು. ಪತಿ ಮೃತನಾದಾಗಲೂ ಪತಿವ್ರತವನ್ನು ಉಲ್ಲಂಘಿಸಬಾರದು.

ಸ್ತ್ರೀಯು ಸರ್ವದಾ ಪ್ರಸನ್ನಳಾಗಿ, ಗೃಹ ಕಾರ್ಯದಲ್ಲಿ ಚತುರಳಾಗಿ ಮನೆಯ ಸರಂಜಾಮುಗಳನ್ನು ಶುದ್ಧವಾಗಿ ಗೃಹವನ್ನೂ ಸ್ವಚ್ಛವಾಗಿಟ್ಟಿರಬೇಕು. ಮಿತವ್ಯಯ ಸಾಧಿಸಬೇಕು.

ಮನುವು [9/11] – ಧನ ಸಂಗ್ರಹದಲ್ಲಿ, ವ್ಯಯ ಮಾಡುವುದರಲ್ಲಿ ಸ್ತ್ರೀಗೆ ಅಧಿಕಾರ ನೀಡಬೇಕು.

- ***ನಾರೀ ದೂಷಣ ಆರು :***

ಮದ್ಯಪಾನ, ದುಷ್ಟರ ಸಂಗ, ಪತಿವಿರಹ, ಮನೆಯಿಂದ ಹೊರಗೆ ತಿರುಗುವುದು, ಹಗಲು ನಿದ್ರೆ, ಬೇರೆಯವರ ಮನೆಯಲ್ಲಿ ವಾಸಿಸುವುದು. ಇವು ಆರೂ ಸ್ತ್ರೀಯರಿಗೆ ಶೀಲವನ್ನು ಹಾಳು ಮಾಡುವ ಸುಲಭ ಮಾರ್ಗಗಳು.

ಯಾಜ್ಞವಲ್ಕ್ಯರು [1/83] – ಗೃಹೋಪಕರಣಗಳನ್ನು ಒಪ್ಪವಾಗಿಡುವುದು. (ವರಳು, ಮುಸಲ, ಮೊರಗಳನ್ನು ಕುಟ್ಟುವ ಸ್ಥಾನದಲ್ಲಿ), ಮನೆಯ ಕೆಲಸದಲ್ಲಿ ಕುಶಲತೆ, ಯದೃಚ್ಛಾ ಲಾಭದಿಂ ಸಂತೋಷ, ಅಸದ್ವ್ಯಾಪಾರ ಪರಾಙ್ಮುಖೀ–ಯಾಗಿದ್ದು ಹಸನ್ಮುಖಿಯಾಗಿದ್ದು ಮಿತವಾಗಿ ಖರ್ಚು ಮಾಡುವುದು, ಅತ್ತೆ ಮಾವಂದಿರ ಪಾದಗಳನ್ನು ಮುಟ್ಟಿ ಪ್ರಣಾಮ ಮಾಡುವುದು, ತನ್ನನ್ನು ಅಲಂಕರಿಸಿಕೊಂಡು ಇಂದ್ರಿಯ ನಿಗ್ರಹದಿಂದಿರುವುದು. ಗಂಡನ ಅಧೀನತೆ.

**ಸಂಯತೋಪಸ್ಕರಾ ದಕ್ಷಾ ಹೃಷ್ಟಾ ವ್ಯಯಪರಾಙ್ಮುಖೀ ।**
**ಕುರ್ಯಾತ್ ಶ್ವಶುರಯೋಃ ಪಾದವಂದನಂ ಭರ್ತೃತತ್ಪರಾ ॥**

ವಿಷ್ಣುಸ್ಮೃತಿ – ಭರ್ತೃ, ಸಮಾನಧರ್ಮತ್ವ, ಶ್ವಶ್ರುಶ್ವಶುರ, ಗುರುದೇವತಾತಿಥಿಗಳ ಸತ್ಕಾರ, ಪಾತ್ರೆ ವಸ್ತ್ರ ಧನಾದಿಗಳನ್ನು ಆಯಾಯ ಸ್ಥಾನದಲ್ಲಿಯೆ ಇಡುವುದು ಅಮುಕ್ತಹಸ್ತತ ಪಾತ್ರೆ ಮೊದಲಾದವುಗಳ ಜೋಪಾನ, ಗಂಡನನ್ನು ವಶೀಕರಿಸಿಕೊಳ್ಳಲು ಮಂತ್ರತಂತ್ರಗಳಲ್ಲಿ ಆಸಕ್ತಿ ತೋರದಿರುವುದು. ಇವು ಸ್ತ್ರೀ ಪ್ರಧಾನ ಧರ್ಮಗಳು.

ಲಕ್ಷ್ಮೀದೇವಿಯು ಭೂಮಿಯನ್ನು ಕುರಿತು ಹೀಗೆ ಹೇಳಿರುವಳು.

ನಾರಿಯು ಸುವಿಭೂಷಿತಳಾಗಿರಬೇಕು. ಪತಿವ್ರತೆಯಾಗಿದ್ದು ಪ್ರಿಯಭಾಷಿಣಿ–ಯಾಗಿರಬೇಕು.

ಅಮುಕ್ತಹಸ್ತಳೂ ಮಕ್ಕಳಿಂದ ಕೂಡಿರುವ, ಮನೆಯ ಪಾತ್ರೆಗಳನ್ನು ಒಪ್ಪವಾಗಿಟ್ಟಿರುವ, ಗೋವು ಮೊದಲಾದ ಪ್ರಾಣಿಗಳಿಗೆ ಆಹಾರ ನೀಡುವ, ಜಿತೇಂದ್ರಿಯಳಾದ, ಶುದ್ಧ ವೇಷಧಾರಿಯೂ, ಅತಿಲೋಲುಪತೆಯಿಲ್ಲದ ಧಾರ್ಮಿಕವಾಗಿರುವ ದಯಾವಂತ ಸ್ತ್ರೀಯರ ಮನೆಯಲ್ಲಿ ನಾನು ಯಾವಾಗಲೂ ವಾಸಿಸುವೆ.

**ನಾರೀಷು ನಿತ್ಯಂ ಸುವಿಭೂಷಿತಾಸು ಪತಿವ್ರತಾಸು ಪ್ರಿಯವಾದಿನೀಷು ।**

**ಸುಸ್ಪಷ್ಟವೇಶಾಸು ಜಿತೇಂದ್ರಿಯಾಸು ಅವಿಲೋಲುಪಾಸು ಧರ್ಮ ವ್ಯಪೇಕ್ಷಾಸು ದಯಾನ್ವಿತಾಸು ಸ್ಥಿತಾ ಸದಾಽಹಂ ಜಗತಾಂ ವಿಧಾತ್ರಿ ॥**

**ಅಮುಕ್ತಹಸ್ತಾಸು ಸುತಾನ್ವಿತಾಸು ಸುಗುಪ್ತಭಾಂಡಾಸು ಬಲಿಪ್ರಿಯಾಸು ।**

ಸ್ತ್ರೀಯರು ಪತಿಯ ಅಥವಾ ಅತ್ತೆ ಮಾವಂದಿರ ಹಾಗೂ ಹಿರಿಯರ ಅನುಮತಿಯಿಲ್ಲದೆ ಮನೆಯಿಂದ ಹೊರಗೆ ಹೋಗಬಾರದು.

**ನ ಗೃಹಾನ್ನಿರ್ಗಚ್ಛೇತ್ ।**

ಉತ್ತರೀಯ ವಸ್ತ್ರವಿಲ್ಲದೆ ವೇಗವಾಗಿ ಧಾವಿಸಬಾರದು.

**ನಾನುತ್ತರೀಯಾ ನ ತ್ವರಿತಂ ವ್ರಜೇತ್ ।**

ವ್ಯಾಪಾರಿ, ಸನ್ಯಾಸಿ, ವೃದ್ಧ, ವೈದ್ಯರ ಹೊರತಾಗಿ ಪರ ಪುರುಷರೊಂದಿಗೆ ಮಾತು ವ್ಯವಹಾರವಿಲ್ಲ.

**ನ ಪರಪುರುಷ ಮಭೀಭಾಷೇತಾನ್ಯತ್ರ ವಣಿಕ್ ಪ್ರವ್ರಜಿತ ವೃದ್ಧ ವೈದ್ಯೇಭ್ಯಃ।**

ನಾಭಿಯನ್ನು ತೋರಿಸಬಾರದು. **ನ ನಾಭಿಂ ದರ್ಶಯೇತ್ ।**

ಕಾಲಿನ ಗಂಟಿನವರೆಗೂ ಸೀರೆಯ ವ್ಯಾಪ್ತಿಯಿರಬೇಕು.

**ಆ ಗುಲ್ಫಾದ್ವಾಸಃ ಪರಿದಧ್ಯಾತ್ ।**

ಸ್ತನಗಳನ್ನು ಎದ್ದು ತೋರುವಂತೆ ಪ್ರದರ್ಶನ ಸಲ್ಲ.

ಬಾಯನ್ನು ವಸ್ತ್ರಾದಿಗಳಿಂದ ಮುಚ್ಚು ಕೊಳ್ಳದೆ ನಗಬಾರದು.

**ನ ಹಸೇದನಪ್ರಾವೃತಮ್ ।**

ಗಂಡನನ್ನಾಗಲೀ ಅವನ ಬಂಧುವರ್ಗದವರನ್ನಾಗಲಿ ದ್ವೇಷಿಸಬಾರದು.

**ನ ಭರ್ತಾರಂ ನ ತದ್ಬಂಧೂನ್ ವಾ ದ್ವಿಷ್ಯಾತ್ ।**

ಗಣಿಕೆ ವೈಶ್ಯದಿಗಳೊಂದಿಗೆ ಸೇರಬಾರದು. ಸಂಸರ್ಗದಿಂದಲೇ ಚಾರಿತ್ರ್ಯ ಕೆಡುವುದು.

**ಸಂಸರ್ಗೇಣ ಚಾರಿತ್ರ್ಯಂ ದುಷ್ಯತಿ**
**ದುಃಶ್ಶೀಲಾಬಿರೇಕತ್ರ ಸಹ ತಿಷ್ಠೇತ್ ।**

ಈ ಧರ್ಮಗಳೆಲ್ಲ ವಿವಾಹವಾದ ನಂತರ ಹೊರತು ಕನ್ಯೆಯಾಗಿದ್ದಾಗ ಅಲ್ಲ.

**ಪ್ರಾಗುಪನಯನಾತ್ ಕಾಮಚಾರ ಕಾಮವಾದ ಕಾಮಭಕ್ಷ್ಯಾಃ ।**

ಸ್ತ್ರೀಯರಿಗೆ ವಿವಾಹವೇ ಉಪನಯನವು.

**ವೈವಾಹಿಕೋ ವಿಧಿಃ ಸ್ತ್ರೀಣಾಮೌಪನಾಯಿಕಃ ಸ್ಮೃತಃ ।**

ಪತಿಗೆ ಕಠೋರ ಮಾತುಗಳನ್ನಾಡುವುದು, ಅಪ್ರಿಯ ವಚನ, ಜಗಳ, ವ್ಯರ್ಥಾಲಾಪ, ಸುಮ್ಮನೆ ವಿಲಾಪ ಮಾಡುವುದು. ಅಧಿಕ ಖರ್ಚು ಮಾಡುವುದು. ವ್ಯಾಸಸ್ಮೃತಿ 2/20-35ರಲ್ಲಿ ಸ್ತ್ರೀ ಧರ್ಮಗಳನ್ನು ಸಂಗ್ರಹಿಸಲಾಗಿದೆ.

ಪತಿಯ ಮೊದಲು ಏಳುವುದು, ಶಯನದಿಂದ ಎದ್ದು, ಮನೆಯ ಕಸ ಹೊರಗೆ ಹಾಕಿ, ಮನೆಯ ಮುಂದೆ ಗೋಮಯಗಳಿಂದ ಸಾರಿಸಿ ರಂಗವಲ್ಲಿಯಿಂದ ಅಲಂಕರಿಸಿ, ಅಡಿಗೆ ಮನೆಯನ್ನು ಒಲೆಯನ್ನು ಗೋಮಯಾದಿಗಳಿಂದ ಶುದ್ಧೀಕರಿಸಬೇಕು. ತಾನೂ ಸ್ನಾನ ಮಾಡಿ ಮಾಂಗಲ್ಯ ವಸ್ತುಗಳ ಧಾರಣೆ ಮಾಡಬೇಕು. ದೇವರ ಪಾತ್ರೆ, ಅಡಿಗೆ ಪಾತ್ರೆಗಳನ್ನು, ಊಟದ ಪಾತ್ರೆಗಳನ್ನು ಒಂದರಲ್ಲಿ ಮತ್ತೊಂದು ಬೆರೆಯದಂತೆ ನೋಡಿಕೊಳ್ಳಬೇಕು. ಆಯಾಯ ಪಾತ್ರೆ ಅಲ್ಲಿಯೆ ಇರಬೇಕು.

**ದ್ವಂದ್ವ ಪಾತ್ರಾಣಿ ಸರ್ವಾಣಿ ನ ಕದಾಚಿದ್ ವಿಯೋಜಯೇತ್ ।**

ಜೊತೆಜೊತೆ ಪಾತ್ರೆಗಳು ಬೇರೆಡೆ ಹೋಗದಂತೆ ಎಚ್ಚರವಹಿಸುವುದು.

ಅಡಿಗೆ ಮನೆ ಪಾತ್ರೆಯನ್ನು ಮನೆಯ ಹೊರಗೆ ಅಥವಾ ಹಿಂಭಾಗದಲ್ಲಿ ತೊಳೆಯಬೇಕು. ಶೂದ್ರಾದಿಗಳು ತೊಳೆದಿದ್ದರೆ ಹುಣಸೇ ನೀರನ್ನು ಹಾಕಿ, ಬಿಸಿ ನೀರಿನಿಂದ ಒಳ ಹೊರಗೆ ತೊಳೆಯಬೇಕು.

**ಮಹಾನಸಸ್ಯ ಪಾತ್ರಾಣಿ ಬಹಿಃ ಪ್ರಕ್ಷಾಲ್ಯ ಸರ್ವಥಾ ।**
**ಶೋಧಯಿತ್ವಾ ತು ಪಾತ್ರಾಣಿ ಪೂರಯಿತ್ವಾ ತು ಧಾರಯೇತ್ ॥**

ಒಲೆಯನ್ನು ಕೆಮ್ಮಣ್ಣಿನಿಂದ ಶುದ್ಧೀಕರಿಸಿ ಅಗ್ನಿಯನ್ನು ಸ್ಥಾಪಿಸಬೇಕು.

**ಮೃದ್ಭಿಶ್ಚ ಶೋಧಯೇತ್ ಚುಲ್ಲೀಂ ತತ್ರಾಗ್ನಿಂ ವಿನ್ಯಸೇತ್ ತತಃ ॥**

ದುರ್ಗಾದಿ ಪಾತ್ರಭಿಮಾನಿಗಳನ್ನು, ರಸಾಭಿಮಾನಿಗಳನ್ನು, ಅಕ್ಕಿ, ಬೇಳೆ

ಮೊದಲಾದ ಧಾನ್ಯಾದಿಗಳನ್ನು ಅಭಿಮಾನಿ ಚಂದ್ರಾದಿಗಳನ್ನು ಸ್ಮರಿಸಬೇಕು. ನಿಮ್ಮ ಆದೇಶದಿಂದ ಈ ಹರಿಗೆ ಪಾಕ ಕ್ರಿಯೆಯಲ್ಲಿ ತೊಡಗಿದ್ದೇನೆ, ಅನುಗ್ರಹಿಸಿ ಎನ್ನಬೇಕು.

**ಸ್ಮೃತ್ವಾ ನಿಯೋಗಪಾತ್ರಾಣಿ ರಸಾಂಶ್ಚ ದ್ರವಿಣಾನಿ ಚ ।**

ಪ್ರಾತಃಕಾಲೀನ ಆಹ್ನಿಕ ಕೃಷ್ಣ ಮಂತ್ರ ಜಪ, ತುಲಸೀ ಹೊಸ್ತಿಲು ಪೂಜೆ ನಡೆಸಿ ತನ್ನ ಪತಿ, ಅತ್ತೆ, ಮಾವ, ಗುರುಗಳನ್ನು ಅಭಿವಾದನ ಮಾಡಬೇಕು.

**ಕೃತ ಪೂರ್ವಾಹ್ಣಕಾರ್ಯಾ ಚ ಸ್ವಗುರೂನ್ ಅಭಿವಾದಯೇತ್ ।**

ತನ್ನ ಪತಿ, ತಂದೆಯ ಸ್ಥಾನದಲ್ಲಿರುವವರು ನೀಡಿದ ವಸ್ತ್ರವನ್ನೇ ದೈನಂದಿನ ಕಾರ್ಯದಲ್ಲಿ ಬಳಸಬೇಕು.

**ತಾಭ್ಯಾಂ ಭರ್ತೃ ಪಿತೃಭ್ಯಾಂ ವಾ ಭ್ರಾತೃ ಮಾತುಲ ಬಾಂಧವ್ಯ ।**
**ವಸ್ತ್ರಾಲಂಕಾರ ರತ್ನಾನಿ ಪ್ರದತ್ತಾನ್ಯೇವ ಧಾರಯೇತ್ ॥**

ಮನಸ್ಸು ವಾಕ್ ಕರ್ಮಗಳಿಂದ ಶುದ್ಧಳಾಗಿ ಪತಿಯ ಆದೇಶ ಪಾಲನೆ ಮಾಡುತ್ತಾ ಹಸನ್ಮುಖಿಯಾಗಿರಬೇಕು.

**ಮನೋವಾಕ್ಕಾಯ ಕರ್ಮಭಿಃ ಶುದ್ಧಾ ಪತಿ ದೇಶಾನುವರ್ತಿನಿ ।**

ಸೀತೆಯು ರಾಮನ ನೆರಳನ್ನು ಅನುಸರಿಸಿದಂತೆ ಪತ್ನಿಯು ಪತಿಯ ನೆರಳಿನಂತೆ ಅವನನ್ನೆ ಅನುಸರಿಸುತ್ತಾ ಇರಬೇಕು.

ಗಂಡನ ಹಿತಕರ್ಮಗಳಲ್ಲಿ ಸಖಿಯಂತೆಯೂ, ಗಂಡನಿಂದ ಆದಿಷ್ಟ ಕಾರ್ಯಗಳಲ್ಲಿ ದಾಸಿಯಂತೆಯು ಸೇವಿಸುವುದು ಇಹ ಪರಗಳಲ್ಲಿ ಕೀರ್ತಿದಾಯಕ.

**ಛಾಯೇವಾನುಗತಾ ಸ್ವಚ್ಛಾ ಸಖೀವ ಹಿತಕರ್ಮಸು ।**
**ದಾಸೀವಾದಿಷ್ಟ ಕಾರ್ಯೇಷು ಭಾರ್ಯಾಭರ್ತುಃ ಸದ ಭವೇ ॥**

ಅನ್ನಾದಿಗಳನ್ನು ತಯಾರು ಮಾಡಿ ಅದನ್ನು ಜಗತ್ಪತಿಗೆ ವಿಪ್ರ ಪತ್ನಿಯರು ಶ್ರೀಕೃಷ್ಣನಿಗೆ ಅರ್ಪಿಸಿದಂತೆ ಅರ್ಪಿಸಬೇಕು.

**ತತೋಽನ್ನಸಾಧನಂ ಕೃತ್ವಾ ಪತಯೇ ವಿನಿವೇದ್ಯತತ್ ।**

ಪತಿಯನ್ನು ಹರಿಗೆ ನಿವೇದಿಸಲು ಮಂಡಲದಲ್ಲಿಟ್ಟು ನಿವೇದನೆಯಾದ

ಮೇಲೆ ವೈಶ್ವದೇವಾದಿಗಳಿಗೆ ಅಣಿ ಮಾಡಿಕೊಟ್ಟು ಆದಾದ ಮೇಲೆ ವೃದ್ಧರು ರೋಗಿಷ್ಠರು, ಪತಿ ಹಾಗೂ ಮಕ್ಕಳು ಇವರಿಗೆ ಭೋಜನ ಮಾಡಿಸಿ ಕಡೆಯಲ್ಲಿ ಪತಿಯಾಜ್ಞೆ ಪಡೆದು ಪತಿಯು ಭುಂಜಿಸಿದ ಎಲೆಯಲ್ಲಿಯೆ ಹೋಮ ಶೇಷವೆಂದು ಸ್ವೀಕರಿಸಬೇಕು.

**ವೈಶ್ವದೇವ ಕೃತ್ಯೈರನ್ನೈಃ ಭೋಜನೀಯಾಂಶ್ಚ ಭೋಜಯೇತ್ ।**
**ಪತಿಂ ಚೈತದನುಜ್ಞಾತಾ ಶಿಷ್ಟಮನ್ನಾದ್ಯಮಾತ್ಮನಾ ॥**

ಪುನಃ ಸಂಜೆ ಕಸ ಗುಡಿಸಿ ಗೃಹಶುದ್ಧಿ ಮಾಡಿ, ಅನ್ನಾದಿ ಸಾಧನಗಳಿಂದ ಪತಿಯನ್ನು ಸಂತೋಷಪಡಿಸಬೇಕು. ತಾಂಬೂಲಾದಿಗಳಿಂದ ಪತಿ ಸೇವೆಯ ನಂತರ ಹಾಸಿಗೆ ಹಾಸಿ, ಪತಿಯ ಸೇವಾತತ್ಪರಳಾಗಬೇಕು. ಪತಿಯು ಮಲಗಿದ ಮೇಲೆ ತಾನೂ ತದ್ಗತ ಮಾನಸಳಾಗಿ ಮಲಗಬೇಕು.

**ಸುಪ್ತೇ ಪತೌ ತದಭ್ಯಾಶೇ ಸ್ವಪೇತ್ ತದ್ಗತಮಾನಸಾ ।**

ನಗ್ನಳಾಗಿರದೆ ಪ್ರಮತ್ತಳೂ ಆಗದೇ ಜೀತೇಂದ್ರಿಯಳೂ ಆಗಿದ್ದು ಪತಿಯ ಆಸೆ ಈಡೇರಿಸಬೇಕು.

ಜೋರಾಗಿ ಪತಿಗೆ ಉತ್ತರ ನೀಡುವುದು, ಕಠೋರ ಮಾತುಗಳು, ಪತಿಗೆ ಅಪ್ರಿಯವಾದವುಗಳನ್ನಾಡಬಾರದು. ನೆರೆಹೊರೆಯೊಂದಿಗೆ ವಾದವಿವಾದ, ಅಸಂಬದ್ಧ ಪ್ರಲಾಪವನ್ನು ಮಾಡಬಾರದು. ಅತಿವ್ಯಯಶೀಲಳಾಗದೆ ಧರ್ಮಾರ್ಥಗಳಿಗೆ ವಿರೋಧಿಯಾಗಬಾರದು.

ಚಾಡಿ, ಹಿಂಸೆ, ದ್ವೇಷ, ಮಹಾಹಂಕಾರ, ಧೂರ್ತತನ, ನಾಸ್ತಿಕತೆ, ಸಾಹಸ, ಕಳ್ಳತನ, ದಂಬಾಚಾರ, ಇವುಗಳನ್ನು ಸಾಧ್ವಿಯು ಸರ್ವಥಾ ತ್ಯಜಿಸಿರಬೇಕು.

**ಪೈಶುನ್ಯ ಹಿಂಸಾ ವಿದ್ವೇಷ ಮಹಾಹಂಕಾರ ಧೂರ್ತತಾಃ ।**
**ನಾಸ್ತಿಕ್ಯ ಸಾಹಸ ಸ್ತೇಯ ದಂಭಾನ್ ಸಾಧ್ವೀ ವಿವರ್ಜಯೇ ॥**

ಹೀಗೆ ಪತಿಯನ್ನು, ಪರಮ ಜಗತ್ಪತಿಯನ್ನು ಸೇವಿಸುತ್ತಾ ಕೀರ್ತಿ ಆನಂದಾದಿಗಳಿಗೆ ಪಾತ್ರಳಾಗಿ ಮುಂದೆ ಪತಿಲೋಕವನ್ನು ಪಡೆಯುವಳು.

ಬೃಹಸ್ಪತಿ [25/10]ರಲ್ಲಿ – ಪತ್ನಿಯು ಪತಿ, ಹಿರಿಯರು ಗುರುಗಳು ಏಳುವ ಮೊದಲೇ ಏಳಬೇಕು. ಭೋಜನಾದಿಗಳ ತಯಾರಿ, ಪತಿಗಿಂತಲೂ ನೀಚಾಸನದಲ್ಲಿ ಕೂಡಬೇಕು.

**ಪೂರ್ವೋತ್ಥಾನಂ ಗುರುಷ್ವರ್ವಾಕ್ ಭೋಜನ ವ್ಯಂಜನಕ್ರಿಯ ।**
**ಜಘನ್ಯಾಸನ ಶಾಯಿತ್ವಂ ಕರ್ಮ ಸ್ತ್ರೀಣಾಮುದಾಹೃತಂ ॥**

ಪರಾಶರ [4/17–18]ರಲ್ಲಿ – ಯಾವ ಸ್ತ್ರೀಯು ಪತಿಯು ತನ್ನ ವಶದಲ್ಲಿಡಲು ಉಪವಾಸಾದಿ ವ್ರತಗಳನ್ನು ಅವಳು ಪತಿಯ ಆಯುಸ್ಸನ್ನು ಅಪಹರಿಸುವಳು. ಪತಿಯ ಆದೇಶವಿಲ್ಲದೆ ವ್ರತೋಪವಾಸ ಮಾಡಿದರೆ ಅವೆಲ್ಲ ರಾಕ್ಷಸರು ಒಯ್ಯುವರು.

**ಜೀವದ್ಭರ್ತರಿ ಯಾ ನಾರೀ ಉಪೋಷ್ಯ ವ್ರತಚಾರಿಣೀ ।**
**ಆಯುಷ್ಯಂ ಹರತೇ ಭರ್ತುಃ ಸಾ ನಾರೀ ನರಕಂ ವ್ರಜೇತ್ ॥**

- ***ತೀರ್ಥಸ್ನಾನ–ಪತಿ ಪಾದೋದಕ ಪಾನ :***

**ತೀರ್ಥ ಸ್ನಾನಾರ್ಥಿನೀ ನಾರೀ ಪತಿಪಾದೋದಕಂ ಪಿಬೇತ್ ।**

ಪತಿಯು ಕಾರ್ಯಾರ್ಥವಾಗಿ ಬೇರೆಡೆ ಹೋಗಿದ್ದರೆ ಅವನ ಪತ್ನಿಯು **'ಪ್ರೋಷಿತ ಭರ್ತೃಕಾ'** ಎನಿಸುವಳು. ಗಂಡನು ಮನೆಯಲ್ಲಿ ಇಲ್ಲದೆ ಇರುವಾಗ ಇವಳು ದ್ಯೂತಾದಿಕ್ರೀಡೆ, ವಿಧವಿಧ ಅಲಂಕಾರಣಳು. ಬಹು ಜನರು ಸೇರುವ ಉತ್ಸವಾದಿಗಳಲ್ಲಿ ಪಾಲ್ಗೊಳ್ಳುವುದು, ಅಲ್ಲಿ ಇತರರೊಂದಿಗೆ ಜೋರಾಗಿ ನಗುತ್ತಾ ಕೇಕೆ ಹಾಕುವುದು, ಬೇರೆಯವರ ಮನೆಯಲ್ಲಿ ವಾಸಿಸುವುದು, ಮಾಡಬಾರದು.

ಶಂಖಲಿತರು – ಪ್ರೇಂಖ – ತಾಂಡವ – ವಿಹಾರ – ಚಿತ್ರದರ್ಶನ – ಅಂಗರಾಗ – ಉದ್ಯಾನಯಾನ – ವಿವೃತಾಸಾನ, ಉತ್ಕೃಷ್ಟಪಾನ – ಭಾಜನ – ಕಂದುಕ ಕ್ರೀಡಾ – ಗಂಧಮಾಲ್ಯಾಲಂಕಾರ – ದಂತಧಾವನ – ಅಂಜನ – ಆದರ್ಶ – ಪ್ರಸಾಧನಾನಾಂ ಅವತಂತ್ರಾಣಾಂ

**ಪ್ರೋಷಿತಭರ್ತೃಕಾಣಾಂ ಕುಲಸ್ತ್ರೀನಾಮನರಂಭಃ ।**

ಗಂಡನು ಬೇರೆ ದೇಶಕ್ಕೆ ಹೋಗುವಾಗ ತನ್ನ ಪತ್ನಿಗೆ ಜೀವನಕ್ಕೆ ವ್ಯವಸ್ಥೆ ಮಾಡಿ ಹೋಗಿದ್ದರೆ ಸ್ವಲ್ಪಾಹಾರ ಸೇವಿಸುತ್ತಾ ಜೀವನ ಮಾಡುವುದು, ಜೀವನ ಕಲ್ಪಿಸದೆ ಹೋಗಿದ್ದರೆ ಸ್ತ್ರೀಯು ತನಗೆ ಗೊತ್ತಿರುವ ಕುಸುರಿ ಕೆಲಸ, ಸಂಗೀತ ಕಲೆ, ವೀಣೆ ಮೊದಲಾದ ಲಲಿತ ಕಲೆಗಳಿಂದ ಜೀವಿಸಬೇಕು.

**ಪ್ರೋಷಿತೇ ತ್ವವಿಧಾಯೈವ ಜೀವೇಚ್ಛಲ್ಪೈರಗರ್ಹಿತ ।**

ಮನುವು [9/74-75] – ದೂರ ದೇಶಕ್ಕೆ ಪ್ರಯಾಣ ಮಾಡುವ ಪತಿಯು ಪತ್ನಿಗೆ ಜೀವನಾಂಶ ನೀಡಿ ಹೋಗಬೇಕು. ಜೀವನಕ್ಕಿಲ್ಲದ ಸ್ತ್ರೀಯು ಶೀಲವನ್ನು ರಕ್ಷಿಸುಕೊಳ್ಳುವುದು ದುರ್ಭರ.

**ವಿಧಾಯ ವೃತ್ತಿಂ ಭಾರ್ಯಾಯಾಃ ಪ್ರವಸೇತ್ ಕಾರ್ಯವಾನ್ ನರ ।**
**ಅವೃತ್ತಿಕರ್ಷಿತಾ ಹಿ ಸ್ತ್ರೀ ಪ್ರದುಷ್ಯೇತ್ ಸ್ಥಿತಿಮತ್ಯಪಿ ॥**

ಸೀತೆಯು ರಾಮನಿಂದ ದೂರಳಾಗಿ ಖಿನ್ನವಾದವಳೂ, ದೀನಳೂ, ದೇಹಕ್ಕೆ ಯಾವುದೇ ರೀತಿಯ ಸಂಸ್ಕಾರವನ್ನೂ ಮಾಡಿಕೊಳ್ಳದೆ ಪತಿವ್ರತೆಯಾಗಿ, ಇಂದ್ರನು ನೀಡಿದ ಪಾಯಸವನ್ನು ಮಾತ್ರ ಸ್ವೀಕರಿಸುತ್ತಾ, ರಾವಣನು ತನ್ನ ವೈಭವವನ್ನು ಅವಳ ಮುಂದಿಟ್ಟಾಗ ತೃಣ ಮುಂದಿಟ್ಟು, ನನ್ನ ಪತಿಯ ಮುಂದೆ ನಿನ್ನ ವೈಭವ ತೃಣಪ್ರಾಯ ಎಂದವಳು.

ವ್ಯಾಸಸ್ಮೃತಿ [2/52]-ರಲ್ಲಿ ಹೀಗೆ ಹೇಳಿದೆ,

**ವಿವರ್ಣಾ ದೀನವದನಾ ದೇಹಸಂಸ್ಕಾರ ವರ್ಜಿತಾ ।**
**ಪತಿವ್ರತಾ ನಿರಾಹಾರ ಶೋಷ್ಯತೆ ಪ್ರೋಷಿತೇ ಪತೌ ॥**

ವೃದ್ಧಹಾರೀತ [8-80-83]ರು – ಪತಿಗಿಂತ ಮೊದಲೆದ್ದು ಭಗವಂತನ ಧ್ಯಾನ ಭಜನೆ ಮಾಡಬೇಕು.

- ***ಭರ್ತಾ-ಭಾರ್ಯಾ [ಬೃ.ಪರಾ. 6/179] :***

ಪತ್ನಿಯು ಪತಿಯನ್ನು ಅನ್ನಪಾನಾದಿಗಳಿಂದ ಪಾಲನೆ ಮಾಡುವಳು. ಅದಕ್ಕಾಗಿ **'ಭಾರ್ಯಾ'** ಎನಿಸಿರುವಳು. ಪತ್ನಿಯನ್ನು ಗಂಡನು ಭರಣ ಮಾಡುವುದರಿಂದ **'ಭರ್ತಾ'** ಎನಿಸಿರುವನು.

**ಸ್ವಾಮಿನ್ ಯಸ್ಮಾದ್ ಬಿಭರ್ತ್ಯೇಷಾ ಪತಿಂ, ಬಿಭರ್ತಿ ಸೋಽಪಿ ತಾಂ ಅತೋಭಾರ್ಯಾ ಚ ಭರ್ತಾ ಚ ।**

**ಜಾಯಾ :** ಪತಿಯು ಪತ್ನಿಯಲ್ಲಿ ಒಂದು ರೂಪದಿಂದ ಮಗನಾಗಿ ಜನಿಸುವುದರಿಂದ ಇವಳು 'ಜಾಯಾ' ಎನಿಸಿರುವಳು *[ಬೃ.ಪರಾ. 6.181]*

**ಜಾಯೋಕ್ತಾ ತೇನ ಭರ್ತಾ ಚ ಯದಸ್ಯಾಂ ಜಾಯತೇ ಪುನಃ ।**

ಸ್ತ್ರೀಯರ ಪತನ ಅಹಂಕಾರದಿಂದ ಎಂದು *ಬೃಹದ್ಯಮ ಸ್ಮೃತಿ [4/60]* – **'ಸ್ತ್ರೀ ವಿನಶ್ಯತಿ ಗರ್ವೇಣ'** ಎಂದಿದೆ.

- ***ಸ್ತ್ರೀಯರ ಕಳ್ಳತನ [ಮನು 12–69] ರಲ್ಲಿ :***

ಸ್ತ್ರೀಯರು ಪರರ ಒಡವೆಯನ್ನು ಕದ್ದರೆ ತಿರ್ಯಕ್ ಪ್ರಾಣಿಗಳ ಯೋನಿಯಲ್ಲಿ ಸ್ತ್ರೀಯಾಗಿಯೇ ಹುಟ್ಟುವರು.

**ಜಂತೂನಾಂ ಭಾರ್ಯಾತ್ವ ಮುಪಯಾಂತಿ ಹಿ ।**

ಪತಿವ್ರತೆಯನ್ನು ತ್ಯಜಿಸಬಾರದು.

ವ್ಯಭಿಚಾರಾದಿ ಕಳಂಕ ರಹಿತಳಾದ ಪತಿವ್ರತೆಯನ್ನು ಅನ್ಯಸ್ತ್ರೀ ವ್ಯಾಮೋಹ–ದಿಂದ ಬಿಟ್ಟರೆ, ಮುಂದೆ ಸ್ತ್ರೀಯಾಗಿ ಹುಟ್ಟಿ ಅಲ್ಲಿ ವೈಧವ್ಯವನ್ನು ಅನುಭವಿಸ–ಬೇಕಾಗುತ್ತದೆ.

**ಸದ್ವೃತ್ತಚಾರಿಣೀಂ ಪತ್ನಿಂ ತ್ಯಕ್ತ್ವಾ ಪತತಿ ಧರ್ಮತಃ ।**

ಧರ್ಮಕಾರ್ಯ ನಡೆಯಲು ಸ್ತ್ರೀಯರನ್ನು ರಕ್ಷಿಸಲೇ ಬೇಕು. [ಯಾಜ್ಞ – 1/78] ಪುರುಷರು ಸ್ತ್ರೀಯರನ್ನು ಸಾಧಾರಣ ಪ್ರಸಂಗಗಳಿಂದಲೂ ರಕ್ಷಿಸುತ್ತಿರಬೇಕು. ಹಾಗಿಲ್ಲವಾದರೆ ಸ್ತ್ರೀಯರು ಹುಟ್ಟಿದ –ಮೆಟ್ಟಿದ ಎರಡೂ ಕುಲವನ್ನು ದುಃಖಿಗಳನ್ನಾಗಿಸುವರು. ಸ್ತ್ರೀ ರಕ್ಷಣೆಯಿಂದ ಸಂತಾನ ರಕ್ಷಣೆ, ಸಂತಾನದಿಂದ ತಾನೂ ರಕ್ಷಿತನಾಗಬಹುದು.

ದುರ್ಬಲ ಪತಿಯೂ ಸಹ ತನ್ನ ಸ್ತ್ರೀಯನ್ನು ರಕ್ಷಿಸಲೇಬೇಕು. ಇದರಿಂದಾಗಿ ತನ್ನನ್ನೂ, ಸಂತಾನವನ್ನೂ, ಧರ್ಮಾಚರಣೆಯನ್ನು ರಕ್ಷಿಸಿದಂತಾಗುತ್ತದೆ.

ಮನುವು [9/9–11]ರಲ್ಲಿ – ಸ್ತ್ರೀಯು ಯಾವ ರೀತಿಯಿಂದ ಪತಿಯನ್ನು ಸೇವಿಸುವಳೋ, ಅದೇ ರೀತಿಯ ಗುಣದ ಸಂತಾನ ಹೊಂದುವಳು.

ಸ್ತ್ರೀಯು ಶಾಸ್ತ್ರದಲ್ಲಿ ನಿರ್ದಿಷ್ಟವಾದ ಲಕ್ಷಣಗಳುಳ್ಳ ಅಥವಾ ಶಾಸ್ತ್ರ ನಿಷಿದ್ಧ ಪತಿಯನ್ನು ಸೇವಿಸಿದರೆ ಅಂತಹ ಶಾಸ್ತ್ರ ಹೇಳಿದ ನಿರ್ದುಷ್ಟ ಸಂತಾನ ಅಥವಾ ನಿಷಿದ್ಧ ಗುಣವುಳ್ಳ ಸಂತಾನವೆ ಆಗುತ್ತದೆ. ಶುದ್ಧ ಸಂತಾನಕ್ಕಾಗಿಯೂ ಪತ್ನಿಯನ್ನು ರಕ್ಷಿಸುತ್ತಿರಬೇಕು.

**ಯಾದೃಶಂ ಭಜತೇ ಹಿ ಸ್ತ್ರೀ ಸುತಂ ಸೂತೇ ತಥಾವಿಧಂ ।**

- ***ಸ್ತ್ರೀ ರಕ್ಷಣಾ ಉಪಾಯ [ಮನು 9/10] :***

ಯಾರು ಸ್ತ್ರೀಯನ್ನು ಬಲಾತ್ಕಾರದಿಂದ ಬಂಧಿಸಿ ಅವರನ್ನು ರಕ್ಷಿಸಲು ಸಾಧ್ಯವಿಲ್ಲ. ಬಂಧಿತರಾದಾಗ್ಯೂ ವ್ಯಭಿಚಾರಾದಿಗಳು ಕಂಡಿವೆ. ಆತ್ಮಹತ್ಯೆ ಇತ್ಯಾದಿ ದುಃಖಾದಿಗಳೂ ಬರಬಹುದು. ರಕ್ಷಣೋಪಾಯ ಹೀಗಿದೆ.

**ನ ಕಶ್ಚಿದ್ ಯೋಷಿತಃ ಶಕ್ತಃ ಪ್ರಸಹ್ಯ ಪರಿರಕ್ಷಿತುಮ್ ।**

ಧನಾದಿಗಳನ್ನು ರಕ್ಷಣೆ ಕಾರ್ಯ, ಅದನ್ನು ಖರ್ಚು ಮಾಡುವ ಹೊಣೆ, ದೇಹ, ವಸ್ತ್ರ, ಪಾತ್ರೆ, ಮನೆ ಸೊತ್ತುಗಳ ಶುಚಿಯ ಕಾರ್ಯ, ಧಾರ್ಮಿಕ ಕಾರ್ಯ, ಶುಚಿರುಚಿ ಆಹಾರ ತಯಾರಿ, ಗೃಹೋಪಕರಣಗಳ ಮೇಲ್ವಿಚಾರಣೆ ಇವೇ ಮೊದಲಾದ ಜವಾಬ್ದಾರಿ ನೀಡಿದಾಗ ಮನಸ್ಸು ಬೇರೆಡೆ ಹೋಗಲು ಸಾಧ್ಯವೇ ಇಲ್ಲ. ಹೀಗಾಗಿ ಸ್ತ್ರೀ ರಕ್ಷಣೆ ಸಾಧ್ಯ.

ಸ್ತ್ರೀಗೆ ಶಿಕ್ಷೆ [ಮನು 8/299–300]ರಲ್ಲಿ – ಪತಿ, ಗುರು, ತಂದೆ ಇವರಿಗೆ ಸ್ತ್ರೀಗೆ ಶಾರೀರಿಕ ದಂಡ ನೀಡಲು ಅನುವು ನೀಡಲಾಗಿದೆ. ರಜ್ಜು, ಬಿದಿರಿನಿಂದ ಸ್ವಲ್ಪ ಬೆನ್ನಿಗೋ ಸ್ವಲ್ಪವಾಗಿ ಹೊಡೆಯಬಹುದು, ತಲೆಗೆ ಮರಣಾಂತಿಕ ಪೆಟ್ಟು ಕೊಡಬಾರದು.

**ಪೃಷ್ಠತಸ್ತು ಶರೀರಸ್ಯ ನೋತ್ತಮಾಂಗೇ ಕದಾಚನ ।**

- ***ಪತಿ ಪತ್ನಿಗೆ ಭ್ರೂಣ ಹತ್ಯೆ [ಬೋಧಾಯನ 4/1/1920] –***

ಪತಿಯು ಋತು ಸ್ನಾತಳಾದ ಪತ್ನಿಯ ಸಂಗ ಮಾಡದಿದ್ದರೆ ಭ್ರೂಣಹತ್ಯೆ ಪಾಪವು, ಪತ್ನಿಯೂ ಸಹ ಪತಿಯು ಇಚ್ಛಿಸಿದಾಗ ಇಚ್ಛಾ ಪೂರ್ಣ– ಗೊಳಿಸದಿದ್ದರೆ ಅವಳಿಗೂ ಭ್ರೂಣಹತ್ಯೆ.

**ಋತುಸ್ನಾತಾಂ ತು ಯೋ ಭಾರ್ಯಾಂ ಸನ್ನಿಧೌ ನೋಪಗಚ್ಛತಿ ।**
**ಸ ತುಲ್ಯಂ ಭ್ರೂಣಹತ್ಯಾಯೈ ದೋಷಮೃಚ್ಛತ್ಯಸಂಶಯ ॥**

ಪರಾಶರ ಸ್ಮೃತಿ [4/14–15]ರಲ್ಲಿ – ಋತುಸ್ನಾತಳಾಗಿ ಪತಿಯ ಸಂಗ ಮಾಡದವಳು ಮೃತಳಾದ ಮೇಲೆ ನರಕ ಹೊಂದುವಳು. ಮುಂದಿನ ಜನ್ಮಗಳಲ್ಲಿ ಪುನಃ ಪುನಃ ವೈಧವ್ಯ ಹೊಂದುವಳು.

**ಋತುಸ್ನಾತಾ ತು ಯಾ ನಾರೀ ಭರ್ತಾರಂ ನೋಪಸರ್ಪತಿ ।**
**ಸಾ ಮೃತಾ ನರಕಂ ಯಾತಿ ವಿಧವಾ ಚ ಪುನಃ ಪುನಃ ॥**

- ***ಸ್ತ್ರೀಧನ [ಮನುವು 8–416] :***

ಹೆಂಡತಿ, ಪುತ್ರ, ಸೇವಕ ಇವರು ಸ್ವಾಮಿಯ ಸಮ್ಮತಿಯಿಂದ ಧನಾಧಿಕಾರ ಪಡೆಯುವರು, ಸ್ವತಂತ್ರವಾಗಿ ಅಲ್ಲ. ಇವರು ದುಡಿದ ಧನವೂ ಯಜಮಾನನದೆ, ಪರತಂತ್ರವೆಂಬರ್ಥ.

ಸ್ತ್ರೀಯು ಗೃಹಲಕ್ಷ್ಮೀ [ಮನು 9/26]ರಲ್ಲಿ – ಸ್ತ್ರೀಯನ್ನು ಶ್ರೀಯೆಂದೆ ಕರೆಯಲಾಗಿದೆ. ಇದು ಅಭೇದವಲ್ಲ. ಮನೆಯಲ್ಲಿ ಬೆಳಗಿಸುವ ಗೃಹದೀಪ್ತಿ ಲಕ್ಷ್ಮಿಯ ಸನ್ನಿಧಾನದ್ಯೋತಕವಾಗುವಂತೆ, ಮನೆಯನ್ನು ಬೆಳಗಿಸುವ ಗೃಹ ಪತ್ನಿಯರು ಗೃಹಲಕ್ಷ್ಮೀ ಇದ್ದಂತೆ, ಇದರರ್ಥ.

ಸಂಪತ್ತು ರಹಿತ ಮನೆ ಹೇಗೆ ಶೋಭಿಸುವುದಿಲ್ಲವೋ ಹಾಗೆ ನಿಃಶ್ರೀಕಂ ಗೃಹವೂ ಬೆಳಗಲಾರದು.

**ನಿಃಶ್ರೀಕಂ ಗೃಹಂ ಯಥಾನ ರಾಜತ್ಯೇವಂ ನಿಃ ಸ್ತ್ರೀಕಮಿತಿ ।**
**ಸ್ತ್ರೀಯಃ ಶ್ರಿಂಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ ।**

- ***ಪೂಜ್ಯ ಸ್ತ್ರೀಯರು [ಔಶಸಸ್ 3/31–33] :***

ತನ್ನ ತಾಯಿಯ ತಂಗಿ, ಸೋದರ ಮಾವನ ಪತ್ನೀ, ತನ್ನ ಅತ್ತೆ, ತಂದೆಯ ತಂಗಿ (ಸೋದರತ್ತೆ), ಗುರು ಪತ್ನಿ, ಅಣ್ಣನ ಹೆಂಡತಿ (ಅತ್ತಿಗೆ), ಸವರ್ಣಳು, ಕಿರಿಯಳಾದರೂ ಪೂಜ್ಯಳು. ಪಿತೃ ಪಕ್ಷದ ಚಿಕ್ಕಪ್ಪ, ದೊಡ್ಡಪ್ಪನ ಭಾರ್ಯೆಯರು ಹಾಗೆ ಚಿಕ್ಕಮ್ಮ ದೊಡ್ಡಮ್ಮಂದಿರು ಅನ್ಯತ್ರ ಪ್ರವಾಸಾದಿಗಳಿಂದ ಬಂದಾಗ ವಂದ್ಯರು. ಆದರೆ ಜನ್ಮ ನೀಡಿದ ತಾಯಿ ಇವೆಲ್ಲರಿಗಿಂತಲೂ ಶ್ರೇಷ್ಠಳು.

- ***ಸ್ತ್ರೀಯರ ಗುಣಗಳು [ಶಂಖ 4/14] :***

ಯಾವಳು ಮನೆಯನ್ನು ರಕ್ಷಿಸುವಳೋ, ಪತಿ ಪ್ರಾಣ ಪತ್ನಿಯೇ ಸತ್ಸಂತಾನ ನೀಡುವವಳೂ ಅವಳೆ ನಿಜವಾದ ಭಾಯೆ.

**ಸಾಭಾರ್ಯಾ ಯಾ ಗೃಹಂ ರಕ್ಷೇತ್ ಸಾ ಭಾರ್ಯಾ ಯಾ ಪ್ರತಿವ್ರತಾ।**
**ಸಾಭಾರ್ಯಾ ಯಾ ಪತಿಪ್ರಾಣಾ ಸಾ ಭಾರ್ಯಾ ಯಾ ಪ್ರಜಾನತೀ॥**

ದಕ್ಷಸ್ಮೃತಿ [4/12–13]– ಪತಿಗೆ ಅನುಕೂಲಳೂ, ಮಧುರ ಮಾತುಳ್ಳವಳು, ಗೃಹಕಾರ್ಯ ದಕ್ಷಳೂ, ಪತಿಯನ್ನು ಪ್ರಸನ್ನಗೊಳಿಸುವವಳೂ, ಸಾಧು ಗುಣವುಳ್ಳವಳೂ, ಪತಿವ್ರತೆಯೂ ಆಗಿರುವವಳು ಲಕ್ಷ್ಮೀದೇವಿಯೆ ಹೊರತು ಬೇರೆಯಲ್ಲ.

**ಏಭಿಃ ಗುಣೈರ್ಯುಕ್ತಾ ಶ್ರೀರೇವ ಸ್ತ್ರೀ ನ ಸಂಶಯಃ ।**

ಮನೆಯಲ್ಲಿ ಲಕ್ಷ್ಮೀ ಸನ್ನಿಧಾನವುಂಟು ಮಾಡುವವಳೆಂದರ್ಥ. ಹೃಷ್ಟ

ಮನಸ್ಕಳೂ, ತನ್ನ ಸ್ಥಾನಮಾನ ತಿಳಿದವಳು, ಗಂಡನಿಗೆ ಪ್ರೀತಿಕಾರಿಯೂ –ಆದ ಭಾರ್ಯೆಯು ಗಂಡನಿಗೆ ಸುಕನ್ಯೆಯು ಚ್ಯವನನಿಗೆ ಯೌವ್ವನ ನೀಡುವಂತೆ, ಯೌವನ ನೀಡುವವಳೆಂದೂ, ಇದಕ್ಕೆ ವ್ಯತಿರಿಕ್ತ ಗುಣವುಳ್ಳವಳು ಗಂಡನಿಗೆ ಅಕಾಲದಲ್ಲಿಯೇ 'ವೃದ್ಧಾಪ್ಯ' ನೀಡುವಳೆಂದೂ ಕುಭಾರ್ಯೆಯೆನಿಸುವಳು.

**ಭರ್ತೃಃ ಪ್ರೀತಿಕರೀ ನಿತ್ಯಂ ಸಾ ಭಾರ್ಯಾ, ಹಿತರಾ ಜರಾ ।**

ಯಾರು ವಿನೀತಳೋ ಗಂಡನ ಚಿತ್ತಾನುಸಾರಿ ಚಿತ್ತವುಳ್ಳವಳೋ ಗಂಡನ ವಶದವರ್ತಿಯೋ ಅವಳೇ 'ಪತ್ನಿ'.

**ಸಾ ಪತ್ನೀ ಯಾ ವಿನೀತಾ ಸ್ಯಾತ್ ಚಿತ್ತಜ್ಞಾ ವಶವರ್ತಿನೀ ।**

ಆ ಸ್ತ್ರೀಯು ದೇವತೆ – ಮನುಷ್ಯಳಲ್ಲ [ಅರುಣ 1/64–65] : ಯಾರು ತನ್ನನ್ನು ಬೇರೆಯವರ ಕುದೃಷ್ಟಿಯಿಂದ ರಕ್ಷಿಸುತ್ತಾ, ಸ್ವಾಮಿಭಕ್ತಳೋ ಅವಳು ದೇವತೆಯೇ ಸರಿ.

**ಆತ್ಮಗುಪ್ತ ಸ್ವಾಮಿಭಕ್ತಾ ದೇವತಾ ಸಾ ನ ಮಾನುಷಿ ।**

- ***ಸ್ವರ್ಗ – ನರಕ ಇಲ್ಲಿಯೇ [ದಕ್ಷ 4/5] :***

ಯಾವ ಪುರುಷನಿಗೆ ಅನುಕೂಲ ಸತಿ ಇರುವಳೋ, ಅವನಿಗೆ ಇಲ್ಲಿಯೆ ಸ್ವರ್ಗ ಸುಖ. ಯಾರಿಗೆ ಪ್ರತಿಕೂಲ ಸತಿ ಇರುವಳೋ, ಅವನಿಗೆ ಇಲ್ಲಿಯೇ ನರಕವು.

**ಅನುಕೂಲಕಲತ್ರೋ ಯಃ ತಸ್ಯ ಸ್ವರ್ಗಃ ಇಹೈವ ಹಿ ।**
**ಪ್ರತಿಕೂಲ ಕಲತ್ರಸ್ಯ ನರಕೋ ನಾತ್ರ ಸಂಶಯಃ ॥**

- ***ಪತಿಪತ್ನಿಯರ ಅನುರಾಗ [ದಕ್ಷ 4/3–7] :***

ಗೃಹಸ್ಥಾಶ್ರಮ ಸುಖವನ್ನು ಹೊಂದಲು ಇದ್ದು, ಆ ಸುಖವು ಪತ್ನಿ, ಮೂಲವಾಗಿದೆ. ಇವಳು ಸರಿಯಿದ್ದರೆ ಮನೆಯಲ್ಲಿ ಸುಖ ಶಾಂತಿಯು.

ಗೃಹಸ್ಥಾಶ್ರಮ ಸುಖವಾಗಿರಲು ಪತಿಪತ್ನಿಯರಲ್ಲಿ ಪರಸ್ಪರ ಅನುರಾಗವಿರಬೇಕು. ಈ ಪರಸ್ಪರ ಅನುರಾಗ ಸ್ವರ್ಗದಲ್ಲಿಯೂ ದುರ್ಲಭವೇ.

**ಸ್ವರ್ಗೇऽಪಿ ದುರ್ಲಭಂ ಹ್ಯೇತದ್ ಅನುರಾಗಃ ಪರಸ್ಪರಂ ।**

ಪತ್ನಿಯು ಅನುರಕ್ತಳಾದರೆ, ಪತಿಯು ವಿರಕ್ತನಾದರೆ ಸುಖವೆಲ್ಲಿಂದ?

**ರಕ್ತ ಏಕೋ ವಿರಕ್ತೋऽನ್ಯಃ ತಸ್ಮಾತ್ ಕಷ್ಟತರಂ ನು ಕಿಮ್ ।**

- ***ವಿನೀತಳಾದರೆ ಗೌರವ [ದಕ್ಷ 4/14] :***

ಶಿಷ್ಯ, ಪುತ್ರ, ಭಾರ್ಯಾ, ದಾಸ ಇವರೆಲ್ಲರೂ ಯಾರಿಗೆ ವಿನೀತರಾಗಿರುವರೋ ಅವನಿಗೆ ಲೋಕದಲ್ಲಿ ಗೌರವ.

**ಯಸ್ಯೈತಾನಿ ವಿನೀತಾನಿ ತಸ್ಯ ಲೋಕೇ ಹಿ ಗೌರವಂ ।**

ಕಾತ್ಯಾಯನರು [19/7] – ಪತಿಯು ತನ್ನ ಆದೇಶ ಪಾಲಿಸಿದರೆ ಎಷ್ಟು ಸಂತುಷ್ಟನಾಗುವನೋ ಅಷ್ಟು ಅವಳ ಪ್ರಸಿದ್ಧಿ, ತಪಸ್ಸು, ವ್ರತಾದಿಗಳಿಂದ ಸಂತುಷ್ಟನಾಗಲಾರ.

**ನ ಹಿ ಖ್ಯಾತ್ಯಾ ನ ತಪಸಾ ಭರ್ತಾ ತುಷ್ಯತಿ ಯೋಷಿತಾಂ ।**
**ಭರ್ತುರಾದೇಶ ವರ್ತಿನ್ಯಾ ಯಥೋಮಾ ಬಹುಭಿರ್ವ್ರತೈ ॥**

ಹೀಗಾಗಿ ಸ್ತ್ರೀಯು ಸೌಭಾಗ್ಯಕ್ಕಾಗಿ ಆಜ್ಞಾಪಾಲನ ಅವಶ್ಯವು.

**ಶಂಖಸ್ಮೃತಿ [4/15]**– ಪತ್ನಿಯನ್ನು ಪತಿಯು ಮಕ್ಕಳಂತೆ ಲಾಲನೆಯನ್ನೂ ಮಾಡಬೇಕು. ಅವಶ್ಯವಿದ್ದರೆ ದಂಡಿಸಲೂ ಬೇಕು. ಹೀಗೆ ಲಾಲಿತಳೂ, ತಾಡಿತಳೂ, ಆದ ಸ್ತ್ರೀಯು ಶ್ರೀಯಂತೆ ಆಗುವಳು. ಕೇವಲ ಶಿಕ್ಷೆಯೆ ಆಗಲೀ, ಕೇವಲ ಮುದ್ದಿಸುವುದರಿಂದಲ್ಲವು.

**ಲಾಲಿತಾ ತಾಡಿತಾ ಚೈವ ಸ್ತ್ರೀ ಶ್ರೀರ್ಭವತಿ ನಾನ್ಯಥಾ ।**

**ಪತಿವ್ರತೆ ಮಹತ್ವ :** ಪತಿವ್ರತೆಯು ಮನೆಯಲ್ಲಿದ್ದರೆ ಯಜ್ಞಾದಾನ ಮೊದಲಾದ ಷಟ್ಕರ್ಮ ನಡೆಯಲು ಸಾಧ್ಯ. ಪತಿವ್ರತೆಯು ಪಾಪಿಷ್ಠ ಗಂಡನನ್ನೂ ಸುಮತಿಯಂತೆ ಉದ್ಧರಿಸುವಳು. ಪತಿಪತ್ನಿಯರು ಏಕೋಭಾವಿ ಇಷ್ಟಗಳೆಲ್ಲ ಸಿದ್ಧಿಸುವುವು. ಈ ಏಕತೆವುಳ್ಳ ಪತಿಪತ್ನಿಯರಲ್ಲಿ ಪತಿಯು ಮೃತನಾದಾಗ ಪತ್ನಿಯೂ ಚಿತೆಯೇರುವಳು. ಇಂತಹ ಪತ್ನಿಯೂ ಯಾವುದೇ ಲೋಕ ಹೊಂದಿದರೂ ಅಲ್ಲಿ ತನ್ನ ಪತಿಯನ್ನು ಪಡೆಯುವಳು. ಪತಿವ್ರತೆಯು ನೀಚ ಪತಿಯನ್ನು ಉದ್ಧರಿಸುವಳು. 'ಪತಿವ್ರತೆಯು ಒಂದು ರೀತಿ ತೀರ್ಥ'ವಿದ್ದಂತೆ ತೀರ್ಥದಂತೆ ಇತರರನ್ನು ಪವಿತ್ರಗೊಳಿಸವಳು. ಇದೊಂದು ನಾರೀತೀರ್ಥ.

**ನಾರೀತೀರ್ಥಂ ಪತಿವ್ರತಾ ॥** –ವೃದ್ಧ *ಗೌತಮ 20/9*

ಸ್ತ್ರೀಯು ಸಾಧು/ಅಸಾಧು ಗುಣವುಳ್ಳ ಪತಿಯನ್ನು ಹೊಂದಿದಾಗ ಭರ್ತೃ ಸದೃಶ ಗುಣವನ್ನೇ ಹೊಂದುವಳು. ಹೇಗೆ ಸಿಹಿ ನೀರಿನ ನದಿಯು ಉಪ್ಪು ನೀರಿನ ಸಮುದ್ರವನ್ನು ಹೊಂದಿ ತಾನೂ ಕ್ಷಾರಜಲವೆ ಆಗುತ್ತಾಳೆ. ಹಾಗೆಯೇ ಅಕ್ಷಮಾಲಾಯೆಂಬ ಹೀನಜಾತಿಯಲ್ಲಿ ಜನಿಸಿ, ವಸಿಷ್ಠರಂತಹ ಉತ್ತಮರನ್ನು ಕೈಹಿಡಿದು ಪೂಜ್ಯತ್ವ ಹೊಂದಿದಳು.

**ಅಕ್ಷಮಾಲಾ ವಸಿಷ್ಠೇನ ಸಂಯುಕ್ತಾಽಧಮಯೋನಿಜಾ ।**
**ಯಾದೃಗ್ ಗುಣೇನ ಭರ್ತ್ರಾ ಸ್ತ್ರೀ ಸಂಯುಜ್ಯೇತ ಯಥಾವಿಧಿ ।**
**ತಾದೃಗ್ ಗುಣಾ ಸಾ ಭವತಿ ಸಮುದ್ರೇಣೇವ ನಿಮ್ನಗಾ ॥**

- ***ಸ್ತ್ರೀಯರು ಬ್ರಹ್ಮಚರ್ಯ [ಮನುವು 5–159] :***

ಪತಿಮೃತನಾದ ಮೇಲೆ ಬ್ರಹ್ಮಚರ್ಯದಿಂದ ಇದ್ದು ತಪಸ್ಸನ್ನಾಚರಿಸಿ ಪತಿಲೋಕ ಹೊಂದಬಹುದು. ಸನಕ ವಾಲಖಿಲ್ಯಾಗಳೂ ಸಹ ಸಂತಾನ ಹೊಂದಿರದಿದ್ದರೂ ತಮ್ಮ ಧರ್ಮದಿಂದಲೇ ಮುಕ್ತರಾದರು. ಮುಕ್ತಿಗೆ ಸಂತಾನ ಕಾರಣವಲ್ಲ.

- ***ಸ್ತ್ರೀ ರಕ್ಷಣೆ ಅವಶ್ಯ [ಮನುವು 8/359] :***

ಯಾವುದೇ ವರ್ಣದ ಸ್ತ್ರೀಯರನ್ನು ಸದಾ ರಕ್ಷಿಸಲೇಬೇಕು.

ಮನುವು [9/4]ರಲ್ಲಿ – ವಿವಾಹ ಕಾಲ ಬಂದೊಡನೆಯೇ ತಂದೆಯು ಋತುವಿಗಿಂತ ಮೊದಲು ವಿವಾಹ ಮಾಡದಿದ್ದರೆ ನಿಂದ್ಯನಾಗುವನು. ಈಗ ಹದಿನೆಂಟು ವರ್ಷಕ್ಕೆ ವಿವಾಹ ಮಾಡದಿದ್ದರೆ ನಿಂದ್ಯನಾಗುವನು. ಪತಿಯಾದರೂ ಋತುಕಾಲದಲ್ಲಿ ಸಂಗ ತ್ಯಜಿಸಿದರೆ ನಿಂದ್ಯನು. ಪತಿಯು ಮೃತನಾದಾಗ ತಾಯಿಯನ್ನು ರಕ್ಷಿಸದ ಪುತ್ರ ನಿಂದ್ಯನು.

**ಕಾಲೇಽದಾತಾ ಪಿತಾವಾಚ್ಯೋ ವಾಚ್ಯಶ್ಚಾನುಪಯನ್ ಪತಿಃ ।**
**ಮೃತೇ ಭರ್ತರಿ ಪುತ್ರಸ್ತು ವಾಚ್ಯೋ ಮಾತುರರಕ್ಷಿತಾಃ ॥**

ವಿಷ್ಣುಸ್ಮೃತಿ [3 ಅ] – ಸ್ತ್ರೀಯರನ್ನು, ಅನಾಥರನ್ನೂ, ಬಾಲಕರನ್ನೂ ರಾಜನೆ ರಕ್ಷಿಸಬೇಕು.

**ಬಾಲಾನಾಥ ಸ್ತ್ರೀಧನಾನಿ ಚ ರಾಜಾ ಪರಿಪಾಲಯೇತ್ ।**

ಯಾಜ್ಞವಲ್ಕ್ಯರು [8/141] – ಕ್ಲೀಬಷಂಡಾದಿಗಳ ಪುತ್ರಿಯರ ಭರಣ ಪೋಷಣೆ, ವಿವಾಹವಾಗುವವರೆಗೂ ರಕ್ಷಿಸಲ್ಪಡಬೇಕು.

ಹಾಗೆಯೇ ನಪುಂಸಕರಾದವರು ಪುತ್ರರಿಲ್ಲದ ಸಚ್ಚಾರಿತ್ರ್ಯವುಳ್ಳ ಪತ್ನಿಯರನ್ನು ಪರಿವಾರದರೇ ರಕ್ಷಿಸಬೇಕು.

**ಪತಿಪತ್ನಿಯರ ದೋಷ :** ಪತಿಗೆ ದೋಷವೆಂದರೆ ನಪುಂಸಕನಾಗಿ ಪತ್ನಿಯನ್ನು ಸಂತೋಷಪಡಿಸದಿರುವುದು.

ಪತ್ನಿಯರ ದೋಷಗಳು – ಅಪ್ರಸನ್ನಚಿತ್ತತೆ, ಪತಿಗೆ ದುಃಖ ನೀಡುವುದು. ಪತಿಯೊಂದಿಗೆ ಜಗಳ, ಪ್ರತಿಕೂಲ ವ್ಯವಹಾರ, ವಸ್ತ್ರ ಒಡವೆ ಧನಾದಿಗಳಿಗಾಗಿ ಮಾತ್ರ ಪತಿಯನ್ನು ಪ್ರೀತಿಸುವುದು. ನಂತರ ಪತಿಯನ್ನು ತ್ಯಜಿಸುವುದು. ವೃದ್ಧನಾದ ಪತಿಯನ್ನು ತಿರಸ್ಕರಿಸುವುದು, ನಿಂದಿಸುವುದು, ಬಿಡುವುದು. ಕಪಟ ಮಾತಿನಿಂದ ಪತಿಯ ಧನಾಪಹರಣ, ಕಶ್ಮಲ ಧೂಷಿತ ಮನಸ್ಸುಳ್ಳ, ರಾಜಸಗುಣವುಳ್ಳ ಸ್ತ್ರೀಯರು ನಿಂದನೀಯರು.

**ಅರ್ಧಾಂಗಿನೀ ಸ್ತ್ರೀ :** [ಬೃಹಸ್ಪತಿ 25'14], ಶತಪಥ [5.2.1.10], ತೈತ್ತರೀಯ [6/1/8.5]ರಲ್ಲಿ ಸ್ತ್ರೀಯನ್ನು ಅರ್ಧಾಂಗಿ ಎನ್ನಲಾಗಿದೆ. ಪುರುಷನ ಅರ್ಧಶರೀರವೆಂದೂ ಪುಣ್ಯಭಾಗಿಯೆಂದೂ ಹೇಳಲಾಗಿದೆ. [ಭೃಗು 5/4]

**ಭಾರ್ಯಾ ಭರ್ತುಃ ಶರೀರಾರ್ಧಮ್ ।**

- ***ಸ್ತ್ರೀಗೆ ಸರ್ವರೂ ಗೌರವಿಸಬೇಕು :***

ಮನು [3/55], ಯಾಜ್ಞವಲ್ಕ್ಯರು [1/82] – ಸ್ತ್ರೀಯರಿಗೆ ಸರ್ವರೂ ಸರ್ವ ರೀತಿಯಿಂದಲೂ ಗೌರವ ನೀಡಬೇಕು. ಕನ್ಯಾಪಿತ, ಅಣ್ಣ, ಪತಿ, ಮೈದುನಾದಿಗಳು ಆದರ–ಸತ್ಕಾರ ನೀಡಬೇಕು. ವಸ್ತ್ರಾಲಂಕಾರಗಳನ್ನು ನೀಡುತ್ತಿರಬೇಕು.

**ಬಂಧುಭಿಶ್ಚ ಸ್ತ್ರೀಯಃ ಪೂಜ್ಯಾಃ ಭೂಷಣಾಚ್ಛಾದನಾಶನೈಃ ।**

ಮನುವು [3.56] ಯಾವ ಕುಲದಲ್ಲಿ ಸ್ತ್ರೀಯರು ಗೌರವಿಸಲ್ಪಡುತ್ತಾರೋ ಅಲ್ಲಿ ದೇವತೆಗಳು ಪ್ರಸನ್ನತೆಯಿಂದ ಇರುತ್ತಾರೆ.

ಸ್ತ್ರೀಯರಿಗೆ ಗೌರವಾದರಗಳಿಲ್ಲದ ಕುಲದಲ್ಲಿ ನಡೆದ ಸರ್ವಕರ್ಮಗಳು ನಿಷ್ಫಲವಾಗುತ್ತವೆ.

**ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಃ ತತ್ರಾಫಲಾ ಕ್ರಿಯಾಃ ।**

ಮನುವೆ [3/56]ರಲ್ಲಿ –ಯಾವ ಕುಲದಲ್ಲಿ ಸ್ತ್ರೀಯರು, ಸೊಸೆ, ತಂಗಿ, ಕನ್ಯೆ ಮೊದಲಾದವರು ಕಣ್ಣೀರಿಟ್ಟರೆ, ಅ ಕುಲ ಏಳಿಗೆ ಹೊಂದದೆ ನಾಶವಾಗುತ್ತದೆ. ಸಂತೋಷ ಪಡುವ ಕುಲವು ಏಳಿಗೆ ಹೊಂದುತ್ತವೆ ಎಂದಿರುವನು.

**ನ ಶೋಚಂತಿ ಯತ್ರೈತಾಃ ವರ್ಧತೇ ತದ್ಧಿ ಸರ್ವದಾ ।**

ಸ್ತ್ರೀಯರು ಸತ್ಕಾರ ಹೊಂದದೆ ಶಾಪ ನೀಡಿದರೆ ಆ ಮನೆಯು ಮಾಟ ಮದ್ದು ಮಾಡಿದ ಮನೆಗೆ ಸಮಾನವಾಗಿರುತ್ತದೆ. ತನ್ನ ಮನೆ ಉನ್ನತ ಸ್ಥಿತಿ ಹೊಂದುವಾಭಿಲಾಷೆಯವನು, ಸ್ತ್ರೀಯರಿಗೆ ಗೌರವವನ್ನು, ಉತ್ಸವಾದಿಗಳಲ್ಲಿ ವಸ್ತ್ರ ಧನ ಆಭರಣಾದಿಗಳಿಂದ ಸಂತೋಷಪಡಿಸಬೇಕು.

ಯಾವ ಕುಲದಲ್ಲಿ ಪತಿಯಿಂದ ಪತ್ನಿ, ಪತ್ನಿಯಿಂದ ಪತಿ ಸಂತೋಷವಾಗಿರುತ್ತಾರೋ ಆ ಕುಲ ಅವಶ್ಯಕವಾಗಿ ಕಲ್ಯಾಣದಿಂದ ಕೂಡಿರುತ್ತದೆ [ಮನು 3/60]

ಹೀಗೆ ವಸ್ತ್ರಾಲಂಕಾರಾದಿಗಳಿಂದ ಅಲಂಕೃತ ಸ್ತ್ರೀಯರು ಪತಿಯನ್ನು ಸಂತೋಷಗೊಳಿಸುವರು. ಅನ್ಯಥಾ ಇಲ್ಲ. ಸಂತುಷ್ಟ ಸ್ತ್ರೀಯರೊಂದಿಗೆ ಪ್ರೀತಿಯ ಫಲವಾದ ಸಂತಾನಿದಿಗಳು.

ಪತಿ ಪತ್ನಿಯರು – ಸಂಸಾರ ರಥದ ಎರಡು ಗಾಲಿಗಳಂತೆ ಪರಸ್ಪರ ಚಿತ್ತಾನುಕೂಲ್ಯದಿಂದ ಇದ್ದರೆ ಧರ್ಮಾರ್ಥ ಕಾಮಗಳಿಗೆ ಮುಕ್ತ ಅವಕಾಶ ದೊರೆತಂತೆ.

**ಯತ್ರಾನುಕೂಲ್ಯಂ ದಂಪತ್ಯೋಃ ತ್ರಿವರ್ಗಸ್ತತ್ರ ವರ್ಧತೇ ।**

- ***ಸ್ತ್ರೀಯರಿಂದ ಇಹ–ಪರಗತಿ :***

ಈ ಲೋಕದಲ್ಲಿ ಸ್ತ್ರೀಯರು ಪುತ್ರ ಪೌತ್ರ ಪ್ರಪೌತ್ರಾದಿ ವಂಶವೃದ್ಧಿಯನ್ನೂ, ಧರ್ಮಕ್ಕೆ ಅನುಕೂಲಳಾಗಿ ಸ್ವರ್ಗಕ್ಕೂ ಗತಿಯಾಗಿರುವಳು [ಯಾಜ್ಞ 1/78]

**ಲೋಕಾನಂತ್ಯಂ ದಿವಃ ಪ್ರಾಪ್ತಿಃ ಪುತ್ರ ಪೌತ್ರ ಪ್ರಪೌತ್ರಕಾಃ ।**
**ಯಸ್ಮಾತ್ ತಸ್ಮಾತ್ ಸ್ತ್ರಿಯಃ ಸೇವ್ಯಾಃ ಕರ್ತವ್ಯಾಶ್ಚ ಸುರಕ್ಷಿತಾಃ ॥**

ಸ್ತ್ರೀಯರ ಪಾವಿತ್ರ್ಯತೆ [ವಸಿಷ್ಠ 28/6, ಬೌಧಾ 2/2/64]ರಲ್ಲಿ – ಚಂದ್ರನು ಸ್ತ್ರೀಯರಿಗೆ ಪಾವಿತ್ರ್ಯತೆಯನ್ನೂ, ಗಂಧರ್ವರು ಮಧುರ ವಾಣಿಯನ್ನು, ಅಗ್ನಿದೇವನು ಸರ್ವಭಕ್ಷತ್ವವನ್ನೂ ನೀಡಿರುವನು.

**ಸೋಮಃ ಶೌಚಂ ದದೌ ತಾಸಾಂ ಗಂಧರ್ವ ಶಿಕ್ಷತಾಂ ಗಿರಮ್ ।**

**ಅಗ್ನಿಶ್ಚ ಸರ್ವಭಕ್ಷತ್ವಂ ತಸ್ಮಾನ್ನಿಷ್ಕಲ್ಮಶಾಃ ಸ್ತ್ರಿಯಃ ।**

ಮನುವು [9/18]ರಲ್ಲಿ – ಸ್ತ್ರೀಯರಿಗೆ ಮಂತ್ರ ಸಹಿತವಾಗಿ ಜಾತಕರ್ಮಾದಿ ಸಂಸ್ಕಾರಗಳಿಲ್ಲವಾಗಿ ಅಸತದಷ್ಟೆ ಅಪವಿತ್ರರೆಂದಿರುವನು.

**ಹ್ಯಮಂತ್ರಾಶ್ಚ ಸ್ತ್ರಿಯೋಽನೃತಮಿತಿ ಸ್ಥಿತಿಃ ।**

ಬೋಧಾಯನರು [2/2/23] – ಸ್ತ್ರೀಯರಿಗೆ ಪಿತೃ ಆಸ್ತಿಯಲ್ಲಿ ಭಾಗವಿಲ್ಲ. ವೈದಿಕ ಮಂತ್ರಗಳಲ್ಲಿಯೂ ಅಧಿಕಾರವಿಲ್ಲ.

ಗಂಡನ ಹಿತ ಕಾರ್ಯ ಮಾಡಿದರೆ ಸಾಕು.

**ಸ್ವರ್ಗ ಪ್ರಾಪ್ತಿ –**

**ನಿರಿಂದ್ರಿಯಾಃ ಹ್ಯದಾಯಾಶ್ಚ ಸ್ತ್ರಿಯೋ ಮತಾ ಇತಿ ಶ್ರುತಿ ।**

**ಭರ್ತೃಹಿತೇ ಯತಮಾನಾಃ ಸ್ವರ್ಗಂ ಲೋಕಂ ಜಯೇರನ್ ॥**

***ಸ್ತ್ರೀಯರ ಪಾರತಂತ್ರತೆ :***

ಪ್ರಾಚೀನ ಕಾಲದಿಂದಲೂ ಸ್ತ್ರೀಯರಿಗೆ ಸ್ವಾತಂತ್ರ್ಯ ನಿಷೇಧಿಸಲಾಗಿದೆ.

**ಅಸ್ವತಂತ್ರಾ ಸ್ತ್ರೀ ಪುರುಷ ಪ್ರಧಾನಾ ।**

ಬೋಧಾಯನರು [2/2/50] – **'ಅಸ್ವತಂತ್ರಾಃ ಸ್ತ್ರಿಯಃ' 'ನ ಸ್ತ್ರೀ ಸ್ವಾತಂತ್ರ್ಯಂ ವಿದ್ಯತೇ'** (ವಸಿಷ್ಠ 51)

ಇದರರ್ಥ : ಬಾಲ್ಯದಿಂದ ಹಿಡಿದು ವೃದ್ಧಾಪ್ಯದವರೆಗೂ ತನ್ನ ಸ್ವಂತ ಇಚ್ಛೆಯಿಂದ ಯಾವುದೇ ಕರ್ಮ ಮಾಡುವಂತಿಲ್ಲ. ಹೀಗೆಲ್ಲ, ಅಡಿಗೆ ಅವರಿಚ್ಛೆಯಂತೆ, ಮಕ್ಕಳಿಗೂ ಓದು ಮೊದಲಾದವುಗಳಲ್ಲಿ ಸ್ತ್ರೀಯರದೆ ಪ್ರಧಾನ ಪಾತ್ರ. ಈಗಿನ ಕಾಲದಲ್ಲಂತೂ ಅವರ ಇಚ್ಛೆಯಂತೆಯೆ ಓದು, ಉದ್ಯೋಗ ಪತಿಯನ್ನು ಆರಿಸುವುದು ಇತ್ಯಾದಿ ನಡೆಯುತ್ತಿದೆ.

ಸ್ತ್ರೀಯರು ಅಮೂಲ್ಯವಾದ ವಜ್ರದಂತಿದ್ದು ಬಾಲ್ಯ, ಯೌವ್ವನ, ವೃದ್ಧಾಪ್ಯಗಳಲ್ಲಿಯೂ ಪುರುಷರ ರಕ್ಷಣೆಯಲ್ಲಿರಬೇಕು ಎಂದು.

ಕನ್ಯೆಯನ್ನು ತಂದೆಯೂ, ವಿವಾಹಾನಂತರ ಪತಿಯು, ವೃದ್ಧಾಪ್ಯದಲ್ಲಿ ಪುತ್ರರೂ, ಪುತ್ರಾದಿಗಳಿಲ್ಲದಿರುವಾಗ ಸ್ತ್ರೀಯು ಬಂಧುಬಾಂಧವರು ರಕ್ಷಿಸುತ್ತಿರಬೇಕು. ಬಂಧುಗಳೂ ಇಲ್ಲದಿರುವಾಗ ಆ ದೇಶದ ರಾಜನೇ ಅವರಿಗೆ ರಕ್ಷಕನಾಗಬೇಕು.

**ಪಕ್ಷದ್ವಯಾವಸಾನೇ ತು ರಾಜಾ ಭರ್ತುಃ ಪ್ರಭುಃ ಸ್ತ್ರಿಯಾ ।**

ರಾಜನೂ ಅವಳನ್ನು ಭರಣ ಪೋಷಣಾದಿಗಳಿಂದ ರಕ್ಷಿಸುತ್ತಿದ್ದು. ಇವಳು ಧರ್ಮಚ್ಯುತಳಾದಾಗ ನಿಗ್ರಹ ಮಾಡಬಹುದು.

**ನಿಗೃಹ್ಣೀಯಾತ್ ಪಥಚ್ಯುತಾಂ ।**

ಪತಿಯು ಇಲ್ಲದಿರುವ ಅಥವಾ ಸನ್ನಿಹಿತನಾಗದಿರುವ ಪತ್ನಿಯು ಒಬ್ಬಂಟಿಗಳಾಗಿ ಇರಬಾರದು. ಸಾವಿರ ವಕ್ರದೃಷ್ಟಿಗಳು ವಕ್ರವಾಗಿ ನೋಡುತ್ತಿರುತ್ತವೆ. ರಕ್ಷಕರು ಹಿಂದೆ ಮುಂದೆ ಇಲ್ಲವಾದರೆ ಇವಳ ಶೀಲ ಉಳಿಯಲಾರದು. ಭರ್ತೃವಿನ ಅಸನ್ನಿಧಾನದಲ್ಲಿ ಪಿತ್ರಾದಿಗಳ ರಕ್ಷಣೆಯಲ್ಲಿರಬೇಕು.

**ಭರ್ತುರಸನ್ನಿಧೌ ಪಿತ್ರಾದಿರಹಿತಾ ಸ್ತ್ರೀ ಭವೇದಿತಿ ।**

ಬೃಹತ್ ಪರಾಶರದಲ್ಲಿ [6/60] – ಸ್ತ್ರೀಯರಿಗೆ ಸ್ವಾತಂತ್ರ್ಯ ನೀಡಿದರೆ ಕುಲೀನ ವಧುಗಳೂ ಕೂಡ ಶೀಲವನ್ನು ಕಳೆದುಕೊಳ್ಳುವುದು ಸಹಜ. ಅದಕ್ಕಾಗಿಯೇ ತಂದೆ, ಗಂಡ, ಪುತ್ರ, ಬಂಧು, ರಾಜಾದಿಗಳಿಂದ ರಕ್ಷಿಸಲ್ಪಡಬೇಕು.

**ಸ್ವಾತಂತ್ರ್ಯೇಣ ವಿನಶ್ಯಂತಿ ಕುಲಜಾ ಅಪಿ ಯೊಷಿತಃ ।**

ಮನುವು – ಸ್ತ್ರೀಯು ತನ್ನ ತಂದೆ, ಪತಿ, ಪುತ್ರರಿಂದ ಹೊರತು ಪ್ರತ್ಯೇಕವಾಗಿ ಇರಲು ಇಚ್ಛಿಸಿದರೆ ಇವರ ರಕ್ಷಣೆ ಇಲ್ಲದ ಸ್ತ್ರೀಯು ಸ್ವೇಚ್ಛಾಚಾರಿಯಾಗಿ ವರ್ತಿಸಿ ಹುಟ್ಟಿದ ಕುಲ, ಮೆಟ್ಟಿದ ಕುಲವನ್ನು ನಿಂದಿತವನ್ನಾಗಿ ಮಾಡುವಳು.

ಮನವು [9/14–15] ಸ್ತ್ರೀಯರ ಸ್ವಭಾವದ ಬಗ್ಗೆ ಹೇಳುತ್ತಾ ಸ್ತ್ರೀಯರು ಕಾಮಿಗಳು, ಚಪಲತೆ, ಪ್ರೇಮ ರಹಿತರೂ, ಪತಿಗೂ ದ್ರೋಹ ಬಗೆಯುವವರೂ, ಪರಪುರಷರನ್ನೂ ಪ್ರೇಮಿಸುವವರೂ ಆಗಿರುತ್ತಾರೆ.

**ಪೌಂಶ್ಚಲ್ಯಾಚ್ಚಲಚಿತ್ತಾಚ್ಚ ನೈಃಸ್ನೇಹ್ಯಾಚ್ಚ ಸ್ವಭಾವತಃ ।**
**ರಕ್ಷಿತಾ ಯತ್ನತೋಽಪೀಹ ಭರ್ತೃಷ್ವೇತಾ ವಿಕುರ್ವತೇ ॥**

ಇವರು ಸುಂದರ /ಕುರೂಪಿ ಎಂದು ವಿಚಾರಿಸಲಾರರು. ಯಾವ ವಯಸ್ಸು ಎಂದೂ ವಿಮರ್ಶಿಸಲಾರರು, ಪುಮಾನ್ ಪುರುಷನಾಗಿದ್ದರೆ ಸಾಕು.

**ನೈತಾಂ ರೂಪಂ ಪರೀಕ್ಷಂತೇ ನಾಸಾಂ ವಯಸಿ ಸಂಸ್ಥಿತಿಃ ।**
**ಸುರೂಪಂ ವಾ ವಿರೂಪಂ ವಾ ಪುಮಾನಿತ್ಯೇವ ಭುಂಜತೇ ॥**

ಈ ಸ್ವಭಾವವಿದ್ದು ಇದರೊಂದಿಗೆ ಸ್ವಾತಂತ್ರ್ಯವನ್ನೂ ನೀಡಿದರೆ ವರ್ಣಸಾಂಕರ್ಯದಿಂದಾಗಿ ಪಿತೃಗಳೆಲ್ಲ ಲುಪ್ತ ಪಿಂಡೋದಕ ಕ್ರಿಯೆವುಳ್ಳವರಾಗುತ್ತಿದ್ದರು. ಅದಕ್ಕಾಗಿಯೇ ತಂದೆ, ಗಂಡ, ಪುತ್ರರು ಇವರ ಮೇಲೆ ಮಹಾನಿಗವಿಟ್ಟಿರಬೇಕು ಎನ್ನಲಾಗಿದೆ.

**ಪರಮಂ ಯತ್ನ ಮಾತಿಷ್ಠೇತ್ ಪುರಷೋ ರಕ್ಷಣಂ ಪ್ರತಿ** –ಮನುವು [7–43] ಆಪತ್ತಿಗಾಗಿ ಧನವನ್ನು ಇಟ್ಟಿರಬೇಕು. ಧನದ ಮೂಲಕ ಸ್ತ್ರೀಯರ ರಕ್ಷಣೆ ನಡೆಯಬೇಕು. ಧನ ಹಾಗೂ ಸ್ತ್ರೀಯರಿಂದ ತನ್ನನ್ನು ರಕ್ಷಿಸಿಕೊಳ್ಳಬೇಕು.

- ***ತಾಯಿಯ ಮಹತ್ವ :***

ಸ್ಮೃತಿಗಳಲ್ಲಿ ಮಾತೃವಿನ ಬಗ್ಗೆ ಅವಳನ್ನೂ ಗೌರವಿಸುವುದರ ಬಗೆ ಬಹಳಷ್ಟು ನಿರೂಪಣೆಗಳಿವೆ. ತಾಯಿಯು ಸರ್ವಶ್ರೇಷ್ಠಳಾಗಿರುವಳು ಗೌತಮ [2/56]ಹೇಳಿದೆ.

ಆಪಸ್ತಂಭ ಧರ್ಮಸೂತ್ರ [1/10/18/9]ರಲ್ಲಿ –ಪುತ್ರನು ತನ್ನ ತಾಯಿಯ ಸೇವೆಯನ್ನು ಸರ್ವರೀತಿಯಿಂದಲೂ ಮಾಡಬೇಕು. ಏಕೆಂದರೆ ಇವನಿಗಾಗಿ ತಾಯಿಯು ಬಹುಕಷ್ಟಗಳನ್ನು ಪಟ್ಟಿರುತ್ತಾಳೆ. ಇವಳು ನೀತಿಗೆಟ್ಟರು ಮಗನ ಸೇವೆ ನಿರಂತರವಾಗಿರಬೇಕು.

**ಮಾತಾ ಪುತ್ರಸ್ಯ ಭೂಯಾಂಸಿ ಕರ್ಮಾಣ್ಯರಭತೇ ಸದಾ ।**
**ತಸ್ಯಾಂ ಶುಶ್ರೂಷಾ ನಿತ್ಯಾ ಮಾತರಂ ಪತಿತಾಯಾಮಪಿ ಸ್ಯಾತ್ ।**

ಪತಿತಳೆಂದು ಹೀಯಾಳಿಸದೆ ತನಗಾಗಿ ದೇಹವನ್ನೇ ಬಲಿಕೊಟ್ಟ ತಾಯಿಯ ಸೇವೆ ಭಕ್ತಿಯಿಂದಲೇ ಮಾಡಬೇಕು.

**ಪತಿತಾಮಪಿ ತು ಮಾತರಂ ಬಿಭೃಯಾದನಭಿಭಾಷಮಾಣಃ ।**
*–ಬೌಧಾಯನ [2/2/48]*

ವಸಿಷ್ಠರು [13/15] –ತಂದೆಯು ಪತಿತನೊ ಭ್ರಷ್ಟನೋ ಆದರೆ ಅವನನ್ನು

ತ್ಯಜಿಸಬಹುದು. ಆದರೆ ತಾಯಿಯು ಪತಿತಳಾದರೂ ಅವಳ ತ್ಯಾಗ ಸಲ್ಲದು. ತಾಯಿಯು ಪುತ್ರನಿಗೆ ಎಂದು ಪತಿತಳಾಗುವುದಿಲ್ಲ, ಶುದ್ಧಳೇ .

**ಪತಿತಃ ಪಿತಾ ಪರಿತ್ಯಾಜ್ಯಃ ಮಾತಾ ತು ನ ।**
**ಮಾತಾ ಪುತ್ರೇ ನ ನ ಪತಿತಿ ॥**

ಉಪಾಧ್ಯಾಯರಿಗಿಂತಲೂ ಆಚಾರ್ಯರು ಹತ್ತು ಪಟ್ಟು ಶ್ರೇಷ್ಠರು. ನೂರು ಆಚಾರ್ಯರಿಗಿಂತಲೂ ತಂದೆಯು ಉತ್ತಮನು, ಸಾವಿರ ತಂದೆಗಿಂತಲೂ ತಾಯಿಯು ಹೆಚ್ಚು ಗೌರವಕ್ಕೆ ಪಾತ್ರಳು.

**ಸಹಸ್ರಂ ತು ಪಿತೃನ್ ಮಾತಾ ಗೌರವೇಣಾತಿರಿಚ್ಯತೇ ।**

ತಂದೆ– ತಾಯಿಗಳ ಮಧ್ಯೆ ವಿವಾದ ನಡೆಯುತ್ತಿರುವಾಗ ಯಾವುದೇ ಒಂದು ಪಕ್ಷ ಹಿಡಿಯಬಾರದು. ಏಕೆಂದರೆ ಲೌಕಿಕ ವಿಷಯದಲ್ಲಿ ತಾಯಿಯು ತಂದೆಗಿಂತಲೂ ಹೆಚ್ಚು ಗೌರವ ಪಾತ್ರಳು. ಗರ್ಭದಲ್ಲಿ ಧರಿಸುವುದು, ಹೊರುವುದು, ಹೆರುವುದು, ಪೋಷಿಸುವುದು ಪ್ರಾಥಮಿಕ ಶಿಕ್ಷಣ ತಾಯಿಯಿಂದಲೇ. ಆದರೆ ಗಾಯತ್ರ್ಯಾದಿ ಉಪದೇಶಾದಿಗಳಿಂದ ಪಾರಲೋಕಿಕವಾಗಿ ತಂದೆಯೇ ಶ್ರೇಷ್ಠನು. ಇದಕ್ಕಾಗಿಯೇ ತಾಯಿಯ ತಲೆಯನ್ನು ತೆಗೆ ಎಂದು ಜಮದಗ್ನಿ ಹೇಳಿದಾಗ ತಲೆ ತೆಗೆದು ಹಾಕಿದ. ಶ್ರೀರಾಮನು ಕೌಸಲ್ಯೆಯು ನೀನು ಕಾಡಿಗೆ ಹೋಗಬೇಡ ಎಂದರೂ ಪಿತೃವಚನವನ್ನೇ ಪಾಲಿಸಿದ.

ಅನುಶಾಸನ ಪರ್ವ [105/14–16]ದಲ್ಲಿ – ಹತ್ತು ತಂದೆಗಳಿಗಿಂತಲೂ ತಾಯಿಯ ಮಹತ್ವ ಅಧಿಕ. ಸರ್ವವನ್ನೂ ಹೊತ್ತಿರುವ ಭೂಮಿಗಿಂತಲೂ ತಾಯಿ ಗುರುಭೂತಳು.

**ಮಾತಾ ಗುರುತರಾ ಭೂಮೇಃ ।**

ಆದಿಪರ್ವ [37/4] – ಯಾವುದೇ ಮಹಾಶಾಪಗಳಿಗೆ ಪ್ರಾಯಶ್ಚಿತ್ತ– ವಿರಬಹುದು. ಆದರೆ ತಾಯಿಯ ಶಾಪದಿಂದ ಬಿಡುಗಡೆ ಅಸಾಧ್ಯ.

**ಸರ್ವೇಷಾಂ ಪಾಪಾನಾಂ ಪ್ರತಿಘಾತೋಹಿ ವಿದ್ಯತೇ ।**
**ನ ತು ಮಾತ್ರಾಭಿಶಪ್ತಾನಾಂ ಮೋಕ್ಷಃ ಕ್ವಚನ ವಿದ್ಯತೆ ॥**

ಮಗನ ಜನ್ಮಕ್ಕಾಗಿ ತಂದೆ ತಾಯಿಗಳು ಎಷ್ಟು ಕ್ಲೇಶ ಪಟ್ಟಿರುವಿರೋ ಅದನ್ನು

ಮಗನು ನೂರು ವರ್ಷ ಸೇವಿಸಿದರೂ ಋಣ ಮುಕ್ತನಾಗಲಾರ. ಹೀಗಾಗಿ ತಂದೆ, ತಾಯಿ, ಗುರು ಈ ಮೂವರನ್ನೂ ಪ್ರಸನ್ನಗೊಳಿಸಬೇಕು. ಇವರು ಸಂತುಷ್ಟರಾದರೆ ತಪಸ್ಸೆಲ್ಲ ಪೂರ್ಣವಾಯಿತೆಂದೆ ಅರ್ಥ.

**ತಪಃ ಸರ್ವಂ ಸಮಾಪ್ಯತೇ ॥**

ಮೂರು ಅಗ್ನಿಗಳಲ್ಲಿ ತಂದೆಯು ಗಾರ್ಹಪತ್ಯಾಗ್ನಿ, ತಾಯಿಯು ದಕ್ಷಿಣಾಗ್ನಿ, ಗುರುವು ಆಹವನೀಯಾಗ್ನಿ ಎನಿಸಿರುವರು. ಇವರ ಭಕ್ತ್ಯಾಯಾದರ ಪೂರ್ವಕ ಗೌರವಾದಿಗಳಿಂದ ಯಜ್ಞ ಮಾಡಿದ ಫಲವು ಎಂದರ್ಥ.

ಮಾತೃ ಭಕ್ತಿಯಿಂದ ಭೂಲೋಕವೂ, ಪಿತೃ ಭಕ್ತಿಯಿಂದ ಅಂತರಿಕ್ಷಲೋಕವೂ, ಗುರುಭಕ್ತಿಯಿಂದ ಸ್ವರ್ಗಲೋಕವು ಲಭಿಸುವುದು.

ಇವರ ಪೂಜೆ ಗೌರವಾದರಗಳಿಲ್ಲದೆ ಇವನ ಸಕಲ ಕರ್ಮಗಳೂ ನಿಷ್ಫಲಗಳೇ [ಶಂಕ 3/3]

**ಮಾತಾ ಪಿತಾ ಗುರುಶ್ಚೈವ ಪೂಜನೀಯಾ ಸದಾ ನೃಣಾಮ್**
**ಕ್ರಿಯಾಃ ತಥಾऽಫಲಾಃ ಸರ್ವಾಃ ಯಸ್ಯೈತೇऽನಾದೃತಾಸ್ತ್ರಯಃ ॥**

ತಾಯಿಗಿಂತ ದೇವರು, ತಂದೆಗಿಂತ ಗುರು ಬೇರೊಬ್ಬರಿಲ್ಲ. ಇವರಿಗೆ ಯಾವುದೇ ಪ್ರತ್ಯುಪಕಾರ ಸಾಧ್ಯವಿಲ್ಲ. ಆದರೂ ಮನಸ್ಸು ಮಾತು ಕರ್ಮಗಳಿಂದ ಇವರನ್ನು ಸಂತೋಷಪಡಿಸಬೇಕು.

- ***ಸ್ತ್ರೀಯರ ದುರಾಚಾರ :***

ಗೌತಮರು (23/25) – ಸ್ತ್ರೀಯರು ಸತೀತ್ವ ನಷ್ಟ ಮಾಡಿಕೊಂಡರೆ ಅದಕ್ಕೆ ಪ್ರಾಯಶ್ಚಿತ್ತವಾಗಬೇಕು. ಹೀಗೆ ದಾರಿ ತಪ್ಪಿದ್ದರೂ ಅವಳಿಗೆ ವಸ್ತ್ರ ಭೋಜನಾದಿಗಳಿಂದ ರಕ್ಷಿಸಲೇಬೇಕು. ಅನ್ಯಥಾ ಸ್ವೇಚ್ಛಾಚಾರದಿಂದಾಗಿ ಪುನಃ ವ್ಯಭಿಚಾರಿಣೀಯಾಗುವ ಸಾಧ್ಯತೆ ಇದೆ. ಇದನ್ನೇ

**ನ ಸ್ತ್ರೀ ಸ್ವಾತಂತ್ರ್ಯಮರ್ಹತಿ** । ಎಂದಿದ್ದು.

ವ್ಯಭಿಚಾರಿಣೀ ಸ್ತ್ರೀಯು ಮನೆಯ ಅಧಿಕಾರ ಕಳೆದುಕೊಳ್ಳುವಳು. ಅಲ್ಪಾಹಾರ, ಸಾಮಾನ್ಯ ವಸ್ತ್ರ, ಚಾಪೆಯಲ್ಲಿ ಮಲಗುವುದು ಇವೆಲ್ಲ ವಿಧಿಸಿದ್ದು. ಇದು ಪ್ರಾಯಶ್ಚಿತ್ತ ರೂಪ ಮಾತ್ರ ಹೊರತು ನನಗೆ ಅಗೌರವವೆಂದು ತಿಳಿಯಬಾರದು.

ಪರರಿಂದ ಗರ್ಭ ಧರಿಸದಿದ್ದರೆ ಮಾತ್ರ ತಿಂಗಳು ರಜಸ್ವಲೆಯಾದಾಗ ರಜಸ್ಸು ಹೋದಾಗ ಇವಳ ಪಾಪವೂ ಹೋಗಿ ಶುದ್ಧರಾಗುವರೆಂದು, ಸ್ತ್ರೀಯು ಸಾಮಾನ್ಯವಾಗಿ ಪವಿತ್ರರೆ ಆಗಿರುತ್ತಾರೆ.

**ಪಾವಕಃ ಸರ್ವಮೇಧ್ಯತ್ವಂ ಮೇಧ್ಯಾವೈ ಯೋಷಿತೋ ಯತ್ ।**
**ವ್ಯಭಿಚಾರಾದೃತೌ ಶುದ್ಧಿಃ ಗರ್ಭೇ ತ್ಯಾಗೋ ವಿಧೀಯತೇ ।**

ಆದರೆ ಸ್ತ್ರೀಯರು ಮಾನಸಿಕ ವ್ಯಭಿಚಾರ ಮಾಡಿದಾಗ ಮಾತ್ರ ರಜಸ್ಸಿನಿಂದ ಶುದ್ಧಿ ಹೊರತು ಬುದ್ಧಿಪೂರ್ವಕವಲ್ಲ.

**ರಜಸಾ ಸ್ತ್ರೀ ಮನೋದುಷ್ಟಾ ।**

ಇವಳು ಪ್ರಾಯಶ್ಚಿತ್ತ ಹೊಂದಿದರೆ ಮಾತ್ರ ಇವಳೊಂದಿಗೆ ಮಾತುಕತೆ ವ್ಯವಹಾರ.

ಮನೋ ವ್ಯಭಿಚಾರಿಣಿಯೂ ಮೂರು ದಿನ ಹಾಲನ್ನು ಮಾತ್ರ ಭುಂಜಿಸುತ್ತ ನೆಲದ ಮೇಲೆ ಮಲಗಬೇಕು.

**ಮನಸಾ ಭರ್ತೃರಭಿಚಾರೆ ಯಾವಕಂ ಕ್ಷೀರೋದನಂ ವಾ ಭುಂಜಾನಾಽಧಃ ಶಯೀತ** ॥ *–ಅಪ 98*

- ***ಶಾಸ್ತ್ರ ಹೇಳಿದಂತೆ ನಾರೀ*** *[ಬೃಹತ್ ಪರಾಶರ [5–195]] –*

**ಗೃಹಂ ಚ ಗೃಹಿಣೀಮಾಹುಃ** । ಎಂದು ಗೃಹಸ್ಥನಿಗೆ ನಾರಿಯು ಆಧಾರವೆಂದಿದೆ. ಗೃಹಿಣಿಯೇ ಗೃಹವೆನ್ನುತ್ತಿದೆ. ನಾರೀಯೆಂದರೆ ಅವಳೊಬ್ಬ ಭೋಗ ವಸ್ತುವಲ್ಲ. ಮನೆಯನ್ನು ರಕ್ಷಿಸುವ ಗೃಹಲಕ್ಷ್ಮಿಯು. **"ಸ್ತ್ರೀಯಃ ತುಷ್ಟಾಃ ಸಾಕ್ಷಾತ್ ಶ್ರಿಯಃ"** ಈ ಗೃಹಲಕ್ಷ್ಮಿಯು ಸಂತುಷ್ಟಳಾದರೆ, ಸಂಪದ್ ವೃದ್ಧಿ, ದುಃಖಿಗೊಂಡರೆ ಕುಲವೇ ನಿರ್ನಾಮ **'ವರ್ಧಯಂತಿ ಕುಲಂ ತುಷ್ಟಾಃ'**

ಸ್ತ್ರೀಯು ಸಂಪ್ರೀತಿಯಿಂದಾಗಿ ಆಯುರ್ಧನ ಕೀರ್ತಿ ಪುತ್ರಾದಿ ಸಂಪದಭಿವೃದ್ಧಿಯು. ಇವರು ಮುನಿದು ಶಾಪ ನೀಡಿದರೆ ಈ ಸಂಪತ್ತೆಲ್ಲ ನಾಶವಾಗುವವು.

- ***ಪತಿಯೇ ಸರ್ವಸ್ವ :***

ಸ್ತ್ರೀಗೆ ತನ್ನ ಪತಿಯೇ ಸರ್ವಸ್ವ, ಅವನಿದ್ದರೆ ಅಲಂಕಾರ, ಗೌರವ, ಧರ್ಮ, ಸಂತಾನ, ಏಳಿಗೆ ಹೊರತು ಅವನಿಲ್ಲದೆ ಮುಖ ತೋರಿಸಲೂ ಬಾರದು.

ಸ್ತ್ರೀಯು ಪತಿಯ ಭಕ್ತಳೂ, ಸದಾಚಾರಿಯೂ, ಸುಶೀಲಳೂ ಅತಿಥಿ ಸೇವೆ, ಪರರಿಗೆ ಯಥಾಶಕ್ತಿ ಉಪಕಾರ ಮಾಡಬೇಕು. ಬೌಧಾಯನ [2/2/61]

- ***ಸ್ತ್ರೀಯರಿಗೂ ಶಿಕ್ಷಣ :***

ಸ್ತ್ರೀಯರೂ ವಿವಿಧ ಕಲೆಗಳಲ್ಲಿ ಶಿಕ್ಷಣೆಯನ್ನು ಸ್ಮೃತಿ ವಿಧಿಸಿದೆ. ಸಂಧ್ಯಾ, ಉಪಾಸನೆ, ಯಜ್ಞ ವ್ರತ ಇತ್ಯಾದಿ ಮಾಡುತ್ತಿರಬೇಕು. ಇಂತವಳ ಜೀವನ ಸುಖಮಯವೆಂದಿದೆ.

ಭೃಗು ಸ್ಮೃತಿ [3/40–43]ಯು– ಸ್ತ್ರೀಯರಿಗೆ ವಿಶೇಷ ಶಿಕ್ಷಣ ತಿಳಿಸಿದೆ. ವೇದಾಧ್ಯಯನವನ್ನೂ ಉಲ್ಲೇಖಿಸಿದೆ. ಆದರೆ ಪಂಚಮ ವೇದವಾದ ಮಹಾಭಾರತವೆಂದು ತಿಳಿಯಬೇಕು. ಕನ್ಯೆಗೆ ಯಜ್ಞೋಪವಿತವನ್ನು ಹಾಕಬೇಕೆಂಬ ಆದೇಶಯಿದ್ದರೂ [ಭೃಗು 1/65] ಸ್ತ್ರೀಯರಿಗೂ ಪ್ರದಾನ ಕರ್ಮವೆ ಉಪನಯನವಾದ್ದರಿಂದ ಬ್ರಹ್ಮಸೂತ್ರದಂತೆಯೇ ಮಂಗಳ ಸೂತ್ರವಾದ್ದರಿಂದ ಅದನ್ನೇ ತೆಗೆದುಕೊಳ್ಳಬಹುದು. ರಜಸ್ವಲ ನಿಯಮವಿರುವುದರಿಂದ ಜನಿವಾರ ಹಾಕುವ ಪದ್ಧತಿಯಿಲ್ಲ.

ಮನೆಯ ಸಂಪೂರ್ಣ ಅಧಿಕಾರ ಸ್ತ್ರೀಯರದೆ. ಆಯ–ವ್ಯಯ ಹಣದ ಸಂಬಂಧಿ ವ್ಯವಹಾರ ಪೂರ್ತಿ ಸ್ತ್ರೀಯರದೆ. ದ್ರೌಪದಿ ಈ ಕಾರ್ಯ ಮಾಡುತ್ತಿದ್ದಳು.

ಗೃಹವನ್ನು ಸ್ವಚ್ಛವಾಗಿಡುವುದಲ್ಲದೆ, ಗೃಹದ ಧಾರ್ಮಿಕ ವಿಧಿ ವಿಧಾನಗಳನ್ನು ತಿಳಿದು ಅವುಗಳನ್ನು ಅಣಿಗೊಳಿಸುವುದೂ ಮುಖ್ಯವು. ಆಚಾರ ಶೀಲ ಶುದ್ಧಿ ಹೊಂದಿದ್ದು ಮನೆಯ ಹೊರಗಿನ ಪುರುಷರು ಅನುಚಿತ ವ್ಯಕ್ತಿಗಳೊಂದಿಗೆ ಸೇರಬಾರದು. ತನ್ನ ಮನೆಯ ಅಭಿವೃದ್ಧಿ ಕಾರ್ಯದಲ್ಲಿಯೆ ಆಸಕ್ತಳಾಗಿರಬೇಕು.

- ***ಸಂಪತ್ತಿನ ಅಧಿಕಾರ :***

ಮಗನು ತಂದೆಯ ಆಸ್ತಿಗೆ ಭಾಗಿಯೊ ಹಾಗೆ ಪತಿಯ ಆಸ್ತಿಗೆ ಪತ್ನಿಯೆ ಅಧಿಕಾರಿಣೀ. ಸ್ತ್ರೀಯರಿಗೂ [ಬೃಹತ್ಸಂಸ್ಕಾರ 489]ರಲ್ಲಿ ದಯೆ, ಅನಸೂಮಕ್ಷಮಾ, ಶಾರೀರಿಕ– ಮಾನಸಿಕ ಶೌಚ, ಶರೀರಕ್ಕೆ ಅನಾವಶ್ಯಕ ಕಷ್ಟ ನೀಡುವುದು, ಶುಭ ಕಾರ್ಯ ಮಾಡುವುದು, ಪವಿತ್ರ ಮನಸ್ಸಿನಿಂದ ದಾನ ಧರ್ಮ ಮಾಡುವುದು. ಬಂದದ್ದರಲ್ಲಿಯೇ ಸಂತೃಪ್ತಿ ಇವು ಪುರುಷರೊಂದಿಗೆ ಸಮಾನವಾಗಿ ಹೇಳಿದೆ.

**ದಯಾ ಕ್ಷಮಾಽನಸೂಯಾ ಚ ಶೌಚಾನಾಯಾಸಮಂಗಲಮ್ ।**
**ಅಕಾರ್ಪಣ್ಯ ಮಸ್ಪೃಹತ್ವಂ ಸರ್ವ ಸಾಧಾರಣಾದಿ ತು ॥**

ಸ್ತ್ರೀಯ ರಕ್ಷಣೆಯಿಂದಾಗಿ ಪವಿತ್ರ ಸಂತಾನ ಹೊಂದಬಹುದು. ಸ್ತ್ರೀಯರಿಗೆ ಪತಿ ವಿಯೋಗ, ದುರ್ಜನ ಸಂಗ, ಅಲೆದಾಡುವುದು, ಬೇರೆಯವರ ಮನೆಯಲ್ಲಿ ವಾಸಗಳಿಂದ ಹಾಳಾಗುವ ಸಂದರ್ಭ ಹೆಚ್ಚು. ಅದಕ್ಕೆ ಅವರ ಮೇಲೆ ತಂದೆ, ಗಂಡ, ಪುತ್ರ ಮೊದಲಾದ ವಿಶೇಷ ಕಣ್ಣಿಟ್ಟಿರಬೇಕು.

ಸ್ತ್ರೀಯರು ಸುಂದರ ವಸ್ತುಗಳಿಂದ ಬಹು ಆಕರ್ಷಿತವಾಗುವ ಸ್ವಭಾವದವರು. ಚಾಂಚಲ್ಯಾಧಿಕ್ಯದಿಂದಾಗಿ ಪತ್ಯಾದಿಗಳ ರಕ್ಷಣೆ ಇಲ್ಲದಿದ್ದರೆ ಹಾಳಾಗಬಹುದು.

ಸ್ತ್ರೀಯರಲ್ಲಿ ಕಾಮಕ್ರೋಧ, ದ್ವೇಷ, ಕುಟಿಲತೆ ವಿಶೇಷವಾಗಿರುತ್ತದೆ. ಹೀಗಾಗಿ ವಿಶೇಷ ಗಮನ ಹರಿಸುವುದು.

ಸ್ತ್ರೀಯರು ಕೋಮಲ ಸ್ವಭಾವದವರು. ಯೋಗ್ಯಪತಿಯೊಂದಿಗೆ ಸೇರಿದರೆ ಯೋಗ್ಯ ಕುಲಸ್ತ್ರೀಯಾಗುವಳು. ದುರ್ಗುಣ ಪತಿಯೊಂದಿಗೆ ಸೇರಿ ದುರ್ಗುಣೀಯಾಗುವಳು.

ನೀಚ ಕುಲದಲ್ಲಿ ಹುಟ್ಟಿದ ಕನ್ಯೆಯೂ ಸಹ ಯೋಗ್ಯ ವ್ಯಕ್ತಿಯೊಂದಿಗೆ ವಿವಾಹಿತಳಾದರೆ ಯೋಗ್ಯ ವಧುವಾಗುವಳು.

ಇತ್ತೀಚಿನ ದಿವಸಗಳಲ್ಲಿ ಸ್ತ್ರೀಯು ಎಲ್ಲಾ ಕಾರ್ಯಗಳಲ್ಲಿಯೂ ಅಗ್ರಗಣ್ಯಳಾಗಿ ಸಂಚರಿಸುತ್ತಾ ಪರಪುರುಷರ ವಕ್ರದೃಷ್ಟಿಗೆ ಬಿದ್ದು ಮಾನ ಪ್ರಾಣ ಹಾನಿಗೆ ತುತ್ತಾಗುತ್ತಿರುವುದು ವಿಷಾದ ಸಂಗತಿ.

ಸ್ತ್ರೀಯರು ಗಂಡಿಗಿಂತ ಅಧಿಕ ಓದಿ ಗಂಡಿನಂತೆ ಯೇ ಧನಾರ್ಜನೆ ಮಾಡುತ್ತಾ ಶಾಸ್ತ್ರ ವಿರುದ್ಧ ಆತ್ಮಾಭಿಮಾನ ಹೊಂದಿ ತಮ್ಮ ಕುಟುಂಬ ಜೀವನವನ್ನೇ ಹಾಳು ಮಾಡಿಕೊಳ್ಳುತ್ತಿರುವರು.

ಇತ್ತೀಚಿನ ವರದಿಗಳಂತೆ ಕನ್ಯೆಯ ತಂದೆ ತಾಯಿಗಳು ಕನ್ಯೆಯೂ ಸಹ ತಾನು ಹಾಗೂ ತನ್ನ ಗಂಡ ಮಾತ್ರವಿರಬೇಕೆಂಬ ಸಂಕುಚಿತ ಭಾವನೆ ಹೊಂದಿರುವರು.

ಗಂಡನ ಬಂಧುಗಳಿಂದ ನಮ್ಮ ಸ್ವೇಚ್ಛಾ ಪ್ರವೃತ್ತಿ ಕುಂಠಿತಗೊಳ್ಳುವುದೆಂಬ ಸ್ವಾರ್ಥಪೂರಿತ ಮನೋಭಾವ ವಿಚ್ಛೇದನದಲ್ಲಿ ಮುಕ್ತಾಯಗೊಳ್ಳುತ್ತಿದೆ.

* * * *

# ಸಂಸ್ಕಾರಗಳು

## ಸಂಸ್ಕಾರವೆಂದರೇನು?

ಸಂಸ್ಕರಣ ಅಥವಾ ಸಮ್ಯಕ್‌ಕರಣವೇ ಸಂಸ್ಕಾರವು. ಸಂಸ್ಕಾರವು ಆತ್ಮಶರೀರಕ್ಕೆ ಸಂಬಂಧಿಸಿದಂತೆ ಹೀನಾಂಗವಾಗದಂತೆ ಮಾಡುವ, ದೋಷವನ್ನು ಮಾರ್ಜನ ಮಾಡುವ ಗುಣವನ್ನು ತುಂಬಿಸುವ ಶಾಸ್ತ್ರೀಯ ವಿಧಾನವೆ ಸಂಸ್ಕಾರ.

ಸಂಸ್ಕಾರವು ಮಾಡುವ ಕ್ರಿಯೆಯಲ್ಲಿ, ರೀತಿಯಲ್ಲಿ ಯೋಗ್ಯತೆಯನ್ನು ತಂದು ನೀಡುತ್ತವೆ. ಇದರರ್ಥ ಯಾವ ಕ್ರಿಯೆಯಿಂದಾಗಿ ಶಾರೀರಿಕ ಮಾನಸಿಕ ಪಾವಿತ್ರ್ಯತೆ ಬರುವುದೋ ಅದೇ ಸಂಸ್ಕಾರ. ಅಪವಿತ್ರವಾದದ್ದು ಪವಿತ್ರಗೊಳಿಸುವುದು.

### *ಹದಿನಾರು ಸಂಸ್ಕಾರಗಳು :*

ಜೀವಾತ್ಮನು ಹದಿನಾರು ಸಂಸ್ಕಾರಗಳಿಂದ ಪರಿಪೂರ್ಣನಾಗುವನು. ಯಾಜ್ಞವಲ್ಕ್ಯರು (1/13)ರಲ್ಲಿ – ಗರ್ಭಾಧಾನಾದಿ ಸಂಸ್ಕಾರ ಮಾಡುವುದರಿಂದ ವೀರ್ಯ ಹಾಗೂ ಗರ್ಭಕ್ಕೆ ಸಂಬಂಧಪಟ್ಟ ದೋಷಗಳು ನಾಶ ಹೊಂದುವುವು.

**ಏವಮೇನೋ ಶಮಂಯಾತಿ ಬೀಜಗರ್ಭ ಸಮುದ್ಭವಂ ।**

ಹಾರಿತರು – ಯಾವ ವ್ಯಕ್ತಿಯು ಗರ್ಭಾಧಾನ ವಿಧಿಯಿಂದ ತನ್ನ ಪತ್ನಿಯಲ್ಲಿ ಗರ್ಭವನ್ನು ಆಧಾನ ಮಾಡುವನೋ ಅವನಿಗೆ ವೇದಾಧ್ಯಯನ. ಭೋಗ್ಯನಾದ ಭ್ರೂಣ ಸ್ಥಾಪಿಸಿದಂತಾಗುತ್ತದೆ.

ಪುಂಸವನ ಸಂಸ್ಕಾರದಿಂದ ಗರ್ಭದಲ್ಲಿರುವ ಮಗು ಗಂಡಾಗುವಂತೆ ಮಾಡುತ್ತದೆ. ಸೀಮಂತದಿಂದ ತಂದೆ ತಾಯಿ ದ್ವಾರಾ ಉಂಟಾಗುವ ದೋಷ ದೂರವಾಗುವುದು ಗರ್ಭ. ವೀರ್ಯ, ರಕ್ತ, ಭ್ರೂಣಗಳಿಂದ ಬರಬಹುದಾದ ದೋಷಗಳನ್ನು ಜಾತಕ ಕರ್ಮ, ನಾಮಕರಣ, ಅನ್ನಪ್ರಾಶನಾದಿಗಳಿಂದ ದೂರ ಮಾಡಬಹುದು.

### *ಸಂಸ್ಕಾರಗಳೆಷ್ಟು :*

ಸ್ಮೃತಿಕಾರದಲ್ಲಿ ವಿಭಿನ್ನ ಅಭಿಪ್ರಾಯಗಳಿವೆ. ಗೌತಮರು (8.3) **'ಚತ್ವಾರಿಂಶತ್ ಸಂಸ್ಕಾರಾಃ'** ನಲವತ್ತು ಎಂದಿದ್ದಾರೆ. ಇವರು ವೇದವ್ರತ, ಪಂಚಯಜ್ಞ,

ಅಷ್ಟಕಾದಿ ಶ್ರಾದ್ಧಗಳು, ಶ್ರಾವಣೀ, ಏಳು ಅಗ್ನಿಷ್ಟೋಮಾದಿಗಳು ಸೇರಿಸಿ ದ್ವಿಜರು ಮಾಡಬೇಕಾದದ್ದನ್ನು ಎಲ್ಲ ಸಂಸ್ಕಾರದಲ್ಲಿ ಸೇರಿಸಿದ್ದಾರೆ. ಇದಕ್ಕೆ [ಬುಧಸ್ಮೃತಿ ಅ 1] ಅನುಮೋದಿಸಿದೆ. ಗೌತಮರು 8/2ರಲ್ಲಿ ದಯೆ, ಶಾಂತಿ, ಆರ್ಜವ, ಅನಸೂಯಾ, ಅನಾಯಾಸ, ಅಕಾರ್ಪಣ್ಯಾ, ಅಸ್ಪೃಹಾ ಎಂಬ ಮತ್ತೆ ಎಂಟು ಸಂಸ್ಕಾರಗಳನ್ನು ಸೇರಿಸಿ 48 ಮಾಡಿದ್ದಾರೆ. [ಬುಧ ಅ 1]

**ದಯಾ ಸರ್ವಭೂತೇಷು ಕ್ಷಾಂತಿರನಸೂಯಾಶಾಚಮ್ ।**
**ಅನಾಯಾಸೇನ ಮಂಗಲ ಮಪಕಾರ್ಪಣ್ಯಮಪ್ಪೃಹೇತಿ ॥**

***ವ್ಯಾಸ ಸ್ಮೃತಿ [ಅ1 /14–15] :***

**ಗರ್ಭಾದಾನಂ ಪುಂಸವನಂ ಸೀಮಂತೋ ಜಾತಕರ್ಮ ಚ ।**
**ನಾಮಕ್ರಿಯಾ ನಿಷ್ಕ್ರಮಣೇಽನ್ನಾಶನಂ ವಪನ ಕ್ರಿಯಾ ॥**
**ಕರ್ಣವೇಧೋ ವ್ರತಾದೇಶೋ ವೇದಾರಂಭ ಕ್ರಿಯಾವಿಧಿಃ ।**
**ಕೇಶಾಂತಃ ಸ್ನಾನ ಮುದ್ವಾಹೋ ವಿವಾಹಾಗ್ನಿಪರಿಗ್ರಹಃ ॥**

ಇಲ್ಲಿ ವಪನ ಕ್ರಿಯೆ = ಚೂಡಾಕರ್ಮವು, ವ್ರತಾದೇಶ = ಉಪನಿಯ ಸ್ನಾನ = ಸಮಾವರ್ತನ, ಕೇಶಾಂತ = ಪ್ರಥಮ ಕೂದಲನ್ನು ತೆಗೆಸುವ ಗೌದಾನಿಕ.

ಮನು ಹಾಗೂ ಯಾಜ್ಞವಲ್ಕ್ಯರು **ನಿಷೇಕಾದ್ಯಾಃ ಸ್ಮಶಾನಾಂತಾಃ** ಎಂದು ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚವಲ, ಕರ್ಣವೇಧ, ಉಪನಯನ, ಕೇಶಾಂತ, ಉಪಾಕರ್ಮ, ಸಮಾವತ್ನ, ವಿವಾಹ, ಅಂತ್ಯೇಷ್ಟಿ ಎಂದಿದ್ದಾರೆ.

- ***ಸ್ತ್ರೀಯರಿಗೆ ಸಂಸ್ಕಾರವುಂಟೆ ?***

ವ್ಯಾಸಸ್ಮೃತಿಯು (1/15) – ಕರ್ಣವೇಧದವರೆಗೂ ನವ ಸಂಸ್ಕಾರಗಳು ಸ್ತ್ರೀಯರಿಗೆ ಇರುತ್ತದೆ. ಆದರೆ ವೇದ ಮಂತ್ರಗಳನ್ನು ಹೇಳಬೇಕಿಲ್ಲ. ತಂತ್ರ ಮಾತ್ರ ಸಾಕು.

**ನವೈತಾಃ ಕರ್ಣವೇಧಾಂತಾ ಮಂತ್ರವರ್ಜಂ ಕ್ರಿಯಾಃ ಸ್ತ್ರೀಯ ।**

ಆದರೆ ವಿವಾಹವನ್ನು ಮಂತ್ರಗಳನ್ನು ಹೇಳುತ್ತಾ ನಡೆಸಬೇಕು. ಶೂದ್ರನಿಗಾದರೂ ಹತ್ತೂ ಅಮಂತ್ರಕವಾಗಿವೆ.

**ವಿವಾಹೋ ಮಂತ್ರ ತಸ್ತಸ್ಯಾಃ ಶೂದ್ರಸ್ಯಾಮಂತ್ರತೋ ದಶ ॥**
– ಯಾಜ್ಞವಲ್ಕರು *(1/13)*

**ತೂಷ್ಣೀಮೇತಾಃ ಕ್ರಿಯಾಃ ಸ್ತ್ರೀಣಾಂ ವಿವಾಹಸ್ತು ಸಮಂತ್ರಕ ।**

ಇವರ ಪ್ರಕಾರ ವಿವಾಹ ಮಾತ್ರ ಸಮಂತ್ರಕ, ಉಳಿದೆದ್ದೆಲ್ಲ ಅಮಂತ್ರಕ.

**ಗರ್ಭಾಧಾನ** : ಗರ್ಭಾಧಾನದ ವಿಸ್ತಾರ ವಿವರಣೆ ಅಥರ್ವವೇದ (5/25)ದಲ್ಲಿದೆ.

ಗರ್ಭವು ಯಾವ ಕರ್ಮದಿಂದ ಸ್ಥಾಪಿಸಬಹುದೋ ಅದು ಗರ್ಭಾಧಾನ.

**ಗರ್ಭಃ ಆಧೀಯತೇಽನೇನ ಕರ್ಮಣಾ ॥**

ಗರ್ಭಾಧಾನವನ್ನು ರಜೋದರ್ಶನಾ ನಂತರ ಮಾಡುವುದು.

**ಗರ್ಭಾಧಾನಮೃತೌ ॥**

ಋತು ಕಾಲದಲ್ಲಿ ಪತ್ನಿಯ ಮೇಲೆ ಬೇಜಾರಿನಿಂದ ಪತ್ನಿಯನ್ನು ಸೇರದಿದ್ದರೆ ಭ್ರೂಣಹತ್ಯೆಯು. ವಿರಕ್ತನಿಗೆ ಈ ದೋಷವಿಲ್ಲವು.

**ಗರ್ಭಸ್ಯ ಸ್ಫುಟತಾಜ್ಞಾನೇ ನಿಷೇಕಃ ಪರಿಕೀರ್ತಿತಃ ।** *–ಶಂಖ. 2/1*

- ***ಹದಿನಾರು ರಾತ್ರಿಗಳು :***

ರಜೋದರ್ಶನದಿಂದ ಹದಿನಾರು ದಿನಗಳ ಕಾಲ ಋತು ಕಾಲವೆನಿಸಿದೆ [ಮನು 3/46]

**ಋತುಃ ಸ್ವಾಭಾವಿಕಃ ಸ್ತ್ರೀಣಾಂ ರಾತ್ರಯಃ ಷೋಡಶ ಸ್ಮೃತಾ ।**

ಈ ಹದಿನಾರು ರಾತ್ರಿಗಳಲ್ಲಿಯೂ ಮೊದಲು ನಾಲ್ಕು ರಾತ್ರಿಗಳು ಹನ್ನೊಂದು–ಹನ್ನೆರಡನೇ ದಿನಗಳನ್ನು ಬಿಟ್ಟು ಉಳಿದ ಹತ್ತು ದಿನಗಳು ಗರ್ಭಾಧಾನ ಯೋಗ್ಯಕಾಲವು.

ಪರಾಶರರ (7/17) – ರಜಸ್ವಲೆಯು ನಾಲ್ಕನೇ ದಿವಸದಲ್ಲಿ ಶುದ್ಧಳಾಗುವಳು. ನಂತರ ಗರ್ಭಾದಾನವು.

ಲಘು ಆಶ್ವಲಾಯನ [3/1] – ಬ್ರಾಹ್ಮಣನು ನಾಲ್ಕನೇ ದಿವಸ ಮುಗಿದ ಮೇಲೆ ಸಮ ದಿವಸಗಳಲ್ಲಿ ಗರ್ಭಾಧಾನ ಮಾಡಬೇಕೆಂದಿರುವನು.

ಮನು [4/128] ಯಾಜ್ಞವಲ್ಕ್ಯ [1/79–80]ರೂ – ಈ ಹದಿನಾರು ದಿವಸಗಳಲ್ಲಿ ಮಧ್ಯದಲ್ಲಿಯೂ ಚತುರ್ಥಿ ತಿಥಿ, ಷಷ್ಠೀ, ಚತುರ್ದಶೀ, ಪೂರ್ಣಿಮ, ಅಮಾವಾಸ್ಯೆ ನಿಷಿದ್ಧವಾಗಿವೆ.

ಮೂಲ, ಮಘಾ, ರೇವತಿ, ಜ್ಯೇಷ್ಠಾ ಈ ದಿನಗಳು ಸರ್ವತಾ ಗರ್ಭಾಧಾನ ನಿಷಿದ್ಧಗಳು.

ಮಾಸಿಕ ಧರ್ಮ ನಾಲ್ಕನೇ ದಿನಾ ನಂತರ ಆರು, ಎಂಟು, ಹತ್ತು ಹನ್ನೆರಡು ಹೀಗೆ ಸಮದಿವಸಗಳಲ್ಲಿ ಕೂಡಿದರೆ ಅದರಲ್ಲಿಯೂ ಮುಂದಿನವುಗಳಲ್ಲಿ ಸೇರಿದರೆ ಗಂಡು ಮಗುವು. ವಿಷಮವಾದರೆ ಹೆಣ್ಣು ಮಗು ಆಗುತ್ತದೆ. [ಲಘು ಆಶ್ವ 3/1]

**ಚತುರ್ಥೀ ದಿವಸಾದೂರ್ಧ್ವಂ ಪುತ್ರಾರ್ಥೀ ದಿವಸೇ ಸಮೇ ।**
**ಯುಗ್ಮಾಸು ಪುತ್ರಾಃ ಜಾಯಂತೇ ಅಯುಗ್ಮಾಸ್ತು ಕನ್ಯಕಾಃ ॥**

ಋತು ಕಾಲದಲ್ಲಿಯೂ 'ಸಕೃದ್ಗಮನವು'. ಒಂದಾವರ್ತಿ ಮಾತ್ರ ಋತು ರಾತ್ರಿಗಳಲ್ಲಿ ಅವುಗಳಲ್ಲಿಯೂ ದಶಮ್ಯಾದಿ ದಿನತ್ರಯ ಬಿಟ್ಟು ವಾಮದೇವ ಯಜ್ಞವೆಂದು, ಗಮನ ಮಾಡಿದವನು **'ಆಜನ್ಮ ಬ್ರಹ್ಮಚಾರೀ'**. ಈ ಅರ್ಥದಲ್ಲಿ ಅರ್ಜುನನು ಬ್ರಹ್ಮಚಾರಿಯೆನಿಸಿದರೆ 16,108 ಸ್ತ್ರಿಯರೊಡೆಯ ಅನಾದಿ ಬ್ರಹ್ಮಚಾರಿಯು. **'ಅನಾದಿ ಬ್ರಹ್ಮಚಾರೀ ಚ'**.

ತಂದೆ ತಾಯಿಗಳ ಶ್ರಾದ್ಧ ದಿನ, ಹಿಂದಿನ ದಿನ, ಹಗಲು, ಸಂಧ್ಯಾಕಾಲ, ಮಹಾನುಭಾವರ ಆರಾಧನಾದಿ ದಿವಸಗಳೂ ನಿಷಿದ್ಧ. ಹಿಂದಿನ ಋಷಿಗಳು ಸಂತಾನಕ್ಕಾಗಿ ಮಾತ್ರ ಪತ್ನೀ ಸಂಗ ಹೊರತು ಭೋಗಕ್ಕಾಗಿ ಅಲ್ಲ. ಹೀಗಾಗಿ ಸತ್ಪುತ್ರರು ಜನಿಸಿದರು. ನಾವೂ ಇವೆಲ್ಲ ಪಾಲಿಸಿದರೆ ಸತ್ಪುತ್ರನೆ ಜನಿಸುವನು.

ಗರ್ಭಾಧಾನದ ಸಂಸ್ಕಾರವಾಗದೆ ಹುಟ್ಟಿದ ಮಗು ದುಷ್ಟನಾಗುತ್ತಾನೆ.

**ಗರ್ಭಾಧಾನಸ್ಯ ಅಕರಣಾತ್ ತಸ್ಯಾಂಜಾತಸ್ತು ದುಷ್ಯತಿ ।**

ಹೀಗೆ ಸತ್ಪುತ್ರನನ್ನು ಪಡೆಯಲು ಸ್ತ್ರೀಪುರುಷರು ನಿಯಮಬದ್ಧರಾಗಿ ನಡೆಸುವ ಕರ್ಮವೇ 'ಗರ್ಭಾಧಾನ'ವು.

ಗರ್ಭಾಧಾನದಿಂದಾಗಿ ಪುರುಷನ ವೀರ್ಯದಲ್ಲಿರುವ ತಾಯಿಯ ರಕ್ತದಲ್ಲಿರುವ ದೋಷಗಳು, ಮುಂದೆ ಹುಟ್ಟುವ ಮಗುವಿಗೆ ತಗಲದಂತೆ ಮಾಡಿ, ಶಿಶುವನ್ನು ಸತ್ಪ್ರಜೆಯೆನಿಸಲು ಬರಬಹುದಾದ ದೋಷಗಳನ್ನು ಪರಿಹರಿಸುತ್ತದೆ. ಸಂಕಲ್ಪದಲ್ಲಿ,

**ಮಮ ಅಸ್ಯಾಂ ಭಾರ್ಯಾಯಾಂ ಜನಿಷ್ಯಮಾಣ ಸರ್ವ ಗರ್ಭಾಣಾಂ ಬೀಜ ಯೋನಿ ದೋಷ ಜನಿತೈನೋ ನಿಬರ್ಹಣದ್ವಾರಾ, ಸತ್ಪ್ರಜಾ ಪ್ರಾಪ್ತ್ಯರ್ಥಂ ಗರ್ಭಾಧಾನಾಖ್ಯಂ ಕರ್ಮಕರಿಷ್ಯೆ** ಎನ್ನಲಾಗುತ್ತದೆ.

ದೋಷವೆಂದರೆ 1) ಮಗು ಬೆಳೆಯಲು ಗರ್ಭಚೀಲ ವಿಸ್ತಾರವಾಗದೆ ಇರುವುದು, 2) ಸಂಗಮ ಕಾಲದಲ್ಲಿ ಸ್ತ್ರೀಯ ಮಾನಸಿಕ ವ್ಯಭಿಚಾರ, 3) ಧರಿಸಿದ ಗರ್ಭ 9 ತಿಂಗಳು ಕಾಲ ನಿಲ್ಲದಿರುವುದು, 4) ಮಗುವು ಚಿರಾಯುವೂ ಆರೋಗ್ಯವಂತನೂ, ಬುದ್ಧಿವಂತನೂ ಆಗದಿರುವ ಸಂದರ್ಭಗಳು.

- ***ಯಜ್ಞಾನು ಸಂಧಾನ :***

ಮಾನವನ ಇಡೀ ಜೀವನ ಯಜ್ಞವು. **'ಪುರುಷೋವಾವಯಜ್ಞಃ'**. ಹೀಗಾಗಿ ಸ್ತ್ರೀಪುರುಷರೂ ನಡೆಸುವ ಭೋಗ ಕ್ರಿಯೆಯೂ **'ವಾಮದೇವಯಜ್ಞ'** ವೆನಿಸಿದ್ದು ಪಂಚಾಗ್ನಿಗಳಲ್ಲಿ ಪುರುಷಾಗ್ನಿ, ಯೋಷಿದಗ್ನಿಗಳಲ್ಲಿ ಮೈಥುನ ಕ್ರಿಯೆಯ ಮೂಲಕ ಜೀವನನ್ನೇ ಹೋಮಿಸುವುದು.

**ವಾಮದೇವಮಯೋ ಯಜ್ಞೋ ವ್ಯವಾಯೋ ಹರಿಪೂಜನಂ ।**

ಈ ಮೈಥುನ ಕ್ರಿಯೆಯಲ್ಲಿಯೂ ಆನಂದ, ಸಂತಾನ, ಜನನ ಕ್ರಿಯೆಗಳಲ್ಲಿಯೂ **'ಪ್ರಜಾತಿರಮೃತಮಾನಂದ ಇತ್ಯುಪಸ್ಥೇ'** ಈ ಹೆಸರಿನಿಂದ ಹರಿಯೆ ಇರುವನೆಂದು ತೈಉ ತಿಳಿಸಿದೆ.

- ***ಗರ್ಭ ರಕ್ಷಣೆ – ಹರಿಪಾತ್ರ :***

ಗರ್ಭಾಧಾನದಲ್ಲಿ ಹೇಳಲ್ಪಡುವ [ಋ 10/184–185] ಮಂತ್ರವು ಶ್ರೀಹರಿಯು ವಿಷ್ಣು, ತ್ವಷ್ಟೃ, ಪ್ರಜಾಪತಿ, ಧಾತೃ ರೂಪಳಿಂದ ಗರ್ಭಿಣಿಯರ ಗರ್ಭ ರಕ್ಷಿಸುವನು.

ವಾಸುದೇವನು ಯೋನಿ ಶುದ್ಧಿಯನ್ನೂ, ಸಂಕರ್ಷಣನು ಮಾಂಸವನ್ನು ದೇಹದ ರೂಪವನ್ನೂ, ಪ್ರದ್ಯುಮ್ನನು ತನ್ನ ಪ್ರದ್ಯುಮ್ನ ರೂಪದಿಂದ ಗರ್ಭದಲ್ಲಿ ಬೆಳೆದು ಮಗು ಸುಖವಾಗಿ ಬರುವಂತೆ ಮಾಡುವನು. ಅನಿರುದ್ಧನು ಉದರದಲ್ಲಿರುವ ಮಗುವಿಗೆ ಧಾರಣೆ ಪೋಷಣೆ ಮಾಡುವನು.

**ಸ ರಕ್ಷಿತಾ ರಕ್ಷತಿ ಯೋಹಿ ಗರ್ಭೇಃ ।**

ಗರ್ಭದಲ್ಲಿ ಮಗುವನ್ನು ರಕ್ಷಿಸಿದವನೇ, ಹೊರಗೂ ಅವನೇ ರಕ್ಷಕ, ದೃಷ್ಟಾಂತ ಪರೀಕ್ಷಿತ್ ರಾಜ, ದಿತಿಯ ಗರ್ಭವನ್ನು ಇಂದ್ರನು ವಜ್ರಯುಧದಿಂದ ತುಂಡರಿಸಿದರೂ ಸಾಯದೆ 49 ಮರುತ್ತು ದೇವತೆಗಳಾಗಿದ್ದು ಹರಿಯ ಕೃಪೆ. ಗರ್ಭಾಧಾನದಿಂದಾಗಿ ಪಿತೃ ಋಣವನ್ನು ತೀರಿಸಲು ಸಮರ್ಥ-ನಾಗುವನು.

- ***ಪುಂಸವನ :***

ಯಾವ ಕರ್ಮದಿಂದ ಗಂಡು ಮಗುವೆ ಹುಟ್ಟುತ್ತದೆಯೋ ಅದು ಪುಂಸವನ.

**ಪುಮಾನ್ ಸೂಯತೇ ಯೇನ ಕರ್ಮಣಾ ।**

ಈ ಕರ್ಮವು ಗರ್ಭವನ್ನು ಪುರುಷನನ್ನಾಗಿ ಮಾಡುತ್ತದೆ.

**ಯೇನ ಗರ್ಭಃ ಪುಮಾನ್ ಭವತಿ ।**

ಪ್ರಜಾಪತಿಯೆನಿಸುವ ಪ್ರದ್ಯುಮ್ನನು, ಧಾರಣ ಪೋಷಣೆ ಮಾಡುವ ಅನಿರುದ್ಧನು ಧಾತಾ ಎನಿಸಿ ಯಜಮಾನನಿಗೆ ಗಂಡು ಪುತ್ರನನ್ನು ನೀಡುವವನು.

**ಧಾತಾ ಪುತ್ರಂ ಯಜಮಾನಾಯ ಧಾತಾ ।**

ಪುಂಸವನ ಸಂಸ್ಕಾರ ಆಶ್ವಲಾಯನಾದಿ ಗೃಹ್ಯಸೂತ್ರಗಳಲ್ಲಿ ವಿಸ್ತೃತ ವರ್ಣನೆಯಿದೆ.

ಪುಂಸವನ ಸಂಸ್ಕಾರವು ಬಹುಶಃ ಲುಪ್ತವಾಗಿದ್ದರೂ ಸಂಪೂರ್ಣ ಲುಪ್ತವಾಗಿಲ್ಲ.

ಪುಂಸವನ್ನು (ವ್ಯಾಸಸ್ಮೃತಿ 1/16)ಯು ಗರ್ಭಾಧಾನ ನಂತರ ಮೂರನೆ ತಿಂಗಳಲ್ಲಿ ಮಾಡಬೇಕೆಂದಿದೆ.

**ತೃತೀಯೇ ಮಾಸಿ ಪುಂಸವಃ ।**

ಯಾಜ್ಞವಲ್ಕ್ಯರು (1/11) **'ಪುಂಸಃ ಸವನಂ ಸ್ಯಂದನಾತ್ ಪುರಾ'**

ಎಂದು ಗರ್ಭದಲ್ಲಿ ಚಲನವೇರ್ಪಡುವ ಮೊದಲು ಪುಂಸವನವೆಂದಿದ್ದಾರೆ. ಗರ್ಭ ವ್ಯಕ್ತವಾದ ನಂತರವೆಂದು ಆಪಸ್ತಂಬರು. ಗರ್ಭ ಧರಿಸಿರುವುದು ತಿಳಿದ ಕೂಡಲೇ ಪುಂಸವನ ಮಾಡಬೇಕು.

ಮೂರನೇ ತಿಂಗಳಲ್ಲಿ ಪ್ರಥಮ ಗರ್ಭ ಪುಂಸವನವನ್ನು ಉಳಿದ ಗರ್ಭಗಳಲ್ಲಿ ನಾಲ್ಕು ಆರು, ಎಂಟು ಹೀಗೆ ಪುಂಸವನವನ್ನು ಮಾಡಬಹುದೆಂದು ಬೃಹಸ್ಪತಿಗಳು ಹೇಳಿರುವರು.

ಗರ್ಭ ಚಿಹ್ನೆಯು ತೋರಿದ ಮೇಲೆ ಎರಡು, ನಾಲ್ಕು, ಆರು, ಎಂಟನೆ ಮಾಸದಲ್ಲಿ ಪುಂಸವನ ಮಾಡಲು ಅವಕಾಶವಿದೆ ಅಥವಾ ಸೀಮಂತದೊಂದಿಗೂ ಮಾಡಬಹುದು.

***ಪುಂಸವನ ಏಕೆ ?***

ಪುಂಸವನ ಸಂಸ್ಕಾರವನ್ನು ಪ್ರತಿ ಗರ್ಭಧಾರಣೆಯಲ್ಲೂ ಮಾಡಬೇಕು. ಪುಂಶಿಶುವು ಜನಿಸದಿದ್ದರೂ ಮಂತ್ರಗಳ ಸ್ಫುರಣದ ಸ್ಪರ್ಶದಿಂದಾಗಿ ಹಾಗೂ ಈ ಕರ್ಮದ ಅಂಗವಾದ ಆಲದ ಮೊಗ್ಗು ಅಥವಾ ಗರಿಕೆ ಹುಲ್ಲಿನ ರಸವನ್ನು ಪತ್ನಿಯ ಬಲ ಮೂಗಿನೊಳಗೆ ಹಾಕುವುದರಿಂದಾಗಿ ಗರ್ಭಸ್ಥ ಶಿಶುವಿಗೆ ಹಿಂದಿನ ಅನೇಕ ಜನ್ಮಗಳ ಸ್ಮರಣೆಯುಂಟಾಗುತ್ತದೆ ಹಾಗೂ ಗರ್ಭ ಶುದ್ಧಿಯಾಗುತ್ತದೆ.

**ಪುಂಸವೇ ಮಂತ್ರಮಾಹಾತ್ಮ್ಯಾತ್ ವೇತ್ತಿ ಪ್ರಾಗ್ಜನ್ಮ ಸಂತತಿಃ ।**

ಪುಂಸವನ ಸೀಮಂತಗಳು ಕ್ಷೇತ್ರ ಸಂಸ್ಕಾರವಾದ್ದರಿಂದ ಪ್ರಥಮ ಗರ್ಭದಲ್ಲಿ ಮಾಡಿದರೆ ಸಾಕೆಂದು ಕೆಲವರಭಿಪ್ರಾಯ.

ಪುಂಸವನಕ್ಕೆ ಪುಂನಕ್ಷತ್ರಗಳಾದ ಪುಷ್ಯಶ್ರವಣ, ಹಸ್ತ, ಮೃಗಶಿರ, ಮೂಲಾ, ಅನುರಾಧಾದಿಗಳು ಶ್ರೇಷ್ಠ.

ಪುಂಸವನದಿಂದಾಗಿ ಸ್ತ್ರೀ ಶೋಣಿತದಿಂದಾಗಿ ಸ್ತ್ರೀ ಚಿಹ್ನೆ ಹೊಂದಿದ್ದರೆ ದುರ್ಬಲವನ್ನಾಗಿಸುತ್ತದೆ. ಗರಿಕೆಯ ರಸವೂ ಹೀಗೆ ಶೋಣಿತ ಪ್ರಾಬಲ್ಯವನ್ನು ದುರ್ಬಲಗೊಳಿಸುತ್ತದೆ.

***ಪ್ರಯೋಗ :***

**ದೇಶಕಾಲೌ ಸ್ಮೃತ್ವಾ ಮಮಾಸ್ಯಾಃ ಪತ್ನ್ಯಾಃ ಉತ್ಪತ್ಸ್ಯಮಾನಗರ್ಭಸ್ಯ ಬೈಜಿಕ-ಗಾರ್ಭಿಕ ದೋಷ ಪರಿಹಾರಾರ್ಥ,** ಪುಂಸವನ ಕರ್ಮ ಕರಿಷ್ಯೇ. ಪೂರ್ವಾಂಗ ನಡೆಸಬೇಕು. ಗರಿಕೆ, ಗುಡೂಚೀ ಬ್ರಾಹ್ಮೀ ಬಳ್ಳಿಯ ರಸವನ್ನು ಕುಟ್ಟಿ ವಸ್ತ್ರದಿಂದ ರಸಶೋಧಿಸಿ ಗರ್ಭಿಣಿಯ ಬಲ ಮೂಗಿನ ಹೊರಳೆಯಲ್ಲಿ ಗಂಡನು ಆ ರಸವನ್ನು **'ಹಿರಣ್ಯಗರ್ಭಃ ಅದ್ಭ್ಯಃ ಸಂಭೂತಃ'** ಇತ್ಯಾದಿ ಹಿರಣ್ಯಗರ್ಭ ಸೂಕ್ತ ಪಠಿಸುತ್ತ ಹಾಕಬೇಕು.

ಪುಂಸವನದಲ್ಲಿ ಮೊಸರು, ಇದರ ಮೇಲೆ ಜವೆ ಗೋಧಿ ಕಾಳನ್ನಿಟ್ಟು ಒಂದೊಂದು ಉದ್ದಿನಕಾಳುಗಳನ್ನು ಇಟ್ಟು ಪುರುಷಲಿಂಗಾಕಾರ ಮಾಡಿ, ಪತ್ನಿಗೆ ತೋರಿಸಿ ಕಿಂಪಿಬಸಿ ಎಂದು ಕೇಳಿದಾಗ **'ಪುಮಾಂಸ ಪಿಬಾಮಿ'** ಎನ್ನುವಳು. ಹೀಗೆ ಮೂರಾವೃತ್ತಿ ನಡೆಸಿ ರಸವನ್ನು ಕುಡಿಯುತ್ತಾಳೆ.

ಹೀಗೆ ಪುರುಷ ಚಿಹ್ನೆ ಲಿಂಗವನ್ನು ಚಿಂತಿಸುತ್ತಾ ರಸವನ್ನು ಮೂಗಿನ

- ***ಪುಂಸವನ :***

ಯಾವ ಕರ್ಮದಿಂದ ಗಂಡು ಮಗುವೆ ಹುಟ್ಟುತ್ತದೆಯೋ ಅದು ಪುಂಸವನ.

**ಪುಮಾನ್ ಸೂಯತೇ ಯೇನ ಕರ್ಮಣಾ ।**

ಈ ಕರ್ಮವು ಗರ್ಭವನ್ನು ಪುರುಷನನ್ನಾಗಿ ಮಾಡುತ್ತದೆ.

**ಯೇನ ಗರ್ಭಃ ಪುಮಾನ್ ಭವತಿ ।**

ಪ್ರಜಾಪತಿಯೆನಿಸುವ ಪ್ರದ್ಯುಮ್ನನು, ಧಾರಣ ಪೋಷಣೆ ಮಾಡುವ ಅನಿರುದ್ಧನು ಧಾತಾ ಎನಿಸಿ ಯಜಮಾನನಿಗೆ ಗಂಡು ಪುತ್ರನನ್ನು ನೀಡುವವನು.

**ಧಾತಾ ಪುತ್ರಂ ಯಜಮಾನಾಯ ಧಾತಾ ।**

ಪುಂಸವನ ಸಂಸ್ಕಾರ ಆಶ್ವಲಾಯನಾದಿ ಗೃಹ್ಯಸೂತ್ರಗಳಲ್ಲಿ ವಿಸ್ತೃತ ವರ್ಣನೆಯಿದೆ.

ಪುಂಸವನ ಸಂಸ್ಕಾರವು ಬಹುಶಃ ಲುಪ್ತವಾಗಿದ್ದರೂ ಸಂಪೂರ್ಣ ಲುಪ್ತವಾಗಿಲ್ಲ.

ಪುಂಸವನ್ನು (ವ್ಯಾಸಸ್ಮೃತಿ 1/16)ಯು ಗರ್ಭಾಧಾನ ನಂತರ ಮೂರನೆ ತಿಂಗಳಲ್ಲಿ ಮಾಡಬೇಕೆಂದಿದೆ.

**ತೃತೀಯೇ ಮಾಸಿ ಪುಂಸವಃ ।**

ಯಾಜ್ಞವಲ್ಕ್ಯರು (1/11) **'ಪುಂಸಃ ಸವನಂ ಸ್ಪಂದನಾತ್ ಪುರಾ'** ಎಂದು ಗರ್ಭದಲ್ಲಿ ಚಲನವೇರ್ಪಡುವ ಮೊದಲು ಪುಂಸವನವೆಂದಿದ್ದಾರೆ. ಗರ್ಭ ವ್ಯಕ್ತವಾದ ನಂತರವೆಂದು ಆಪಸ್ತಂಬರು. ಗರ್ಭ ಧರಿಸಿರುವುದು ತಿಳಿದ ಕೂಡಲೇ ಪುಂಸವನ ಮಾಡಬೇಕು.

ಮೂರನೇ ತಿಂಗಳಲ್ಲಿ ಪ್ರಥಮ ಗರ್ಭ ಪುಂಸವನವನ್ನು ಉಳಿದ ಗರ್ಭಗಳಲ್ಲಿ ನಾಲ್ಕು ಆರು, ಎಂಟು ಹೀಗೆ ಪುಂಸವನವನ್ನು ಮಾಡಬಹುದೆಂದು ಬೃಹಸ್ಪತಿಗಳು ಹೇಳಿರುವರು.

ಗರ್ಭ ಚಿಹ್ನೆಯು ತೋರಿದ ಮೇಲೆ ಎರಡು, ನಾಲ್ಕು, ಆರು, ಎಂಟನೆ ಮಾಸದಲ್ಲಿ ಪುಂಸವನ ಮಾಡಲು ಅವಕಾಶವಿದೆ ಅಥವಾ ಸೀಮಂತದೊಂದಿಗೂ ಮಾಡಬಹುದು.

### *ಪುಂಸವನ ಏಕೆ ?*

ಪುಂಸವನ ಸಂಸ್ಕಾರವನ್ನು ಪ್ರತಿ ಗರ್ಭಧಾರಣೆಯಲ್ಲೂ ಮಾಡಬೇಕು. ಪುಂಶಿಶುವು ಜನಿಸದಿದ್ದರೂ ಮಂತ್ರಗಳ ಸ್ಫುರಣದ ಸ್ಪರ್ಶದಿಂದಾಗಿ ಹಾಗೂ ಈ ಕರ್ಮದ ಅಂಗವಾದ ಆಲದ ಮೊಗ್ಗು ಅಥವಾ ಗರಿಕೆ ಹುಲ್ಲಿನ ರಸವನ್ನು ಪತ್ನಿಯ ಬಲ ಮೂಗಿನೊಳಗೆ ಹಾಕುವುದರಿಂದಾಗಿ ಗರ್ಭಸ್ಥ ಶಿಶುವಿಗೆ ಹಿಂದಿನ ಅನೇಕ ಜನ್ಮಗಳ ಸ್ಮರಣೆಯುಂಟಾಗುತ್ತದೆ ಹಾಗೂ ಗರ್ಭ ಶುದ್ಧಿಯಾಗುತ್ತದೆ.

**ಪುಂಸವೇ ಮಂತ್ರಮಾಹಾತ್ಮ್ಯಾತ್ ವೇತ್ತಿ ಪ್ರಾಗ್ಜನ್ಮ ಸಂತತಿಃ ।**

ಪುಂಸವನ ಸೀಮಂತಗಳು ಕ್ಷೇತ್ರ ಸಂಸ್ಕಾರವಾದ್ದರಿಂದ ಪ್ರಥಮ ಗರ್ಭದಲ್ಲಿ ಮಾಡಿದರೆ ಸಾಕೆಂದು ಕೆಲವರಭಿಪ್ರಾಯ.

ಪುಂಸವನಕ್ಕೆ ಪುಂನಕ್ಷತ್ರಗಳಾದ ಪುಷ್ಯಶ್ರವಣ, ಹಸ್ತ, ಮೃಗಶಿರ, ಮೂಲಾ, ಅನುರಾಧಾದಿಗಳು ಶ್ರೇಷ್ಠ.

ಪುಂಸವನದಿಂದಾಗಿ ಸ್ತ್ರೀ ಶೋಣಿತದಿಂದಾಗಿ ಸ್ತ್ರೀ ಚಿಹ್ನೆ ಹೊಂದಿದ್ದರೆ ದುರ್ಬಲವನ್ನಾಗಿಸುತ್ತದೆ. ಗರಿಕೆಯ ರಸವೂ ಹೀಗೆ ಶೋಣಿತ ಪ್ರಾಬಲ್ಯವನ್ನು ದುರ್ಬಲಗೊಳಿಸುತ್ತದೆ.

### *ಪ್ರಯೋಗ :*

**ದೇಶಕಾಲೌ ಸ್ಮೃತ್ವಾ ಮಮಾಸ್ಯಾಃ ಪತ್ನ್ಯಾಃ ಉತ್ಪತ್ಸ್ಯಮಾನಗರ್ಭಸ್ಯ ಬೈಜಿಕ–ಗಾರ್ಭಿಕ ದೋಷ ಪರಿಹಾರಾರ್ಥ,** ಪುಂಸವನ ಕರ್ಮ ಕರಿಷ್ಯೇ. ಪೂರ್ವಾಂಗ ನಡೆಸಬೇಕು. ಗರಿಕೆ, ಗುಡೂಚೀ ಬ್ರಾಹ್ಮೀ ಬಳ್ಳಿಯ ರಸವನ್ನು ಕುಟ್ಟಿ ವಸ್ತ್ರದಿಂದ ರಸಶೋಧಿಸಿ ಗರ್ಭಿಣಿಯ ಬಲ ಮೂಗಿನ ಹೊರಳೆಯಲ್ಲಿ ಗಂಡನು ಆ ರಸವನ್ನು **'ಹಿರಣ್ಯಗರ್ಭಃ ಅದ್ಭ್ಯಃ ಸಂಭೂತಃ'** ಇತ್ಯಾದಿ ಹಿರಣ್ಯಗರ್ಭ ಸೂಕ್ತ ಪಠಿಸುತ್ತ ಹಾಕಬೇಕು.

ಪುಂಸವನದಲ್ಲಿ ಮೊಸರು, ಇದರ ಮೇಲೆ ಜವೆ ಗೋಧಿ ಕಾಳನ್ನಿಟ್ಟು ಒಂದೊಂದು ಉದ್ದಿನಕಾಳುಗಳನ್ನು ಇಟ್ಟು ಪುರುಷಲಿಂಗಾಕಾರ ಮಾಡಿ, ಪತ್ನಿಗೆ ತೋರಿಸಿ ಕಿಂಪಿಬಸಿ ಎಂದು ಕೇಳಿದಾಗ **'ಪುಮಾಂಸ ಪಿಬಾಮಿ'** ಎನ್ನುವಳು. ಹೀಗೆ ಮೂರಾವೃತ್ತಿ ನಡೆಸಿ ರಸವನ್ನು ಕುಡಿಯುತ್ತಾಳೆ.

ಹೀಗೆ ಪುರುಷ ಚಿಹ್ನೆ ಲಿಂಗವನ್ನು ಚಿಂತಿಸುತ್ತಾ ರಸವನ್ನು ಮೂಗಿನ

ಮೂಲಕ ಕುಡಿದಾಗ, ಕೀಟ ಪೇಷಸ್ಕಾರಿ ನೆನವಿಲಿ ಕೀಟಭಾವವು ತೊರೆದು ಖೇಟಭಾವ ಹೊಂದುವಂತೆ ಪುಮಾನವನ್ನೇ ಹಡೆಯುವಳು.

***ಅನವಲೋಭನ :***

ಇದನ್ನು ಸಹ ಪುಂಸವನದೊಂದಿಗೆ ಮಾಡುವರು. ಇದೂ ಮೂರನೆ ತಿಂಗಳಲ್ಲಿ ನಡೆಸಬೇಕು. ಗರ್ಭಕೋಶದಲ್ಲಿ ದ್ರವರೂಪದಲ್ಲಿದ್ದ ಶುಕ್ರ-ಶೋಣಿತವು ಮಾಂಸರೂಪ ತಾಳುವ ಈ ಮಾಸದಲ್ಲಿ ಇಂದ್ರಿಯಗಳ ಉತ್ಪತ್ತಿಯಾಗುತ್ತಿರುತ್ತವೆ. ಪುಂಸವನ ಸಂಸ್ಕಾರದಲ್ಲಿ ವಿಹಿತವಾದ ಮಂತ್ರಗಳಿಂದಲೇ ಅನವಲೋಭನ ಸಂಸ್ಕಾರ ನಡೆಸಬೇಕು. ಲೋಭನವೆಂದರೆ ಅದು ಬೇಕು, ಇದು ಬೇಕೆಂಬ ಬಯಕೆಗಳು. ಇವು ಯಾವ ಕರ್ಮದಿಂದ ಗರ್ಭಿಣಿಗೆ ಕಡಮೆಯಾಗಿ ಶಿಶುವು ಚೆನ್ನಾಗಿ ಬೆಳೆಯಲು ಕಾರಣವಾಗುವುದು. ಅದು ಅನನಲೋಭನ, ಬಯಕೆಗಳು ದುರ್ವಾರಸದಿಂದ ಎರಡು ಹೃದಯವುಳ್ಳ ಗರ್ಭಿಣಿಗೆ ಕಾಮನೆಗಳು ಅತಿಯಾಗದೆ ಶಿಶುವು ದೈವಿಕ ಶಕ್ತಿಯಿಂದಾಗಿ ಬೆಳೆಯುತ್ತದೆ.

- ***ಸೀಮಂತೋನ್ನಯನ :***

ಸೀಮಂತವೆಂದರೆ ಬೈತಲೆ. ಯಾವ ಕರ್ಮದಲ್ಲಿ ಗರ್ಭಿಣಿಯ ಬೈತಲೆಯು ವಿಭಾಗಗೊಳಿಸಲ್ಪಡುತ್ತದೆಯೋ ಅದು ಸೀಮಂತೋನ್ನಯನ.

**ಯಸ್ಮಿನ್ ಕರ್ಮಣಿ ಗರ್ಭಿಣ್ಯಾಃ ಸೀಮಂತಃ ಉನ್ನೀಯತೇ ತತ್ ।**

**ಸೀಮಂತದ ಕಾಲ** – ಸೀಮಂತವೆಂದರೆ ಗರ್ಭಿಣಿಯ ತಲೆಯ ಬೈತಲೆಯಲ್ಲಿ ರೇಖೆಯೊಂದನ್ನು ಒಯ್ಯುವುದು.

ಸ್ತ್ರೀಯ ಗರ್ಭ ಧರಿಸಿದ ನಾಲ್ಕನೇ ತಿಂಗಳು, ಆರು, ಏಳು, ಎಂಟು ತಿಂಗಳಲ್ಲಿ ಸೀಮಂತ ಮಾಡಬೇಕು. ಪದ್ಧತಿಯಲ್ಲಿ ಏಳು ಅಥವಾ ಏಳು ಮುಗಿದು ಎಂಟರಲ್ಲಿ ನಡೆಯುತ್ತದೆ. **ಸಾಂಖ್ಯಾಯನ ಗೃಹ್ಯೇಃ**

**ಸಪ್ತಮೇ ಮಾಸಿ ಪ್ರಥಮೇ ಗರ್ಭೇ ಸೀಮಂತೋನ್ನಯನಂ ।**

ಸೀಮಂತಕ್ಕೆ ಶುಕ್ಲ ಪಕ್ಷದಲ್ಲಿ ಯಾವ ದಿನವಾದರೂ ಶ್ರೇಷ್ಠವೇ, ಚತುರ್ಥೀ, ಚತುರ್ದಶೀ, ಪೂರ್ಣಿಮೆಗಳು ಪ್ರಶಸ್ತವೆ.

**ಪೂರ್ವಪಕ್ಷಃ ಶುಭಃ ಪ್ರೋಕ್ತಃ ಕೃಷ್ಣಶ್ಚಾಂತ್ಯಂ ತ್ರಿಕಂ ವಿನಾ ।**

* ***ಸೀಮಂತ ಏಕೆ ಮಾಡಬೇಕು ?***

ಮಾರ್ಕಂಡೇಯ ಪುರಾಣವು – ಕೆಲವು ದುಷ್ಟಗ್ರಹಗಳು ಗರ್ಭಿಣಿಯ ಗರ್ಭವನ್ನು ತಿಂದು ಹಾಕಲು ಕಾಯುತ್ತಿರುತ್ತವೆ. ಇವುಗಳಲ್ಲಿ ವಿಕೃತಿ ಹಾಗೂ ವಿರೂಪಾ ಎಂಬ ಗ್ರಹಗಳು. ಮರ, ಪೊದೆ, ನದಿ, ಸಮುದ್ರ ದಂಡೆಗಳಿರುತ್ತಾ ಅಲ್ಲಿಗೆ ಬಂದ ಗರ್ಭಿಣಿಯ ಗರ್ಭವನ್ನು ತಿಂದು ಹಾಕುತ್ತವೆ.

ಗರ್ಭನಾಶ ಮಾಡುವ ಗರ್ಭ ಹಂತ್ರುವೆಂಬುವನ ಮಗನೇ ವಿಘ್ನ. ಮೋಹಿನೀ ಎಂಬ ಪುತ್ರಿಯೂ ಇರುವಳು.

ಗರ್ಭಿಣಿಯರು ಅಶುಚಿಯಾಗಿದ್ದಾಗ ವಿಘ್ನನು ಅವರನ್ನು ಪ್ರವೇಶಿಸಿ ಗರ್ಭ ತಿನ್ನುವನು. ಮೋಹನಿಯ ಗರ್ಭಸ್ರಾವ ಮಾಡುವಳು.

**ಪತ್ನ್ಯಾಂ ಪ್ರಥಮಜಂ ಗರ್ಭಮತ್ತು ಕಾಮಾಃ ಸುದುರ್ಮದಾಃ ।**
**ಆಯಾಂತಿ ಕಾಶ್ಚಿದ್ ರಾಕ್ಷಸ್ಯಃ ರುಧಿರಾಶನತತ್ಪರಾಃ ॥**

ಈ ಮಾಂಸಾಶಿಗಳನ್ನು ಬ್ರಹ್ಮದೇವನೇ ಸೃಷ್ಟಿಸಿರುವನು. ಇವರು ಪ್ರಥಮ ಗರ್ಭದ ಶಿಶುವನ್ನು ತಿಂದು ಹೋಗುತ್ತವೆ. ಬ್ರಹ್ಮದೇವನೇ ಇವರಿಗೆ ಈ ರೀತಿ ಜೀವಿಸಲು ಆದೇಶಿಸಿರುವನು.

**ಕಾ ಸಾಂಚಿತ್ ತಾದೃಶೀ ವೃತ್ತಿಃ ಬ್ರಹ್ಮಣಾ ವಿಹಿತಃ ಪುರಾ ।**

ಇದರ ಪರಿಹಾರಕ್ಕಾಗಿ ಪತಿಯು ತನ್ನ ಅಂತರ್ವರ್ತ್ನಿಯಾದ ಪತ್ನಿಯಲ್ಲಿ ಲಕ್ಷ್ಮೀದೇವಿಯನ್ನು ಅವಾಹಿಸಬೇಕು.

**ಸೀಮಂತಕರಣೇ ಲಕ್ಷ್ಮೀ ತಾಮಾವಹತಿ ಮಂತ್ರತಃ ।**

ಲಕ್ಷ್ಮಿಯು ಆವಾಹಿತಳಾದ ಗರ್ಭಿಣಿಯನ್ನು ಇವರು ಬಿಟ್ಟು ತೊಲಗುವರು.

**ಶ್ರಿಯಾ ಶ್ರಿತಶರೀರತ್ವಾತ್ ತಾಂ ತ್ಯಜಂತೀಹ ಮೋಹಿತಾಃ ।**
**ತಸ್ಮಾತ್ ಪ್ರಥಮ ಗರ್ಭಸ್ಯ ಸೀಮಂತಾಖ್ಯೋ ವಿಧೀಯಃ ತೇ ॥**

ಮತ್ತೊಂದು ಕಾರಣವನ್ನು ಸುಶ್ರುತ ಸಂಹಿತೆ ಹೇಳಿದೆ. ಗರ್ಭಸ್ಥ ಶಿಶುವಿನ ಬುದ್ಧಿಯ ಬೆಳವಣಿಗೆಯು ಐದನೆಯ ಮಾಸದಿಂದ ಪ್ರಾರಂಭವಾಗುತ್ತದೆ.

ಈ ಸೀಮಂತದಲ್ಲಿ ಮಾಡುವ ಮುಳ್ಳು ಹಂದಿಯ ಮುಳ್ಳುನಿಂದ ಬೈತಲೆಯನ್ನು ಉನ್ನಯನ ಮಾಡಿದಾಗ ಗರ್ಭಸ್ಥ ಶಿಶುವಿಗೂ ಬುದ್ಧಿಯು ಚುರುಕಾಗುತ್ತದೆ.

ಸೀಮಂತ ವಿಧಿ : ಸೀಮಂತಕ್ಕೆ ಪತಿಯೇ ಕರ್ತೃವು.

**ಮಮ ಅಸ್ಯಾಂ ಭಾರ್ಯಾಯಾಂ ಗರ್ಭಾಭಿವೃದ್ಧಿ ಪರಿಪಂಥಿಪಿಶಿತ ರುಧಿರಪ್ರಿಯಾ ಅಲಕ್ಷ್ಮೀಭೂತ ರಾಕ್ಷಸೀಗಣ ದೂರ ನಿರಸನಕ್ಷಮ, ಸಕಲ ಸೌಭಾಗ್ಯ ಕಾರಣ ಮಹಾಲಕ್ಷ್ಮೀ ಸಮಾವೇಶನ ದ್ವಾರಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಸ್ತ್ರೀ ಸಂಸ್ಕಾರ ರೂಪಂ ಸೀಮಂತೋನ್ನಯನಾಖ್ಯಂ ಕರ್ಮಕರಿಷ್ಯೆ.**

ಸೀಮಂತದಲ್ಲಿ ಧಾತೃ, ರಾಕಾರನ್ನು ಎರಡು ಬಾರಿಯೂ, ವಿಷ್ಣುವನ್ನು ಮೂರು ಬಾರಿಯು, ಪ್ರಜಾಪತಿಯನ್ನು ಒಂದು ಬಾರಿ ಆಜ್ಯದಿಂದ ಹೋಮಿಸುವುದು.

- *ಗರ್ಭಿಣೀ ಧರ್ಮ ಸಂಗ್ರಹ :*

ಗರ್ಭಿಣಿಯು ಒನಕೆ, ಬೀಸುವಕಲ್ಲು, ಒರಳು ಮೊದಲಾದವುಗಳ ಮೇಲೆ ಕೂಡಬಾರದು. ನೀರಲ್ಲಿ ಮುಳುಗಿ ಸ್ನಾನ ಮಾಡಬಾರದು. ಯಾರು ವಾಸಿಸದ ಮನೆಯನ್ನಾಗಲೀ, ವೃಕ್ಷದ ಬುಡದಲ್ಲಿ ಏಕಾಂಗಿಯಾಗಿ ಕೂಡಬಾರದು.

**ನಾವಸ್ಕರೇಷೂಪವಿಶೇತ್ ಮುಸಲೋಲೂಖಲಾದಿಷು ।**
**ಜಲಂ ಚ ನಾವಗಾಹೇತ ಶೂನ್ಯಾಗಾರಂ ಚ ವರ್ಜಯೇತ್ ॥**

ಹುತ್ತದ ಮೇಲೆ, ಉಪ್ಪರಿಗೆ ಎತ್ತರದ ಸ್ಥಾನ ಹತ್ತಬಾರದು. ವ್ಯಾಯಾಮ, ಓಡುವುದು, ಗಾಡಿಯನ್ನು ಹತ್ತುವುದು ನಿಷಿದ್ಧ. ಉದ್ವಿಗ್ನ ಮನಸ್ಕಳಾಗದೆ ಇರುವುದು. ಉಗುರುನಿಂದ ಭೂಮಿಯನ್ನು ಬರೆಯುವುದು, ಇದ್ದಿಲು, ಭಸ್ಮಗಳಿಂದ ಬರೆಯಬಾರದು.

**ವಿಲಿಖೇನ್ನ ನಖೈಃ ಭೂಮಿಂ ನಾಂಗಾರೇಣ ಚ ಭಸ್ಮನಾ ।**

ಯಾವಾಗಲೂ ಮಲಗಿರಬಾರದು, ಹಗಲು ನಿದ್ರೆ ನಿಷಿದ್ಧ, ರಾತ್ರಿ ಜಾಗರಣೆ, ಜಗಳ, ಅವಯವಗಳನ್ನು ಹಿಂಡಿಕೊಳ್ಳುವುದು ನಿಷಿದ್ಧವು.

**ನ ಶಯಾಲುಃ ಸದ ತಿಷ್ಠೇದ್ ವ್ಯಾಯಾಮಂ ಚ ವಿವಜಯೇತ್ ।**
**ವರ್ಜಯೇತ್ ಕಲಹಂ ಗೇಹೇ ಗಾತ್ರಭಂಗಂ ತಥೈವ ಚ ॥**

ತಲೆಕೂದಲು ಬಿರಿ ಹಾಕಿಕೊಂಡಿರುವುದು, ಅಶುಚಿಯಾಗಿರಬಾರದು. ಅಮಂಗಲ ಶಬ್ದ ಆಡಬಾರದು. ಬಹು ಹಾಸ್ಯ ಮಾಡುತ್ತಾ ನಗಾಡಬಾರದು.

**ನ ಮುಕ್ತಕೇಶಾ ತಿಷ್ಠೇತ ನಾಶುಚಿಃ ಸ್ಯಾತ್ ಕದಾಚನ ।**
**ನಾಮಂಗಲ್ಯಂ ವದೇತ್ ವಾಕ್ಯಂ ನ ಚ ಹಾಸ್ಯಾಧಿಕಾ ಭವೇತ್ ॥**

ಉತ್ತರದಿಕ್ಕಿಗೆ ತಲೆ ಹಾಕಿ ಮಲಗುವುದು, ತಲೆಕೆಳಗಾಗಿ ಮಾಡುವುದು, ವಸ್ತ್ರವಿಲ್ಲದೆ ನಗ್ನಳಾಗಿ ಸ್ನಾನಾದಿಗಳು, ಉದ್ವಿಗ್ನ ಮನಸ್ಕಳಾಗಿರಬಾರದು. ಒದ್ದೆ ಕಾಲನ್ನು ಒರಸದೆ ಇರಬಾರದು. ಅತ್ತೆ ಮಾವಂದಿರ ಪತಿಯ ಪೂಜಾದಿಗಳಿಂದ ಆಶೀರ್ವಾದ ಪಡೆಯಬೇಕು.

**ಕುರ್ಯಾತ್ ಶ್ವಶುರಯೋಃ ನಿತ್ಯಂ ಪೂಜಾಂ ಮಾಂಗಲ್ಯ ತತ್ಪರಾ ।**

ಅತಿಯಾದ ಉಪ್ಪು, ಖಾರ, ಹುಳಿ, ಬಿಸಿಯಾದ, ಹೊಟ್ಟೆ ಭಾರವಾಗುವಂತಹ ಆಹಾರ ತಿನ್ನಬಾರದು.

ಸಂಜೆ ಕಾಲದಲ್ಲಿ ತಿನ್ನುತ್ತ ಇರಬಾರದು. ಉಗುರು ಬಿಸಿ ನೀರಿನಿಂದ ಸ್ನಾನ *(ಕೋಷ್ಣೇನ ವಾರಿಣಾ ಸ್ನಾನಂ)*

ಎಲ್ಲ ರೀತಿಯಿಂದಲೂ ಗರ್ಭವನ್ನು ರಕ್ಷಿಸುತ್ತಾ, ಹೂವು ಮೊದಲಾದವು–ಗಳಿಂದ ತನ್ನನ್ನು ಅಲಂಕರಿಸಿಕೊಂಡು, ವಾಸ್ತು ದೇವತಾ ಪೂಜಾದಿಗಳಲ್ಲಿ ನಿರತಳಾಗಿ, ವಿಧವಿಧವಾದ ದಾನ ಮಾಡುತ್ತಿರಬೇಕು. ಗೌರೀ ತೃತೀಯಾದಂದು ರಾತ್ರಿ ಪಾರ್ವತೀ ವ್ರತವನ್ನಾಚರಿಸಬೇಕು.

**ದಾನಶೀಲಾ ತೃತೀಯಾಯಾಂ ಪಾರ್ವತ್ಯಾಃ ನಕ್ತ ಮಾಚರೇತ್ ।**

ಕೋಳಿಯಂತೆ ಕಾಲುಗಳನ್ನು ಮಡಚಿಕೊಳ್ಳುವುದು, ರಕ್ತಪಾತ, ಭಯ ಪಡುವುದು, ಹೀಗೆಲ್ಲ ಶಾಸ್ತ್ರ ವಿಧಿಯಂತೆ ಆಚರಿಸಿದರೆ ದೀರ್ಘಾಯು–ಷ್ಮಂತನಾದ ಪುತ್ರನು ಜನಿಸುವನು. ಶಾಸ್ತ್ರೀಯ ವಿಧಿಯನ್ನು ಧಿಕ್ಕರಿಸಿದರೆ ಗರ್ಭಪಾತ ನಿಶ್ಚಿತ.

**ಅನ್ಯಥಾ ಗರ್ಭಪತನ ಮಾಪ್ನೋತಿ ನ ಸಂಶಯಃ ।**

- *ಗುರ್ವಿಣೀ ಪತಿ ನಿಯಮ :*

ಗರ್ಭಿಣಿಗೆ ದೋಹದವನ್ನು ಪೂರೈಸುವುದು ಆದ್ಯ ಕರ್ತವ್ಯ. ಈಗ ಗರ್ಭಿಣಿಯು ಎರಡು ಹೃದಯವುಳ್ಳವಳು. ಇವಳ ಆಸೆಯನ್ನೇ 'ದೋಹದ' ಬಯಕೆ.

ನಿಷಿದ್ಧವಲ್ಲದ ಬಯಕೆಯನ್ನು ಪೂರೈಸದಿದ್ದರೆ ಗರ್ಭವು ದೋಷ ಹೊಂದಿ ಮಗುವು ವಿರೂಪ ಹೊಂದಬಹುದು, ಮೃತವಾಗಲೂಬಹುದು.

**ದೋಹದಸ್ಯಾ ಪ್ರದಾನೇನ ಗರ್ಭೋೀ ದೋಷ ಮವಾಪ್ನುಯಾತ್ ।**

ಗರ್ಭಿಣೀಪತಿಗೂ ನಿಯಮಗಳನ್ನು ಹೇಳಿದ್ದಾರೆ.

ಪತ್ನಿಯು ಗರ್ಭ ಧರಿಸಿ ಏಳು ತಿಂಗಳಾದ ಮೇಲೆ ಕ್ಷೌರ ಮಾಡಿಸಿ–ಕೊಳ್ಳಬಾರದು. ಗರ್ಭಕ್ಕೆ ತೊಂದರೆಯಾಗುವುದರಿಂದ ಅವಳೊಂದಿಗೆ ಸಂಗವನ್ನೂ, ತೀರ್ಥಯಾತ್ರೆ, ಸಮುದ್ರ ಸ್ನಾನ ಮಾಡುವುದು, ಮರಗಳನ್ನು ಕತ್ತರಿಸುವುದು, ಶವವನ್ನು ಹೊರುವುದು, ಬಹುದೂರ ಪ್ರವಾಸ ಹಡಗಿನಲ್ಲಿ ಪ್ರಯಾಣಾದಿಗಳನ್ನು ಮಾಡುವಂತಿಲ್ಲ.

**ವಪನಂ ಮೈಥುನಂ ತೀರ್ಥಂ ವರ್ಜಯೇದ್ ಗರ್ಭಿಣೀಪತಿಃ ।**
**ಸಿಂಧುಸ್ನಾನಂ ದ್ರುಮಚ್ಛೇದಂ ವಪನಂ ಪ್ರೇತವಾಹನಂ ॥**
**ವಿದೇಶಗಮನಂ ಚೈವ ನ ಕುರ್ಯಾದ್ ।**

ಸೀಮಂತವಾದ ಮೇಲೆ ನೈಮಿತ್ತಿಕ ಕ್ಷೌರ ನಿಷೇಧವಿಲ್ಲ. ತಂದೆ ತಾಯಿಯರ ಪ್ರೇತವಹನವೂ ಕಾರ್ಯವೆ.

**ಗರ್ಭಸ್ರಾವ ಪರಿಹಾರ :** ಗರ್ಭಿಣಿಯು ತಾನೇ ಸುವರ್ಣ ಯಜ್ಞೋಪವೀತ ದಾನ ಮಾಡಿದ್ದಾದರೆ ಗರ್ಭಸ್ರಾವ ನಿವೃತ್ತಿಯು. ಹಿಂದೆ ಬಾಲಕನನ್ನು ವಿಷವಿಟ್ಟು ಕೊಂದದ್ದಾಗಿದ್ದರೆ ಗರ್ಭಸ್ರಾವವಾಗುತ್ತದೆ.

***ಸುಖವಾಗಿ ಪ್ರಸವವಾಗುವ ರೀತಿ :***

ಪ್ರಸೂತಿಯಾಗಲು ತೊಂದರೆವುಂಟಾದಾಗ 'ಪ್ರಮಂದಿನ' ಎಂಬ ಮಂತ್ರವನ್ನು ಜಪಿಸುವುದು ಅಥವಾ ಅಭಿಮಂತ್ರಿತವಾದ ನೀರನ್ನು ಗರ್ಭಿಣೀ ಕುಡಿಯುವುದು.

ಅಥವಾ

**ಓಂ ಕ್ಲೀಂ ಸ್ವಾಹಾ** ಎಂಬ ಮಂತ್ರದಿಂದ ತಿಲತೈಲವನ್ನು ದೂರ್ವೆಯನ್ನೂ, ನೂರು, ಸಾವಿರ ಬಾರಿ ಅಭಿಮಂತ್ರಿಸಿ ಗರ್ಭಿಣಿಗೆ ಕುಡಿಸಿ, ಉಳಿದ ಸ್ವಲ್ಪ ಭಾಗವನ್ನು ಗರ್ಭಕ್ಕೆ ಲೇಪಿಸಬೇಕು.

ಅಥವಾ

ಹಿಮಾಲಯದ ಉತ್ತರ ಭಾಗದಲ್ಲಿ 'ಸುರಥಾ' ಎಂಬ ಯಕ್ಷಿಣೀ ಇರುವಳು. ಅವಳನ್ನು ಸ್ಮರಿಸಿದರೆ ಶಸ್ತ್ರ ಚಿಕಿತ್ಸೆಯಿಲ್ಲದೆ ಸುಖವಾಗಿ ಪ್ರಸೂತಿಯಾಗುತ್ತದೆ.

**ಹಿಮವತ್ಯುತ್ತರೇ ಪಾರ್ಶ್ವೇ ಸುರಥಾ ನಾಮ ಯಕ್ಷಿಣೀ ।**
**ತಸ್ಯಾಃ ಸ್ಮರಣ ಮಾತ್ರೇಣ ವಿಶಲ್ಯಾ ಗರ್ಭಿಣೀ ಭವೇತ್ ॥**

- ***ಗರ್ಭಿಣಿಯರ ದಾನಗಳು :***

  ಅಷ್ಟಮಂಗಲಗಳೆನಿಸಿದ ಹರಿದ್ರ, ಬೆಲ್ಲ, ಓಲೆ, ಅರಳು, ಜೀರಿಗೆ, ಹೂ, ಉಪ್ಪು, ಹಣ್ಣು ಇವುಗಳನ್ನು ದಾನ ಮಾಡಬೇಕು.

**ಮೂರನೇ ತಿಂಗಳು ದಾನ :** ಪತ್ನಿಗೆ ಮೂರನೇ ತಿಂಗಳು ಬಂದಾಗ ಚೆನ್ನಾಗಿ ಬಲಿತಿರುವ ಬೂದುಗುಂಬಳ ಕಾಯಿಯನ್ನು ದಾನ ಮಾಡುವುದು. ದಾಳಿಂಬೆ ಹಣ್ಣು ದಾನ ಮಾಡಬೇಕು.

**ತೃತೀಯಮಾಸೇ ಕೂಷ್ಮಾಂಡಫಲಂ ದದ್ಯಾತ್ ।**
**ದದ್ಯಾತ್ ದಾಡಿಮಮುತ್ತಮಮ್ ॥**

ವಸ್ತ್ರ ದಾನವನ್ನು ವಿಧಿಸಲಾಗಿದೆ. ಸುವಾಸಿನಿಯರಿಗೂ ಯಥಾಶಕ್ತಿ ಹಣ್ಣುಗಳನ್ನು ದಾನ ಮಾಡಿದರೆ ಸುಖಪ್ರಸವ.

**ನಾಲ್ಕನೇ ತಿಂಗಳು :** ಮಾದಲ ಫಲವನ್ನು ದಾನ ಮಾಡುವುದು. ಐದನೇ ತಿಂಗಳು ಬಿದ್ದಾಗ ತೆಂಗಿನಕಾಯಿ ದಾನ ವಿಶೇಷ. ಆರನೇಯ ತಿಂಗಳು ಹಲಸಿನ ಹಣ್ಣು ದಾನವನ್ನು ಮಾಡುವುದು: ಏಳನೇ ತಿಂಗಳು ಮಾವಿನಹಣ್ಣನ್ನು, ಎಂಟನೇ ತಿಂಗಳು ಗಜನಿಂಬೆಯನ್ನು, ನವಮ ತಿಂಗಳಲ್ಲಿ ಬಾಳೆ ಹಣ್ಣು ದಾನ ವಿಹಿತವಾಗಿದೆ. ಯಾವುದೇ ಹಣ್ಣು ಸಿಗದಿದ್ದಾಗ ಬಾಳೇಹಣ್ಣನ್ನೆ ದಾನ ಮಾಡಬಹುದು.

**ಲಿಕುಚಂ ನವಮೇ ಮಾಸಿ ಕದಲೀ ಫಲಗುಚ್ಛ ಕಮ್ ।**
**ಸರ್ವದಾ ಸರ್ವಮಾಸೇಷು ಪ್ರಶಸ್ತಂ ಕದಲೀಫಲಮ್ ॥**

ಈ ರೀತಿ ಶಾಸ್ತ್ರದಲ್ಲಿ ಹೇಳಿದ ದಾನಗಳಿಂದ ಆಯಾಯ ದೇವತೆಗಳು ಪ್ರೀತರಾಗುವರು. ಸತ್ಪುತ್ರರನ್ನು ಕರುಣಿಸುವರು. ಗರ್ಭಿಣಿಯು ನಿರಂತರವಾಗಿ ಹರಿಯ ಧ್ಯಾನ ತತ್ಪುರಳಾಗಿರಬೇಕು. ಉತ್ತರೆಯ ಗರ್ಭಕ್ಕೆ ದ್ರೌಣಿಯು ಬ್ರಹ್ಮಾಸ್ತ್ರ ಬಿಟ್ಟಾಗ ಶ್ರೀಕೃಷ್ಣನನ್ನು ವಿಶೇಷವಾಗಿ ಪ್ರಾರ್ಥಿಸಿ ಗರ್ಭವನ್ನು ರಕ್ಷಿಸಿಕೊಂಡಂತೆ ಗರ್ಭಿಣಿಯರು ತನ್ನ ಗರ್ಭರಕ್ಷಣೆಯ ಪ್ರಾರ್ಥನೆ ಹರಿವಂಶ ಶ್ರವಣ ಪಠಣದಿಂದ ಗರ್ಭವನ್ನು ಸಂಸ್ಕೃತಗೊಳಿಸಬೇಕು. ಲೌಕಿಕ ವಿಷಯನ್ನು ದೂರದಿಂದಲೇ ತ್ಯಜಿಸಬೇಕು. ಕಯಾಧುವು ಗರ್ಭಿಣಿಯಾದಾಗ ನಾರದರಿಂದ

ವಿಶೇಷ ಹರಿಕಥೆಯನ್ನು ಕೇಳಿದ್ದಕ್ಕಾಗಿ ಪ್ರಹ್ಲಾದನಂತಹ ಮಹಾಭಾಗವತ ಅವತರಿಸಿದ.

ಐತರೇಯ ಹೇಳುವಂತೆ ಗರ್ಭಿಣಿಯು ತನ್ನ ಗರ್ಭಗತ ಶಿಶು ರಕ್ಷಕ ಶ್ರೀಹರಿಯನ್ನೆ ಹೊರುತ್ತಿದ್ದೇನೆಂದು ಭಾವಿಸಬೇಕು. ಪುತ್ರನನ್ನು ಹೊತ್ತಿದ್ದರೂ ಶಿಶುವಿನಲ್ಲಿರುವ ಶ್ರೀಹರಿ ಭಾವನೆಯನ್ನೇ ಹೊಂದಿರಬೇಕು.

**ತದ್ಗತ್ವಾದ್ ಹರಿಭಾವನಾ ।**

ಹಾಗೆಯೇ ಪತಿ ಮೊದಲಾದವರೂ ಸಹ ಪತ್ನಿಯನ್ನು ಆದರಿಸುವಾಗ ಗರ್ಭದಲ್ಲಿ ಶಿಶುವನ್ನು ರಕ್ಷಿಸುತ್ತಿರುವ ಹರಿಯನ್ನು ದೃಷ್ಟಿಯಲ್ಲಿ ಹೊಂದಿ ಗೌರವಿಸಬೇಕು.

**ಸಂಭಾವನಂ ಕುಮಾರಸ್ಯ ಜಾನತಃ ಕೇಶವೆ ಭವೇತ್ ।**

ಗರ್ಭಿಣಿಯು ಯಾವಾಗಲೂ **'ಶ್ರೀಕೃಷ್ಣಾಯ ನಮಃ'** ಎಂದು ಉಚ್ಚರಿಸು–ತ್ತಿರಬೇಕು. ಶ್ರೀಕೃಷ್ಣನು ತನ್ನ ತಾಯಿ ಯಶೋದೆಯ ತೊಡೆಯ ಮೇಲೆ ಮಲಗಿರುವ ಚಿತ್ರವನ್ನು ನೆನಪಿಸಿಕೊಳ್ಳಬೇಕು. ಬ್ರಾಹ್ಮಣನ ಮಕ್ಕಳನ್ನು ತಂದು ನೀಡಿದ, ಹಾಗೂ ದೇವಿಕಿಯ ಆರು ಮಂದಿ ಮಕ್ಕಳನ್ನು ತಂದು ತೋರಿಸಿ, ಅವರನ್ನು ಚಿಕ್ಕ ಮಕ್ಕಳನ್ನಾಗಿ ಮಾಡಿ, ದೇವಕಿಯನ್ನೂ ಹಾಲು ಕೊಡುವ ವಯಸ್ಸಿನವಳನ್ನಾಗಿ ಮಾಡಿ ತಾನೂ ಮಗುವಾಗಿ ಹಾಲು ಕುಡಿದು, ಉಳಿದ ಮಕ್ಕಳಿಗೂ ಕುಡಿಸಿ ಅವರಿಗೆ ಶಾಪದಿಂದ ಮುಕ್ತಿ ಕರುಣಿಸಿದ ಚಿತ್ರ ತಂದುಕೊಳ್ಳುತ್ತಿರಬೇಕು.

**ಪೀತಶೇಷಂ ಗದಾಭೃತಃ ।**

ಸುಖ ಪ್ರಸವವಾಗಲು ಮನಸ್ಸು ಯಾವುದೇ ಉದ್ವಿಗ್ನತೆಗೆ ಒಳಗಾಗದಿರುವುದು. ಇದು ಗರ್ಭ ನಿಂತಾಗಲಿಂದ ಪ್ರಸವ ಪರ್ಯಂತ ಹರಿಕಥಾ ಶ್ರವಣದಿಂದ ಮಾತ್ರ ಸಾಧ್ಯ. ಶ್ರೀಕೃಷ್ಣನ ಬಾಲಲೀಲೆಗಳು, ಶ್ರೀಮಧ್ವರ ಬಾಲಲೀಲೆ, ಪ್ರಹ್ಲಾದ, ಧ್ರುವ, ಉದ್ಧವ, ಮೊದಲಾದ ಬಾಲ ಭಕ್ತರ ಕಥೆ ಕೇಳಬೇಕು. ಸದ್ವಿಚಾರವೇ ತುಂಬಿರಬೇಕು.

ದೂರದರ್ಶನ ನಿಂದಿತ ದೃಶ್ಯಾವಳಿಗಳನ್ನು, ಅಲ್ಲಿ ಮೂಡಿ ಬರುವ ಕೆಟ್ಟ, ಅಪ್ರಾಮಾಣಿಕ, ಸಾಂಸಾರಿಕ ಕಥೆಗಳನ್ನು ನೋಡಲೇಬಾರದು. ಇದು ಮಗುವಿನ ಮೇಲೆ ಬಹುವಾಗಿ ಪ್ರಭಾವ ಬೀರುತ್ತದೆ.

ಗರ್ಭಿಣಿಗೆ ಹೇಳಿದ ನಿಯಮಾವಳಿಗಳೆಲ್ಲ ಗರ್ಭದಲ್ಲಿರುವ ಮಗುವಿನ ಕ್ಷೇಮಕ್ಕಾಗಿಯೆ ಹೊರತು ಇದೊಂದು ಶಿಕ್ಷೆಯಲ್ಲ. ಉದಾ –

ಅತ್ತೆ ನಾದಿನಿಯರೊಂದಿಗೆ ಜಗಳವಾಡುತ್ತಿದ್ದರೆ ಮುಂದೆ ಹುಟ್ಟುವ ಮಗನು ಜಗಳಗಂಟನೂ, ಮೂರ್ಛೆರೋಗವುಳ್ಳವನಾಗುವನು.

**ತಸ್ಮಾದಹಿತ ಆಹಾರವಿಹಾರಾನ್ ಪ್ರಜಾಸಂಪದಮಿಚ್ಛಂತಿ ಸ್ತ್ರೀ ವಿಶೇಷೇಣ ವರ್ಜಯೇತ್ ।**

**ಸಾಧ್ವಾಚಾರಾ ಹಿತಾಭ್ಯಾಮಾಹಾರವಿಹಾರಾಭ್ಯಾಂ ಚಾತ್ಮಾನಂ ಉಪಚರೇತ್** ॥ – *ಆಯು.ದೀ.*

* * * *

## ಜಾತಕ ಕರ್ಮ

ವ್ಯಾಸಸ್ಮೃತಿಯು [1/17] – ಸಂತಾನವಾದ ಮೇಲೆ ಜಾತಕರ್ಮ ಮಾಡಬೇಕು. ಹೊಕ್ಕಳು ಬಳ್ಳಿಯನ್ನು ಕತ್ತರಿಸುವ ಮೊದಲೇ ನಡೆಸಬೇಕಾದ ಸಂಸ್ಕಾರವಿದು. ಶಿಶುವು ಗರ್ಭದಲ್ಲಿದ್ದಾಗ ಗರ್ಭದಲ್ಲಿರುವ ಹೊಲಸು ನೀರನ್ನು ಕುಡಿದಿರುತ್ತದೆ. ಇದರಿಂದ ಮುಂದೆ ಮಗುವಿಗೆ ಆರೋಗ್ಯದಲ್ಲಿ ಏರುಪೇರು ಆಗುವ ಸಂಭವವಿದೆ [ಮನು 2/29]

**ಪ್ರಾಙ್ನಾಭಿವರ್ಧನಾತ್ ಪುಂಸೋ ಜಾತಕರ್ಮ ವಿಧಿಯತೇ ।**

ತಾಯಿಯು ಹಾಲು ಕುಡಿಸುವ ಮೊದಲು, ನಾಭಿಛೇದವಾದ ಮೇಲೆಯೂ ಜಾತಕರ್ಮವು ವಿಹಿತ,

ಮಗುವು ಜನಿಸಿದಾಗ ತಂದೆಗೆ ಬೇರೆ ಮೃತಾಶೌಚವಿದ್ದಾಗ ಹನ್ನೊಂದನೇ ದಿನ ಮಾಡಬಹುದು.

**ಆಶೌಚಾಪಗಮೇ ಕುರ್ಯಾದ್ ಜಾತಕರ್ಮ ।**

ಹನ್ನೊಂದನೇ ದಿವಸವೂ ಅನಾನುಕೂಲವಾಗಿದ್ದಾಗ 15, 18, 21, 24, 27, 31 ದಿನಗಳಲ್ಲಾದರೂ ತಾತ್ಕಾಲಿಕ ಶುದ್ಧಿ ಇರುವುದರಿಂದ ಮಾಡಬಹುದು.

*ಜಾತಕರ್ಮ ಹೇಗೆ?*

ಗರ್ಭಿಣಿಯು ಸೂತಿಕಾಗೃಹಕ್ಕೆ ಪ್ರವೇಶಿಸುತ್ತಾಳೆ. ಶಂಖನಾದ, ವೀಣೆ,

ಘಂಟಾನಾದಗಳನ್ನು ಮಾಡಬೇಕು. ಇದರಿಂದಾಗಿ 'ಜಾತಹಾರಿಣೀ' ಎಂಬ ಬಾಲಗ್ರಹವು ಮಕ್ಕಳ ಮಾಂಸಾದಳಾಗಿದ್ದು ಇವಳಿಂದ ಮಗುವಿಗೆ ರಕ್ಷಣೆ ಸಿಗುತ್ತದೆ.

**ಸಾ ಜಾತಹಾರಿಣೀ ನಾಮ ಸುಘೋರಾ ಪಿಶಿತಾಶನಾ ।**

**ತಸ್ಮಾತ್ ಸಂರಕ್ಷಣಂ ಕಾರ್ಯಂ ಯತ್ನತಃ ಸೂತಿಕಾಗೃಹೇ ।**

***ಅಥರ್ವದ ನಾರೀ ಸುಖಪ್ರಸೂತಿ [1/11] :***

**ವಷಟ್ ತೇ ಪೂಷನ್ನಸ್ಮಿನ್ತ್ ಸೂತಾವರ್ಯಮಾ ಹೋತಾ ಕೃಣೋತು ವೇಧಾಃ ।**

**ದೇವಾ ಗರ್ಭಂ ಸಮಯರಯನ್ ತಂ ವ್ಯೂರ್ಣುವಂತು ಸೂತವೆ ॥**

ಇದರರ್ಥ : ಪೂಷನ್ ದೇವನೇ ! ಅರ್ಯ ಮನು ನಿನಗೆ ವಷಟ್ಕಾರ ಹೇಳಿ ಸಂಪ್ರೀತಿಗೊಳಿಸಲಿ. ಈ ಗರ್ಭಿಣಿಯು ಸರಿಯಾದ ಕ್ರಮದಲ್ಲಿ ಮಗುವನ್ನು ಹಡೆದು ವಿಶ್ರಾಂತಿ ಪಡೆಯಲಿ. ಮಗುವು ಹುಟ್ಟಲು ಅನುಕೂಲವಾಗುವಂತೆ ಗರ್ಭದ ಸುತ್ತಲೂ ಯೋನಿಯಲ್ಲಿ ಕೂಡಿಕೊಂಡಿರುವ ನರಗಳು ದೂರದೂರ ಸರಿಯಲಿ.

ನಾಲ್ಕು ದಿಕ್ಕು, ನಾಲ್ಕು ಭೂಭಾಗಗಳನ್ನು ರಕ್ಷಿಸುತ್ತಿರುವ ದೇವತೆಗಳು ಈ ಗರ್ಭ ಇವಳಿಗೆ ನೀಡಿದ್ದಾರೆ ***(ದೇವಾ ಗರ್ಭಂ ಸಮೈರಯಿನ್)*** ಗರ್ಭಿಣಿಯೇ! ಮಗುವು ಸುಖವಾಗಿ ಹೊರಬರುವಂತೆ ಗರ್ಭದಿಂದ ಮಗುವನ್ನು ಹೊರತಳ್ಳುವ ಸೂಕಷಣ/ಸೂತಿಕಾ ವಾಯುವು ನಿನ್ನ ಯೋನಿಯನ್ನು ಸಡಿಲಗೊಳಿಸಲಿ. ಇತ್ಯಾದಿ ಅರ್ಥವುಳ್ಳ ಇದನ್ನು ಹೇಳಿದರೆ ಸುಖಪ್ರಸವ ಖಂಡಿತ. ಕೆಲವೆಡೆ ಸೂತಿಕಾ ಗೃಹದಲ್ಲಿ ಕಬ್ಬಿಣದ ಅಗ್ಗಿಷ್ಟಿಕೆಯಲ್ಲಿ ಅಗ್ನಿ ಸ್ಥಾಪಿಸಿ ಬಿಳಿ ಸಾಸುವೆಯನ್ನು ಹಾಕುವರು. ಇದು ಜಾತಹಾರಿಣೀ ಉಚ್ಚಾಟನೆಗಾಗಿ. ದೀಪವನ್ನು ಕೋಲು, ಸಾಸಿವೆ, ಚುರಿಕಾ ಇಟ್ಟಿರಬೇಕು.

ಹಾಗೆಯೇ ವಾತಾವರಣದಲ್ಲಿ ಯಾವುದೇ ವೈರಾಣುಗಳು ಮಗುವನ್ನು ಬಾಧಿಸದಿರಲು ಧೂಪ, ಸಾಸುವೆ, ಅಕ್ಕಿಹಿಟ್ಟುಗಳನ್ನು ಅಗ್ನಿಗೆ ಹಾಕುತ್ತಿರಬೇಕು.

ತಂದೆಯಾದರೂ ಮಗುವಾದ ವಾರ್ತೆ ಕೇಳಿದ ಕೂಡಲೇ ಸಚೈಲ ನದ್ಯಾದಿಗಳಲ್ಲಿ ಜಿಗಿದು ಸ್ನಾನ ಮಾಡಬೇಕು. ಇವನು ಹಾರಿದಾಗ ನೀರು ಎಷ್ಟು ಮೇಲೆ ಹಾರುತ್ತವೋ ಅಷ್ಟು ಪಿತೃಗಳಿಗೆ ಸಂತೋಷ. ಹೀಗೆ ಸ್ನಾನ

ಮಾಡಿ ಶುಭ್ರ ವಸ್ತ್ರ ಧರಿಸಿ, ನಾಮಗಳನ್ನು ಧರಿಸಿ, ಮಂಗಳ ವಸ್ತುವಿನೊಂದಿಗೆ ಬಂದು ಮಗುವಿನ ಮುಖಾವಲೋಕನ ಮಾಡಬೇಕು. ಮುಖಾವಲೋಕನಾ ನಂತರ ಸ್ನಾನ ವಿಹಿತ.

**ಜಾತೇ ಪುತ್ರೇ ಪಿತಃ ಸ್ನಾನಂ ಸಚೈಲಂ ತು ವಿಧೀಯತೇ ।**

ಹೀಗೆ ಮಗುವಿನ ಮುಖವನ್ನು ತಂದೆಯು ನೋಡಿದಾಗ ಅವನು ಪಿತೃ ಋಣದಿಂದ ಮುಕ್ತನಾಗುವನು.

**ಪಿತೃ ಋಣಾದ್ ವಿಮುಚ್ಯೇತ ಪುತ್ರಸ್ಯ ಮುಖದರ್ಶನಾಃ ।**

ಈ ಸ್ನಾನ ರಾತ್ರಿಯಾದರೂ ಮಾಡಬಹುದು. ಆದರೆ ತಣ್ಣೀರಿನಲ್ಲಿ ಮಾಡಬೇಕು [**ಕುರ್ಯಾದ್ ಸ್ನಾನಂ ಶೀತಾದ್ಭಿಃ**].

**ಮಧುಘೃತ ಪ್ರಾಶನ** : ತಂದೆಯು ಸ್ನಾನಾಲಂಕಾರಾದಿ ಯುಕ್ತನಾಗಿ ನಾಲಚ್ಛೇದವಾಗದಿರುವ, ಸ್ತನವನ್ನು ಕುಡಿಯ ಬೇರೊಬ್ಬರು ಸ್ಪರ್ಶಿಸದಿರುವ ಮಗುವನ್ನು ನೋಡಿ ಆಚಮನ ಮಾಡಿ ದೇಶಕಾಲಾದಿ ಸ್ಮರಿಸಿ,

**'ಅಸ್ಯ ಮಮ ಕುಮಾರಸ್ಯ ಗರ್ಭಾಂಬು ಪಾನ ಜನಿತ ದೋಷ ನಿಬರ್ಹಣ ದ್ವಾರಾ ಆಯುರ್ಮೇದಾಭಿವೃದ್ಧಿ ಬೀಜಗರ್ಭ ಸಮುದ್ಭವ ಏನೋ ನಿರ್ಬಹಣದ್ವಾರಾ ಪರಮಾತ್ಮನಃ ಪ್ರೀತೀಂ ಕಾಮಯಮಾನಃ ಜಾತಕರ್ಮ ಕರಿಷ್ಯೇ'**

ನಂತರ ಶಿಶುವಿನ ಲಗ್ನಕುಂಡಲಿ ಬರೆಸಿ ಶುಭಾಶುಭ ಫಲ ಕೇಳುವುದು. ನಂತರ ನಾಲಚ್ಛೇದ ಮಾಡಿಸುವುದು. ನಂತರ ಜೇನುತುಪ್ಪ ಹಾಗೂ ಗೋಘೃತವನ್ನು ವಿಷಮ ಪ್ರಮಾಣದಲ್ಲಿ ಸಾಣೇಕಲ್ಲಿನಲ್ಲಿಟ್ಟು ಚಿನ್ನದ ಉಂಗುರದಿಂದ ಉಜ್ಜಿ ಅದನ್ನು ಮಗುವಿಗೆ ನೆಕ್ಕಿಸಬೇಕು.

**ಮಂತ್ರವತ್ ಪ್ರಾಶನಂ ಚಾಸ್ಯ ಹಿರಣ್ಯಮಧುಸರ್ಪಿಷಾಂ "ಭೂಸ್ತ್ವಯಿ ದಧಾಮಿ । ಭುವಸ್ತ್ವಯಿ ದಧಾಮಿ । ಸ್ವಸ್ತ್ವಯಿ ದಧಾಮಿ । ಭೂರ್ಭುವಸ್ವಾಮಿ ದಧಾಯಿ ।"** ಇದು ಮಂತ್ರ.

**ತಲೆ ಮೂಸುವುದು** : ನಂತರ ತಂದೆಯು ಮಗುವಿನ ತಲೆಯನ್ನು ಮೂಸುತ್ತಾ ಅಶ್ಮಾಭವ ಇತ್ಯಾದಿ ಕಲ್ಲಿನಂತೆ ದೃಢವಾಗಿರು, ಕೊಡಲಿಯಂತೆ ಪರಾಕ್ರಮವಿರಲಿ ಎಂದು ಆಶೀರ್ವಾದ ಮಾಡುವನು. ಈಗಲೇ ನಕ್ಷತ್ರ ನಾಮ ರಹಸ್ಯವಾಗಿ ಹೇಳಬೇಕು.

ಈ ಕರ್ಮದಿಂದ ಬುದ್ಧಿಮಾಂದ್ಯ, ತಲೆನೋವು, ಜ್ವರಾದಿಗಳ ಪರಿಹಾರ ಮಾಡುವ ಶಕ್ತಿವುಂಟಾಗುತ್ತದೆ.

## ನಾಮಕರಣ

ನಾಮಕರಣವು ಲೋಕದಲ್ಲಿ ಗುರುತಿಸಲು ಅನುಕೂಲವಾಗುವಂತೆ ಸಂಕೇತಕ್ಕಾಗಿ ಹೆಸರನ್ನಿಡುವುದೇ ನಾಮಕರಣ. ಎಲ್ಲಾ ವ್ಯವಹಾರಗಳಿಗೂ ನಾಮಕರಣ ಕಾರಣವಾದರೂ ಇದು ಮಂಗಳ, ಆಯುಸ್ಸು ವರ್ಚಸ್ಸಿನ ಅಭಿವೃದ್ಧಿಯೂ ಆಗುತ್ತದೆ.

**ನಾಮಕರಣ ಕಾಲ** : ಹನ್ನೊಂದನೇ ದಿವಸವು ನಾಮಕರಣಕ್ಕೆ ಪ್ರಶಸ್ತ. [ವ್ಯಾಸ 1/17]

**ಏಕಾದಶೇಽಹ್ನಿ ಪಿತಾ ನಾಮಕುರ್ಯಾತ್ ।**

ಇದು ಬ್ರಾಹ್ಮಣನಿಗೆ ಹೇಳಿದ್ದು [ಬೃಹತ್ ಪರಾಶರ 6]

**ದಿನೇ ಚೈಕಾದಶೇ ನಾಮಕರ್ಮ ಸ್ಯಾತ್ ದ್ವಿಜನ್ಮನಾಮ್ ।**

ಶಂಖಸ್ಮೃತಿ (2/2) ಆಶೌಚ ಮುಗಿದ ನಂತರ ನಾಮಕರ್ಮ ವಿಧಿಸಿದೆ.

**ಆಶೌಚೇ ತು ವ್ಯತಿಕ್ರಾಂತೇ ನಾಮಕರ್ಮ ವಿಧೀಯತೇ ।**

ಹತ್ತನೇ ದಿನ ಆಶೌಚ ಮುಗಿಯುವುದರಿಂದ ಹನ್ನೊಂದನೇ ನಾಮ ಸಂಸ್ಕಾರ ಸ್ಫುಟವು.

ಕೆಲವರು ಹನ್ನೊಂದು ಮುಗಿದು ಹನ್ನೆರಡನೇ ದಿನವೆಂದೂ, ಅಥವಾ ಮಾಸಾಂತ್ಯ, ನೂರನೆಯ ದಿನ ಮೊದಲ ಹುಟ್ಟಿದ ಹಬ್ಬದಿನದಂದು ತಿಳಿಸಿರುವರು.

ಇದು ತಾಯಿ ಮಗುವಿಗೆ ಅನಾರೋಗ್ಯವಿದ್ದಲ್ಲಿ ಎಂದರ್ಥ.

ತಾಯಿಗೆ ಗಂಡು ಮಗುವಾದರೆ 30 ದಿನಗಳೂ, ಹೆಣ್ಣಾದರೆ 40 ದಿನಗಳು ಬಾಣಂತಿ ಆಶೌಚವಿರುತ್ತದೆ. ಇದರ ಮಧ್ಯ ಹನ್ನೊಂದು, ಹದಿನೈದು, ಹದಿನೆಂಟು, ಇಪ್ಪತ್ತೊಂದು, ಇಪ್ಪತ್ತೇಳು, ಮುವ್ವತ್ತೊಂದು ದಿನಗಳಲ್ಲಿ ತಾತ್ಕಾಲಿಕ ಶುದ್ಧಿಯಿರುತ್ತದೆ. ಇವುಗಳಲ್ಲಿ ಪಂಚಾಂಗ ಶುದ್ಧಿ ನೋಡಿ ನಾಮಕರಣ ಮಾಡಬಹುದು.

**ದ್ವಾದಶಾಹೇತು ಸಂಪ್ರಾಪ್ತೇ ನಾಮಕರ್ಮ ವಿಧೀಯತೇ ।**
**ಏಕಾದಶೇ ವಾ ಮಾಸೇವಾ ಪೂರ್ಣೇ ಸಂವತ್ಸರೇऽಪಿ ವಾ ॥**

**ಅಷ್ಟಾದಶ ದಿನಂ ಚಾಪಿ ಪ್ರಶಸ್ತಂ ನಾಮಕರ್ಮಣಿ ॥**

ಹನ್ನೊಂದು, ಹನ್ನೆರಡು ಬ್ರಾಹ್ಮಣರಿಗೂ, 13 ಕ್ಷತ್ರಿಯರು, ಹದಿನಾರು ವೈಶ್ಯರು, ಹೀಗೆ ತಿಳಿಯುವುದು. ಹನ್ನೊಂದು, ಹನ್ನೆರಡು ಮುಖ್ಯಕಾಲ. ಅದು ತಪ್ಪಿದರೆ ಹದಿನೆಂಟು.

**ನಿಷೇಧ ದಿವಸಗಳು** : ವ್ಯತೀಪಾತ, ಸಂಕ್ರಾಂತಿ, ವೈಧೃತಿ ಶ್ರಾದ್ಧ ದಿನಗಳು ನಿಷಿದ್ಧಗಳು. ನಾಮಕರಣದ ದಿನ ಹನ್ನೊಂದನೆ ದಿನ ತಂದೆಯ ಶ್ರಾದ್ಧವಿದ್ದರೆ ನಿಷಿದ್ಧ.

ಶಾಸ್ತ್ರದಲ್ಲಿ ಹೇಳಿದ ದಿವಸಗಳಲ್ಲಿ ಚತುರ್ಥೀ, ಷಷ್ಠೀ, ಅಷ್ಟಮೀ, ದ್ವಾದಶೀ, ಚತುರ್ದಶಿಗಳು ಛಿದ್ರಗಳೆನಿಸಿದ್ದು ನಿಷಿದ್ಧವು.

ಕೆಲವು ಕಡೆ ದಶಮಿಯನ್ನೇ ಹೇಳಿರುವರು. ಆಶೌಚವಿರುವುದರಿಂದ ಸರ್ವಮುನಿ ಸಮ್ಮತವಲ್ಲವೆಂದು ಕೃಷ್ಣಾಚಾರ್ಯರು ಹೇಳಿರುವರು.

**ನಕ್ಷತ್ರಗಳು** : ಅಶ್ವಿನೀ, ಉತ್ತರಾ, ಉಷಾ, ಉ.ಭಾ, ರೋಹಿಣಿ, ಮೃಗಶಿರಾ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನುರಾಧಾ, ಶ್ರವಣ, ಧನಿಷ್ಠಾ, ಶತಭಿಷಾ, ರೇವತಿ ಶ್ರೇಷ್ಠಗಳು.

ವೃಷಭ, ಸಿಂಹ, ವೃಶ್ಚಿಕ ಲಗ್ನಗಳು, ಶುಭವಾರಗಳು, ಅಷ್ಟಮ ಶುದ್ಧಿಯನ್ನು ಗಮನಿಸಬೇಕು.

ಪೂರ್ವಾಹ್ಣದಲ್ಲಿ ನಾಮಕರಣ,

**ಪೂರ್ವಾಹ್ಣೇ ನಾಮ ಕರ್ತವ್ಯಂ ನಾಪರಾಹ್ಣೇ ನ ಮಧಮೇ ।**

**ನಾಮಚತುಷ್ಟಯ** : ದೇವತಾನಾಮ, ಮಾಸ ನಾಮ, ನಕ್ಷತ್ರನಾಮ, ವ್ಯಾವಹಾರಿಕವೆಂದು ನಾಮ ಚತುಷ್ಟಯಗಳಿವೆ.

**ಕೃಷ್ಣೋऽನಂತೋऽಚ್ಯುತಶ್ಚಕ್ರೀ ವೈಕುಂಠೋऽಥ ಜನಾರ್ದನ**
**ಉಪೇಂದ್ರೋ ಯಜ್ಞಪುರುಷೋ ವಾಸುದೇವಸ್ತಥಾ ಹರಿಃ ॥**
**ಯೋಗೀಶಃ ಪುಂಡರೀಕಾಕ್ಷೋ ಮಾಸನಾಮಾನಿ ॥** – ವ್ಯಾಸ

ಮಾರ್ಗಶೀರ್ಷದಿಂದ ಲೆಕ್ಕ – ಮಾರ್ಗಶಿರ್ಷ – ಕೃಷ್ಣ, ಪುಷ್ಯ – ಅನಂತ, ಮಾಘ – ಅಚ್ಯುತ, ಫಾಲ್ಗುಣ – ಚಕ್ರೀ, ಚೈತ್ರ – ವೈಕುಂಠ, ವೈಶಾಖ – ಜನಾರ್ದನ, ಜ್ಯೇಷ್ಠ – ಉಪೇಂದ್ರ, ಆಷಾಢ – ಯಜ್ಞ, ಯಜ್ಞಪತಿ, ಶ್ರಾವಣ – ವಾಸುದೇವ, ಭಾದ್ರ – ಶ್ರೀಹರಿ, ಆಶ್ವ –ಯೋಗೀಶ, ಕಾರ್ತಿಕ – ಪುಂಡರೀಕಾಕ್ಷ

ಪ್ರಸ್ತುತ ಈ ಕ್ರಮ ಬಿಟ್ಟು ಹೋಗಿದೆ.

ಹೆಣ್ಣು ಮಗುವಾದರೆ ಚೈತ್ರಾದಿಯಂತೆ ಲಕ್ಷ್ಮೀ ಶ್ರೀ, ವನಿತಾ, ಭದ್ರಾ, ಸೀತಾ, ಸತ್ಯಾ, ರುಕ್ಮಿಣೀ, ಮಾಧವೀ, ಅದ್ರಿಜಾ ಭೂಮಿ, ಯಶೋದಾ, ಇಂದುಮತೀ ಎಂದಾಗಲೀ, ಮಾರ್ಗಶೀರ್ಷಾದಿ ವಾಗ್ದೇವೀ, ಪದ್ಮಾವತೀ, ಶ್ರೀದೇವಿ, ಸಾವಿತ್ರೀ, ಭೂಮಿ, ಕಲ್ಯಾಣೀ, ಸತ್ಯಭಾಮಾ, ಪುಣ್ಯವತೀ, ರೂಪವತೀ, ಇಂದುಮತೀ, ಚಂದ್ರಾವತೀ, ಲಕ್ಷ್ಮೀ.

ನಕ್ಷತ್ರ ನಾಮ : ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಕುಮಾರ ಕುಮಾರೀ ಸೇರಿಸಿ ಅಶ್ವಿನೀ ಕುಮಾರ, ಅಶ್ವಿನೀ ಕುಮಾರಿ ಎಂದಾಗಲೀ, ಆಯಾಯ ನಕ್ಷತ್ರಾಭಿಮಾನಿಗಳ ಹೆಸರನ್ನಾಗಲೀ ಇಡಬೇಕು. ಉದಾ. ಆಶ್ಲೇಷಾ ಇದು ಸರ್ಪ ದೇವತೆ. ನಾಗರಾಜ, ನಾಗಮ್ಮ ಇತ್ಯಾದಿ. ಕೃತ್ತಿಕಾ ನಕ್ಷತ್ರ, ಅಗ್ನಿಶರ್ಮ ಈ ನಕ್ಷತ್ರ ನಾಮವು ಅಭಿವಾದನಲ್ಲಿ ಯುಕ್ತವಾಗಿದೆ. ಇದು ಗುಪ್ತನಾಮವಾಗಿದೆ. ನಕ್ಷತ್ರ ನಾಮವು ತಂದೆತಾಯಿಗಳಿಗೆ ಮಾತ್ರ ತಿಳಿದಿರಬೇಕು. ಉಪನಯನದಲ್ಲಿ ಹೇಳಬೇಕು. ಮಗುವಿನ ಜೀವನ ಈ ಹೆಸರಿನಲ್ಲಿಯೇ ಅಡಗಿದೆ. ನಕ್ಷತ್ರ ನಾಮ ತಿಳಿದು ಮಾಟ ಕೃತ್ಯೆ ಮಾಡಲು ಶಕ್ಯವಿದೆ. ಅದಕ್ಕೆ ಗುಹ್ಯವಾಗಿರಬೇಕು.

**ಉಪಾಂಶು ನಿರ್ದಿಶೇ ಚೈತನ್ನ ಜಾನೀಯುಃ ಯಥಾಽಪರೇ ।**
**ತಚ್ಚ ನಾಮೌಪನಯನಂ ಸ್ಮರೇತಾಂ ಪಿತರೌ ಶಿಶೋಃ ॥**

ದೇವತಾ ನಾಮ : ದೇವತೆಗಳ ಹೆಸರನ್ನು, ಪಿತೃ, ಪಿತಾಮಹಾದಿಗಳ, ಗುರುಗಳ ಕುಲೋಚಿತ ನಾಮವಿಡಬಹುದು.

**ಪಿತಾಮಹಂ ಚ ನಾಮ ಸ್ಯಾನ್ ಮಾತಾಮಹಮಥಾಪಿಃ ।**
**ದೇವತಾನಾಂ ವಿಶೇಷೇಣ ಗುರೋಶ್ಚೈವ ಕುಲೋಚಿತಂ ॥**

ಬ್ರಾಹ್ಮಣನಿಗೆ ಶರ್ಮವೆಂದು ರಾಮಶರ್ಮಾ ಇತ್ಯಾದಿ. ಇವನು ತಪಸ್ಸು

ಬ್ರಹ್ಮಚರ್ಯ, ಶಮ, ದಮದಿಂದ ಜಗತ್ತಿಗೆ ಸುಖ ನೀಡಲಿ ಎಂದು. ಮಗುವಿಗೆ ಶರ್ಮ, ವರ್ಮ, ಗುಪ್ತದಾಸ ಎಂದು ಹೆಸರಿಟ್ಟು ಸಮಾಜದಲ್ಲಿ ಇವನು ಏನು ಮಾಡಬೇಕೆಂಬ ಅವರ ಹೆಸರಿನಿಂದಲೇ ತಿಳಿಸಿಕೊಡುವ ಚಮತ್ಕಾರ.

**ಸ್ತ್ರೀಯರಿಗೆ ಮೂರಕ್ಷರ :** ಸ್ತ್ರೀಯರಿಗೆ ಮೂರಕ್ಷರ ಆಕಾರಾಂತ ಈಕಾರಾಂತ ತದ್ಧಿತ ಪ್ರತ್ಯಯ ನಾಮಗಳನ್ನಿಡಬೇಕು.

**ಅಯುಜಾಕ್ಷರ ಮಾಕಾರಾಂತಂ ಸ್ತ್ರಿಯೈ ತದ್ಧಿತಮ್ ।**

ಮಂಗಳವೂ, ಸುಲಭ ಶ್ರವಣ ಮನಕಾನಂದ ವೀಯುವ ದೇವತಾನಾಮ–ಗಳಿರಬೇಕು. ವೃಕ್ಷ, ನದೀ, ನಕ್ಷತ್ರ, ಪರ್ವತ, ಪಕ್ಷಿ ಭಯವುಂಟು ಮಾಡುವ ಹೆಸರಿನ್ನಿಡಬಾರದು. ಹೆಸರು ಮೃದುವಾಗಿದ್ದಷ್ಟು ಅದೇ ಗುಣದಿಂದ ಕೂಡಿರುತ್ತದೆ.

**ನಾಮಕರಣ ಕ್ರಮ :** ಅಕ್ಕಿಯನ್ನು ತಟ್ಟೆಯಲ್ಲಿ ಹರಡಿ ಅದರ ಮೇಲೆ ಸುವರ್ಣಶಲಾಕೆಯಿಂದ ಕುಲದೇವತಾ ಭಕ್ತಃ ಇತ್ಯಾದಿ ನಾಲ್ಕು ನಾಮಗಳನ್ನು ಬರೆಯಬೇಕು. **ನಾಮ ದೇವತಾಭ್ಯೋ ನಮಃ** ಎಂದು ಪೂಜಿಸಿ,

ಈ ಹೆಸರಿನಿಂದ ತಾಯಿಯ ಮಗುವಿನ ಬಲಗಿವಿಯಲ್ಲಿ ಮೂರು ಬಾರಿ ಹೇಳಬೇಕು. ಬ್ರಾಹ್ಮಣರು – ವೇದಮಂತ್ರ ಪಡಿಸುತ್ತಾ **'ನಾಮ ಸುಪ್ರತಿಷ್ಠಿತಮಸ್ತು'** ಎನ್ನುವರು. ತಂದೆಯು ಈ ಹೆಸರಿನ ಮಗನು ತಮಗೆ ನಮಸ್ಕರಿಸುವನು ಎಂದಾಗ **'ಆಯುಷ್ಮಾನ್ ಭವತು'** ಎನ್ನುವರು.

- *ಆಂದೋಲಿಕಾ : ತೊಟ್ಟಿಲುಶಾಸ್ತ್ರ :*

ನಾಮಕರಣದ ದಿನವೆ ಸಂಜೆ ಶಿಶುವನ್ನು ತೊಟ್ಟಿಲಿಗೆ ಹಾಕುವ ಪದ್ಧತಿಯೂ ಉಂಟು. ಆದರೆ ಗಂಡು ಮಗುವಿಗೆ ಹನ್ನೆರಡನೇ ದಿನವೂ, ಹೆಣ್ಣು ಮಗುವಿಗೆ ಹದಿಮೂರನೆ ದಿನ ಪ್ರಶಸ್ತವು. ಇಂದು ನಕ್ಷತ್ರಾದಿಗಳನ್ನೂ ನೋಡದೆ ಆಚರಿಸಬಹುದು.

**ಆಂದೋಲಿಕಾಶಯನೇ ಪುಂಸೋ ದ್ವಾದಶೋ ದಿವಸಃ ಶುಭ ।**
**ತ್ರಯೋದಶಸ್ತು ಕನ್ಯಾನಾಃ ನ ನಕ್ಷತ್ರ ವಿಚಾರಣಾ ॥**

ಮೇಲೆ ಹೇಳಿದ ಹನ್ನೆರಡು, ಹದಿಮೂರನೇ ದಿವಸ ಬಿಟ್ಟರೆ ಮುಂದೆ ಚಂದ್ರ– ತಾರಾಬಲವಿರುವ ಮೃದು ನಕ್ಷತ್ರ [ಮೃಗ, ಚಿತ್ತ, ರೇವತೀ, ಅನುರಾಧಾ]

ಧ್ರುವ [ರೋಹಿಣೀ ಹಾಗೂ ಉತ್ತರಾತ್ರಯ]

ಕ್ಷಿಪ್ರ [ಹಸ್ತ-ಅಶ್ವಿನೀ] ಇವುಗಳು ಪ್ರಶಸ್ತ.

ನಾಮಕರಣ ದಿನವೇ ಮಾಡುವ ಪಕ್ಷದಲ್ಲಿ ಕುಲದೇವತಾ ಪೂಜೆ ಮಾಡಿ, ಅಲಂಕೃತವಾದ ಶಿಶುವನ್ನೂ, ಹರಿದ್ರಾ, ಕುಂಕುಮ ಪುಷ್ಪಾದಿ ಅಲಂಕೃತ ತೊಟ್ಟಿಲಲ್ಲಿ, ಮುತ್ತೈದೆಯರು ಯೋಗಶಾಯಿ ಹರಿಯನ್ನು ಸ್ಮರಿಸುತ್ತಾ ಮುಗೆ ವಾದ್ಯದೊಂದಿಗೆ ಪೂರ್ವಾಭಿಮುಖವಾಗಿ ಮಲಗಿಸುವುದು. ಸುಮಂಗಲಿ-ಯರು ಮಾಡುವ ಆಶೀರ್ವಾದಗಳು ಶಿಶುವಿಗೆ ಅಪಮೃತ್ಯು ಪರಿಹಾರ, ಬಾಲಗ್ರಹಾದಿ ದೋಷ ನಿವೃತ್ತವಾಗುವುವು.

ಕೆಲವರಲ್ಲಿ ಗುಂಡುಕಲ್ಲನ್ನಿಟ್ಟು ಪೂಜಿಸಿ, ಈ ಮಗುವು ಗುಂಡುಕಲ್ಲಿನಂತೆ ಸಾಂಸಾರಿಕ ಯಾವುದೇ ಕಷ್ಟಗಳಿಗೆ ಜಗ್ಗದಂತೆ ಇರುವ ಸಾಮರ್ಥ್ಯ ಬರಲಿ ಎಂದು ಆಶಿಸುವುದಿದೆ. ಅದಕ್ಕಾಗಿ ಮೊದಲು ಗುಂಡುಕಲ್ಲನ್ನೆ ಗುಂಡಪ್ಪವೆಂದು ತೊಟ್ಟಿಲಲ್ಲಿ ಹಾಕಿ, ನಂತರ ಶಿಶುವನ್ನು ತೊಟ್ಟಿಲಲ್ಲಿ ಹಾಕುವರು. ಇದರಿಂದ ಆಖಣಾಶ್ಮ ಸಮನ ಚಿಂತನೆವುಂಟಾಗುತ್ತದೆ.

**ಹಾಲನ್ನು ಕುಡಿಸುವುದು** : ಇದೊಂದು ಬಿಟ್ಟು ಹೋಗಿರುವ ಪದ್ಧತಿ. ಶಂಖದಿಂದ ಹಾಲನ್ನು ಮಗುವಿಗೆ ಕುಡಿಸುವುದೇ ದುಗ್ಧ ಪಾನ ವಿಧಿ. ಸಾಲಿಗ್ರಾಮಕ್ಕೆ ಅಭಿಷೇಕಿಸಿದ ಹಾಲನ್ನು ಬಲಮುರಿ ಶಂಖದಿಂದ ಕುಡಿಸುವುದು.

ಮೂವತ್ತೊಂದನೇ ದಿನವಾಗಲಿ ಅಥವಾ ಎರಡನೇ ಬಾರಿ ಜನ್ಮ ನಕ್ಷತ್ರವಿರುವಾಗ, ತೊಟ್ಟಿಲು ಶಾಸ್ತ್ರದಲ್ಲಿ ಹೇಳಿದ ನಕ್ಷತ್ರಗಲ್ಲಾಗಲೀ, ಪೂವಾಹ್ನ/ ಮಧ್ಯಾಹ್ನದಲ್ಲಿ ಕುಲದೇವತಾ ಪೂಜಾ ನಂತರ ಶಂಖದಿಂದ ಗೋ ಕ್ಷೀರವನ್ನು ಕುಡಿಸುವುದು.

**ಏಕತ್ರಿಂಶೇ ವಾಸರೇ ವಾ ದ್ವಿತೀಯೇ ಜನ್ಮರ್ಕ್ಷೇ ವಾ ಶುದ್ಧಲಗ್ನೇ ।**
**ಶಂಖೇ ಕ್ಷೀರಂ ಸನ್ನಿದಧ್ಯಾತ್ ಶಿಶೂನಾಂ ವಕ್ತ್ರೇ ಧಾತ್ರೀ ।**
**ಪೂರ್ವಾಹ್ನೇ ವಾಪಿ ಮಧ್ಯಾಹ್ನೇ ಕುರ್ಯಾದ್ ರಾತ್ರಿಂ ಚ ವಿವರ್ಜಯೇ ।**

ನಿಷ್ಕ್ರಮಣ : ಮನೆಯಿಂದ ಮಗುವನ್ನು ಹೊರಗೆ ಕರೆದೊಯ್ಯುವುದು ಎಂದರ್ಥ. ಮನೆಯ ಹೊರಗಿರುವ ಸೂರ್ಯಚಂದ್ರರ ದರ್ಶನ, ದೇವರ ಸ್ಥಾನದಲ್ಲಿ ದೇವರು ಹಿರಿಯರು, ಮಾಡುವ ಮಗುವಿನ ಆಶೀರ್ವಾದಗಳಿಗೆ 'ನಿಷ್ಕ್ರಮಣ' ವಿಹಿತವಾಗಿದೆ.

**'ಚತುರ್ಥೇಮಾಸಿ ನಿಷ್ಕ್ರಮಣಿಕಾ ಸೂರ್ಯಮುದೀಕ್ಷಯತಿ ತಚ್ಚಕ್ಷುರಿತಿ'** ಎಂದು ಸೂತ್ರ.

ಬೃಹಸ್ಪತಿಗಳು ಹನ್ನೆರಡನೆ ದಿನದಲ್ಲಿಯೆ ನಿಷ್ಕ್ರಮಣವೆಂದಿರುವರು.

**ಅಥ ನಿಷ್ಕ್ರಮಣಂ ಕುರ್ಯಾದ್ ಬಾಲಸ್ಯ ದ್ವಾದಶೇऽಹನಿ ।**

ಲೋಗಾಕ್ಷಿಗಳು ತೃತೀಯ ಮಾಸದಲ್ಲಿ ಎಂದು, ಶಂಖರು ನಾಲ್ಕನೇ ತಿಂಗಳಲ್ಲಿ ಎಂದು, ಆಶ್ವಲಾಯನರು –ಅನ್ನಪ್ರಾಶನ ಕಾಲದಲ್ಲಾದರೂ ಮಾಡಬಹುದೆಂದಿದ್ದಾರೆ. ಅವರ ಪದ್ಧತಿಯಂತೆ ನಡೆಯುವುದು.

ವಸ್ತುತಃ ಮೂರು ನಾಲ್ಕು ತಿಂಗಳು ಯುಕ್ತವೆಂದು ತೋರುತ್ತದೆ. ಮಗುವಿಗೆ ಸೂರ್ಯನ ಬೆಳಕಿನಿಂದ ಕಾಣಬಹುದಾದ ವಸ್ತುಗಳಲ್ಲಿರುವ **'ಸ್ವವಸ್ತು'** ಹರಿಯ ದರ್ಶನ, ಬಹುಮಟ್ಟಿಗೆ ಮಗುವು ದೃಷ್ಟಿಸಿ ನೋಡುವುದೂ ಈ ಕಾಲದಲ್ಲಿಯೇ ಹನ್ನೆರಡರಲಿ ಅಲ್ಲ.

- *ವಿಧಿ ವಿಧಾನ :*

**ಅಸ್ಯ ಕುಮಾರಸ್ಯ ಗೃಹಾನ್ನಿಷ್ಕ್ರಮಣಾಖ್ಯ ಕರ್ಮಕರಿಷ್ಯೇ** ಮಾತೃಕಾ ಪೂಜಾದಿಗಳು, ನಾಂದೀಶ್ರಾದ್ಧಾದಿ ಮಾಡಿ, ಅಭ್ಯಂಜನಾದಿಗಳಿಂದ ಶಿಶುವಿಗೆ ಅಲಂಕರಿಸಿ, ತಾಯಿಯ ಮಡಿಲಲ್ಲಿ ಹಾಕಿ, ಕುಲದೇವತಾದಿ ಪೂಜೆ, ವೇದ ಘೋಷಾದಿಗಳಿಂದ ಹೊರಗೆ ಮಗುವನ್ನು ಕರೆ ತಂದು ತಂದೆಯು ಸೂರ್ಯನನ್ನು ದರ್ಶನ ಮಾಡಿಸಬೇಕು.

**ತಚ್ಚಕ್ಷುರ್ದೇವ ಹಿತಂ ಯದಾಯುಃ** ಇತ್ಯಾದಿ ಮಂತ್ರ ವಿಹಿತ. ನಂತರ ದೇವಾಲಯಕ್ಕೆ ಕರೆದೊಯ್ದು ಪ್ರದಕ್ಷಿಣೆ ಹಾಕಿಸುವುದು. ದೇವರನ್ನು ಗಂಧಮಾಲ್ಯಾದಿಗಳಿಂದ ಪೂಜಿಸಿ ಅಲ್ಲಿರುವ ಬ್ರಾಹ್ಮಣರಿಗೆ ದಾನಾದಿಗಳಿಂದ ಸಂತುಷ್ಟಗೊಳಿಸಿ ಆಶೀರ್ವಾದ ಮಾಡಿಸುವುದು. ನಂತರ ಸೋದರಮಾವನ ಮನೆಗೆ ಕರೆದೊಯ್ಯಬೇಕು. ಉಪಾಹಾರಾದಿ ಸ್ವೀಕರಿಸಿ ಮನೆಗೆ ಹಿಂತಿರುಗುವುದು.

**ರಕ್ಷಣೆಗಾಗಿ ಸೂರ್ಯಾದಿಗಳಿಗೆ ಅರ್ಪಣೆ :**

ನಂತರ ಗೋಮಯಾದಿ ಉಪಲಿಪ್ತ ದೇಶದಲ್ಲಿ ಬಾಲಕನ್ನು ಕುಳ್ಳಿರಿಸಿ, ಗಂಧಾದಿಗಳಿಂದ ತಲೆ, ಹಣೆಗೆ ಅಲಂಕರಿಸಿ **'ಮೃತಸಂಜಿವಿನೀ'** ಮಂತ್ರ ಜಪಿಸುವುದು. ತ್ರ್ಯಂಬಕಂ ಮಂತ್ರ, ಪರಂಮೃತ್ಯೋ, ಮಾರ್ಕಂಡೇಯ ಮಂತ್ರ, ಗರುಡ ಮಂತ್ರಗಳನ್ನು ಜಪಿಸುವುದು.

ಶಿಶು ರಕ್ಷಣೆಗಾಗಿ ದಿಕ್ಪಾಲಕರನ್ನು ಸೂರ್ಯಚಂದ್ರರನ್ನೂ ಮಗುವನ್ನೂ ಎಲ್ಲೆಡೆ ರಕ್ಷಿಸಲು ನಿಮಗೆ ಒಪ್ಪಿಸಿದ್ದೇನೆ ರಕ್ಷಿಸಿರಿ.

**ಚಂದ್ರಾರ್ಕಯೋಃ ದಿಗೀಶಾನಾಂ ದಿಶಾಂ ಚ ವರುಣಸ್ಯ ಚ ।**
**ನಿಕ್ಷೇಪಾರ್ಥಮಿಮಂ ದದ್ಮಿ ತೇ ತ್ವಾಂ ರಕ್ಷಂತು ಸರ್ವದಾ ॥**

ಈ ಮಾಸದಲ್ಲಿಯೆ ಶುಭದಿನದಲ್ಲಿಯೇ ರಾತ್ರಿ ಚಂದ್ರದರ್ಶನ ಮಾಡಿಸಬೇಕು.

**ನಿಷ್ಕ್ರಾಮಣದ ಪ್ರಯೋಜನ :** ಈ ಸಂಸ್ಕಾರದಿಂದ ದೇವತೆಗಳಿಂದ ಮಗುವಿನ ರಕ್ಷಣೆ, ಆಯುರ್ದಾಯ, ಸೂರ್ಯನು ಜೀವಕೋಟಿಗೆ ಪ್ರಾಣಧಾರಕನು. ಅವನ ದರ್ಶನ, ಕಿರಣಗಳಿಂದಾಗಿ ಮಗುವಿನ ನಾಡೀ ಮಂಡಲ ಜಾಗೃತಗೊಳಿಸುತ್ತವೆ. ರಕ್ತಸಂಚಾರ ಸಕ್ರಮತೆ ನಡೆಯುತ್ತದೆ. ವೈದ್ಯರೂ ಸಹ ಕೆಲವು ರೋಗಗಳಿಗೆ ಬಿಸಿಲಲ್ಲಿ ನಿಲ್ಲುವುದು, ಮಗುವಿಗೆ ಬಿಸಿಲಿನ ಕಿರಣದಲ್ಲಿ ಕೆಲಕಾಲ ಹಿಡಿದುಕೊಳ್ಳಲು ಹೇಳುವರು. ಈಗ ಇಂಕ್ಯುಲುಲೇಟರ್‌ನಲ್ಲಿ ಇಡುವುದೂ ಸೂರ್ಯ ಶಕ್ತಿಗಾಗಿ ಕೃತ್ರಿಮ ರೀತಿಗೂ ಸ್ವಾಭಾವಿಕ ಮುನಿಗಳು ಹೇಳಿದ ರೀತಿಗೂ ಅಜಗಜಾಂತರವಿರುತ್ತದೆ.

**ಭೂಮ್ಯುಪವೇಶನ :** ಮೊಟ್ಟ ಮೊದಲು ಶಿಶುವನ್ನು ಭೂಮಿಯಲ್ಲಿ ಕೂಡಿಸುವುದು. ಇದನ್ನು ಮಗುವಿಗೆ ಐದನೇ ತಿಂಗಳಲ್ಲಿ ನಿಷ್ಕ್ರಮಣಕ್ಕೆ ಹೇಳಿದ ತಿಥಿಗಳಲ್ಲಿ ಅಂಗಾರಕ ಬಲವಿರುವಾಗ ಮಾಡತಕ್ಕದ್ದು. ಶಿಶುವನ್ನು ಭೂಮಿಯ ಮೇಲೆ ಕೂಡಿಸುವ ಉದ್ದೇಶ, ಭೂವರಾಹ, ಭೂಮಿ, ಕುಜನ ಅನುಗ್ರಹ ಸಂಪಾದನೆ. ಶಿಶುವಿಗೆ ರಕ್ಷಣಕಾರಕವಾದದ್ದು ಭೂಮ್ಯುಪವೇಶನ.

**ಪಂಚಮೇ ಮಾಸಿ ಭೂಮೌ ತಮುಪವೇಶಯೇತ್ ।**

**ಪ್ರಯೋಗ :** ಅಸ್ಯ ಕುಮಾರಸ್ಯ ಭೂವರಾಹ, ಭೂಮಿ ಸಕಲಗ್ರಹಾಣಾಂ ಅನುಗ್ರಹ ಪೂರ್ವಕ ರಕ್ಷಣಾರ್ಥಂ, ಆಯುರಾರೋಗ್ಯ ಸಿದ್ಧ್ಯರ್ಥಂ ಭೂಮ್ಯುಪವೇಶನಂ ಕರಿಷ್ಯೇ. ತದಂಗವಾಗಿ ಗಣಪತಿ ಪುಣ್ಯಾಹ ಮಾಡಿ,

ವರಾಹ ಭೂಮಿ ಗುರು ದೇವ ದ್ವಿಜರನ್ನು ನಾಮ ಮಂತ್ರದಿಂದ ಪೂಜಿಸಿ, ಉಪಲಿಪ್ತ ಭೂಮಿಯಲ್ಲಿ ಮಂಡಲ ಮಾಡಿ ಘಂಟೆ ಶಂಖಾದಿ ವಾದ್ಯಗಳೊಂದಿಗೆ ಕೂಡಿಸುವುದು.

**ರಕ್ಷಣೆಗೆ ಪ್ರಾರ್ಥನೆ :**

**ರಕ್ಷೈಣಂ ವಸುಧೇದೇವಿ! ಸದಾ ಸರ್ವಗತು ಶುಭೇ ।**
**ಆಯುಃ ಪ್ರಮಾಣಂ ನಿಖಿಲಂ ನಿಕ್ಷಿಪಸ್ವ ಹರಿಪ್ರಿಯೇ ॥**

ಭೂಮಿಯೇ! ನೀನು ಎಲ್ಲೆಡೆ ಇದ್ದು ಮಂಗಳ ಸ್ವರೂಪಳಾಗಿರುವೆ. ಇವನು ಎಲ್ಲಿ ಹೋಗಿದ್ದರಲ್ಲಿ ಪರಿಪೂರ್ಣ ಆಯುಸ್ಸು ನೀಡಿ ಪಾಲಿಸು. ಮಗುವಿಗೆ ತೊಂದರೆ ಮಾಡುವವರನ್ನು ದೂರ ಮಾಡಿ ಸುಟ್ಟು ಬಿಡು.

ನೀನು ಈ ಮಗುವನ್ನು ರಕ್ಷಿಸು. ಪರಮಾತ್ಮನು ಇದನ್ನು ಅನುಮೋದಿಸಲಿ.

**ಕುಮಾರಂ ಪಾಹಿ ಮಾತಸ್ತ್ವಂ ಬ್ರಹ್ಮ ತದನುಮನ್ಯತಾಮ್** ।

ಹೀಗೆ ಬ್ರಾಹ್ಮಣರಿಂದ ಆಶೀರ್ವದಿಸಿ ಅವರಿಗೆ ದಕ್ಷಿಣಾದಿಗಳಿಂದ ಪೂಜಿಸಿ, ಮುತ್ತೈದೆಯರಿಂದ ನೀರಾಜನ ಮಾಡಿಸಿ ಹರಿಯಲ್ಲಿ ಅರ್ಪಿಸುವುದು.

ಹೀಗೆ ಭೂದೇವಿಯ ಅನುಗ್ರಹದಿಂದಾಗಿ ಭೂಮಿಯಲ್ಲಿ ನಡೆಯುವ ಅಪಘಾತಾದಿಗಳಿಂದ ರಕ್ಷಣೆ ಸಿಗುತ್ತದೆ. ಇಂದಿನ ಕಾಲದಲ್ಲಿ ಅವಶ್ಯ ಮಾಡಲೇಬೇಕಾದ ಕಾರ್ಯವಿದು.

**ಗಂಗಾಪೂಜೆ – ಜಲಪೂಜೆ :** ಬಾಣಂತಿಯು ದಶಾಹ ನಂತರ ಸ್ಪೃಶ್ಯಳಾಗುವಳು. ಕರ್ಮಾಧಿಕಾರ ಪ್ರಾಪ್ತವಾಗುತ್ತದೆ. ಜಾತೇಷ್ಟಿ, ಉಪನಯನ, ವಿವಾಹಾದಿಗಳಿಗೆ ಗಂಡು ಮಗುವಾದರೆ ಇಪ್ಪತ್ತು ದಿನಗಳು, ಹೆಣ್ಣು ಮಗು ಹಡೆದಿದ್ದರೆ ಒಂದು ತಿಂಗಳು ವಿಶೇಷ ಆಶೌಚವಿರುತ್ತದೆ. ಇದು ಮುಗಿದ ಮೇಲೆ ಸಾಮಾನ್ಯವಾಗಿ ಒಂದು ತಿಂಗಳು ಮುಗಿದ ಮೇಲೆ ಮುಂದೆ ಮನೆಯ ಕೆಲಸ ಮಾಡಲು ಪ್ರಾರಂಭವಾಗುತ್ತದೆ. ಮೂರು ತಿಂಗಳ ನಂತರ ಮಾಡುವ ಪದ್ಧತಿಯಿದೆ.

ಇದಕ್ಕಾಗಿ 'ಗಂಗಾಪೂಜೆ' ವಿಹಿತವಾಗಿದೆ. ಸಮೀಪದಲ್ಲಿ ನದ್ಯಾದಿಗಳಿದ್ದರೆ ಬಾಣಂತಿಯು ಬಂಧುಗಳೊಂದಿಗೆ ಹೋಗಿ ನದ್ಯಾದಿಗಳಲ್ಲಿ ಗಂಗಾದ್ಯಭಿಮಾನಿಗಳನ್ನು ಪೂಜಿಸಬೇಕು. ಅಥವಾ ಕಲಶದಲ್ಲಿ ನೀರನ್ನು ತುಂಬಿ ಹರಿದ್ರಾದಿಗಳಿಂದ ಅಲಂಕರಿಸಿ ಷೋಡಶೋಪಚಾರ ಪೂಜೆ ಮಾಡಿ, ಗಂಗಾಮಾತೆಯೇ ನಾಳೆಯಿಂದ ದೇವಕಾರ್ಯಾದಿ ಮಾಡಲು ಅಧಿಕಾರ ಬರುವಂತೆ ನನ್ನನ್ನು ಶುದ್ಧಿಗೊಳಿಸು ಎಂದು ಪ್ರಾರ್ಥಿಸಬೇಕು. ಈ ಸಂದರ್ಭದಲ್ಲಿ ವ್ಯಾವಹಾರಿಕವಾಗಿ ಒಂದು ಕೊಳೆಯ ಬಟ್ಟೆಯನ್ನು ಶುದ್ಧಿ ಮಾಡುವುದಿದೆ. ಇದು ಮುಂದಿನ ಕಾರ್ಯಗಳಿಂದ ನಾಂದೀ ರೂಪವಾಗಿರುತ್ತದೆ.

**ಕಾಲಗಳು :** ಚೈತ್ರ, ಪುಷ್ಯ, ಅಧಿಕಮಾಸ, ಗುರುಶುಕ್ರಾಸ್ತ ಹೊರತು ಉಳಿದ ತಿಂಗಳಲ್ಲಿ ಜಲಪೂಜೆ ವಿಹಿತ. ತಿಂಗಳು ಮುಗಿದಿದ್ದರೂ ಇವು ಜಲಪೂಜೆಗೆ

ನಿಷಿದ್ಧಗಳು. ರಿಕ್ತ ತಿಥಿಗಳು, ಬುಧ, ಗುರು, ಚಂದ್ರ ಹೊರತು ಇತರ ವಾರ ಬಿಟ್ಟು ಮಾಡುವುದು. ಶ್ರವಣ, ಪುಷ್ಯ, ಪುನರ್ವಸು, ಮೃಗ, ಹಸ್ತ, ಮೂಲ, ಅನುರಾಧ ನಕ್ಷತ್ರಗಳು ಶ್ರೇಷ್ಠ.

**ಸೂತಿಕಯಾಪಃ ಪೂಜ್ಯಾಃ ಕರಿಹರಿಮಿತ್ರಾದಿತೀಜ್ಯ ಮೂಲೇಂದೌ ।**
**ಗುರುಬುಧಚಂದ್ರೇಽಹ್ನಿ ವಿನಾ ಮಧ್ವಧಿಪೌಷ ದ್ವಿತೀಯಮಾಸಾಸ್ತವ ॥**

**ಅನ್ನಪ್ರಾಶನ :** ವ್ಯಾಸಸ್ಮೃತಿ (1/18), ಯಾಜ್ಞ (1/12), ಶಂಖ (2/5), ವಿಷ್ಣು (1/12) ಸ್ಮೃತಿಗಳಲ್ಲಿ ಮಗುವಿಗೆ ಆರನೇ ತಿಂಗಳಿನಲ್ಲಿ ಅನ್ನಪ್ರಾಶನ ಮಾಡಿಸಬೇಕೆಂದಿರುವುದು. ಸ್ಮೃತಿ ಚಂದ್ರಿಕಾದಲ್ಲಿ ಹಲ್ಲುಗಳು ಬಂದ ಮೇಲೆ ಮಾಡಬೇಕೆಂದು, ಮನುವು ಕುಲದ ಪದ್ಧತಿಯಂತೆ ಮಾಡಬಹುದೆಂದಿದ್ದಾನೆ.

**ಷಷ್ಠೇಽನ್ನ ಪ್ರಾಶನಂ ಮಾಸಿ ಯದ್ವೇಷ್ಟಂ ಮಂಗಲಂ ಕುಲೇ ॥**
–ಮನು *3/9*

ಆಪಸ್ತಂಬ ಗೃಹ್ಯದಲ್ಲಿಯೂ 6ನೆ ತಿಂಗಳಿಗೆ ವಿಧಿಸಿದೆ.

ಲಘು ಆಶ್ವಲಾಯನ (8/1–4)ರು – ಆರು, ಎಂಟು, ಹತ್ತು, ಹನ್ನೆರಡು, ಮಾಸಗಳಲ್ಲಿ ಅನ್ನಪ್ರಾಶನವಾಗಬಹುದು. ವರ್ಷದ ಒಳಗೆ ನಡೆಯ-ಬೇಕೆಂಬುದು ತಾತ್ಪರ್ಯ. ಸುವರ್ಣಪಾತ್ರೆ/ಬೆಳ್ಳಿಪಾತ್ರೆ/ ಕಂಚಿನ ಪಾತ್ರೆಯಲ್ಲಿ ತುಪ್ಪ, ಹಾಲು, ಬೆಣ್ಣೆ– ಮೊಸರು, ಜೇನುತುಪ್ಪ ಹಾಗೂ ಅನ್ನವನ್ನು ಇಟ್ಟು **'ಅನ್ನಪತೇಽನ್ನಸ್ಯ'** ಇತ್ಯಾದಿ ಮಂತ್ರಪಠಿಸಿ, ಮಗುವಿಗೆ ತಿನ್ನಿಸುವುದು ಹಾಗೂ ನೀರನ್ನೂ ಕುಡಿಸುವುದು ಕ್ರಮ.

ಸ್ತ್ರೀ ಶಿಶುವಿಗೆ ಐದು, ಏಳು, ಒಂಭತ್ತು ಮಾಸಗಳು ಶ್ರೇಷ್ಠ.

ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ದಶಮೀ, ತ್ರಯೋದಶಿ ಅನ್ನಪ್ರಾಶನೆಗೆ ಶ್ರೇಷ್ಠ ತಿಥಿಗಳು. ಅಶ್ವಿನೀ ರೋಹಿಣ್ಯಾದಿ ರೇವತೀ ಪರ್ಯಂತ ಶುಭಕರಗಳು.

ಪದ್ಧತಿಯಲ್ಲಿ ಪಾಯಸ ಅಥವಾ ಹಾಲನ್ನವನ್ನು ಜೇನುತುಪ್ಪದೊಂದಿಗೆ ಬೇರೆಸಿ ಸುವರ್ಣ ಉಂಗುರದಿಂದ ಮಗುವಿಗೆ ತಿನ್ನಿಸುವುದು. ತಾಯಿಯ ಹಾಲು ಮಗು ಬೆಳೆಯಲು ಸಾಕಾಗುವುದಿಲ್ಲವಾದ್ದರಿಂದಲೂ, ಬೆಳೆಯುವ ಮಗುವಿಗೆ ಆಹಾರ ಬೇಕೆಂದು ಅನ್ನಪ್ರಾಶನ ವಿಧಿಯಿದೆ.

**ಮಧ್ವಾಜ್ಯಂ ಕನಕೋಪೇತಂ ಪ್ರಾಶಯೇತ್ ಪಾಯಸಂ ತು ತಮ್ ।**

ಜೀರ್ಣಶಕ್ತಿ ಆರನೇ ತಿಂಗಳಲ್ಲಿ ಮಗುವಿಗೆ ಬಂದಿಲ್ಲದಿದ್ದರೆ ಎಂಟು ಹತ್ತು ಹನ್ನೆರಡಲ್ಲಿ ಮಾಡಬಹುದು. ವರ್ಧಂತಿ ದಿನವಾದರೂ ಅನ್ನಪ್ರಾಶನ ಮಾಡಬೇಕು.

ಜನ್ಮನಕ್ಷತ್ರದಲ್ಲಿ ಅನ್ನಪ್ರಾಶನವಾದರೆ ಸಂಪನ್ನಾಶವು.

**ಜನ್ಮರ್ಕ್ಷೇ ಶ್ರೀಕ್ಷಯಂ ವಿಂದ್ಯಾತ್ ।**

**ವಿಧಾನ :** ಅನ್ನಪ್ರಾಶನ ದಿನದಂದು ಮಗುವಿಗೆ ಮಂಗಳಸ್ನಾನ, ಹೊಸ ಬಟ್ಟೆ ಹಾಕಿ, ತಂದೆ ತಾಯಿಗಳೂ, ಮಂಗಳಸ್ನಾತರಾಗಿ, ಕುಲದೇವತಾ ಪೂಜೆ, ಹಿರಿಯರಿಗೆ ನಮಸ್ಕಾರಾದಿಗಳನ್ನು ಮಾಡಿ ಆಶೀರ್ವಾದ ಪಡೆಯುವುದು.

**ಮಮಾಸ್ಯ ಕುಮಾರಸ್ಯ ಮಾತೃಗರ್ಭಗತ ಮಲಪ್ರಾಶನ ಶುದ್ಧ್ಯರ್ಥಂ ಅನ್ನಾದ್ಯ ಬ್ರಹ್ಮವರ್ಚಸೇಂದ್ರಿಯಾಯುರ್ಬಲ ಲಕ್ಷಣ ಫಲಸಿದ್ಧಿ ದ್ವಾರಾ ಬೀಜಗರ್ಭಸಮುದ್ಭೂತೈನೋ ನಿಬರ್ಹಣ ದ್ವಾರಾ ಹರಿವಾಯು ಪ್ರೀತ್ಯರ್ಥಂ ಅನ್ನ ಪ್ರಾಶನಾಖ್ಯಂ ಕರ್ಮಕರಿಷ್ಯೇ** ಎಂದು ಸಂಕಲ್ಪಿಸಿ,

ಮಾರ್ಕಂಡೇಯರು ಪ್ರಾಶನಕ್ರಮವನ್ನು ಹೀಗೆ ಹೇಳಿದ್ದಾರೆ. ಮಗುವನ್ನು ದೇವರ ಮುಂದೆ ತಾಯಿಯ ತೊಡೆಯನ್ನೇರಿ ಕುಳಿತಿದ್ದ ಶಿಶುವಿಗೆ ಮಧುವನ್ನು ತುಪ್ಪದೊಂದಿಗೆ ಬೆರೆಸಿ ಪಾಯಸವನ್ನಾಗಿ ಹೋಮಶಿಷ್ಟಾನ್ನದೊಂದಿಗೆ ಸೇರಿಸಿ ಮೂರು ಬಾರಿ ತಿನ್ನಿಸುವುದು.

**ಜೀವಿಕಾ ಪರೀಕ್ಷಾ :** ಅನ್ನಪ್ರಾಶನಾ ನಂತರ ಶಿಶುವಿನ ಮುಂದೆ ಅನೇಕ ಶಿಲ್ಪ ವಸ್ತು, ಶಸ್ತ್ರಗಳು, ವಸ್ತ್ರ ಲೇಖನೀಗಳನ್ನು ಇಟ್ಟು, ಮಗುವು ಯಾವುದನ್ನು ಮೊದಲು ಮುಟ್ಟುವುದೋ ಆ ವಸ್ತುವಿನ ಮೂಲಕ ತನ್ನ ಜೀವನ ನಡೆಸುವನೆಂದು ತಿಳಿಯುವುದು.

**ಪ್ರಥಮಂ ಯತ್ ಸ್ಪೃಶೇತ್ ಬಾಲಸ್ತತೋ ಭಾಂಡಂ ಸ್ವಯಂತಥಾ ।**
**ಜೀವಿಕಾ ತಸ್ಯಬಾಲಸ್ಯ ತೇನೈವ ತು ಭವಿಷ್ಯತಿ ॥**

ಪುಸ್ತಕವನ್ನು ಮುಟ್ಟಿದರೆ ಗ್ರಂಥ ಪಾಠ ಪ್ರವಚನಾದಿಗಳಿಂದ ಜೀವನವೆಂದು ತಿಳಿಯುವುದು.

**ಕರ್ಣವೇಧ :** ಕಿವಿ ಚುಚ್ಚುವುದು ಎಂದು ಭಾಷೆಯಲ್ಲಿ ಹೇಳುವರು.

ಯಾವ ಸಂಸ್ಕಾರದಲ್ಲಿ ಕಿವಿಗಳು ಚುಚ್ಚಲ್ಪಡುತ್ತವೆಯೋ ಅದೇ ಕರ್ಣವೇಧ.

ಈ ಸಂಸ್ಕಾರ ಶಿಶುವಿಗೆ ರಕ್ಷಣೆ ಹಾಗೂ ಆಭರಣಗಳನ್ನು ಇಡಲೆಂದು ಮಾಡುವರು.

**ರಕ್ಷಾಭೂಷಣ ನಿಮಿತ್ತಂ ಬಾಲಸ್ಯ ಕರ್ಣೌ ವಿಧ್ಯೇತ್ ।**

ಕಿವಿಯಲ್ಲಿ ಶಂಖುರೇಖೆ, ಶಿರೋರೇಖೆಗಳೆಂಬ ನರಗಳಿದ್ದು ಮೂತ್ರಪಿಂಡಕ್ಕೆ ನೇರವಾಗಿ ಸಂಬಂಧಿಸಿರುತ್ತದೆ. ಇವೆರಡೂ ಬೆಳೆಯುತ್ತಾ ಒಂದಕ್ಕೊಂದು ಸಂಬಂಧ ಹೊಂದಿದರೆ ಹರ್ನಿಯಾ ರೋಗ ಬರುತ್ತದೆ. ಈ ನರಗಳು ತಗಲದಂತೆ ಎರಡು ನರಗಳ ಮಧ್ಯದಲ್ಲಿ ಕರ್ಣವೇಧ ಮಾಡಬೇಕು. ಇದರಿಂದ 'ಆಂತ್ರವೃದ್ಧಿ' ಬರುವುದಿಲ್ಲ. ಹೀಗೆ ಮಾಡಿದ್ದರೂ ಕಿವಿಯ ರಂಧ್ರಗಳು ಮಾಸಿ ಹೋಗಿ ಆಂತ್ರವೃದ್ಧಿ ಬರಲು ಅವಕಾಶವಿದೆಯಾಗಿ ಆ ರಂಧ್ರಗಳು ಮುಚ್ಚಿ ಹೋಗದಂತೆ ಆಭರಣಗಳನ್ನು ಧರಿಸಬೇಕು.

ದೇವಲರು – ಯಾವ ಬ್ರಾಹ್ಮಣನ ಕರ್ಣವೇಧ ಸಂಸ್ಕಾರವಾಗದೆ ಕರ್ಣ ರಂಧ್ರದಿಂದ ಸೂರ್ಯನ ಕಿರಣ ಹಾದು ಹೋಗುವುದಿಲ್ಲವೋ ಅಂತಹವನನ್ನು ನೋಡಿದ ಬ್ರಾಹ್ಮಣನ ಪುಣ್ಯವೆಲ್ಲ ನಾಶವು. ಪುಣ್ಯ ನಷ್ಟವಾದ ಇವನು ಶ್ರಾದ್ಧಾದಿಗಳಿಗೆ ಅನರ್ಹನು.

**ಕರ್ಣರಂಧ್ರೇ ರವೇಃ ಛಾಯಾ ನ ವಿಶೇದ್ ಅಗ್ರಜನ್ಮನಃ ।**
**ತಂ ದೃಷ್ಟ್ವಾ ವಿಲಯಂ ಯಾಂತಿ ಪುಣ್ಯೌಘಾಶ್ಚ ಪುರಾತನಾಃ ॥**
**ತಸ್ಮೈ ಶ್ರಾದ್ಧಂ ನ ದಾತವ್ಯಂ ....**

**ಕರ್ಣವೇಧ ಕಾಲ :** ಹತ್ತನೇ, ಹನ್ನೆರಡನೇ, ಹದಿನಾರು, ಈ ದಿವಸಗಳಲ್ಲಿ, ತಾಯಿಯು ತೊಡೆಯ ಮೇಲಿರುವಾಗಲೇ ದಂತಕ್ಕಿಂತ ಮೊದಲೇ ಸೂಚೀಕರ್ಮ ವಿಹಿತವಾಗಿದೆ.

**ಜನ್ಮತೋ ದಶಮೇವಾಹ್ನಿ ದ್ವಾದಶೇ ವಾಥ ಷೋಡಶೇ ।**
**ಶಿಶೋಃ ಅಜಾತದಂತಸ್ಯ ಮಾತುರುತ್ಸಂಗ ಸರ್ಪಿಕಾಃ ॥**
**ಸೌಚಿಕೇ ವೇಧಯೇತ್ ಕರ್ಣೌ ......**

ಮಗುವಾಗಿದ್ದಲೇ ಕಿವಿ ಚುಚ್ಚುವುದು ಕಿವಿಯ ಬಲಿಯದೆ ಎಳೆಯದಾಗಿರುತ್ತದೆ. ವೇಧನವು ಸುಲಭ. ಶಿಶುವಿಗೆ ಬಹು ನೋವಾಗುವುದಿಲ್ಲ. ಪ್ರಥಮ ಅಥವಾ ಮೂರನೇ ವರ್ಷವೂ ಮಾಡಬಹುದು.

ಕಾರ್ತಿಕ ಪುಷ್ಯ ಚೈತ್ರ ಫಾಲ್ಗುಣ ಮಾಸಗಳು, ಶುಕ್ಲಪಕ್ಷ, ಅಷ್ಟಮಶುದ್ಧಿ ಇರಬೇಕು.

ಜನ್ಮ ಮಾಸ ಭದ್ರಾಯೋಗ, ಶಯನ ಮಾಸ (ಚಾತುರ್ಮಾಸ್ಯ) ನಿಷಿದ್ಧ.

**ಸೂಜಿ ಹೇಗಿರಬೇಕು :** ಚಿನ್ನದ ಸೂಜಿ ಉತ್ತಮೋತ್ತಮ. ಬೆಳ್ಳಿ ಸೂಜಿ ಅಥವಾ ಕಬ್ಬಿಣದ ಸೂಜಿ ಉಪಯುಕ್ತ.

**ಶಾತಕುಂಭಮಯೀ ಸೌಚೀ ವೇದನೇ ಮಂಗಲಪ್ರದಾ ।**

**ರಾಜತೀ ವಾಯಸೀ ವಾಪಿ....**

ಸ್ಮೃತಿ ಮಹಾರ್ಣವವು ಬೆಳ್ಳಿಯ ಲೇಪ ಹೊಂದಿದ ತಾಮ್ರ ಸೂಜಿ ಯುಕ್ತವೆಂದಿದೆ.

ಕೆಲವು ಸ್ಮೃತಿಯಲ್ಲಿ ಕ್ಷತ್ರಿಯರು – ಸುವರ್ಣ ಸೂಜೀ, ಬ್ರಾಹ್ಮಣ – ವೈಶ್ಯ – ಬೆಳ್ಳಿ, ಶೂದ್ರರು – ಕಬ್ಬಿಣ ಎಂದಿದೆ. ಸುವರ್ಣ ಸೂಜಿಯಾದರೆ ಕಿವಿಯಲ್ಲಿ ಹುಣ್ಣಾಗುವ ಸಂಭವ ಕಡಮೆ.

**ಚುಚ್ಚುವರು ಯಾರು :** ಕಿವಿಯಲ್ಲಿರುವ ನರಗಳನ್ನು ತಿಳಿದ ವೈದ್ಯರು ಉತ್ತಮ. ಅಕ್ಕಸಾಲಿಗ, ಸ್ತ್ರೀಯರು ಅಗತಿಕ ಗತಿ.

**ಸಂಸ್ಕಾರ ಕ್ರಮ :** ಶುಭದಿನದಂದು ತಾಯಿಯು ಶಿಶುವನ್ನು ತೊಡೆಯ ಮೇಲೆ ಪೂರ್ವಾಭಿಮುಖ ಕುಳಿತು, ಮಗುವನ್ನು ಪ್ರೀತಿಯಿಂದ ಆಲಿಂಗಿಸಿ, ಮಂಗಳ ಕಥೆಗಳನ್ನೆ ಕೇಳುವವನಾಗು ಎಂದು ಹರಿಸುತ್ತಾ, ಹರಿವಾಯುಗಳು ಸೂರ್ಯಚಂದ್ರ ದಿಕ್ಪಾಲ ಅಶ್ವಿನೀ, ಸರಸ್ವತೀ ಗೋವು ಬ್ರಾಹ್ಮಣರನ್ನು ಪೂಜಿಸಬೇಕು. ಕಿವಿಗೆ ಅರಗಿನ ರಸವನ್ನು ಹಚ್ಚಿ ಗಂಡು ಮಗುವಿಗೆ ಮೊದಲು ಬಲಗಿವಿಯನ್ನೂ, ಸ್ತ್ರೀ ಶಿಶುವಿಗೆ ಎಡಗಿವಿಯನ್ನೂ ಚುಚ್ಚುವುದು.

ಪುಂ ಶಿಶುವಿಗೆ ಪೂರ್ವ–ದಕ್ಷಿಣ = ಆಗ್ನೇಯ ದಿಕ್ಕಿಗೂ

ಸ್ತ್ರೀ ಶಿಶುವಿಗೆ ಪೂರ್ವ – ಉತ್ತರ = ಈಶಾನ್ಯ ದಿಕ್ಕಿಗೂ ತಲೆ ಹಾಕಿ ಕಿವಿ ಚುಚ್ಚಬೇಕು.

**ಕೇಶವಂ ಹರಂ ಬ್ರಾಹ್ಮಣಂ ಚಂದ್ರಮಸಂ ಸೂರ್ಯಂ ।**

**ದಿಕ್ಪಾಲಾನ್ ಅಶ್ವಿನೀಕುಮಾರೌ ಸರಸ್ವತೀಂ ಬ್ರಾಹ್ಮಣನ್ ಗವಾಂ ॥**

ಇವರನ್ನು ನಾಮ ಮಂತ್ರದಿಂದ ಪೂಜಿಸಿ **'ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ'** ಇತ್ಯಾದಿ ಮಂತ್ರದಿಂದ ಕರ್ಣವೇಧ ಮಾಡುವುದು.

ಕರ್ಣವೇಧವಾದ ನಕ್ಷತ್ರದಿಂದ ಮೂರನೇ ನಕ್ಷತ್ರದಿನದಂದು ಬಿಸಿ ನೀರಿನಿಂದ ಕಿವಿಯನ್ನು ತೊಳೆಯಬೇಕು.

**ಮೂಗು ಚುಚ್ಚುವುದು :** ಇದೂ ಸ್ತ್ರೀಯರಿಗೆ ಮೂರು ಐದು, ಏಳು ಒಂಭತ್ತು ವಿಷಮ ವರ್ಷದಲ್ಲಿಯೂ, ಶುಕ್ಲ ಪಕ್ಷದಲ್ಲಿಯೂ, ಮೈತ್ರ ಕ್ಷಿಪ್ರಾದಿ ನಕ್ಷತ್ರಗಳಲ್ಲಿ ಮೊದಲನೆ ಯಾಮದಲ್ಲಿ ಮೂಗನ್ನು ಚುಚ್ಚುವುದು.

- *ದೃಷ್ಟಿ ದೋಷ ಪರಿಹಾರ :*

ಮಗುವಿಗೆ ದೃಷ್ಟಿದೋಷ ಬೇಗನೆ ತಗಲುತ್ತದೆ. ಇದರಿಂದಾಗಿ ಚಂಡಿ ಹಿಡಿಯುತ್ತದೆ.

ಇದರ ಪರಿಹಾರಕ್ಕಾಗಿ ವಿಜಯೀಂದ್ರರು ರಚಿಸಿರುವ ನೃಸಿಂಹಾಷ್ಟಕವನ್ನು ಪಠಿಸುತ್ತಾ ಅಭಿಮಂತ್ರಿತ ನೀರನ್ನು ಪ್ರೋಕ್ಷಿಸಿ ಕುಡಿಸುವುದು ಅಥವಾ ಧೂಪವನ್ನು ಹಾಕುವುದು ಅಥವಾ ಪೊರಕೆಯಿಂದಲೋ ಉಪ್ಪಿನಿಂದಲೋ ದೃಷ್ಟಿ ತೆಗೆದು ರಕ್ಷೆ ಇಡುವುದು.

**ತ್ರಾಹಿ ತ್ರಾಹಿ ಹರೇ ನಿತ್ಯಂ ತ್ವದ್ರಕ್ಷಾಭೂಷಿತಂ ಶಿಶುಂ ।**
**ಬಾಲಗ್ರಹಾನ್ ವಿಶೇಷೇಣ ಛಿಂದಿ ಛಿಂದಿ ಮಹಾಭಯಾನ್ ।**
**ರಕ್ಷರಕ್ಷ ಮಹಾದೇವ ನೀಲಗ್ರೀವ ಜಟಾಧರ ।**
**ಗ್ರಹೈಸ್ತು ಸಹಿತೋ ರಕ್ಷ ಮುಂಚ ಮುಂಚ ಕುಮಾರಕಂ ॥**

ಅಥವಾ ಭಾಗವತ ದಶಮಸ್ಕಂಧದಲ್ಲಿ ಬರುವ ಬಾಲರಕ್ಷಾ ಸ್ತೋತ್ರವನ್ನು ಪಠಿಸುವುದು.

**ವರ್ಧಾಪನ :** ಈ ವರ್ಧಂತಿಯನ್ನು ಪ್ರತಿತಿಂಗಳು ಜನ್ಮ ತಿಥಿಯಲ್ಲಿ ಯಶೋದೆಯು ಕೃಷ್ಣನ ಉತ್ಸವ ಮಾಡಿದಂತೆ ಶಿಶುವಿನ ಜನ್ಮತಿಥಿಯಲ್ಲಿ ಮಾಡುವುದು. ಇದು ವರ್ಷ ಮುಗಿಯುವವರೆಗೂ ತಿಂಗಳು ಮಾಡುವುದು. ವರ್ಷಾನಂತರ ಪ್ರತಿವರ್ಷ ಜನ್ಮತಿಥಿಯಲ್ಲಿ ಮಾಡುವುದು.

ಎರಡು ದಿನಗಳು ತಿಥಿ ಇದ್ದಾಗ ಜನ್ಮ ನಕ್ಷತ್ರವಿರುವ ದಿನದಂದು ಮಾಡಬೇಕು.

ಅಥವಾ ಸೂರ್ಯೋದಯದಿಂದ ಎರಡು ಮುಹೂರ್ತ ಅಧಿಕವಾಗಿರುವ ದಿನದಂದು ಮಾಡುವುದು ಎರಡು ಮುಹೂರ್ತಕ್ಕಿಂತ ಕಡಮೆ ಇದ್ದಾಗ ಹಿಂದಿನ ದಿನ ಗ್ರಾಹ್ಯಾ ಜನ್ಮ ಮಾಸ ಅಧಿಕ ಬಂದಾಗ ನಿಜದಲ್ಲಿಯೇ ಕಾರ್ಯವು.

**ವರ್ಧಂತಿಯ ಫಲ :** ಆಯಿುರಭಿವೃದ್ಧಿಯೇ ಪ್ರಧಾನ. ಬಲ, ತೇಜಸ್ಸು, ಸರ್ವದಾ ಸುಖವು ಇದರಿಂದಾಗುತ್ತದೆ.

**ಯೇನಾಯುರ್ವರ್ಧತೆ ನಿತ್ಯಂ ಬಲಂ ತೇಜಃ ಸುಖಂ ಸದಾ ।**

ಅಶ್ವಿನೀ, ಮೂಲ, ರೋಹಣೀ ಮೃಗಶೀರ್ಷ, ಉತ್ತರಾತ್ರಯ, ಧನಿಷ್ಠಾ, ಮೊದಲಾದವು ಉತ್ತಮಗಳು.

ತಂದೆಯು ಪೂರ್ವಾಹ್ಣದಲ್ಲಿಯೇ ಎದ್ದು ಜನ್ಮನಕ್ಷತ್ರದಲ್ಲಿ ನದ್ಯಾದಿಗಳಲ್ಲಿ ಮಿಂದು, ಜೇನು, ತುಪ್ಪ, ಮೊಸರು ಸಂಯುಕ್ತ ದೂರ್ವೆಯಿಂದ ಮೃತ್ಯುಂಜಯ ಮಂತ್ರದಿಂದ ಸಾವಿರ ಆಹುತಿ, ಧನ್ವಂತರೀ ಹೋಮ, ಗ್ರಹಹೋಮ, ನಕ್ಷತ್ರಾಧಿಪನ ಪೂಜೆ, ಆಯುಷ್ಯ ಹೋಮ ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸುವುದು.

**ತಿಲ ವಿಶೇಷ :** ಉದ್ವರ್ತನ, ತಿಲಸ್ನಾನ, ತಿಲಹೋಮ, ತಿಲದಾನ, ತಿಲಭಕ್ಷಣ, ತಿಲವಾಪಿ ಹೀಗೆ ಷಟ್ತಿಲ ಉಪಯೋಗಿಸಿದವನು ಹಾಳಾಗುವುದಿಲ್ಲ.

**ಆಯುರಭಿವೃದ್ಧ್ಯರ್ಥಂ ವರ್ಷವೃದ್ಧಿ ಕರ್ಮಕರಿಷ್ಯೇ ಎಂದು ಸಂಕಲ್ಪಿಸಿ, ಜನ್ಮ ನಕ್ಷತ್ರ, ಪಿತೃ, ಪ್ರಜಾಪತಿ, ಸೂರ್ಯ, ಗಣಪತಿ ಮಾರ್ಕಂಡೇಯ, ವ್ಯಾಸ, ಪರಶುರಾಮ, ಅಶ್ವತ್ಥಾಮ, ಕೃಪ, ಬಲಿ, ಪ್ರಹ್ಲಾದ, ಹನುಮಂತ, ವಿಭೀಷಣ, ಷಷ್ಠಿದೇವಿ** ಇವರನ್ನು ನಾಮ ಮಂತ್ರಗಳಿಂದ ಆವಾಹಿಸಿ ಹೋಮ ಮಾಡಬೇಕು.

ಷಷ್ಠಿದೇವಿಗೆ ಮೊಸರನ್ನ ನೈವೇದ್ಯ. ಪೂಜಾ ನಂತರ ಹೀಗೆ ಪ್ರಾರ್ಥಿಸುವುದು.

**ಮಾರ್ಕಂಡೇಯ ನಮಸ್ತೇಽಸ್ತು ಸಪ್ತಕಲ್ಪಾಂತ ಜೀವನ ।**

**ಆಯುರಾರೋಗ್ಯ ಸಿದ್ಧ್ಯರ್ಥಂ ಪ್ರಸೀದ ಭಗವನ್ ಮುನೇ ।**

**ಜೀರಂಜೀವಿ ಯಥಾ ತ್ವಂ ತು ಮುನೀನಾಂ ಪ್ರವರೋ ದ್ವಿಜ ।**

**ಕುರುಷ್ವ ಮುನಿ ಶಾರ್ದೂಲ ತಥಾ ಮಾಂ ಚಿರಜೀವಿನಂ ।**

**ಷಷ್ಠೀ ದೇವತೆ :**

ಜಯದೇವೀ ಜಗನ್ಮಾತಃ ಜಗದಾನಂದ ಕಾರಿಣೀ ।

ಪ್ರಸೀದ ಮಮ ಕಲ್ಯಾಣಿ ನಮಸ್ತೇ ಷಷ್ಠಿದೇವತೇ ॥

ಬ್ರಹ್ಮವಿಷ್ಣು ಶಿವೈಃ ಸಾರ್ಧಂ ರಕ್ಷಾಂ ಕುರ್ವಂತು ತಾನಿ ಮೇ ॥

ನಂತರ ಬೆಲ್ಲ, ಎಳ್ಳು ಸಹಿತ ಹಾಲನ್ನು ಕುಡಿಯುವುದು.

**ಸತಿಲಂ ಗುಡ ಸಂಮಿಶ್ರಂ ಅಂಜಲ್ಯರ್ಧಮಿತಂ ಪಯಃ ।**

**ಮಾರ್ಕಂಡೇಯಾದ್ ವರಂ ಲಬ್ಧ್ವಾ ಪಿಬಾಮ್ಯಾಯುರ್ವಿವರ್ಧಯೆ।**

**ಅಕ್ಷರಾಭ್ಯಾಸ** : ಅಕ್ಷರಗಳನ್ನು ಮಕ್ಕಳಿಗೆ ಕಲಿಸಲು ಪ್ರಾರಂಭಿಸುವುದನ್ನು 'ಅಕ್ಷರಾಭ್ಯಾಸ' ಸಂಸ್ಕಾರವು. ಇದೇ ವಿದ್ಯೆಕಲಿಕೆಯ ಪ್ರಪ್ರಥಮ ಕರ್ಮವಾದ್ದರಿಂದ ವಿದ್ಯಾರಂಭ ಎನ್ನುವರು.

**ಅಕ್ಷರಾಭ್ಯಾಸ ಕಾಲ** : ಮೂರನೇ, ಐದನೆಯ ವಯಸ್ಸು ಇದಕ್ಕೆ ಯುಕ್ತವಾಗಿರುತ್ತದೆ. ಚೌಲದೊಂದಿಗೆ ಮಾಡುವುದಿತ್ತು. ಐದನೇ ವರ್ಷ, ಉತ್ತರಾಯಣದಲ್ಲಿ ವರ್ಷಾಕಾಲ, ಷಷ್ಠಿ ರಿಕ್ತಾತಿಥಿ, ಶನಿ–ಮಂಗಳವಾರ ಹೊರತುಪಡಿಸಿ, ಅನಧ್ಯಾಯ, ಚಾತುರ್ಮಾಸ್ಯ, ಅಮವಾಸ್ಯೆ, ಕುಂಭಸಂಕ್ರಾಂತಿ ಬಿಟ್ಟು, ಮೀನ, ಧನು ಈ ರಾಶಿಗಳಲ್ಲಿ ವಿದ್ಯಾಭ್ಯಾಸ ಮಾಡಿಸುವುದು, ವಾರಗಳಲ್ಲಿ ಬುಧವಾರ–ಸೋಮವಾರ ನಿಷಿದ್ಧ – ಮೂರ್ಖನಾಗುತ್ತಾನೆ. ಶನಿ–ಮಂಗಳ ಅಪಮೃತ್ಯು. ಗುರುವಾರವು ಶ್ರೇಷ್ಠ. ಭಾನು–ಶುಕ್ರ ಮಧ್ಯಮ.

ಹಸ್ತಾ, ಪುನರ್ವಸು, ಸ್ವಾತೀ, ಅನುರಾಧಾ, ಆರ್ದ್ರಾ ರೇವತೀ ಚಿತ್ತಾ, ಶ್ರವಣ, ಅಶ್ವಿನೀ ಶ್ರೇಷ್ಠಗಳು. ಅಷ್ಟಮ ಶುದ್ಧಿ ಅವಶ್ಯ.

ನಾರಾಯಣ ಸೂತ್ರಕಾರ ವ್ಯಾಸ, ಹಯಗ್ರೀವ, ಲಕ್ಷ್ಮೀ, ಸರಸ್ವತೀ ಭಾರತೀಯರಿಗೆ ನಮಸ್ಕರಿಸಿ, ಪೂಜಿಸಿ, ಅವಕಾಶವಿದ್ದರೆ ಘೃತದಿಂದ ಹೋಮಿಸಿ ದಕ್ಷಿಣಾದಿಗಳಿಂದ ಬ್ರಾಹ್ಮಣರನ್ನು ಪೂಜಿಸಿ ಸತ್ಕರಿಸುವುದು.

**ಅಕ್ಷರ ಸ್ವೀಕೃತಿ :**

**ಪ್ರೋಕ್ತಾ ಪ್ರಾಪ್ತೇ ಪಂಚಮ ಹಾಯನೇ ।**

**ಉತ್ತರಾಯಣಗೇ ಸೂರ್ಯೇ ಕುಂಭ ಮಾಸಂ ವಿವರ್ಜಯೇತ್।**

**ಷಷ್ಠೀಂ ಪ್ರತಿಪದಂ ಚೈವ ವರ್ಜಯಿತ್ವಾ ತಥಾಽಷ್ಟಮೀಮ್ ।**

**ರಿಕ್ತಾಂ ಪಂಚದಶೀಂ ಚೈವ ಸೌರಿ ಭೌಮದಿನಂ ವಿನಾ ॥**

ಅಕ್ಷರಾಭ್ಯಾಸದಿನ ಅಭ್ಯಂಗ ಮಾಡಿ, ಹೊಸವಸ್ತ್ರ ಧರಿಸಿ ಗೋಪೀಚಂದನಾದಿಗಳಿಂದ ಅಲಂಕೃತನಾಗಿ, ಶುಕ್ಲ ವಸ್ತ್ರದಲ್ಲಿ ಅಕ್ಕಿಯನ್ನು ಹರಡಿ, ಹರಿ, ಲಕ್ಷ್ಮೀ, ಸರಸ್ವತಿಯನ್ನು ತನ್ನ ವಿದ್ಯೆಯ ಸೂತ್ರಕಾರರನ್ನೂ, ತನ್ನ ವಿದ್ಯೆಯನ್ನೂ ನಮಸ್ಕರಿಸಿ, ಗುರುವು ಪೂರ್ವಾಭಿಮುಖನಾಗಿದ್ದು

ಮಗುವು ಪಶ್ಚಿಮಾಭಿಮುಖನಾಗಿರಿಸಿ, ಬ್ರಾಹ್ಮಣಾಶೀರ್ವಾದಗಳೊಂದಿಗೆ ವಿದ್ಯಾಭ್ಯಾಸ ಮಾಡಿಸಬೇಕು.

**ಆದಧೀತ ಗುರೋರ್ವಿದ್ಯಾ ವಾರುಣ್ಯಾಭಿಮುಖಃ ಶಿಶುಃ ।**

ವ್ಯಾಸರನ್ನು, ಹಯಗ್ರೀವ, ದತ್ತಾತ್ರೇಯ, ಶ್ರೀ ಭೂದೇವಿಯರು ಪೂರ್ಣಪ್ರಜ್ಞರನ್ನು ಭಾರತೀ ಸರಸ್ವತಿಯರನ್ನೂ ಪದ್ಮನಾಭಾದಿ ಯತಿಗಳನ್ನು ಸಂಪೂಜಿಸಿ, ಹಾಲು, ಪಾಯಸವನ್ನು ನಿವೇದಿಸಿ, **ಹಾಂ ಹಯಗ್ರೀವಾಯ ನಮಃ** ಎಂಬ ಮಂತ್ರಾ ವೃತ್ತಿಯಿಂದ ಅಭಿಮಂತ್ರಿಸಿ ಮಗುವಿಗೆ ಪ್ರಾಶನ ಮಾಡಿಸುವುದು. ನಂತರ ತಂದೆಯು ಪೂಜಿಸಿದ ಅಕ್ಕಿತಟ್ಟೆಯನ್ನು ಬ್ರಾಹ್ಮಣರಿಗೆ ತೋರಿಸಿ ವಿದ್ಯಾರಂಭಕ್ಕೆ ಅನುಮತಿ ಆಶೀರ್ವಾದಗಳನ್ನು ಪಡೆದು, ಮಗುವಿಗೆ ಕೈಯ್ಯಲ್ಲಿ ಅರಿಷಿಣ ಕೊಂಬನ್ನು ನೀಡಿ.

**ಓಂ ವ್ಯಾಂ ವೇದವ್ಯಾಸಾಯ ನಮಃ ।**

**ಓಂ ಹಾಂ ಹಯಗ್ರೀವಾಯ ನಮಃ ।**

**ಓಂ ಗುರುಭ್ಯೋ ನಮಃ, ಪರಮಗುರುಭ್ಯೋ ನಮಃ, ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ** ಎಂದು ಬರೆಯಿಸಿ, ಪೂಜಿಸಿ, ಪ್ರತಿಷ್ಠಾ ಸೂಕ್ತ ಹೇಳಿ, ಮಂಗಳಾರತಿ ಮಾಡಿ, ಹಿರಿಯರಿಗೆ ನಮಿಸಿ **'ಸರ್ವಶಾಸ್ತ್ರಾರ್ಥ ಸಿದ್ಧಿರಸ್ತು'** ಎಂದು ಆಶೀರ್ವಾದ ಪಡೆಯಬೇಕು. ಸ್ತ್ರೀಯರಿಗೂ ಇದೇ ರೀತಿ.

* * * *

## ಚೌಲ ಸಂಸ್ಕಾರ

ಚೌಲವನ್ನು ಚೂಡಾಕರಣವೆನ್ನುವರು. ಚುಡ್ ಸಮುಚ್ಛ್ರಾಯೇ ಧಾತುವು ಚೆನ್ನಾಗಿ ಅಭಿವೃದ್ಧಿ ಹೊಂದಿಸುವ ಕರ್ಮವೆ ಚೌಲ. ಇದೇ ಚೌಡಕರ್ಮ.

ತಲೆಯಲ್ಲಿ ಜುಟ್ಟನ್ನು ಬಿಡಿಸಿ ಉಳಿದ ತಲೆಗೂದಲನ್ನು ಕ್ಷೌರ ಮಾಡಿಸುವುದು. ಜುಟ್ಟಿನ ಲಾಭ ಪಡೆಯುವುದು ಚೌಡ. ಜುಟ್ಟು ಬಿಡಿಸುವುದು ಎಂದು ಭಾಷೆ.

ಶಿಖೆಯು ಹಿಂದೂಗಳ ಹಿಂದೂ ಧರ್ಮದ ಸಂಕೇತ. ಹಿಂದೂ ಎಂಬುದೆ ಹಿಂದೆ ಜುಟ್ಟು ಇರುವವರೆಂದು ಸೂಚಿಸುತ್ತದೆ. ಈಗೆಲ್ಲ 'ಮುಂದು'ಗಳೇ ಜಾಸ್ತಿ.

- *ಸಂಪ್ರದಾಯ ಪ್ರಧಾನ :*

  ವ್ಯಾಸಸ್ಮೃತಿ [1/18], ವಸಿಷ್ಠ [3/36], ಶಂಖ [2/5] ಯಜ್ಞ [1/12]ರು ಚೂಡಾಕರ್ಮವನ್ನು ಅವರವರ ಪದ್ಧತಿಯಂತೆ ನಡೆಸಬೇಕೆಂದಿರುವರು.

  **ಚೂಡಾಕರ್ಮ ಯಥಾ ಕುಲಮ್ ।**

  ಕುಲದ ಹಿರಿಯರು ಹೇಗೆ ನಡೆಸಿಕೊಂಡು ಬಂದಿದ್ದರೋ ಹಾಗೆ ಮಾಡಬೇಕು. ಅವರವರ ಗೃಹ್ಯಸೂತ್ರೋಕ್ತ ವಿಧಿವತ್ತಾಗಿ ಮಾಡುವುದು.

  **ಯಥಾ ವಿಧಿ ಚ ಕರ್ತವ್ಯಂ ಚೂಡಾಕರ್ಮೋತ್ತರಾಯಣೇ ।**

  ಮನುವು (2/35) ಮೊದಲನೆಯ ವರ್ಷ ಅಥವಾ ಮೂರನೇ ವರ್ಷ ಮಾಡಬೇಕೆಂದಿರುವನು. ಪದ್ಧತಿಯಲ್ಲಿ ಹೀಗೆ ಇದೆ.

  ವಿಷ್ಣುಸ್ಮೃತಿ [2/1–12]ರಲ್ಲಿ ಮೂರನೇ ವರ್ಷದಲ್ಲಿ ಮಾಡಬೇಕೆಂದಿರುವುದು.

  **ತೃತೀಯಾಬ್ದೇ ಚ ಸಂಪ್ರಾಪ್ತೇ ಕೇಶಕರ್ಮ ಸಮಾಚರೇತ್ ।**

  ಲಘು ಆಶ್ವಲಾಯನರು (9/1) ಮೂರನೇ ವರ್ಷ ಉತ್ತರಾಯಣ ಶುಭಮಾಸ, ಶುಭದಿನ ಎಂದಿದ್ದಾರೆ. ಬೃಹಸ್ಪತಿ ಮೂರು/ಪಂಚಮ ವರ್ಷವೆಂದಿದ್ದಾರೆ.

  ಚೂಡಾಕರಣವೆಂದರೆ ಮುಂಡನವೆಂದಲ್ಲ. ಶಿಖೆಯನ್ನು ಬಿಡುವುದು ಎಂದರ್ಥ.

  ಪ್ರಥಮ ವರ್ಷವೂ ಮಾಡುವುದಿದೆ. ಇದು ಯುಕ್ತವೆ ಮಗುವಿಗೆ ಕೂದಲು ಉದ್ದುದ್ದವಾಗಿ ಬೆಳೆದಿರುವುದು. ಅದನ್ನು ತೆಗೆಸಿ ಶಿಖೆಯಿಡಲೂ ಈ ಸಂಸ್ಕಾರವು.

  ಶಿಖಾಬಂಧನವು ಅವಶ್ಯವು **'ಸದಾ ಬದ್ಧ ಶಿಖೇನ ಚ'** ಎನ್ನಲಾಗಿದೆ.

  ಲೌಕಿಕವಾಗಿಯೂ ಚೌಲವು ಉಪಯುಕ್ತವಾಗಿದೆ. ಹುಟ್ಟಿದಾಗ ಬಂದಿರುವ ಜನ್ಮಜಾತ ಕೇಶಗಳನ್ನು ತೆಗೆಸಿದಾಗ ನೂತನ ಹಾಗೂ ಸುಂದರವಾದ ಕೂದಲು ಬರಲು ಸಾಧ್ಯವಿದೆ. ಚರ್ಮರೋಗಾದಿಗಳನ್ನು ತಡೆಯಲು ಪ್ರಥಮ ಕೇಶ ಖಂಡನ ಉಪಯುಕ್ತ.

**ಶಿಖೆಯ ಉಪಯುಕ್ತತೆ :** ನಮ್ಮ ದೇಹವು ಘಟದಂತೆ ಶಿಖೆಯು ಅದರ ಮುಚ್ಚಳ. ಹೇಗೆ ಮಡಕೆಯಲ್ಲಿರುವ ನೀರು ಮುಚ್ಚದಿದ್ದರೆ ಆವಿಯಾಗಿಯೋ, ಕಶ್ಮಲ ದೂಷಿತವಾಗಿಯೋ ಆಗಬಹುದು. ಹಾಗೆಯೇ ದೇಹದಿಂದಾಚರಿಸಿದ

ಕರ್ಮಗಳೆಂಬ ನೀರು ಶಿಖೆಯಿಲ್ಲದಿದ್ದರೆ ಆವಿಯಾಗಿ ತಲೆಯಿಂದ ಹೊರ ಹೋಗಿ ಇಲ್ಲವಾಗುತ್ತವೆ.

**ರಿಕ್ತೋ ವಾ ಏಷಃ ಯನ್ಮುಂಡಃ ತಸ್ಮೈ ತದಪಿಧಾನಂ ಯಚ್ಛಿಖೆ ।**

**ಖಲ್ವಾಟ ದೋಷ :** ತಲೆಯು ಬೊಕ್ಕ ತಲೆಯಾಗಿದ್ದರೆ ಏಳು ದರ್ಭೆಗಳಿಂದ ಬ್ರಹ್ಮಗಂಟು ಸಹಿತ ಕೂರ್ಚವನ್ನು ಬಲಗಿವಿ ಹಾಗೂ ಶಿರಸ್ಸಿಗೂ ಸಂಬಂಧಿಸುವಂತೆ ಧರಿಸಬೇಕು.

ಕೂದಲುಗಳು ಓಷಧಿಗಳೆಂದು ಶಾಸ್ತ್ರ ತಿಳಿಸಿದೆ. ಹೀಗೆ ಓಷಧೀತ್ವ ಸಿದ್ಧವಾಗಲೆಂದೆ ದರ್ಭೆಯನ್ನು ಕೂದಲಿನೊಂದಿಗೆ ಸೇರಿಸಿ, ದಧಿ ಮಿಶ್ರಣದಿಂದ ಮೂರು ಬಾರಿ ಪ್ರದಕ್ಷಿಣವಾಗಿ ಕತ್ತರಿಸಬೇಕು.

**ಶಮ್ಯಾದಿ ದರ್ಭಪಿಂಜೂಲೈಃ ಮಿಶ್ರಯಿತ್ವಾ ಶಿರೋರುಹಾನ್ ।**
**ಛಿನತ್ತಿ ಪ್ರತಿ ಮಂತ್ರೇಣ ತತ್ಸದೃಶ್ಯತ್ವ ಸಿದ್ಧಯೇ ॥**

- **ವಿಧಿ ವಿಧಾನ :**

ಕತ್ತರಿಸುವ ಮೊದಲು ತಲೆಗೆ ಬಿಸಿ ನೀರಿನಿಂದ ತೋಯಿಸಿ ಅಬ್ ದೇವತೆಯನ್ನು ಆಯುಸ್ಸು, ವರ್ಚಸ್ಸು, ದೀರ್ಘಕಾಲ ಸೂರ್ಯನ ದರ್ಶನಕ್ಕಾಗಿ ನೇತ್ರಪಾಟವವನ್ನು ಶಿಶುವಿಗೆ ಜಲದೇವತೆ ನೀಡಲಿ.

**ಆಪ ಉಂದಂತು ಜೀವಸೇ**
**ದೀರ್ಘಾಯುತ್ವಾಯ ವರ್ಚಸೇ ।**
**ಜ್ಯೋಕ್ಚ ಸೂರ್ಯಂ ದೃಶೇ ।**

ಕರ್ತನು ಪ್ರಾತಃ ಆಹ್ನಿಕ ಮುಗಿಸಿ ಸಂಕಲ್ಪ –

**ಅಸ್ಯ ಮಮ ಕುಮಾರ್ಯ ಬೀಜಗರ್ಭ ಸಮುದ್ಭವ ಏನೋ ನಿಬರ್ಹಣೇನ ಬಲಾಯುರ್ವರ್ಚೋಽಭಿವೃದ್ಧಿ ದ್ವಾರಾ ಶ್ರೀಭಗವತಃ ಪ್ರೀತಿಂ ಕಾಮಯಮಾನಃ ಚೂಡಾಕರ್ಮ ಕರಿಷ್ಯೇ.**

ಹಿಂದೆ ಹೇಳಿದಂತೆ ಗಣಪತಿ ಪೂಜೆ, ಪುಣ್ಯಾಹ ನಾಂದಿ, ನವಗ್ರಹ ಮಾಡಿ, ಸ್ಥಂಡಿಲೋಲ್ಲೇಖನಾದಿ 'ಸಭ್ಯ' ಅಗ್ನಿಯನ್ನು ಸ್ಥಾಪಿಸಿ, ಅನ್ವಾಧಾನ ಮಾಡಬೇಕು.

**ತ್ರಿರತ್ನಿ ಪವಮಾನೇನ, ಪ್ರಜಾಪತಿಂ ಏಕವಾರಂ,** ಹೋಮಿಸಿ ತಣ್ಣೀರು –

ಉಷ್ಣ ನೀರು – **'ಉಷ್ಣೇನ ವಾಯ ಉದಕೇನೇಹ'** ಎಂದು ಎರಡನ್ನು ಬೇರೊಂದು ಪಾತ್ರೆಗೆ ಹಾಕಿ, ನವನೀತವನ್ನು ತೆಗೆದುಕೊಂಡು ಕುಮಾರನಿಗೆ ಹಿಂದಿನಿಂದ ಬಂದು ಎಡಗಿವಿಯಿಂದಾರಂಭಿಸಿ ಪ್ರದಕ್ಷಿಣಾಕಾರವಾಗಿ ತೊಯಿಸುವುದು. ನಂತರ ಇಪ್ಪತ್ತೊಂದು ದರ್ಭೆ ತೆಗೆದುಕೊಂಡು ಮೂರನ್ನು ದಕ್ಷಿಣ ಕೇಶ ಸ್ಥಳದಲ್ಲಿ ಹಿಡಿದು – **'ಓಷಧೇ ತ್ರಾಯಸ್ವೈನಂ' 'ಸ್ವಧಿತೇ ಮೈನಂ ಹಿಂಸೀ:'** ಹೀಗೆ ಹೇಳಿ ಮೂರು ಮಂತ್ರಗಳಿಂದ ದರ್ಭೆಗಳನ್ನು ಕತ್ತರಿಸಿ, ನಾಪಿತನನ್ನು ಕರೆಸಿ ಕುಲಾಚಾರದಂತೆ ಶಿಖೆ ಇಡುವುದು.

ಚೌಲದಲ್ಲಿ ಕುಲಾಚಾರದಂತೆ ಪ್ರವರಸಂಖ್ಯೆಯಂತೆ ಶಿಖೆಯನ್ನು ಬಿಡಬೇಕು ಉಪನಯನದಲ್ಲಿ ಹಿಂದೆ ಒಂದು ಮುಖ್ಯ ಶಿಖೆ ಹೊರತು ಉಳಿದವುಗಳನ್ನು ವಪನ ಮಾಡಿಸುವುದು.

ಸ್ತ್ರೀಯರಿಗೂ ಅಮಂತ್ರಕವಾಗಿ ಕಾರ್ಯ ಮಾಡುವುದು. ಹೋಮ ಮಾತ್ರ ಸಮಂತ್ರಕ. ಸ್ತ್ರೀಯರಿಗೂ ಕೂದಲು ತೆಗೆಯುವ ಪದ್ಧತಿ ಇಲ್ಲ. ಮಗುವು ಮೊದಲನೆಯ ವರ್ಷದಲ್ಲಿ ಶ್ರೀನಿವಾಸನಿಗೆ ಕೂದಲು ಕೊಟ್ಟು ಬರುವುದಷ್ಟೆ.

ವಸಿಷ್ಠ ಗೋತ್ರದವರು ಬಲಗಡೆ ಒಂದು ಶಿಖೆಯನ್ನೂ, ಅತ್ರಿ, ಕಾಶ್ಯಪರು ತಲೆಯ ಎಡ-ಬಲಗಳಲ್ಲಿ ಎರಡೂ ಕಡೆಯು, ಭಾರ್ಗವರು ಶಿಖೆಯನ್ನೆ ಇಡದೆ ಮುಂಡನವನ್ನೂ, ಆಂಗೀರಸ ಐದು ಕಡೆ ಶಿಖೆಯನ್ನೂ, ಕೆಲವರು ಮುಂದೆ ಒಂದನ್ನೂ ಕೆಲವರು ಹಿಂದೆ ಒಂದನ್ನೂ ಮಾತ್ರ ಇಡುವ ಪದ್ಧತಿಗಳಿವೆ.

- ***ಚೌಲ ಕಾಲ :***

  ಜನ್ಮದಿಂದ ಪ್ರಥಮ, ತೃತೀಯ, ಪಂಚಮ ಕೆಲವರು ಉಪನಯನದೊಂದಿಗೆ ಮಾಡುವರು.

  ಮಾಘ, ಪಾಲ್ಗುಣ, ವೈಶಾಖ, ಜ್ಯೇಷ್ಠ ಮಾಸಗಳು ಶ್ರೇಷ್ಠ. ಜನ್ಮ ಮಾಸ, ಅಧಿಕ ಮಾಸ ನಿಷಿದ್ಧ. ದ್ವಿತೀಯ ತೃತೀಯಾದಿ ತ್ರಯೋದಶಿವರೆಗೂ ಬೆಸ ತಿಥಿಗಳು ಶ್ರೇಷ್ಠಗಳು. ಏಕಾದಶೀ ನಿಷಿದ್ಧ. ಬುಧ, ಗುರು, ಶುಕ್ರ ವಾಂಗಳವಾದವು. ಅನುರಾಧಾ ಮಖಾ ರೋಹಿಣೀ ಕೃತ್ತಿಕಾ ಉತ್ತರಾತ್ರಯದಲ್ಲಿ ಆಯುಸ್ಸು ಕ್ಷೀಣ, ಹುಡುಗನ ತಾಯಿಯು ಗರ್ಭಿಣಿಯಾಗಿರುವಾಗ ಈ ನಿಷೇಧ ಐದಾದ ಮೇಲೆ ಗರ್ಭಿಣಿಯಾಗಿದ್ದರೂ ಮಾಡಬಹುದು. ಉಪನಯನದೊಂದಿಗೆ ಚೌಲ ಮಾಡಿದಾಗ ದೋಷವಿಲ್ಲ. ಚೌಲವನ್ನು ಗರ್ಭಿಣಿಗೆ ಐದು ತಿಂಗಳು ತುಂಬುವವರೆಗೂ ಪರವಾಯಿಲ್ಲ.

**ಪಂಚಮಾಸಾಧಧಃ ಕುರ್ಯಾತ್ ಅತ ಊರ್ಧ್ವಂ ನ ಕಾರಯೇತ್ ॥**

ನಾಲ್ಕು ತಲಾಂತರದಲ್ಲಿ ಸಪಿಂಡೀ, ಮಾಸಿಕಗಳು, ಪ್ರೇತಕರ್ಮ ಇವುಗಳು ಮುಗಿಯದೇ ಚೌಲಾದಿಗಳು ನಿಷಿದ್ಧ.

ಒಂದೇ ತಾಯಿಯ ಇಬ್ಬರು ಮಕ್ಕಳಿಗೆ ಒಂದೇ ವರ್ಷದಲ್ಲಿ ಚೌಲ, ಉಪನಯನಾದಿಗಳನ್ನು ಮಾಡಬಾರದು.

ಒಂದು ಬಾರಿ ಚೂಡಾಕರಣದಲ್ಲಿ ಸಂಸ್ಕಾರ ನಡೆಸಿದ ಮೇಲೆ ಉಪನಯನಾಂಗವಾಗಿ ಮಾಡುವ ಸಂಸ್ಕಾರದಲ್ಲಿ ದರ್ಭೆಯಿಂದ ಮಾತ್ರವೇ ಮಂತ್ರಸವೃತ್ತಿಯನ್ನು ಮಾಡಿ ಕ್ಷೌರ ಮಾಡಿದಂತೆ ಮಾಡುವರು.

**ಚೌಲೇ ಪ್ರಧಾನಂ ಕ್ಷುರಕರ್ಮ ಕಾರ್ಯಂ ।**

**ಉಪನಯನಾಂಗಂ ತು ವಿಭಾವನೀಯಂ ॥**

ಸ್ತ್ರೀಯರಿಗಾದರೂ ವಿವಾಹ ಕಾಲದಲ್ಲಿ **'ಚೂಡಾಕರ್ಮಣಾ ಸಂಸ್ಕರಿಷ್ಯೇ'** ಎಂದು ಹೇಳಿ ಮಾವಿನ ಸೊಪ್ಪಿನಿಂದ ಪುಣ್ಯೋದಕವನ್ನು ಪ್ರೋಕ್ಷಿಸುವುದು. ಚೌಲಾಂತ ಪ್ರಾಯಶ್ಚಿತ್ತ ಮಾಡುವುದು, ಕ್ಷುರಕರ್ಮವಿರುವುದಿಲ್ಲ.

* * * *

## ಉಪನಯನಮ್

ಉಪನಯನವು ವೇದವೇದಾಂತಾಧ್ಯಯನಕ್ಕೆ ಮೊದಲು ಮಾಡುವ ಸಂಸ್ಕಾರವು.

**ಉಪನಯನಾಖ್ಯಂ ಯತ್ ಕರ್ಮ ವಿದ್ಯಾರ್ಥಂ ತದುದೀರಿತ ।**
**ಉಪಸಮೀಪೇ ಆಚಾರ್ಯಾದೀನಾಂ ವಟೋಃ ನೀತಿಃ ನಯನ ಪ್ರಾಪಣಮ್** ॥ – *ಸಂಸ್ಕಾರಪ್ರಕಾಶ*

ಇದು ಉಪನಯನವು ಅಂಗಕರ್ಮ. ಗಾಯತ್ರಿಯ ಉಪದೇಶವು ಪ್ರಧಾನ ಕರ್ಮವು. ಹೀಗೆ ಅಂಗ–ಪ್ರಧಾನ ಕರ್ಮಾತ್ಮಕವಾದ ಕರ್ಮ ವಿಶೇಷಕ್ಕೆ ಉಪನಯನವೆನ್ನುವರು. ಇದೊಂದು ವಟುವಿನ ಸಂಸ್ಕಾರ ಕರ್ಮವು.

ಗಾಯತ್ರೀಯ ಉಪದೇಶವೇ ಉಪನಯನ ಸಂಸ್ಕಾರವೆಂದು ಕಾತ್ಯಾಯನರು ಹೇಳಿದ್ದಾರೆ.

**ಗಾಯತ್ರ್ಯಾ ಬ್ರಾಹ್ಮಣಂ ಉಪನಯೀತ ।**

ಉಪನಯನವು ವಿದ್ಯೆ ಬಯಸುವ ವ್ಯಕ್ತಿಗೆ ಶ್ರುತಿಯಿಂದ ಮಾಡಲ್ಪಡುವ ಸಂಸ್ಕಾರ.

**ವಿದ್ಯಾರ್ಥಸ್ಯ ಶ್ರುತಿತಃ ಸಂಸ್ಕಾರಃ ಉಪನಯನಂ ।**

- **ಮೂರು ಋಣದಿಂದ ಬದ್ಧರು [ವಸಿಷ್ಠರು 11/42–43] :**

ಪ್ರತಿಯೊಬ್ಬರೂ ದೇವ–ಋಷಿ–ಪಿತೃ ಋಣದಿಂದ ಬದ್ಧರಾಗಿರುತ್ತಾರೆ. ಬ್ರಹ್ಮಚರ್ಯದಿಂದ ಋಷಿ ಋಣ, ಯಜ್ಞಾದಿಗಳಿಂದ ದೇವ ಋಣ, ಸಂತಾನದಿಂದ ಪಿತೃ ಋಣ.

ಅಥರ್ವವೇದದಲ್ಲಿ ಬ್ರಹ್ಮಚಾರಿ ಹಾಗೂ ಬ್ರಹ್ಮಚರ್ಯದ ವಿಷಯಕ್ಕಾಗಿ ಕೆಲವು ಸೂಕ್ತಗಳಿವೆ [ಅಥರ್ವ –11/5/1–26]

ಉಪನಯನವು ವಟುವಿನ ಎರಡನೆ ಜನ್ಮ. ಆಚಾರ್ಯನು ವಟುವನ್ನು ಮೂರು ದಿನಗಳ ಕಾಲಗರ್ಭದಲ್ಲಿ ಧರಿಸುವನು. ಹೀಗೆ ಆಚಾರ್ಯರ ಗರ್ಭದಿಂದ ಹೊರಬಂದ ವಟುವನ್ನು ನೋಡಲು ದೇವತೆಗಳು ಬರುವರು.

**ಆಚಾರ್ಯೋ ಉಪನಯ ಮಾನೋ ಬ್ರಹ್ಮಚಾರಿಣಂ ಕೃಣುತೇ ಗರ್ಭಂಮಂತ ।**

**ತಂ ರಾತ್ರೀಸ್ತಿಸ್ರಃ ಉದರೇ ಬಿಭರ್ತಿ ತಂ ಜಾತಂ ದ್ರಷ್ಟುಮಭಿಯಂತಿ ದೇವಾಃ ॥**

ತಂದೆ ತಾಯಿಗಳು ಶರೀರ ಮಾತ್ರಕ್ಕೆ ಕಾರಣರಾಗಿರುವರು.

**ಸ ಹಿ ವಿದ್ಯಾತಹ ತಂ ಜನಯತಿ । ತಚ್ಛ್ರೇಷ್ಠಂ ಜನ್ಮ ।**

ಹೀಗೆ ಆಚಾರ್ಯನಿಂದ ಗಾಯತ್ರಿಯ ಉಪದೇಶದಿಂದಾಗಿ ಅವನಿಗೆ ಅಧಿಕ ಕಣ್ಣು ಲಭಿಸುತ್ತದೆ. [ಉಪ+ಅಧಿಕ, ನಯನಂ – ನೇತ್ರಂ]

**ಬ್ರಹ್ಮಜ್ಞಾನವಿಶಿಷ್ಟಂ ಅಧಿಕಂ ನಯನಂ ವಟುನಾ ಪ್ರಾಪ್ಯತೇ ।**

ಗಾಯತ್ರಿಯ ಉಪದೇಶದಿಂದ ಪರಮಾತ್ಮನ ಸಮೀಪ ನಯನವು.

- *ಉಪನಯನ ಸಂಸ್ಕಾರ :*

ಗರ್ಭದಿಂದ ಅಥವಾ ಜನ್ಮದಿಂದ ಐದನೇ ಅಥವಾ ಎಂಟನೇ ವರ್ಷದಲ್ಲಿ ಬ್ರಾಹ್ಮಣನಿಗೆ ಉಪನಯನವಾಗಬೇಕು. ಆರನೇ ವರ್ಷವು ಬ್ರಾಹ್ಮಣನಿಗೆ

ನಿಷಿದ್ಧ. ಬ್ರಾಹ್ಮಣನಿಗೆ ಹದಿನಾರು ವರ್ಷ ತನಕ ಗಾಯತ್ರೀ ಹೋಗುವುದಿಲ್ಲ. ಅಂದರೆ ಗೌಣಕಾಲವು, ಹದಿನಾರನೇ ವರ್ಷವಾದರೆ ಪ್ರಾಯಶ್ಚಿತ್ತವಾಗಬೇಕು.

ವಸಂತು ಋತು ಬ್ರಾಹ್ಮಣನಿಗೆ ಶ್ರೇಷ್ಠ.

**ವಸಂತೇ ಬ್ರಾಹ್ಮಣ ಮುಪಾನಯೀತ ।**

ಪುಷ್ಪಗಳು ಅರಳುವ ಈ ಕಾಲ ಬುದ್ಧಿ ವಿಕಸಿಸುವ ಕಾಲವಾಗಿದೆ. ಉತ್ತರಾಯಣ ಶ್ರೇಷ್ಠ. ವಸಂತ ಅನಾನುಕೂಲವಾದಾಗ ಗ್ರೀಷ್ಮ-ಶಿಶಿರ ಗ್ರಾಹ್ಯ. ಮೀನ, ಮೇಷ ಅತ್ಯಂ ಪ್ರಶಸ್ತ. ಮೀನಾರ್ಕದಿಂದ ಮಿಥುನದೊಳಗೆ ಪ್ರಶಸ್ತ ಕಾಲವು. ರವಿಯು ಮೀನದಲ್ಲಿದ್ದಾಗ ಗುರು-ಶುಕ್ಲಸ್ತರಾಗಿದ್ದರೂ, ಸಿಂಹದಲ್ಲಿ ಗುರುವಿದ್ದರೂ, ಅನಿಷ್ಟನಾಗಿದ್ದರೂ ದೋಷವಿರುವುದಿಲ್ಲ. ಇದು ಆಪತ್ಕಾಲವೆಂದು ತಿಳಿಯಬೇಕು. ಜ್ಯೇಷ್ಠಕುಮಾರನಿಗೆ ಜ್ಯೇಷ್ಠದಲ್ಲಿ ಉಪನಯನ ನಿಷಿದ್ಧವು.

ಅನಧ್ಯಾಯ ದಿನಗಳಲ್ಲಿ ಗಾಯತ್ರೀ ಉಪದೇಶವಿಲ್ಲ. ಏಳು ಅಥವಾ ಎಂಟರಲ್ಲಿ ಮಾಡುವ ಉಪನಯನವು ಗುರುವು ಹನ್ನೆರಡು, ಎಂಟು ಸ್ಥಾನಗಳಲ್ಲಿದ್ದರೂ ಗುರು ಶಾಂತಿ ಮಾಡಿ ಉಪನಯನ ಮಾಡಬಹುದು.

**ಜನ್ಮಾಂತ ನಿಧನಸ್ಥೋऽಪಿ ಪೂಜಯಾ ಶುಭದೋ ಗುರುಃ ಉಕ್ತೇऽಬ್ಧೇ ಚೇದ್** । – *ಮು.ದರ್ಪಣ*

**ತಿಥಿಗಳು :** ಶುಕ್ಲಪಕ್ಷದ ದ್ವಿ, ತೃ, ಪಂ, ಸಪ್ತ, ದಶಮೀ, ತ್ರಯೋದಶೀ ಶ್ರೇಷ್ಠಗಳು. ಕೃಷ್ಣಪಕ್ಷದಲ್ಲಿ ಅಷ್ಟಮೀ, ತ್ರಯೋ, ಚತುರ್ದಶೀ, ಅಮಾಗಳು ನಿಷಿದ್ಧ.

**ಪೂರ್ವಪಕ್ಷಃ ಶುಭಃ ಪ್ರೋಕ ಕೃಷ್ಣಶ್ಚ ಆಂತ್ರಯ ತ್ರಿಕಂ ವಿನ ॥**

**ವಾರಗಳು :** ಗುರು, ಶುಕ್ರ, ಬುಧ ಶ್ರೇಷ್ಠ. ಭಾನು, ಸೋಮ ಮಧ್ಯಮ.

ಉಪನಯನ ಲಗ್ನ ಕಟಕವಾಗಿದ್ದು ಗುರುಚಂದ್ರರಿದ್ದರೆ ಮಹಾ ಐಶ್ವರ್ಯವು.

ಉಪನಯನ ಲಗ್ನವು ವಟುವಿನ ಜನ್ಮರಾಶಿಗೆ ಎಂಟನೆಯದಾಗಿರಬಾರದು. ಉಪನಯನ ಲಗ್ನಕ್ಕೆ ಉಂಟು, ಹನ್ನೆರಡರಲ್ಲಿ ಚಂದ್ರನಿರಬಾರದು.

ಉಪನಯನ ವಿವಾಹ ನಡೆಸುವುದಾದರೆ ಮೊದಲು ಉಪನಯನ ನಂತರ ವಿವಾಹವು.

ಇಬ್ಬರು ಅಣ್ಣತಮ್ಮಂದಿರಿಗೆ ಒಂದೇ ದಿನ ಉಪನಯನ ಮಾಡಬಾರದು.

**ಮಂಡನಾತ್ ಪರಂ ಮುಂಡನ ನಿಷೇಧಃ ।**

***ಉಪನಯನ ಸಾಮಗ್ರಿ :***

ಕೌಪೀನ, ಕಟಿಸೂತ್ರ ಉಡುವ ವಸ್ತ್ರ (ಹಳದಿ) ಹೊದೆಯುವ ವಸ್ತ್ರ ಇವು ಅಹತವಾಗಿರಬೇಕು. ಅಂದರೆ ಬೇರೆಯವರಾಗಲೀ ಬೇರೆ ಕಾರ್ಯಕ್ಕಾಗಲೀ ಉಪಯೋಗಿಸದಿದ್ದ ವಸ್ತ್ರ ಮೂರಂಗುಲು/ನಾಲ್ಕಂಗುಲ ಕೃಷ್ಣಾಜಿನವು ಹೊರಗೆ ರೋಮವುಳ್ಳದ್ದಾಗಿರಬೇಕು.

ಆಪಸ್ತಂಬರು ಬ್ರಾಹ್ಮಣನಿಗೆ ಕಾಷಾಯ ವಸ್ತ್ರವೆಂದು ಹೇಳಿದ್ದರೂ ಅರಿಷಿಣದಲ್ಲಿ ನೆನೆಸಿದ ವಸ್ತ್ರವನ್ನೇ ಉಡಿಸುವುದು. ವಸ್ತ್ರಗಳೂ ಸಹ ಜಾತಿಗೆ ತಕ್ಕಂತೆ ಬೇರೆಯಾದರೂ ಎಲ್ಲರಿಗೂ ಹತ್ತಿಯ ವಸ್ತ್ರ ಉಡಿಸಬಹುದೆಂದಿದೆ.

**ಸರ್ವೇಷಾಂವಾ ಕಾರ್ಪಾಸಂ ವಾ ಅವಿಕೃತಮ್ ।**

***ಮೌಂಜೀಬಂಧನ :*** ಮುಂಜಾ ಹುಲ್ಲು ಎಂಬ ದರ್ಭ ವಿಶೇಷದಿಂದ ತಯಾರಾದ ಹಗ್ಗವೊಂದನ್ನು ವಟುವಿನ ಮಧ್ಯಭಾಗಕ್ಕೆ ಮೂರು ಸುತ್ತು ಬರುವಂತೆ ಕಟ್ಟುವುದು. ಇದಕ್ಕೆ ಒಂದು/ಮೂರು/ ಐದು ಗ್ರಂಥಿಗಳಿರಬೇಕು.

**ತ್ರಿವೃತಾಂ ಮೇಖಲಾಂ ಕರ್ಯಾತ್ ತ್ರಿವಾರಂ ಚ ।**

**ತದ್ಗ್ರಂಥಯಃ ತ್ರಯಃ ಕಾರ್ಯಾಃ ।**

ಇದನ್ನು ಸೊಂಟಕ್ಕೆ ಸುತ್ತಿದಾಗ ಮೂರು ವೇದಗಳಿಂದ ಸುತ್ತುವರೆಯಲ್ಪಟ್ಟಿದ್ದೇನೆಂದು ಭಾವಿಸಬೇಕು.

**ವೇದತ್ರಯೇಣ ಆವೃತೋಽಹಯಿತಿ ಮನ್ಯೇತ ಸದ್ವಿಜಃ ।**

ಅಥರ್ವ (6/133–134)ರಲ್ಲಿ ಮೌಂಜಿಯು ಶ್ರದ್ಧಾದೇವಿಯ ಪುತ್ರಿಯು, ತಪಸ್ಸಿನಿಂದ ಹುಟ್ಟಿದವಳು. ಋಷ್ಯಾದಿಗಳಿಗೆ ತಂಗಿಯಂತಿರುವವಳು, ಪಂಚಭೂತಗಳಿಂದ ಮಾಡಲ್ಪಟ್ಟವಳು.

**ಶ್ರದ್ಧಾಯಾ ದುಹಿತಾ ತಪಸೋಽಧಿಜಾತ ಸ್ವಸಾ ಋಷೀಣಾ ।**

ಇದರ ಧಾರಣೆಯಿಂದಾಗಿ ಅಧಿದೇವತೆಯ ರಕ್ಷಣೆಯಿಂದಾಗಿ ನಾವು ಎಂದೂ ನಾಶ ಹೊಂದುವುದಿಲ್ಲ.

**ಘ್ನತೀ ರಕ್ಷಃ ಸಹಮಾನಾ ಅರಾತೀಃ ।**

ಈ ಮೇಖಲೆಯನ್ನು ನಾಭಿಯ ಬುಡ ಹಾಗೂ ಲಿಂಗದ ಮೇಲೆ ಕಟ್ಟಬೇಕು.

ಇದರಿಂದ ಅಪವಿತ್ರ ಭಾಗವಾದ ನಾಭಿಯು ಅಧೋಭಾಗವೂ ಪವಿತ್ರವಾಗುತ್ತದೆ.

**ಯನ್ ಮಧ್ಯತಃ ಸಂನಹ್ಯತಿ ಮೇಧ್ಯಂ ಚೈವಾಸ್ಯಾಮೇಧ್ಯಂ ಚ ವ್ಯಾವರ್ತಯತಿ ।**

**ಕೃಷ್ಣಾಜಿನ :** ಮೌಂಜಿಧಾರಣಾ ನಂತರ ಕೃಷ್ಣಾಜಿನ ಧಾರಣೆ. ಜನಿವಾರಕ್ಕೆ ಒಂದು ತುಂಡನ್ನು ಕಟ್ಟುತ್ತಾರೆ. ಋಗ್ವೇದ ಸಮವೇದಾಭಿಮಾನಿಗಳು ದೇವತೆಗಳಿಗೆ ಕಾಣದೆ ಕೃಷ್ಣಾಜಿನ ರೂಪ ಧರಿಸಿದರು. ಸರ್ವಜ್ಞರಾದ ದೇವತೆ ಅರಿತು ನೀವು ಋಕ್ ಸಾಮಗಳಾಗಿರುವಿರಿ ಎಂದಾಗ ಹಗಲು ರಾತ್ರಿ ದೇವತೆಗಳನ್ನು ಕಾಪಾಡಿದರು. ಕೃಷ್ಣಮೃಗದಲ್ಲಿರುವ ಬಿಳಿಯ ಚುಕ್ಕೆ ಋಗ್ವೇದವಾದರೆ, ಕಪ್ಪುಚುಕ್ಕೆ ಸಾಮವೇದವು.

**ಋಚೋ ವರ್ಣೋ ಯಚ್ಛುಕ್ಲಂ ಕೃಷ್ಣಾಜಿನಸ್ಯೈಷ ಸಾಮ್ನೋ ಯತ್ ಕೃಷ್ಣಂ ।** *–ತೈ.ಸಂ. 6/ಪ್ರ1/ಅನು3*

ವೇದಗಳ ರಕ್ಷಣೆಗೆ ಮೂರ್ತ ರೂಪ ಧರಿಸಿರುವ ಕೃಷ್ಣಾಜಿನ ಅವಶ್ಯ ಧರಿಸಬೇಕು.

**ಯಜ್ಞೋಪವೀತ :** ಯಜ್ಞೋಪವಿತವನ್ನು ಹತ್ತಿಯಿಂದ ತಯಾರಿಸಿರಬೇಕು. ಬ್ರಾಹ್ಮಣರು ತಯಾರಿಸಿದ ದಾರವನ್ನು ಕನಿಷ್ಠಾದಿ ತೋರುಬೆರಳಿನ ಬೆಟ್ಟುಗಳನ್ನು ಜೋಡಿಸಿ ಕೂಡಿಸಿ ತೊಂಬತ್ತಾರು ಅಂಗುಲ ಸುತ್ತಳತೆ ಮಾಡಬೇಕು. ಅದನ್ನು ಮೂರೆಳೆ ಮಾಡಿ, ಮೊದಲು ಮೇಲ್ಮುಖ ಮಾಡಿ ತಿರುಗಿಸಿ ಪುನಃ ಕೆಳಮುಖವಾಗಿ ತಿರುಗಿಸಬೇಕು. ಪುನಃ ತ್ರಿಗುಣ ಮಾಡುವುದು. ಈಗ ಒಂಭತ್ತು ಎಳೆಗಳುಳ್ಳ ಒಂದು ಸೂತ್ರ ಮಾಡಿ, ಅದನ್ನು ಮೂರು ಸುತ್ತಳತೆ ಮಾಡಿ ಬ್ರಹ್ಮಗಂಟನ್ನು ಹಾಕುವುದು.

**ಯಜ್ಞೋಪವೀತ ಪ್ರಾಧಾನ್ಯೇ :** ಯಜ್ಞೋಪವೀತವಿಲ್ಲದೆ ಯಾವುದೇ ಕರ್ಮವು ಫಲ ನೀಡಲಾರದು. ತೈತ್ತರೀಯದ ಉಪಾಖ್ಯಾನದಲ್ಲಿ – ದೇವತೆಗಳು – ದೈತ್ಯರು ತಾವು ಮೊದಲು ಸ್ವರ್ಗದ ಆಧಿಪತ್ಯ ಪಡೆಯಲು ಉದ್ಯುಕ್ತರಾಗಿ ಯಜ್ಞವನ್ನಾರಂಭಿಸಿದರು. ಆ ಯಜ್ಞಾದಿಗಳು ವಿಧಿವತ್ತಾಗಿರಲಿಲ್ಲ. ದೇವತೆಗಳು ಯಜ್ಞೋಪವೀತ ಧರಿಸಿ ಮಾಡಿದ ಯಜ್ಞದಿಂದ ತುಷ್ಟನಾದ ಹರಿಯು ಅವರಿಗೆ ಸ್ವರ್ಗಾಧಿಪತ್ಯ ನೀಡಿದೆ. ದೇವತೆಗಳ ಯಜ್ಞ ಹರಿಪ್ರೀತವಾಗಲು ಅವರು ಧರಿಸಿದ್ದ ಯಜ್ಞೋಪವೀತವೆ ಕಾರಣವಾಯಿತು. ಯಜ್ಞ ಕಾಲದಲ್ಲಿ

ಧರಿಸುವ ಉಪವೀತವೆ ಯಜ್ಞೋಪವೀತವೆಂಬುದನ್ನು ಮರೆತು ಅದನ್ನು ಧರಿಸದೆ ಮಾಡಿದ ಯಜ್ಞ ಗುಣಹೀನವಾಯಿತು. ಅವರ ಪತನವಾಯಿತು.

**ಷಣ್ಣವತಿ ಅಂಗುಲ :** ವೇದಗಳು **'ಲಕ್ಷಂ ತು ವೇದಾಃ'** ಎಂಬಂತೆ ಮಂತ್ರ ಸಂಖ್ಯೆ ಲಕ್ಷ. ಕರ್ಮವನ್ನು ಹೇಳುವ ಮಂತ್ರ 80 ಸಾವಿರ, ಉಪಾಸನಾ ಮಂತ್ರ 16 ಸಾವಿರ, ನಾಲ್ಕು ಸಾವಿರ ಜ್ಞಾನ ಕಾಂಡಗಳು. ಈ ವಿಭಾಗವಾದರೂ **'ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋಃ ನ ವಾಚಕಾಃ'** ಎಂದಿಟ್ಟುಕೊಂಡಾಗ. ಈ ಮೂರೆಳೆಯಲ್ಲಿ ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥರಿಗೆ ಮಾತ್ರ ಉಪವೆಂದು ತಿಳಿಸುತ್ತಾ ಗ್ರಂಥಿಯು ಬ್ರಹ್ಮಾದಿಗಳನ್ನು ಒಂಭತ್ತು ಎಳೆ-ನವವಿಧ ಭಕ್ತಿಯನ್ನು ಸೂಚಿಸುತ್ತದೆ.

***ದೇವತೆಗಳನ್ನು ಆವಾಹಿಸುವುದು :***

ಓಂಕಾರ, ಅಗ್ನಿ, ನಾಗಗಳು, ಸೋಮ, ಪಿತೃಗಳು, ಬ್ರಹ್ಮಾ, ವಾಯು, ಸೂರ್ಯ, ಸರ್ವದೇವತೆಗಳನ್ನು ಆವಾಹಿಸುವುದು. **ಜನಿಂ ವಾರಯತೀತಿ ಜನಿವಾರಃ** ಎಂಬುದು ನಾಮಾಂತರ ಯಜ್ಞೋಪವೀತವಿಲ್ಲದೇ ಒಂದು ದಿನವಿದ್ದರೆ ಶೂದ್ರನು.

**ವಿನಾ ಯಜ್ಞೋಪವೀತೇನ ದಿನಮೇಕಮಪಿ ದ್ವಿಜಃ ।**

**ಸ್ಥಿತಃ ಶೂದ್ರತ್ವಮಾಪ್ನೋತಿ ।**

**ವಿಧಿವಿಧಾನ :** ಯಜ್ಞೋಪವೀತವನ್ನು ಹತ್ತು ಗಾಯತ್ರಿಯಿಂದ ಅಭಿಮಂತ್ರಿಸಿದ ನೀರಿನಿಂದ ಪ್ರೋಕ್ಷಿಸುವುದು. ಗ್ರಂಥಿಯಲ್ಲಿ **ಇದಂ ವಿಷ್ಣುಃ, ಬ್ರಹ್ಮಜಜ್ಞಾನಂ, ತ್ರ್ಯಂಬಕಂ** ಮಂತ್ರ ಆವಾಹಿಸಿ, ನವತಂತು ದೇವತೆಗಳನ್ನು ಆವಾಹಿಸಿ, **'ಉದುತ್ಯಂ ಜಾತವೇದಸಂ'** ಎಂಬ ಮಂತ್ರದಿಂದ ಸೂರ್ಯನಿಗೆ ತೋರಿಸಿ, ಮೊದಲು ಬಲಗೈ ಮೇಲೆತ್ತಿ, ಯಜ್ಞೋಪವೀತ ಬದಲಿಸಬೇಕು. ಆಶೌಚಾದಿಗಳಲ್ಲಿಯೂ ಜನಿವಾರ ತ್ಯಜಿಸಿ ನೂತನವಾದುದ್ದನ್ನು ಧರಿಸಬೇಕು.

ಒಂದು ಕ್ಷಣ ಜನಿವಾರವಿಲ್ಲದೆ ಇದ್ದವನು ನೂರು ಗಾಯತ್ರಿ ಮಾಡಬೇಕು. ಜನಿವಾರವಿಲ್ಲದೆ ಮಾಡಿದ ಭೋಜನಕ್ಕೆ ಎಂಟು ಸಾವಿರ ಗಾಯತ್ರಿ.

ಆಯಷ್ಕಾಮನು ಮೂರು ಜನಿವಾರಕ್ಕಿಂತ ಹೆಚ್ಚು ಧರಿಸಬಹುದು.

ಜನಿವಾರವು ಅತೀ ಉದ್ದವೂ ಅತೀ ಚಿಕ್ಕದೂ ಇರಬಾರದು. ನಾಭಿಯ ಮೇಲಿದ್ದರೆ, ಅಯುಷ್ಯ, ನಾಭಿಯ ಕೆಳಗೆ ಬಂದರೆ ಅನಾರೋಗ್ಯ. ನಾಭಿಯ

ಸಮವಾಗಿರಬೇಕು. ಯಜ್ಞೋಪವೀತವು ಭುಜದಿಂದ ಹೃದಯ ನಾಭಿಗೆ ಸ್ಪರ್ಶಿಸುತ್ತಿರಬೇಕು. ಇದಕ್ಕಿಂತ ಕಡಮೆಯಾಗಲೀ, ಉದ್ದವಾಗಲಿ ಇರಬಾರದು.

- ***ಸ್ತ್ರೀಯರಿಗೆ ಉಪನಯನ :***

ಸ್ತ್ರೀಯರಲ್ಲಿ ಬ್ರಹ್ಮವಾದಿನಿಯರು ಹಾಗೂ ಸದ್ಯೋವಧು ಎರಡು ಪ್ರಕಾರಗಳಿರುವರು. ಇವರಲ್ಲಿ ಬ್ರಹ್ಮವಾದಿನಿಯರಿಗೆ ಉಪನಯನವಿತ್ತು. ಸದ್ಯೋವಧುಗಳಿಗೆ ವಿವಾಹ ಕಾಲದಲ್ಲಿ ಉಪನಯನ ಮಾಡಲಾಗುತ್ತಿತ್ತು ಎಂದು ಸ್ಮೃತಿತತ್ತ್ವ ತಿಳಿಸಿದೆ.

ಹಾರೀತರು – **'ಪ್ರಾಗ್ರಂಜಸಃ ಸಮಾವರ್ತನಮ್'** ಎಂದಿದ್ದು ಮಾಸಿಕ ಧರ್ಮ ಪ್ರಾರಂಭವಾಗುವ ಮೊದಲೇ ಸಮಾನವರ್ತನವಾಗಬೇಕು ಎಂದಿರುವರು. ಹಾರೀತರು ಹೇಳಿದಂತೆ ಬ್ರಹ್ಮವಾದಿನಿಯರಿಗೆ ಉಪನಯನ ಎಂಟನೇ ವರ್ಷದಲ್ಲಿ ನಡೆಯಬೇಕು. ಇವಳ ಅಧ್ಯಯನಾದಿಗಳು ರಜಸ್ವಲೆಯಾಗುವ ಮೊದಲೇ ಮುಗಿದಿರಬೇಕು. ಆರ್ಯ ಸಮಾಜದವರು ಈಗಲೂ ಉಪನಯನ ಮಾಡುವರು. ಆದರೆ ರಜಸ್ವಲೆಯಾದಾಗ ಜನಿವಾರ ಎಲ್ಲಿ ತೆಗೆದಿಡುವುದು? ರಜಸ್ವಲಾ ಮೈಲಿಗೆ ದೊಡ್ಡದಾದದ್ದು. ಅದಕ್ಕಾಗಿ ಸ್ತ್ರೀಯರಿಗೆ ಉಪನಯನವೆಂದರೆ ಅವಳನ್ನು ಯೋಗ್ಯ ವರನಿಗೆ ಪಾಣಿಗ್ರಹಣ ಮಾಡಿಸುವುದು.

**ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ ।**

ವಟುವ ಯಜ್ಞೋಪವಿತ ಬ್ರಹ್ಮಸೂತ್ರ ಧರಿಸುವನು. ಸ್ತ್ರೀಯು ಮಂಗಳಸೂತ್ರ, ಗುರುಕುಲ ವಾಸ ವಟುವಿಗಾದರೆ ಪತಿ ಕುಲದಲ್ಲಿ ಸ್ತ್ರೀಗೆ ವಾಸವು, ಅಗ್ನಿಕಾರ್ಯ ವಟುವು ಮಾಡುವುದಾದರೆ ಗಂಡನಿಗೆ ಅಗ್ನಿಯಲ್ಲಿ ಪಾಕ ತಯಾರಿಸಿ ಹಾಕುವುದು. [ಮನು 2/67]

**ಸಮಾವರ್ತನ :** ವಿದ್ಯಾಭ್ಯಾಸ ಮುಗಿದ ನಂತರ ವ್ರತಾಂತ ಸಂಸ್ಕಾರವೆನಿಸಿದ ಸಮಾವರ್ತನ ಮಾಡಿಕೊಳ್ಳಬೇಕು. ಗುರುವಿಗಾಗಿ ಗುರುದಕ್ಷಿಣೆ ನೀಡಬೇಕು. ಕ್ಷೇತ್ರ, ಸುವರ್ಣ, ಗೋವು, ಧಾನ್ಯ, ವಸ್ತ್ರ ಮೊದಲಾದ ಗುರುಗಳು ಇಚ್ಛಿಸಿದ ವಸ್ತುಗಳನ್ನು ನೀಡಿ ಅವರನುಮತಿಯಿಂದ ಸ್ನಾನ ಮಾಡುವುದು ಸಮಾವರ್ತನ. ಸಮಾವರ್ತನವಾದ ಮೇಲೆ ಗುರ್ವಾಜ್ಞೆಯಂತೆ ವಿವಾಹಕ್ಕೆ ಅರ್ಹತೆ ಹೊಂದುವನು. ಸಮವರ್ತನವನ್ನು ವಿವಾಹ ಸಮಯದಲ್ಲಿಯೇ ಮುಗಿಸುವುದು ಈಗಿರುವುದು.

ಉಪನಯನದಲ್ಲಿ ಹೇಳಿದ ಕಾಲವೆ ಇದಕ್ಕೂ ಎಂದು ಬಹುಮತದವರ ಅಭಿಪ್ರಾಯ.

ಮಣಿಕುಂಡಲ, ಎರಡು ವಸ್ತ್ರ, ಛತ್ರ ಪಾದುಕಾ, ದಂಡ ಮಾಲೆ, ಅಂಜನ ರುಮಾಲು ಇವುಗಳನ್ನು ತನಗಾಗಿ ಗುರುಗಳಿಗಾಗಿ ಸಂಗ್ರಹಿಸಬೇಕು.

**ಮಮ ಗೃಹಸ್ಥಾಶ್ರಮ ಯೋಗ್ಯತಾ ಸಿದ್ಧದ್ವಾರಾ ಮಾಂಗಲ್ಯ ಮೂರ್ತಿ ಶ್ರೀ ಲಕ್ಷ್ಮೀನಾರಾಯಣ ಪ್ರೇರಣಯಾ ಪ್ರೀತ್ಯರ್ಥಂ ವ್ರತ ಚತುಷ್ಟಯ ಲೋಪದೋಷ ನಿವೃತ್ಯರ್ಥಂ ಪ್ರಾಯಶ್ಚಿತ್ತ ಹೋಮ ಪೂರ್ವಕ ಸಮಾವರ್ತನಾಖ್ಯಂ ಕರ್ಮಕರಿಷ್ಯೇ ಸೂರ್ಯನಾಮಕ ಅಗ್ನಿ ಸ್ಥಾಪನೆ.** ಗಾಯತ್ರಿಯಿಂದ 28 ಬಾರಿ ಆಜ್ಯಾಹುತಿ, ತ್ರಿರಗ್ನಿಂ ಪವಮಾನ, ಪ್ರಜಾಪತಿ, ವಿಶ್ವದೇವತೆಗಳಿಗಾಗಿ ಹತ್ತು ಸಮಿತ್ತು. ಹೋಮ ಮಾಡಿ ಚೌಲದಂತೆ ಉಳಿದದ್ದು.

- ***ವಿವಾಹ :***

ವಿವಾಹವು **ವಹ್ ಪ್ರಾಪಣೇ ಧಾತು ಘಞ್** ಪ್ರತ್ಯಯ. ಭಾವಾರ್ಥ ಧಾತ್ವರ್ಥವು ವಹನ ಅಥವಾ ವಾಹಃ ಎಂದಾಗುತ್ತದೆ. **ವಿಶಿಷ್ಟಃ ವಾಹಃ ವಿವಾಹಃ** ಕನ್ಯೆಯನ್ನು ಒಂದು ವಿಶಿಷ್ಟ ರೀತಿ ಒಯ್ಯುವುದು ಎಂದರ್ಥ ಬರುತ್ತದೆ. ಬ್ರಾಹ್ಮಾದಿ ಎಂಟು ವಿವಾಹಗಳಲ್ಲಿ ಯಾವುದಾದರೂ ಕ್ರಮದಲ್ಲಿ ಕನ್ಯೆಯನ್ನು ವರನು ತನ್ನ ಮನೆಗೆ ಕರೆದೊಯ್ಯುವುದು. ಯಾವುದೇ ವಿಧಿಯಲ್ಲಿ ವಿವಾಹವಾದರೂ ಹೋಮ ಸಪ್ತಪದಿಗಳು ಅವಶ್ಯ. ಕೇವಲ ಕನ್ಯಾ ವರರು ಕೂಡಿದರೆ, ಅದು ವಿವಾಹವೆನಿಸದು. ಕಾಮಭೋಗಕ್ಕಾಗಿ ನಾಯಿಗಳು ಸೇರಿದಂತೆ. ಇವರನ್ನು ಶಾಸ್ತ್ರವು ಸತಿ-ಪತಿ ಎನ್ನುವುದಿಲ್ಲ.

ತೀರ್ಥ ಜಲವನ್ನು ಧಾರೆಯೆರೆದು ಕನ್ಯಾದಾನ ಮಾಡಿದ ಕೂಡಲೇ ವರನ ಪತ್ನಿಯಾಗಲಾರಳು. ಪಾಣಿಗ್ರಹಣ ಸಂಸ್ಕಾರಾನಂತರ ಸಪ್ತಪದಿಯಾದ ಮೇಲೆಯೆ ಪತ್ನಿತ್ವ

**ಪಾಣಿಗ್ರಹಣ ಸಂಸ್ಕಾರಾತ್ ಪತಿತ್ವಂ ಸಪ್ತಮೇ ಪದೇ ।**

ವಿವಾಹವೆಂದರೆ ತಂದೆಯ ಗೋತ್ರದಿಂದ ಪತಿಯ ಗೋತ್ರಕ್ಕೆ ಒಯ್ದು ಸೇರಿಸುವುದು ಎಂದೂ ಇದೆಯಾಗಿ, ಇದು ಸಿದ್ಧಿಸುವುದು ಸಪ್ತಪದಿಯಿಂದಲೇ.

**ಸ್ವಗೋತ್ರಾತ್ ಭ್ರಶ್ಯತೇ ನಾರೀ ವಿವಾಹಾತ್ ಸಪ್ತಮೇ ಪದೇ ।**

**ಪರಿಣಯ : ಪರಿತಃ ನಯನಂ ಪರಿಣಯನಮ್ ।** ಅಗ್ನಿಯ ಸುತ್ತಲೂ, ವರನು ವಧುವಿನ ಕೈಹಿಡಿದು ಪ್ರದಕ್ಷಿಣೆ ಬರುವುದು.

**ಪರಿಣೇಯ ಆಶ್ಮಾನ ಮಾರೋಹಯತಿ ।**

ಪತಿಯು ಪತ್ನಿಯ ಬಲಗೈ ಹಿಡಿದು ಅಗ್ನಿಯನ್ನು ಪ್ರದಕ್ಷಿಣೆ ಬರಿಸಿ ಕಷ್ಟಕಾರ್ಪಣ್ಯಗಳಿಗೆ ಹೊಂದುವ ಶಕ್ತಿಗಾಗಿ ಕಲ್ಲಿನ ಮೇಲೇರಿಸುವನು.

**ಉದ್ವಾಹ :** ಯಾವ ಕರ್ಮದಲ್ಲಿ ವರನು ಕನ್ಯೆಯನ್ನು ಮೇಲೆತ್ತಿ ಒಯ್ಯುತ್ತಾನೆಯೋ ಆ ಕರ್ಮವೆ ಉದ್ವಾಹ. ಪಿತೃಕುಲ ನೀಚಕುಲವಾಗಿದ್ದರೂ ಸಂಸ್ಕಾರ ರಹಿತರಾಗಿದ್ದರೂ ಅಲ್ಲಿರುವ ಸುಗುಣಮಣಿ ಸ್ತ್ರೀಯನ್ನು ಕರೆತಂದು ಉತ್ಕೃಷ್ಟ ತನ್ನ ಕುಲಕ್ಕೆ ಸೇರಿಸುವುದು.

**ವಿವಾಹವೇ ಉಪನಯನ :** ಸ್ತ್ರೀಯರಿಗೆ ಉಪನಯನವೆಂದರೆ ವೈವಾಹಿಕ ವಿಧಿಯೇ. ವಿವಾಹದ ಮೊದಲು ಯಜ್ಞಯಾಗಾದಿಗಳಲ್ಲಿ ಅರ್ಹತೆ ಹೊಂದಿರದ ಕನ್ಯೆಯನ್ನು ಉತ್ತಮವಾದ ಧರ್ಮಪತ್ನಿತ್ವ ಸ್ಥಾನಕ್ಕೆ ಒಯ್ಯುವುದು. ಇದು ಉದ್ವಾಹ ಶಬ್ದಾರ್ಥ.

ವರನೂ ಸಹ ಯಜ್ಞಾದಿಗಳಲ್ಲಿ ಅರ್ಹತೆ ಇರುವುದಿಲ್ಲ.

**ಅಯಜ್ಞೋ ವಾ ಏಷಃ ಯೋಽಪತ್ನಿಕಃ ।**

ಹೀಗಾಗಿ ವಿವಾಹದಿಂದಾಗಿ ಯಜ್ಞಾದಿಗಳಲ್ಲಿ ಅಧಿಕಾರವೆಂಬ ಉನ್ನತ ಸ್ಥಾನವಾಗುವುದರಿಂದಲೂ ಉದ್ವಾಹ.

**ಯತ್ ಕರ್ಮ ಕನ್ಯಾವರೌ ಯಜ್ಞಾದೀನ್ ಕರ್ತುಂ ಅನರ್ಹದಶಾತ್ ಉದ್ಧೃತ್ಯ ಅರ್ಹದೆಶಾಂ ವಹತಿ, ತತ್ ಕರ್ಮಉದ್ವಾಹಮ್ ॥**

*–ಸಂಸ್ಕಾರ ರತ್ನ*

**'ಉದ್ವಹೇತ ದ್ವಿಜೋಭಾರ್ಯಾಂ'** ಇತ್ಯಾದಿ ಉದ್ವಾಹ ಶಬ್ದವನ್ನೇ ಸ್ಮೃತಿಕಾರರು ಹೆಚ್ಚು ಬಳಸಿರುತ್ತಾರೆ.

ಕನ್ಯಾ ವರರಿಬ್ಬರೂ ದೇವ ಋಣ ತೀರಿಸಲು ಬೇಕಾದ ಯಜ್ಞಯಾಗಾದಿ ಅಧಿಕಾರವನ್ನೂ, ಪಿತೃ ಋಣವನ್ನು ತೀರಿಸಲು ಸತ್ಸಂತಾನ ಪಡೆಯುವ ಅಧಿಕಾರ ನೀಡುವುದೇ ಉದ್ವಾಹ.

- **ವಿವಾಹ ಎಂಟು ವಿಧ :**

**ಬುಧಸ್ಮೃತಿಯಲ್ಲಿ –**

**ಬ್ರಾಹ್ಮದೇವಾರ್ಷ ಪ್ರಾಜಾಪತ್ಯ ಗಂಧರ್ವಾಸುರ ಪೈಶಾಚ ರಾಕ್ಷಸಾಃ ।** ಹೇಳಿದೆ.

ವಸಿಷ್ಠರು ಪೈಶಾಚ ಅಸುರ ಬ್ರಾಹ್ಮಣರಿಗೆ ಯೋಗ್ಯವಲ್ಲವೆಂದು **ಷಡ್ವಿವಾಹಾಃ** ಎಂದಿದ್ದಾರೆ.

**ಬ್ರಾಹ್ಮ ದೈವ ಆರ್ಷ ಗಾಂಧರ್ವ ಕ್ಷಾತ್ರ ಮಾನುಷ ।**

ಗೌತಮರು ಈ ಆರರಲ್ಲಿಯೂ ಮೊದಲ ನಾಲ್ಕು ವಿವಾಹಗಳಿಗೆ ಧರ್ಮಾನುಕೂಲವಾಗಿವೆ ಎಂದಿದ್ದಾರೆ. [ಗೌ–4/4]

ನಾರದ ಮನುಸ್ಮೃತಿ [12/44] – ಮೊದಲ ನಾಲ್ಕು ಧರ್ಮ ವಿವಾಹವಾದರೆ, ಗಾಂಧರ್ವ ಸಾಧಾರಣ, ಉಳಿದ ಮೂರು ಅಧಮ ವಿವಾಹಗಳು ಎಂದಿದೆ.

ಮನುವು [3/39–43]ರಲ್ಲಿ – ಮೊದಲ ನಾಲ್ಕು ವಿವಾಹಗಳು ಬ್ರಹ್ಮ ತೇಜಸ್ಸುಳ್ಳ ಸಜ್ಜನನು ಪುತ್ರನಾಗುವನು. ಇವನು ಯಶೋವಂತನೂ, ಪವಿತ್ರಾತ್ಮನೂ, ಶತಾಯುವು ಆಗಿರುತ್ತಾನೆ. ಉಳಿದ ನಾಲ್ಕರಲ್ಲಿ ಹುಟ್ಟುವವ ಅಧರ್ಮವಾದಿಯೂ ನಾಸ್ತಿಕನಾಗಿ ನಿಂದಿತ ಕರ್ಮ ಮಾಡುವವನು ಹುಟ್ಟುವನು ಎಂದಿದ್ದಾರೆ.

**ಬ್ರಾಹ್ಮ ವಿಧಿ :** ಕನ್ಯೆಯ ತಂದೆಯು ವೇದಾಧ್ಯಯನಾದಿ ಅಲಂಕೃತ ವರನನ್ನು ತಾನಾಗಿ ಕರೆದು ಗೌರವಿಸಿ ಸಾಲಂಕೃತ ಕನ್ಯೆಯನ್ನು ನೀಡುವುದೇ ಬ್ರಾಹ್ಮ.

**ಶ್ರುತಶೀಲವತೇ ಆಹೂಯ ದಾನಂ ಕನ್ಯಾಯಾಃ ಬ್ರಾಹ್ಮೋ ವಿಧಿಃ ।**

ಬ್ರಹ್ಮದೇವರಿಂದ ಕಂಡ ಈ ವಿವಾಹದಿಂದ ಹುಟ್ಟಿದ ಸತ್ಪುತ್ರನು ಇಪ್ಪತ್ತೊಂದು ಕುಲ ಉದ್ಧರಿಸುವನು.

**ತಜ್ಞಃ ಪುನಾತ್ಯುಭಯತಃ ಪುರುಷಾನೇಕ ವಿಂಶತಿಮ್ ।**

–*ಯಾಜ್ಞ 1/58*

ಸ್ವೇಚ್ಛೆಯಿಂದ ಜಲಧಾರಾ ಪೂರ್ವಕ ಕನ್ಯಾದಾನವು ಬ್ರಾಹ್ಮವೆಂದು. – *ವಸಿಷ್ಠರು 1/30*

**ದೈವ ವಿವಾಹ :** ದೇವತಾ ಸಂಬಂಧಿ ಕಾರ್ಯಗಳಿಗಾಗಿ ಕನ್ಯೆಯನ್ನು ಋತ್ವಿಕ್‌ನಿಗೆ ದಾನ ನೀಡುವುದು.

ದಾಲ್ಭ್ಯನ ಮಗಳಾದ ರಥವೀತಿಯನ್ನು ಶ್ಯಾವಾಶ್ವನಿಗೆ ನೀಡಿದ್ದು ದೈವ.

ಈ ವಿವಾಹದಲ್ಲಿ ಹುಟ್ಟಿದ ಪುತ್ರನು ತನ್ನ ಹಿಂದಿನ ಏಳು ತಲೆಮಾರು, ಮುಂದೆ ಹುಟ್ಟುವ ಆರು ತಲೆ ಹಾಗೂ ತನ್ನನ್ನೂ ಸೇರಿ ಹದಿನಾಲ್ಕು ಕುಲ ಉದ್ಧರಿಸುವನು.

**ಚತುರ್ದಶನ ಪ್ರತಮಜಃ ।**

ಹದಿನಾಲ್ಕು ವಂಶದವರ ಪಾಪ ಪರಿಹರಿಸುವನೆಂದರ್ಥ. ದೈವ ಪದ್ಧತಿ ಈಗ ಕಾಣಸಿಗದು.

**ದೈವೋಢಜಃ ಸುತಶ್ಚೈವ ಸಪ್ತಸಪ್ತ ಪರಾವರಾನ್ ।**

**ಪುನಾತಿ**

**ಆರ್ಷವಿವಾಹ :** ವರನ ಕಡೆಯಿಂದ ಯಜ್ಞಾದಿ ಕಾರ್ಯಕ್ಕಾಗಿ ಎರಡು ಗೋವನ್ನು ಪಡೆದು ಕನ್ಯೆಯನ್ನು ಕೊಡುವುದು. ವರನು ನೀಡುವ ಈ ಗೋಮಿಥುನ ಯಜ್ಞಾರ್ಥಕ್ಕಾಗಿ ಕನ್ಯಾ ವಿಕ್ರಯಕ್ಕಾಗಿ ಅಲ್ಲ. ವೀರಮಿತ್ರೋದಯ ಈ ಸಂಬಂಧ ಧರ್ಮನಿಮಿತ್ತವಾದದ್ದೆಂದು ಹೇಳಿದೆ.

**ಧರ್ಮನಿಮಿತ್ತೊ ಹ್ಯಸೌ ಸಂಬಂಧಃ ನ ಲೋಭ ನಿಮಿತ್ತಿಕ ।**

ಈ ವಿವಾಹದಲ್ಲಿ ಜನಿಸುವ ಪುತ್ರನು/ಪುತ್ರಿಯು ಮೂರು ಹಿಂದಿನ ಮೂರು ಮುಂದಿನ ತಲೆಮಾರುಗಳನ್ನುದ್ಧರಿಸುವನು.

**ಆರ್ಷೋಢಜಸ್ಸುತಃ ತ್ರೀನ್ ತ್ರೀನ್ ।**

**ಪ್ರಾಜಾಪತ್ಯ :** ನೀವಿಬ್ಬರೂ ನಿಮ್ಮ ಕರ್ತವ್ಯವನ್ನು ಒಂದುಗೂಡಿಯೇ ಮಾಡಿರಿ ಎಂದು ಆದೇಶಿಸಿ ಕನ್ಯಾದಾನ ಮಾಡಿಕೊಡುವ ವಿಧಾನವಿದು.

**ಸಹ ಧರ್ಮಂ ಚರತ ಇತಿ ಪ್ರಾಜಾಪತ್ಯಃ ।**

ಪ್ರಜೆಗಳಿಗೆ ಪತಿಯಾದ ಬ್ರಹ್ಮದೇವನ ಉದ್ದೇಶವನ್ನು ಸತ್ಪ್ರಜೆಯನ್ನು ಪಡೆಯುವುದೇ ಪ್ರಾಪಾಪತ್ಯ ಉದ್ದೇಶ. ಇಂದಿನ ಕಾಲದಲ್ಲಿ ಇದೇ ಹೆಚ್ಚು ಚಾಲ್ತಿಯಲ್ಲಿದೆ.

ಇದರಲ್ಲಿ ವರನೇ ಕನ್ಯೆಯನ್ನು ಯಾಚಿಸುವನು. ಕನ್ಯಾಪಿತೃವಾದರೂ **'ಧರ್ಮೇಚಾರ್ಥೇ ಚ ಕಾಮೇ ಚ ನಾತಿಚರೇದಿಮಾಂ'** ಎಂದಾಗ ನಾತಿಚರಾಮಿ ಎನ್ನುವನು.

ಈ ವಿವಾಹದಲ್ಲಿ ಜನಿಸಿದ ಪುತ್ರ ಹನ್ನೆರಡು ಕುಲ ಉದ್ಧರಿಸುವನು.

**ಕಾಯೋಢಜಃ ಸುತಃ ಷಟ್‌ಷಟ್ ।**

- **ಗಾಂಧರ್ವ :**

ಕನ್ಯೆ ಹಾಗೂ ಪುರುಷನು ಪರಸ್ಪರ ಒಪ್ಪಂದದಂತೆ ಒಂದು ಗೂಡುವುದು.

ಗೌತಮರು – ತನ್ನ ಪತಿಯಾಗುವವನನ್ನು ತಾನೇ ಅರಸಿಕೊಳ್ಳುವುದು ಎಂದಿದ್ದಾರೆ.

ಮನುವಿನ ಪ್ರಕಾರ **"ಮೈಥುನ್ಯಃ ಕಾಮಸಂಭವಃ"** ಎಂಬಂತೆ ತಂದೆ ತಾಯಿಂದಿರು ವಿವಾಹ ನಿಶ್ಚಯಿಸುವುದಿಲ್ಲ. ವಧುವರರೇ ಚಾಪಲ್ಯಕ್ಕೊಳಗಾಗಿ ವಿವಾಹವಾಗುವುದು. ಈ ಕಾಲದಲ್ಲಿ ಈ ರೀತಿಯೇ ನಡೆಯುತ್ತಿದ್ದು ಗಂಧರ್ವ ವಿವಾಹವೆನ್ನಲಾಗದು.

ಈ ಕಾಲದಲ್ಲಿ ಶಾಲಾ ಕಾಲೇಜುಗಳಲ್ಲಿ ಸಹಶಿಕ್ಷಣದಿಂದಾಗಿ ಮುಂದೆ ಸಹೋದ್ಯೋಗದಿಂದಾಗಿ ಇದು ಅಧಿಕವಾಗಿ ಕಂಡುಬರುತ್ತಿದೆ.

ಇದು ತಪ್ಪಲ್ಲವಾದರೂ ಸಜಾತೀಯವನನ್ನೆ ಅರಸಬೇಕು. ಕುಲಹೀನನೂ ಬಾಹ್ಯನೂ ಆದವನನ್ನಲ್ಲ.

ತಂದೆ ತಾಯಿಯರು ಪ್ರೌಢೆಯಾಗುವ ಮೊದಲು ಅವಳಿಗೆ ವಿವಾಹ ಮಾಡದಿದ್ದರೆ ಮೂರು ವರ್ಷ ಕಾದು ನೋಡಿ ಮುಂದೆ ತಾನೇ ಹುಡುಕಿಕೊಳ್ಳಬಹುದು.

ಸಾವಿತ್ರಿಯು ತನಗೆ ಯೋಗ್ಯನೂ ಸವರ್ಣಿಯನೂ ಸಜಾತೀಯನೂ ಆದ ಸತ್ಯವಾನನ್ನೆ ಅರಿಸಿದಳು.

ಇತ್ತೀಚಿನ ವರದಿಯಂತೆ ಸವರ್ಣದಲ್ಲಿ ವಿವಾಹವಾಗುವ ದಂಪತಿಗಿಂತಲೂ ಅಸವರ್ಣೀಯ ವಿವಾಹವಾದ ದಂಪತಿಗಳು ಬಹುದುಃಖಿತರಾಗಿರುವರು.

ಮತ್ತೆ ಕೆಲವರಂತು ಯಾರಿಗೂ ಹೇಳದೆ ವಿವಾಹ ಮಾಡಿಕೊಂಡು ತಾನೂ ಅನುಭವಿಸಲಾರದೆ ಮತ್ತೊಬ್ಬರಿಗೆ ಹೇಳಲಾಗದೆ ಒಳಗೊಳಗೆ ಮಹಾದುಃಖ ಅನುಭವಿಸುತಿರುವರು. ತಂದೆ ತಾಯಿಗಳೇ ನೋಡಿ ಮಾಡಿದ ವಿವಾಹ ಅತ್ಯಂತ ಸುಖವೀಯುತ್ತದೆ.

ಇಂದ್ರಿಯ ಚಾಪಲ್ಯದಿಂದ ಕಾಮದಿಂದಾದ ಪ್ರೇಮವು ಕಡೆಗೆ ಹೊಂದಿಕೊಳ್ಳಲಾರದೆ ಶತ್ರುತ್ವದಲ್ಲಿ ಪರ್ಯವಸಾನವಾಗುತ್ತದೆ. ಕನ್ಯೆಯರೇ ಜೋಪಾನವಾಗಿರಿ.

ನಮ್ಮ ಪೂರ್ವಜರು ಇದನ್ನೆಲ್ಲ ಅರಿತು ಪ್ರೌಢ ವಿವಾಹವಾದರೇ ಹೀಗೆಲ್ಲ ಅನರ್ಥಗಳು. ಅದಕ್ಕಾಗಿ ಅಪ್ರೌಢ ವಿವಾಹಕ್ಕೆ ಒತ್ತು ಕೊಟ್ಟರು. ಈಗಿನ ಸ್ಥಿತಿಯಂತೆ ಹದಿನೆಂಟಕ್ಕಾದರೂ ವಿವಾಹ ಮಾಡಿರಿ.

ಸ್ತ್ರೀಯರು ಕಾಮಾರ್ತರಾಗಿ ಹೀನಜಾತಿಯವರನ್ನು ವಿವಾಹವಾದರೆ ಅವಳಲ್ಲಿ ಹುಟ್ಟುವ ಮಗ ಪಿಂಡ ಪ್ರದಾನ ಮಾಡಿದರೆ ಪಿತೃಗಳಿಗೆ ತಲುಪುವುದಿಲ್ಲ. ಪಿತೃಶಾಪ ನಿಶ್ಚಿತ. ಇದನ್ನೇ ಗೀತೆ.

**ಸ್ತ್ರೀಷು ದುಷ್ಟಾಸು ಜಾಯತೇ ವರ್ಣಸಂಕರ –**

**'ಲುಪ್ತ ಪಿಂಡೋದಕ ಕ್ರಿಯಾಃ'** ಎಂದಿದೆ

**ಕನ್ಯೆಯ ಲಕ್ಷಣ :** ಅನನ್ಯ ಪೂರ್ವಿಕೆಯಾದ ಇದುವರೆಗೂ ಯಾರಿಗೂ ಮಾತು ಹಾಗೂ ಕ್ರಮದಿಂದ ಕೊಡಲ್ಪಡದಿರುವ, ಸುಂದರಿಯೂ, ತಂದೆಯ ಕಡೆ ಏಳು ತಲೆಮಾರಿನ, ತಾಯಿಯ ಕಡೆ ಐದು ತಲೆಮಾರಿನ ಸಂಬಂಧವಿಲ್ಲದ, ಆರೋಗ್ಯದಿಂದ ಇರುವ, ವಯಸ್ಸಿನಲ್ಲಿ ತನಗಿಂತ ಚಿಕ್ಕವಳಾದ, ಅಣ್ಣ ತಮ್ಮಂದಿರು' ಇರುವ, ಸಮಾನ ಗೋತ್ರವಲ್ಲದ, ಪ್ರವರ ಒಂದಾಗದ ಕನ್ನಿಕೆಯು ವಿವಾಹಕ್ಕೆ ಯೋಗ್ಯಳು.

ಇವೆಲ್ಲ ಇದ್ದು ವರನಿಗೆ ಮನಸ್ಸು, ಕಣ್ಣೂ ಯಾವ ಕನ್ನಿಕೆಯಲ್ಲಿ ಲಗ್ನವಾಗಿದೆಯೋ ಅವಳನ್ನು ಲಗ್ನವಾಗಬೇಕು.

**ಯಸ್ಯಾಂ ಮನಶ್ಚಕ್ಷುಷೋಃ ನಿತರಾಂಬಂಧಃ ತಸ್ಯಾಂ ಋದ್ಧಿಃ ।**

**ಕನ್ಯೆ-ವರರ ಗೋತ್ರ ಬಿಡಬೇಕು :** ಕನ್ಯೆ-ವರರ ಪ್ರವರಗಳಲ್ಲಿ ಒಂದು ಋಷಿಯ ಹೆಸರು ಸಮಾನವಾಗಿದ್ದರೆ ಸಗೋತ್ರವು ಪಂಚಾರ್ಷೇಯ ಪ್ರವರಗಳಲ್ಲಿ ಮೂರು ಅಥವಾ ನಾಲ್ಕು ಸಮಾನವಾಗಿದ್ದರೆ ಸಗೋತ್ರ.

ಉದಾ.: ವಿಶ್ವಾಮಿತ್ರ ಅಘಮರ್ಷಣ ಅಷ್ಟಕ, ವಿಶ್ವಾಮಿತ್ರ ದೇವರಾತ ಔದಲಗಳಿಗೂ ವಿಶ್ವಾಮಿತ್ರ ಋಷಿ ಇರುವುದರಿಂದ ಸಗೋತ್ರ, ಹೀಗೆಯೆ ಕೌಶಿಕವೂ, ಅಜಗೋತ್ರವೂ ಅಷ್ಟಕ ಗೋತ್ರವೂ ಸಗೋತ್ರ, ವಿವಾಹ-ವಾಗುವುದಿಲ್ಲ. ಹಿರಣ್ಯರೇತಸವೂ ವಿಶ್ವಾಮಿತ್ರ ಘಟಿತವಾಗಿದ್ದು ವಿವಾಹವಿಲ್ಲ. ಆಂಗೀರಸ ಅಯಾಸ್ಯ ಭಾರದ್ವಾಜ ಶೈನ್ಯ ಗಾರ್ಗ್ಯ ಸೇರಿರುವ ಆತ್ರೇಯಗೋತ್ರ ಹಾಗೂ ಆಂಗೀರಸ ಅಯಾಸ್ಯ ಗೌತಮಕ್ಕೂ ಸಗೋತ್ರವಿರುತ್ತದೆ. ಹಾಗೆಯೇ ಅಂಗೀರಸ ಬಾರ್ಹಸ್ಪತ್ಯ ಭಾರದ್ವಾಜ ಶೈನ್ಯ ಗಾರ್ಗ್ಯ ಸೇರಿರುವ ಆತ್ರೇಯ ಗೋತ್ರ ಹಾಗೂ ಅಂಗೀರಸ ಅಯಾಸ್ಯ ಗೌತಮಕ್ಕೂ ಸಗೋತ್ರವಿರುತ್ತದೆ. ಹಾಗೆಯೇ ಆಂಗೀರಸ ಬಾರ್ಹಸ್ಪತ್ಯ ಭಾರದ್ವಾಜ ಗಾರ್ಗ್ಯ ಶೈನ್ಯಗಳಿರುವ ಗಾರ್ಗ್ಯ ಗೋತ್ರಕ್ಕೂ ವಿವಾಹವಿಲ್ಲ. ವಾಸಿಷ್ಠ ಕೌಂಡಿಣ್ಯಗಳಿಗೂ, ವಾಸಿಷ್ಠ ಕಾಶ್ಯಪರಿಗೂ ಆಂಗೀರಸ ಬಾರ್ಹಸ್ಪತ್ಯ ಭಾರದ್ವಾಜಗಳಿರುವ ಭಾರದ್ವಾಜ

ಗೋತ್ರಕ್ಕೂ, ಅಂಗೀರಸ ಅಂಬರೀಷ ಯೌವನಾಶ್ವವಿರುವ ಹರಿತ್ಸಗೋತ್ರಕ್ಕೂ ಸಗೋತ್ರತ್ವ. ಒಟ್ಟು ಭೃಗು ಗಣ ಅಂಗಿರ ಗಣಗಳನ್ನು ಬಿಟ್ಟು ಇತರ ಏಕಪ್ರವರ ಸಾಮ್ಯವಾದರೂ ವಿವಾಹ ನಿಷಿದ್ಧ. ತ್ರಿಪ್ರವರಗಳಲ್ಲಿ ಎರಡು ಪ್ರವರ ಸಾಮ್ಯವಿದ್ದರೂ ವಿವಾಹವಿಲ್ಲ. ಪಂಚ ಪ್ರವರಗಳಲ್ಲಿ ತ್ರಿಪ್ರವರ ಸಾಮ್ಯವಿದ್ದಲ್ಲಿ ವಿವಾಹ ನಿಷಿದ್ಧ.

**ದ್ವ್ಯಾರ್ಷೇಯ ಸನ್ನಿಪಾತೇ ತ್ರ್ಯಾರ್ಷೇ ಯಾಣಾಂ,**

**ತ್ರ್ಯಾರ್ಷೇಯ ಸನ್ನಿಪಾತೇ ಅವಿವಾಹಃ ಪಂಚಾರ್ಷೇಯಾಣಾಂ**

ಜಾಮದಗ್ನ್ಯ ಭೃಗುಗಣ, ಗೌತಮ–ಆಂಗಿರಸ, ಇವು ಸಗೋತ್ರಗಳೇ.

ವತ್ಸ ಗೋತ್ರ – ಬಿದ ಗೋತ್ರ – ಆರ್ಷ್ಟಿಷೇಣ ವಿವಾಹವಿಲ್ಲ.

ದ್ವಿಪ್ರವರ ಸಾಮ್ಯದಿಂದಾಗಿ ಗೌತಮ ಆಂಗೀರಸರಿಗೆ ವಿವಾಹವಿಲ್ಲ. ಹರಿತ–ಕುತ್ಸ ಪ್ರವರ ಸಾಮ್ಯದಿಂದಾಗಿ ವಿವಾಹವಿಲ್ಲ.

ವಿಶ್ವಾಮಿತ್ರ ಅತ್ರಿಗಳಲ್ಲಿ ವಿವಾಹವಿಲ್ಲ. ಕತಕರಿಗೆ ಭರದ್ವಾಜ, ವಿಶ್ವಾಮಿತ್ರರಿಂದ ವಿವಾಹವಿಲ್ಲ.

ಗೋತ್ರವು ತಿಳಿಯದೆ ಇರುವಾಗ ಕಾಶ್ಯಪಗೋತ್ರವೆಂದು ತಿಳಿಯುವುದು. ಗೊತ್ತಿದ್ದು ಸಗೋತ್ರ ವಿವಾಹವಾದರೆ ಅವರಲ್ಲಿ ಹುಟ್ಟಿದ ಮಕ್ಕಳು ಚಂಡಾಲರು.

**ಸಗೋತ್ರೋಢಾ ಸುತಾಶ್ಚೈವ ಚಾಂಡಾಲಾಃ** । –ಮನು

**ಅಣ್ಣ ತಮ್ಮಂದಿರು :** ಕನ್ಯೆಯನ್ನು ವಿವಾಹವಾಗುವಾಗ ಅಣ್ಣ ತಮ್ಮಂದಿರು ಅವಳಿಗೆ ಇರಬೇಕು.

ಆಕೂತಿಯನ್ನು ರುಚಿ ಪ್ರಜಾಪತಿಗೆ ಧಾರೆಯೆರೆದಾಗ ಪ್ರಿಯವ್ರತ–ಉತ್ತಾನಪಾದವೆಂಬ ಅಣ್ಣಂದಿದ್ದರು.

**ಆಕೂತಿಂ ರುಚಯೇ ಪ್ರಾದಾತ್ ಅಪಿ ಭ್ರಾತೃಮತೀಂ ನೃಪ** ।

ಈಗಿನ ಪದ್ಧತಿ ಒಂದೇ ಮಗು. ಸಮಾಜ ಒಪ್ಪಿದೆ. ಹಿಂದೆಯೂ ಹೆಣ್ಣ ಸಂತಾನವೇ ಇರುವ ತಂದೆಯು ವರನಿಗೆ ಕನ್ನಿಕೆಯನ್ನು ಕೊಡುವಾಗ,

ಇವಳಿಗೆ ಸೋದರರಿಲ್ಲ. ಆದರೂ ನಿನಗೆ ನೀಡುವೆನು. ಇವಳಲ್ಲಿ ಹುಟ್ಟುವ ಮಗ ನನಗೂ ಪುತ್ರನೆ. ನಿನ್ನ ಪತ್ನಿಗೆ ತಮ್ಮನೇ?

**ಅಭ್ರಾತೃಖಾಂ ಪ್ರದಾಸ್ಯಾಮಿ ತುಭ್ಯಂ ಕನ್ಯಾಮಲಂಕೃತಾಂ ।**
**ಅಸ್ಯಾಂ ಯೋ ಜಾಯತೇ ಪುತ್ರಃ ಸಮೇ ಪುತ್ರೋ ಭವೇದಿತಿ ॥**

ಚಿತ್ರಾಂಗದೆಯನ್ನು ಅರ್ಜುನನಿಗೆ ನೀಡುವಾಗ ಅವಳ ತಂದೆ ಇದೇ ನಿಯಮ ಹಾಕಿದ್ದನು. ಇದರ ಫಲವಾಗಿ ಬಭ್ರುವಾಹನ ತಂದೆಯ ಮನೆಯಲ್ಲಿ ಉಳಿದನು.

**ಅಸಪಿಂಡಾಂ :** ತಾಯಿಯ ತಲೆಮಾರಿನಲ್ಲಿ ಐದನೇ ತಲೆಯವರಿಗೂ ವಿವಾಹ–ವಾಗುವಂತಿಲ್ಲ. ಹೀಗಿದ್ದರೂ ತಾಯಿಯ ತಮ್ಮ ತನ್ನ ಸೋದರಮಾವನನ್ನೆ ಮದುವೆ ಮಾಡಿಕೊಡುವ ಪದ್ಧತಿ ಬಹಳ ಕಡೆಯಿದೆ.

ಅಕ್ಕತಂಗಿಯರ ಮಗಳ ವಿವಾಹ, ಸೋದರಮಾವನ ಮಗಳನ್ನು ಸೋದರತ್ತೆಯ ಪುತ್ರ ವಿವಾಹವಾಗುವುದು ಚಾಲ್ತಿಯಲ್ಲಿದೆ. ಗೋತ್ರವು ಬೇರೆ ಬೇರೆಯಾಗಿರುವುದರಿಂದ ವಿವಾಹ ನಡೆಯುತ್ತೆ ಎಂದು ಅವರ ಸಮಾಧಾನ.

ಕನ್ಯೆಯು ಆರೋಗ್ಯವಂತಳಾಗಿರಬೇಕು. ಬಂಧು ಲಕ್ಷಣ ಸಂಪನ್ನೆಯೂ ಶೀಲವಂತಳೂ ಆದ ಕನ್ಯೆ ವರಿಸಬೇಕು.

**ಬಂಧುಶೀಲ ಲಕ್ಷಣ ಸಂಪನ್ನಾಂ ಅರೋಗಾಮುಪಯಚ್ಛೇತ್ ।**

ಬಹಳ ಕುಳ್ಳಗಿರುವ, ಬಹು ಎತ್ತರವಿರುವ, ಬಹಳ ಸಣ್ಣಗಾಗಿರುವ, ಅತಿ ಸ್ಥೂಲವಿರುವ, ಮೀಸೆ ಗಡ್ಡಗಳಿರುವ, ಗಡಸು ಧ್ವನಿವುಳ್ಳ, ದುಂಡಾಗಿರುವ ನೇತ್ರವುಳ್ಳ, ಎದೆಯಲ್ಲಿ ಕೂದಲಿರುವ ತೊಡೆಯಲ್ಲಿ ರೋಮವುಳ್ಳ ಹುಬ್ಬು ಕೂಡಿಕೊಂಡಿರುವ, ಮುರಿದ ದಂತವುಳ್ಳ, ಕೆಂಪು ಕಣ್ಣುಗಳಿರುವ, ನಕ್ಷತ್ರ ನಾಮ, ವೃಕ್ಷ ನಾಮ, ನದಿ ನಾಮ, ಪಕ್ಷಿ ಸರ್ಪಗಳ ನಾಮವಿರುವ ಸ್ತ್ರೀಯನ್ನು ವಿವಾಹವಾಗಬಾರದು.

ಆದರೆ ಗಂಗಾ, ಕಾವೇರಮ್ಮ, ತುಂಗಮ್ಮ, ರೋಹಿಣೀ, ಸ್ವಾತೀ, ರೇವತೀ, ಇಂದ್ರಾಣೀ, ಶಚೀದೇವಿ, ಅಪರ್ಣಾ, ಮಾಧವೀ, ಮಲ್ಲಿಕಾ, ನಾಗಮ್ಮ, ನಾಗರತ್ನ, ಮುಂತಾದ ಹೆಸರುಗಳನ್ನಿಡುವುದು ಪ್ರಸಿದ್ಧವಿದೆ.

ಸರ್ಪಗಳ ಅನುಗ್ರಹಕ್ಕಾಗಿ ಆಯಾಯ ಹೆಸರು ಇಡುವುದಿದೆ. ಇಂತಹ ಹೆಸರುಳ್ಳ ಸ್ತ್ರೀಯನ್ನು ವಿವಾಹವಾಗುವ ಸಂದರ್ಭ ಬಂದಾಗ ಅತ್ತೆಯ ಮನೆಯ ಹೆಸರನ್ನಿಡುವುದು. ಇದಲ್ಲದೆ ತವರು ಮನೆಯಲ್ಲಿಟ್ಟ ಹೆಸರು ಕರೆಯಬಾರದು ಎಂದಿದೆ.

**ಜ್ಯೇಷ್ಠಾಪತ್ಯ ಕಲತ್ರ ಚ ಶ್ರೇಯಸ್ಕಾಮೋ ನ ಗೃಹ್ಣೀಯಾತ್ ।**

ಕನ್ಯೆಯನ್ನು ನೋಡಲು ಹೋದಾಗ ಹುಡುಗಿಯು ಮಲಗಿದ್ದರೆ, ಅಳುತ್ತಿದ್ದರೆ, ಮನೆಯ ಹೊರಗೆ ಹೋಗಿದ್ದರೆ ಇದು ಅಪಶಕುನವಾದ್ದರಿಂದ ಅವಳನ್ನು ವಿವಾಹವಾಗಬಾರದು.

**ಸುಪ್ತಾಂ ರುದಂತೀಂ ನಿಷ್ಕ್ರಾಂತಾಂ ಪರಿವರ್ಜಯೇತ್ ।**

ನಿಶ್ಚಿತವಾಗಿದ್ದ, ಕನ್ಯಾದಾನ ಮಾಡಿಕೊಟ್ಟ, ಸಪ್ತಪದಿಯಾಗಿರುವ, ಗರ್ಭ ಧರಿಸಿರುವ ಕನ್ಯೆಯರು 'ಪುನರ್ಭೂ' ಎನಿಸುವರು. ಇವರನ್ನು ವಿವಾಹವಾದರೆ ಮನೆಯನ್ನೆ ಸುಡುತ್ತಾರೆ.

**ಇತ್ಯೇತಾ ಕಾಶ್ಯಪೇನೋಕ್ತಾ ದಹಂತೀ ಕುಲಮಗ್ನಿವತ್ ।**

ಹೀಗೆಲ್ಲ ಇದ್ದರೂ ಪರರಿಂದ ಭೋಗಿಸಲ್ಪಡದಿದ್ದರೆ ಕನ್ಯೆಯ ಪರೀಕ್ಷೆ ಮಾಡಿ ಸ್ವೀಕರಿಸಬಹುದು.

- **ಕನ್ಯೆಯ ಪರೀಕ್ಷೆ** *[ಆಶ್ವ ಗೃ.ಸೂ. 2/5/4.5.6]* –

ಮಣ್ಣಿನ ಎಂಟು ಉಂಡೆಗಳಲ್ಲಿ ಕನ್ಯೆಯು ಯಾವುದನ್ನು ಎತ್ತುವಳೋ ಅದರಂತೆ ಫಲ ತಿಳಿಯಬಹುದು.

ಎರಡು ಫಸಲು ನೀಡುವ ಹೊಲದಿಂದ ತಂದ ಎರಡು ಮಣ್ಣಿನ ಉಂಡೆಗಳು. ಸಗಣಿಯಿಂದ ಎರಡು ಮುದ್ದೆ, ಯಜ್ಞಸ್ಥಳದಿಂದ ತಂದ ಭಸ್ಮದುಂಡೆಗಳು, ಸರ್ವದಾ ನೀರಿರುವ ಕಾಸಾರದಿಂದ ತಂದ ಮೃತ್ತಿಕೆಯನ್ನು, ಜೂಜು ಸ್ಥಾನದಲ್ಲಿದ್ದ ಮಣ್ಣು, ಚತುಷ್ಪಥದಿಂದ ತರಲ್ಪಟ್ಟ ಮಣ್ಣು, ಬಂಜರು ಭೂಮಿಯದು, ಸ್ಮಶಾನದ್ದು. ಹೀಗೆ ಎಂಟು ಪ್ರದೇಶದಿಂದ ತಂದ ಮಣ್ಣನ್ನು ಒಂದೆಡೆ ಪ್ರತ್ಯೇಕವಾಗಿಟ್ಟು ವಿವಾಹವಾಗಲಿಚ್ಛಿಸಿರುವ ಕನ್ಯೆಯನ್ನು ಅವುಗಳಲ್ಲಿ ಒಂದನ್ನು ಮುಟ್ಟಲು ಹೇಳಬೇಕು.

1) ಸಸ್ಯ ಕ್ಷೇತ್ರದ ಮಣ್ಣುಂಡೆ – ಅನ್ನ, ಮಕ್ಕಳನ್ನು ಪಡೆಯುವವಳು
2) ಗೋವಿನ ಸಗಣಿ ವುಂಡೆಯನ್ನು – ಪಶುಸಮೃದ್ಧಿವುಳ್ಳವಳು
3) ಯಜ್ಞಭೂಮಿಯ ಭಸ್ಮವನ್ನು – ಬ್ರಹ್ಮವರ್ಚಸ್ವಿನೀ
4) ಕಾಸಾರದಿಂದ ತಂದ ಮಣ್ಣನ್ನು – ಸರ್ವವಿಧ ಸಂಪತ್ತಿನವಳು
5) ಜೂಜಿನ ಕಟ್ಟೆಯ ಮಣ್ಣನ್ನು – ಮೋಸಗಾರ್ತಿಯು

6) ಚತುಷ್ಪಥದಿಂದ ತಂದ ಮಣ್ಣನ್ನು – ವ್ಯಭಿಚಾರಿಣೀ

7) ಬಂಜರು ಭೂಮಿಯಿಂದ ತಂದ ಮಣ್ಣನ್ನು – ಭಾಗ್ಯಹೀನಳು

8) ಶ್ಮಶಾನದಿಂದ ತಂದ ಮಣ್ಣನ್ನು – ಪತಿಘಾತಕಳು

**ಕ್ಷೇತ್ರಾತ್‌ಚೇತ್ ಅನ್ನವತ್ಯಾಸ್ಯಾಃ ಪ್ರಜಾ ಭವಿಷ್ಯತೀತಿ । ಗೋಷ್ಠಾತ್ ಪಶುಮತೀ । ವೇದಿ ಪುರೀಷಾತ್ ಬ್ರಹ್ಮವರ್ಚಸ್ವಿನೀ ಹ್ರದಾತ್ ಸರ್ವಸಂಪನ್ನಾ । ದೇವನಾತ್ ಕಿತವೀ । ಚತುಷ್ಪತಾಃ ವಿಪ್ರವಾಜಿನೀ । ಈರಿಣಾತ್ ಭಾಗ್ಯಹೀನಾ । ಶ್ಮಶನಾತ್ ಪತಿಘಾತಿನೀತಿ ।**

ಕನ್ಯೆಯು – ತಾಯಿಯ ಕಡೆ ಐದು, ತಂದೆಯ ಕಡೆ ಐದು ತಲೆಮಾರಿನಲ್ಲಿ ಕಲಂಕವಿಲ್ಲದೆ ಪ್ರಖ್ಯಾತ ಪುರುಷರಿರಬೇಕು.

**ಮಾತೃತಃ ಪಿತೃತಃ ಪಂಚ ವಿಖ್ಯಾತಾಃ ತದ್ದಶ ಪೂರುಷಂ ।**

ವರನ ಕುಲವನ್ನು ಮೊದಲು ನೋಡಬೇಕು. ನಂತರ ವಿದ್ಯೆ ವೇದಾಧ್ಯಯನಾದಿಗಳನ್ನು. ಈಗಲಾದರೂ ಉದ್ಯೋಗ, ಹಣ, ಆಸ್ತಿ, ರೂಪ ಇಷ್ಟೇ ಪ್ರಧಾನಗಳಾಗಿವೆ.

ಪುಂಸ್ತ್ವ ಪರೀಕ್ಷೆಯೂ ಅವಶ್ಯ. ಸಂತಾನಕ್ಕೆಂದೆ ಸ್ತ್ರೀಯರ ಸೃಷ್ಟಿಸಲ್ಪಟ್ಟಿದ್ದಾರೆ. ಹೀಗಾಗಿ ಸ್ತ್ರೀಯರು ಗದ್ದೆ ಹೊಲದಂತೆ ಕ್ಷೇತ್ರ ಸ್ಥಾನೀಯರು. ಪುರುಷರು ಬೀಜದಂತೆ. ಬೀಜ ಹೊಂದಿರುವವರಿಗೆ ಕನ್ಯೆಯನ್ನು ನೀಡಬೇಕು.

**ಕ್ಷೇತ್ರಂ ಬೀಜವತೇ ದೇಯಂ ನಾಽಬೀಜೇ ಕ್ಷೇತ್ರಮರ್ಹತಿ ।**

**ಪುಂಸ್ತ್ವ ಪರೀಕ್ಷೆ ಹೇಗೆ ?**

ಇದನ್ನು ಕನ್ಯೆ ಮಾಡಲು ಸಾಧ್ಯವಿಲ್ಲ. ಬಂಧುಗಳು ಪರೀಕ್ಷಿಸಬಹುದಾಗಿದೆ.

ಮೂತ್ರ ಮಾಡಿದಾಗ ಬೀಜವು ತೇಲುತ್ತಿರುವುದು, ಮೂತ್ರ ವಿಸರ್ಜನೆ ಕಾಲದಲ್ಲಿ ಶಬ್ದ ಬರುತ್ತಿರುವುದು, ಮೂತ್ರ ವಿಸರ್ಜನೆಯಾದ ಮೇಲೆ ಮೂತ್ರವು ಸ್ವಲ್ಪ ಕಾಲ ನೊರೆಗಟ್ಟಿರುವುದು ಪುಂಸ್ತ್ವ ಲಕ್ಷಣ.

**ಯಸ್ಯಾಪ್ಸು ಪ್ಲವತೇ ಬೀಜಂ ಹ್ರಾದಿ ಮೂತ್ರಂ ಚ ಫೇನಿಲಂ ವಿಪತರೀತಸ್ತು ಷಂಡಕಃ ।**

ಇದಲ್ಲದೆ ಕುಷ್ಠಾ ಅಪಸ್ಮಾರದಿ ರೋಗಗಳು, ಸಗೋತ್ರ, ಕಣ್ಣು, ಕಿವಿ

ಕೇಳದಿರುವುದು. ಕರ್ಮಭ್ರಷ್ಟತೆ ಇವು ಇಲ್ಲದಿರುವ ವರರಿಗೆ ಕನ್ಯೆ ನೀಡಬಹುದು.

ಬಹಳ ದೂರ ದೇಶದವನು, ವಿದ್ಯಾಹೀನನು, ಧನಹೀನನಿಗೂ ನೀಡಲಾಗದು.

ಕುಲಶೀಲನೂ ರೂಪವಂತ ಯುವಕ ದೋಷರಹಿತನಿಗೆ ಕನ್ಯೆಯನ್ನು ನೀಡಬೇಕು.

ವರನ ಗುಣಕ್ಕೆ ವಿರುದ್ಧವಾದ ರೋಗಾದಿಗಳಿದ್ದರೂ ಅದನ್ನು ಮುಚ್ಚಿಟ್ಟು ಕನ್ಯಾಪಿತೃವಿಗೆ ತಿಳಿಯದಂತೆ ವಿವಾಹವಾದರೆ ಕನ್ಯೆಯನ್ನು ವಿಧಿಬದ್ಧವಾಗಿ ದಾನ ಮಾಡಿದ್ದರೂ ವಾಪಾಸು ಪಡೆಯಬಹುದು.

**ಅಪಸ್ಮಾರಿ ವಿಧರ್ಮಸ್ಯ ರೋಗಿಣಾಂ ವೇಷಧಾರಿಣಾಮ್ ।**
**ದತ್ತಾಮಪಿ ಹರೇತ್ ಕನ್ಯಾಂ ಷಮಡಾದಿಪತಿತಸ್ಯ ಚ ॥**

ತಂದೆಯು, ಹಣದಾಸೆಯಿಂದ ವೃದ್ಧನೂ, ಕುರೂಪಿಯು, ನೀಚನು ಅಕುಲೀನನಿಗೆ ಕನ್ಯೆಯನ್ನು ನೀಡಿದರೆ ಸತ್ತ ಮೇಲೆ ಪ್ರೇತನಾಗುವನು.

**ಕನ್ಯಾಂ ಯಚ್ಛತಿ ವೃದ್ಧಾಯ ನಿಚಾಯ ಧನಲಿಪ್ಸಯಾ ।**
**ಕುರೂಪಾಯಾಕುಲೀನಾಯ ಸ ಪ್ರೇತೋ ಜಾಯತೇ ಪಿತಾ ॥**

- *ವಿವಾಹ ಕಾಲ :*

ಉಪನಯನದಂತೆ ಎಂಟನೇ ವರ್ಷವೇ ವಿವಾಹ ಕಾಲ. ಆರರಲ್ಲಿ ವಿವಾಹ ನಿಷಿದ್ಧ. ಆರರಿಂದ ಎಂಟು ಮುಖ್ಯ ಕಾಲವು. ಈಗ ಹದಿನೆಂಟು. ನವಮ ಹಾಗೂ ದಶಮಗಳು ಮಧ್ಯಮ, ಮುಂದೆ ಕನಿಷ್ಠ. ಹನ್ನೆರಡರಿಂದ ಮುಂದೆ ಪ್ರಾಯಶ್ಚಿತ್ತಾವಾಗಬೇಕು.

ಎಂಟನೆ ವಯಸ್ಸಿನಲ್ಲಿ ಗೌರೀ ಎಂದೂ, ಒಂಭತ್ತು ನಗ್ನಿಕಾಯೆಂದು, ಹತ್ತನೆ ವರ್ಷ ಕನ್ಯೆಯೆಂದು, ಹನ್ನೆರಡು ರಜಸ್ವಲಾವೆಂದೂ ವೃಷಲೀಯೆಂದೂ, ಕರೆಯುವರು.

ರಜಸ್ವಲೆಯಾಗುವ ಮೊದಲೇ ಪವಿತ್ರಳಾಗಿರುವ ಕನ್ಯೆಯನ್ನು ದಾನ ಮಾಡಿದರೆ 'ಪವಿತ್ರದಾನ' ಎನಿಸುವುದು. ರಜಸ್ವಲೆಯಾದರೆ ಅಪವಿತ್ರದಾನವೆನಿಸುತ್ತದೆ.

ಕನ್ಯೆಗೆ ಗುಹ್ಯದಲ್ಲಿ ರೋಮ ಸಂಜಾತ ಕಾಲದಲ್ಲಿ ಚಂದ್ರನೂ ರಜೋದರ್ಶನ ಕಾಲದಲ್ಲಿ ಗಂಧರ್ವನೂ, ಸ್ತನಗಳು ಮೂಡಿದಾಗ ಅಗ್ನಿಯೂ ಕನ್ಯೆಯನ್ನು

ಭೋಗಿಸುವರು. ಅದಕ್ಕಾಗಿ ಮುವತ್ತು ವರ್ಷದ ವರನು ಹನ್ನೆರಡು ವರ್ಷದ ಕನ್ಯೆಯನ್ನು, ಇಪ್ಪತ್ತನಾಲ್ಕು ವರ್ಷದ ವರನು ಎಂಟು ವರ್ಷದವಳನ್ನು, ವಿವಾಹವಾಗಬೇಕು.

**ತ್ರಿಂಶದ್ವರ್ಷೋ ವಹೇತ್ ಕನ್ಯಾಂ ಹೃದ್ಯಾಂ ದ್ವಾದಶವಾರ್ಷಿಕೀ ।**

ವರನು ತನ್ನ ವಯಸ್ಸಿನ ಮೂರನೇ ಒಂದು ಭಾಗ ವಯಸ್ಸಿನ ಕನ್ಯೆಯನ್ನು ವಿವಾಹವಾಗಬೇಕು.

**ವರ್ಷೈರೇಕ ಗುಣೈಃ ಭಾರ್ಯಾಂ ಉದ್ವಹೇತ್ ತ್ರಿಗುಣಃ ಸ್ವಯಂ ।**

ಕನ್ಯೆಯು ವರನಗಿಂತ ಬೇಗ ಯೌವ್ವನ ಹೊಂದುವಳು. ಗಂಡಸಿಗೆ ಈ ನಿಯಮವಿಲ್ಲ. ಅದಕ್ಕಾಗಿ ಚಿಕ್ಕವಯಸ್ಸಿನಲ್ಲಿಯೇ ಮಾಡುವುದು. ಒಂದೆರಡು ವರ್ಷ ಅಂತರವಿದ್ದರೆ ಇವನು ಮಧ್ಯಮ ಯೌವನದಲ್ಲಿರುವಾಗ ಇವಳು ವೃದ್ಧಳಾಗುವಳು. ಆಗ ಮತ್ತೊಬ್ಬ ಸ್ತ್ರೀಯರನ್ನು ಹೊಂದುವ ಸಾಧ್ಯತೆ ಅಧಿಕವು. ಈಗಿನ ಸರ್ಕಾರ ನಿಯಮದಂತೆ ಹದಿನೆಂಟಕ್ಕೆ ವಿವಾಹ ಮಾಡುವುದುಚಿತ. ಈ ಸಂದರ್ಭ ಸ್ತ್ರೀಯರಿಗೆ ಪುರುಷರ ಆಕರ್ಷಣೆ ಅಧಿಕವಾಗಿದ್ದು ಪತಿ ತನ್ನೊಂದಿಗೆ ಇದ್ದರೆ ಹತ್ತಕ್ಕುವುದು ಸುಲಭ. ಅನ್ಯಥಾ ಪರಪುರುಷರ ನೋಟ, ಬೇಟ, ಕಾಟ ಪ್ರಾರಂಭವಾದೀತು.

- *ಕನ್ಯಾ ದಾನದ ಫಲ :*

ಕನ್ಯೆಯನ್ನು ವಿಧಿವತ್ತಾಗಿ ದಾನ ಮಾಡಿದವನಿಗೆ ವಿಶ್ವಿಜಿತ್ ಯಾಗ, ಅತಿರಾತ್ರ ಜ್ಯೋತಿಷ್ಟೋಮ ಲಕ್ಷ ಬಾರಿ ಮಾಡಿದ ಫಲ ಹೊಂದುವನು.

- *ಪುನರ್ವಿವಾಹ :*

ಸಪ್ತಪದಿ ಮೊದಲು ಮೃತನಾದರೆ ಮದುವೆಯಾಗಿ ಸಂಬಂಧ ಮಾಡದೆ, ಓಡಿ ಹೋದರೆ, ನಿಷೇಕವಾಗದೇನೆ ಸನ್ಯಾಸಿಯಾದರೆ, ನಪುಂಸಕನೆಂದು ತಿಳಿದಾಗ, ಪತಿತನಾದಾಗ ಈ ಐದು ಸಂದರ್ಭದಲ್ಲಿ ಹಿರಿಯರ ಅನುಮತಿ ಪಡೆದು ಬೇರೊಬ್ಬ ಪತಿಯನ್ನು ಹೊಂದಬಹುದು.

**ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇ ಚ ಪತಿತೇ ಪತೌ ।**
**ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧಿಯತೇ ॥**

***ಪಂಚ ದುಷ್ಟಳನ್ನು ತ್ಯಜಿಸಬೇಕು :***

ರೋಗದಿಂದ ದೀರ್ಘ ಕಾಲದಿಂದ ನರಳುತ್ತಿರುವವಳು, ಮತ್ತೊಬ್ಬನಿಂದ ಭುಕ್ತಳಾದವಳು, ದಾಷ್ರ್ಯತನ ಸ್ತ್ರೀಯು, ಅಂಗಹೀನತೆ ಸ್ತ್ರೀ, ಬೇರೊಬ್ಬನಲ್ಲಿ ಪ್ರೇಮಭಾವವಿರುವ ಸ್ತ್ರೀಯನ್ನು ಬಿಡಬಹುದು.

**ದೀರ್ಘಕುತ್ಸಿತ ರೋಗಾರ್ತಾಂ ವ್ಯಂಗಾಂ ಸಂಸ್ಪೃಷ್ಟ ಮೈಥುನಾಂ ।**
**ದುಷ್ಟಾಮನ್ಯಗತ ಭಾವಾಂ ಚ ತ್ಯಜೇತ್ ಕನ್ಯಾಂ ವಿಗರ್ಹಿತಾಂ ॥**

- ***ವಿವಾಹ ಗ್ರಹಸ್ಥಿತಿ :***

ಕುಜದೋಷ – ಜಾತಕದಲ್ಲಿ ಲಗ್ನ, ಶುಕ್ರ, ಚಂದ್ರನಿರುವ ಸ್ಥಾನದಿಂದ 1 2 4 7 8 12 ಸ್ಥಾನಗಳಲ್ಲಿ ಕುಜನಿದ್ದರೇ ಕುಜದೋಷವು. ಕುಜ–ಶುಕ್ರರೇ ಲೈಂಗಿಕಾಸಕ್ತಿ ಗ್ರಹಗಳು, ಕುಜನು ಸ್ತ್ರೀಗೆ ವಿವಾಹ ಗ್ರಹನಾಗಿರುವನು. ಕುಜದೋಷವಿರುವ ಜಾತಕರಿಗೇನೇ ವಿವಾಹ ಹೊರತು ವರನಿಗೆ ಇಲ್ಲದೆ ವಧುವಿಗೆ ಮಾತ್ರ ಇದ್ದರೆ ಭೋಗಾಸಕ್ತಿ ನ್ಯೂನವಾಗುವುದು. ಇವುಗಳಿಗೆ ಅಪವಾದವಿರುತ್ತದೆ.

- *ದ್ವಾದಶ ಕೂಟಗಳು :*

ಗ್ರಹಮೈತ್ರ್ಯಾದಿ ದ್ವಾದಶ ಕೂಟಗಳನ್ನು ಪರಿಗಣಿಸಿ 33 ಗುಣಗಳಲ್ಲಿ 20 ರ ಮೇಲೆ ಗುಣಗಳು ಬರಬೇಕು. ಗ್ರಹಮೈತ್ರಿಯಿರುವ ಜಾತಕಗಳೇ ಊರ್ಜಿತವಾಗುತ್ತವೆ.

ವಧುವರರ ಜಾತಕದಲ್ಲಿ ಆಯುಷ್ಯ, ಆರೋಗ್ಯ, ಸಂತಾನ ಭಾಗ್ಯಗಳನ್ನು ಗಮನಿಸಬೇಕು.

ಕನ್ಯೆಯ ಜಾತಕದಲ್ಲಿ ಪರಪುರುಷರನ್ನು ಅರಸುವ ಪುಂಶ್ಚಲ ಯೋಗವಿದ್ದರೆ, ವರನಿಗೆ ಎರಡನೆ ವಿವಾಹ ಯೋಗವಿದ್ದಾಗಲೂ ವಿವಾಹ ಮಾಡಬಾರದು.

ಮೂಲಾದಲ್ಲಿ ಹುಟ್ಟಿದವಳು ಮಾವನಿಗೂ, ಆಶ್ಲೇಷಾದವಳು ಅತ್ತೆಯನ್ನೂ, ಜ್ಯೇಷ್ಠಾದಲ್ಲಿ ಹುಟ್ಟಿದವಳು ಪತಿಯ ಅಣ್ಣನನ್ನು, ವಿಶಾಖೆ ನಕ್ಷತ್ರದವಳು ಮೈದುನನಿಗೆ ಆಪತ್ಕಾರಿಯು. ಇದಕ್ಕೆ ಶಾಸ್ತ್ರೋಕ್ತ ಶಾಂತಿ ಮಾಡಿ ವಿವಾಹ ಮಾಡಬಹುದು. ಅತ್ತೆ, ಮಾವ, ಜ್ಯೇಷ್ಠ ಭ್ರಾತೃ, ಮೈದುನ ಇಲ್ಲದ ಮನೆಗೆ ಈ ನಕ್ಷತ್ರದ ವರನು ವಿವಾಹ ಮಾಡಿಕೊಡಬಹುದು.

ವಿವಾಹದಲ್ಲಿ ಗುರುಶುಕ್ರರು ಅಸ್ತಂಗತನಾಗಿರಬಾರದು. ಶುಕ್ರನಿದ್ದು ಗುರುವಿಲ್ಲದಿದ್ದರೂ ದೋಷವಿಲ್ಲ.

ಧನುರ್ಮಾಸ, ಆಷಾಢಾದಿ ಚಾತುರ್ಮಾಸ್ಯಾ ಕಾಲ, ಪುಷ್ಯಮಾಸಗಳಲ್ಲಿ ವಿವಾಹವು ಮಾಡಬಾರದು.

ಲಗ್ನದಿಂದ ಏಳನೇ ಮನೆ ಖಾಲಿಯಿರಬೇಕು. ಇದು ಸಪ್ತಮಶುದ್ಧಿ. ದಂಪತಿಗಳಿಗೆ ಗುರು, ಸೂರ್ಯ, ಶನಿಗಳ ಬಲವಿರಬೇಕು. ಹೀಗಾದಲ್ಲಿ ಅತ್ತೆ, ಮಾವ, ಗಂಡ ಇವರೊಂದಿಗೆ ಹೊಂದಾಣಿಕೆ, ಸಂತೋಷವಿರುತ್ತದೆ.

ಲಗ್ನದಲ್ಲಿ ಗುರುವಿದ್ದರೆ ಲಕ್ಷ ದೋಷ ಪರಿಹಾರ, ಶುಕ್ರನಿದ್ದರೆ ಐದು ಸಾವಿರ, ಬುಧನಿದ್ದರೆ ಐದು ನೂರು ದೋಷ ಪರಿಹಾರವು. ಶುಕ್ರ, ಗುರು, ಬುಧ ಕೇಂದ್ರದಲ್ಲಿರಬೇಕು. ಚಂದ್ರನು ಲಗ್ನದಲ್ಲಿರಬಾರದು. ವಿವಾಹ ಲಗ್ನಕ್ಕೆ ಷಷ್ಠದಲ್ಲಿ ಶುಕ್ರನಿರಬಾರದು. ಅಷ್ಟಮದಲ್ಲಿ ಕುಜನಿರಬಾರದು.

**ಉಮಾಶಂಕರ ಯೋಗ :** ವಿವಾಹ ಲಗ್ನದಲ್ಲಿ ಗುರುವೂ, ಏಕಾದಶ ಲಾಭದಲ್ಲಿ ಕುಜನೂ, ದಶಮದಲ್ಲಿ ರವಿಯೂ ಇದ್ದರೆ ಉಮಾಶಂಕರ ಯೋಗ. ಅವರಂತೆ ಪರಸ್ಪರ ಪ್ರೀತಿಯಿಂದಿರುತ್ತಾರೆ.

**ಲಕ್ಷ್ಮೀನಾರಾಯಣ ಯೋಗ :** ವಿವಾಹ ಲಗ್ನಕ್ಕೆ 2–6–12ರಲ್ಲಿ ರವಿ ಗುರು ಕುಜ ಶುಕ್ರರಿದ್ದರೆ ಈ ಯೋಗವು. ಇವರಿಬ್ಬರಿಗೆ ವಿಯೋಗವೆ ಇರದು.

**ಉಮಾಶಂಕರ ಮಿತ್ಯಾಹುಃ ದಂಪತ್ಯೋಶ್ಚ ಸುಖಾವಹಮ್ ।**
**ರಮಾವಿಷ್ಣುರಿತಿ ಖ್ಯಾತಃ ದಂಪತ್ಯೋಶ್ಚ ಸುಖಾವಹಮ್ ॥**

**ತ್ರಿಜ್ಯೇಷ್ಠ ನಿಷೇಧ :** ಜ್ಯೇಷ್ಠಾ ನಕ್ಷತ್ರ – ಜ್ಯೇಷ್ಠ ಪುತ್ರ – ಜ್ಯೇಷ್ಠ ಮಾಸ ಹೀಗೆ ತ್ರೀಜ್ಯೇಷ್ಠ – ಈ ಯೋಗವು ವಧೂವರರಲ್ಲಿ ಜಗಳ, ವೈಮನಸ್ಯ, ಧನ ಹಾನಿ ಉಂಟು ಮಾಡುತ್ತದೆ.

- ***ಪ್ರೌಢ ವಿವಾಹ ಪ್ರಾಯಶ್ಚಿತ್ತ :***

ಈಗಿನ ಕಾಲದಲ್ಲಿ ಋತುಮತಿಯಾದವರ ವಿವಾಹವೆ ನಡೆಯುತ್ತಿದ್ದು, ಇದಕ್ಕೆ ಸರ್ಕಾರದ ಸಮ್ಮತಿ ಇದೆ. ಕೆಲವೆಡೆ ಶಾಸ್ತ್ರದಂತೆ ಎಂಟು ವರ್ಷಕ್ಕೆ ಮಾಡುತ್ತಿರುವುದು ಯುಕ್ತವೆನಿಸಿದರೂ ಭಯ ವಾತಾವರಣ ಸೃಷ್ಟಿಯಾಗುತ್ತದೆ. ಸರ್ಕಾರದ ನಿಯಮವನ್ನು ನಾವು ಮೀರಬಾರದು.

ಇಂತಹ ಆಪತ್ಕಾಲದಲ್ಲಿ ಶಾಸ್ತ್ರದಲ್ಲಿ ಹೇಳಿರುವ ಪ್ರಾಯಶ್ಚಿತ್ತ ಅನಿವಾರ್ಯವು.

ಋತುಮತಿಯಾದ ತಿಂಗಳಿಂದ ವಿವಾಹದವರೆಗೂ ಎಷ್ಟು ತಿಂಗಳು ಕಳೆದಿವೆಯೋ ಅಷ್ಟು ಗೋದಾನ ಅಥವಾ ಗೋದಾನ ಪ್ರತ್ಯಮ್ನಾಯವಾಗಿ ಧನವನ್ನೇ ನೀಡುವುದು. ಸಾಮರ್ಥ್ಯವಿಲ್ಲದಿದ್ದಾಗ ಒಂದು ಗೋದಾನ/ಹಿರಣ್ಯದಾನವನ್ನು ಒಬ್ಬನಿಗಾದರೂ ನೀಡಬೇಕು. ಬ್ರಾಹ್ಮಣ ಭೋಜನ ಮಾಡಬೇಕು. ಕನ್ಯೆಯು ದಾನಕ್ಕೆ ಯೋಗ್ಯಳಾಗುವಳು.

**ಋತು ಸಂಖ್ಯಯಾ ಗೋದಾನಾನಿ ಏಕಂ ವಾ ಗೋದಾನಂ ।**
**ಯಥಾಶಕ್ತಿ ಬ್ರಾಹ್ಮಣ ಭೋಜನಂ ಕೃತಾ ಕನ್ಯಾದಾನೇ ಯೋಗ್ಯೊ ಭವೇತ್ ॥**

ವರನಾದರೂ ಕೂಷ್ಮಾಂಡ ಹೋಮ ಅಥವಾ ಪಾರಾಯಣ ಮಾಡಬೇಕು. ವಧುವು ಮೂರು ದಿನ ಭೋಜನ ಬಿಡಬೇಕು. ಋತುಮತಿಯಾಗದ ಕನ್ಯೆಗೆ ಯಾವುದಾದರೂ ಆಭರಣ ದಾನ ನೀಡಬೇಕು.

* * * *



# 1. ಧರ್ಮದ ಅವಶ್ಯಕತೆ



ಶ್ರೀಗುರುಭ್ಯೋ ನಮಃ । ಪರಮಗುರುಭ್ಯೋ ನಮಃ

- ***ಧರ್ಮದ ಅವಶ್ಯಕತೆ :***

ಧರ್ಮೋರಕ್ಷತಿ ರಕ್ಷಿತಃ – ಧರ್ಮವನ್ನು ನಾಶ ಮಾಡಿದವರು ನಾಶ ಹೊಂದುತ್ತಾರೆ, ಧರ್ಮ ರಕ್ಷಕರು ರಕ್ಷಿತರಾಗುತ್ತಾರೆ. ಆದ್ದರಿಂದ ಧರ್ಮವನ್ನು ನಾಶ ಮಾಡಬಾರದು. ಧರ್ಮವನ್ನು ನಾಶ ಮಾಡುವಂತ ದೌರ್ಭಾಗ್ಯ ನಮಗೆ ಬಾರದಿರಲಿ.

**ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ ।**
**ತಸ್ಮಾದ್ ಧರ್ಮೋ ನ ಹಂತವ್ಯಃ ಮಾ ನೋ ಧರ್ಮೋ ಹತೋಽವಧೀತ್** ॥ – *ಮನುಸ್ಮೃತಿ*

- ***ಜ್ಞಾನ ಕರ್ಮದ ಅವಶ್ಯಕತೆ :***

ಪಕ್ಷಿಗಳು ಹೇಗೆ ತಮ್ಮ ಎರಡೂ ರೆಕ್ಕೆಗಳಿಂದ ಹಾರುತ್ತಾ ಗುರಿ ಮುಟ್ಟುವವೋ ಹಾಗೆ ಮನುಷ್ಯನು ಜ್ಞಾನ–ಕರ್ಮ ಮಾರ್ಗಗಳಿಂದ ಶಾಶ್ವತ ಗತಿಯನ್ನು ಹೊಂದುವನು.

**ಉಭಾಭ್ಯಾಮೇವ ಪಕ್ಷಾಭ್ಯಾಂ ಖೇ ಯಥಾ ಪಕ್ಷಿಣಾಂ ಗತಿಃ ।**
**ತಥೈವ ಜ್ಞಾನ–ಕರ್ಮಾಭ್ಯಾಂ ಪ್ರಾಪ್ಯತೇ ಶಾಶ್ವತೀ ಗತಿಃ ॥**
– *ಕುಮಾರಿಲ ಕಾರಿಕಾ*

- *ಮಾನವ ಜನ್ಮ ದೊಡ್ಡದೋ :*

ಭಗವಂತನು ನೀಡಿದ ಈ ಶರೀರದಿಂದಲೇ ಮಾನವನು ಸಾಧನ ಮಾಡಿ ಮುಕ್ತಿ ಹೊಂದಬಹುದಾಗಿದೆ. ಈ ಮಾನವ ಶರೀರದಿಂದ ಮಾತ್ರ ಈ ಭವಸಾಗರವನ್ನು ದಾಟಬಹುದು. ಇದೊಂದು ಸಂಸಾರ ಸಾಗರ ದಾಟುವರಿಗೆ ಒಂದು ದೋಣಿಯು.

ಅಂತಃಕರಣ ಶುದ್ಧಿಯಿಲ್ಲದೆ ಮುಕ್ತಿ ಹೊಂದಲು ಸಾಧ್ಯವಿಲ್ಲ. ಆದಾದರೂ ಭಗವದುಪಾಸನೆಯಿಂದ ಮಾತ್ರ ಸಾಧ್ಯ. ಉಪಾಸನೆಯೂ ಸಹ ಸರಿಯಾಗಿ ವಿಮರ್ಶಿಸಿದರೆ ವಿಹಿತಕರ್ಮ ಮಾಡದಿದ್ದರೆ ಅದು ಅಧರ್ಮವೆನಿಸುತ್ತದೆ.

- *ಕರ್ಮಸಮರ್ಪಣೆ ಎಂದರೇನು?*

ಯಾವುದೇ ನಿತ್ಯ ನೈಮಿತ್ತಿಕ – ಜೀವನೋಪಾಯ ಕರ್ಮಗಳನ್ನು ಮಾಡುತ್ತಿದ್ದು, ಈ ಕರ್ಮಗಳನ್ನು ನಾನು ಸ್ವತಂತ್ರವಾಗಿ ಮಾಡುತ್ತಿಲ್ಲ. ಸರ್ವ ಕರ್ಮಗಳಿಗೆ ಅಂತರ್ನಿಯಾಮಕ ಭಗವಂತನೆ. ಅವನೇ ನನ್ನನ್ನು ಪ್ರೇರಿಸಿ ನನ್ನ ದ್ವಾರಾ ಮಾಡಿಸುತ್ತಿರುವನೆಂದು ತಿಳಿದು ಸರ್ವಕರ್ಮವನ್ನೂ ಭಗವಂತನಲ್ಲಿ ಸಮರ್ಪಣೆ ಮಾಡುವುದು.

- *ಭಗವಂತನಲ್ಲಿ ಅರ್ಪಿತ ಕರ್ಮಗಳಿಗೆ ಫಲ :*

ಕೃಷಿ ಮಾಡಿದಾಗ ಪ್ರಧಾನವಾದ ಧಾನ್ಯಗಳು ಯಥೇಷ್ಟವಾಗಿ ಲಭಿಸಿದಾಗ ಹುಲ್ಲು ಪ್ರಾಪ್ತವಾಯಿತೆಂದು ಹೇಳಬೇಕಿಲ್ಲ. ಹಾಗೆಯೇ ಭಗವಂತನ ಪ್ರೀತಿಯೆಂಬ ಪ್ರಧಾನ ಫಲ ಲಭಿಸಿದಾಗ ಸ್ವರ್ಗಾದಿ ಫಲಗಳು ಲಭಿಸುತ್ತವೆ ಎಂದೂ ಹೇಳಬೇಕಿಲ್ಲ. ಭಗವಂತನು ಪ್ರಸನ್ನನಾದರೆ ಸಾಕು.

**ಕಿಮಲಭ್ಯಂ ಭಗವತಿ ಪ್ರಸನ್ನೆ ಶ್ರೀನಿಕೇತನೇ ।**
**ಮಯ್ಯರ್ಪಿತಮನಾ ಬಾಲಃ ಕಿಮು ಸ್ವರ್ಗಾದಿಕಂ ಫಲಮ್ ॥**

- *ಸರ್ವದೇವ ನಮಸ್ಕಾರಃ ಕೇಶವಂ ಪ್ರತಿ ಗಚ್ಛತಿಃ :*

ನಾವು ಕರ್ಮವನ್ನು ಮಾಡಿ ಅರ್ಪಿಸದಿದ್ದರೂ ವಾಯುದೇವನೇ ಪ್ರಾಣಿಗಳು ಮಾಡುವ ಕರ್ಮಗಳನ್ನು ಭಗವಂತನಲ್ಲಿ ಅರ್ಪಿಸುತ್ತಾನೆ.

**'ತಸ್ಮಿನ್ನಪೋ ಮಾತರಿಶ್ವಾ ದಧಾತಿ'**

ಯಜ್ಞಾದಿ ಕರ್ಮಭೋಕ್ತನೂ, ಕರ್ಮಫಲದಾತನು ಭಗವಂತನೆ ಆಗಿದ್ದು, ಯಾವನು ಮಾಡಿದ ಕರ್ಮದಿಂದ ಭಗವಂತನು ಸಂತುಷ್ಟನಾಗುವನೋ ಅವರನೇ ಕರ್ಮ ಮಾಡಿಸಿ ಫಲ ನೀಡುವನು.

- *ಭಾರತ ಭೂಮಿ – ಕರ್ಮಭೂಮಿ :*

ಭಾರತದಲ್ಲಿ ಕರ್ಮದ ಶ್ರೇಷ್ಠತೆಯನ್ನು ಶ್ರೀಮದಾಚಾರ್ಯರು ತಿಳಿಸುವರು.

**ವಿಶೇಷಾದ್ ಭಾರತೆ ಪುಣ್ಯಂ ಚರೇಯುಃ ಪಾಪಮಪ್ಯುತ** । – *ಭಾ.ತಾ.*

ಭಾರತವು ಕರ್ಮಭೂಮಿಯಾಗಿದ್ದು ಇಲ್ಲಿ ಆಚರಿಸುವ ಕರ್ಮಗಳಿಗೆ ಬೇರೆ ದೇಶಗಳಿಗಿಂತಲೂ ಪುಣ್ಯದಲ್ಲಿ ವಿಶೇಷವಿದೆ.

ಭೋಗ ಭೂಮಿಗಳಲ್ಲಿ ಕರ್ಮವು ಹುಟ್ಟುವುದೇ ಇಲ್ಲ. ಹುಟ್ಟಿದರೂ ವಿಶೇಷ ಪುಣ್ಯದಾಯಕವಾಗುವುದಿಲ್ಲ.

- *ಕರ್ಮದಿಂದ ಜ್ಞಾನಪ್ರಾಪ್ತಿ :*

**'ಕರ್ಮಣಾ ಜ್ಞಾನ ಮಾತನೋತಿ' ಜ್ಞಾನೇನ ಅಮೃತೀಭವತಿ ।**

ಶ್ರೌತ – ಸ್ಮಾರ್ತ – ನಿತ್ಯ – ನೈಮಿತ್ತಿಕಗಳೆಂಬ ಕರ್ಮಗಳನ್ನೂ ಮಾಡುತ್ತಾ ಅಂತಃಕರಣವೆಂಬ ಕನ್ನಡಿಯನ್ನು ಶುದ್ಧಿಗೊಳಿಸಿ, ಶ್ರವಣ ಮನನಾದಿಗಳ ಮೂಲಕ ತತ್ವಜ್ಞಾನ ಸಂಪಾದಿಸಬೇಕು.

**ಕ್ಷೇಮಂ ನ ವಿದಂತಿ ವಿನಾ ಯದರ್ಪಣಂ ।**

ನಮಗೆ ವಿಹಿತವಾದ ಕರ್ಮಗಳನ್ನೇ ಮಾಡಬೇಕು. ಅದು ಭಗವಂತನ ಪ್ರೀತಿಗಾಗಿ ಮಾಡಬೇಕು.

ಕರ್ಮವು ಎಷ್ಟೇ ಸಾಂಗೋಪಾಂಗವಾಗಿ ಆಚರಿಸಿದ್ದರೂ ಸರ್ವಕರ್ಮ–ಗಳನ್ನೂ ಭಗವಂತನಲ್ಲಿ ಅರ್ಪಿಸಬೇಕು. ಭಗವದ್ವಿಮುಖರು ಪಾಷಂಡಿಗಳೆನಿಸಿ ಅಯೋಗ್ಯಗತಿ ಹೊಂದುವರು.

**ವೇದೋಕ್ತಂ ಯಾಗ ಹೋಮಾದಿ ಕೇಶವೋದ್ದೇಶತಃ ಕೃತಮ್ ।**
**ಧರ್ಮಮಾಹುರಧರ್ಮಸ್ತು ಸ ಏವ ಹರಿವಿಪ್ರಿಯಃ ॥** – *ಗಾರುಡ*

ಭಗವದರ್ಪಿತವಾಗದ ಕರ್ಮಗಳು ಶ್ರುತಿ–ಸ್ಮೃತ್ಯಾದಿಗಳಲ್ಲಿ ಹೇಳಿರುವ ಮೋಕ್ಷಕ್ಕೆ

ಪ್ರತಿಬಂಧಕವೆನಿಸುವುವು. ತತ್ವಜ್ಞಾನ ಹೊಂದಬೇಕಾದವರೆಲ್ಲರೂ ಭಗವಂತನ ಪ್ರೀತಿಗಾಗಿ ಸಕಲ ಕರ್ಮಗಳನ್ನು ಮಾಡಬೇಕು.

- ***ಧರ್ಮ ಎಂದರೇನು?***

ವೇದದಲ್ಲಿ ಹೇಳಿರುವುದು, ಧರ್ಮಶಾಸ್ತ್ರದಲ್ಲಿ ಹೇಳಿರುವುದು, ಶಿಷ್ಟಾಚಾರ ಪರಂಪರೆಯಿಂದ ನಡೆದು ಬಂದದ್ದು ಎಂದು ಮೂರು ವಿಧ ಧರ್ಮಗಳು.

**ವೇದೋಕ್ತಃ ಪ್ರಥಮೋ ಧರ್ಮಃ ಧರ್ಮಶಾಸ್ತ್ರೇಣ ಚಾಪರಃ ।**
**ಶಿಷ್ಟಾಚಾರಃ ತೃತೀಯಸ್ತು ತ್ರಿವಿಧಂ ಧರ್ಮಲಕ್ಷಣಮ್ ॥**

*– ಯಾಜ್ಞವಲ್ಕ್ಯರು*

ಧರ್ಮಕ್ಕೆ ಸ್ವಾಮಿಯು ಶ್ರೀಹರಿಯಾಗಿದ್ದು ಅದು ಸದಾಚಾರದಿಂದ ಪ್ರಕಟಗೊಳ್ಳುತ್ತದೆ. ***(ಆಚಾರ ಪ್ರಭವೋಧರ್ಮಃ)***

ಸರ್ವವೂ ಭಗವಂತನದು – ನನ್ನದಲ್ಲ.

ನನ್ನದು ಎಂದರೇ ಮೃತ್ಯುವಿನ ಕಡೆಗೆ ಹೋಗುತ್ತಿರುವನೆಂದರ್ಥ. ನನ್ನದಲ್ಲ ಎಲ್ಲವೂ ಭಗವಂತನದೆಂದರೆ ಮೋಕ್ಷದ ಕಡೆಗೆ ಪ್ರಯಾಣ ಮಾಡುತ್ತಿರುವ–ನೆಂದರ್ಥ.

**ದ್ವ್ಯಕ್ಷರಸ್ತು ಭವೇನ್ ಮೃತ್ಯುಃ ತ್ರ್ಯಕ್ಷರಂ ಬ್ರಹ್ಮ ಶಾಶ್ವತಮ್ ।**
**ಮಮೇತಿ ಚ ಭವೇನ್ ಮೃತ್ಯುಃ ನ ಮಮೇತಿ ಚ ಶಾಶ್ವತಮ್ ॥**

*– ಮ.ಶಾಂತಿ–13/4*

- ***ಸರ್ವಧರ್ಮ ಸಂಗ್ರಹ –ಸರ್ವರೂ ಮಾಡಬೇಕಾದ ಧರ್ಮಾಚರಣೆ:***

ಸರ್ವರಿಗೂ ಸಂಬಂಧಿಸುವ ಧರ್ಮವನ್ನು ಹೀಗೆ ಸಂಗ್ರಹಿಸಬಹುದು.

ಶ್ರಾಂತವಾಗಿ ಬಂದವರ ಉಪಚಾರ, ಬ್ರಾಹ್ಮಣರ ಎಂಜಲೆಲೆ ಎತ್ತುವುದು, ವೇದೋಕ್ತ ಮಾರ್ಗಾವಲಂಬನೆ, ರೋಗಿಗಳ ಪರಿಚಯೆ, ದೇವರ ಪೂಜೆ, ಬ್ರಾಹ್ಮಣರ ಪಾದ ತೊಳೆಯುವುದು, ಸತ್ಯವನ್ನು ಮಾತಾಡುವುದು, ಬಾಯಾರಿದವರಿಗೆ ನೀರಿನ ವ್ಯವಸ್ಥೆ, ಏಕಾದಶೀ ಉಪವಾಸ, ರಾತ್ರಿ ಭಜನೆಯಿಂದ ಜಾಗರಣೆ, ಪತಿ, ಪುತ್ರ, ಅತ್ತೆ, ಮಾವ, ತಂದೆ, ತಾಯಿ ಮೊದಲಾದವರ ಪಾಲನೆ, ದಾರಿದ್ರ್ಯದಿಂದ ಬಳಲುವವರಿಗೆ ಧನಾದಿ ದಾನ, ***(ನಿಸ್ವೇ ದಾನಂ)***, ಭಗವಂತನ ಪೂಜೆ (ಹರಿಪೂಜಾ) ನಿಷೇಧ

ಮಾಡಿರುವುದನ್ನು ತ್ಯಜಿಸುವುದು ***(ನಿಷಿದ್ಧಸ್ಯ ಚ ವರ್ಜನಂ),*** ಸಜ್ಜನರ ಸತ್ಕಾರ ***(ಸಾಧೂನಾಂ ಸತ್ಕಾರಃ),*** ಅತಿಥಿ ಅಭ್ಯಾಗತರಿಗೆ ಶ್ರಮ ಪರಿಹಾರಕ್ಕಾಗಿ ಆಸನ, ಚಾಪೆ, ಹಾಸಿಗೆ ಮೊದಲಾದ ದಾನ ***(ಶಯ್ಯಾಸನ ದಾನ),*** ಧರ್ಮದಲ್ಲಿ ಆಸಕ್ತಿ ***(ಧರ್ಮೇರತಿಃ),*** ಸದ್ಗ್ರಂಥಗಳ ಕಥಾಶ್ರವಣ – ಹಾಗೂ ಮತ್ತೊಬ್ಬರಿಗೆ ತಿಳಿಸುವುದು. ರಾಮಾಯಣ, ಮಹಾಭಾರತ ಕಥಾ ಶ್ರವಣ ***(ಸದ್ಗ್ರಂಥ ಶ್ರವಣ ಪ್ರವಚನಂ),*** ನೆಲ್ಲಿಕಾಯಿಯಿಂದ ಸ್ನಾನ ***(ಧಾತ್ರೀ ಸ್ನಾನಂ),*** ಹಿತಕರವಾದ ಮೃದುವಾದ ಮಾತನ್ನಾಡುವುದು, ಗುರುಪೂಜೆ, ಪತಿಪೂಜೆ, ಯೋಗ್ಯರಿಗೆ ದಾನ, ನಿರಂತರ ಹರಿಸ್ಮರಣೆ ***(ಕೃಷ್ಣೇಮತಿಃ),*** ತಂದೆತಾಯಿ–ಅತ್ತೆಮಾವಂದಿರ ಸೇವೆ, ಪ್ರೀತಿಯಿಂದ ಮಾತನಾಡಿಸುವುದು – ಗೋವುಗಳಿಗೆ ಹಿಂಡಿ ಮೊದಲಾದ ಗೋಗ್ರಾಸ ನೀಡುವುದು, ನಾಲಿಗೆ – ಗುಹ್ಯೇಂದ್ರಿಯ ಜಯ, ಕ್ಷಮಾಗುಣ ***(ಧೃತಿಃ)*** ಹೊಂದಿರುವುದು. ಇಂದ್ರಿಯ ನಿಗ್ರಹ, ಯಾರ ವಸ್ತುವನ್ನೂ ಅಪಹರಿಸದಿರುವುದು ***(ಅಸ್ತೇಯಂ),*** ದೇಹದ ಒಳಗೆ–ಹೊರಗೆ ಶುಚಿಯಾಗಿರುವುದು ***(ಬಾಹ್ಯಾಂಭ್ಯಂತರ ಶೌಚಂ),*** ಕೆಟ್ಟ ಕೆಲಸ ಮಾಡದಿರುವುದು ***(ಹ್ರೀಃ),*** ತತ್ವಜ್ಞಾನ ಸಂಪಾದನೆ, ಋಜುವಾಗಿಯೂ ಯತಾರ್ಥವಾಗಿಯೂ ಮಾತನಾಡುವುದು, ಕೋಪ ಮಾಡದಿರುವುದು – ಸ್ನಾನಾದಿಗಳಿಂದ ಶುಭ್ರವಾಗಿರುವುದು, ಯಾವುದೇ ಕಾರ್ಯ ಮಾಡಲು ಆಯಾಸ ತೋರದಿರುವುದು – ಜಿಪುಣತನ ತೋರದೆ ಧಾರಾಳತನ ಔದಾರ್ಯ ಹೊಂದಿರುವುದು ***(ಅಕಾರ್ಪಣ್ಯಂ),*** ಯದೃಚ್ಛಾಲಾಭ ಸಂತುಷ್ಟಿ, ಪ್ರಶಸ್ತ ಕರ್ಮಗಳನ್ನೇ ಮಾಡುವುದು, ಅಮಂಗಳ ಕೆಲಸ ಮಾಡದಿರುವುದು. ಇವೇ ಮೊದಲಾದ ಧರ್ಮಗಳು ಸ್ತ್ರೀ ಪುರುಷರ ಧರ್ಮಗಳಾಗಿವೆ.

ದೇವತೆಗಳಿಂದ ಅನುಷ್ಠಿತ ಧರ್ಮ ಮಾನವರು ಮಾಡಬಾರದು. ಆದರೆ ದೇವತೆಗಳು, ಋಷಿ ಮುನಿಗಳು ಯಾವುದನ್ನು ಮಾಡಲು ಹೇಳಿರುವರೋ ಅವುಗಳನ್ನು ಮಾಡಲೇಬೇಕು.

**ನಾನುಷ್ಠೇಯಂ ಮನುಷ್ಯೈಸ್ತು ಹ್ಯುಕ್ತಂ ಕರ್ಮ ಸಮಾಚರೇತ್ ।**

- ***ಬ್ರಾಹ್ಮಣರ ವಾಕ್ಯ ಪ್ರಮಾಣ :***

ಯಾವುದನ್ನು ಅನುಷ್ಠಾನ ಮಾಡಲು ಶ್ರುತಿ, ಸ್ಮೃತಿ ಮೊದಲಾದವುಗಳು ನಮಗೆ ಸಿಗುವುದಿಲ್ಲವೋ ಅಂತಹ ಕರ್ಮವನ್ನು ಶಿಷ್ಟರಾದ ಬ್ರಾಹ್ಮಣರು ಹೇಳಿದಂತೆ ಆಚರಿಸಬೇಕು.

**ಅನಾಮ್ನಾತೇಷು ಧರ್ಮೇಷು ಕಥಂ ಸ್ಯಾದಿತಿಚೇದ್ ಭವೇತ್ ।**
**ಯಾ ಶಿಷ್ಟಾಃ ಬ್ರಾಹ್ಮಣಾ ಬ್ರೂಯುಃ ಸ ಧರ್ಮಃ ಸ್ಯಾದಶಂಕಿತಃ ॥**
– ಮನು

- ***ಸಂಪ್ರದಾಯವೂ ಪ್ರಮಾಣ :***

ಧರ್ಮಾಚರಣೆಯಲ್ಲಿ ಅನೇಕ ರೀತಿಯ ಮತ, ವಿಕಲ್ಪಗಳು ಕಂಡುಬಂದಲ್ಲಿ ಕುಲಾಚಾರದಂತೆಯೇ ಮಾಡಬೇಕು. ತಂದೆ – ತಾತ–ಮುತ್ತಾತಂದಿರು ನಡೆದ ಹಾದಿಯಲ್ಲಿ ನಡೆಯಬೇಕು.

**ಯೇನಾಸ್ಯ ಪಿತರೋ ಯಾತಾಃ ಯೇನ ಯಾತಾಃ ಪಿತಾಮಹಾಃ ।**
**ತೇನ ಯಾಯಾತ್ ಸತಾಂ ಮಾರ್ಗೇ ತೇನ ಗಚ್ಛನ್ ನ ದುಷ್ಯತಿ ॥**
– ಮನು

ಸ್ತ್ರೀಯರು ಯಾರನ್ನು ವಿವಾಹವಾಗುವರೋ ಅವರ ಜಾತಿ ಅವರಿಗೆ ಬರುತ್ತದೆ.

**ಶೂದ್ರಸ್ಯ ಭಾರ್ಯಾ ಶೂದ್ರೈವ ಸಾ ಚ ಸ್ವಾಃ ಚ ವಿಶಃ ಸ್ಮೃತೇಃ ।**
**ತೇ ಚ ಸ್ವಾ ಚೈವ ರಾಜ್ಞಸ್ತು ತಾಶ್ಚ ಸ್ವಾ ಚಾಗ್ರ ಜನ್ಮನಃ ॥**

- ***ಶೂದ್ರ ಸ್ತ್ರೀಯು ಬ್ರಾಹ್ಮಣ ಸ್ತ್ರೀಯಾಗಲಾರಳು :***

ಬ್ರಾಹ್ಮಣನು ತನ್ನ ಶಯನದಲ್ಲಿ ಶೂದ್ರ ಸ್ತ್ರೀಯೊಂದಿಗೆ ಮಲಗಿದನೆಂದರೆ ಅಧೋಗತಿಗೆ ಬೀಳುವನು. ಪುತ್ರನನ್ನು ಉತ್ಪಾದಿಸಿದರೆ ಬ್ರಾಹ್ಮಣದಿಂದಲೇ ಹೀನನಾಗುವನು.

**ಆರೋಪ್ಯ ಶೂದ್ರಾಂ ಶಯನೇ ವಿಪ್ರೋ ಗಚ್ಛೇದಧೋಗತಿಮ್ ।**
**ಉತ್ಪಾದ್ಯ ಪುತ್ರಂ ಶೂದ್ರಾಯಾಂ ಬ್ರಾಹ್ಮಣ್ಯಾದೇವ ಹೀಯತೇ ॥**

- ***ಸ್ತ್ರೀಯರ ವಿಶೇಷ ಧರ್ಮಗಳು :***

***ಭಿಕ್ಷುಕರು ಮನೆಯ ಮುಂದೆ ನಿಂತಾಗ –***

ನಾರಿಯು ವಿಶೇಷವಾಗಿ ಯಾಯಾವರ, ವಟುಭಿಕ್ಷೆ, ಭಿಕ್ಷುಕಾದಿಗಳು ಭಿಕ್ಷೆಗಾಗಿ ಬಂದು ನಿಂತಾಗ ಗದರಿಸಿ, ಬೈದು ಕಳುಹಿಸಬಾರದು.

- ಯಾಚಕರ ರೂಪದಲ್ಲಿ ಶಿವನೋ, ಪರಮಶಿವನೋ ಬಂದಿರಬಹುದು.

- ಯಾಚಕನು ಯಾರ ಮನೆಯಿಂದ ಭಿಕ್ಷೆ ಪಡೆಯುವ ಆಸೆಯನ್ನು ತೊರೆದು ಹಿಂದಕ್ಕೆ ಹೋಗುವನೋ ಅವನು ಮನೆಯ ಯಜಮಾನನ ಪುಣ್ಯವನ್ನು ಹೊತ್ತು, ತನ್ನ ಪಾಪವನ್ನು ಕೊಟ್ಟು ಹೋಗುತ್ತಾನೆ.
- ಬ್ರಾಹ್ಮಣಾದಿಗಳು ಮನೆಗೆ ಬಂದಾಗ ಹುಲ್ಲಿನ ಚಾಪೆ, ನೆಲ, ನೀರು, ಒಳ್ಳೆಯ ಮಾತು ಇವುಗಳಿಗೆ ಬರ ಇರುವುದಿಲ್ಲ.

**ತೃಣಾನಿ ಭೂಮಿರುದಕಂ ವಾಕ್ ಚತುರ್ಥೀಚ ಸೂನೃತಾ ।**
**ಏತಾನಿ ಚ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ॥**

*– ಚಾ.ಮಾ.ಮಾ. 12/16*

- ***ಚಲಾಚಲಪ್ರತಿಮಾ ಪೂಜೆ :***

ಸ್ತ್ರೀಯರಿಗೆ ಚಲಾಚಲಪ್ರತಿಮಾ ಪೂಜೆ ಹೇಳಲಾಗಿದೆ.

ಚಲಪ್ರತಿಮೆ ಎಂದರೆ ಪತಿ, ಗೋವು, ಬ್ರಾಹ್ಮಣ, ಸನ್ಯಾಸಿಗಳು.

ಅಚಲ ಪ್ರತಿಮೆ ಎಂದರೆ ಸಾಲಿಗ್ರಾಮಾದಿಗಳು.

**ಚಲಾ ತು ಪ್ರತಿಮಾ ವಿಪ್ರಾಃ ಶಾಲಿಗ್ರಾಮಾದಿಕಾಽಚಲಾ ।**

ಗೋವುಗಳಿಗೆ ಗೋಗ್ರಾಸಗಳಿಂದಲೂ, ಬ್ರಾಹ್ಮಣರಿಗೆ ಉಟೋಪಚಾರ-ದಿಂದಲೂ, ಸನ್ಯಾಸಿಗಳಿಗೆ ಭಿಕ್ಷೆಯಿಂದಲೂ ಅವರನ್ನು ಸಂತೋಷ-ಗೊಳಿಸಬೇಕು.

ಅಚಲ ಪ್ರತಿಮೆಗಳಲ್ಲಿ, ಸಾಲಿಗ್ರಾಮಾದಿಗಳ ಪೂಜೆ ಸ್ತ್ರೀಯರಿಗೆ ನಿಷಿದ್ಧವಾಗಿದೆ. ಸಾಲಿಗ್ರಾಮವನ್ನು ಸ್ತ್ರೀಯರು ಮುಟ್ಟಬಾರದು.

**ಶಾಲಿಗ್ರಾಮೊ ನ ಸ್ಪೃಷ್ಟವ್ಯೋ ಹೀನವರ್ಣೈಃ ವಸುಂಧರೇ ।**
**ಸ್ತ್ರೀ ಶೂದ್ರಕರಸಂಸ್ಪರ್ಶೋ ವಜ್ರಸ್ಪರ್ಶಾಧಿಕೋ ಮತಃ ।**
**ಮೋಹಾತ್ ಯಃ ಸಂಸ್ಪೃಶೇತ್ ಶೂದ್ರೋ ಯೋಷಿದ್ವಾಪಿ ಕದಾಚನ।**
**ಸ ಪತೇತ್ ನರಕೇ ಘೋರೇ ಯಾವದಾಭೂತ ಸಂಪ್ಲವಂ ॥**

**ನ ಜಾತುಚಿತ್ ಸ್ತ್ರಿಯಾ ಕಾರ್ಯಂ ಶಾಲಿಗ್ರಾಮಸ್ಯ ಪೂಜನಂ ।**
**ಮೋಹಾತ್ ಸ್ಪೃಶೇತ್ತು ಮಹಿಲಾ ಜನ್ಮಶೀಲ ಗುಣಾನ್ವಿತಾ ।**
**ಹಿತ್ವಾ ಪುಣ್ಯಸಮೂಹಂ ತು ಸತ್ವರಂ ನರಕಂ ವ್ರಜೇತ್ ॥**

*– ಬ್ರ.ವೈ.–20*

ಪತಿಯು ಅನ್ಯತ್ರ ಹೋಗಿರುವಾಗಲೂ ಪುತ್ರ, ತಮ್ಮ ಅಥವಾ ಬೇರೆಯವರಿಂದ ಪೂಜೆ ಮಾಡಿಸಬೇಕು. ಪೂಜೆ ಮಾಡುವವರು ಸಿಗದಿದ್ದಾಗ ದೂರದಿಂದ ಪುಷ್ಪಾದಿಗಳನ್ನು ಕೃಷ್ಣಾಜಿನ ಪೆಟ್ಟಿಗೆ ಮೇಲೆ ಹಾಕಬಹುದು.

**ದೂರಾದೇವ ಅಸ್ಪೃಶನ್ ಪೂಜಾಂ ಕಾರಯೇತ್ ಸುಸಮಾಹಿತಃ ।**

- ***ಗೋಪಿಯರು – ಹರಿಧ್ಯಾನ :***

ಭಾಗವತದಲ್ಲಿ "ಹಸುಗಳ ದೋಹನ, ಧಾನ್ಯವನ್ನು ಬಡಿಯುವಾಗ, ಮೊಸರು ಕಡೆಯುವಾಗ, ಅಂಗಳವನ್ನು ಸಾರಿಸುವಾಗ, ಮಕ್ಕಳನ್ನು ತೂಗುವಾಗ, ಅಳುವ ಮಕ್ಕಳನ್ನು ಸಮಾಧಾನ ಮಾಡುವಾಗಲು, ಮನೆಯನ್ನು ಗುಡಿಸಿ, ನೀರಿನಿಂದ ತೊಳೆಯುವಾಗಲೂ ಪ್ರೇಮಪೂರ್ಣವಾದ ಮನಸ್ಸಿನಿಂದ ಆನಂದಭಾಷ್ಪ ಸುರಿಸುತ್ತಾ ಶ್ರೀಕೃಷ್ಣನಲ್ಲಿಯೇ ಮನಸ್ಸನ್ನು ಲೀನಗೊಳಿಸಿದ ಗೋಪಿಯರು ನಿಜವಾಗಿಯೂ ಧನ್ಯರು" ಎಂದಿದ್ದಾರೆ.

**ಯಾ ದೋಹನೇऽವಹನನೇ ಮಥನೋಪಲೇಪ –**
**ಪ್ರೇಕ್ಷೇಂಖನಾರ್ಭರುದಿತೋಕ್ಷಣ ಮಾರ್ಜನಾದೌ ।**
**ಗಾಯಂತಿ ಚೈನಮನುರಕ್ತ ಧಿಯೋऽಶ್ರುಕಂಠ್ಯಃ**
**ಧನ್ಯಾಃ ವ್ರಜಸ್ತ್ರಿಯಃ ಉರುಕ್ರಮಚಿತ್ತಯಾನಾಃ ॥** *–ಭಾಗ–10/44/5*

- ***ಹರಿಯ ಮಹಿಮೆ ಇಲ್ಲದ ಹಾಡುಗಳು ನಿಷಿದ್ಧ :***

ಭಗವಂತನ ಮಹಿಮಾದ್ಯೋತಕವಾದ ಹಾಡುಗಳನ್ನೇ ಹಾಡಬೇಕು. ಯಾವುದೇ ಒಬ್ಬ ವ್ಯಕ್ತಿಯನ್ನು ಕುರಿತು ಮಾಡಿರುವ ಹಾಡುಗಳನ್ನು ಎಂದೂ ಹಾಡಬಾರದು. ಸಿನಿಮಾ ಹಾಡುಗಳನ್ನು ಹಾಡಬಾರದು. ಪರಮಪುರುಷನ ನಾಮ ಮಾತ್ರ, ಪರಪುರುಷನ ಹೆಸರನ್ನು ಹೇಳಬಾರದು.

ಉತ್ತಮ ಪತಿಯನ್ನು, ಸೌಭಾಗ್ಯವನ್ನು, ಆಯುರಾರೋಗ್ಯವನ್ನು ಸತ್ಸಂತಾನಾದಿಗಳನ್ನು ಪಡೆದು ಸುಖವಾಗಿದ್ದಾರೆ. ಆದ್ದರಿಂದ ಈ ವ್ರತಗಳನ್ನು ಪದ್ಧತಿಯಂತೆ ಆಚರಿಸುವುದು ಯೋಗ್ಯವಾಗಿದೆ.

* * * * * *



## 2. ಸ್ತ್ರೀ ಧರ್ಮದ ಪ್ರಾಮುಖ್ಯತೆ



- ***ಪತಿವ್ರತೆಯ ಧರ್ಮ :***

ಪತಿವ್ರತೆಯು ತನ್ನ ಪತಿಯಲ್ಲಿ ಭಗವಂತನನ್ನು, ಪತಿಯೊಂದಿಗೆ ನಡೆಸುವ ಸೇವೆ ಭಗವಂತನ ಸಂಕಲ್ಪಾನುಸಾರವೆಂದೂ, ಸ್ತ್ರೀಗೆ ಪತಿಯ ಸಾನ್ನಿಧ್ಯವು ಭಗವಂತನ ಸಾನ್ನಿಧ್ಯವೆಂದೂ, ಪತಿಯ ಅಜ್ಞಾಪಾಲನೆಯೆಂದರೆ ಭಗವಂತನ ಆಜ್ಞಾಪಾಲನೆಯೆಂದೂ, ಪತಿಯ ಪತಿಯನ್ನು ಸಂತೋಷ ಪಡಿಸುವುದೆಂದರೆ ಭಗವಂತನನ್ನು ಪ್ರಸನ್ನೀಕರಿಸಿಕೊಳ್ಳುವ ಸಾಧನವೆಂದೂ ತಿಳಿದು, ಆ ದೇವರ ಪ್ರತಿಮೆಯಂತಿರುವ ಪತಿಯ ಅಂತರ್ಯಾಮಿಗೆ ತನ್ನ ಸರ್ವಸ್ವವನ್ನು ಅರ್ಪಿಸಬೇಕು. ಹೀಗೆ ಯಾರ ಬುದ್ಧಿಯು ಮನಸ್ಸು ಭಗವಂತನಲ್ಲಿಯೆ ಆಸಕ್ತವಾಗಿದೆಯೋ, ಭಗವಂತನಲ್ಲಿಯೇ ನೆಟ್ಟ ದೃಷ್ಟಿಯಿಂದ ಸರ್ವಕಾರ್ಯವನ್ನು ಮಾಡುತ್ತಿರುವರೋ ಅವರು ಭಗವಂತನ ಲೋಕವನ್ನೆ ಸೇರುವರು. *(ಭ.ಗೀ. –5–17)*

- ***ವಿವಾಹ ಭೋಗಕ್ಕಾಗಿ ಮಾತ್ರವಲ್ಲ :***

ಸಾಮಾನ್ಯವಾಗಿ ಭೋಗೇಚ್ಛೆಯೆಂಬುವು ಸರ್ವಪ್ರಾಣಿ ಸಾಧಾರಣವಾಗಿದ್ದರೂ ಪ್ರಾಣಿಗಳಿಗೆ ವಿವೇಕವಿರುವುದಿಲ್ಲ. ಮಾನವನಿಗೆ ಸದಸದ್ ವಿವೇಕವಿರುತ್ತದೆ. ಮಾನವನು ತನ್ನ ವಿವೇಕದಿಂದಾಗಿ ಭಗವದ್ವಿಮುಖವಾದ ವಿಷಯ ಸೇವನೆ ದೋಷವೆಂದು ತಿಳಿಯಬಹುದಾಗಿದೆ. ಮಾನವನ ಯಾವುದೇ ಆಚಾರ–ವಿಚಾರಗಳು ಮುಖ್ಯವಾಗಿ ಭಗವಂತನ ಪ್ರಸನ್ನತೆಯ ದೃಷ್ಟಿವುಳ್ಳದಾಗಿರಬೇಕು.

ಇಂತಹ ದೃಷ್ಟಿಯಿಲ್ಲದ ಮಾನವನ ಜೀವನ ಪಶುಜೀವನಕ್ಕಿಂತ ಭಿನ್ನವಾಗಿರುವುದಿಲ್ಲ. ವಿಶೇಷವೆಂದರೆ – ಪ್ರಾಣಿಗಳು ವಿವೇಕವಿಲ್ಲದೆ ಈ ರೀತಿ ವರ್ತಿಸಿದರೆ, ಮಾನವನು ವಿವೇಕವಿದ್ದೂ ಅದನ್ನು ದುರುಪಯೋಗ ಮಾಡಿಕೊಂಡಿರುತ್ತಾನೆ.

ಸ್ತ್ರೀ–ಪುರುಷರ ಜೀವನದ ಮುಖ್ಯ ಗುರಿ ಭಗವಂತನ ಪ್ರಸನ್ನತೆ ಮೂಲಕ ಮೋಕ್ಷ ಪ್ರಾಪ್ತಿ.

ಸಮಸ್ತ ದುಃಖಾದಿಗಳ – ಯಾವುದೇ ರೀತಿಯ ಚೌಕಟ್ಟಿಗೆ ಒಳಪಡದೆ ಸ್ವರೂಪ ಸುಖಾನುಭವವೇ ಮುಕ್ತಿಯು.

ಇಂತಹ ಮುಕ್ತಿ ಹೊಂದಲು 'ಧರ್ಮವೆ ಸಾಧನ'ವಾಗಿರುತ್ತದೆ.

"ಯಾವುದು ಭಗವತ್ಪ್ರಸಾದ ಹೊಂದಲು ಅನುಕೂಲವೋ ಅದೇ ಧರ್ಮ. ಯಾವುದು ಪ್ರತಿಕೂಲವೋ ಅಂತಹ ಕಲಂಜ ಭಕ್ಷಣಾದಿಗಳು ಅಧರ್ಮ."

ಆದ್ದರಿಂದ ಧರ್ಮವನ್ನು ಆಚರಿಸುತ್ತಾ, ಅಧರ್ಮದಿಂದ ದೂರವಿರುತ್ತಾ ಸ್ವರ್ಣಾಶ್ರಮೋಚಿತ ಕರ್ತವ್ಯವನ್ನು ಭಗವಂತನ ಪ್ರೀತಿಗಾಗಿ ಆಚರಿಸಬೇಕು. ಇದರಿಂದಲೇ ಸಿದ್ಧಿಯು.

**ಸ್ವೇ ಸ್ವೇಕರ್ಮೇಣ್ಯಭಿರತಃ ಸಿದ್ಧಿಂ ವಿಂದತಿ ಮಾನವಃ । – *ಭ.ಗೀ.***

ಇದಕ್ಕಾಗಿ ಧರ್ಮಾದಿ ಚತುರ್ವಿಧ ಪುರುಷಾರ್ಥಗಳಲ್ಲಿ ಧರ್ಮಸಮ್ಮತ ಅರ್ಥವನ್ನು ಸಂಪಾದಿಸುತ್ತಾ ಧರ್ಮಸಮ್ಮತ ಕಾಮೋಪಭೋಗಿಯಾಗಿ, ಮೋಕ್ಷಕ್ಕೆ ವಿರುದ್ಧವಾಗದಂತೆ ಅವುಗಳನ್ನು ಯೋಗ್ಯವಾಗಿ ಬಳಸಬೇಕು.

ಈ ದೃಷ್ಟಿಯಿಂದಲೇ ವರ್ಣಾಶ್ರಮ ಧರ್ಮಗಳು ಕರ್ತವ್ಯಗಳೆಂದು ಉಪದಿಷ್ಟವಾಗಿವೆ.

ನಾರಿಯ ವ್ಯಕ್ತಿಯ ತಾಯಿಯಾಗಿಯೂ, ಸಹಧರ್ಮಿಣಿಯಾಗಿಯೂ, ಸಂರಕ್ಷಣೆ ಮಾಡುವ ಮನೆಯನ್ನು ಬೆಳಗುವ ದೀಪದಂತಿರುವಳು. (ಸ್ಕಾಂದ).

ಪ್ರಸ್ತುತ ಪರಿಸ್ಥಿತಿಯಲ್ಲಿ ಸ್ತ್ರೀಯು ತನಗೆ ಸಂಬಂಧಪಡದ ಕಾರ್ಯಕ್ಷೇತ್ರಗಳಲ್ಲಿ ಆಸಕ್ತಿವಹಿಸುತ್ತಾ ಸ್ವಧರ್ಮಪಾಲನೆ ಮಾಡದೆ ಪರಧರ್ಮಪಾಲನೆ ಮಾಡುತ್ತಾ ***'ಇತೋ ಭ್ರಷ್ಟಾ ಪರತೋ ಭ್ರಷ್ಟಾ'*** ಎನಿಸುತ್ತಿರುವಳು. ಋಷಿಮುನಿಗಳಿಂದ ಉಪದಿಷ್ಟವಾದ ಅನಾದಿ ಸತ್ ಸಂಪ್ರದಾಯ ಪ್ರಾಪ್ತ ಸ್ತ್ರೀ ಧರ್ಮಗಳ

ಶಿಕ್ಷಣವಿಲ್ಲದೆ ಇರುವುದು ಒಂದಾದರೆ, ಅದನ್ನು ಪಡೆಯಬೇಕೆಂಬ ಆಸ್ಥೆಯನ್ನು ಹೊಂದದಿರುವುದೂ ಕಾರಣವಾಗಿದೆ.

ರಥವು ಸುಸೂತ್ರವಾಗಿ ನಡೆಯಲು ಎರಡು ಚಕ್ರಗಳ ಅವಶ್ಯಕತೆಯಿರುವಂತೆ ಸಂಸಾರ ರಥವು ಚೆನ್ನಾಗಿ ನಡೆಯಲು ಪತಿ-ಪತ್ನಿಯರು ತಮ್ಮ ತಮ್ಮ ಕಾರ್ಯಗಳನ್ನು ಮಾಡುವುದುಚಿತವಾಗಿದೆ.

ನಾರಿಯು ಅಸ್ವತಂತ್ರಳೇ? ಎಂಬ ಪ್ರಶ್ನೆಗೆ ಶಾಸ್ತ್ರವು ನರನೂ ಸಹ ಪತ್ನಿಯಿಲ್ಲದಿದ್ದರೆ ಅತಂತ್ರನೆಂದೆ ವರ್ಣಿಸಿದೆ.

ಪತಿಯಿಲ್ಲದ ನಾರಿಯು ಅಸ್ವತಂತ್ರಳೆನಿಸಿದರೆ, ಪತ್ನಿಯಿಲ್ಲದೆ ನರನು ತನ್ನ ಅರ್ಧ ಭಾಗವನ್ನೇ ಕಳೆದುಕೊಂಡಿರುತ್ತಾನೆ.

**ಅರ್ಧಂ ಭಾರ್ಯಾ ಮನುಷ್ಯಸ್ಯ ಭಾರ್ಯಾ ಶ್ರೇಷ್ಠತಮಃ ಸಖಾ ।**
**ನ ಗೃಹೇಣ ಗೃಹಸ್ಥಃ ಸ್ಯಾತ್ ಭಾರ್ಯಯಾ ಕಥ್ಯತೇ ಗೃಹೀ ॥**

ನಾರಿಯನ್ನು ಮನೆಯ ಸರ್ವಬಂಧುಗಳೂ ಚೆನ್ನಾಗಿ ನೋಡಿಕೊಳ್ಳಬೇಕು. ಸ್ತ್ರೀಯು ಶಪಿಸಿದ ಗೃಹವು ಮಾಟಕ್ಕೊಳಗಾದ ಗೃಹದಂತೆ ನಿಸ್ತೇಜ-ವಾಗಿರುವುದು.

**ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ ।**
**ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ॥** – ಮನು–*3/55*

ಸ್ತ್ರೀಯು ತಾನು ಸಂಪಾದಿಸಿದ ಧನಾದಿಗಳಿಂದ ಬದುಕನ್ನು ನಿಭಾಯಿಸುವನು 'ಪುರುಷ' ನೆನಿಸಿಕೊಳ್ಳಲಾರ. ಅವಳ ಆಭರಣಾದಿಗಳಿಂದ ಜೀವಿಸುವವರು ಅಧೋಗತಿ ಹೊಂದುವರೆಂದು ಅಪಸ್ತಂಬರು (9/26) ಹೇಳಿದ್ದಾರೆ.

**ಸ್ತ್ರಿಧನಾನಿ ತು ಯೇ ದೇಹಾದುಪಜೀವಂತಿ ಮಾನವಾಃ ।**
**ನಾರಿಧನಾನಿ ವಸ್ತ್ರಂ ವಾ ತೇ ಪಾಪಾಃ ಯಾಂತ್ಯಧೋಗತಿಮ್ ॥**

- ***ಪತ್ನಿಯಿಲ್ಲದೆ ಮಾಡದ ಶ್ರಾದ್ಧ ವ್ಯರ್ಥ :***

ಪುಣ್ಯವಂತಳಾದ ಸ್ವಧರ್ಮರತಳಾದ ಪತ್ನಿಯು ಇರುವಲ್ಲಿ ಗಂಗಾದಿ ತೀರ್ಥಗಳು ನೆಲೆಸಿರುತ್ತವೆ. ದೇವತೆಗಳು, ಪಿತೃಗಳು ಅವಳಿರುವಲ್ಲಿ ಇರುವರು.

**ತಸ್ಯ ಗೇಹೇ ಸದಾ ದೇವಾಃ ತಿಷ್ಠಂತಿ ಚ ಮಹೌಜಸಃ ।**

ಭಾರ್ಯೆಯನ್ನು ತ್ಯಜಿಸಿ ತಾನೊಬ್ಬನೆ ಮಾಡಿದ ತೀರ್ಥಯಾತ್ರೆ ಹಾಗೂ ತೀರ್ಥ ಶ್ರಾದ್ಧವು ಸಹ ವ್ಯರ್ಥವೆನಿಸುತ್ತದೆ.

**ತಯಾ ವಿನಾ ಯದಾ ತೀರ್ಥೇ ಶ್ರಾದ್ಧದಾನಂ ಕೃತಂ ತ್ವಯಾ ।**
**ತೇನ ದೋಷೇಣ ವೈ ಬದ್ಧಾಸ್ತವ ಪೂರ್ವ ಪಿತಾಮಹಾಃ ॥**

**ಗೃಹಧರ್ಮಂ ಪರಿತ್ಯಜ್ಯ ಕ್ವಾಸ್ತೇ ಧರ್ಮಸ್ಯ ತೇ ಫಲಮ್ ॥** –ವಸಿಷ್ಠಸ್ಮೃತಿ

ಶ್ರಾದ್ಧದಲ್ಲಿ ಪತ್ನಿಯು ತಯಾರಿಸಿದ ಅನ್ನವು ಪಿತೃಗಳಿಗೆ ಪ್ರೀತಿದಾಯಕ–ವಾಗಿರುತ್ತದೆ.

**ಭಾರ್ಯಾ ಪಚತಿ ಚೇದನ್ನಂ ಸ್ವಹಸ್ತೇನಾಮೃತೋಪಮಂ ।**
**ತದನ್ನಮೇವ ಭುಂಜಂತಿ ಸಂತುಷ್ಟಾಶ್ಚ ಭವಂತಿ ಹಿ ॥**

ಪರನಾರೀಗತ ಪುರುಷನಿಗೆ ಮುಂದಿನ ಜನ್ಮದಲ್ಲಿ ಸ್ತ್ರೀತ್ವ ಹಾಗೂ ವೈಧವ್ಯವನ್ನು ಸ್ಕಾಂದ ಹೇಳಿದೆ.

**ಯಃ ಸ್ವ ನಾರೀಂ ಪರಿತ್ಯಜ್ಯ ನಿರ್ದೋಷಾಂ ಕುಲಸಂಭವಾಮ್ ।**
**ಪರದಾರರತೋ ಸ್ಯಾದ್ ಅನ್ಯಾಂ ವಾ ಕುರುತೇ ಸ್ತ್ರಿಯಮ್ ।**
**ಸೋಽನ್ಯ ಜನ್ಮನಿ ದೇವೇಶಿ ಸ್ತ್ರೀ ಭೂತ್ವಾ ವಿಧವಾ ಭವೇತ್ ॥**

– *ಸ್ಕಾಂದ*

ನಾರಿಯಾದರೂ ಪತಿಯನ್ನು ತಿರಸ್ಕರಿಸಿ ಪರಪುರುಷನನ್ನು ಅರಸಿದರೆ ಅವಳು ವಿಧವೆಯಾಗುವಳು.

- ***ವಿವಾಹದ ಅವಶ್ಯಕತೆ :***

ನಮ್ಮ ಹಿಂದೂ ಸಂಪ್ರದಾಯದಲ್ಲಿ ವಿವಾಹವೆಂಬುದು ಸ್ತ್ರೀ–ಪುರುಷರ ಪವಿತ್ರ ಸಂಬಂಧವೆನಿಸಿದೆ. ವಿವಾಹವು ಒಂದು ಸಂಸ್ಕಾರವೆನಿಸಿದ್ದು ಸ್ತ್ರೀ–ಪುರುಷರ ಸಹಜವಾಗಿರುವ ಇಂದ್ರಿಯ ಲಾಲಸೆಯನ್ನು ಹತ್ತಿಕ್ಕುವ ಪ್ರಧಾನ ಮಾರ್ಗವಾಗಿದೆ. ಬೇರೆಯವರ ಧರ್ಮದಲ್ಲಿ ಇದೊಂದು ಶರತ್ತಿನ ಮೇಲೆ ನಡೆಯುತ್ತದೆ. ಶರತ್ತು ಮುಗಿದ ಕೂಡಲೇ ವಿವಾಹವು ವಿಚ್ಛಿನ್ನವಾಗುತ್ತದೆ.

ಭಾರತೀಯ ಸಂಪ್ರದಾಯದಲ್ಲಿ ವಿವಾಹ ಸಂಸ್ಕಾರವು ಧಾರ್ಮಿಕ ಸಂಸ್ಕಾರ–ವೆನಿಸಿದ್ದು, ಅಧ್ಯಾತ್ಮ ಸಾಧನವೆನಿಸಿದೆ. ಇದರಲ್ಲಿ ಶಾಸ್ತ್ರ ಸಮ್ಮತವಾದ ಭೋಗ,

ಪಿತೃಋಣದಿಂದ ಮುಕ್ತಿ, ಸಚ್ಚಾರಿತ್ರ್ಯ, ಪುತ್ರೋತ್ಪಾದನ ಮತ್ತು ಯಜ್ಞ ಯಾಗಾದಿ ಪುಣ್ಯ ಕರ್ಮಗಳನ್ನು ಸಂಪಾದಿಸುವ ಮಾರ್ಗವಾಗಿದೆ. ಶ್ರಾದ್ಧ-ಪಿತೃತರ್ಪಣಾದಿಗಳ ಮೂಲಕ ಧರ್ಮ ಸಂಗ್ರಹವಾಗಿ ಭಗವಂತನ ಪ್ರಸಾದ ಕಡೆಗೆ ಸಂಸಾರ ಬಂಧನದಿಂದ ಬಿಡುಗಡೆಯಾಗಬಹುದಾಗಿದೆ. ಹೀಗಾಗಿ ಹಿಂದೂ ವಿವಾಹವೆಂದರೆ ಸ್ತ್ರೀ-ಪುರುಷರ ಜೀವನ ಮಾತ್ರವಾಗಿರದೆ ನರಕದಿಂದ ವಿಮೋಚನೆ ಗೊಳಿಸುವ ಮಾರ್ಗವಾಗಿದೆ.

ಇದು ಪತ್ನಿಯನ್ನು ದಾಸಿಯಂತೆ ನೋಡುವ ಪದ್ಧತಿಯಾಗಿರದೆ ಜೀವವೊಂದೆ ದೇಹವೆರಡು ಎಂಬಂತೆ ಪ್ರೀತಿ-ವಿಶ್ವಾಸಗಳ ಆಗರವಾಗಿದೆ. ಹೀಗೆ ಶಾಸ್ತ್ರೋಕ್ತ ರೀತಿಯಲ್ಲಿ ಪ್ರೀತಿಯ ಬಾಳ್ವೆ ನಡೆಸಿದ ನಡೆಸುತ್ತಿರುವ ಅನೇಕ ದಂಪತಿಗಳಿದ್ದಾರೆ.

ಪತಿಯಲ್ಲಿ ನಿರತಿಶಯ ಪ್ರೇಮವನ್ನು ತೋರುವವಳೇ ಪತಿವ್ರತೆ. ಇದರಿಂದ ಪುಣ್ಯ ವಿಶೇಷವುಂಟಾಗಿ ಅನ್ಯಲೋಕಗಳಿಗೆ ಹೋಗುವ ಸಾಮರ್ಥ್ಯವನ್ನೂ ಪಡೆಯುತ್ತಿದ್ದ ಸಾವಿತ್ರೀ ಮೊದಲಾದ ಪತಿವ್ರತಾ ಶಿರೋಮಣಿಗಳಿದ್ದರು.

- ವೃದ್ಧನಾದ ಚ್ಯವನನನ್ನು ಯುವಕನನ್ನಾಗಿಸಿದ ಮಹಿಳೆ ಸುಕನ್ಯಾ.
- ಪತಿ ನಕ್ಷತ್ರವಾದರೂ ಬೆಂಬಿಡದೆ ನಕ್ಷತ್ರವಾದ ಅರುಂಧತೀ.
- ಸೂರ್ಯನನ್ನೇ ಸ್ತಬ್ಧಗೊಳಿಸಿದ ಸುವರ್ಚಲೆ.
- ಚಿತ್ರಗುಪ್ತನಾಡಿದ ಮಾತನ್ನು ಕೇಳಿ ಗಂಡನ ಆಯುಷ್ಯ ಹೆಚ್ಚಿಸಿದ ಸುಶೀಲೆ.
- ಜೀವನವನ್ನೇ ಪತಿ-ಪುತ್ರರಿಗಾಗಿ ಸವೆಸಿದ ಮಹಾಮಾತೆ ಕುಂತೀ.
- ಗಂಡನು ನೋಡದ ವಸ್ತುವನ್ನೇ ನೋಡುವುದಿಲ್ಲವೆಂದ ಗಾಂಧಾರೀ.
- ಪತಿಯನ್ನು ಸದುಪದೇಶಗಳಿಂದ ತಿದ್ದಲು ಯತ್ನಿಸಿದ ಮಂಡೋದರೀ.
- ಪತಿಯು ಸಮುದ್ರದಲ್ಲಿ ಮುಳುಗಿದಾಗ ತನ್ನ ತಪಸ್ಸಿನಿಂದಲೇ ಪುನಃ ಪಡೆದುಕೊಂಡ ಸಂರಂಭೆ.
- ಪತಿಯು ಕುಷ್ಠರೋಗ ಪೀಡಿತನಾದರೂ ಶುಶ್ರೂಷೆಗಳಿಂದ ನಿರಂತರ ಪತಿ ಸೇವೆಯಿಂದ ತನ್ನ ಮಂಗಳಸೂತ್ರವನ್ನು ಸುಭದ್ರಗೊಳಿಸಿಕೊಂಡ ಪ್ರಭಾವತಿ.

- ಸರ್ಪದಷ್ಟನಾದ ಪತಿ ಪ್ರಕಾಶನನ್ನು ತನ್ನ ಪಾತಿವ್ರತ್ಯದಿಂದ ಪುನಃ ಸರ್ಪವು ಬಂದು ವಿಷವನ್ನು ಹಿಂತೆಗೆದುಕೊಳ್ಳುವಂತೆ ಮಾಡಿದ ಪುಷ್ಪವತೀ.
- ಜಲಸಮಾಧಿಯಾದ ಚಂದ್ರಾಂಗದನನ್ನು ತನ್ನ ಸೋಮವಾರ ವ್ರತದಿಂದ ಪುನಃ ಬದುಕಿಸಿಕೊಂಡ ಶಿವಭಕ್ತೆ ಸೀಮಂತನೀ.
- ಪತಿಯ ನಿಂದೆಯನ್ನು ತಾಳಲಾರದೆ ತನ್ನ ದೇಹವನ್ನೇ ಬಲಿಕೊಟ್ಟ ದಾಕ್ಷಾಯಣೀ.

ಈ ಮೇಲೆ ಹೇಳಿದ ಪತಿವ್ರತಾ ಶಿರೋಮಣಿಗಳೂ ತಮ್ಮ ಪಾತಿವ್ರತ್ಯದಿಂದ ಉಭಯಕುಲತಾರಿಣಿಯರೆನಿಸಿದರು.

- ***ಪ್ರಾತಃ ಕೃತ್ಯ :***

ಗಂಡನು ಏಳುವುದಕ್ಕಿಂತ ಮೊದಲು ಸ್ತ್ರೀಯು ಏಳಬೇಕು.

ಗಂಡನ ಪಾದ ಮುಟ್ಟಿ ನಮಸ್ಕರಿಸಬೇಕು.

ನಂತರ ರಾತ್ರಿಯಲ್ಲಿ ಧರಿಸಿದ ವಸ್ತ್ರವನ್ನು ಬಿಚ್ಚಿಟ್ಟು ಬೇರೆ ವಸ್ತ್ರ ಉಡಬೇಕು.

**ಉತ್ಥಾಯ ಪಶ್ಚಿಮೇ ಯಾಮೇ ರಾತ್ರಿವಾಸಃ ಪರಿತ್ಯಜೇತ್ ।**

- ***ಪತಿವ್ರತಾ ಲಕ್ಷಣ :***

***ಪತಿ–ವ್ರತೆ ಯಾರು?:***

ಪತಿಯ ಸೇವೆ ಬಿಟ್ಟು ಇನ್ನಿತರ ಸೇವೆಯನ್ನು ಮಾಡದವಳೇ ಪತಿವ್ರತೆ.

ಪತಿ ಹಾಗೂ ಪತಿಯ ತಂದೆ–ತಾಯಿ–ಉತ್ತಮ ಬಂಧುಗಳ ಸೇವೆ ಮೊದಲು ನಂತರ ಇನ್ನಿತರ ಸೇವೆ ಎಂಬ ನಿಯಮವುಳ್ಳವಳು.

ನಾರಿಯು ಯಾವುದೇ ವ್ರತಾದಿಗಳನ್ನು ಮಾಡಿದರೂ ಪತಿಯ ಅನುಮತಿಯಿಂದ ಪತ್ಯಂತರ್ಗತ ವಿಷ್ಣುಪ್ರೀತ್ಯುದ್ಧ್ಯೇಶ್ಯವಾಗಿಯೆ ಮಾಡುವವಳು.

- ***ಪತಿಸೇವೆ–ಹರಿಸೇವೆ :***

ಸ್ತ್ರೀಯರಿಗೆ ಪತಿಯನ್ನು ಬಿಟ್ಟು ಯಜ್ಞಾಚರಣೆಯಾಗಲಿ, ವ್ರತವಾಗಲಿ, ಉಪವಾಸವಾಗಲೀ ಇರುವುದಿಲ್ಲ. ಭಕ್ತಿಯಿಂದ ಪತಿಯ ಸೇವೆಯನ್ನು ಮಾಡಿದರೆ ಸಾಕು. ಸಾಧನೆ ಮುಗಿದಂತೆ.

**ನಾಸ್ತಿ ಸ್ತ್ರೀಣಾಂ ಪೃಥಗ್ ಯಜ್ಞೋ ನ ವ್ರತಂ ನಾಪ್ಯುಪೋಷಣಂ ।**
**ಪತಿಂ ಸಂಸೇವತೇ ಯಾ ತು ಸ್ವರ್ಗೇಲೋಕೇ ಮಹೀಯತೇ ॥**

- ***ಪತಿಯ ಆದೇಶ ಪಾಲನ ಮುಖ್ಯಧರ್ಮ :***

**ಭರ್ತುರಾದೇಶವರ್ತಿನ್ಯಾ ಯಥೋಮಾ ಬಹುಭಿಃ ವ್ರತೈಃ ।**
**ಅಗ್ನಿಶ್ಚ ತೋಷಿತೋಽಮುತ್ರಾ ಸಾ ಸ್ತ್ರೀ ಸೌಭಾಗ್ಯಮಾಪ್ನುಯಾತ್ ॥**

ಪತಿವ್ರತೆಯು ತನ್ನ ಸೌಭಾಗ್ಯಕ್ಕೆ ಕಾರಣವಾದದ್ದು ಶಾಸ್ತ್ರೀಯ ಆದೇಶಗಳನ್ನು ಪಾಲಿಸುವುದು. ಪತಿಯ ಅಂತರ್ಯಾಮಿಯನ್ನು ಅನುಷ್ಠಾನಗಳಿಂದ ಸಂತೋಷಿಸುವಂತೆ ಮಾಡುವುದು.

- ***ಗುಣಹೀನನಾದರೂ ಪತಿಯೇ ಪರದೈವ :***

**ವಿಶೀಲಃ ಕಾಮವೃತ್ತೋ ವಾ ಗುಣೈರ್ವಾ ಪರಿವರ್ಜಿತಃ ।**

ಯಾವ ಸ್ತ್ರೀಯು ಸುಂದರ ವೇಷಧಾರಿಯಾದ ನರನನ್ನು ನೋಡಿ ಅವನನ್ನು ಅಣ್ಣನೆಂದೋ, ತಂದೆಯೆಂದೋ, ಪುತ್ರನೆಂದೋ ಭಾವಿಸುವಳೋ ಅವಳು ಪತಿವ್ರತೆಯು.

**ಸುವೇಷಂ ಯಾ ನರಂ ದೃಷ್ಟ್ವಾ ಭ್ರಾತರಂ ಪಿತರಂ ಸುತಮ್ ।**

* * * * * *



# 3. ಸ್ತ್ರೀಯರ ನಿತ್ಯಕೃತ್ಯ



- ***ಬ್ರಾಹ್ಮಿ ಮುಹೂರ್ತ ಎಂದರೇನು?***

  ರಜನೀ ಪ್ರಾಂತಯಾಮಾರ್ಧಂ ಬ್ರಾಹ್ಮೀಸಮಯ ಉಚ್ಯತೇ ।
  ರಾತ್ರೇಃ ಪಶ್ಚಿಮಯಾಮಸ್ಯ ಮುಹೂರ್ತೇ ಯಃ ತೃತೀಯಕಃ ।
  ಸ ಬ್ರಾಹ್ಮೀ ವಿಜ್ಞೇಯ ವಿಹಿತಃ ಸ ಪ್ರಬೋಧನೇ ॥

  ಸೂರ್ಯಾಸ್ತದಿಂದ ಸೂರ್ಯೋದಯವರೆಗೆ ನಾಲ್ಕು ಯಾಮಗಳಿರುತ್ತವೆ. ಇದರಲ್ಲಿ ಕಡೆಯ ಯಾಮದ 3 ಘಂಟೆಯಲ್ಲಿ ಒಂದೂವರೆ ಗಂಟೆ ಬಿಟ್ಟು ಉಳಿದ ಸಮಯವೆ ಉಷಃಕಾಲವು. ಸುಮಾರು 4–30ರ ಸಮಯವು.

- ***ಬ್ರಾಹ್ಮಿ ಮುಹೂರ್ತದ ವೈಶಿಷ್ಟ್ಯವೇನು?***

  ಬ್ರಾಹ್ಮೀ ಮುಹೂರ್ತವು ದೇವತೆಗಳ ಆಗಮನ ಕಾಲವಾಗಿದ್ದು, ಅವರು ಬಂದಾಗ ನಾವು ಎದ್ದಿದ್ದರೆ ಗೌರವ ನೀಡಿದಂತಾಗುತ್ತದೆ. ಮಲಗಿದ್ದರೆ ಅಗೌರವ ನೀಡಿದಂತಾಗಿ ಶಾಪಕ್ಕೊಳಗಾಗಬೇಕಾಗುತ್ತದೆ. ಆದ್ದರಿಂದ ಎದ್ದು ಅವರ ಅನುಗ್ರಹ ಹೊಂದಬೇಕು. ಆರೋಗ್ಯಕ್ಕೂ ಹಿತಕರ.

  ಬ್ರಾಹ್ಮೇ ಮುಹೂರ್ತೇ ಯಾ ನಿದ್ರಾ ಸಾ ಪುಣ್ಯಕ್ಷಯ ಕಾರಿಣೀ ।
  ತಾಂ ಕರೋತಿ ತು ಯಾ ಮೋಹಾತ್ ಪಾದಕೃಚ್ಛ್ರೇಣ ಶುದ್ಧ್ಯತಿ ॥

- ***ಪತ್ನಿಯು ಪತಿಗಿಂತ ಮೊದಲು ಏಳಬೇಕು. ಆಲಸ್ಯವಿರಬಾರದು–***

  ಉತ್ಥಾಯ ಪಶ್ಚಿಮೇಯಾಮೇ ಭರ್ತುಃ ಪೂರ್ವಮತಂದ್ರಿತಾಃ ।

- ***ಎದ್ದ ಕೂಡಲೇ ಮಾಡಬೇಕಾದದ್ದೇನು?***

ಪ್ರಾತಃ ಕಾಲಾದಿಕಂ ಕರ್ಮ ನಿತ್ಯಂ ನೈಮಿತ್ತಿಕಂ ತಥಾ ।
ವಿಷ್ಣೋರಾರಾಧನಾರ್ಥಾಯ ಕರಿಷ್ಯೇಽಹಂ ತವಾಜ್ಞಯಾ ॥
ಸರ್ವೇಂದ್ರಿಯಾಭಿಮಾನಿ ಶ್ರೀ ಪ್ರಾಣಸಂಸ್ಥೇನ ವಿಷ್ಣುನಾ ।
ಪ್ರೇರಿತಃ ಶ್ರೀಶ ಸಂತುಷ್ಟ್ಯೈ ಕರಿಷ್ಯೇ ಕರ್ಮಚಾಖಿಲಮ್ ॥

- ***ತತ್ವಾಭಿಮಾನಿಗಳ ಪ್ರಾರ್ಥನೆ :***

ಬ್ರಾಹ್ಮೇ ಕಾಲೇ ಸಮುತ್ಥಾಯ ವಿಷ್ಣ್ವಾದೀನ್ ಸಂಸ್ಮರೇತ್ತತಃ ।
ಪ್ರಾತಃ ಸ್ತೋತ್ರಂ ಮಂಗಲಾದಿ ಪಠಿತ್ವಾ ಶೌಚಮಾಚರೇತ್ ॥
*– ಅಂಗಿರಾಸ್ಮೃತಿ*

ನಮೋ ವಃ ತಾತ್ವಿಕಾ ದೇವಾಃ ವಿಷ್ಣುಭಕ್ತಿ ಪರಾಯಣಾಃ ।
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ॥
ಶರೀರಚೇಷ್ಟಾಪಿ ಮಮ ಪ್ರಣಾಮಃ ಸ್ತುತಿಸ್ತು ವಾಗಿಂದ್ರಿಯ ವೃತ್ತಿರಸ್ತು ।
ಸರ್ವಾತ್ಮನೇ ವೃತ್ತಿರನುಸ್ಮೃತಿಸ್ತೇ ಸರ್ವಂ ತ್ವದಾರಾಧನ
ಮೇವ ಭೂಯಾತ್ ॥

- ***ಭೂದೇವಿ ಪ್ರಾರ್ಥನೆ :***

ಸಮುದ್ರವಸನೇ ದೇವಿ ಪರ್ವತಸ್ತನ ಮಂಡಿತೇ ।
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥

- ***ಪ್ರಾತಃ ಕಾಲೀನ ಸ್ತೋತ್ರ ಫಲಃ :***

ಧ್ಯಾಯನ್ ಕೃತೇ, ಯಜನ್‌ಯಜ್ಞೈಃ ತ್ರೇತಾಯಾಂ, ದ್ವಾಪರೇಽರ್ಚಯನ್।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥
*– ವಿಷ್ಣುಪುರಾಣ*

- ***ಮಂಗಳವಸ್ತು ದರ್ಶನಃ :***

ಮೇಲೆ ಹೇಳಿದಂತೆ ದೇವತೆಗಳನ್ನು ಸ್ಮರಿಸಿ, ಕೈಗಳನ್ನು ಪರಸ್ಪರ ಸ್ಪರ್ಶಿಸಿ, ನಂತರ ಮಂಚದಿಂದ ಕೆಳಗಿಳಿದು ಪತಿಯ ಮುಖವನ್ನು ನೋಡಬೇಕು.

- ***ಪತಿಯಲ್ಲಿ ಹರಿಯ ಚಿಂತನೆ :***

**ಯಾ ಪತಿಂ ಹರಿಭಾವೇನ ಭಜೇತ್ ಶ್ರೀರಿವ ತತ್ಪರಾ ।**
**ಹರ್ಯಾತ್ಮನಾ ಹರೋರ್ಲೋಕೇ ಪತ್ಯಾ ಶ್ರೀರಿವ ಮೋದತೇ ॥**
– *ಭಾಗವತ 7*

ಹರಿಯು ಪತಿಯಲ್ಲಿರುವನು, ಅವನ ಪ್ರೀತಿಗಾಗಿ ಮುಂದಿನ ನನ್ನ ಕಾರ್ಯಗಳೆಲ್ಲ ಇರಲಿ ಎಂದು ನಮಸ್ಕರಿಸಬೇಕು.

**ಹರಿರಸ್ಮಿನ್ ಸ್ಥಿತ ಇತಿ ಹರಿಭಾವನಾ ।** – *ಭಾ.ತಾ.*

**ವಿಷ್ಣುಭಾವನಯಾ ಭರ್ತಾ ಸೇವ್ಯಃ ಸ್ತ್ರೀಭಿಃ ಸದೈವ ಹಿ ।**
**ತೇನೈವ ಸಾ ಲಭೇತ್ ಪುಣ್ಯಂ ನಿತ್ಯಾನಿತ್ಯ ಸುಖಪ್ರದಮ್ ॥**
– *ವಿಷ್ಣುರಹಸ್ಯ*

- ***ಪತಿಯ ಪಾದಭಿವಾದನದ ಫಲ :***

**ಭೂ ಪ್ರದಕ್ಷಿಣಷಟ್ಕಂ ಯತ್ ಕಾಶೀಯಾತ್ರಾಯುತಂ ಚ ಯತ್ ।**
**ಸೇತುಸ್ನಾನಶತಂ ಯಚ್ಚ ತತ್ಫಲಂ ಪತಿವಂದನಾತ್ ॥** – *ಅಂಗಿರಾ*

**ಜ್ಞಾನ ವಿಜ್ಞಾನ ಮಾರೋಗ್ಯಂ ರೂಪಂ ಸಂಪತ್ ತಥೈವ ಚ ।**
**ಸೌಭಾಗ್ಯಂ ಚೈವ ನಾರೀಣಾಂ ಪ್ರಾಪ್ಯತೇ ಪತಿಸೇವಯಾ ॥** – *ಕಲ್ಪತರು*

***ದಾಸರ ವಾಕ್ಯ –***

ಪತಿಯ ಪಾದದಲಿ ಸಕಲ ತೀರ್ಥಗಳುಂಟು ।
ಪತಿಯ ಬಳಿಯಲಿ ಸಕಲ ಕ್ಷೇತ್ರಗಳುಂಟು ।
ಮಿತಿಯಿಲ್ಲದಾನಂದತತಿ ಇರುವುದು ॥ – *ಪುರಂದರದಾಸರು*

- ***ಪ್ರಾತಃ ಕಾಲದಲ್ಲಿ ನೋಡಬೇಕಾದ ಮಂಗಳವಸ್ತುಗಳು :***

**ಶ್ರೋತ್ರಿಯಂ ಸುಭಗಾಂ ಗಾಂ ಚ ಅಗ್ನಿ ಮಗ್ನಿಚಿತಂ ತಥಾ ।**
**ಪ್ರಾತರುತ್ಥಾಯ ಯಃ ಪಶ್ಯೇತ್ ಆಪದ್ಭ್ಯೋ ಸ ಪ್ರಮುಚ್ಯತೇ ॥**
ಶ್ರೋತ್ರಿಯ, ಪತಿವ್ರತೆ, ಗೋವು, ಅಗ್ನಿ, ಅಗ್ನಿಹೋತ್ರಿ, ಇವರನ್ನು ಪ್ರಾತಃಕಾಲದಲ್ಲಿ ನೋಡಿದವರು ಸಕಲಾಪತ್ತುಗಳಿಂದ ಮುಕ್ತರಾಗುವರು.

- ***ಪ್ರಾತಃಕಾಲದಲ್ಲಿ ಪತಿವ್ರತೆಯ ದರ್ಶನಃ :***

ಪತ್ನಿಯ ಪತಿಯ ಮುಖವನ್ನು ದರ್ಶಿಸುವಂತೆ, ಪತಿಯೂ ಸಹ ಪತಿವ್ರತೆಯಾದ ಪತ್ನಿಯನ್ನು ನೋಡಬೇಕು. ತನ್ನ ಪತಿವ್ರತೆಯಾದ ಪತ್ನಿಯ ಮುಖಾವಲೋಕನವೂ ವಿಹಿತವೇ ಆಗಿದೆ.

**ಪತಿವ್ರತಾಂತರಂ ಪಶ್ಯೇತ್ ಸ್ವಭಾರ್ಯಾಪ್ರೇಕ್ಷಣಂ ತಥಾ ।**

- ***ನೋಡಬಾರದ ವಸ್ತುಗಳು :***

**ಪಾಪಿಷ್ಠಂ ದುರ್ಭಗಂ ವ್ಯಂಗ್ಯಂ ನಗ್ನಮುತ್ಕೃತ್ತನಾಸಿಕಮ್ ।**
**ಪ್ರಾತರುತ್ಥಾಯ ಯಃ ಪಶ್ಯೇತ್ ತತ್ಕಲೇರುಪಲಕ್ಷಣಮ್ ॥**

*– ಕಾತ್ಯಾಯನಸ್ಮೃತಿ*

ಪಾಪಿ, ದೌರ್ಭಾಗ್ಯವಂತ, ಅಂಗಹೀನ, ನಗ್ನ, ಮೂಗು ಇಲ್ಲದವನು, ಇವರ ದರ್ಶನ ಜಗಳಕ್ಕೆ ಹಾದಿ.

**ಏಕಶಾಯೀ ದ್ವಿಭೋಜೀ ಚ ಷಣ್ಮೂತ್ರೀ ದ್ವಿಪುರೀಷಕಃ ।**
**ಸ್ವಲ್ಪ ಸಂಗಮಕಾರೀ ಚ ಶತವರ್ಷಾಣಿ ಜೀವತಿ ॥**

ಒಂದು ಬಾರಿ ಮಲಗುವುದು, ಎರಡು ಹೊತ್ತು ಮಾತ್ರ ಊಟ ಮಾಡುವುದು, ಎರಡು ಬಾರಿ ಮಲ ವಿಸರ್ಜನೆ ಮಾಡುವವರು, ನಿಯತ ಕಾಲಕ್ಕೆ ಸಂಗ ಮಾಡುವವರು ನೂರು ವರ್ಷ ಜೀವಿಸುವರು.

- ***ಸ್ತ್ರೀಯರ ಶೌಚವಿಧಿಃ :***

ಪತಿವ್ರತಾ ಸ್ತ್ರೀಯರ ಪಾತಿವ್ರತ್ಯ ಧರ್ಮವು ಪೂರ್ಣವಾಗಲು ಶೌಚವೂ ಬೇಕು. ಶೌಚವಿಲ್ಲದೆ ಯಾವುದೇ ಧರ್ಮವನ್ನಾಚರಿಸಲು ಬರುವುದಿಲ್ಲ. ಶೌಚವಿಲ್ಲದೆ ಮಾಡಿದ ಪೂಜಾದಿಗಳು ವ್ಯರ್ಥವಾಗುವುವು. ದೇವತೆಗಳು ಪೂಜೆಯನ್ನು ಸ್ವೀಕರಿಸುವುದಿಲ್ಲ. ರಾಕ್ಷಸರು ಒಯ್ಯುವರು.

**ಶೌಚಾಚಾರವಿಹೀನಸ್ಯ ಸಮಸ್ತಾಃ ನಿಷ್ಫಲಾಃ ಕ್ರಿಯಾಃ ।**
**ದತ್ತಂ ಯಚ್ಛೌಚಹೀನೇನ ನ ತದ್ಗೃಹ್ಣಂತಿ ದೇವತಾಃ ॥**

– ಶೌಚವು ಬಾಹ್ಯ – ಅಂತರವೆಂದು ಎರಡು ವಿಧ.

* ಮಣ್ಣು–ನೀರುಗಳಿಂದ ಕೈಕಾಲುಗಳನ್ನು ತೊಳೆದುಕೊಳ್ಳುವುದು ಬಾಹ್ಯ ಶುದ್ಧಿಯಾಗಿದೆ.

* ಮಲಮೂತ್ರ ವಿಸರ್ಜನೆಯಿಂದ ಒಳಗಿನ ದೇಹವು ಶುದ್ಧವಾಗಿ ಹರಿಯ ಸಾನ್ನಿಧ್ಯವು ಒದಗುತ್ತದೆ.
* ಮಲಮೂತ್ರ ವಿಸರ್ಜನೆ ಮಾಡಿದಾಗ ಮಲಾದಿ ದ್ವಾರಗಳನ್ನು ಕೆಮ್ಮಣ್ಣಿನಿಂದ ಶುದ್ಧಿ ಮಾಡಿಕೊಳ್ಳಬೇಕು. ಬಾಯಿ ಮುಕ್ಕಳಿಸಬೇಕು. ಒಂದು ಬಾರಿ ಗಂಡೂಷ, ಒಂದು ಬಾರಿ ಆಚಮನ ಮಾಡಬೇಕು.

**ತ್ರಿರಾಚಾಮೇತ್ ಅಪಃಪೂರ್ವಂ, ದ್ವಿಪ್ರಮೃಜ್ಯಾತ್ ತತೋ ಮುಖಂ।**
**ಶಾರೀರಂ ಶೌಚಮಿಚ್ಛನ್ ಹಿ ಸ್ತ್ರೀ ಶೂದ್ರಸ್ತು ಸಕೃತ್ ಸಕೃತ್ ॥**

• ***ಮೂತ್ರ–ಪುರೀಷಗಳಿಗೆ ನಿಷೇಧ ಸ್ಥಳ :***

* ಕೊಟ್ಟಿಗೆ, ಉತ್ತ ಹೊಲ, ಜಲ ಮಧ್ಯ, ದೇವಾಲಯ, ನದೀ ತೀರ, ಇವುಗಳಲ್ಲಿ ಮೂತ್ರ ಪುರೀಷ ನಿಷಿದ್ಧವಾಗಿದೆ.
* ನಿಂತು, ನಡೆಯುತ್ತಾ, ಮಾತನಾಡುತ್ತಾ ಮಲಮೂತ್ರ ವಿಸರ್ಜಿಸ–ಬಾರದು.
* ಸೂರ್ಯ, ಚಂದ್ರ, ಅಗ್ನಿ, ಬ್ರಾಹ್ಮಣ, ಗೋವು ಇವುಗಳಿಗಭಿಮುಖನಾಗಿ ವಿಸರ್ಜಿಸಬಾರದು. ಚಪ್ಪಲಿ ಧರಸಿಯೂ ನಿಷಿದ್ಧ.

**ವಾಚಂ ನಿಯಮ್ಯ ಯತ್ನೇನ ಷ್ಠೀವನೋಚ್ಛ್ವಾಸ ವರ್ಜಿತಃ ।**
**ಕುರ್ಯಾನ್ ಮೂತ್ರ ಪುರಿಷೇ ರಾತ್ರೌ ಚೇದ್ ದಕ್ಷಿಣಾಮುಖಃ ॥**
*– ಅಂಗಿರಾಃ*

**ನ ಸೋಪಾನತ್ಕಃ ಮೂತ್ರ ಪುರೀಷೇ ಕುರ್ಯಾತ್ ।**
**ಕೃಷ್ಟೇ, ಪಥ್ಯಪ್ಸು**
**ಅಗ್ನಿಮಾದಿತ್ಯಮಪೋ ಬ್ರಾಹ್ಮಣಂ ಗಾ ದೇವತಾ ವಾಽಭಿಮುಖೋ।**
**ಮೂತ್ರಪುರೀಷಯೋಃ ಕರ್ಮ ವರ್ಜಯೇತ್ ॥** *–ಆಚಾರ ಭೂಷಣ*

• ***ಮಲಾದಿಗಳನ್ನು ನೋಡಬಾರದು :***

**ಪ್ರತ್ಯಾದಿತ್ಯಂ ನ ಮೇಹೇತ ನ ಪಶ್ಯೆದಾತ್ಮನಃ ಮಲಮ್ ।**
**ದೃಷ್ಟ್ವಾ ಸೂರ್ಯಂ ನಿರೀಕ್ಷೇತ ಗಾಮಗ್ನಿಂ ಬ್ರಾಹ್ಮಣಂ ತಥಾ ॥**
*– ಯಮಸ್ಮೃತಿ*

ಪ್ರಕ್ಷಾಲನೆಗೆ ಬಿಸಿನೀರು ಉಪಯೋಗಿಸಬಾರದು – ಅರ್ಶರೋಗ ಮೂಲವ್ಯಾಧಿಗೆ ಕಾರಣವಾಗುತ್ತದೆ.

**ಉಷ್ಣೋದಕೇನ ಗುದಪ್ರಕ್ಷಾಲನಂ ಅರ್ಶಾದ್ಯಾಮಯ ಕರಮ್ ।**

**ಬಾಹ್ಯ ಶೌಚಃ** – ಮಣ್ಣು–ನೀರಿನಿಂದ ಹೊರಗಿನ ಶುದ್ಧಿವೇರ್ಪಡುವುದು.

**ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಭಾವಶುದ್ಧಿಸ್ತಥಾಂತರಮ್ ।**

- ***ಅರ್ಧಶೌಚ ಸ್ತ್ರೀಯರಿಗೆ :***

***ದುರ್ಗಂಧ ಹೋಗುವವರೆಗೆ ಮಾತ್ರ ಶೌಚ –***

ಗಂಡಸರಿಗೆ, ಬ್ರಹ್ಮಚಾರಿ, ಯತಿಗಳಿಗೆ ಶೌಚದಲ್ಲಿ ಸಂಖ್ಯೆಯಲ್ಲಿ ವ್ಯತ್ಯಾಸವಿದೆ. ಆದರೆ ಸ್ತ್ರೀಯರು, ಶೂದ್ರರು ಇವರಿಗೆ ಮಲಾದಿಗಳನ್ನು ವಿಸರ್ಜಿಸಿದಾಗ ದುರ್ಗಂಧ ಹೋಗುವವರೆಗೂ ಮೃಜ್ಜಲಾದಿಗಳಿಂದ ಶುಚಿಯಾಗಬೇಕು. ಸಂಖ್ಯಾ ನಿಯಮವಿರುವುದಿಲ್ಲ. ಹೀಗೆ ಮಣ್ಣಿನಿಂದ ಶುದ್ಧಿ ಮಾಡಿಕೊಳ್ಳುವು–ದರಿಂದ ಸೂಕ್ಷ್ಮವಾದ ಕ್ರಿಮಿಗಳು ನಾಶವಾಗುತ್ತದೆ.

**ಸ್ತ್ರಿ ಶೂದ್ರಾಣಾಮಶಕ್ತಾನಾಂ ಬಾಲಾನಾಂ ನೋಪನೀತಿನಾಂ ।**
**ಗಂಧಲೇಪಕ್ಷಯಕರಂ ಶೌಚಂ ಕುರ್ಯಾನ್ ನ ಸಂಖ್ಯಯಾ ॥**

**ಮೃತ್ತಿಕೆ ಶೌಚ ಗಂಧಪೋಗುವಂತೆ ।** – *ವಿಜಯದಾಸರು*

**ಮೃತಿಕೆ ಶೌಚ ಮಾಡದೆ ಇಪ್ಪಳ ।** – *ಜಗನ್ನಾಥದಾಸರು*

**ಮೃಚ್ಛೌಚಂ ಸ್ತ್ರೀ ಶೂದ್ರಯೋರರ್ಧಶೌಚಂ ಪ್ರೋಕ್ತಂ ಮನೀಷಿಭಿಃ ।**
**ಗಂಧಲೇಪಕ್ಷಯಕರಂ ಶೌಚಂ ಕುರ್ಯಾದತಂದ್ರಿತಃ ॥**

- ***ಗಂಡೂಷಃ – ಬಾಯಿ ಮುಕ್ಕಳಿಸುವಿಕೆ :***

ಮೂತ್ರ ಕಾಲದಲ್ಲಿ ನಾಲ್ಕು ಬಾರಿ, ಮಲ ವಿಸರ್ಜನೆ ಎಂಟು ಬಾರಿ, ಭೋಜನಾ ನಂತರ 16 ಬಾರಿ, ಬಾಯಿಯನ್ನು ಶುದ್ಧ ಜಲದಿಂದ ಮುಕ್ಕಳಿಸಬೇಕು.

**ಮೂತ್ರೋತ್ಸರ್ಗೇ ತು ಚತುರಃ ಪುರೀಷೇ ತ್ವಷ್ಟ ಸಂಖ್ಯಕಾನ್ ।**
**ಕುರ್ಯಾದ್ ದ್ವಾದಶ ಗಂಡೂಷಾನ್ ಭೋಜನೇ ದಂತಧಾವನೇ ॥**

ರಾತ್ರಿಯಲ್ಲಿ ಅರ್ಧ ಶೌಚವಿರುತ್ತದೆ. ಪ್ರಯಾಣದಲ್ಲಿ ಕಾಲು ಭಾಗ ಮಾತ್ರ.

**ದಿವಾಶೌಚಸ್ಯ ನಿಶದ್ಯರ್ಧಂ ಪಥಿ ಪಾದಂ ವಿಧೀಯತೇ ।**

- ***ಉಗುಳುವುದು ಎಡಗಡೆ :***

ನಮ್ಮ ಮುಂದೆ ದೇವತೆಗಳು, ಬಲಭಾಗದಲ್ಲಿ ಪಿತೃದೇವತೆಗಳು, ತನ್ನ ಹಿಂದೆ ಋಷಿಗಳಿರುವರು. ಆದ್ದರಿಂದ ದೈತ್ಯರಿರುವ ಎಡಭಾಗದಲ್ಲಿಯೇ ಗಂಡೂಷದ ನೀರನ್ನು ಉಗುಳಬೇಕು.

**ಪುರತೋ ದೇವತಾ ತಿಷ್ಠೇತ್ ದಕ್ಷಿಣೇ ಪಿತೃದೇವತಾಃ ।**
**ಗಂಡೂಷಕ್ಷೇಪಣಂ ತಸ್ಮಾದ್ ವಾಮಭಾಗೇ ವಿಧಿಯತೇ ॥**

ಎದುರಲ್ಲಿ ದೇವತೆಯು, ಬಲದಲ್ಲಿ ಪಿತೃದೇವತೆಗಳು,

**ಎಡದಲ್ಲಿ ಗಂಡೂಷ ವಿಹಿತವಹುದು । –** *ಪುರಂದರದಾಸರು*

**ಪುರತಃ ಸರ್ವದೇವಾಶ್ಚ ದಕ್ಷಿಣೇ ಪಿತರಸ್ತಥಾ ।**
**ಋಷಯಃ ಪೃಷ್ಠತಃ ಸರ್ವೇ ವಾಮೇ ಗಂಡೂಷಮಾಚರೇತ್ ॥**

*–ಆಶ್ವಲಾಯನ*

- ***ಶೌಚದಲ್ಲಿ ಹಸ್ತ ನಿಯಮ :***

ನಾಭಿಯಿಂದ ಕೆಳಗೆ ಶುದ್ಧಿ ಮಾಡಿಕೊಳ್ಳುವಾಗ ಬಲಗೈಯನ್ನು ಉಪಯೋಗಿಸಬಾರದು. ನಾಭಿಯ ಮೇಲಿನ ಶುದ್ಧಿಯಲ್ಲಿ ಎಡಗೈಯನ್ನು ಉಪಯೋಗಿಸಬಾರದು.

**ಧರ್ಮವಿದ್ ದಕ್ಷಿಣಂ ಹಸ್ತಮಧಃ ಶೌಚೇ ನ ಯೋಜಯೇತ್ ।**
**ತಥಾ ಚ ವಾಮಹಸ್ತೇನ ನಾಭೇರೂರ್ಧ್ವಂ ನ ಶೋಧಯೇತ್ ॥**

*– ದೇವಲ*

- ***ಕಾಲಿನಿಂದ ಕಾಲನ್ನುಜ್ಜಬಾರದು :***

**ಪದಾ ಪಾದಸ್ಯ ಕ್ಷಾಲನಂ ವರ್ಜಯೇದಧಿಷ್ಠಾನಂ ಚ ।**

ಕೈಗಳನ್ನು ಮಣಿಗಂಟಿನವರೆಗೂ ತೊಳೆದುಕೊಳ್ಳಬೇಕು. ಕಾಲುಗಳನ್ನು ಮೊಳಕಾಲುಗಳವರೆಗೂ ತೊಳೆಯಬೇಕು.

**ಆತಲಾತ್ ಪಾದೌ ಶೋಧ್ಯೌ ಗುಲ್ಫಾತ್ ತಥೈವ ಚ ।**
**ಹಸ್ತೌ ತು ಆ ಮಣಿಬಂಧಾಚ್ಚ ಲೇಪನ ಗಂಧಾಪಕರ್ಷಣೌ ॥**–*ಮರೀಚಿಃ*

- ***ಕಾಲು ತೊಳೆಯುವಾಗ ವಿಶೇಷ :***

ಶೌಚ ಕಾಲದಲ್ಲಿ ಮೊದಲು ಎಡಗಾಲು ತೊಳೆದುಕೊಳ್ಳಬೇಕು. ಭೋಜನಾದಿ ಕಾಲದಲ್ಲಿ ಮೊದಲು ಬಲಗಾಲು ನಂತರ ಎಡಗಾಲು ತೊಳೆಯಬೇಕು.

**ಶೌಚಾದ್ ಋತೇ ವಾಮಪಾದೇ ಪೂರ್ವಂ ನ ಕ್ಷಾಲನಂ ಭವೇತ್ ।**
**ಶೌಚೇ ತು ವಾಮ ಪೂರ್ವೆ ಸ್ಯಾದ್ ಅನ್ಯತ್ರ ದಕ್ಷಿಣಂ ಸದಾ ॥**

– *ಆಚಾರಾರ್ಕ*

ಕುಮಾರಿಯರಿಗೆ ಗಂಧಲೇಪಕ್ಷಯ ಪರ್ಯಂತ ಶೌಚವಾದರೆ, ವಿವಾಹಿತಳಿಗೆ ಗೃಹಸ್ಥಾರ್ಧ ಶೌಚವು. ವಿಧವಾ ಸ್ತ್ರೀಯರಿಗೆ ಯತಿಗೆ ಹೇಳಿದ ಅರ್ಧದಷ್ಟು ಶೌಚ.

- ***ದಂತ ಧಾವನಃ – ಹಲ್ಲುಜ್ಜುವುದು :***

ಸ್ತ್ರೀಯರು ದಂತಧಾವನವನ್ನು ಮಾಡಿ ಬಾಹ್ಯ ಶುದ್ಧಿಯನ್ನು ಹೊಂದಬೇಕು. ಹಲ್ಲನ್ನು ಬೆಳಗಲು ಮಾವಿನೆಲೆ, ಬೇವಿನಕಡ್ಡಿ, ಅತ್ತಿಕಡ್ಡಿ ಇವುಗಳು ಶ್ರೇಷ್ಠವಾಗಿವೆ.

ಹಲ್ಲುಜ್ಜುವಾಗ ಹರಿಸ್ಮರಣೆ ನಿರಂತರವಾಗಿರಬೇಕು. ಎಂಟು ಭುಜಗಳುಳ್ಳ ಹರಿಯನ್ನು ಧ್ಯಾನ ಮಾಡಬೇಕು.

**ದಂತಧಾವನಕಾಲೇ ತು ಹರಿರ್ಧ್ಯೇಯೋ ಭುಜಾಷ್ಟಕಃ ।**

ಮುಖವು ದುರ್ಗಂಧಿಯಾದರೆ ದೇಹವು ಅಶುದ್ಧವಾಗಿರುತ್ತದೆ. ದೇಹಶುದ್ಧಿಗಾಗಿ ಹಲ್ಲುಜ್ಜಬೇಕು.

**ಮುಖೇ ಪರ್ಯುಷಿತೇ ನಿತ್ಯಂ ಭದತ್ಯಪ್ರಯತೋ ನರಃ ।**
**ತದಾಽರ್ದ್ರಕಾಷ್ಟಂ ಶುಷ್ಕಂ ವಾ ಭಕ್ಷಯೇದ್ದಂತ ತಧಾವನಮ್ ॥**

– *ಅತ್ರಿಸ್ಮೃತಿ*

ಕೈಕಾಲುಗಳನ್ನೂ, ಬಾಯಿಯನ್ನೂ ತೊಳೆದುಕೊಂಡು, ಎರಡು ಪಾದಗಳನ್ನು

ಕುಕ್ಕುಟಾಸನದಲ್ಲಿರಿಸಿ, ಈಶಾನ್ಯ – ಪೂರ್ವಾಭಿಮುಖನಾಗಿ ಕುಳಿತು, ಬಲಗೈಯನ್ನು ಮೊಳಕಾಲುಗಳ ಮಧ್ಯೆ ಇರಿಸಿ ದಂತಧಾವನ ಮಾಡಬೇಕು.

**ಪ್ರಕ್ಷಾಲ್ಯ ಹಸ್ತೌ ಪಾದೌ ಚ ಮುಖಂ ಚ ಸುಸಮಾಹಿತಃ ।**
**ದಕ್ಷಿಣಂ ಬಾಹುಮುದ್ಧೃತ್ಯ ಕೃತ್ವಾ ಜಾನ್ವಂತರಾ ತತಃ ॥**
**ದಂತಧಾವನ ಮುದ್ಧಿಷ್ಟಂ ಜಿಹ್ವೋಲ್ಲೇಖನಿಕಾ ತಥಾ ॥**

- ***ದಂತಧಾವನದಲ್ಲಿ ಕಾಷ್ಠಗಳು :***

ಮುಳ್ಳುಗಳಲ್ಲಿರುವ ಕಾಷ್ಟ, ಹಾಲು ಇರುವ ಕಾಷ್ಠ, ಕಹಿ, ಖಾರ, ಒಗರು ರಸಗಳಿರುವ ಕಾಷ್ಟ ಪ್ರಶಸ್ತವು.

**ಸರ್ವೇ ಕಂಟಕಿನಃ ಪುಣ್ಯಾಃ ಕ್ಷೀರಿಣಶ್ಚ ಯಶಸ್ವಿನಃ ।**
**ನಿಂಬಶ್ಚ ತಿಕ್ತಕೇ ಶ್ರೇಷ್ಠಃ ಕಾಷಾಯೇ ಖದಿರಸ್ತಥಾ ।**
**ಮಧುಕೇ ಮಧುರೇ ಶ್ರೇಷ್ಠಃ ಕರಂಜಃ ಕಟುಕೇ ತಥಾ ॥**
*– ಲಘು ಹಾರೀತರು*

ಕಹಿಯಲ್ಲಿ ಬೇವು, ಕಾರದಲ್ಲಿ ಖದಿರ, ಸಿಹಿಕಾಷ್ಠದಲ್ಲಿ ಹಿಪ್ಪೆ ಶ್ರೇಷ್ಠ.

ಸ್ತ್ರೀ ಶೂದ್ರರಿಗೆ ನಾಲ್ಕು ಅಂಗುಲ ಕಡ್ಡಿಯಿರಬೇಕು.

**ಚತುರಂಗುಲಮಾನಂ ತು ನಾರೀಣಾಮಿತಿ ನಿಶ್ಚಯಾತ್ ।**
**ಚತುರಂಗುಲಮಾನಂ ತು ನಾರೀಣಾಂ ನಾತ್ರ ಸಂಶಯಃ ॥** – *ಗರ್ಗಸ್ಮೃತಿ*

**ವಿಧವಾ ವಟು ಕನ್ಯಾನಾಂ ನ ಕಾಷ್ಠೈಃ ದಂತಧಾವನಂ ।**

ಕನ್ಯೆ, ರಜಸ್ವಲೆ, ಬಾಣಂತಿ ಮೊದಲಾದವರು ಕಡ್ಡಿಗಳಿಂದ ದಂತಧಾವನ ಮಾಡಬಾರದು. ಬೇರೆ ಮಾವು ಮೊದಲಾದ ಎಲೆಗಳಿಂದ ದಂತಧಾವನ ಮಾಡಬೇಕು.

**ರಜಸ್ವಲಾ ಸೂತಿಕಾ ಚ ನ ಕುರ್ಯಾದ್ ದಂತಧಾವನಮ್ ।**

- ***ದಂತಧಾವನ ಕ್ರಮಃ :***

ಮೊದಲು ನಾಲ್ಕುಂಗುಲ ಅತ್ತಿ, ಅಶ್ವತ್ಥ, ಬೋರೆ, ಕಗ್ಗಲಿ, ಉತ್ತರಾಣಿ, ಮಾವು ಇವುಗಳ ಕಡ್ಡಿಯೊಂದನ್ನು ತೆಗೆದುಕೊಂಡು, ಅದರ ಮುಂಭಾಗವನ್ನು

ಕಲ್ಲಿನಿಂದ ಕುಟ್ಟಿ ಅಥವಾ ಹಲ್ಲಿನಿಂದಲೇ ಅಗೆದು ಕೂರ್ಚದಂತೆ ಮಾಡಬೇಕು. ನಂತರ ಹಲ್ಲುಜ್ಜಬೇಕು.

- ***ದಂತಧಾವನದಲ್ಲಿ ಮೌನ :***

ಸ್ನಾನ, ಭೋಜನ, ಹೋಮ, ದಂತಧಾವನ, ಜಪ, ಮಲೋತ್ಸರ್ಗಗಳಲ್ಲಿ ಮಾತನಾಡಬಾರದು.

**ಸ್ನಾನ ಭೋಜನಯೋಃ ಹೋಮೇ ಜಪೇ ವೈ ದಂತಧಾವನೇ ।**
**ಪುರೀಷೋತ್ಸರ್ಗೇ ಚ ಸಪ್ತ ಮೌನಂ ವಿಧೀಯತೇ ॥**

ಬೆರಳಿನಿಂದ ಹಲ್ಲುಜ್ಜಬಾರದು- ಗೋಮಾಂಸ ಭಕ್ಷಿಸಿದ ದೋಷ-ವುಂಟಾಗುತ್ತದೆ.

**ಬೆರಳಿನಿಂದ ಹಲ್ಲುಜ್ಜುವುದು ಸಲ್ಲ**
**ಪುರಂದರವಿಠಲ ಮೆಚ್ಚನಲ್ಲ ॥** – *ಪುರಂದರದಾಸರು*

**ದಂತಧಾವನ ಮಂಗುಲ್ಯಾ ತುಲ್ಯಂ ಗೋಮಾಂಸಭಕ್ಷಣಮ್ ।**

ಕಡ್ಡಿಯನ್ನು ತೊಳೆದೆ ಹಲ್ಲುಜ್ಜಬೇಕು. ನಂತರ ತೋಳದೇ ಬಿಸಾಡಬೇಕು.

**ಪ್ರಕ್ಷಾಲ್ಯ ಭಕ್ಷಯೇತ್ ಕಾಷ್ಠಂ ಪ್ರಕ್ಷಾಲ್ಯೈವ ತು ಸಂತ್ಯಜೇತ್ ।**

- ***ದಂತಧಾವನ ಕಾಲದ ಶ್ಲೋಕ :***

**ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶು ಧನಾನಿ ಚ ।**
**ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥**

ದಂತಧಾವನ ಕಾಲದಲ್ಲಿ ಭುಜಾಷ್ಟಕ ಹರಿಯ ಚಿಂತನೆ.

---

* ಪ್ರಸ್ತುತ ಬ್ರಷ್‌ಗಳಿಂದಲೂ, ಪೇಷ್ಟಗಳಿಂದಲೂ ಹಲ್ಲುಜ್ಜುವುದು ವಾಡಿಕೆಯಲ್ಲಿದೆ. ಪೇಷ್ಟ್‌ಗಳಲ್ಲಿ ಆರ್ದ್ರವಾಗಿರಲು, ನೊರೆ ಬರಲು ಅನೇಕ ಅಪವಿತ್ರ ವಸ್ತುಗಳನ್ನು ಸೇರಿಸುತ್ತಾರೆ. ಅಶುದ್ಧ ಪದಾರ್ಥವಿರುವ ಕ್ರಿಮಿಗಳಿಂದ ಶುದ್ಧತೆ ಬರುವುದು ಅಸಾಧ್ಯ. ಇವುಗಳ ಉಪಯೋಗದಿಂದ ರೋಗಾದಿಗಳು ಬರುವುವು. ಪ್ರಕೃತಿದತ್ತವಾದದ್ದನ್ನೇ ಉಪಯೋಗಿಸುವುದರಿಂದ ಖರ್ಚು ಕಡಮೆ-ಯಾಗುವುದು. ಆರೋಗ್ಯ ವೃದ್ಧಿಯಾಗುವುದು.
* ಪ್ರತಿದಿವಸವೂ ಉಜ್ಜಿದ ಬ್ರಷ್‌ನಲ್ಲೇ ಉಜ್ಜಬೇಕಾಗುತ್ತದೆ. ಇದರಲ್ಲಿ ಸೂಕ್ಷ್ಮ ಕ್ರಿಮಿಗಳಿದ್ದು ಅನಾರೋಗ್ಯವುಂಟು ಮಾಡುತ್ತವೆ. ಹಲ್ಲುಗಳು ಬೇಗ ಆಯತಪ್ಪುತ್ತವೆ.

**ದಂತಧಾವನ ಕಾಲೆ ತು ಹರಿರ್ಧ್ಯೇಯೋ ಭುಜಾಷ್ಟಕಃ ।**
**ಮುಖ ಪ್ರಕ್ಷಾಲನೆ ಕಾಲೇ ಮಾಧವಂ ಮನಸಾ ಸ್ಮರೇತ್ ॥**

- ***ಇದ್ದಿಲು, ಮರಳು, ಎಲೆಗಳಿಂದ ಹಲ್ಲುಜ್ಜಬಾರದು :***

**ಅಂಗಾರ ವಾಲುಕಾ ಪರ್ಣ ತೃಣ ವಸ್ತ್ರ ನಖಾದಿಭಿಃ ।**
**ನ ಕುರ್ಯಾದ್ ದಂತ ಕಾಷ್ಠಂ ಚ ಶ್ರೀಕಾಮೋ ದೂಷಿತೇ ದಿನೇ ॥**

- ***ತಲೆಯಲ್ಲಿ ಎಣ್ಣೆ ಹಚ್ಚಿಕೊಂಡು ದಂತಧಾವನ ನಿಷಿದ್ಧ :***

**ನ ಕುರ್ಯಾದ್ ದಂತ ಕಾಷ್ಠಂ ಚ ತೈಲೇ ಶಿರಸಿ ಚ ಸ್ಥಿತೇ ।**
**ದಂತಧಾವನ ಮಂಗುಲ್ಯಾ ಪ್ರತ್ಯಕ್ಷಂ ಲವನಂ ತಥಾ ॥**

- ಪತಿತರು, ರಜಸ್ವಲೆಯರು, ಚಂಡಾಲಾದಿಗಳನ್ನು ದಂತಧಾವನ ಕಾಲದಲ್ಲಿ ನೋಡಬಾರದು. ಮಣ್ಣಿನಿಂದ ಹಲ್ಲುಜ್ಜಬಾರದು.
- ಏಕಾದಶಿಯಂದು ಕಡ್ಡಿಗಳಿಂದ ಹಲ್ಲುಜ್ಜದೆ ಬಾಯಿ ಮುಕ್ಕಳಿಸುವುದು. ಏಕಾದಶಿಯಂದು ಈ ಕಡ್ಡಿಗಳಿಂದ ಹಲ್ಲುಜ್ಜಲು ಆದೇಶವಿರುವುದಿಲ್ಲ. ಇದಲ್ಲದೆ ದಂತಕಾಷ್ಠಗಳು ಅಗ್ನಿದೀಪಕಗಳಾವುದರಿಂದ ಶರೀರದಲ್ಲಿ ಜಠರಾಗ್ನಿಯು ಉಜ್ವಲಿಸಿ ಶರೀರದ ಮಾಂಸಾದಿ ಧಾತುಗಳನ್ನೇ ಆಹಾರವಾಗಿ ಮಾಡಿಕೊಳ್ಳುವುದು. ಇದರಿಂದ ಮನುಷ್ಯರು ಕ್ಷೀಣವಾಗುವನು. ಆದ್ದರಿಂದ ಈ ನಿಷೇಧ.
- ಶುಂಠಿ, ಮೆಣಸು, ಹಿಪ್ಪಲಿ, ತೇಜಪತ್ರೆ, ಸೈಂಧವಲವಣಗಳೊಂದಿಗೆ ಸಮವಾಗಿ ಸೇರಿಸಿ ಚೂರ್ಣ ಮಾಡಿ ಜೇನುತುಪ್ಪ ಅಥವಾ ಎಳ್ಳೆಣ್ಣೆಯೊಂದಿಗೆ ಸೇರಿಸಿ ದಂತಚೂರ್ಣವಾಗಿ ಉಪಯೋಗಿಸಿ ಬ್ರಷಿನಿಂದಲೇ ಉಜ್ಜಬಹುದು. ಬ್ರಷ್‌ನ್ನು ಮಾತ್ರ ಹತ್ತು ನಿಮಿಷ ಬಿಸಿ ನೀರಿನಲ್ಲಿ ಇಟ್ಟು ನಂತರ ಉಜ್ಜುವುದು.

---

* ಇದಲ್ಲದೆ ಪೌಡರುಗಳು ಹಲ್ಲು ಉಜ್ಜುವಾಗಲೇ ಅಧಿಕವಾಗಿ ಜೊಲ್ಲು ರಸವನ್ನು ಉತ್ಪತ್ತಿ ಮಾಡುವುದರಿಂದ ಊಟ ಮಾಡಿದ ಮೇಲೆ ಸಾಕಷ್ಟು ಜೊಲ್ಲು ಉಂಟಾಗಲು ಅವಕಾಶವಿಲ್ಲದೆ ಆಹಾರ ಪಚನಕ್ಕೆ ಅವಕಾಶವಿಲ್ಲದಂತಾಗಿ ಜೊಲ್ಲುಂಟಾಗಲು ದಾರಿ ಇಲ್ಲದೆ ಅಜೀರ್ಣ ರೋಗವೂ ಬರುತ್ತದೆ. ಆದ್ದರಿಂದ ಶಾಸ್ತ್ರದಲ್ಲಿ ವಿಹಿತವೂ, ದೇವತಾಪ್ರೀತಿಕರವೂ ಶುದ್ಧವೂ ಆಯುರಾರೋಗ್ಯವಂಟು ಮಾಡುವ ಖಾದಿರಾದಿ ಕಡ್ಡಿಗಳನ್ನೇ ಉಪಯೋಗಿಸುವುದು ಶ್ರೇಷ್ಠ.

- ದುರ್ಗಂಧ ಸಂಪೂರ್ಣ ನಾಶಕ್ಕಾಗಿ ಮೃತ್ತಿಕೆಯನ್ನು ಬಳಸಬೇಕೆಂದು ವಿಧಿಸಿದೆ. ನಿಯತ ಮೃತ್ತಿಕಾ ಶೌಚದ ಸಂಖ್ಯೆಯಷ್ಟು ಮಾಡಿದಾಗೂ ದುರ್ಗಂಧ ಉಳಿಯುವುದಾದರೆ ದುರ್ಗಂಧ ಹೋಗುವವರೆಗೂ ಮೃತ್ತಿಕಾ ಶೌಚ ಮಾಡಿಕೊಳ್ಳಬೇಕು ಎಂದಿದೆ ಶಾಸ್ತ್ರ. ಸಾಬೂನಿನಿಂದ ದುರ್ಗಂಧ ಹೋಗುವುದಿಲ್ಲ. ಬದಲಾಗಿ ಸೋಪಿನ ವಾಸನೆಯಿಂದಾಗಿ ದುರ್ಗಂಧವಿದ್ದರೂ ಹೋಯಿತೆಂದು ಭ್ರಮಿಸುತ್ತೇವೆ. ಪ್ರಾಣಿಗಳ ಕೊಬ್ಬನ್ನು ಸೇರಿಸಿರುವ ಸಾಬೂನಿನಿಂದ ಶುದ್ಧಿ ಮಾಡಿಕೊಂಡರೂ ಶುದ್ಧಿಯಾಗ–ಲಾರದು.

- ದಂತಕಾಷ್ಠ ಅಲಭ್ಯವಾದಾಗ ಏಕಾದಶ್ಯಾದಿ ನಿಷಿದ್ಧ ದಿವಸಗಳಲ್ಲಿ ನೀರಿನಿಂದ ಹನ್ನೆರಡು ಬಾರಿ ಗಂಡೂಷ ಮಾಡಿದರೆ ಸಾಕು.

**ಅಲಾಭೇ ದಂತಕಾಷ್ಠಸ್ಯ ಪ್ರತಿಷಿದ್ಧದಿನೇ ತಥಾ ।**
**ಅಪಾಂ ದ್ವಾದಶಗಂಡೂಷೈಃ ವಿದಧ್ಯಾತ್ ದಂತಧಾವನಮ್ ॥**

ಮಾವು, ನಿಂಬ, ಅಪಾಮಾರ್ಗ, ಬಿಲ್ವ, ಬದರೀ ಎಲೆಗಳಿಂದಲೂ ಆಯುರ್ವೇದ ಪ್ರಸಿದ್ಧವಾದ ಸುಗಂಧ ಚೂರ್ಣದಿಂದಲೂ ಹಲ್ಲುಜ್ಜಬಹುದು.

**ವರ್ಜಿತೇ ದಿವಸೇ ದೇವಿ ಗಂಡೂಷಾಶ್ಚೈವ ಷೋಡಶ ।**
**ತತ್ತತ್ಪತ್ರೈಃ ಸುಗಂಧೈರ್ವಾ ಕಾರಯೇತ್ ದಂತಧಾವನಂ ॥**

- ***ದಂತಧಾವನ ಕಾಲಃ :***

ಸೂರ್ಯೋದಯಕ್ಕೆ ಪೂರ್ವದಲ್ಲಿಯೇ ನಾರಿಯು ದಂತಧಾವನ ಮಾಡಬೇಕು. ಮಧ್ಯಾಹ್ನದಲ್ಲಿ ದಂತಧಾವನ ನಿಷಿದ್ಧವು.

**ಮಧ್ಯಾಹ್ನ ಸ್ನಾನ ವೇಲಾಯಾಂ ಯಃ ಕುರ್ಯಾದ್ ದಂತಧಾವನಂ।**
**ನಿರಾಶಾಃ ತಸ್ಯ ಗಚ್ಛಂತಿ ದೇವತಾಃ ಪಿತರಸ್ತಥಾ ॥** – *ಯಮಸ್ಮೃತಿ*

- ***ನಾಲಿಗೆ ಶುದ್ಧಿ :***

ಬೇವು, ಜಾಲಿ, ಕಗ್ಗಲಿ, ಹೊಂಗೆ, ಹೊನ್ನೆ ಇವುಗಳ ಕಡ್ಡಿಯನ್ನು ಹಲ್ಲುಗಳಿಂದಲೇ ಜಗಿದು, ಬ್ರಷಿನಂತೆ ಮಾಡಿ ಒಸಡುಗಳಿಗೆ ತಗಲದಂತೆ ಪ್ರತಿಯೊಂದು ಹಲ್ಲನ್ನು ನಿಧಾನವಾಗಿ ಶುದ್ಧಿ ಮಾಡಬೇಕು. ಅದೇ ಕಡ್ಡಿಯನ್ನೇ ಎರಡು ಭಾಗ ಮಾಡಿ ಬಿಲ್ಲಿನಂತೆ ಬಗ್ಗಿಸಿ ನಾಲಿಗೆಯನ್ನು ಶುದ್ಧಿ ಮಾಡಿ

ಬಾಯಿ ಮುಕ್ಕಳಿಸಬೇಕು. ಹೀಗೆ ನಾಲಿಗೆ ಶುದ್ಧಿಯಿಂದ ನಾಲಿಗೆಯು ಕಠಿಣತೆ ದೂರವಾಗಿ ರಸಗ್ರಹಣ ಶಕ್ತಿಯು ವೃದ್ಧಿಯಾಗುತ್ತದೆ.

- ***ಸ್ನಾನ :***

ಸ್ತ್ರೀಯರ ಶೌಚದ ಪ್ರಧಾನಾಂಗವಾದ ಸ್ನಾನದಿಂದ ಸಂತೋಷ, ತುಷ್ಟಿ, ದುಸ್ವಪ್ನನಾಶ, ಜಠರಾಗ್ನಿವೃದ್ಧಿ, ಸೌಭಾಗ್ಯವು ವೃದ್ಧಿಯಾಗುವುವು. ಆರೋಗ್ಯ, ದೈಹಿಕ ಬಲವೃದ್ಧಿ ಮೊದಲಾದವುಗಳನ್ನು ಪಡೆಯಬಹುದು. ಪಾಪ ಪರಿಹಾರವು. ಸ್ನಾನ ಮಾಡದೇ ಸರ್ವಕಾರ್ಯವು ವ್ಯರ್ಥವಾಗುತ್ತದೆ.

**ಸ್ನಾನಂ ಪವಿತ್ರಂ ಆಯುಷ್ಯಂ ಶ್ರಮಸ್ವೇದಮಲಾಪಹಂ ।**
**ಶರೀರ ಬಲಸಂಧಾನಂ ಕೇಶಂ ಪರಮ್ ॥**

**ವಹ್ನಿವೃದ್ಧಿಕರಂ ಸ್ನಾನಂ ಸ್ನಾನಂ ಸೌಭಾಗ್ಯವರ್ಧನಂ ।**
**ಸ್ನಾನೇಮಾತ್ರೇಣ ತುಷ್ಯಂತಿ ಪಾಪಂ ತಸ್ಯ ನ ವಿದ್ಯತೆ ॥**

ನವದ್ವಾರಗಳಿಂದ ಕೂಡಿರುವ ಈ ದೇಹವು ವಸಾ, ಶುಕ್ರ, ರಕ್ತ, ಮಜ್ಜಾ, ಮೂತ್ರ, ಮಲ, ಕರ್ಣಮಲ, ನಖ, ಶ್ಲೇಷ್ಮ, ಕಣ್ಣೀರು, ಜಿಬರು, ಬೆವರು ಹನ್ನೆರಡು ಮಲಗಳನ್ನು ಸುರಿಸುತ್ತಿರುತ್ತದೆ. ಇದರ ನಿವೃತ್ತಿಗಾಗಿ ಸ್ನಾನವು ವಿಹಿತವಾಗಿದೆ.

**ನವದ್ವಾರಮಿದಂ ದೇಹಂ ಸ್ರವತ್ಯಹರಹರ್ಮಲಂ ।**
**ತುಚ್ಛುದ್ಧ್ಯರ್ಥಂ ಪ್ರಕರ್ತವ್ಯಂ ಮಲಸ್ನಾನಂ ದಿನೇ ದಿನೇ ॥**
**ವಸಾಶುಕ್ರಂ ಅಸೃಜಮಜ್ಜ ಮೂತ್ರವಿಟ್ ಕರ್ಣವಿಣ್ಣಖಾಃ ।**
**ಶ್ಲೇಷ್ಮಾಶ್ರು ದೂಷಿಕಾಸ್ವೇದೋ ದ್ವಾದಶೈತೇ ನೃಣಾಂ ಮಲಾಃ ॥**

- ***ಸ್ನಾನ ಕಾಲ ಮೀರಬಾರದು :***

ಸ್ನಾನವನ್ನು ಸರಿಯಾದ ಸಮಯಕ್ಕೆ ಮಾಡಬೇಕು. ಕಾಲಮೀರಿ ಮಾಡಬಾರದು ಹಾಗೂ ನಿತ್ಯವೂ ಸ್ನಾನ ಮಾಡಲೇಬೇಕು.

***ಹೊತ್ತಾಗಿ ಮೈತೊಳೆದ – ನಾರಿಯರೆಳೆದು ನರಕದೊಳಿಡು*** ಎಂದಿದ್ದಾರೆ ಜಗನ್ನಾಥದಾಸರು.

ನಿತ್ಯದಲ್ಲಿ ಸ್ನಾನ ಮಾಡದೆ ಸುಮ್ಮನೆ ಇರುವವಳ ಎಳೆದು ತನ್ನಿ ಎಂದು ಯಮನು ಘೋಷಿಸಿರುವನು.

- ***ತಣ್ಣೀರು ಸ್ನಾನ :***

ಬಿಸಿನೀರಿಗಿಂತ ತಣ್ಣೀರು ಸ್ನಾನವೇ ಶ್ರೇಷ್ಠ. ಅಂಗಾಂಗಗಳಲ್ಲಿ ತಡೆದಿರುವ ರಕ್ತವನ್ನು ವೇಗವಾಗಿ ಅಂಗಾಂಗಗಳಲ್ಲಿ ಹರಿಸಲು, ಕಾಂತಿಗಾಗಿ, ದುಃಸ್ವಪ್ನ ನಾಶಕ್ಕಾಗಿ, ದಣಿವು ನಿವಾರಣೆ, ಹೊಸಚೈತನ್ಯ ಲಾಭಕ್ಕಾಗಿಯೂ ಪ್ರಾತಃ ಸ್ನಾನ ವಿಹಿತವಾಗಿದೆ ಎಂದು ಸ್ಕಾಂದ- ಕಾಶೀಖಂಡದಲ್ಲಿ ಹೇಳಲಾಗಿದೆ.

**ಅಶುಚಿತ್ವಂ ಚ ದುಃಸ್ವಪ್ನಮಲಕ್ಷ್ಮೀಂ ಗ್ಲಾನಿಮೇವ ಚ ।**
**ಪ್ರಾತಃ ಸ್ನಾನಂ ಹರೇತ್ ತಾಪಂ ತುಷ್ಟಿಂ ಪುಷ್ಟಿಂ ಪ್ರಯಚ್ಛತಿ ॥**

ಸ್ತ್ರೀಯರು ತಣ್ಣೀರಿನ ಸ್ನಾನವನ್ನೇ ಮಾಡಬೇಕು. ಇದರಿಂದ ಆರೋಗ್ಯ ವೃದ್ಧಿಸುವುದು.

**ವಹ್ನಿತಪ್ತಾಂಬುನಾ ಸ್ನಾತೋ ಫಲಂ ನಾಪ್ನೋತಿ ಸ್ನಾನಜಂ ।**

ಬಿಸಿನೀರಿನ ಸ್ನಾನವನ್ನು ಮಾಡಿದರೆ ಸ್ನಾನದ ಫಲವನ್ನು ಹೊಂದುವುದಿಲ್ಲ.

ಅನಾರೋಗ್ಯ ನಿಮಿತ್ತಿಕವಾಗಿ ಶೀತಲ ಜಲದಿಂದ ಸ್ನಾನ ಮಾಡಲು ಅನಾನುಕೂಲವಾದಾಗ ಮಾತ್ರ ಬಿಸಿನೀರಿನಿಂದ ಸ್ನಾನ ಮಾಡಬಹುದು.

**ಅಥ ಶೀತಲಜಲಾಶಕ್ತೌ ಕುರ್ಯಾದೇವ ಉಷ್ಣವಾರಿಣಾ ।**
**ಶೀತಾಸ್ವಪ್ಸು ನಿಷಿಚ್ಯೋಷ್ಣಂ ವಾರಿ ಪಶ್ಚಾಚ್ಚಶೀತಲಂ ॥**

ಗಂಗಾಳಕ್ಕೆ ಮೊದಲು ತಣ್ಣೀರು ಹಾಕಿ, ಬಿಸಿನೀರನ್ನು ಹಾಕಿ ಪುನಃ ಮೇಲೆ ತಣ್ಣೀರನ್ನು ಹಾಕಿ ತುಲಸೀ ಮೃತ್ತಿಕೆ ಹಾಕಿ ಸ್ನಾನ ಮಾಡಬೇಕು.

**ಶಿರಸಾ ತು ವಿನಾ ಸ್ನಾತೋ ನ ಸ್ನಾತಃ ಪರಿಕೀರ್ತಿತಃ ।**
**ಅಶಿರಸ್ಕಂ ತು ಯತ್ ಸ್ನಾನಂ - ಕುಲಸ್ತ್ರೀಣಾಂ ನ ದೋಷಭಾಕ್ ।**
**ಅಶಿರಸ್ಕಂ ಭವೇತ್ ಸ್ನಾನಂ ಸ್ನಾನಾಶಕ್ತೌ ತು ಕರ್ಮಿಣಾಂ ॥**

ಬಿಸಿನೀರು ನಾಭಿಯಿಂದ ಕೆಳಗೆ ಮಾತ್ರ ಬಲದಾಯಕವಾಗಿದೆ. ಹೃದಯ, ತಲೆಯ ಮೇಲೆ ಬಿದ್ದ ಬಿಸಿ ನೀರು ಬಲಹಾರಕವು ಕಣ್ಣು, ಕೂದಲುಗಳಿಗೆ ದೋಷಕಾರವು.

ಬಾಯಿ ಮುಕ್ಕಳಿಸಬೇಕು. ಹೀಗೆ ನಾಲಿಗೆ ಶುದ್ಧಿಯಿಂದ ನಾಲಿಗೆಯು ಕಠಿಣತೆ ದೂರವಾಗಿ ರಸಗ್ರಹಣ ಶಕ್ತಿಯು ವೃದ್ಧಿಯಾಗುತ್ತದೆ.

- ***ಸ್ನಾನ :***

ಸ್ತ್ರೀಯರ ಶೌಚದ ಪ್ರಧಾನಾಂಗವಾದ ಸ್ನಾನದಿಂದ ಸಂತೋಷ, ತುಷ್ಟಿ, ದುಸ್ವಪ್ನನಾಶ, ಜಠರಾಗ್ನಿವೃದ್ಧಿ, ಸೌಭಾಗ್ಯವು ವೃದ್ಧಿಯಾಗುವುವು. ಆರೋಗ್ಯ, ದೈಹಿಕ ಬಲವೃದ್ಧಿ ಮೊದಲಾದವುಗಳನ್ನು ಪಡೆಯಬಹುದು. ಪಾಪ ಪರಿಹಾರವು. ಸ್ನಾನ ಮಾಡದೇ ಸರ್ವಕಾರ್ಯವು ವ್ಯರ್ಥವಾಗುತ್ತದೆ.

**ಸ್ನಾನಂ ಪವಿತ್ರಂ ಆಯುಷ್ಯಂ ಶ್ರಮಸ್ವೇದಮಲಾಪಹಂ ।**
**ಶರೀರ ಬಲಸಂಧಾನಂ ಕೇಶಂ ಪರಮ್ ॥**

**ವಹ್ನಿವೃದ್ಧಿಕರಂ ಸ್ನಾನಂ ಸ್ನಾನಂ ಸೌಭಾಗ್ಯವರ್ಧನಂ ।**
**ಸ್ನಾನೇಮಾತ್ರೇಣ ತುಷ್ಯಂತಿ ಪಾಪಂ ತಸ್ಯ ನ ವಿದ್ಯತೆ ॥**

ನವದ್ವಾರಗಳಿಂದ ಕೂಡಿರುವ ಈ ದೇಹವು ವಸಾ, ಶುಕ್ರ, ರಕ್ತ, ಮಜ್ಜಾ, ಮೂತ್ರ, ಮಲ, ಕರ್ಣಮಲ, ನಖ, ಶ್ಲೇಷ್ಮ, ಕಣ್ಣೀರು, ಜಿಬರು, ಬೆವರು ಹನ್ನೆರಡು ಮಲಗಳನ್ನು ಸುರಿಸುತ್ತಿರುತ್ತದೆ. ಇದರ ನಿವೃತ್ತಿಗಾಗಿ ಸ್ನಾನವು ವಿಹಿತವಾಗಿದೆ.

**ನವದ್ವಾರಮಿದಂ ದೇಹಂ ಸ್ರವತ್ಯಹರಹರ್ಮಲಂ ।**
**ತುಚ್ಛುದ್ಧ್ಯರ್ಥಂ ಪ್ರಕರ್ತವ್ಯಂ ಮಲಸ್ನಾನಂ ದಿನೇ ದಿನೇ ॥**
**ವಸಾಶುಕ್ರಂ ಅಸೃಜಮಜ್ಜ ಮೂತ್ರವಿಟ್ ಕರ್ಣವಿಣ್ಣಖಾಃ ।**
**ಶ್ಲೇಷ್ಮಾಶ್ರು ದೂಷಿಕಾಸ್ವೇದೋ ದ್ವಾದಶೈತೇ ನೃಣಾಂ ಮಲಾಃ ॥**

- ***ಸ್ನಾನ ಕಾಲ ಮೀರಬಾರದು :***

ಸ್ನಾನವನ್ನು ಸರಿಯಾದ ಸಮಯಕ್ಕೆ ಮಾಡಬೇಕು. ಕಾಲಮೀರಿ ಮಾಡಬಾರದು ಹಾಗೂ ನಿತ್ಯವೂ ಸ್ನಾನ ಮಾಡಲೇಬೇಕು.

***ಹೊತ್ತಾಗಿ ಮೈತೊಳೆದ – ನಾರಿಯರೆಳೆದು ನರಕದೊಳಿಡು*** ಎಂದಿದ್ದಾರೆ ಜಗನ್ನಾಥದಾಸರು.

ನಿತ್ಯದಲ್ಲಿ ಸ್ನಾನ ಮಾಡದೆ ಸುಮ್ಮನೆ ಇರುವವಳ ಎಳೆದು ತನ್ನಿ ಎಂದು ಯಮನು ಘೋಷಿಸಿರುವನು.

- ***ತಣ್ಣೀರು ಸ್ನಾನ :***

ಬಿಸಿನೀರಿಗಿಂತ ತಣ್ಣೀರು ಸ್ನಾನವೇ ಶ್ರೇಷ್ಠ. ಅಂಗಾಂಗಗಳಲ್ಲಿ ತಡೆದಿರುವ ರಕ್ತವನ್ನು ವೇಗವಾಗಿ ಅಂಗಾಂಗಗಳಲ್ಲಿ ಹರಿಸಲು, ಕಾಂತಿಗಾಗಿ, ದುಃಸ್ವಪ್ನ ನಾಶಕ್ಕಾಗಿ, ದಣಿವು ನಿವಾರಣೆ, ಹೊಸಚೈತನ್ಯ ಲಾಭಕ್ಕಾಗಿಯೂ ಪ್ರಾತಃ ಸ್ನಾನ ವಿಹಿತವಾಗಿದೆ ಎಂದು ಸ್ಕಾಂದ– ಕಾಶೀಖಂಡದಲ್ಲಿ ಹೇಳಲಾಗಿದೆ.

**ಅಶುಚಿತ್ವಂ ಚ ದುಃಸ್ವಪ್ನಮಲಕ್ಷ್ಮೀಂ ಗ್ಲಾನಿಮೇವ ಚ ।**
**ಪ್ರಾತಃ ಸ್ನಾನಂ ಹರೇತ್ ತಾಪಂ ತುಷ್ಟಿಂ ಪುಷ್ಟಿಂ ಪ್ರಯಚ್ಛತಿ ॥**

ಸ್ತ್ರೀಯರು ತಣ್ಣೀರಿನ ಸ್ನಾನವನ್ನೇ ಮಾಡಬೇಕು. ಇದರಿಂದ ಆರೋಗ್ಯ ವೃದ್ಧಿಸುವುದು.

**ವಹ್ನಿತಪ್ತಾಂಬುನಾ ಸ್ನಾತೋ ಫಲಂ ನಾಪ್ನೋತಿ ಸ್ನಾನಜಂ ।**

ಬಿಸಿನೀರಿನ ಸ್ನಾನವನ್ನು ಮಾಡಿದರೆ ಸ್ನಾನದ ಫಲವನ್ನು ಹೊಂದುವುದಿಲ್ಲ.

ಅನಾರೋಗ್ಯ ನಿಮಿತ್ತಿಕವಾಗಿ ಶೀತಲ ಜಲದಿಂದ ಸ್ನಾನ ಮಾಡಲು ಅನಾನುಕೂಲವಾದಾಗ ಮಾತ್ರ ಬಿಸಿನೀರಿನಿಂದ ಸ್ನಾನ ಮಾಡಬಹುದು.

**ಅಥ ಶೀತಲಜಲಾಶಕ್ತೌ ಕುರ್ಯಾದೇವ ಉಷ್ಣವಾರಿಣಾ ।**
**ಶೀತಾಸ್ವಪ್ಸು ನಿಷಿಚ್ಯೋಷ್ಣಂ ವಾರಿ ಪಶ್ಚಾಚ್ಚಶೀತಲಂ ॥**

ಗಂಗಾಳಕ್ಕೆ ಮೊದಲು ತಣ್ಣೀರು ಹಾಕಿ, ಬಿಸಿನೀರನ್ನು ಹಾಕಿ ಪುನಃ ಮೇಲೆ ತಣ್ಣೀರನ್ನು ಹಾಕಿ ತುಲಸೀ ಮೃತ್ತಿಕೆ ಹಾಕಿ ಸ್ನಾನ ಮಾಡಬೇಕು.

**ಶಿರಸಾ ತು ವಿನಾ ಸ್ನಾತೋ ನ ಸ್ನಾತಃ ಪರಿಕೀರ್ತಿತಃ ।**
**ಅಶಿರಸ್ಕಂ ತು ಯತ್ ಸ್ನಾನಂ – ಕುಲಸ್ತ್ರೀಣಾಂ ನ ದೋಷಭಾಕ್ ।**
**ಅಶಿರಸ್ಕಂ ಭವೇತ್ ಸ್ನಾನಂ ಸ್ನಾನಾಶಕ್ತೌ ತು ಕರ್ಮಿಣಾಂ ॥**

ಬಿಸಿನೀರು ನಾಭಿಯಿಂದ ಕೆಳಗೆ ಮಾತ್ರ ಬಲದಾಯಕವಾಗಿದೆ. ಹೃದಯ, ತಲೆಯ ಮೇಲೆ ಬಿದ್ದ ಬಿಸಿ ನೀರು ಬಲಹಾರಕವು ಕಣ್ಣು, ಕೂದಲುಗಳಿಗೆ ದೋಷಕಾರವು.

**ಉಷ್ಣಾಂಬುನಾಧಃ ಕಾಯಸ್ಯ ಪರಿಷೇಕೋ ಬಲಾವಹಃ ।**
**ತೇನೈವ ಚೋತ್ತಮಾಂಗಸ್ಯ ಬಲಹೃತ್ ಕೇಶಚಕ್ಷುಷೋಃ ॥**

ಸಾಮಾನ್ಯವಾಗಿ ತಲೆಯ ಮೇಲೆ ಸ್ನಾನ ಮಾಡದಿದ್ದರೆ ಸ್ನಾನ ಮಾಡಿದಂತಾಗುವುದಿಲ್ಲ. ಆದರೆ ಈ ನಿಯಮ ಸ್ತ್ರೀಯರಿಗೆ ಬಿಟ್ಟು ಬೇರೆಯವರಿಗೆ ಅನ್ವಯವಾಗುತ್ತದೆ. ಸ್ತ್ರೀಯರು ಮನೆಯಲ್ಲಿ ಕಂಠಸ್ನಾನ ಮಾತ್ರ ಮಾಡಬೇಕು.

ಸ್ನಾನಕ್ಕೆ ಹೋಗುವಾಗ ತುಲಸೀಮೃತ್ತಿಕೆ, ನೆಲ್ಲಿಚೆಟ್ಟು, ಗೋಮಯ, ಕಡಲೇಹಿಟ್ಟು, ಕಸ್ತೂರಿ, ಅರಿಷಿಣ, ಕಚೋರ ಇವುಗಳನ್ನು ತೆಗೆದುಕೊಂಡು ಹೋಗಬೇಕು. ಯಾವುದು ಲಭ್ಯವಿದೆಯೇ ಅದನ್ನಾದರೂ ತೆಗೆದುಕೊಂಡು ಹೋಗಬೇಕು.

- **ಮೃತ್ತಿಕಾ ಸ್ನಾನ :**

**ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ**
**ಮೃತ್ತಿಕೆ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ।**

ಎಂದು ವರಾಹರೂಪಿಯನ್ನು ಧ್ಯಾನಿಸಿ ಮೃತ್ತಿಕೆಯನ್ನು ಲೇಪಿಸಿ ಸ್ನಾನ ಮಾಡಿದಾಗ ನಾಮಸ್ಮರಣೆಯಿಂದ ಪಾಪಪರಿಹಾರವಾಗುವುದು.

- ನೆಲ್ಲಿಚೆಟ್ಟಿನಿಂದ ಸ್ನಾನ ಮಾಡಿದರೆ ವಯಸ್ಸಾದರೂ ಮೈಸುಕ್ಕುಗಟ್ಟುವುದಿಲ್ಲ. ಕೂದಲು ಉದರುವುದಿಲ್ಲ, ಬಿಳಿಯಾಗುವುದಿಲ್ಲ.
- ಗೋಮಯದಿಂದ ಅನೇಕ ಕ್ರಿಮಿಗಳ ನಾಶವಾಗುತ್ತದೆ. ಹಿಟ್ಟು ಕೊಳೆಯನ್ನು ಹೋಗಲಾಡಿಸಿ ಚರ್ಮರೋಗ ಪರಿಹಾರ ಹಾಗೂ ಮಾರ್ದವತೆಯನ್ನು ನೀಡುತ್ತದೆ.
- ಕಸ್ತೂರಿ–ಅರಿಷಿಣದಿಂದ ವಿಷಕ್ರಿಮಿಗಳ ನಾಶವಾಗಿ ಶರೀರ ಕಾಂತಿ, ಚರ್ಮರೋಗ ಪರಿಹಾರವಾಗುತ್ತದೆ.
- ಕಚೋರದಿಂದ ಮೈ ದುರ್ವಾಸನೆ ಹೋಗುತ್ತದೆ.
- ಸೋಪನ್ನು ಹಾಕಬಾರದು. ಸೋಪಿನಲ್ಲಿ ಪ್ರಾಣಿಗಳ ಮೇದಸ್ಸು ಇರುತ್ತದೆ. ಸೀಗೆಪುಡಿ, ಕಳ್ಳೆಹಿಟ್ಟು ಇವುಗಳನ್ನು ಉಪಯೋಗಿಸಬಹುದು.

- ***ನದೀ ಸ್ನಾನ :***

ವೈಶಾಖಮಾಸ, ಮಾಘಮಾಸ, ಕಾರ್ತೀಕ ಮಾಸಗಳಲ್ಲಿ ನದೀ, ತಟಾಗ, ಸರೋವರಾದಿಗಳಲ್ಲಿ ತಲೆಯ ಮೇಲೆ ಮುಳುಗಿ ಸ್ನಾನ ಮಾಡಬೇಕು. ಸ್ತ್ರೀಯರಿಗೆ ಕಂಠಸ್ನಾನವೆಂಬ ನಿಯಮ ವೈಶಾಖಾದಿ ನದ್ಯಾದಿ ಸ್ನಾನಗಳಲ್ಲಿ ಇರುವುದಿಲ್ಲ.

ನದ್ಯಾದಿಗಳಲ್ಲಿ ಹಾಗೂ ಚಂಡಾಲ ಸ್ಪರ್ಶವಾದಾಗ, ರಜಸ್ವಲೆಯರಾದಾಗ, ಸೂತಕದಲ್ಲಿ, ತೀರ್ಥಕ್ಷೇತ್ರಗಳಿಗೆ ಹೋಗಿದ್ದಾಗ ತಲೆಯ ಮೇಲೆ ಸ್ನಾನ ಮಾಡಲೇಬೇಕು.

ಸ್ತ್ರೀಯರು ಕುಳಿತುಕೊಂಡೇ, ತಂಬಿಗೆಯಿಂದಲೆ ಸ್ನಾನ ಮಾಡಬೇಕು. ಆದರೆ ನದ್ಯಾದಿಗಳಲ್ಲಿ ಮುಳುಗಿ ಸ್ನಾನ ಮಾಡಿದರೆ ದೋಷವಿಲ್ಲ. ಗ್ರಹಣಾದಿ-ಗಳಲ್ಲಿಯೂ ತಲೆಯ ಮೇಲೆ ಸ್ನಾನ ವಿಹಿತವಾಗಿದೆ.

- ***ಸ್ನಾನದ ಅವಶ್ಯಕತೆ :***

**ನೈರ್ಮಲ್ಯಂ ಭಾವಶುದ್ಧಿಶ್ಚ ವಿನಾ ಸ್ನಾನಂ ನ ಜಾಯತೇ ।**
**ತಸ್ಮಾನ್ ಮನೋ ವಿಶುದ್ಧ್ಯರ್ಥಂ ಸ್ನಾನಮಾದೌ ವಿಧೀಯತೆ ॥**

– *ಪದ್ಮಪುರಾಣ*

ಶರೀರ ಮತ್ತು ಮನಸ್ಸಿನ ಶುದ್ಧಿಗಾಗಿ ಸ್ನಾನವನ್ನು ಮಾಡಲೇಬೇಕು.

**ಸ್ನಾತ್ವಾ ದ್ವಿವಾರಂ ಶಿವಮರ್ಚಯಿಷ್ಯನ್ ಭುಂಜೀತ ನೋ ಚೇನ್ನರಕಂ ಪ್ರಯಾತಿ ।**

ದಿನಂಪ್ರತಿ ಎರಡು ಬಾರಿ ಸ್ನಾನ ಮಾಡಿ ಭಗವಂತನನ್ನು ಅರ್ಚಿಸಿದವನು ನರಕವನ್ನು ನೋಡಲಾರನು(ಳು).

**ರಚೋದೋಷನಿಮಿತ್ತಾದಿ ಸ್ನಾನಂ ಸಶಿರಸಂ ಭವೇತ್ ।** – *ಆಚಾರರತ್ನ*

ನಮ್ಮ ದೇಹದಲ್ಲಿ ಎರಡೂವರೆ ಕೋಟಿ ರಂಧ್ರಗಳಿದ್ದು ಈ ರಂಧ್ರಗಳ ಮೂಲಕ ಶರೀರದೊಳಗೆ ಸೇರಿಕೊಂಡಿರುವ ದೂಷಿತ ಮಲವು ಬೆವರಿನ ರೂಪದಲ್ಲಿ ಹೊರಗೆ ಬರುತ್ತದೆ. ಈ ಬೆವರನ್ನು ತೊಳೆಯುವುದಕ್ಕಾಗಿ ಸ್ನಾನವು ಅತ್ಯಾವಶ್ಯಕವಾಗಿದೆ. ಸ್ನಾನ ಮಾಡುವುದರಿಂದ ಈ ಮಲವು ಹೊರಗೆ ಹೋಗಿ ಶುದ್ಧವಾದ ವಾಯುವು ದೇಹದಲ್ಲಿ ಪ್ರವೇಶಿಸಲು

ಅನುಕೂಲವಾಗಿ ಆರೋಗ್ಯ ವೃದ್ಧಿಸುತ್ತದೆ. ಕೊಳೆಯು ಹೋಗದಿದ್ದರೆ ಅನೇಕ ಚರ್ಮರೋಗಗಳುಂಟಾಗುತ್ತದೆ.

**ಪವಿತ್ರಂ ವೃಷ್ಯಮಾಯುಷ್ಯಂ ಶ್ರಮಸ್ವೇದ ಮಲಾಪಹಂ ।**
**ಶರೀರಬಲ ಸಂಧಾನಂ ಸ್ನಾನಮೋಜಸ್ಕರಂ ಪರಂ ॥**

ಪ್ರಾತಃ ಸ್ನಾನವು ಆಯುಷ್ಯವರ್ಧಕ, ಶರೀರಗಳಿಗೆ ಬಲವನ್ನುಂಟು ಮಾಡಿ ಕಾಂತಿ ನೀಡುತ್ತದೆ ಎಂದು ಚರಕ ಸಂಹಿತೆ ತಿಳಿಸಿದೆ. ದಣಿವೂ ಹೋಗುತ್ತದೆ.

- ***ಸ್ನಾನಾನಂತರ ಮುಟ್ಟಬಾರದ ವಸ್ತುಗಳು :***

ಸ್ತ್ರೀಯರು ಸ್ನಾನ ಮಾಡಿದ ಮೇಲೆ ದೀಪದ ಕಪ್ಪನ್ನು ತೆಗೆಯುವುದು ನಿಷಿದ್ಧವಾಗಿದೆ. ಈ ಮೊದಲೇ ದೀಪವನ್ನು ಶುದ್ಧೀಕರಿಸಿ ದೀಪವನ್ನು ಹಚ್ಚಿರಬೇಕು.

ಮೊರವನ್ನು, ಹಾಸಿಗೆಯನ್ನು, ಚಪ್ಪಲಿಯನ್ನು, ಪೊರಕೆ ಇವುಗಳನ್ನು ಮುಟ್ಟಬಾರದು. ಮುಟ್ಟಿದರೆ ಪುನಃ ಸ್ನಾನ ಮಾಡಬೇಕು.

**ದೀಪಂ ಶೂರ್ಪಂ ತಥಾ ಶಯ್ಯಾಂ ಪಾದತ್ರಾಣಂ ಚ ಮಾರ್ಜನೀಂ ।**
**ಸ್ನಾನಾಂತೇ ಸಂಸ್ಪೃಶೇದ್ ಯಸ್ತು ಪುನಃ ಸ್ನಾನೇನ ಶುದ್ಧ್ಯತಿ ॥**
*– ಆಚಾರರತ್ನ*

- ***ತೈಲಾಭ್ಯಂಜನ :***

ತೈಲಾಭ್ಯಂಗವು ವಾತ–ಪಿತ್ತ–ವಾಯುವಿನ ವಿಕೋಪವನ್ನು ತಡೆಯುತ್ತದೆ. ವಾಯುದೇವರು ಕೋಪಗೊಂಡರೆ ಕಣ್ಣು, ಕಿವಿ ಮೊದಲಾದ ಇಂದ್ರಿಯಗಳ ರಸ, ರಕ್ತಮಾಂಸಾದಿ ಧಾತುಗಳು, ಮಲಮೂತ್ರ, ಬೆವರುಗಳ ಕಾರ್ಯಗಳು ನಿಂತು ಹೋಗುವುವು. ವಾಯುವು ಪ್ರಾಣಾಪಾನಾದಿ ರೂಪಗಳಿಂದ ಶರೀರದ ನಾನಾ ಭಾಗಗಳಲ್ಲಿದ್ದು ಶರೀರದ ಸಂಪೂರ್ಣ ಕಾರ್ಯವನ್ನು ಮಾಡುತ್ತಿರುವನು. ಆದ್ದರಿಂದ ವಾಯು ವಿಕೋಪವಾಗದಿರಲು ಒಂದು ಉಪಾಯವೆಂದರೆ "ಅಭ್ಯಂಜನ".

**ರಕ್ಷಣೀಯಂ ಗಜೇ ಪಿತ್ತಂ ಶ್ಲೇಷ್ಮಂ ವಾಜಿಷು ಸರ್ವದಾ ।**
**ಪವನೋಽಯಂ ಮನುಷ್ಯೇಷು ಪ್ರಾಯೋ ರಕ್ಷ್ಯೇಚ್ಚ ಸರ್ವದಾ ॥**

ಆನೆಯು ರೋಗ ವಿಮುಕ್ತವಾಗಲು ಪಿತ್ತಶಾಂತಿಯು, ಕುದುರೆಯು ರೋಗ ಮುಕ್ತವಾಗಲು ಶ್ಲೇಷ್ಮವು, ಮನುಷ್ಯರು ನಿರೋಗಿಗಳಾಗಿರಲು ವಾಯು ಪ್ರಕೋಪವನ್ನು ತಡೆಯಬೇಕು. ಅಭ್ಯಂಜನದಿಂದ ಇದು ಸಾಧ್ಯವು. ಇದನ್ನೇ ಚರಕ ಮಹರ್ಷಿಯು ಹೀಗೆ ಹೇಳಿರುವನು.

**ಸ್ಪರ್ಶನೇಽಭ್ಯಧಿಕೋ ವಾಯುಃ ಸ್ಪರ್ಶನಂ ಚ ತ್ವಗಾಶ್ರಿತಂ ।**
**ತ್ವಚಶ್ಚ ಪರಮೋಽಭ್ಯಂಗಃ ತಸ್ಮಾತ್ ತಂ ಶೀಲಯೇನ್ನರಃ ॥**

*– ಚರಕ. ಅ.5*

ವಾಯುವು ಸಮಾನವಸ್ಥೆಯಲ್ಲಿ ಇರಬೇಕೆಂಬ ಸಲುವಾಗಿಯೇ ತೈಲಾಭ್ಯಂಗವು. ತೈಲಾಭ್ಯಂಗದಿಂದ ಮೆದುಳಿನ ಶಕ್ತಿಯು ವೃದ್ಧಿಯಾಗಿ ಕೂದಲು ದೀರ್ಘವಾಗಿಯೂ ಭ್ರಮರದಂತೆ ಕಪ್ಪಾಗಿಯೂ ಬೆಳೆದು ಕೂದಲು ಉದುರುವುದು, ಮೊದಲಾದ ರೋಗಗಳನ್ನು ಪರಿಹರಿಸುವುದು.

- ***ಅಭ್ಯಂಜನದ ದಿವಸಗಳು :***

ಸ್ತ್ರೀಯರಿಗೆ ಮಂಗಳವಾರ ಹಾಗೂ ಶುಕ್ರವಾರ ಅಭ್ಯಂಜನಕ್ಕೆ ಒಳ್ಳೆಯ ದಿವಸಗಳಾಗಿದ್ದು, ಅಂದು ಮಾಡುವ ಅಭ್ಯಂಜನವು ಕಣ್ಣುರೋಗ, ಕಿವಿಯ ನೋವು, ಕಜ್ಜಿ, ತುರಿ ಮೊದಲಾದ ರೋಗಗಳನ್ನು ತಡೆಯುತ್ತದೆ.

ಅಭ್ಯಂಜನದಲ್ಲಿ ತಿಥಿಗಿಂತಲೂ ವಾರವೆ ಬಲಿಷ್ಠವಾಗಿದ್ದು ನಿಷಿದ್ಧ ವಾರಗಳಲ್ಲಿ ಅಭ್ಯಂಜನ ಮಾಡಬಾರದು.

**ತಿಥಿವಾರ ಸಮಾಯೋಗೇ ಬಲೀಯಾನ್ ವಾರ ಇಷ್ಯತೇ ।**
**ನಾಭ್ಯಾಂಗಮರ್ಕೇ ನ ಚ ಭೂಮಿಪುತ್ರೇ ಕ್ಷೌರಂ ।**
**ರವಿಸ್ತಾಪಂ ಕಾಂತಿಂ ವಿತರತಿ ಶಶಿ, ಭೂಮಿತನಯೋ ಮೃತಿಂ ।**
**ಲಕ್ಷ್ಮೀಂ ಚಾಂದ್ರಿಃ ಸುರಪತಿಗುರುಃ ವಿತ್ತಹರಣಂ ॥**

* ಭಾನುವಾರ –ಸಂತಾಪ, ಧನನಾಶ (ಸ್ತ್ರೀಪುರುಷರಿಬ್ಬರಿಗೂ)
* ಸೋಮವಾರ – ಪುರುಷ, ಸ್ತ್ರೀಯರಿಗೆ ದೇಹಕಾಂತಿ
* ಮಂಗಳವಾರ – ಸ್ತ್ರೀಯರಿಗೆ ದೇಹಕಾಂತಿ, ಪುರುಷರಿಗೆ ಮೃತಿ.
* ಬುಧವಾರ – ಪುರುಷರಿಗೆ ಸಂಪತ್ತು, ಸ್ತ್ರೀಯರಿಗೆ ಸಂಪತ್ತಿನ ನಾಶ.

* ಗುರುವಾರ – ಸ್ತ್ರೀ ಪುರುಷರಿಬ್ಬರಿಗೂ ಧನಹಾನಿ.
* ಶುಕ್ರವಾರ–ಸ್ತ್ರೀಯರಿಗೆ ಸಂತಾನಾದಿಗಳು, ಪುರುಷರಿಗೆ ಸಂತಾನ ನಾಶ.
* ಶನಿವಾರ – ಪುರುಷರಿಗೆ ಸಂತಾನಶಕ್ತಿ, ಸ್ತ್ರೀಯರಿಗೆ ಸಂತಾನ ನಾಶ.

ಭಾನುವಾರವು ಅಭ್ಯಂಜನಕ್ಕೆ ಸರ್ವಥಾ ನಿಷಿದ್ಧ. ಬ್ರಾಹ್ಮಣರಿಗೆ ಮಾತ್ರ ಪರವಾಗಿಲ್ಲವೆಂದು ಕೆಲವರ ಅಭಿಪ್ರಾಯ. ಅಂತು, ರವಿವಾರ, ಗುರುವಾರಗಳಲ್ಲಿ ಸ್ತ್ರೀ ಪುರುಷರಿಬ್ಬರಿಗೂ ನಿಷಿದ್ಧವಾಗಿದೆ.

**ಇಂದೋಃ ಬುಧಸ್ಯ ಸೌರೇಶ್ಚ ವಾರೇಽಭ್ಯಂಗಂ ಪ್ರಶಸ್ಯತೇ ।**

ಸೋಮವಾರ, ಬುಧವಾರ, ಶನಿವಾರ ಪುರುಷರಿಗೆ, ಮಂಗಳ ಹಾಗೂ ಶುಕ್ರವಾರ ಸ್ತ್ರೀಯರಿಗೂ ಪ್ರಶಸ್ತವಾಗಿದೆ. ಗುರುವಾರ ಹಾಗೂ ಭಾನುವಾರ ಸ್ತ್ರೀಪುರುಷರಿಬ್ಬರಿಗೂ ಮಹಾಹಾನಿ.

- ***ಅಭ್ಯಂಜನಕ್ಕೆ ಎಣ್ಣೆ :***

ಅಭ್ಯಂಜನಕ್ಕೆ ಶುದ್ಧವಾದ ಹರಳೆಣ್ಣೆ, ಭೃಂಗಾಮಲಕ, ಬ್ರಾಹ್ಮೀ, ಕೊಬ್ಬರಿ ಎಣ್ಣೆ ಒಳ್ಳೆಯದು. ಸುಗಂಧ ತೈಲವನ್ನು ಉಪಯೋಗಿಸಬಾರದು. ಹೇರ್ ಆಯಿಲ್‌ನ್ನು ವಾಸನೆ ತೆಗೆದ ಸೀಮೆಎಣ್ಣೆಯಿಂದ ತಯಾರಿಸುವರು. ಇದರಿಂದ ಕಪ್ಪಾಗಿರುವ ಕೂದಲು ಬೇಗನೆ ಬಿಳಿಯಾಗುವುವು. ಸೆಂಟ್‌ಗಳಲ್ಲಿಯೂ ಸ್ಪಿರಿಟ್ ಇರುವುದರಿಂದ ಬೇಗನೆ ಬಿಳಿಯಾಗಿ ಮೆದುಳಿನ ಬಲವೂ ಕಡಿಮೆಯಾಗುತ್ತದೆ.

- ***ಪ್ರಶಸ್ತ ತಿಥಿಗಳು :***

**ದ್ವಿತೀಯಾದ್ಯಾಃ ಚತಸ್ರಶ್ಚ ಪ್ರಶಸ್ತಾ ಸಪ್ತಮೀ ತಥಾ ।**
**ದಶಮೀ ದ್ವಾದಶೀ ಚೈವ ತ್ರಯೋದಶ್ಯಪಿ ಚ ಸ್ಮೃತಾಃ ॥**

ತಿಥಿಗಳಲ್ಲಿ ಬಿದಿಗೆ, ತದಿಗೆ, ಚೌತಿ, ಪಂಚಮೀ, ಸಪ್ತಮೀ, ತ್ರಯೋದಶೀ ತಿಥಿಗಳು ಅಭ್ಯಂಜನಕ್ಕೆ ಪ್ರಶಸ್ತ.

ಶೂದ್ರರಿಗೆ ತ್ರಯೋದಶೀ ನಿಷಿದ್ಧ.

ದಶಮೀ ಹಾಗೂ ದ್ವಾದಶೀ ಮಕ್ಕಳಿಗೆ ಪ್ರಶಸ್ತವಾಗಿದೆ.

ಜನ್ಮನಕ್ಷತ್ರದಂದು, ಏಕಾದಶ್ಯಾದಿ ದಿನತ್ರಯಗಳು, ಪಾಡ್ಯ, ಷಷ್ಠೀ, ಚತುರ್ದಶಿ ಇವುಗಳು ನಿಷಿದ್ಧ ತಿಥಿಗಳು.

**ಉತ್ತರಾ ಫಲ್ಗುಣೀ ಜ್ಯೇಷ್ಠಾ ಶ್ರವಣಾರ್ದ್ರಾಸು ರಾತ್ರಿಷು ।**
**ಅಭ್ಯಂಗಸ್ನಾಪನಂ ಧೀಮಾನ್ ಸುಖಾರ್ಥೀ ವರ್ಜಯೇತ್ ಸದಾ ॥**

ನಕ್ಷತ್ರಗಳಲ್ಲಿ ಉತ್ತರಾ, ಜ್ಯೇಷ್ಠಾ, ಶ್ರವಣ, ಆರಿದ್ರಾ ಈ ನಕ್ಷತ್ರಗಳಿರುವ ದಿನದಂದು ಅಭ್ಯಂಜನ ಮಾಡಬಾರದು.

- ***ದ್ವಾದಶೀ ಸರ್ವಥಾ ನಿಷಿದ್ಧ :***

ದಶಮೀ, ಏಕಾದಶೀ, ದ್ವಾದಶಿಗಳು ಅಭ್ಯಂಜನಾದಿ ಅಲಂಕಾರಗಳಿಗೆ ವರ್ಜ್ಯವಾದುವು. ದಶಮಿಯಂದು – ದ್ವಾದಶಿಯಂದು ಮಕ್ಕಳ ಹೊರತಾಗಿ ಇತರರು ಅಭ್ಯಂಜನ ಮಾಡಬಾರದು. ಹರಿದಿವಸಗಳಾದ್ದರಿಂದಲೇ ಈ ನಿಷೇಧ. ದ್ವಾದಶಿಯಂದು ಬಿಡಬೇಕಾದದ್ದು ತಾಂಬೂಲ, ಎರಡು ಹೊತ್ತು ಭೋಜನ, ದಿವಾಸ್ವಾಪ (ಹಗಲು ನಿದ್ರೆ), ಪರಭೋಜನ, ಮೈಥುನ, ಮೊದಲಾದ ಎಂಟು ವಿಷಯಗಳಲ್ಲಿ ಅಭ್ಯಂಜನವೂ ನಿಷಿದ್ಧ.

ನಿಷಿದ್ಧ ತಿಥಿವಾರಗಳಲ್ಲಿ ಕಲಿಭಾರ್ಯೆಯು ಎಣ್ಣೆಯಲ್ಲಿರುವಳು. ಉಳಿದ ದಿವಸಗಳಲ್ಲಿ ಲಕ್ಷ್ಮೀದೇವಿಯಿರುವಳು. ಹೀಗೆಯೇ ನೀರಿನಲ್ಲಿ ಗಂಗೆಯು ಇರುವಳು. ನಿಷಿದ್ಧ ವಾರಗಳಲ್ಲಿ ಮಾಡಿದ ಅಭ್ಯಂಜನವು ದೇಹದ ಕಾಂತಿಯನ್ನು ಹಾಳು ಮಾಡುವುದು.

ಆದರೆ ಮಗು, ವೃದ್ಧ, ರೋಗಿಗಳಾದ ಸ್ತ್ರೀ ಪುರುಷರಿಗೆ ಈ ನಿಷೇಧ–ವಿರುವುದಿಲ್ಲ.

**ಶಿಶುರೋಗಾರ್ತವೃದ್ಧಾನಾಂ ಯಥಾಕಾಲಂ ಶರೀರಿಣಾಂ ।**
**ಅಭ್ಯಂಗೋಷ್ಣೋದಕ ಸ್ನಾನಂ ನೈವ ದೋಷಾವಹಂ ಸ್ಮೃತಂ ॥**

- ***ನಿಷಿದ್ಧ ದಿವಸಗಳಲ್ಲಿ ಅಭ್ಯಂಜನ :***

ಕೆಲವು ದಿವಸಗಳಲ್ಲಿ ನಿಷಿದ್ಧ ತಿಥಿವಾರಗಳಲ್ಲಿಯೂ ಅಭ್ಯಂಜನ ಮಾಡಲೇಬೇಕಾದ ಸಂದರ್ಭಗಳು ಬರುತ್ತವೆ. ಇಂತಹ ಸಂದರ್ಭಗಳಲ್ಲಿ ಅಭ್ಯಂಜನ ಮಾಡಲು ಉಪಾಯವನ್ನು ಹುಡುಕಿದ್ದಾರೆ. ಎಣ್ಣೆಗೆ ಬೇರೆ ವಸ್ತುಗಳು ಸೇರಿಸಿದಾಗ ಅಲಕ್ಷ್ಮಿಯು ದೂರವಾಗುವಳು. ಆ ವಸ್ತುಗಳು ಯಾವುವು ಎಂದರೆ –

**ಅದ್ಭಿರ್ವಾ ಆಜ್ಯೇನ ವಾ ಯುಕ್ತಂ ನ ತೈಲಂ ದೋಷಕೃದ್ ಭವೇತ್।**
**ತಿಥಿನಕ್ಷತ್ರ ವಾರೇಷು ನಿಷಿದ್ಧೇಷ್ವಪಿ ಚ ರಾತ್ರಿಷು ॥**
**ನ ದೋಷಃ ಪಕ್ವತೈಲೇಷು ಸ್ನಾನಾಭ್ಯಂಗೇಷು ನಿತ್ಯಶಃ ॥**

* ಎಣ್ಣೆಯನ್ನು ಬಿಸಿ ಮಾಡುವುದು.
* ಎಣ್ಣೆಗೆ ನೀರನ್ನೋ, ತುಪ್ಪವನ್ನೋ ಸೇರಿಸುವುದು.
* ಲಕ್ಷ್ಮೀ ಸನ್ನಿಧಾನವಿರುವ ತುಲಸಿಯನ್ನು ಎಣ್ಣೆಗೆ ಸೇರಿಸುವುದು.
* ಗಂಧ, ಪುಷ್ಪಾದಿಗಳಿಂದ ಸುವಾಸಿತಗೊಳಿಸಿದ ಎಣ್ಣೆ.

**ರವೌಪುಷ್ಪಂ, ಗುರೌ ದುರ್ವಾಂ ಶುಕ್ರೇ ಗೋಮಯೇನ ವಾ ।**
**ಭೌಮೇ ಭೂಮಿಂ ಚ ನಿಕ್ಷಿಪ್ಯ ತೈಲಾಭ್ಯಂಗಂ ಸಮಾಚರೇತ್ ॥**

* ರವಿವಾರ – ಅಭ್ಯಂಜನ ಮಾಡಲೇಬೇಕಾದಾಗ ಎಣ್ಣೆಯಲ್ಲಿ ಪುಷ್ಪವನ್ನು ಹಾಕಿ ಸ್ನಾನ ಮಾಡಬಹುದು.
* ಗುರುವಾರ – ದೂರ್ವೆಯನ್ನು (ಗರಿಕೆಹುಲ್ಲು) ಹಾಕುವುದು.
* ಶುಕ್ರವಾರ – ನಿಷಿದ್ಧ ತಿಥಿಯಿರುವಾಗ ಸ್ತ್ರೀಯರು ಎಣ್ಣೆಯಲ್ಲಿ ಗೋಮಯವನ್ನು ಹಾಕಿ ಅಭ್ಯಂಜನ ಮಾಡುವುದು.
* ಮಂಗಳವಾರ – (ಪುರುಷರಿಗೆ) ಮೃತ್ತಿಕೆಯನ್ನು ಹಾಕಿ ಸ್ನಾನ ಮಾಡಬಹುದು.

**ದ್ರವ್ಯಾಂತರಂಯುತಂ ತೈಲಂ ನ ದುಷ್ಯೇದ್ ಗ್ರಹಣಂ ವಿನಾ ॥**
**ತುಲಸೀದಲ ಸಂಮಿಶ್ರಂ ಗ್ರಹಣೇಽಪಿ ನ ದುಷ್ಯತಿ ।**
**ಸಾರ್ಷಪಂ ಗಂಧತೈಲಂ ಚ ಯಚ್ಚಾನ್ಯತ್ ಪುಷ್ಪವಾಸಿತಂ ॥**

- ***ಆಮಲಕ ಸ್ನಾನ :***

ಆಮಲಕ ಎಂದರೆ ನೆಲ್ಲಿಕಾಯಿ. ನೆಲ್ಲಿಕಾಯಿಯನ್ನು "ಧಾತ್ರೀ" ಎನ್ನಲಾಗಿದೆ. ಧಾತ್ರಿಯು ಬ್ರಹ್ಮದೇವನ ಆನಂದಬಾಷ್ಪದಿಂದ ಜನಿಸಿದ್ದು. ಧಾತ್ರಿಯಲ್ಲಿ ಆರೋಗ್ಯಕ್ಕೆ ಬೇಕಾದ ಸಮಸ್ತ ವಸ್ತುಗಳಿರುವುವು. ಸ್ತ್ರೀಯರು ನೆಲ್ಲಿಕಾಯಿಯಿಂದ ಸ್ನಾನವನ್ನು ಮಾಡಿದರೆ ಆರೋಗ್ಯ, ಕೂದಲು ಉದುರುವುದು ನಿಲ್ಲುತ್ತದೆ, ಕೂದಲು ಕಪ್ಪಾಗಿರುತ್ತದೆ.

ಇದು ರೋಗ ಪರಿಹಾರಕವಾದ್ದರಿಂದಲೇ 'ಅಮೃತಾ' ಎನ್ನಲಾಗಿದೆ. ಭಗವಂತನಿಗೆ ತುಲಸಿಯನ್ನು ಬಿಟ್ಟರೆ ಧಾತ್ರಿಯೇ ಅತ್ಯಂತ ಪ್ರಿಯವಾದದ್ದು. ಧಾತ್ರಿಯನ್ನು ಮುಟ್ಟಿದರು ದುಷ್ಟ ಯೋನಿಯಿಂದ ಮುಕ್ತರಾಗಬಹುದು.

ಇಷ್ಟೆಲ್ಲ ಗುಣಗಳಿದ್ದರೂ ಕೆಲವು ದಿವಸಗಳಲ್ಲಿ ಆಮಲಕ ಸ್ನಾನವನ್ನು ನಿಷೇಧಿಸಲಾಗಿದೆ.

ಸಪ್ತಮೀ, ನವಮೀ, ಅಮಾವಾಸ್ಯೆ, ಸಂಕ್ರಮಣ, ಗ್ರಹಣಗಳಲ್ಲಿ ಸ್ನಾನಕ್ಕಾಗಲೀ, ಭಕ್ಷಿಸುವುದಕ್ಕಾಗಲೀ ನಿಷಿದ್ಧವಾಗಿದೆ.

**ನವಮ್ಯಾಂ ದರ್ಶೇ ಸಪ್ತಮ್ಯಾಂ ಸಂಕ್ರಾಂತೌ ರವಿವಾಸರೇ ।**
**ಚಂದ್ರ ಸೂರ್ಯೋಪರಾಗೇ ಚ ಸ್ನಾನ ಮಾಮುಲಕೈಃ ತ್ಯಜೇತ್ ॥**

ವಾರಗಳಲ್ಲಿ ಮಂಗಳವಾರ, ಶುಕ್ರವಾರ, ಭಾನುವಾರ ನಿಷಿದ್ಧವಾಗಿದೆ. ಸ್ತ್ರೀಯರು ಮಂಗಳವಾರ, ಶುಕ್ರವಾರ ನಿಷಿದ್ಧ ನಕ್ಷತ್ರಗಳಿಲ್ಲದಿದ್ದರೆ ಶುಕ್ರವಾರ ನೆಲ್ಲಿಕಾಯಿಯಿಂದ ಸ್ನಾನ ಮಾಡಲು ಅಡ್ಡಿ ಇರುವುದಿಲ್ಲ. ಆದರೆ ತಿನ್ನಲು ನಿಷೇಧ. ಭಾನುವಾರ ಹಾಗೂ ಸಪ್ತಮಿಯಂದು ತಿನ್ನಲು, ಸ್ನಾನ ಮಾಡಲು ಸರ್ವಥಾ ನಿಷಿದ್ಧವಾಗಿದೆ. ಭಾನುವಾರದಂದು ನೆಲ್ಲಿಯ ಹೋಮ(ಧಾತ್ರೀ ಹವನ)ವನ್ನೂ ಮಾಡಬಾರದು.

ಈ ದಿವಸಗಳಲ್ಲಿ ಸ್ವಾಭಾವಿಕ ಶಕ್ತಿಯು ಮರೆಯಾಗಿ ವಿರುದ್ಧ ಶಕ್ತಿ ಬಂದಿರುತ್ತದೆ.

ನೆಲ್ಲಿಯು ಜಗದ್ಧಾತ್ರೀ, ಅಮೃತವರ್ಷಿಣೀ ಮೊದಲಾದ ಹೆಸರನ್ನು ಹೊಂದಿದ್ದು ಸಾರ್ಥಕ ನಾಮಧೇಯವುಳ್ಳದ್ದಾಗಿದೆ. ಅಳಲೇಕಾಯಿ, ತಾರೇಕಾಯಿ, ನೆಲ್ಲಿಕಾಯಿ ಮೂರೂ ಸೇರಿ "ತ್ರಿ ಫಲ"ವೆನಿಸಿ ತ್ರಿದೋಷವನ್ನು ಪರಿಹರಿಸುತ್ತದೆ.

ಸ್ನಾನ ಮಾಡುವಾಗ ಗಂಗೆ, ಗೋದಾವರಿ, ಯಮುನೆ, ಕಾವೇರಿ, ತುಂಗಭದ್ರೆಯರ ಸ್ತೋತ್ರ ಹೇಳುತ್ತಿರಬೇಕು.

**ಗಂಗಾದಿ ತೀರ್ಥಗಳ ಹಿಂಗದೆ ನೆನೆಯುತ**
**ಮಂಗಳ ಸ್ನಾನವ ಮಾಡಮ್ಮ ಕೋಲೆ ॥**

- ***ಗಂಗಾ ಸ್ತೋತ್ರಂ :***

**ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ ।**
**ವಿಷ್ಣುಪಾದಾಜ್ಜಸಂಭೂತೇ ಗಂಗೇ ತ್ರಿಪಥಗಾಮಿನಿ ॥**

**ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ ।**
**ದ್ವಾದಶೈತಾನಿ ನಾಮಾನಿ ಯತ್ರ ಯತ್ರ ಜಲಾಶಯೇ ॥**
**ಸ್ನಾನಕಾಲೇ ಪಠೇನ್ ನಿತ್ಯಂ ತತ್ರ ತತ್ರ ವಸಾಮ್ಯಹಮ್ ॥**

ಈ ಮಂತ್ರವನ್ನು ಪಠಿಸಿ ಸ್ನಾನಾನಂತರ ಗಂಗೆಯ ಹನ್ನೆರಡು ನಾಮಗಳನ್ನು ಹೇಳಿ ಅರಿಷಿಣ-ಕುಂಕುಮಗಳನ್ನು ಅರ್ಪಿಸಿ ಭಾಗೀರಥೀ ಪ್ರಸಾದವೆಂದು ತಾನೂ ಧರಿಸಬೇಕು. ಮನೆಯಲ್ಲಿ ನಿತ್ಯ ಸ್ನಾನ ಕಾಲದಲ್ಲಿ ಗಂಗಾಥಾಲಿಗೆ ಹರಿದ್ರಾ-ಕುಂಕುಮ ಅರ್ಪಿಸಿ ತಾನೂ ಧರಿಸುವುದು.

- ***ಸ್ನಾನಾನಂತರದಲ್ಲಿ ಸಂಕಲ್ಪ :***

**ಅನೇನ ಮಯಾ ಕೃತಪ್ರಾತಃಸ್ನಾನಾಖ್ಯ ಕರ್ಮಣಾ ಜಲಾಂತರ್ಗತ, ಗಂಗಾಜನಕ ಸೇತು ಮಾಧವ-ಬಿಂದು ಮಾಧವಾಭಿನ್ನ ಪತ್ಯಂತರ್ಗತಃ ಗೋಪಾಲಕೃಷ್ಣ ಪ್ರೀಯತಾಮ್.**

"ಈ ಪ್ರಾತಃ ಕಾಲದಲ್ಲಿ ಮಾಡಿದ ಸ್ವದೇಹಸ್ಥನಾದ ಭಗವಂತನ ಅಭಿಷೇಕ ರೂಪವಾದ ಕರ್ಮದಿಂದ ಜಲದಲ್ಲಿರುವ ಪತ್ಯಂತರ್ಗತನಾದ ಸೇತು ಮಾಧವ ಬಿಂದು ಮಾಧವನು ಪ್ರೀತನಾಗಲಿ" ಎಂದು ಭಗವಂತನಿಗೆ ಅರ್ಪಿಸಬೇಕು.

- ***ಸ್ನಾನ ಸಂಕಲ್ಪ :***

**ಶುಭತಿಥೌ ಶ್ರೀಭಾರತಿರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೇರಣಾಯ – ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ, ಶ್ರೀಕೃಷ್ಣಾ-ಭಾಗೀರಥ ಸನ್ನಿಧೌ, ತುಲಸ್ಯಶ್ವತ್ಥ ಸನ್ನಿಧೌ, ಪ್ರಾತಃ ಸ್ನಾನಮಹಂಕರಿಷ್ಯೇ ।**

**"ಕಣಕಾಲು ನೀರೊಳಗೆ ಶೇಷದೇವನ ಸನ್ನಿಧಿ,**

**ಮೊಣಕಾಲು ನೀರೊಳಗೆ ಗರುಡದೇವನ ಸನ್ನಿಧಿ,**

**ಎದೆ ಉದ್ದ ನೀರೊಳಗೆ ಲಕ್ಷ್ಮೀನಾರಾಯಣ ಸನ್ನಿಧಿ,**

**ಇಂಥ ಸ್ಥಳದಲ್ಲಿಯೇ ಗಂಗಾದೇವಿ ಸನ್ನಿಧಾನ"**

ಎಂದು ಅನುಸಂಧಾನ ಮಾಡಿ

"ತೀರ್ಥಪಾದನಾದ, ತೀರ್ಥಮೂರ್ತಿ ತ್ರಿವಿಕ್ರಮನ ಪಾದದಿಂದ ಹುಟ್ಟಿ ಸ್ವರ್ಗಲೋಕದಿಂದ ಧರೆಗೆ ಇಳಿದು ಬಂದಂಥ ಭಾಗೀರಥೀದೇವಿ ನಿನ್ನ ನದಿಯಲ್ಲಿ ಸ್ನಾನ ಮಾಡಲು ಅನುಜ್ಞೆ ನೀಡು."

ಎಂದು ಭಾಗೀರಥಿಯ ಅನುಜ್ಞೆ ಕೇಳಿ ಮೂರು ಮುಳುಗು ಹಾಕುವುದು. ಅರಿಷಿಣ ಹಚ್ಚಿಕೊಂಡು ಪುನಃ ಮುಳುಗು ಹಾಕುವುದು.

***ಶ್ರೀಕೃಷ್ಣಾರ್ಘ್ಯಮಂತ್ರಃ –***

**ನಮಸ್ತೇ ಕಮಲನಾಭಾಯ ನಮಸ್ತೇ ಜಲಶಾಯಿನೇ ।**
**ನಮಸ್ತೇಽಸ್ತು ಹೃಷಿಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**
**ಬ್ರಹ್ಮಕಮಂಡಲು ಸಂಭೂತೇ ವಿಷ್ಣುಪಾದೋದ್ಭವೇ ಶುಭೇ ।**
**ತ್ರೈಲೋಕ್ಯಪಾವನೇ ಗಂಗೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**

ಸ್ನಾನ ಮಾಡುವಾಗ ನಮ್ಮ ದೇಹವೆಂಬ ರಥದಲ್ಲಿ ನಾರಾಯಣಾದಿ ಪಂಚರೂಪಗಳಿಗೂ ಅಭಿಷೇಕವೆಂದು ತಿಳಿದು ಸ್ನಾನ ಮಾಡುವುದು.

**"ಶಿರದಿಂದ ಪಾದದವರೆಗೂ ನಾರಾಯಣನು,**

**ಬಲಕೆ ಪ್ರದ್ಯುಮ್ನ, ಎಡಕೆ ಅನಿರುದ್ಧನು,**

**ಕಂಠದಿಂದ ಕಟಿಪರ್ಯಂತ ಸಂಕರ್ಷಣ,**

**ಕಟಿಯಿಂದ ಪಾದದವರೆಗೂ ವಾಸುದೇವನು**

**ಪ್ರತಿದಿನದಿ ಸ್ನಾನದಿ ಪಂಚ**

**ಮೂರ್ತಿಯನು ತಿಳಿದು ಮೀಯುವುದು"**

ಸ್ನಾನವಾದ ಮೇಲೆ ಶುದ್ಧವಾದ ಮಡಿ ವಸ್ತ್ರ ಧರಿಸಬೇಕು. (ಹರಿದಿರುವ, ಸುಟ್ಟಿರುವ ಅಂಚು ಇಲ್ಲದಿರುವ ಸೀರೆ ಕುಪ್ಪಸ ಧರಿಸಬಾರದು)

ಭಗವಂತನು ಸ್ತ್ರೀಯರಲ್ಲಿ ಸ್ತ್ರೀರೂಪದಿಂದ ಸನ್ನಿಹಿತನಾಗಿರುತ್ತಾನೆಂದು ಅನುಸಂಧಾನ ಮಾಡಿಕೊಂಡು ಕುಂಕುಮಾದಿ ಅಲಂಕಾರಗಳನ್ನು ಧರಿಸಬೇಕು.

- ***ಸ್ನಾನ ಮಾಡುವಾಗ ವಸ್ತ್ರ :***

**ವಸನವಲ್ಲದೆ ಮೈಯ ತೊಳಕೊಂಬೋ ಪಾಪಿಯ....** ಎಂದು ವಿಜಯದಾಸರು ಹೇಳಿದ್ದಾರೆ.

ಸ್ತ್ರೀಯರು ಸ್ನಾನ ಮಾಡುವಾಗ ಸ್ನಾನದ ಸೀರೆ (ಕೋರಿ)ಯನ್ನು ಧರಿಸಿಯೇ

ಸ್ನಾನ ಮಾಡಬೇಕು. ದಿಗಂಬರರಾಗಿ ಸ್ನಾನ ಮಾಡಿದರೆ ದೇವತಾವ್ಯಾಕೋಪವುಂಟಾಗುತ್ತದೆ. ಸ್ನಾನವನ್ನು ಕೂಡ ಸಕಾಲಕ್ಕೆ ಮಾಡಬೇಕು.

- ***ವಸ್ತ್ರಧಾರಣೆ :***

ಸ್ನಾನಾನಂತರ ಶುದ್ಧವಾದ ವಸ್ತ್ರವನ್ನು ಧರಿಸಬೇಕು. ಸಾಧ್ಯವಾದ ಮಟ್ಟಿಗೆ ಸಾತ್ವಿಕ ಗುಣವನ್ನು ಎದ್ದು ತೋರಿಸುವ ಬಿಳಿ ಬಟ್ಟೆಯನ್ನೇ ಧರಿಸಬೇಕು. ಅತಿ ಕೆಂಪು, ಅತಿ ನೀಲಿ, ಕಪ್ಪು ವಸ್ತ್ರಗಳನ್ನು ಧರಿಸಬಾರದು.

- ***ಧರಿಸಬಾರದ ವಸ್ತ್ರ :***

ಕೊಳೆ ಸೀರೆ, ಮತ್ತೊಬ್ಬರ ಸೀರೆ, ಪುರುಷರು ಧರಿಸಿರುವ ವಸ್ತ್ರ, ಹರಿದಿರುವ ವಸ್ತ್ರ, ಇಲಿಗಳೂ ಹರಿದು ತೂತು ಮಾಡಿರುವ, ಸುಟ್ಟಿರುವ, ಅಂಚು ಇಲ್ಲದಿರುವ ಸೀರೆ, ಕುಪ್ಪಸಗಳನ್ನು ಧರಿಸಬಾರದು.

**ಮಲಿನಂ ಪರವಸ್ತ್ರಂ ತು, ಸ್ತ್ರೀ ವಸ್ತ್ರಂ ಪುರುಷಸ್ಯ ಚ ।**
**ಖಂಡಂ ಚ ಮೂಷಕೈರ್ವಿದ್ಧಂ ಅಗ್ನಿದಗ್ಧಂ ಚ ವರ್ಜಯೇತ್ ॥**
**ಮಲಿನಂ ನ ಶಿವಂ ತತ್ತು ಕಂಡೂತ್ವಗ್ ದೋಷ ಕಾರಣಂ ।**
**ಸುಕೃತಸ್ಯ ಫಲಂ ನಾಸ್ತಿ ಪರವಸ್ತ್ರಸ್ಯ ಧಾರಣಾತ್ ॥**

ಕೊಳೆವಸ್ತ್ರ ಧರಿಸಿದರೆ ಚರ್ಮರೋಗಾದಿಗಳುಂಟಾಗುತ್ತದೆ. ಪರವಸ್ತ್ರವನ್ನು ಧರಿಸಿ ದೇವತಾರ್ಚನಾದಿಗಳನ್ನು ಮಾಡಿದರೆ ಆ ಫಲ ವಸ್ತ್ರವು ಯಾರದೋ ಅವರಿಗೆ ಹೋಗುತ್ತದೆ. ಅವಳ ಅನುಮತಿಯಿಂದ ಸ್ವೀಕರಿಸಿದರೆ ಸ್ವಲ್ಪ ಫಲ ವಸ್ತ್ರ ದಾನಿಗೆ ಹೋಗುತ್ತದೆ.

- ***ಹರಿದಿರುವ ವಸ್ತ್ರ :***

ಹರಿದಿರುವ ವಸ್ತ್ರದಲ್ಲಿ ಕಲಿಭಾಯೆ ಜ್ಯೇಷ್ಠೇಯು ವಾಸಿಸುತ್ತಿರುವಳು. ಸುಟ್ಟ ವಸ್ತ್ರದಿಂದ ಮೃತಳಂತಾಗುವಳು. ಆದ್ದರಿಂದ ಶುದ್ಧವಾದ ವಸ್ತ್ರ ಧರಿಸಬೇಕು.

**ಖಂಡವಸ್ತ್ರೇ ವಸೇದ್ ಜ್ಯೇಷ್ಠಾ ತಸ್ಮಾತ್ ತಂ ಪರಿವರ್ಜಯೇತ್ ।**
**ಭಯದಂ ಮೂಷಕೈಃವಿದ್ಧಂ ದಗ್ಧೇನ ಚ ಮೃತಿರ್ಭವೇತ್ ।**
**ತಸ್ಮಾತ್ ಸರ್ವಪ್ರಯತ್ನೇನ ಶೋಧ್ಯವಸ್ತ್ರಂ ಪ್ರಧಾರಯೇತ್ ॥**

*– ಚಾರುಚರ್ಯಾ 63-64-65.*

- ***ಪುಷ್ಪಧಾರಣೆ :***

ಸ್ತ್ರೀಯರು ಸ್ನಾನವಾದ ಮೇಲೆ ಭಗವದರ್ಪಿತವಾದ ಮಲ್ಲಿಗೆ, ಜಾಜಿ, ದಾಸವಾಳ, ಕೇತಕಿ, ಸಂಪಿಗೆ, ಮರುಗ, ಕಣಿಗಲೆ, ಇವೆ ಮೊದಲಾದ ಪುಷ್ಪಗಳನ್ನು ಧರಿಸಬೇಕು. ಇವುಗಳ ಧಾರಣೆಯಿಂದ ವಾತಪಿತ್ತಾದಿ ತ್ರಿದೋಷಗಳೂ ಪರಿಹೃತವಾಗುವುವು.

**ತ್ರಿದೋಷಶಮನಂ ಶ್ರೀಮಾನ್ ಘರ್ಮಕಾಲೇ ಪ್ರಧಾರಯೇತ್ ।**
**ಕೇತಕೀ ಬಕುಲಂ ಪುಷ್ಪಂ ಶ್ರೀಖಂಡಂ ಶತಪತ್ರಕಂ ॥**

**ಶ್ರೀಪರ್ಣಂ ಚಂಪಕಂ ಪುಷ್ಪಂ ವಾತಶ್ಲೇಷಹರಂ ಪರಂ ।**
**ಉಷ್ಣವೀರ್ಯಂ ವಾತನಾಶಂ ಶೀತಕಾಲೇ ಪ್ರಧಾರಯೇತ್ ॥**

ಕೇತಕಿ, ಕಮಲ ಇವುಗಳನ್ನು ಬೇಸಿಗೆಯಲ್ಲಿ ಧರಿಸುವುದು, ಚಂಪಕಾದಿಗಳನ್ನು ಶೀತಕಾಲದಲ್ಲಿ ಧರಿಸುವುದು.

**ಪುಷ್ಪಾಣಾಂ ಪ್ರವರಂ ಶ್ರೇಷ್ಠಂ ಕೇತಕೀ ಪುಷ್ಪಮುಚ್ಯತೇ ।**
**ಶಿರೋಭ್ರಮವಿನಾಶಂ ಚ ಶತಪತ್ರಂ ಸುಶೋಭನಂ ॥**

**ಆಧಾರ್ಯಂ ಮಲ್ಲಿಕಾ ಪುಷ್ಪಂ ದೃಷ್ಟಿಹಾನಿ ರ್ನಜಾಯತೇ ।**
**ಮಂದಾರಂ ಪಿತ್ತದೋಷಘ್ನಂ ಕರ್ಣಬಾದರ್ಯನಾಶನಂ ॥**

ಪುಷ್ಪಾಗಳಲ್ಲಿಯೆ ಕೇತಕೀ ಶ್ರೇಷ್ಠವೆನಿಸಿದೆ. ಮಲ್ಲಿಗೆ ಧಾರಣೆಯಿಂದ ನೇತ್ರ ದೋಷ ಪರಿಹೃತವಾಗುತ್ತದೆ. ಕಮಲ ಪುಷ್ಪಧಾರಣೆಯಿಂದ ತಲೆ ತಿರುಗುವುದು ನಿಲ್ಲುತ್ತದೆ.

ಮಂದಾರ (ಪಾರಿಜಾತ) ಪುಷ್ಪವಾದರೂ ಪಿತ್ತದೋಷ ನಾಶಕಾರಿಯಾಗಿದ್ದು ಕಿವುಡತನವನ್ನು ಪರಿಹರಿಸುವುದು.

ಇದಲ್ಲದೆ ಮಂದಾರ, ಚಂಪಕ ಇವುಗಳಿಗೆ ಹನುಮಂತ, ಭೀಮ, ರುದ್ರ ಮೊದಲಾವರು ಅಭಿಮಾನಿಗಳಿದ್ದು ಭಗವದರ್ಪಿತ ಪುಷ್ಪಧಾರಣೆಯಿಂದ ಆಯುರಾರೋಗ್ಯ ನೀಡುವರು.

- ***ಪುಷ್ಪಾಭಿಮಾನಿ ದೇವತೆಗಳು :***

ಪಾರಿಜಾತಾದಿ ಹೂವುಗಳಲ್ಲಿ ಹನುಮಂತನು, ಸೌಗಂಧಿಕಾದಿ ಪುಷ್ಪದಲ್ಲಿ

ಮತ್ತು ಸುಗಂಧವುಳ್ಳ ಶಾಸ್ತ್ರದಲ್ಲಿ ವಿಹಿತ ಪುಷ್ಪಗಳಲ್ಲಿ ಭೀಮಸೇನನು, ಬಿಳಿ ಪುಷ್ಪಗಳಲ್ಲಿ ರುದ್ರದೇವನು, ಪುನ್ನಾಗದಲ್ಲಿ ಗರುಡನಿರುವನು.

**ಪಾರಿಜಾತಸ್ಯ ಪುಷ್ಪೇಷು ಆಂಜನೇಯಸ್ತದಾಜ್ಞಯಾ ।**
**ಸೌಗಂಧಿಕೇ ಭೀಮಸೇನಃ ಶ್ವೇತಪುಷ್ಪೇಷು ಶಂಕರಃ । ಪುನ್ನಾಗಪುಷ್ಪೇ ಗರುಡಃ ॥**

ಹರಿಗೆ ನಿವೇದಿತವಾದ ನಿರ್ಮಾಲ್ಯಕ್ಕೆ ಅಭಿಮಾನಿ ಲಕ್ಷ್ಮೀದೇವಿಯ ಸನ್ನಿಧಾನ ವಿಶೇಷವೂ ಇರುವುದರಿಂದ ಸೌಭಾಗ್ಯಕ್ಕಾಗಿ ಹರಿ ನಿವೇದಿತ ನಿರ್ಮಾಲ್ಯ ಪುಷ್ಪವನ್ನೇ ಧರಿಸಬೇಕು.

ಏಕಾದಶಿಯಂದು ಮಾತ್ರ ಹರಿ ನಿವೇದಿತವಾದ ಒಂದು ಪುಷ್ಪವನ್ನು ಮಾತ್ರ ಧರಿಸಬೇಕು. ಇಂದು ಸರ್ವಾಲಂಕಾರಗಳೂ ವರ್ಜ್ಯವಾಗಿವೆ– ಯಾದ್ದರಿಂದ ಹೂವಿನ ಮಾಲೆಯನ್ನು ಧರಿಸಬಾರದು. ಯಾರಾದರೂ ಹರಿಗೆ ನಿವೇದಿಸಿದ ಪುಷ್ಪಮಾಲೆ ಕೊಟ್ಟರೆ ಅದನ್ನು ದ್ವಾದಶಿಯಂದು ಧರಿಸಬೇಕು.

ನಿರ್ಮಾಲ್ಯವನ್ನು ಧರಿಸಿದ ಮೇಲೆ ತಲೆಯಿಂದ ಜಾರಿ ಬಿದ್ದರೆ ಅದನ್ನು ದಾಟಿದರೆ, ತುಳಿದರೆ ದೋಷವಿಲ್ಲ. ನಿರ್ಮಾಲ್ಯವನ್ನು ಮಾತ್ರ ದಾಟಬಾರದು. ದಾಟಿದರೆ ಹತ್ತು ವರ್ಷ ಬ್ರಾಹ್ಮಣರು ತಿಂದ ಎಂಜಲೆಲೆ ಎತ್ತಬೇಕು.

- ***ಆಭರಣಧಾರಣಮ್ :***

**ರತ್ನಾದಿ ದೇವತಾತುಷ್ಟ್ಯೈ ಭೂಷಣಾನ್ಯಪಿ ಧಾರಯೇತ್ ।**

ದೇವತಾ ಪ್ರೀತಿಗಾಗಿ ದೇವರಿಗೆ ತೊಳೆದು ಅರ್ಪಿಸಿದ ಸುವರ್ಣಾದಿ ನಿರ್ಮಿತ ಆಭರಣಗಳನ್ನು ಸ್ತ್ರೀಯರು ಧರಿಸಬೇಕು. ಸುವರ್ಣನಿರ್ಮಿತ ಆಭರಣದಿಂದ ದೇಹಕಾಂತಿ, ಆರೋಗ್ಯಾದಿ ಫಲಗಳಿವೆ. ಸುವರ್ಣವನ್ನು ಲಕ್ಷ್ಮೀ ಸನ್ನಿಧಾನ ಹಾಗೂ ಕಲಿ ಸನ್ನಿಧಾನವೆರಡೂ ಇದೆ.

- ***ಆಭರಣಾಭಿಮಾನಿಗಳು :***

ರತ್ನಗಳಲ್ಲಿ ಪದ್ಮರಾಗಕ್ಕೆ ಸೂರ್ಯನು, ಮುತ್ತಿಗೆ ಚಂದ್ರನು, ಹವಳಕ್ಕೆ ಕುಜನು, ಮರಕತಕ್ಕೆ ಬುಧನು, ಪುಷ್ಯರಾಗಕ್ಕೆ ಗುರುವು, ವಜ್ರಕ್ಕೆ ಶುಕ್ರನು, ನೀಲಮಣಿಗೆ ಶನಿಯೂ, ಗೋಮೇಧಿಕಕ್ಕೆ ರಾಹುವು, ವೈಢೂರ್ಯಕ್ಕೆ ಕೇತುವು ಅಭಿಮಾನಿಗಳಾಗಿರುವರು.

**ಆದಿತ್ಯೇ ಪದ್ಮರಾಗಂ ಚ ಸೋಮೇ ಮುಕ್ತಾಫಲಂ ತಥಾ ।**
**ಮಂಗಲೇ ವಿದ್ರುಮಂ ಚೈವ ಬುಧೇ ಮರಕತಂ ತಥಾ ॥**

ಸುವರ್ಣಕ್ಕೆ ಲಕ್ಷ್ಮೀದೇವಿಯು ಅಭಿಮಾನಿಯಾಗಿದ್ದು ಪಾದದಲ್ಲಿ ಧರಿಸಬಾರದು. ನಾಭಿಯಿಂದ ಮೇಲೆ ಧರಿಸಬೇಕು.

ಸುವರ್ಣವನ್ನು ಶಾಸ್ತ್ರದಲ್ಲಿ ಎಷ್ಟನ್ನು ಇಟ್ಟುಕೊಳ್ಳಬೇಕೆಂಬುದು ಹೇಳಿರುವರೋ ಅಷ್ಟನ್ನು ಮಾತ್ರ ಇಟ್ಟುಕೊಳ್ಳಬೇಕು. ಅಧಿಕ ಸಂಗ್ರಹವಾದರೆ ಕಲಿಯು ಬರುವನು.

ಭಗವಂತನ ಸುವರ್ಣದಲ್ಲಿ ಕಾಂಚನನೆಂಬ ವಿಭ್ರುತ ರೂಪವಿರುತ್ತದೆ–ಯಾದ್ದರಿಂದ ಕಲಿಯು ಏನೋ ಮಾಡಲಾರನು. ಭಗವಂತನಿಗೆ ಅರ್ಪಿಸದೆ ಧರಿಸಿದರೆ ಮಾತ್ರ ಕಲಿಯು ಸನ್ನಿಹಿತನಾಗುವನು.

- ***ಧರಿಸುವ ಕ್ರಮ –***

ಅಂಗಡಿಯಿಂದ ನೇರವಾಗಿ ತಂದು ಹಾಗೆಯೇ ಧರಿಸಬಾರದು. ಮನೆಗೆ ತಂದು ತೊಳೆದು ಭಗವಂತನಿಗೆ ಅರ್ಪಿಸಿ ಪೂಜಿಸಿ, ಗಂಡನ ಕೈಯಿಂದ ಕಟ್ಟಿಸಿಕೊಳ್ಳಬೇಕು. ಗಂಡನು ಬಿಟ್ಟು ಬೇರೆ ಪುರುಷರು ತಂದಿತ್ತರೆ ಧರಿಸಬಾರದು. ಬೇರೆಯವರು ಕೊಟ್ಟರೂ ಪತಿಗೆ ತಿಳಿಸಿ, ಪತಿಯಿಂದಲೇ ಕಟ್ಟಿಸಿಕೊಳ್ಳಬೇಕು. ನಂತರ ಪತಿಗೆ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು.

ಶುಕ್ರವಾರದಂದು ಧರಿಸಬೇಕೇ ವಿನಹ ತೆಗೆಯಬಾರದು. ಸುವರ್ಣವು ಕಲಿಯ ಸ್ಥಾನವಾದರೂ ಭಗವಂತನ ವಿಭೂತಿರೂಪವಿರುವುದರಿಂದ ಅಂತಹ ಕಾಂಚನಾಭರಣ ಧರಿಸುವುದು.

ಪ್ರತಿದಿವಸವೂ ಸ್ನಾನಾನಂತರ ತಾಳಿಗಳಿಗೆ ಅರಿಷಿಣ ಮತ್ತು ಕುಂಕುಮಗಳನ್ನು ಹಚ್ಚುವುದರಿಂದ ಅಲಕ್ಷ್ಮಿಯು ದೂರ ಓಡುವಳು.

- ***ಸುವಾಸಿನಿಯರು ಧರಿಸಬೇಕಾದ ಆಭರಣ –***

**ಗುರುಮಧ್ವಶಾಸ್ತ್ರವನು ಓದುವುದೇ ಮಾಂಗಲ್ಯದೊಡೆಯ ಹರಿನಾಮ–ಪತಿಯೆಂದು ।**
**ವೈರಾಗ್ಯವೆಂಬ ಒಪ್ಪುವ ಮೂಗುತಿ,**
**ತಾರತಮ್ಯ ಜ್ಞಾನ ತಾಯಿತು ಮುತ್ತು ಸರ**
**ಕರುಣರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು ॥ 1 ॥**

**ಹರಿಕಥೆ ಕೇಳುವುದು ಕಿವಿಗೆ ಮುತ್ತಿನ ಓಲೆ**
**ನಿರತ ಸತ್ಕರ್ಮವು ನಿಜಕಾಂತಿಯು ।**
**ಹರಿದಾಸ ಪಾದರಜ ಹೆರಳು ಬಂಗಾರ**
**ಗುರುಭಕುತಿ ಪಟ್ಟಾವಳಿಯನ್ನುಟ್ಟು ॥ 2 ॥**

**ಕೊಡುವ ದಾನಗಳೆಂಬೋ ಕುಪ್ಪಸ ತೊಟ್ಟು,**
**ಬಿಡದೆ ಎನ್ನೊಡಯ ಶ್ರೀ ಪುರಂದರವಿಠಲನ**
**ದೃಢಭಕ್ತಿಯೆಂಬಂಥ ಕಡಗ ಬಳೆ ಇಟ್ಟುಕೊಂಡು ॥**

- ***ಪತಿವ್ರತೆಯ ಗೃಹಕೃತ್ಯ :***

ಪತಿವ್ರತೆಯು ಬಾಹ್ಯ ಶೌಚ ಸಂಪಾದಿಸಿದ ನಂತರ, ಹಾಸಿಗೆ ಮೊದಲಾದವು–ಗಳನ್ನು ಎತ್ತಿ ಒಪ್ಪಗಿಡಬೇಕು. ಅಂಗಳವನ್ನು ಗುಡಿಸಿ ನಂತರ ಮನೆಯನ್ನೂ ಒಪ್ಪವಾಗಿಡಬೇಕು.

**ಪ್ರಾಂಗಣೇ ಮಂಗಲಂ ದದ್ಯಾತ್ ಗೋಮಯೇನ ಜಲೇನ ಚ ।**
**ಅಲಂಕುರ್ವೀತ ಹರ್ಮ್ಯಾಣಿ ಸೇಚನೈಃ ರಂಗವಲ್ಲಿಭಿಃ ।**

ಅಂಗಳವನ್ನು ಗುಡಿಸಿ, ಗೋಮಯದಿಂದ ಮಿಶ್ರವಾದ ನೀರನ್ನು ಅಂಗಳದಲ್ಲಿ ಒಪ್ಪವಾಗಿ ಸಿಂಪಡಿಸಿ, ರಂಗವಲ್ಲಿಗಳಿಂದ ಮುಂಭಾಗವನ್ನು ಅಲಂಕರಿಸಬೇಕು.

ಪ್ರಾತಃ ಕಾಲದ ಕೆಲಸವೆಂದರೇ ಗೋಮಯದಿಂದ ಸಾರಿಸುವುದು. ಇವೆಲ್ಲ ಪತ್ಯಂತರ್ಗತ ಹರಿಸೇವೆಯಂದು ಮಾಡಬೇಕು.

**ಪ್ರಾತಃ ಕಾಲೇ ಸ್ತ್ರಿಯಾ ಕಾರ್ಯಂ ಗೋಮಯೇನಾನುಲೇಪನಮ್ ।**
**ಪತಿಸೇವಾಂ ಪುರಸ್ಕೃತ್ಯ ಗೃಹಕೃತ್ಯಂ ಚರೇತ್ ತದಾ ।**
**ಗೃಹಕರ್ಮಪರಾ ನಿತ್ಯಂ ಪೂಜಯೇದ್ ಮಾರ್ಜಯೇದ್ ಗೃಹಮ್॥**

ಗೋಮಯ ಶುದ್ಧಿಯ ಫಲ– ಲಕ್ಷ್ಮೀ ಸನ್ನಿಧಾನ.

**ಪ್ರಾತಃ ಕಾಲೇ ತು ಯಾ ನಾರೀ ಗೋಮಯೇನಾನುಲೇಪಯೇತ್ ।**
**ಪ್ರತ್ಯಹಂ ಸದನಂ ಸಾಽಪಿ ನೈವ ದುಃಖಾನಿ ಪಶ್ಯತಿ ॥**

ರಂಗವಲ್ಲೀ ಅಲಂಕಾರ ರಂಗ–ರಂಗನಾಯಕಿಯ ಸನ್ನಿಧಾನ.

ರಂಗವತ್ ಲೀನಳಾಗಿರುವವಳು ಎಂದರ್ಥ.

ರಂಗವಲ್ಲಿಯಿಂದ ಅಲಂಕೃತವಾದ ಮನೆಯಲ್ಲಿ ಸಂಸಾರ ಬೇಗೆಯನ್ನು ಹೋಗಲಾಡಿಸಿ, ಬಳ್ಳಿಯಂತೆ ಆನಂದವೀಯುತ್ತದೆ.

**ಯದ್ ಗೃಹಂ ರಾಜತೇ ನಿತ್ಯಂ ರಂಗವಲ್ಯನುರಂಜಿತಂ ।**
**ತದ್‌ಗೃಹೇ ವಸತೇ ಲಕ್ಷ್ಮೀಃ ನಿತ್ಯಂ ಪೂರ್ಣಕಲಾನ್ವಿತಾ ॥**

ಮನೆಯ ಕಸ ಗುಡಿಸಿ, ಒದ್ದೆ ಬಟ್ಟೆಯಿಂದ ಮನೆಯನ್ನೆಲ್ಲ ಸ್ವಚ್ಛಗೊಳಿಸಬೇಕು. ಕಸದ ರೂಪದಲ್ಲಿರುವ ಅಲಕ್ಷ್ಮೀಯು ದೂರ ಹೋಗುವಳು. ಮನೆಯ ಸ್ವಚ್ಛತೆಯಿಂದ ಗೃಹದೇವತೆಗಳು ಸಂತುಷ್ಟರಾಗುವರು.

**ಪೂಜಯೇದ್ ಗೃಹಿಣೀ ಪ್ರಾತಃ ಪ್ರತ್ಯಹಂ ಗೃಹದೇವತಾಃ ।**

- ***ದ್ವಾರದೇವತಾ ಪೂಜೆ :***

ಹೊಸ್ತಿಲು ಹಾಗೂ ದ್ವಾರಗಳಲ್ಲಿ ಲಕ್ಷ್ಮೀ ನರಸಿಂಹದೇವರು, ಪಾರ್ವತೀ–ಪರಮೇಶ್ವರರು, ವಾಸ್ತುದೇವತೆಗಳು ಇರುವರು.

**ಪ್ರಹ್ಲಾದನ ಪ್ರಾರ್ಥನೆ ನರಸಿ–ನರಸಿಂಹರ ಹೊಸ್ತಿಲವಾಸ.**

ಹಿರಣ್ಯಕಶಿಪುವನ್ನು ಸೀಳಿ ಹೊಸ್ತಿಲಲ್ಲಿಯೇ ಕುಳಿತಿರುವ ಲಕ್ಷ್ಮೀನೃಸಿಂಹನನ್ನು "ಸ್ವಾಮಿಯೇ, ಭಕ್ತರ ಮನೆಯ ಹೊಸ್ತಿಲಲ್ಲಿಯೂ ಇದೇ ರೀತಿ ಸರ್ವದಾ ಸನ್ನಿಹಿತನಾಗಿದ್ದು ಅವರಿಗೆ ಬರುವ ಉಪದ್ರವ ಪರಿಹರಿಸು" ಎಂದು ಪ್ರಹ್ಲಾದನು ಬೇಡಿದನು. "ಹಾಗೆ ಆಗಲಿ" ಎಂದು ವರವಿತ್ತು ಹೊಸ್ತಿಲಲ್ಲಿಯೆ ಇರುವನು. ಗೃಹಿಣಿಯು ಮಾಡುವ ಅಲ್ಪ ಪೂಜೆಯಿಂದಲೇ ತೃಪ್ತನಾಗಿ ಆಪತ್ತು ಬರದಂತೆ ರಕ್ಷಿಸುವ.

**ಪ್ರಾತಃ ಕಾಲೇ ತು ಯಾ ನಾರೀ ಶುಚಿರ್ಭೂತ್ವಾ ಸಮಾಹಿತಾ ।**
**ಪೂಜಯೇದ್ ದ್ವಾರದೇಶಂ ತು ನರಸಿಂಹೋ ಪ್ರಸೀದತಿ ॥**

- ***ರುದ್ರ–ರುದ್ರಾಣಿಯರ ಅನುಗ್ರಹ :***

ಹೊಸ್ತಿಲಲ್ಲಿ ರುದ್ರಾಣಿಯು ರುದ್ರನೊಂದಿಗೆ ಸನ್ನಿಹಿತಳಾಗಿರುವಳು. ಸಮಸ್ತ ವಾಸ್ತುದೇವತೆಗಳೂ ಹೊಸ್ತಿಲಲ್ಲಿರುವರು. ಅವರ ಪ್ರೀತಿಗಾಗಿ ಹರಿದ್ರಾ–ಕುಂಕುಮ–ಗಂಧ–ಪುಷ್ಪಾಕ್ಷತೆಗಳಿಂದ ಗೃಹಿಣಿಯು ಪೂಜಿಸಬೇಕು.

**ಉದುಂಬರೇ ವಸೇನ್ನಿತ್ಯಂ ಭವಾನೀ ಸರ್ವದೇವತಾಃ ।**
**ಅತಶ್ಚ ಪ್ರತ್ಯಹಂ ಪೂಜ್ಯಾ ಗಂಧ ಪುಷ್ಪಾಕ್ಷತಾದಿಭಿಃ ॥ –ಆಚಾರ ರತ್ನ**

ಹೊಸ್ತಿಲು ಶೂನ್ಯವಾಗಿರಬಾರದು. ಹೊಸ್ತಿಲು ಶೂನ್ಯವಾಗಿದ್ದರೆ ಅವರ ಕುಲವೆ ಶೂನ್ಯವಾದೀತು.

**ಅಶೂನ್ಯಾ ದೇಹಲೀ ಕಾರ್ಯಾ ಪ್ರಾತಃಕಾಲೇ ವಿಶೇಷತಃ ।**
**ಯಸ್ಯ ಶೂನ್ಯಾ ಭವೇತ್ ಸಾ ತು ಶೂನ್ಯಂ ತಸ್ಯ ಕುಲಂ ಭವೇತ್ ॥**

- ***ಹೊಸ್ತಿಲಿನ ಮೇಲೆ ಕಾಲಿಡಬಾರದು :***

ಹೊಸ್ತಿಲನ್ನು ದಾಟಿ ಹೋಗಬೇಕೆ ವಿನಃ ಹೊಸ್ತಿಲಿನ ಮೇಲೆ ಕಾಲಿಟ್ಟು ಹೋಗಬಾರದು. ಹೊಸ್ತಿಲನ್ನು ಪೂಜಿಸದೆ ತಲೆ ಬಗ್ಗಿಸಿ ಗೌರವಿಸದೆ ಹೋಗುವುದು ನರಕಕ್ಕೆ ಹೋಗುವುದೆಂದರ್ಥ.

**ಪಾದಸ್ಯ ಸ್ಪರ್ಶನಂ ತತ್ರ ಅಸಂಪೂಜ್ಯ ಚ ಲಂಘನಮ್ ।**
**ಕುರ್ವನ್ನರಕಮಾಪ್ನೋತಿ ತಸ್ಮಾತ್ ತತ್ ಪರಿವರ್ಜಯತ್ ॥**

ಗೋಮಯದಿಂದ ಸಾರಿಸಿ ಶುದ್ಧಿಗೊಳಿಸಿದ್ದರೂ ರಂಗವಲ್ಲಿ, ಕೆಮ್ಮಣ್ಣುಗಳಿಂದ ಸ್ವಸ್ತಿಕ, ವಿಷ್ಣುಪಾದಗಳು ಮೊದಲಾದ ರೇಖೆಗಳನ್ನು ಬಿಡಿಸದಿದ್ದರೆ ಧನ, ಯಶಸ್ಸು, ಆಯುಸ್ಸುಗಳ ನಾಶವು.

**ಅಕೃತಸ್ವಸ್ತಿಕಾಂ ಯಾ ತು ಕ್ರಮೇಲ್ಲಿಪ್ತಾಂ ಚ ಮೇದಿನೀಮ್ ।**
**ತಸ್ಯಾ ಸ್ತ್ರೀಣಿ ವಿನಶ್ಯಂತಿ ವಿತ್ತಮಾಯುರ್ಯಶಸ್ತಥಾ ॥**

- ***ಗೃಹ ಬೆಳಗುವವರು :***

ಹೀಗೆ ಪತಿವ್ರತಾ ಸ್ತ್ರೀಯರು ಗೃಹವನ್ನು, ಗೃಹದೇವತೆಗಳನ್ನು ಸಂತುಷ್ಟಗೊಳಿಸಿ ಬೆಳಗಿಸುವರು. ಇಂತಹವರು ಮನೆಗೆ ಮಹಾಲಕ್ಷ್ಮೀಯಂತಿರುವರು. ಇವರನ್ನು ಎಲ್ಲಾ ರೀತಿಯಿಂದಲೂ ರಕ್ಷಿಸಬೇಕು.

**ಪೂಜನೀಯಾ ಮಹಾಭಾಗಾ ಪುಣ್ಯಶ್ಚ ಗೃಹದೀಪ್ತಯಃ ।**
**ಸ್ತ್ರಿಯಃ ಶ್ರಿಯೋ ಗೃಹಸ್ಯೋಕ್ತಾ ತಸ್ಮಾದ್ ರಕ್ಷ್ಯಾ ವಿಶೇಷತಃ ॥**

- ***ಗೃಹವಸ್ತುಗಳಲ್ಲಿ ಗೌರವ :***

ಪೊರಕೆ, ಒರಳು, ಒನಕೆ, ಒಲೆ, ಅಗ್ಗಿಷ್ಟಿಕೆ, ಹೊಸ್ತಿಲು ಇವೆ ಮೊದಲಾದ

ಭಗವಂತನ ಸೇವೆಗಾಗಿ ತಯಾರಾಗಿ ಇವುಗಳಲ್ಲಿ ಸನ್ನಿಹಿತಳಾಗಿರುವ ಲಕ್ಷ್ಮೀದೇವಿಯನ್ನು, ನಿತ್ಯ ಸನ್ನಿಹಿತಳನ್ನಾಗಿ ಮಾಡುವ ಇಚ್ಛೆವುಳ್ಳ ಸ್ತ್ರೀಯರು, ಇವುಗಳ ಮೇಲೆ ಕಾಲಿಡುವುದು. ಕಾಲಿನಿಂದ ದೂರ ಸರಿಸುವುದು, ಕುಳಿತುಕೊಳ್ಳುವುದು ಮಾಡಬಾರದು. ಇವೆಲ್ಲ ಉಪಲಕ್ಷಣ. ಪೂಜಾ ನೈವೇದ್ಯಾದಿ ಉಪಕರಣಗಳನ್ನು ಕಾಲಿನಿಂದ ಒದೆಯುವುದು, ಅದರ ಮೇಲೆ ಕುಳಿತುಕೊಳ್ಳುವುದು ನಿಷಿದ್ಧವು. ಇದು ಪುರುಷರಿಗೂ ನಿಷಿದ್ಧವೇ.

**ಉಲೂಖಲಂ ಚ ಮುಸಲಂ ತಥಾ ಚೈವ ರಹಟ್ಟಕಮ್ ।**
**ಪಾದಕ್ರಮಣಾತ್ ಪಾಪೀಯಾನ್ ನಾಪ್ನುಯಾದ್ ಉತ್ತಮಾಂ ಗತಿಂ॥**

**ಮಾರ್ಜನೀಂ ಚುಲ್ಲಿಕಾಂ ಷ್ಠೀವಂ ದೃಷ್ಟದಂ ಚೋಪಲಂ ತಥಾ ।**
**ನಾऽऽಕ್ರಾಮೇದ್ ಅಂಘ್ರಿಣಾ ಜಾತು ಪುತ್ರಾಗಾರ ಧನಕ್ಷಯಮ್ ॥**

- ***ಕಸಗುಡಿಸುವಾಗ ಪ್ರಾಣಿಹಿಂಸೆ ಆಗದಿರಲಿ :***

***"ಮಾಹಿಂಸ್ಯಾತ್ ಸರ್ವಾಣಿ ಭೂತಾನಿ"*** – ಎಂಬಂತೆ ಪ್ರತಿಯೊಂದು ಪ್ರಾಣಿಗೂ ನಿರ್ದಿಷ್ಟ ಕಾಲದವರೆಗೂ ಜೀವಿಸಲು ಭಗವಂತನ ಅವಕಾಶ ನೀಡಿರುವನು. ಹೀಗಾಗಿ ಯಾವ ಪ್ರಾಣಿಯನ್ನೂ ಕೊಲ್ಲಲು ಅಧಿಕಾರವಿರುವುದಿಲ್ಲ. ಕಸಗುಡಿಸುವ ಮಹಿಳೆಯರು ಇದನ್ನು ಗಮನಿಸಬೇಕು. ಸಣ್ಣ ಸಣ್ಣ ಇರುವೆ, ಹುಳುಗಳು, ಜಿರಳೆ, ಮೊದಲಾದವುಗಳು ಮೃತವಾಗದಂತೆ ಮೆಲ್ಲನೆಯ ಮೃದುವಾದ ಪೊರಕೆಯಿಂದ ಗುಡಿಸಬೇಕು. ಅವುಗಳು ಸಾಯುವಂತೆ ಅಥವಾ ಸಾಯಿಸುವಂತೆ ಕಸ ಬಳಿಯುಬಾರದು. ಈ ರೀತಿ ಕಸಗುಡಿಸುವುದರಿಂದ ಚಾಂದ್ರಾಯಣ ವ್ರತಕ್ಕೆ ಭಾಗಿಯಾಗುವಳು.

**ಶನೈಃ ಸಮ್ಮಾರ್ಜನಂ ಕುರ್ಯಾತ್ ಮಾರ್ಜನ್ಯಾ ಮೃದು ಕೂರ್ಚಯಾ।**
**ಪಶ್ಯನ್ ಪರಿಹರನ್ ಜಂತೂನ್ ಚಾಂದ್ರಾಯಣ ಫಲಂ ಲಬೇತ್ ॥**
*– ಬ್ರ.ಪು.*

ಮನೆಯಲ್ಲಿ ಕಸವನ್ನು ಆಗಾಗ ಗುಡಿಸಿ ಆಚೆಗೆ ಹಾಕುವುದರಿಂದ ಅಲಕ್ಷ್ಮಿಯನ್ನು ದೂರ ಮಾಡುವವಳ ಮನೆಯಲ್ಲಿ ನಿತ್ಯವು ಲಕ್ಷ್ಮಿ ಸನ್ನಿಧಾನವು, ಕಸ ಬಿದ್ದಿರುವಾಗ ಉದಾಸೀನವಾಗಲೀ, ನಾಳೆ ಗುಡಿಸಿದರಾಯಿತು ಎಂದಾಗಲೀ, ಮಂಚದ ಕೆಳಗೆ ದಬ್ಬುದಾಗಲೀ ನಿಷಿದ್ಧವು.

**ನೈರಂತರ್ಯೇಣ ಯಾ ಕುರ್ಯಾತ್ ಸಮ್ಮಾರ್ಜನಮತಂದ್ರಿತಾ ।**
**ಅಗ್ನಿಷ್ಟೋಮಂ ತು ಪಕ್ಷೇಣ ವಾಜಪೇಯಂ ತು ಮಾಸತಃ ॥**

*– ಬ್ರಹ್ಮಾಂಡ*

- ***ದೇವರ ಮನೆಯ ಶುದ್ಧಿ :***

ಗೃಹಿಣಿಯು ದೇವರ ಮನೆಯನ್ನು ಸ್ವಚ್ಛವಾಗಿಟ್ಟಿರಬೇಕು. ಹಿಂದಿನ ದಿವಸ ಹೂಗಳು, ಕಸ, ಧೂಳು, ಸಿಪ್ಪೆ ಮೊದಲಾದ ಯಾವುದೇ ಅನಾವಶ್ಯಕ ವಸ್ತುಗಳನ್ನು ದೇವರ ಮನೆಯಲ್ಲಿ ಉಳಿಸಿರಬಾರದು. ಧೂಳು ಕಂಡರೆ ಒದ್ದೆ ಬಟ್ಟೆಯಿಂದ ಒರಸಿ ಫಳಫಳ ಹೊಳೆಯುವಂತೆ ಇಟ್ಟಿರಬೇಕು.

ಈ ರೀತಿ ಒಂದು ವರ್ಷ ಮಾಡಿದ ಸ್ತ್ರೀಯು ಅಶ್ವಮೇಧಯಾಗ ಫಲಕ್ಕೆ ಭಾಗಿಯಾಗುವಳು. ಅನೇಕ ಸಹಸ್ರ ವರ್ಷ ಪತಿಲೋಕದಲ್ಲಿ ಸುಖಿಸುವಳು.

- ***ಮನೆಯ ಮುಂದೆ ಶುದ್ಧ ಮಾಡಿದ್ದರ ಫಲ :***

ಯಾವ ನಾರಿಯು ಮನೆಯ ಅಂಗಳವನ್ನು ಗುಡಿಸಿ, ಸಾರಿಸಿ, ರಂಗೋಲೆಯಿಂದ ಮಂಡಲಾಕಾರ, ಚಚ್ಚೌಕ, ಅರ್ಧಚಂದ್ರ, ಸೂರ್ಯರಥ, ಸರ್ಪಗಳ ಚಿತ್ರ, ವಿಷ್ಣುಪಾದಗಳು, ಅಷ್ಟಭುಜಾಕೃತಿ, ಷಟ್ಕೋಣ ಮೊದಲಾದ ಚಿತ್ರಗಳನ್ನು ಶ್ರದ್ಧಾಭಕ್ತಿಯಿಂದ ಬರೆಯುವಳೋ ಹಾಗೂ ಗಂಧ, ಪುಷ್ಪ ಅಕ್ಷತೆಗಳಿಂದ ಪೂಜಿಸುವಳೋ ಅವಳ ಮನೆಯ ಮೇಲೆ ಸರ್ವದೇವತೆಗಳ ದೃಷ್ಟಿಯೂ ಬಿದ್ದಿರುತ್ತದೆ.

**ಕೃತ್ವಾ ತು ಮಂಡಲಂ ಬಾಹ್ಯೇ ಸೂರ್ಯಂ ತತ್ರಾಕ್ಷತಾದಿಭಿಃ ।**
**ಪೂಜಯೇತ್ ಸತತಂ ಯಾ ವೈ ತಸ್ಯಾಸ್ತುಷ್ಯಂತಿ ದೇವತಾಃ ॥**

*–ಸ್ಕಾಂದ*

- ***ಗುಣಜ್ಯೇಷ್ಠ ಲಕ್ಷ್ಮೀಪೂಜೆ : ಪುತ್ರಪೌತ್ರ ಧನಾದಿಲಾಭ :***

ಗೃಹಿಣಿಯು ಪ್ರತಿದಿವಸದಲ್ಲಿಯೂ ದ್ವಾರಪೂಜೆ, ಹೊಸ್ತಿಲು ಪೂಜೆ, ತುಲಸೀಪೂಜೆ, ಲಕ್ಷ್ಮೀದೇವಿಯ ಪೂಜೆಯನ್ನು ಮಾಡಿ, ಸಕ್ಕರೆ, ಹಣ್ಣು, ಹಾಲು ಮೊದಲಾದ ವಸ್ತುಗಳನ್ನು ನಿವೇದಿಸಬೇಕು. ಜ್ಯೇಷ್ಠಳಾದ ಲಕ್ಷ್ಮೀದೇವಿಗೆ ನೈವೇದ್ಯ ಮಾಡದೆ ತಾನು ತಿಂದ ಸ್ತ್ರೀಗೆ ನರಕ ತಪ್ಪಿದ್ದಲ್ಲ.

**ನ ದದಾತಿ ಯದಾ ನಾರೀ ಜ್ಯೇಷ್ಠಾಯಾಃ ಪ್ರತ್ಯಹಂ ಬಲಿಃ ।**
**ಭೋಜ್ಯಾಶ್ಚೈವ ಯಥಾಶಕ್ತಿ ಸಾ ಪ್ರೇತ್ಯ ನರಕಂ ವ್ರಜೇತ್ ॥**
**ಅವಶ್ಯಮೇವ ನಾರೀಭಿಃ ಜ್ಯೇಷ್ಠಾಯಾಃ ಬಲಿಕರ್ಮಣಾ ।**
**ಪ್ರೀಣನಂ ಪ್ರತ್ಯಹಂ ಕಾರ್ಯಂ ಪುತ್ರಪೌತ್ರ ಧನೇಪ್ಸುಭಿಃ ॥**

- ***ಧನ, ಧಾನ್ಯ, ಭೂಷಣಗಳನ್ನು ಹಾಳು ಮಾಡಬಾರದು :***

ಲಕ್ಷ್ಮೀದೇವಿಯ ಸನ್ನಿಧಾನವಿರುವ ಅಕ್ಕಿ, ಬೇಳೆ, ಮೊದಲಾದ ಭಗವಂತನ ನೈವೇದ್ಯಕ್ಕೆ ಉಪಯುಕ್ತವಾದ ವಸ್ತುಗಳನ್ನು ಹಾಳು ಮಾಡಬಾರದು. ನೆಲದಲ್ಲಿ ಬಿದ್ದಿದ್ದರೆ ಆರಿಸಿ, ಎತ್ತಿಟ್ಟು ಕಣ್ಣಿಗೊತ್ತಿಕೊಳ್ಳಬೇಕು.

ಓಡಾಡುವ ಸ್ಥಳಗಳಲ್ಲಿ ಬಿದ್ದಿರುವ ಧಾನ್ಯಾದಿಗಳನ್ನು ಎತ್ತಿ ಕಣ್ಣಿಗೊತ್ತಿಕೊಳ್ಳದ ಗೃಹಿಣಿಯ ಮನೆಯಿಂದ ಗೌರವವಿಲ್ಲದ ಈ ಮನೆಯಲ್ಲಿ ವಾಸಿಸಲಾರೆ ಎಂದು ಲಕ್ಷ್ಮಿಯು ಆ ಮನೆಯನ್ನು ತ್ಯಜಿಸುವಳು.

**ರಥ್ಯಾಸು ಪತಿತಂ ಧಾನ್ಯಂ ದೃಷ್ಟ್ವಾ ಯತ್ನೇನ ವಂದಯೇತ್ ।**
**ಉದ್ಧೃತ್ಯ ಮೂರ್ಧ್ನಾ ಚಾದದ್ಯಾತ್ ಲಕ್ಷ್ಮೀರ್ನಶತಿ ನಾನ್ಯಥಾ ॥**
– *ಮಾರ್ಕಂಡೇಯ*

- ***ಧಾನ್ಯಲಕ್ಷ್ಮೀ – ಜ್ಯೇಷ್ಠಾ ಲಕ್ಷ್ಮೀ :***

ಗೋಧಿ, ಅಕ್ಕಿ, ಬೇಳೆ ಮೊದಲಾದ ಧಾನ್ಯಗಳಲ್ಲಿ ಭೃಗು ಪುತ್ರಿಯಾಗಿ ಅವತರಿಸಿ ಧಾನ್ಯಲಕ್ಷ್ಮಿಯಿರುವಳು. ದೇವ ಜ್ಯೇಷ್ಠಳೂ, ಗುಣಜ್ಯೇಷ್ಠಳೂ ಆದ ಲಕ್ಷ್ಮೀದೇವಿಯು (ಅಲಕ್ಷ್ಮಿಯಲ್ಲ) ಲವಣದಲ್ಲಿರುವಳು. ಧನ, ಆಭರಣ ಮೊದಲಾದವುಗಳಲ್ಲಿ ಮಹಾಲಕ್ಷ್ಮೀ ಇರುವಳು. ಇವಳ ಸ್ತೋತ್ರ ಹೀಗೆ ಇದೆ.

**ಜ್ಯೇಷ್ಠಾಯೈ ತೇ ನಮಸ್ತುಭ್ಯಂ ಶ್ರೇಷ್ಠಾಯೈ ತೇ ನಮೋ ನಮಃ ।**
**ಸರ್ವಾಯೈ ತೇ ನಮಸ್ತುಭ್ಯಂ ನಾರಾಯಣ್ಯೈ ನಮೋ ನಮಃ ॥**
**ಭಾರ್ಗವೀ ಸರ್ವಧಾನ್ಯೇಷು ಧನರಾಶಿಷು ತಿಷ್ಠತಿ ।**
**ಸಂತತಂ ಲವಣೇ ಜ್ಯೇಷ್ಠಾ ಸದಾ ವಾಸಂ ಕರೋತಿ ಹಿ ॥** – *ಲೌಗಾಕ್ಷಿ*

- ***ಜ್ಯೇಷ್ಠೆಯ ಪೂಜೆಯಿಂದ ಆಹಾರ ರುಚಿ :***

**ಅವಶ್ಯಮೇವ ನಾರೀಭಿಃ ಜ್ಯೇಷ್ಠಾಯಾಃ ಪೂಜನಂ ಸ್ಮೃತಮ್ ।**
**ಪ್ರೀಣನಂ ಪ್ರತ್ಯಹಂ ಕಾರ್ಯಂ ಪಾಕಸ್ತು ಸ್ವಾದುತಾಂ ನಯೇತ್ ॥**

- ***ಫಲವಿದು ಬಾಳ್ವಿಕೆ :***

ಮನೆಯನ್ನು ಶುದ್ಧೀಕರಿಸುವುದು, ಗೋಮಯ ಉಪಲೇಪನ, ಪಾತ್ರೆ ಶುದ್ಧಿ, ನೈವೇದ್ಯ ತಯಾರಿಸುವುದು, ಮೊದಲಾದ ನಾರಿಯರಿಗೆ ಹೇಳಿರುವ ಕಾರ್ಯಗಳೆಲ್ಲವನ್ನೂ ರೋಗಾದಿಗಳ ವಿನಹ ತಾನೇ ಮಾಡಬೇಕು. ಶೂದ್ರಾದಿ ಕೆಲಸಗಾರರಿಂದ ಗೃಹಶುದ್ಧ್ಯಾದಿಗಳು ಅಶುದ್ಧತೆಯನ್ನುಂಟು ಮಾಡುತ್ತದೆ.

- ***ಗೃಹಕೃತ್ಯ–ಅತ್ತೆ ಮಾವಂದಿರ ಸೇವೆ – ವಿಷ್ಣು ಪೂಜೆ :***

ತನ್ನ ಮನೆಯನ್ನು ಶುದ್ಧಿ ಮಾಡುತ್ತಿರುವೆನು ಎಂಬ ಸಂಕುಚಿತ ಭಾವನೆಯನ್ನು ಹೊಂದದೆ, ***"ಮೂರ್ಲೋಕ ಮಹಿತನ ಮನೆಯ ಪೂಜೆ"*** ಎಂದೇ ಬೇಸರ ಮಾಡಿಕೊಳ್ಳದೆ, ಸಂತೋಷದಿಂದ ಮಾಡುತ್ತಾ ಮಕ್ಕಳು, ಅತ್ತೆ, ಮಾವಂದಿರು, ಬಂಧು–ಬಳಗ ಇವರನ್ನು ಗೌರವಿಸುವುದು, ಉಪಚರಿಸುವುದು ಪೋಷಣೆ–ಪಾಲನಾದಿಗಳೆಲ್ಲವೂ ಅವರಂತರ್ಯಾಮಿಯಾದ ಭಗವಂತನ ಸೇವೆ ಎಂದೇ ಮಾಡಬೇಕು.

**ಪೋಷಣಂ ಪುತ್ರಮುಖ್ಯಾನಾಂ ವಿಷ್ಣೋಃ ಪೂಜೇತಿ ಚಿಂತಯೇತ್।**
**ತೇನೈವ ಸ ಲಭೇತ್ ಪುಣ್ಯಂ ನಿತ್ಯಾನಿತ್ಯಸುಖಪ್ರದಮ್ ॥** –ವಿಷ್ಣುರಹಸ್ಯ

- ***ಗೃಹಕೃತ್ಯ– ಲಕ್ಷ್ಮೀದೇವೀ :***

ಲಕ್ಷ್ಮೀದೇವಿಯು ತಾನೇ ತನ್ನ ಮನೆಯಾದ ವೈಕುಂಠವನ್ನು ಹಾಗೂ ಪತಿಯನ್ನು ಸೇವಿಸುವಳು. ಕೈಗೊಬ್ಬರು, ಕಾಲಿಗೊಬ್ಬರು ದೇವತೆಗಳು – ದೇವತಾ ಪತ್ನಿಯರು ಲಕ್ಷ್ಮೀದೇವಿಯ ಆದೇಶಕ್ಕಾಗಿ ಹಾತೊರೆಯುತ್ತಿರುವರು. ಹೀಗಿದ್ದರೂ ತನಗೆ ಕರ್ಮದ ಕಟ್ಟಳೆ ಇಲ್ಲದಿದ್ದರೂ ತಾನೇ ಭಗವಂತನ ಸೇವೆ ಮಾಡುತ್ತಿರುವಳೆಂದ ಮೇಲೆ, ಆಮುಕ್ತರೂ, ಅಸ್ವತಂತ್ರರೂ ಆದ ನಾವು ಮಾಡದಿದ್ದರೇ ಹೇಗೆ?

ಭಗವಂತನ ಪೂಜೆ ಎಂಬ ಭಾವನೆಯಿಲ್ಲದೆ ಎಷ್ಟೇ ಚೊಕ್ಕವಾಗಿ ಕರ್ಮ ಮಾಡಿದರೂ ವ್ಯರ್ಥವೇ ಆಗುತ್ತದೆ.

**ಪ್ರಾತಃ ಕಾಲೋದಿತಂ ಕರ್ಮ ನಿತ್ಯಂ ನೈಮಿತ್ತಿಕಂ ತಥಾ ।**
**ವಿಷ್ಣೋರಾಧನಾರ್ಥಾಯ ಕರಿಷ್ಯೇಽಹಂ ತವಾಜ್ಞಯಾ ॥**

ಎಂಬ ಪ್ರಾರ್ಥನೆಯೊಂದಿಗೆ ದಿನಗೃಹಕೃತ್ಯ ಆರಂಭಿಸಬೇಕು.

- ***ಗೃಹಿಣೀ ಎಂಬ ಶಬ್ದಾರ್ಥ :***

***"ಗೃಹಂ ನಯತೀತಿ ಗೃಹಿಣೀ"*** ಎಂಬಂತೆ ಗೃಹದಲ್ಲಿರುವ ಅಲಕ್ಷ್ಮಿಯನ್ನು ದೂರ ಓಡಿಸಿ, ಲಕ್ಷ್ಮ್ಯಾದಿ ಸರ್ವದೇವತೆಗಳನ್ನು ಮನೆಯಲ್ಲಿರುವಂತೆ ಮಾಡುವವಳೇ ಗೃಹಿಣೀ.

**ಗೃಹಸ್ಥಿತಾಮಲಕ್ಷ್ಮೀಂ ತಾಂ ದುರ್ಭಗಾಂ ಕಲಿ ಕಾರಿಣೀಂ ।**
**ದೂರಂ ನಯೇದ್ ವಾಽನಯತ್ಯಖಿಲಾನ್ ಸುರಾನ್ ।**
**ಗೃಹಿಣೀ ಕಥ್ಯತೇ ಸಾ ತು ಪತಿ ವಂಶವಿವರ್ಧಿನೀ ॥** – *ಬ್ರ.ಪುರಾಣ*

- ***ಗೃಹಕೃತ್ಯಗಳ ಮಧ್ಯೆ ಭಗವನ್ನಾಮಸ್ಮರಣೆ :***

ಗೃಹಿಣಿಯರೇ ಮೊದಲಾದ ಮನೆಯಲ್ಲಿರುವ ಕನ್ಯೆಯರು, ಸೊಸೆಯಂದಿರು, ಅತ್ತೆ ಮೊದಲಾದವರು ಭಗವಂತ ಶ್ರೀಕೃಷ್ಣನ ಪೂತನೀಮಾರಣಾದಿ ಬಾಲಕ್ರೀಡೆಗಳನ್ನು ಹಾಡುತ್ತಾ, ತಮ್ಮ ತಮ್ಮ ದೈನಂದಿನ ಗೃಹಕೃತ್ಯಗಳನ್ನು ಮಾಡಬೇಕು.

**ಗೃಹಿಣೀ ಪ್ರಮುಖಾಃ ಸರ್ವಾಃ ಗಾಯಂತ್ಯಃ ಪುರುಷೋತ್ತಮಂ ।**
**ಬಾಲಕ್ರೀಡಾದಿ ಚರಿತೈಃ ಕರ್ಮ ಕುರ್ಯುರತಂದ್ರಿತಾಃ ॥** –*ಸ್ಕಾಂದ*

- ***ಭಗವದ್ಭಕ್ತರ ಪೂಜೆ :***

ಭಗವಂತನನ್ನು ಪೂಜಿಸಿದರೂ ಭಗವದ್ಭಕ್ತರನ್ನು ಅಗೌರವಿಸಿದರೆ ***'ತದ್ಭಕ್ತ ದ್ವೇಷ ಏವಚ'*** ಎಂಬಂತೆ ಭಗವಂತನ ದ್ವೇಷದಲ್ಲಿಯೇ ಪರ್ಯ–ವಸನವಾಗುತ್ತದೆ.

**ಅರ್ಚಯಿತ್ವಾ ತು ಗೋವಿಂದಂ ತದೀಯಾನ್ ನಾರ್ಚಯೇತ್ತು ಯಃ।**
**ನ ಸ ಭಾಗವತೋ ಜ್ಞೇಯಃ ಕೇವಲಂ ದಾಂಬಕಃ ಸ್ಮೃತಃ ॥**
–*ಬೃ.ನಾರದ*

ಭಗವದ್ಭಕ್ತರು ಮಾಡಿರುವ ಪದ್ಯಗಳು, ಉಗಾಭೋಗ, ಸುಳಾದಿ, ಕೀರ್ತನೆ,

ದೇವರ ನಾಮಗಳನ್ನು ಪಾಡುತ್ತಾ, ಗೃಹಕೃತ್ಯಗಳನ್ನು ಮಾಡುತ್ತಾ ಆಯಾಯ ಕರ್ಮಗಳನ್ನು ಶ್ರೀಹರಿಗೆ ಅರ್ಪಿಸುತ್ತಿರಬೇಕು.

- ***ಧರ್ಮಚಾರಿಣೀ ಪತಿವ್ರತೆ :***

ಸ್ತ್ರೀಯು ಅಗ್ನಿಸಾಕ್ಷಿಕವಾಗಿ ವಿವಾಹವಾದಾಗ ಪತಿಯ ಸಹಧರ್ಮಚಾರಿಣೀ ಎನಿಸುವಳು. ಪತ್ನಿಯು ತನ್ನ ಸುಂದರ ಸ್ವಭಾವ-ವಿನಯಶೀಲತಗೆ, ಸಮಧುರವೂ-ಹಿತಕರವೂ ಆದ ಮಾತುಗಳಿಂದಲೂ, ಪತಿಯಲ್ಲಿ ಹೊರತು ಇತರರಲ್ಲಿ ಮನಸ್ಸನ್ನು ಹೋಗದಂತೆ ಮಾಡುತ್ತಾ, ಪ್ರಸನ್ನ ಮುಖಭಾವದಿಂದ ಪತಿಯೊಂದಿಗೆ ಸ್ತ್ರೀ ಧರ್ಮವನ್ನು ಆಚರಿಸುತ್ತಿರಬೇಕು.

ತನ್ನ ಪತಿಯೇ ಪರದೈವವೆಂದೆ ತಿಳಿಯಬೇಕು. ತನ್ನ ಪತಿಯನ್ನು ದೇವರ ಪ್ರತೀಕವೆಂದು ತಿಳಿದು ಪ್ರತಿಮಾದ್ವಾರ ಭಗವಂತನ ಪೂಜೆ ಮಾಡಬೇಕು. ಹೀಗೆ ಸೇವೆ ಮಾಡುವವಳಿಗೆ ಪತಿಯು ಮಾಡುವ ಧರ್ಮದಲ್ಲಿ ಅರ್ಧಭಾಗ ಧರ್ಮವನ್ನು ಪಡೆಯುವಳು.

ಪತಿಯು ಕೋಪದಿಂದ ಕಠೋರ ಮಾತುಗಳನ್ನಾಡಿದರೂ, ಪ್ರಸನ್ನ ಮುಖದಿಂದ ಮಂಜುಭಾಷಿಣಿಯಾಗಿ ಉತ್ತರ ನೀಡಬೇಕು.

ಯಾವ ಸ್ತ್ರೀಯು ತನ್ನ ಪತಿಯು ರೋಗಿಯಾಗಿರಲಿ, ಧನಹೀನನಾಗಿರಲಿ, ದೀನನಾಗಿದ್ದರೂ ತನ್ನ ಪುತ್ರನಲ್ಲಿ ಸ್ನೇಹ ಮಾಡುವಂತೆ ಸೇವೆ ಮಾಡುವಳೋ, ಅವಳೇ 'ಧರ್ಮಚಾರಿಣೀ' ಎನಿಸುವಳು. ಸುಮತಿಯೆಂಬ ಪತಿವ್ರತೆಯು ಗಂಡನು ಕುಷ್ಠ ಪೀಡಿತನಾಗಿದ್ದರೂ ಬೇಸರಪಡದೆ ಸೇವಿಸಿದಳು.

ತನ್ನ ಪತಿಯ ನಾಮವನ್ನಾಗಲಿ, ಪರ ಪುರುಷರ ಹೆಸರನ್ನಾಗಲೀ ಎಂದೂ ಹೇಳುವುದಿಲ್ಲ. ಪರಮಪುರುಷನಾದ ನಾರಾಯಣನ ನಾಮವೊಂದನ್ನು ಬಿಟ್ಟು ಬೇರೆ ಯಾವುದೇ ಪುಲ್ಲಿಂಗ ವಾಚಕ ಸೂರ್ಯ-ಚಂದ್ರಾದಿ ನಾಮಗಳನ್ನು ಹೇಳುವುದಿಲ್ಲವೋ ಅವಳೇ ಪತಿವ್ರತೆಯು.

ಸಂಯಮ -ಚತುರತೆಗಳಿಂದ ಪತಿಯನ್ನು ಸಂತೋಷಪಡಿಸುತ್ತಾ, ಪತಿಪ್ರಾಣಳಾಗಿರುವ ಸ್ತ್ರೀಯೇ ಧರ್ಮಚಾರಿಣಿಯು.

ಪತಿಯ ಸೇವೆಯನ್ನೂ ಪ್ರಸನ್ನಮನಸ್ಕಳಾಗಿ ಮಾಡುವವಳೂ, ಪತಿಯಲ್ಲಿ ವಿಶ್ವಾಸ, ವಿನಯ ಪೂರ್ಣಳಾಗಿ ವ್ಯವಹರಿಸುವಳೋ ಯಾವ ಸ್ತ್ರೀಯು ತನ್ನ ಅತ್ತೆ- ಮಾವಂದಿರನ್ನು ಭೋಜನಾದಿಗಳಿಂದ ತೃಪ್ತಿಪಡಿಸಿ ಅವರ ಚರಣ ಸೇವೆಯನ್ನು ಮಾಡುವಳೋ ಅವಳೇ ಧರ್ಮಚಾರಿಣಿಯು.

ಪತಿಯನ್ನು ಸಂತೋಷ ಪಡಿಸುವುದು ಬಿಟ್ಟು ಸ್ವರ್ಗಾದಿಗಳಲ್ಲಿಯೂ ಯಾರಿಗೆ ಇಚ್ಛೆ ಇರುವುದಿಲ್ಲವೋ, ಪತಿಯು ಮಹಾವ್ಯಾಧಿಗ್ರಸ್ತನಾದಾಗ್ಯೂ ಬೇಜಾರು –ಅಸಹ್ಯ ಪಡೆದೇ ಸೇವೆ ಮಾಡುವವಳೋ ಅವಳೇ ಧರ್ಮಚಾರಿಣೀ.

- ***ಅಧರ್ಮಚಾರಿಣಿ :***

ಯಾವ ಸ್ತ್ರೀಯು ನಾಚಿಕೆಯನ್ನು ತೊರೆದವಳೋ, ಕಲಹಕಾರಿಣಿಯಾಗಿದ್ದು ಪತಿಗೆ ಕಹಿಯಾದ ಮಾತುಗಳನ್ನಾಡುವವಳೋ, ಬಹಳ ಮಾತನಾಡುವವಳೋ, ಕೋಪ ಸ್ವಭಾವದವಳೋ, ಮಾತು ಮಾತಿಗೂ ಚುಚ್ಚುತ್ತಿರುವಳೋ, ಪ್ರೀತಿಯಾಗಲಿ, ದಯೆಯಾಗಲೀ ಇಲ್ಲವೋ ಆಲಸ್ಯದಿಂದ ಬಹಳ ನಿದ್ರಿಸುವಳೋ, ಅತ್ತೆ–ಮಾವಂದಿರಿಗೆ ಗೌರವವಿಲ್ಲದೆ ನಡೆಯುವಳೋ, ವಿಚಾರ ಮಾಡದೆ ಕಾರ್ಯವೆಸಗುವಳೋ, ಮನೆಯನ್ನು ಚೊಕ್ಕವಾಗಿಡದೆ ಅಲಕ್ಷ್ಮಿಯ ಮನೆಯಂತೆ ಇಟ್ಟಿರುವಳೋ, ತಾನು ಮಂಗಳ ವಸ್ತುಗಳನ್ನು ತ್ಯಜಿಸಿ ಅಮಂಗಳವಾಗಿರುವಳೋ ಅವಳು 'ಅಧರ್ಮಚಾರಿಣೀ'.

**ಧನ್ಯೋಗೃಹಸ್ಥಾಶ್ರಮಃ ।**

ಸ್ತ್ರೀ ಪುರುಷರು ಸ್ವಾಮಿ–ಭೃತ್ಯಭಾವದಿಂದಲೂ ಸುಖಿ–ಸುಖಿಭಾವದಿಂದ ಇದ್ದಾಗ ಜೀವನ ಸುಗಮವಾಗುತ್ತದೆ. ಪುರುಷನಿಗೆ ಭಾರ್ಯೆಯು ವಾಮಾಂಗವೆನಿಸಿದ್ದು ಅವಳಿಂದಲೇ ಗೃಹಸ್ಥನೆನಿಸುವನು.

**ನ ಗೃಹೇಣ ಗೃಹಸ್ಥಃ ಸ್ಯಾತ್ ಭಾರ್ಯಯಾ ಕಥ್ಯತೇ ಗೃಹೀ ॥**

ಭಾರ್ಯೆಯು ಇಲ್ಲದ ಗೃಹವು ಭವನವೆನಿಸುವುದಿಲ್ಲ. ಕಾಂತಿಯಿಲ್ಲದ ಗೊಂಡಾರಣ್ಯವೇ ಸರಿ (ಭ+ವನ) ***(ಭಾರ್ಯಾಹೀನಂ ಗೃಹಂ ವನಂ).***

ಯಾರಿಗೆ ಪತಿವ್ರತೆಯಾದ ಮಡದಿ ಇರುವಳೋ ಅವನು ನಂಬಲು ಯೋಗ್ಯನಾಗಿರುವನು. ***(ಯಃ ಸದಾರಃ ಸಃ ವಿಶ್ವಾಸ್ಯಃ).***

ಉಭಯ ಲೋಕದಲ್ಲಿಯೂ ಸುಖ ಸಂಪತ್ತುಗಳು ಪತ್ನಿಯಿಂದಲೇ ಪರಲೋಕವನ್ನು ಜಯಿಸಲು ಪತ್ನಿಯ ಮೂಲಕವೇ ಸಾಧ್ಯ. ದೇವತಾ ಋಣ – ಪಿತೃಋಣ – ಮೊದಲಾದ ಪಂಚ ಋಣ ತೀರಿಸಲು ಭಾರ್ಯೆಯೇ ಕಾರಣಳು. ***(ಪ್ರಜಯಾ ಪಿತೃಭ್ಯಃ).***

ಗೃಹಸ್ಥಾಶ್ರಮವನ್ನು ಸ್ವೀಕರಿಸಿದ ವ್ಯಕ್ತಿಯು ಜಿತೇಂದ್ರಿಯನಾಗಿ ಸಿದ್ಧಿ ಪಡೆಯಲು ಸಾಧ್ಯವಾಗುತ್ತದೆ. ***(ದಾಂತಃ ಸರ್ವತ್ರ ಸಿಧ್ಯತಿ).***

ಪಿತೃಗಳು, ದೇವತೆಗಳು, ಅತಿಥಿಗಳ ಪೂಜಾದಿ ಕಾರ್ಯಗಳು ಗೃಹಸ್ಥಾಶ್ರಮ–ದಲ್ಲಿ ಮಾತ್ರ ಸಾಧ್ಯವಾಗಿರುತ್ತದೆ.

**ದೇವಪಿತ್ರ್ಯತಿಥೀಜ್ಯಾದಿ ನ ಅಭಾರ್ಯಃ ಕಂ ಚಾರ್ಹತಿ ।**

ಪುರುಷನಿಗೆ ಸುಖಸಂಪತ್ತು ಪತ್ನ್ಯಧೀನವು. ***(ಭಾರ್ಯಾಧೀನಂ ಸುಖಂ ಪುಂಸಾಂ).***

ಧರ್ಮಾದಿಗಳ ಫಲ ಪ್ರಾಪ್ತಿಯಲ್ಲಾಗಲೀ, ಧರ್ಮಾಭಿವೃದ್ಧಿಯಲ್ಲಾಗಲೀ ಭಾರ್ಯೆಯ ಪಾತ್ರ ಅಧಿಕ.

ಪತಿವ್ರತೆಗೆ ತೀರ್ಥವೆಂದರೆ ಪತಿಯೆ ಆಗಿರುವನು.

**ನಾರೀಣಾಂ ಚ ಸದಾ ತೀರ್ಥಂ ಭರ್ತಾ ।**

ಅವನನ್ನು ಮನಸಾ ಕಾಯೇನ ವಾಚಾ ತ್ರಿಕರಣಗಳಿಂದಲೂ ಪ್ರತಿನಿತ್ಯವೂ ಪೂಜಿಸಬೇಕು. ಪತ್ನಿಗೆ ಪತಿಯು ಬಲಭಾಗವೆನಿಸಿದ್ದಾನೆ. ಪತಿಯಿಲ್ಲದ ಸ್ತ್ರೀಯು ಬಲಭಾಗರಹಿತಳೆ ಸರಿ.

ಪತ್ನಿಯಿಲ್ಲದ ಪತಿಯು ಎಡಭಾಗ ರಹಿತನೆಂದೆ ಅರ್ಥ?

- ***ಪತ್ನಿಯು ಯಾವ ಭಾಗದಲ್ಲಿರಬೇಕು?***

ವಸ್ತುತಃ ಪತಿಗೆ ಪತ್ನಿಯು ವಾಮಾಂಗಳು, ಪತ್ನಿಗೆ ಪತಿಯು ದಕ್ಷಿಣಾಂಗನು. ಹೀಗಿದ್ದರೂ ಎಲ್ಲ ಧರ್ಮ ಕಾರ್ಯಗಳಲ್ಲಿ ಪತ್ನಿಯನ್ನು ತನ್ನ ಬಲಭಾಗದಲ್ಲಿ ಕೂಡಿಸಿಕೊಂಡೇ ಯಜ್ಞವಿವಾಹಾದಿಗಳನ್ನು ಮಾಡಬೇಕು. ಆದರೆ ಬ್ರಾಹ್ಮಣರು ಆಶೀರ್ವಾದ ಮಾಡುವಾಗ, ಶುಭಕಾರ್ಯಗಳಲ್ಲಿ ಮಾಡುವ ಪ್ರೋಕ್ಷಣೆ–ಅಭಿಷೇಕಾದಿಗಳು, ಬ್ರಾಹ್ಮಣರ ಪಾದಗಳನ್ನು ತೊಳೆಯುವಾಗ ಪತ್ನಿಯ ಪತಿಯು ಎಡಭಾಗದಲ್ಲಿರಬೇಕು.

**ಸರ್ವೇಷು ಧರ್ಮ ಕಾರ್ಯೇಷು ಪತ್ನೀ ದಕ್ಷಿಣತಃ ಸ್ಥಿತಾ ।**
**ಆಶೀರ್ವಚನ ಕಾಲೇ ತು ನಿತ್ಯೌಪಾಸನ ಮಾರ್ಜನೇ ।**
**ಏತೇಷು ವಾಮತಃ ತಿಷ್ಠೇತ್ ವಧೂರನ್ಯತ್ರ ದಕ್ಷಿಣೇ ॥**

*– ಗೃಹಕರ್ಮಸಮುಚ್ಚಯ*

- ***ಪತಿಸೇವಾ ಫಲ :***

ಸ್ತ್ರೀಯರಿಗೆ ಜ್ಞಾನ–ವಿಜ್ಞಾನ–ಆರೋಗ್ಯ–ಸೌಂದರ್ಯ–ಸೌಭಾಗ್ಯ ಇವೆಲ್ಲವೂ ಪತಿಯ ಸೇವೆಯಿಂದ ಲಭ್ಯವಾಗುತ್ತದೆ.

**ಜ್ಞಾನಂ ವಿಜ್ಞಾನ ಮಾರೋಗ್ಯಂ ರೂಪಂ ಸಂಪತ್ತಥೈವ ಚ ।**
**ಸೌಭಾಗ್ಯಂ ಚೈವ ನಾರೀಣಾಂ ಪ್ರಾಪ್ಯತೇ ಪತಿಸೇವಯಾ ॥**

ಸ್ತ್ರೀಯರಿಗೆ ಪತಿಯ ಮಾತನ್ನು ನಡೆಸುವುದೇ ಪರಮಧರ್ಮವು. ಇದರ ಹೊರತಾಗಿ ಪ್ರತ್ಯೇಕವಾಗಿ ಹೋಮವಾಗಲೀ, ವ್ರತವಾಗಲೀ, ಉಪವಾಸ–ವಾಗಲೀ ಹೇಳಿರುವುದಿಲ್ಲ.

**ನ ಚ ಸ್ತ್ರೀಣಾಂ ಪೃಥಣ್ ಯಜ್ಞಂ ನ ವ್ರತಂ ನಾಪ್ಯುಪೋಷಣಂ ।**
**ಭರ್ತಾ ಯದ್ ವದತೇ ವಾಕ್ಯಂ ತತ್ತತ್ ಕುರ್ಯಾದಕುತ್ಸಯಾ ॥**

*– ಪದ್ಮಪುರಾಣ*

- ***ಮುತ್ತೈದೆ ತೀರ್ಥಕ್ಷೇತ್ರ ಪ್ರತ್ಯೇಕವಿಲ್ಲ :***

ತಂದೆ–ತಾಯಿಗಳಾಗಲೀ ಅಣ್ಣಂದಿರಾಗಲೀ ಯಾರಿಗೆ ಅವಳನ್ನು ವಿವಾಹ ವಿಧಿಯಿಂದ ಒಪ್ಪಿಸುವರೋ ಅಂತಹ ಪತಿ ದುಶ್ಶೀಲ, ದುರ್ನಡತೆ–ವುಳ್ಳವನಾದರೂ ಅವನನ್ನು ತ್ಯಜಿಸದೆ ಸೇವಿಸುವುದು ಪತಿವ್ರತೆಯ ಕರ್ತವ್ಯವು. ಮೃತನಾದರೂ ಅವನ ಪ್ರೀತ್ಯುದ್ದೇಶಕ ಕಾರ್ಯಗಳನ್ನು ಮಾಡುತ್ತಿರಬೇಕು.

**ಯಸ್ಮೈ ದದ್ಯಾತ್ ಪಿತಾ ತ್ವೇನಾಂ ಭ್ರಾತ್ರಾ ವಾಽನುಮತೇ ಪಿತುಃ ।**
**ತಂ ಶುಶ್ರೂಷೇತ ಜೀವಂತಂ ಸಂಸ್ಥಿತಂ ಚ ನ ಲಂಘಯೇತ್ ॥**

**ದುಃಶೀಲಃ ಕಾಮವೃತ್ತೋ ವಾ ಧನೈರ್ವಾ ಪರಿವರ್ಜಿತಃ ।**
**ಸ್ತ್ರೀಣಾಮಾರ್ಯ ಸ್ವಭಾವಾನಾಂ ಪರಮಂ ದೈವತಂ ಪತಿಃ ॥**

ಸಾವಿತ್ರಿಯು ತನ್ನ ಅಲ್ಪಾಯುಪತಿಯ ಆಯುಷ್ಯವೃದ್ಧಿಗಾಗಿ ನಾನಾ ವಿಧ ವ್ರತೋಪವಾಸಗಳನ್ನು ಕೈಗೊಂಡು ತನ್ನ ಪತಿಗಾಗಿ ಸಕಲ ಭೋಗ–ಭಾಗ್ಯಗಳನ್ನು ತುಚ್ಛೀಕರಿಸದಳಷ್ಟೆ. ಅವಳ ಆದರ್ಶ ಪತಿವ್ರತೆಯರ ಮುಂದೆ ಇರಬೇಕು. ದೇವತೆಗಳು ಅವಳನ್ನು ಗೌರವಿಸುತ್ತಾರೆ.

**ಸಾವಿತ್ರೀ ಪತಿಶುಶ್ರೂಷಾಂ ಕೃತ್ವಾ ಸ್ವರ್ಗೇ ಮಹೀಯತೇ ।**

ಗಂಡನು ಬದುಕಿರುವಾಗ ಅವನ ಅನುಮತಿಯಿಲ್ಲದೆ ಯಾವುದೇ ವ್ರತೋಪವಾಸಗಳನ್ನು ಮಾಡಿದ ಪತ್ನಿಯು ತನ್ನ ಪತಿಯ ಆಯುಷ್ಯವನ್ನು ತಾನು ಸ್ವೀಕರಿಸುವಳು.

**ಪತ್ಯೌ ಜೀವತಿ ಯಾ ನಾರೀ ಉಪೋಷ್ಯ ವ್ರತಚಾರಿಣೀ ।**
**ಆಯುಷ್ಯಂ ಹರತೇ ಭರ್ತುಃ ಸಾ ನಾರೀ ನರಕಂ ವ್ರಜೇತ್ ॥**
*– ಪರಾಶರ–4/17*

ಏಕಾದಶೀ–ಕೃಷ್ಣಾಷ್ಟಮೀ – ಚಾತುರ್ಮಾಸ್ಯ ವ್ರತಗಳನ್ನು ಬಿಟ್ಟು ಉಳಿದ ಯಾವುದೇ ವ್ರತ ಉಪವಾಸ ಮಾಡಲು ಪತಿಯ ಅನುಜ್ಞೆ ಬೇಕೇಬೇಕು. ಪತಿಗೆ ಹೇಳದೆ ಮಾಡಿದ ವ್ರತೋಪವಾಸಗಳ ಫಲ ಲಭಿಸುವುದಿಲ್ಲ, ನರಕ ಪ್ರಾಪ್ತಿಯೂ ಮುಂದೆ ಶತಃ ಸಿದ್ಧ.

**ಅನ್ಯಥಾ ತತ್ಫಲಂ ನಾಸ್ತಿ ಪರತ್ರ ನರಕಂ ವ್ರಜೇತ್ ।** *–ಶಿವಪು–54/44*

ಪತಿಯ ಅನುಮತಿಯಿಲ್ಲದೆ ದಾನ–ಧರ್ಮಾದಿ ಧರ್ಮಕಾರ್ಯಗಳನ್ನೂ ಮಾಡಬಾರದು. ಪತ್ನಿಯರಿಗೆ ಪತಿಯನ್ನು ಬಿಟ್ಟು ಸ್ವತಂತ್ರವಾದ ಯಾವುದೇ ಧರ್ಮಾದಿ ಕಾರ್ಯಗಳಿಲ್ಲ.

**ಸ್ತ್ರೀಣಾಂ ನಾಸ್ತ್ಯಪರೋ ಧರ್ಮಃ ಭರ್ತಾರಂ ಪ್ರೋಚ್ಯ ಕಶ್ಚನ ।**
*– ಸ್ಕಾಂಧ–ವೈ–4/12*

ಸ್ತ್ರೀಯರಿಗೆ ದೇವತೆ, ಗುರು, ಗತಿ, ನಾಥ ಎಲ್ಲವೂ ಪತಿಯೇ ಆಗಿರುವನು. ಇಂತಹ ಪತಿಯನ್ನು ಬಿಟ್ಟು ಬೇರೆಯವರನ್ನು ಗುರುವಾಗಿ ಸ್ವೀಕರಿಸಬಾರದು.

**ಭರ್ತಾನಾಥೋ ಗತಿರ್ಭರ್ತಾ ದೈವತಂ ಗುರುರೇವ ಚ ।**
**ತಸ್ಯ ವಶ್ಯಂ ಚರೆದ್ ಯಾ ತು ಸ ಕಥಂ ಸುಖಮಾಪ್ನುಯಾತ್ ॥**
*–ನಾರದ –14/39*

- ***ಪತಿಗೃಹವೇ ಸ್ವರ್ಗ :***

ಪತ್ನಿಗೆ ಸುಖವಾಗಲೀ – ದುಃಖವಾಗಲೀ ಪತಿಯ ಗೃಹವೇ ಶ್ರೇಷ್ಠವು. ಪತಿಯ ಗೃಹದಲ್ಲಿ ಧನಾದಿಗಳಿಲ್ಲದಿದ್ದರೂ ಗಂಡನ ಮನೆಯಲ್ಲಿಯೇ ಪತ್ನಿಯು ವಾಸಿಸಬೇಕು. ಪತಿಯ ಸನ್ನಿಧಾನದಲ್ಲಿರುವುದು ಕಾಂಚನಮಯವಾದ ಮೇರುವಿನೊಂದಿಗೆ ಇದ್ದಂತೆ.

**ಭರ್ತೃಸ್ಥಾನೇ ಹಿ ವಸ್ತವ್ಯಂ ಖುದ್ಧಿ ಹೀನೇಽಪಿ ಭಾರ್ಯಯಾ ।**
**ಸ ಮೇರುಃ ಕಾಂಚನಮಯಃ ಸನ್ನಿಧಾನೇ ಪ್ರಚಕ್ಷತೇ ॥**

ಗಂಡನ ಮನೆ ಕ್ಷುಲ್ಲಕ ಕಾರಣಗಳಿಂದ ತೊರೆದು ತವರು ಮನೆಗೆ ಹೋದ ಮಂದ ಭಾಗ್ಯಳು ಮುಂದಿನ ಜನ್ಮಗಳಲ್ಲಿ ವೈಧವ್ಯವನ್ನು ಅನುಭವಿಸುವಳಲ್ಲದೆ ಮೃತಳಾಗಿ ಮಹಾನರಕಕ್ಕೆ ಬೀಳುವಳು.

**ಪಿತೃಸ್ಥಾನಾಶ್ರಯರತಾ ನಾರಿ ತಮಸೇ ಮಜ್ಜತಿ ಧ್ರುವಂ ।**

ವಿವಾಹಿತ ಸ್ತ್ರೀಯು ತನ್ನ ಪತಿಯನ್ನು ತೊರೆದು ಬಹಳ ಕಾಲವಾಸವನ್ನು ಬಂಧು ಬಳಗದಲ್ಲಿಯೂ ವಾಸಿಸಬಾರದು.

**ನಾರೀಣಾಂ ಚಿರವಾಸೊ ಹಿ ಬಾಂಧವೇಷು ನ ರೋಚತೇ ।**

*–ಆದಿ –74/12*

- ***ಅರ್ಧಾಂಗೀ – ಅರ್ಧ ಪುಣ್ಯಭಾಗೀ :***

ಈ ರೀತಿ ತನ್ನ ಪತಿಯನ್ನೆ ಅನುಸರಿಸಿ ಬಾಳುವ ಪತಿವ್ರತೆಗೆ ಪತಿಯು ಮಾಡಿದ ಪುಣ್ಯದಲ್ಲಿ ಅರ್ಧಭಾಗ ಬಂದು ಸೇರುತ್ತದೆ.

**ಸ್ವಪತೇರಪಿ ಪುಣ್ಯಸ್ಯ ಯೋಷಿದರ್ಧಮವಾಪ್ನುಯಾತ್ ।**
**ಚಿತ್ರಸ್ಯಾನುವ್ರತಾ ಶಶ್ವದ್ ವರ್ತತೇ ತುಷ್ಟಿಕಾರಿಣೀ ॥**

*– ಪದ್ಮ ಉತ್ತರ 112/27*

- ***ಪಾಪದ ಲೇಪವಿಲ್ಲ :***

ಪತ್ನಿಯು ಪತಿಸೇವೆ – ಪತಿಯು ಯಾರನ್ನು ಗೌರವಿಸುವನೋ ಅವರ ಸೇವೆ. ಅವರ ಶುಶ್ರೂಷೆ – ಅವರಿಗೆ ಅನುಕೂಲವಾಗಿರುವುದು – ಅವನ ಹಿತವನ್ನೇ ಬಯಸುವುದು, ಪತಿಯು ಮಾಡುವ ವ್ರತೋಪವಾಸಗಳನ್ನು ಮಾಡುವುದು. ಇವುಗಳಿಂದ ಪತಿಯ ಅರ್ಧ ಪುಣ್ಯಕ್ಕೆ ಭಾಗಿಯಾದರೂ ಪತಿಯು ಮಾಡಿದ ಪಾಪಕ್ಕೆ ಭಾಗಿಯಾಗಲಾರಳು.

- ***ಗಂಡನನ್ನು ತ್ಯಜಿಸಬಾರದು :***

ಸ್ತ್ರೀಯು ಮತ್ತೊಬ್ಬರ ಅಧೀನದಲ್ಲಿಯೇ ಇರಬೇಕು. ಇದೊಂದು ಶಾಸ್ತ್ರ ವಿಧಿಸಿರುವುದು ಅವಳ ರಕ್ಷಣೆಗಾಗಿಯೇ.

ಗಂಡನನ್ನು ಕಳೆದುಕೊಂಡವಳೂ ಸಹ ತಂದೆ, ತಾಯಿ, ಪುತ್ರ, ಅಣ್ಣ ತಮ್ಮಂದಿರು, ಅತ್ತೆ-ಮಾವ ಇವರುಗಳನ್ನು ಬಿಟ್ಟಿರಬಾರದು. ಸ್ತ್ರೀಯು ಯಾರಾದರೂ ಒಬ್ಬರ ಹತ್ತಿರವಿರಬೇಕೆಂಬುದೇ ಸ್ತ್ರೀಧರ್ಮವು.

ಹೀಗಿರುವಾಗ ಯಾವ ಸ್ತ್ರೀಯು ಬಂಧು-ಬಾಂಧವರನ್ನು ತ್ಯಜಿಸಿ, ಬೇರೊಂದು ಕಡೆ ವಾಸ ಮಾಡುವ ಅಪೇಕ್ಷೆಯಿಂದ ಹೋಗುವಳೋ ಅವಳು ಸ್ತ್ರೀಧರ್ಮವನ್ನು ತ್ಯಜಿಸಿದ ಪಾಪಕ್ಕಾಗಿ ಬಹು ನರಕ ಹೊಂದುವಳು.

ತಂದೆ-ತಾಯಿಗಳನ್ನು ತ್ಯಜಿಸಿ ಹೋದ ಪಾಪದಿಂದಾಗಿ ಮಹಾನರಕ ಭಾಗಿಯಾಗುವಳು.

ಕೋಪ-ತಾಪಗಳಿಂದಾಗಲೀ, ತಾಡನೆ- ನಿಂದೆಗಳಿಂದಾಗಲೀ ಮನೆಬಿಟ್ಟು ಹೋಗಿದ್ದರೆ, ಪರಸಂಗ ಮಾಡದಿದ್ದರೆ, ಹತ್ತು ದಿವಸದ ಒಳಗೆ ಪುನಃ ಬಂದರೆ ಅವಳನ್ನು ಸ್ವೀಕರಿಸಬಹುದು. ಮನೆ ಬಿಟ್ಟು ಬಹು ಪುರುಷರೊಂದಿಗೆ ಸಂಚಾರ ಮಾಡಿದ್ದಾದರೆ ಅವಳೂ 'ವ್ಯಭಿಚಾರಿಣಿ' ಎನಿಸಿ ಪುನಃ ಸೇರಿಸಿಕೊಳ್ಳಬಾರದು.

**ಬ್ರಾಹ್ಮಣೀ ತು ಯದಾ ಗಚ್ಛೇತ್ ಪರಪುಂಸ ವಿವರ್ಜಿತಾ ।**
**ಗತ್ವಾ ಪುಂಸಶ್ಚ ತಂ ಯಾತಿ ತ್ಯಜೇಯುಃ ತಾಂ ತು ಗೋತ್ರಿಣಃ ॥**

- ***ಗಂಡನು ಹೊಡೆದಾಗ :***

ಗಂಡನು ಪತ್ನಿಯನ್ನು ಹೊಡೆದಾಗ ಕೋಪಯುಕ್ತಳಾಗಿ ಹೊರಗೆ ಹೋಗಿ ಕೋಪ ಶಾಂತವಾದ ಮೇಲೆ ಮನೆಗೆ ಬಂದಾಗ ಪರಪುರುಷ-ಸಂಗವಿಲ್ಲದಿರುವಾಗ ಸೇರಿಸಿಕೊಳ್ಳಬಹುದು. ಪರಪುರುಷ ಸಂಗವಾಗಿದ್ದರೆ ಪ್ರಾಯಶ್ಚಿತಪೂರ್ವಕ ಸೇರಿಸಿಕೊಳ್ಳಬೇಕು.

**ಅದ್ವಿತೀಯಾಽಽಗತಾ ಚೈವ ಪುನರಾಗಮನಂ ಭವೇತ್ ।**

ಪತಿಯು ಸಗುಣನಾಗಿರಲಿ – ನಿರ್ಗುಣನಾಗಿರಲಿ ಪತಿಯನ್ನು ಪತ್ನಿಯು ತ್ಯಜಿಸಬಾರದು. ಹಾಗಾದಲ್ಲಿ ಕಾಲಸೂತ್ರವೆಂಬ ನೇಣುಗಂಬದಲ್ಲಿ ಸೂರ್ಯ-ಚಂದ್ರರಿರುವ ತನಕ ಜೋತಾಡಬೇಕಾಗುತ್ತದೆ. (ಬ್ರಹ್ಮ 9/71)

ಗಂಡನಿಗೆ ವಿಪ್ರಿಯ ಮಾತನಾಡುವ, ವಿಪ್ರಿಯವನ್ನೆ ಮಾಡುವ ಸ್ತ್ರೀಯು ಕುಂಭೀಪಾಕ ನರಕ ಅನುಭವಿಸಿ ಭೂಮಿಯಲ್ಲಿ ಚಂಡಾಲ ಕನ್ಯೆಯಾಗಿ ಹುಟ್ಟುವಳು.

- ***ಪತಿಯನ್ನು ಧಿಕ್ಕರಿಸಿದರೆ ಆಗುವ ಅನರ್ಥ :***

ಪತಿಯನ್ನು ನಿಂದಿಸಿದರೆ ಅವಳು ಮುಂದಿನ ಜನ್ಮಗಳಲ್ಲಿ ಪುಷ್ಪವತಿಯೇ ಆಗುವುದಿಲ್ಲ.

**ಪತಿನಿಂದಾ ಸುಪಾಪೇನ ನ ಸ್ತ್ರೀ ಪುಷ್ಪವತೀ ಭವೇತ್ ।**

– *ಕರ್ಮವಿಪಾಕ 7/3*

ಪತಿಯು ಮಲಗಿದ ಮೇಲೆ ಬಹಳಷ್ಟು ಪ್ರೀತಿಯನ್ನು ತೋರಿಸುತ್ತಾ ಪರಪುರುಷನಲ್ಲಿ ಆಸಕ್ತಳಾದವಳಿಗೆ ಬರೇ ಹೆಣ್ಣು ಮಕ್ಕಳುಗಳೇ ಹುಟ್ಟುವರು.

**ಪರಪುಂಸಿ ರತಾ ನಾರೀ ಸ್ವಪತಿಂ ಮಿಷ್ಟವಾದಿನೀ ।**
**ತೇನ ಪಾಪೇನ ಭೋ ದೇವಿ ಕನ್ಯಾಪತ್ಯಂ ಹಿಜಾಯತೇ ॥**

ಯಾವಾಗಲೂ ಪರಪುರುಷನೊಂದಿಗೆ ವ್ಯವಹಾರ ಮಾಡುತ್ತಿರುವವಳಿಗೆ ಗರ್ಭ ನಿಲ್ಲುವುದೇ ಇಲ್ಲ ***(ನಾರೀಗರ್ಭಂ ವಿನಶ್ಯತಿ).***

ಧನಾದಿಗಳಿಂದ ದುರ್ಬಲನಾದ ಪತಿಯನ್ನು ಬಿಟ್ಟು ಪರಪುರುಷನೊಂದಿಗೆ ಸುಗಮ ಮಾಡುವವಳು ಧನಾದಿ ದಾರಿದ್ರ್ಯ ಪೀಡಿತಳೂ – ಪುತ್ರರಹಿತಳೂ ಆಗುವಳು.

ಗಂಡನಿಗೆ ನೀಡದೆ ತಾನೊಬ್ಬಳೆ ರುಚಿರುಚಿಯಾದ ಆಹಾರ ಪದಾರ್ಥಗಳನ್ನು ತಿನ್ನುವ ನಾರಿಯು –ಬಾಯಲ್ಲಿ ಕೆಟ್ಟ ದುರ್ವಾಸನೆಯನ್ನು ಹೊಂದಿರುತ್ತಾಳೆ ***(ನಾರೀ ಮುಖೇ ದೌರ್ಗಂಧ್ಯಧಾರಿಣೀ)***

ಪತಿಯನ್ನೇ ಹತ್ಯೆ ಮಾಡುವವಳು ವಿಧವೆಯಾಗುವಳು.

**ಸ್ವಪತಿಘ್ನೀ ಯಾ ನಾರೀ ರಂಡಾ ಭವತಿ ನಾನ್ಯಥಾ ।**

ಗರ್ಭಪಾತ ಮಾಡಿಸಿಕೊಂಡ ನಾರಿಗೆ ಪದೇ ಪದೇ ಜ್ವರ ಹಾಗೂ ಹೊಟ್ಟೆನೋವು ಬರುತ್ತಿರುತ್ತದೆ ***(ಜ್ವರೇಣ ಕುಕ್ಷಿಪೀಡನಂ)***

ಪತಿಯನ್ನು ಹೀನಾಯವಾಗಿ ಬೈದರೆ ಅವಳಿಗೆ ಕಂಠರೋಗ, ಥೈರಾಡ್ ರೋಗ, ಗಳಗಂಡಾದಿ ದೋಷಗಳಿಗೆ ತುತ್ತಾಗುವಳು ಹಾಗೂ ಮೂಗಿನ ರೋಗಗಳಿಗೆ ಬಲಿಯಾಗುವಳು.

ಅತ್ತೆ–ಮಾವಂದಿರನ್ನು ಕ್ರೂರವಾಗಿ ನಿಂದಿಸುವಳು, ನಿತ್ಯವು ತೊಂದರೆ

ಕೊಡುವಳು. ಅವರ ಹೊಟ್ಟೆ ಉರಿಸುತ್ತಾ ನಿತ್ಯವೂ ಜಗಳವಾಡುವ ಸ್ತ್ರೀಯು ರಕ್ತ ಹೀರುವ ತಿಗಣೆಯಾಗುವಳು, ಮುಂದೆ ಮಾನವಜನ್ಮ ಬಂದಾಗಲೂ ಚರ್ಮವೆಲ್ಲ ಬಿಳಿಯಾಗಿರುತ್ತದೆ. ಪತಿಗೆ ಬೈದವಳು ತಲೆಯ ಹೇನು ಆಗುವಳು.

**ಶ್ವಶ್ರೋರ್ಗಾಲಿಪ್ರದಾ ನಾರೀ ನಿತ್ಯಂ ಕಲಹಕಾರಿಣೀ ।**
**ಸ ಜಲೌಕಾ ಚ ಯೂಕಾ ಸ್ಯಾದ್ ಭರ್ತಾರಂ ಭರ್ತ್ಸತೇ ಚ ಯಾ ॥**

ಪತಿಯನ್ನು ತ್ಯಜಿಸಿ ಪರಪುಂಸಾನುವರ್ತಿನಿಯಾದವಳು ಬಾವುಲಿಯಾಗಿಯೂ, ಮನೆಯ ಹಲ್ಲಿಯಾಗಿಯೂ ವಾಸಿಸುವಳು ಅಥವಾ ಎರಡು ನಾಲಿಗೆಯ ಸರ್ಪವಾಗುವಳು.

**ಸ್ವಪತಿಂ ಪರಿತ್ಯಜ್ಯ ಪರಪುಂಸಾನುವರ್ತಿನೀ ।**
**ವಲ್ಗುಲೀ ಗೃಹಗೋಧಾ ಸ್ಯಾದ್ ದ್ವಿಮುಖೀವಾಽಥ ಸರ್ಪಿಣೀ ॥**

ಪತಿಯನ್ನು ನೋಯಿಸಿದ ಲೀಲಾ ಎಂಬ ಸ್ತ್ರೀಯು ಕುಂಭೀಪಾಕ ನರಕ ಅನುಭವಿಸಿ, ಹಂದಿಯಾಗಿ ಹುಟ್ಟಿದಳು. ನಂತರ ಬೆಕ್ಕಾಗಿ ಹುಟ್ಟಿದಳು. ನಂತರ ಹದ್ದಾಗಿ ಹುಟ್ಟಿದಳು. ಮುಂದೆ ಮನುಷ್ಯ ಯೋನಿಯಲ್ಲಿ ಜನಿಸಿ ಹುಟ್ಟಿದ ಮಕ್ಕಳನ್ನೆಲ್ಲ ಕಳೆದುಕೊಂಡಳು. ಒಬ್ಬ ಪುತ್ರನೂ ಉಳಿಯಲಿಲ್ಲ. ಮಹಾಘೋರ ರೋಗ ಪೀಡಿತಳಾಗಿ, ಜ್ವರದಿಂದ ಆಗಾಗ್ಗೆ ಪೀಡಿಸಲ್ಪಡುತ್ತಿದ್ದಳು. *(ಕರ್ಮವಿಪಾಕ 11/13)*

**ಮೃತವತ್ಸಾ ಭವೇನ್ನಾರೀ ರೋಗಾಶ್ಚ ವಿವಿಧಾಹ ಪ್ರಿಯೋ ॥**

- ***ಲಕ್ಷ್ಮೀದೇವಿಯು ವಾಸಿಸುವ ಸ್ತ್ರೀಯರು :***

ಸೌಭಾಗ್ಯಶಾಲಿನಿಯೂ, ಧೈರ್ಯವಂತಳೂ, ಕಾರ್ಯದಕ್ಷಳೂ, ಕಾರ್ಯನಿರತಳೂ, ಕ್ರೋಧರಹಿತಳೂ, ದೇವತಾರಾಧನ ತತ್ಪರಳೂ, ಮಾಡಿದ ಉಪಕಾರ ಸ್ಮರಿಸುವವಳೂ, ಜಿತೇಂದ್ರಿಯಳೂ, ಸಾತ್ವಿಕ ಗುಣಿಯೂ ಆಗಿರುವ ಸ್ತ್ರೀಯಲ್ಲಿ ಲಕ್ಷ್ಮೀದೇವಿಯೂ ವಾಸಿಸುವಳು.

ಕಾರ್ಯದಲ್ಲಿ ಅಲಸಿಯೂ, ನಾಸ್ತಿಕಳೂ, ವರ್ಣಸಂಕರ ಮಾಡುವವಳು, ಕೃತಘ್ನಳೂ, ದುರಾಚಾರಿ–ಕ್ರೂರಿ–ಕಳ್ಳತನ ಮಾಡುವವಳೂ, ಗುರು – ಅತ್ತೆ – ಮಾವಂದಿರಲ್ಲಿ ದೋಷ ದೃಷ್ಟಿವುಳ್ಳವಳಲ್ಲಿ, ಲಕ್ಷ್ಮಿಯೂ ದೂರಸರಿದು ಅಲಕ್ಷ್ಮಿಯು ಒಂದು ಸೇರುವಳು.

ಸತ್ಯವಾಣಿಯೂ, ಸರಳ ಸ್ವಭಾವದವಳೂ, ಪ್ರಿಯದರ್ಶಿನಿಯೂ ಮಂಗಲಕರವಾದ ಶೀಲ–ಸ್ವಭಾವಗಳುಳ್ಳ ವಸ್ತ್ರಾಭಾರಣಭೂಷಿತೆಯಾದ ಪತಿವ್ರತೆಯರಲ್ಲಿ ಲಕ್ಷ್ಮೀಯು ಸ್ಥಿರವಾಗಿರುವಳು.

**ಸತ್ಯಾಸು ನಿತ್ಯಂ ಪ್ರಿಯದರ್ಶನಾಸು ಸೌಭಾಗ್ಯಮುಕ್ತಾಸು ಗುಣಾನ್ವಿತಾಸು।**
**ವಸಾಮಿ ನಾರೀಷು ಪತಿವ್ರತಾಸು ಕಲ್ಯಾನಶೀಲಾಸು ವಿಭೂಷಿತಾಸು ॥**

ವ್ರತಗಳನ್ನು ಆಚರಿಸುವುದು, ಪುರಾಣ ಶ್ರವಣ, ಪ್ರತಿದಿನ ಪ್ರತಿಕ್ಷಣ ಭಗವಂತನ ಚಿಂತನೆ, ಸಾಧುಸಜ್ಜನರೊಂದಿಗೆ ಮಾತ್ರ ಸಲ್ಲಾಪ. ನಿರಂತರ ಹರಿನಾಮ ಸ್ಮರಣೆಯನ್ನು ಮಾಡುತ್ತಿರುವ ಸ್ತ್ರೀಯಳಲ್ಲಿ ಲಕ್ಷ್ಮೀಯು ನಿತ್ಯ ವಾಸಿಸುವಳು.
*– ಸ್ಕಾಂದ 96*

- ***ಸ್ತ್ರೀಯರ ಪಾವಿತ್ರ್ಯತೆ :***

ಸ್ತ್ರೀಯರು ಸ್ವಾಭಾವಿಕವಾಗಿಯೇ ಪವಿತ್ರೀಕೃತಗಾತ್ರರಾಗುವರು. ಪ್ರತಿ ಮಾಸವು ರಜಸ್ಸು ಹೋಗುತ್ತಿದ್ದಂತೆ ಅವರು ಮಾಡಿದ ಮಾನಸಿಕ–ಕಾಯಿಕ–ವಾಚನಿಕ ದೋಷಗಳು ದೇಹದಿಂದ ಹೊರದೂಡಲ್ಪಡುವುವು.

**ಸ್ತ್ರಿಯಃ ಪವಿತ್ರಾಃ ಸತತಂ ನೈತಾಃ ದುಷ್ಯಂತಿ ಕೇನಚಿತ್ ।**
**ಮಾಸಿ ಮಾಸಿ ರಜಸ್ತಾಸಾಂ ದುಷ್ಕೃತಾನ್ಯಪಕರ್ಷತಿ ॥** – *ಸ್ಕಾ.ಕಾ.40*

ಸೋಮ–ಗಂಧರ್ವ–ವಹ್ನಿ ದೇವತೆಗಳು ವಿವಾಹಕ್ಕಿಂತ ಮೊದಲೆ ಕನ್ಯೆಯನ್ನು ಭೋಗಿಸುತ್ತಾರೆ. ನಂತರ ಮಾನವರು ಭೋಗಿಸುವರು.

ಈ ಭೋಗಕ್ಕೆ ಪ್ರತಿಫಲದಂತೆ ಚಂದ್ರನು ಶುಚಿತ್ವವನ್ನು, ಅಗ್ನಿಯು ಸರ್ವಪಾವಿತ್ರ್ಯತೆಯನ್ನು, ಗಂಧರ್ವರು ಸಮಧುರವಾದ ಮಾತನ್ನೂ ನೀಡಿರುವರು. ಇದರಿಂದ ಅವರು ಸರ್ವಥಾ ಶುಚಿಗಳಾಗಿರುವರು.

**ಸ್ತ್ರೀಣಾಂ ಶೌಚಂ ದದೌ ಸೋಮಃ ಪಾವಕಃ ಸರ್ವಮೇಧ್ಯತಾಮ್ ।**
**ಕಲ್ಯಾಣವಾಣೀಂ ಗಂಧರ್ವಃ ತೇನ ಮೇಧ್ಯಾಃ ಸದಾ ಸ್ತ್ರಿಯಃ ॥**

- ***ಸ್ತ್ರೀಯರು ಸರ್ವಾಂಗ ಪವಿತ್ರರು :***

ಆಡು, ಅಶ್ವಗಳ ಮುಖವು (ಬಾಯಿ) ಅತ್ಯಂತ ಪವಿತ್ರಗಳು. ಗೋವುಗಳು ಹಿಂಭಾಗದಲ್ಲಿ ಪವಿತ್ರಗಳು, ಬ್ರಾಹ್ಮಣರು ಪಾದಗಳಲ್ಲಿ ಪವಿತ್ರರು, ಸ್ತ್ರೀಯರಾದರೂ ಸರ್ವಾಂಗಗಳಲ್ಲಿಯೂ ಪವಿತ್ರರಾಗಿರುವರು.

**ಅಜಾಶ್ವಯೋರ್ಮುಖಂ ಮೇಧ್ಯಂ ಗಾವೊ ಮೇಧ್ಯಾಸ್ತು ಪೃಷ್ಠತಃ ।**
**ಪಾದತೋ ಬ್ರಾಹ್ಮಣಾಃ ಮೇಧ್ಯಾಃ ಸ್ತ್ರಿಯೋ ಮೇಧ್ಯಾಸ್ತು ಸರ್ವತಃ ॥**

- ***ಬಲಾತ್ಕಾರ ಮಾಡಿದರೂ ತ್ಯಜಿಸಬಾರದು :***

ಬಲಾತ್ಕಾರದಿಂದ ಭುಕ್ತಳಾದರೂ, ಚೋರರು ಅಪಹರಿಸಿದರೂ ಅವಳನ್ನು ಬಿಡಬಾರದು. ರಜಸ್ಸು ಹೋದಾಗ ಬಲಾತ್ಕಾರದಿಂದ ಭುಕ್ತಳಾದ ದೋಷವು ಪರಿಹೃತವಾಗುತ್ತದೆ.

**ಬಲಾತ್ಕಾರೋಪಭುಕ್ತಾ ವಾ ಚೋರಹಸ್ತಗತಾಪಿ ವಾ ।**
**ನ ತ್ಯಾಜ್ಯಾ ದಯಿತಾ ನಾರೀ ನಾಸ್ಯಾಃ ತ್ಯಾಗೋ ವಿಧೀಯತೇ ॥**
**ಸಂಶುದ್ಧೀ ರಜಸಾ ನಾರ್ಯಃ ತಟಿನ್ಯಾ ವೇಗತಃ ಶುಚಿಃ ॥ – *ಸ್ಕಾ. 40***

- ***ಸ್ತ್ರೀಯರ ಪುರುಷಗಮನ :***

ಸ್ತ್ರೀಯರು ವಿವಾಹಾನಂತರ ತನ್ನ ಪತಿಯನ್ನು ಬಿಟ್ಟು ಬೇರೆ ಪುರುಷರನ್ನು ಮನಸ್ಸಿನಿಂದಲೂ ಚಿಂತಿಸಬಾರದು. ಅಂತಹ ಪತಿವ್ರತೆಯು ಉಮೆಯಂತೆ ಪವಿತ್ರಳಾಗಿದ್ದು ಇಲ್ಲಿ ಬೇಗ ಲೋಕದಲ್ಲಿ ಕೀರ್ತಿಯನ್ನು, ಸುಖಾತಿಶಯನವನ್ನು ಹೊಂದುವಳು.

**ಮನಸಾಽಪಿ ಹಿ ಯಾ ನೇಹ ಚಿಂತಯೇತ್ ಪುರುಷಾಂತರಮ್ ।**
**ಸೋಮಯಾ ಸಹ ಸೌಖ್ಯಾನಿ ಭುಂಕ್ತೇ ಚಾತ್ರಾಪಿ ಕೀರ್ತಿಭಾಕ್ ॥**

- ***ವ್ಯಭಿಚಾರಿಣಿಯನ್ನು ಬಿಡಬಾರದು :***

ವ್ಯಭಿಚಾರಿಣಿಯಾದ ಪತ್ನಿಯು ತನ್ನ ಪತ್ನಿಯಾಗಿರುವ ಅಧಿಕಾರವನ್ನು ಕಳೆದುಕೊಳ್ಳುವಳು. ಹೀಗಿದ್ದರೂ ಭುಂಜಿಸಲು ಮಾತ್ರ ಆಹಾರ ನೀಡುತ್ತಾ, ಚಾಪೆಯಲ್ಲಿ ಮಲಗುವಂತೆ ಮಾಡಬೇಕೇ ವಿನಹ, ತನ್ನ ಹಾಸಿಗೆಗೆ ಸೇರಿಸಬಾರದು. ಬಿಟ್ಟುಬಿಟ್ಟರೇ ಪರಪುರುಷನನ್ನೇ ಅರಸುವ ವೇಶ್ಯೆಯೂ ಆಗಬಹುದು.

**ಹೃತಾಧಿಕಾರಂ ಮಲಿನಾಂ ಪಿಂಡಮಾತ್ರೋಪಜೀವಿನೀಮ್ ।**
**ಪರಿಭೂತಾಮಧಃ ಶಯ್ಯಾಂ ವಾಸಯೇದ್ ವ್ಯಭಿಚಾರಿಣೀಮ್ ॥**

- ***ಗೃಹಕ್ಕೆ ಮಂಗಲ :***

ಯಾವ ಗೃಹದಲ್ಲಿ ಪತ್ನಿಯು ಪತಿಯಿಂದಲೂ, ಪತಿಯು ಪತ್ನಿಯಿಂದಲೂ

ಸಂತುಷ್ಟರಾಗಿರುವರೋ ಅವರ ಮನೆಯಲ್ಲಿ ಪದೇ ಪದೇ ಮಂಗಳವುಂಟಾಗುತ್ತಿರುತ್ತದೆ.

**ಯತ್ರ ತುಷ್ಯತಿ ಭರ್ತ್ರಾ ಸ್ತ್ರೀ ಸ್ತ್ರಿಯಾ ಭರ್ತಾ ಚ ತುಷ್ಯತಿ ।**
**ತತ್ರ ವೇಶ್ಮನಿ ಕಲ್ಯಾಣಂ ಸಂಪದ್ಯೇತ ಪದೇ ಪದೇ ॥** – *ಸ್ಕಾ. 40–60*

- ***ಸ್ತ್ರೀಯರ ನಿಷಿದ್ಧ ಕರ್ಮಗಳು :***

ರಾತ್ರಿಯಲ್ಲಿ ಸ್ತ್ರೀಯರು ಹಾಗೂ ಪುರುಷರು ಮೊಸರನ್ನು ತಿನ್ನಬಾರದು. ಹಗಲಿನಲ್ಲಿ ಬೆಣ್ಣೆಯನ್ನು ತಿನ್ನಬಾರದು.

**ರಾತ್ರೌ ನ ದಧೀ ಭೋಕ್ತವ್ಯಂ ದಿವಾ ನ ನವನೀತಕಮ್ ।**

- ***ಎರಡೂ ಕೈಗಳಿಂದ ತುರಿಸಬಾರದು :***

**ಕಂಡೂಯನಂ ಚ ಶಿರಸಃ ಪಾಣಿಭ್ಯಾಂ ನ ಶುಭಂ ಮತಂ ।**
**ಆ ತಾಡನಂ ಕರಾಭ್ಯಾಂ ಚ ಕ್ರೋಶನಂ ಕೇಶಲುಂಚನಮ್ ॥**

ಸ್ತ್ರೀಯರು ಎರಡೂ ಕೈಗಳಿಂದ ಎದೆ, ತಲೆ ಹೊಡೆದುಕೊಳ್ಳುವುದು, ಜೋರಾಗಿ ಅಳುವುದು, ಕೂದಲನ್ನು ತುರಿಸುವುದು, ಕತ್ತರಿಸುವುದು ನಿಷಿದ್ಧವಾಗಿರುತ್ತದೆ.

- ***ಸತ್ಯವನ್ನೇ ಹೇಳಬೇಕು :***

ಸತ್ಯವನ್ನೇ ಹೇಳಬೇಕು, ಪ್ರೀಯವನ್ನೇ ಹೇಳಬೇಕು, ಸತ್ಯವಾದರು ಅಪ್ರಿಯವನ್ನಾಡಬಾರದು. ಒಳ್ಳೆಯದನ್ನು ನುಡಿಯಬೇಕು, ಒಳ್ಳೆಯದನ್ನೆ ಚಿಂತನೆ ಮಾಡಬೇಕು. ಒಳ್ಳೆಯವರೊಂದಿಗೆ ಸಹವಾಸ ಮಾಡಬೇಕು. ದುಷ್ಟರೊಂದಿಗೆ ಸಹವಾಸ ಮಾಡಬಾರದು.

**ಭದ್ರಮೇವ ವದೇನ್ನಿತ್ಯಂ ಭದ್ರಮೇವ ವಿಚಿಂತಯೇತ್ ।**
**ಭದ್ರೈರೇವೇಹ ಸಂಸರ್ಗಃ ನಾಭದ್ರೈಶ್ಚ ಕದಾಚನ ॥**

ಮಾತು – ಮನಸ್ಸು – ನಾಲಿಗೆ ಅಧೀನದಲ್ಲಿರಬೇಕು.

**ವಾಚೋವೇಗಂ ಮನೋವೇಗಂ ಜಿಹ್ವಾವೇಗಂ ಚ ವರ್ಜಯೇತ್ ।**

ಗೋವು–ಬ್ರಾಹ್ಮಣ–ಅಗ್ನಿಗಳನ್ನು ಎಂಜಲ ಕೈಯಿಂದ ಮುಟ್ಟಬಾರದು.

ಯಾವುದೇ ಪದಾರ್ಥಗಳನ್ನು ಮುಟ್ಟುವಾಗ ಎಂಜಲ ಕೈಯನ್ನು ತೊಳೆದುಕೊಂಡೇ ಮುಟ್ಟಬೇಕು.

**ಗೋ-ಬ್ರಾಹ್ಮಣಾಗ್ನೀನ್ ಉಚ್ಛಿಷ್ಟಪಾಣಿನಾ ನೈವ ಸಂಸ್ಪೃಶೇತ್ ।**

ಕಾಲು ತೊಳೆದ ನೀರು, ಮೂತ್ರ, ಎಂಜಲನ್ನ, ಎಂಜಲು ನೀರು, ಕಫೋತ್ಸರ್ಗ ಮೊದಲಾದ ದೇಹೋತ್ಸರ್ಗವನ್ನು ಮನೆಯಿಂದ ದೂರ ವಿಸರ್ಜಿಸಬೇಕು.

- ***ಹಲ್ಲಿನಿಂದ ಉಗುರು ಕತ್ತರಿಸಬಾರದು :***

ಹಲ್ಲು ಹಾಗೂ ಉಗುರಿನಿಂದ ಉಗುರನ್ನು ಕತ್ತರಿಸಲಾಗದು.

**ನೋತ್ಪಾಟಯೇತ್ ಲೋಮ ನಖಂ ದಶನೇನ ಕದಾಚನ ।**
**ಕರಜೈಃ ಕರಜಚ್ಛೇದಂ ತೃಣಚ್ಛೇದಂ ವಿವರ್ಜಯೇತ್ ॥**

- ***ಹಿಂದಿನಿಂದ ಗೃಹ ಪ್ರವೇಶಕೂಡದು :***

ತನ್ನ ಮನೆಯಾಗಲೀ, ಪರಮನೆಯಾಗಲೀ ಮುಂದಿನ ದ್ವಾರದಿಂದಲೇ ಪ್ರವೇಶಬೇಕು. ಹಿಂದಿನ ಬಾಗಿಲಿನಿಂದ ಪ್ರವೇಶಿಸಕೂಡದು. ಅಂತಹ ಸಂದರ್ಭವೊದಗಿದಾಗ ಬಂದ ದ್ವಾರದಿಂದಲೇ ಹೊರಹೋಗಬೇಕು.

**ಅದ್ವಾರೇಣ ನ ಗಂತವ್ಯಂ ಸ್ವವೇಶ್ಮ-ಪರವೇಶ್ಮನೋಃ ।**

- ***ಕಾಲು ತೊಳೆದು ಭೋಜನ :***

ಭೋಜನದ ಮೊದಲು ಎರಡು ಕೈಗಳೂ, ಎರಡು ಕಾಲಗಳು, ಬಾಯಿ ಹೀಗೆ ಪಂಚೇಂದ್ರಿಯಗಳನ್ನು ಶುದ್ಧೀಕರಿಸಿಕೊಂಡು, ನಂತರ ಭುಂಜಿಸಬೇಕು. ಕಾಲನ್ನು ತೊಳೆದು ಒದ್ದೆ ಕಾಲಿನಲ್ಲಿಯೇ ಭುಂಜಿಸಬೇಕು. ಆದರೆ ಮಲಗುವಾಗ ಕಾಲನ್ನು ತೊಳೆದು ಒರೆಸಿಕೊಂಡೇ ಮಲಗಬೇಕು. ಇದರಿಂದ ದೀರ್ಘಾಯುಸ್ಸು.

**ಆರ್ದ್ರ ಪಾದಕರಾಸ್ಯೋಽಶ್ನನ್ ದೀರ್ಘಕಾಲಂ ಚ ಜೀವತಿ ।**
**ಸಂವಿಶೇನ್ನಾರ್ದ್ರ ಚರಣೋ ನೋಚ್ಛಿಷ್ಟಃ ಕ್ವಚಿದಾವ್ರಜೇತ್ ॥**

ಹಾಸಿಗೆಯಲ್ಲಿ ಕುಳಿತು ಎಂದೂ ಭುಂಜಿಸಬಾರದು.

**ಶಯನಸ್ಥೋ ನ ಚಾಶ್ನೀಯಾತ್ ।**

ಹರಿದಿರುವ ಎಲೆಯಲ್ಲಿ ಭುಂಜಿಸಬಾರದು.

**ನ ಭಿನ್ನ ಭಾಜನೇ ಪತ್ರೇ ವಾಽಶ್ನೀಯಾತ್ ।**

ಸಂಧ್ಯಾಕಾಲದಲ್ಲಿ ತಿನ್ನುತ್ತಿರಬಾರದು.

ಉಪ್ಪು, ಎಣ್ಣೆ, ತುಪ್ಪ ಕೈಯಿಂದ ನೇರವಾಗಿ ಬಡಿಸಬಾರದು. ಪಲ್ಯ ಮೊದಲಾದ ವ್ಯಂಜನ ಪದಾರ್ಥಗಳನ್ನೂ ಸೌಟಿನಿಂದಲೇ ಬಡಿಸಬೇಕು. ತೊವ್ವೆ, ಪಾಯಸ, ಅನ್ನ ಮೊದಲಾದವುಗಳನ್ನು ಸೌಟಿನಿಂದಲೇ ಬಡಿಸಬೇಕು. ಕೈಯಿಂದ ಬಂದ ಈ ಪದಾರ್ಥಗಳು ಗೋಮಾಂಸ ತುಲ್ಯವಾಗುತ್ತವೆ.

**ಹಸ್ತದತ್ತಾಶ್ಚ ಯೇ ಸ್ನೇಹಲಕ್ಷಣಂ ವ್ಯಂಜನಾನಿ ಚ ।**
**ಪಾನೀಯಂ ಪಾಯಸಂ ಭಕ್ಷಂ ಘೃತಂ ಲವಣಮೇವ ಚ ।**
**ಹಸ್ತದತ್ತಂ ನ ಗೃಹ್ಣೀಯಾತ್ ತುಲ್ಯಂ ಗೋಮಾಂಸಭಕ್ಷಣಮ್ ॥**

* * * * * *



# 4. ಸ್ತ್ರೀಯರ ಪ್ರಾತರಾಹ್ನಿಕ



- ಸುಮಂಗಲೀ ಸ್ತ್ರೀಯರು ಬೆಳಿಗ್ಗೆ ಪ್ರಾತಃಕಾಲದಲ್ಲಿ ಗಂಡನು ಏಳುವುದಕ್ಕಿಂತ ಮೊದಲೇ ಎಂದರೆ 5 ಘಂಟೆಗೆ ಏಳಬೇಕು. ನಂತರ,

  **"ವಿಶ್ವಾಯ ನಮಃ"** ಎಂದು ಜಾಗ್ರದವಸ್ಥಾ ಪ್ರೇರಕನನ್ನು ಧ್ಯಾನಿಸಿ,

  **ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।**
  **ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ।**

  – ಎಂದು ಮಂತ್ರವನ್ನು ಉಚ್ಚರಿಸಬೇಕು.

- ***ಪ್ರಾತಃ ಸ್ತೋತ್ರಗಳು :***

  **ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠಗರುಡಧ್ವಜ ।**
  **ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು ॥**

  **ಕರಾಗ್ರೇ ವಸತಿ ಲಕ್ಷ್ಮೀಃ ಕರಮಧ್ಯೇ ಸರಸ್ವತೀ ।**
  **ಕರಮೂಲೇ ಸ್ಥಿತೇ ಗೌರೀ ಪ್ರಭಾತೇ ಕರದರ್ಶನಮ್ ॥**

  **ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ ।**
  **ಪಂಚಕನ್ಯಾ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ॥**

ಸೌಭಾಗ್ಯಂ ಮಹಾಲಕ್ಷ್ಮೀಂ ಭಾರತೀಂ ಭಾಗ್ಯದಾಯಿನೀಂ ।
ಸೌಮಾಂಗಲ್ಯ ಪ್ರದಾಂ ಗೌರೀಂ ಪ್ರಭಾತೇ ಪ್ರಣಮಾಮ್ಯಹಮ್ ॥
ಪಾತಿವ್ರತ್ಯಂ ಪಾತು ಸೀತಾ ಸಾವಿತ್ರೀ ಪಾತು ಮಂಡಲಮ್ ।
ದ್ರೌಪದೀ ದುಃಖ ಹಂತ್ರೀ ಸ್ಯಾತ್ ರುಗ್ಮಿಣೀ ರುಗ್ಮದಾ ಭವೇತ್ ॥
ಕಪಿಲಾಂ ದರ್ಪಣಂ ಭಾನುಂ ಭಾಗ್ಯವಂತಂ ಚ ಭೂಪತಿಮ್ ।
ಆಚಾರ್ಯಮನ್ನದಾತಾರಂ ಪ್ರಾತಃ ಪಶ್ಯೇತ್ ಪತಿವ್ರತಾಮ್ ॥
ಗೋಕರ್ಣಸೇತೂ ಹಿಮವತ್‌ಪ್ರಯಾಗೌ ಕಾಶ್ಮೀರ ಸೋಮೇಶ್ವರ ವಿಷ್ಣು ಪಾದಾಃ ।
ಶ್ರೀರಂಗ ಕೇದಾರ ಅನಂತ ಕನ್ಯೇ ಸ್ವಾಮಿನ್ ಕುರುಕ್ಷೇತ್ರ ಸದಾ ನಮಸ್ತೇ॥
ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।
ಪುರೀ ದ್ವಾರಾವತೀ ಚೈವ ಸಪ್ತೈತಾಃ ಮೋಕ್ಷದಾಯಕಾಃ ॥
ಪ್ರಾತಃ ಕಾಲಾದಿಕಂ ಕರ್ಮ ನಿತ್ಯ ನೈಮಿತ್ತಿಕಂ ತಥಾ ।
ಕೇಶವಾರಾಧನಾರ್ಥಾಯ ಕರಿಷ್ಯೇಽಹಂ ತವಾಜ್ಞಯಾ ॥

***ಭೂಮಿ ಪ್ರಾರ್ಥನೆ :***

ಸಮುದ್ರವಸನೇ ದೇವಿ ಪರ್ವತಸ್ತನಮಂಡಿತೇ ।
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶ ಕ್ಷಮಸ್ವ ಮೇ ॥
ವಿಷ್ಠಾಮೂತ್ರ ಕಘೋತ್ಸರ್ಗಮಪರಾಧಂ ಕ್ಷಮಸ್ವ ಮೇ ॥

***ಗೋಪೀಗೀತೆ :***

ಕನ್ನಡ ಗಜೇಂದ್ರಮೋಕ್ಷ – ಉದಯರಾಗ ಮೊದಲಾದವುಗಳನ್ನು ಪಠಿಸುವುದು.

- ***ಶೌಚವಿಧಿಃ :***

ಪತಿಯು ಏಳುವುದಕ್ಕಿಂತ ಮೊದಲೇ ಎದ್ದು ಪತಿಯ ಪಾದವನ್ನು ಸ್ಪರ್ಶಿಸಿ ನಮಸ್ಕರಿಸಬೇಕು. ನಂತರ ಕೇಶವನ ಧ್ಯಾನ ಮಾಡುತ್ತಾ ಮಲವಿಸರ್ಜನೆ ಮಾಡಿ ಶುದ್ಧವಾದ ಕೆಮ್ಮಣ್ಣಿನಿಂದ ದುರ್ಗಂಧ ಹೋಗುವವರೆಗೂ

ತೊಳೆದುಕೊಂಡು 7 ಬಾರಿ ಬಾಯಿ ಮುಕ್ಕಳಿಸಬೇಕು. ಮೃತ್ತಿಕಾಶೌಚ ಕಾಲದಲ್ಲಿ "ತ್ರಿವಿಕ್ರಮನ" ಸ್ಮರಣೆ ಮಾಡಬೇಕು. ನಂತರ ದಂತ ಧಾವನ ಮಾಡಬೇಕು. ದಂತಧಾವನ ಕಾಲದಲ್ಲಿ ಹರಿಯನ್ನು ನೆನೆಯುತ್ತ ದಂತಧಾವನ ಮಾಡಬೇಕು. ಮುಖಪ್ರಕ್ಷಾಲನೆಯನ್ನು ಮಾಡುವಾಗ ಶ್ರೀ ಮಾಧವನನ್ನು ಸ್ಮರಿಸುತ್ತಾ ನಂತರ ನಿರ್ಮಲವಾದ ಜಲವನ್ನು ತಂದು ತುಳಸಿಯ ಬಳಿಗೆ ಹೋಗಿ –

**ಪ್ರಸೀದ ತುಲಸಿದೇವಿ ಪ್ರಸಿದ ಹರಿವಲ್ಲಭೇ ।**
**ಕ್ಷೀರೋದಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಂ ॥**

ಎಂದು ನಮಸ್ಕರಿಸಬೇಕು. ನಮಸ್ಕರಿಸುವಾಗ ಶ್ರೀವಿಷ್ಣುವಿನ ಸ್ಮರಣೆ ಇರಬೇಕು. ನಂತರ ಗೋವಿಗೆ ವಂದಿಸಬೇಕು. ಗೋವಿಗೆ ನಮಸ್ಕರಿಸುವಾಗ ಉದ್ಗೀಥಾಭಿನ್ನ ಶ್ರೀಕೃಷ್ಣನನ್ನು ಸ್ಮರಿಸಬೇಕು.

- ***ದ್ವಾರ ಪ್ರಾರ್ಥನೆ :***

**ಶ್ರೀಕಾರರೂಪಿಣೀ ದೇವಿ ವೀಣಾಪುಸ್ತಕಧಾರಿನೀ ।**
**ವೇದಮಾತರ್ನಮಸ್ತುಭ್ಯಂ ಸೌಭಾಗ್ಯಂ ದೇಹಿ ಮೇ ಸದಾ ॥**

ಎಂದು ಪ್ರಾರ್ಥಿಸಿ ಹೊಸ್ತಿಲಲ್ಲಿರುವ ರಮಾನಾರಾಯಣರನ್ನು ಸ್ತುತಿಸಬೇಕು.

ರಂಗೋಲೆಯನ್ನು ಹಾಕಿ ನಂತರ ಹೀಗೆ ಪ್ರಾರ್ಥಿಸಬೇಕು.

**ಕಾತ್ಯಾಯನಿ ಮಹಾಮಾಯೇ ಮಹಾಯೋಗಿನ್ಯಧೀಶ್ವರಿ ।**
**ನಂದಗೋಪಸುತಂ ದೇವಂ ಪತಿಂ ಮೇ ಕುರು ತೇ ನಮಃ ॥**

- ***ಸ್ನಾನ ಸಂಕಲ್ಪ :***

ಅಮಂತ್ರಕವಾಗಿ ಎರಡು ಸಲ ಆಚಮನ ಮಾಡಿ ಬಟ್ಟೆಯನ್ನು ಧರಿಸಿಯೇ ಸ್ನಾನ ಮಾಡಬೇಕು.

**ಶುಭೇ ಶೋಭನೇ ಮುಹೂರ್ತೇ – ಆದ್ಯ ಬ್ರಹ್ಮಣಃ, ದ್ವಿತೀಯ ಪರಾರ್ಧೇ, ಶ್ವೇತವರಾಹಕಲ್ಪೇ – ವೈವಸ್ವತ ಮನ್ವಂತರೇ – ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ – ಜಂಬೂದ್ವೀಪೇ – ಭಾರತವರ್ಷೇ – ಭರತಖಂಡೇ – ಮೇರೋರ್ದಕ್ಷಿಣಪಾರ್ಶ್ವೇ – ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ**

ತೀರೇ – ಶಾಲಿವಾಹನಶಕೇ – ಬುದ್ಧಾವತಾರೇ – ರಾಮಕ್ಷೇತ್ರೇ ......... ಸಂವತ್ಸರೇ .......... ಅಯನೇ .......... ಋತೌ ............ ಮಾಸೇ ............ ಪಕ್ಷೇ ...........ಶುಭತಿಥೌ .......... ವಾಸರ – ಯುಕ್ತಾಯಾಂ – ಶುಭನಕ್ಷತ್ರ – ಶುಭಯೋಗ – ಶುಭಕರಣ – ಏವಂಗುಣ ವಿಶಿಷ್ಟಾಯಾಂ ಶುಭತಿಥೌ –

ಅಸ್ಮದಾದಿಗುರೂಣಾಂ – ಪರಮಗುರೂಣಾಂ – ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯಣಾಂ – ಹೃತ್ಕಮಲ – ಮಧ್ಯನಿವಾಸಿ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನಾನಿರುದ್ಧ ಚತುಮೂರ್ತ್ಯಾದ್ಯನಂತಾವತಾರಾತ್ಮಕ, ಶ್ರೀ ನಿರ್ದೋಷಾನಂತ ಕಲ್ಯಾಣ ಗುಣಪರಿಪೂರ್ಣ, ಕ್ಷೀರಾಬ್ಧಿಶಾಯಿ, ಶ್ರೀ ಮಾಂಗಲ್ಯ ಮೂರ್ತಿ ಶ್ರೀಗೋಪಾಲಕೃಷ್ಣ ಪ್ರೀತ್ಯರ್ಥಂ ಅಂತಃಕರಣ ಶುದ್ಧ್ಯರ್ಥ್ಯಂ, ಶರೀರ ಶುದ್ಧ್ಯರ್ಥಂ, ಜ್ಞಾತಾಜ್ಞಾತ ದೋಷ ಪರಿಹಾರಾರ್ಥಂ ತುಲಸ್ಯಶ್ವತ್ಥ ವಿಷ್ಣು ವೈಷ್ಣವಸನ್ನಿಧೌ ಭಾಗೀರಥ್ಯಾದಿ ಸಾರ್ಧತ್ರಿಕೋಟಿ–ತೀರ್ಥಾಭಿಮಾನ ದೇವತಾ ಸನ್ನಿಹಿತೇಽಸ್ಮಿನ್ ಜಲಾಶಯೇ ಪ್ರಾತಃ ಸ್ನಾನಮಹಂ ಕರಿಷ್ಯೇ–

ಎಂದು ಸಂಕಲ್ಪಿಸಿ ನೀರಿನಲ್ಲಿ ಮೂರು ಬಾರಿ ಮುಳುಗಿ ಸ್ನಾನ ಮಾಡುವುದು. ಸ್ನಾನ ಕಾಲದಲ್ಲಿ ತ್ರಿವಿಕ್ರಮ –ವರಾಹಾಭಿನ್ನ ದ್ರವರೂಪಿಯಾದ ಶ್ರೀಹರಿಯನ್ನು ಧ್ಯಾನಿಸುವುದು.

- ***ಸ್ನಾನಾರ್ಘಮಂತ್ರ :***

(ವಿಷ್ಣುವಿಗೆ ಅರ್ಘ್ಯ ಮಂತ್ರ)

ನಮಃ ಕಮಲನಾಭಾಯ ನಮಸ್ತೇ ಜಲಶಾಯನೆ ।
ನಮಸ್ತೇಽಸ್ತು ಹೃಷಿಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

(ಗಂಗೆಗೆ ಅರ್ಘ್ಯ ಮಂತ್ರ)

ಬ್ರಹ್ಮಕಮಂಡಲು ಸಂಭೂತೇ ವಿಷ್ಣುಪಾದೋದ್ಭವೇ ಶುಭೇ ।
ತ್ರೈಲೋಕ್ಯವಂದಿತೇ ಗಂಗೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

(ಕಾವೇರಿಗೆ ಅರ್ಘ್ಯ ಮಂತ್ರ)

ನಮಃ ಕರಾಲವದನೇ ನಮಸ್ತೇ ಕಲಿನಾಶಿನಿ ।
ನಮಸ್ತೇ ದೇವಿ ಕಾವೇರಿ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

(ಸೂರ್ಯಾರ್ಘ್ಯ ಮಂತ್ರ)

**ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ ।**
**ಅನುಕಂಪಯ ಮಾಂ ಭಕ್ತ್ಯಾ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**

(ಈ ಮಂತ್ರದಿಂದ ಬ್ರಹ್ಮಾದಿಗಳಿಗೆ ಅರ್ಘ್ಯವನ್ನು ಕೊಡುವುದು)

**ಬ್ರಹ್ಮಾದ್ಯಾಃ ದೇವತಾಃ ಸರ್ವೇ ಋಷಯೋ ಯೇ ಚ ವೈಷ್ಣವಾಃ ।**
**ತೇ ಗೃಹ್ಣಂತು ಮಯಾ ದತ್ತಂ ಅರ್ಘ್ಯಂ ಸಮ್ಯಕ್ ಪ್ರಸೀದತ ॥**

- ***ಗಂಗಾ ಪೂಜೆ (ಥಾಲಿಪೂಜೆ) :***

ಸ್ನಾನ ಮಾಡಿದ ಮೇಲೆ ಶುಭವಸ್ತ್ರ ಧರಿಸಿ ಗಂಗೆಯನ್ನು ಧ್ಯಾನಿಸಿ ಈ ಕೆಳಗಿನ ಶ್ಲೋಕವನ್ನು ಉಚ್ಚರಿಸಬೇಕು.

**ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ ।**
**ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ ॥**
**ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ ।**
**ದ್ವಾದಶೈತಾನಿ ನಾಮಾನಿ ಯತ್ರ ಯತ್ರ ಜಲಾಶಯೇ ॥**
**ಗಂಗಾ ಗಂಗೇತಿ ಯೋ ಭ್ರೂಯಾತ್ ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವದುಃಖೇಭ್ಯಃ ವಿಷ್ಣುಲೋಕಂ ಚ ಗಚ್ಛತಿ ॥**

ಹೀಗೆ ಧ್ಯಾನಿಸಿ ಮೈ ಒರಸಿಕೊಂಡು ಶುಭ್ರವಸ್ತ್ರ ಧರಿಸಿ ಗಂಗೆಯನ್ನು ಹೀಗೆ ಪ್ರಾರ್ಥಿಸಬೇಕು.

- ***ಪ್ರಾರ್ಥನೆ :***

**ಅರಿಷಿಣ ಅರಿಷಿಣ ಸುಕುಂತಳೇ,**
**ಮಾಧವಪ್ರಿಯಳೇ ಭದ್ರಮುಖಿ**
***ಭಾಗೀರಥಿಯೇ –***
**ಮುತ್ತಿನಷ್ಟು ಅರಿಷಿಣ ತಕ್ಕೊಂಡು**
**ಬೆಟ್ಟದಷ್ಟು ಮುತ್ತೈದೆತನ ಕೊಡು**

ಎಂದು ಪ್ರಾರ್ಥಿಸಿ - ಅರಿಷಿಣದಲ್ಲಿರುವ ಶ್ರೀಲಕ್ಷ್ಮೀಯನ್ನು ಹೀಗೆ ಪ್ರಾರ್ಥಿಸುವುದು.

**"ಅರಿಷಿಣ ಅರಿಷಿಣ ದಯ ಮಾಡು,**

**ಅರಿಷಿಣ ತೇದು ಭಾಗೀರಥಿಗೆ ನೀಡುವೆ,**

**ಮುತ್ತೈದೆಯರಿಗೆ ಕೊಟ್ಟು, ಮಿಕ್ಕಿದ್ದನ್ನು ತಾನು ಹಚ್ಚಿ,**

**ಕಡಗದ ಕೈಗೆ ಹಚ್ಚಿ, ಅಂದದ ಕಾಲಿಗೆ ಹಚ್ಚಿ**

**ಮುತ್ತಿನ ಮುಡಿಗೆರೆದು ಭಾಗೀರಥೀ ನೀ ಸಾಕ್ಷಿ**

**ನನಗೆ ಅಪ್ಪಣೆ ಕೊಡು"** - ಎಂದು ಪ್ರಾರ್ಥಿಸಿ,

ಗಂಗೆಗೆ ಅರಿಷಿಣ, ಕುಂಕುಮ ಅರ್ಪಿಸಿ ನಂತರ ಅವಳಿಗರ್ಪಿಸಿದ ಅರಿಷಿಣದಿಂದ ತನ್ನ ಸರ್ವಾಂಗವನ್ನು ಅರಿಷಿಣದಿಂದ ಲೇಪಿಸಿಕೊಳ್ಳುವುದು.

ಗಂಗಾದಿ ತೀರ್ಥಗಳಲ್ಲಿ ಹೀಗೆ ಮಾಡಬಹುದು. ಮನೆಯಲ್ಲಾದರೂ ಸ್ನಾನ ಮಾಡಿದ ನಂತರ ಗಂಗಾಥಾಲಿಗೆ ಅರಿಷಿಣ-ಕುಂಕುಮ ಏರಿಸಬಹುದು.

- ***ವಸ್ತ್ರಧಾರಣೆ - ಕಚ್ಚೆ :***

ಮುತ್ತೈದೆ ಸ್ತ್ರೀಯಾದವಳು 9 ಗಜ ಸೀರೆಯನ್ನು ಉಟ್ಟು ಕಚ್ಚೆಯನ್ನು ಹಾಕಿಕೊಳ್ಳಬೇಕು.

**ಧಾರಿತೇನೈವ ವಸ್ತ್ರೇಣ ಗುಪ್ತಾಂಗಸ್ಯ ನಿಗೂಹನಂ ।**
**ಕಚ್ಛೇತಿ ಕಥಿತಾ ಪೂರ್ವೈಃ ಸರ್ವಕರ್ಮಸು ಪಾವನಾ ॥**

*- ಕಾಲಿಕಾಪುರಾಣ*

ಕಚ್ಚೆಧಾರಣೆ ಸ್ತ್ರೀಪುರುಷರಿಗೆ ಸಮಾನವಾಗಿದೆ. ಬೇರೆ ಬಟ್ಟೆಯಿಂದ ಗುಹ್ಯಾಂಗವನ್ನು ಮುಚ್ಚಲು ಶಾಸ್ತ್ರವು ಸಮ್ಮತಿ ನೀಡುವುದಿಲ್ಲ. ***"ಧಾರಿತೇನೈವ ವಸ್ತ್ರೇಣ"*** ಎಂದಿರುವುದರಿಂದ ಉಟ್ಟ ವಸ್ತ್ರದಿಂದಲೇ ಗೂಹನವಾಗಬೇಕು.

ಅನೇಕ ಕಾರಣಗಳಿಂದ ಕಚ್ಚೆ ಸೀರೆಯುಡಲು ಅಸಮ್ಮತಿ ಇದ್ದರೆ ಪೂಜಾ ಕಾಲಕ್ಕಾದರೂ ಧರಿಸಿ ನಂತರ ಬೇರೆ ವಸ್ತ್ರವನ್ನು ಧರಿಸಬಹುದು. ವಸ್ತ್ರವನ್ನು ಧರಿಸುವಾಗ ಉಪೇಂದ್ರನ ಸ್ಮರಣೆ ಮಾಡಬೇಕು.

- ***ನಗ್ನ ಕಾರಣಗಳು – ಕಚ್ಚೆ ಧಾರಣೇ :***

ನಗ್ನಃ ಮಲಿನ ವಸ್ತ್ರಶ್ಚ ನಗ್ನಶ್ಚಾಕಚ್ಚ ಏವ ಚ ।
ನಗ್ನೋ ದ್ವಿಗುಣವಸ್ತ್ರಃಸ್ಯಾತ್ ನಗ್ನೋ ದಗ್ಧಪಟಸ್ತಥಾ ॥
ನಗ್ನಶ್ಚ ಸ್ಯೂತ ವಸ್ತ್ರಸ್ಸ್ಯಾತ್ ನಗ್ನೋ ಗ್ರತಿತ ವಸ್ತ್ರಕಃ ।

ವಸ್ತ್ರವನ್ನು ಧರಿಸಲೇಬೇಕು. ವಸ್ತ್ರವಿಲ್ಲದೆ ಕಚ್ಚೆ ಹಾಕದೆ, ಯಾವುದೇ ಕರ್ಮವನ್ನು ಮಾಡಿದರೂ ಆ ಕರ್ಮವು ನಿಷ್ಫಲವೆಂದು ತಿಳಿಯಬೇಕು. ಹಾಗೆಯೇ ಹೊಲಿದಿರುವ, ಸುಟ್ಟಿರುವ ಸೀರೆಗಳನ್ನು ಧರಿಸಿದರೂ ನಗ್ನರೆಂದೇ ಅರ್ಥ.

ಕಚ್ಚೆ ಧರಿಸದವರು, ಪುಚ್ಛಕಚ್ಚೆಯವರು ನಗ್ನರೆಂದೆ ಪ್ರಸಿದ್ಧಿ ಇದೆ. ಕಚ್ಚೆ ಇಲ್ಲದೆ ಮಾಡುವ ಕರ್ಮ ನಗ್ನರು ಮಾಡಿದಂತೆ ನಿಷ್ಫಲವಾಗುತ್ತದೆ. ಆದ್ದರಿಂದ 9 ಗಜ ಸೀರೆಯನ್ನು ಧರಿಸಿ ಕಚ್ಚೆ ಧರಿಸಿ ಪೂಜಾದಿಗಳನ್ನು ಮಾಡಬೇಕು.

ರೋಗಾದಿಗಳಿಂದ ಕಚ್ಚೆ ಹಾಕಲು ಅನಾನುಕೂಲವಿದ್ದಾಗ ಪೂಜಾ ಕಾಲದಲ್ಲಾದರೂ ಹಾಕಿಕೊಂಡು ಪೂಜಿಸಬೇಕು.

- ***ಕುಂಕುಮ ಧಾರಣ :***

ಕುಂಕುಮ ಧಾರಣ ಸಂಕಲ್ಪ ಮಾಡಿ ಕುಂಕುಮ ಧರಿಸಬೇಕು.

**ಕೇಶವಾಯ ಸ್ವಾಹಾ ..... ಆಚಮನ ಮಾಡಿ ಪ್ರಾಣಾಯಾಮ ಮಾಡಬೇಕು. ಶುಭತಿಥೌ ಮಮ ಪತ್ಯಂತರ್ಗತ ಶ್ರೀಲಕ್ಷ್ಮೀ ನಾರಾಯಣ ಪ್ರೇರಣಯಾ ಲಕ್ಷ್ಮೀ ನಾರಾಯಣ ಪ್ರೀತ್ಯರ್ಥಂ ಮಮ ಭರ್ತುಃ ಆಯುಷ್ಯಾಭಿವೃದ್ಧ್ಯರ್ಥಂ, ತಥಾ ಮಯಿ ಶ್ರೀಲಕ್ಷ್ಮೀ ಸನ್ನಿಧಾನ ಸಿದ್ಧ್ಯರ್ಥಂ ಊರ್ಧ್ವಪುಂಡ್ರಸಹಿತ ಕುಂಕುಮಂ ಧಾರಯಿಷ್ಯೇ ಎಂದು ಸಂಕಲ್ಪಿಸಿ – ನಿತ್ಯ ಮುತ್ತೈದೆಯರಾದ ರಮಾ – ಪಾರ್ವತೀ – ಸಾವಿತ್ರೀ – ಸೀತೆ – ಅರುಂಧತ್ಯಾದಿಗಳನ್ನು ಸ್ಮರಿಸುತ್ತಾ ಕುಂಕುಮಧಾರಣೆ ಮಾಡಬೇಕು.**

**ರಮಾಂ ಅಪರ್ಣಾಂ ಸಾವಿತ್ರೀಂ ವೈದೇಹೀಂ ಚಾಪ್ಯರುಂಧತೀಂ ।
ಸೌಭಾಗ್ಯಾಯ ನಮಸ್ಕೃತ್ಯ ಕುಂಕುಮಂ ಧಾರಯಾಮ್ಯಹಮ್ ॥**

- ***ಊರ್ಧ್ವಪುಂಡ್ರಧಾರಣೆ :***

ನಂತರ ತಿಲಕ ಧರಿಸಬೇಕು. ಗೋಪಿಚಂದನವನ್ನು ಅರಿಷಿಣದ ಜೊತೆಗೆ

ಎಡಗೈ ಹೆಬ್ಬೆರಳಿನ ಎರಡು ಗಂಟುಗಳ ಕೆಳಗೆ ತೇದು ಎರಡು ಹುಬ್ಬುಗಳ ಮಧ್ಯಭಾಗದಿಂದಾರಂಭಿಸಿ ದಂಡಾಕಾರವಾಗಿ ಮನ್ಮಥಪಿತನಾದ ರುದ್ರಾಂತರ್ಗತ ಭೂ ವರಾಹವನ್ನು ಸ್ಮರಿಸುತ್ತಾ ಧರಿಸಬೇಕು. ಅದರ ಮಧ್ಯದಲ್ಲಿ ಛಿದ್ರ ಮಾಡಿ ದೀಪದಂತೆ ಕುಂಕುಮವನ್ನು ಧರಿಸಬೇಕು. ಮುತ್ತೈದೆ ಸ್ತ್ರೀಯರು ಊರ್ಧ್ವವಾಗಿಯೇ ಧರಿಸಬೇಕು. ಕನ್ಯೆಯರು ವೃತ್ತಾಕಾರವಾಗಿ ಧರಿಸಿದರೆ ಬಾಧಕವಿಲ್ಲ. ಈಗಿನಿಂದಲೇ ಅಭ್ಯಾಸ ಹಿತವಾದದ್ದು.

ಕುಂಕುಮದಲ್ಲಿ ಶ್ರೀರಮಾದೇವಿಯರ ಸನ್ನಿಧಾನವಿದ್ದು ಪತಿಯ ಆಯುಷ್ಯಾಭಿ-ವೃದ್ಧಿಗಾಗಿ ಧರಿಸಬೇಕು.

- ***ಗೋಪಿಚಂದನ ಕುಂಕುಮ ಧಾರಣ ಮಂತ್ರ :***

**ಗೋಪಿಚಂದನ ಪಾಪಘ್ನ ವಿಷ್ಣುದೇಹ ಸಮುದ್ಭವ ।**
**ಚಕ್ರಾಂಕಿತ ನಮಸ್ತೇಽಸ್ತು ಧಾರಣಾನ್ ಮುಕ್ತಿದೋ ಭವ ॥**
**ಊರ್ಧ್ವಪುಂಡ್ರಂ ಲಲಾಟೇ ತು ಭರ್ತುರಾಯುಷ್ಯವರ್ಧನಂ ।**
**ಲಲಾಟೇ ಕುಂಕುಮಂ ಚೈವ ಸದಾ ಲಕ್ಷ್ಮೀನಿವಾಸಕಂ ॥**
**ಹರಿದ್ರೇ ಹರಿಸಂಭಂಧಾತ್ ಸರ್ವರೋಗ ನಿವಾರಿಣಿ ।**
**ಅತಸ್ತ್ವಾಂ ಧಾರಯಿಷ್ಯಾಮಿ ಮಾತರ್ಮೇ ದೇಹಿ ಸೌಭಗಂ ॥**

*– ಕಾಳಿಕಾಪುರಾಣ*

- ***ಗದಾ – ನಾರಾಯಣ ಮುದ್ರೆ :***

ಸ್ತ್ರೀಯರೂ ಕೂಡ ಪಂಚಮುದ್ರೆಗಳನ್ನು ಧರಿಸಲೇ ಬೇಕು. ಸ್ತ್ರೀಯರಾಗಲಿ, ಶೂದ್ರರಾಗಲಿ ಚಕ್ರಾದಿ ಚಿಹ್ನ ರಹಿತರಾಗಬಾರದು.

**ಸ್ತ್ರಿಯಃ ಶೂದ್ರಸ್ತಥೈವಾನ್ಯೇ ನ ತಚ್ಚಿಹ್ನ ವಿವರ್ಜಿತಾಃ ।**
**ಭವೇಯುಃ ಸರ್ವದಾ ತಸ್ಮಾತ್ ಶಂಖಚಕ್ರಗದಾಂಬುಜೈಃ ॥**

*– ಪರಮೇಶ್ವರ ಸಂಹಿತಾ*

ಆದರೂ ಅನಿಷ್ಟ ನಿವೃತ್ತಿ ಹಾಗೂ ಇಷ್ಟಪ್ರಾಪ್ತಿ ರೂಪವಾದ ಗದಾ-ನಾರಾಯಣ ಮುದ್ರೆಯನ್ನು ಧರಿಸುವುದು ಪದ್ಧತಿಯಲ್ಲಿದೆ. ಬೇರೆ ಮುದ್ರೆಗಳನ್ನು ಧರಿಸಬಾರದೆಂಬ ನಿಯಮವೇನೂ ಇಲ್ಲ. ಆದರೂ ಚಕ್ರಾದಿಮುದ್ರೆಗಳನ್ನು

ಸ್ತನಗಳೆರಡರ ಮೇಲು ಧರಿಸಬೇಕಾಗಿದೆ. ಕಂಚುಕಧಾರಣೆಯು ಇದನ್ನು ಪೂರ್ಣಗೊಳಿಸಲು ಅಡ್ಡಿ ಬರುವಂತಿದೆಯಾದ್ದರಿಂದ ಪದ್ಧತಿಯಲ್ಲಿ ಗದಾ-ನಾರಾಯಣ ಮುದ್ರಾಧಾರಣ ಮಾತ್ರ ವಿಹಿತವಾಗಿದೆ. ವಿಧವಾ ಸ್ತ್ರೀಯರು ಕಂಚುಕ ಧರಿಸಬಾರದು. ಆದ್ದರಿಂದ ಪಂಚಮುದ್ರೆ ವಿಹಿತವಾಗಿದೆ.

- ***ಗದಾ ನಾರಾಯಣ ಮುದ್ರಧಾರಣ ಮಂತ್ರ :***

**ಬ್ರಹ್ಮಾಂಡಭುವನಾರಂಭಮೂಲಸ್ತಂಭೋ ಗದಾಧರಃ ।**
**ಕೌಮೋದಕೀ ಕರೇ ಯಸ್ಯ ತಂ ನಮಾಮಿ ಗದಾಧರಮ್ ॥**

**ನಾರಾಯಣ ನಮಸ್ತೇಽಸ್ತು ನಾಮಮುದ್ರಾಂಕಿತಂ ನರಂ ।**
**ದೃಷ್ಟ್ವೈವ ಲಭತೇ ಮುಕ್ತಿಂ ಚಾಂಡಲೋ ಬ್ರಹ್ಮಘಾತಕಃ ॥**

ಗದೆಯನ್ನು ಹಣೆಗೆ ಒಂದು, ಬಲಗೈಯ ಹಿಂಬದಿ, ಮುಂಬದಿಗಳಲ್ಲೂ, ಎಡಗೈಯ ಹಿಂಬದಿ ಮುಂಬದಿಗಳಲ್ಲೂ ಒಂದೊಂದು, ಸ್ತನಗಳ ಮೇಲ್ಭಾಗವಾದ ಎದೆಯಲ್ಲಿ ಒಂದನ್ನು, ಹೊಟ್ಟೆಯಲ್ಲಿ ನಾಭಿಯ ಮೇಲ್ಭಾಗದಲ್ಲಿ ಒಂದನ್ನು ಧರಿಸಬೇಕು. ನಾರಾಯಣ ಮುದ್ರೆಯನ್ನು ಗದಾಮುದ್ರೆ ಧರಿಸಿದ ಸ್ಥಳಗಳಲೆಲ್ಲ ಧರಿಸುವುದು.

# ಸ್ತ್ರೀ ಜಪ ಪದ್ಧತಿಃ

**ಆಚಮನ – ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ ।**

(ಉದ್ದು ಮುಳುಗುವಷ್ಟು ಮಾತ್ರ ಮೂರು ಮಂತ್ರಗಳಿಂದ ಗೋಕರ್ಣಾಕೃತಿ ಹಸ್ತದ ಬುಡವಾದ ಬ್ರಾಹ್ಮೀ ತೀರ್ಥದಿಂದ ಜಲವನ್ನು ಪಾನ ಮಾಡುವುದು)

**ಗೋವಿಂದಾಯ ನಮಃ । ವಿಷ್ಣುವೇ ನಮಃ । ಮದುಸೂದನಾಯ ನಮಃ। ತ್ರಿವಿಕ್ರಮಾಯ ನಮಃ ।** (ತುಟಿಗಳನ್ನು ಮುಟ್ಟುವುದು)

**ಶ್ರೀವಾಮನಾಯ ನಮಃ । ಶ್ರೀಶ್ರೀಧರಾಯ ನಮಃ ।** (ಬಲ ಎಡ ಕೆನ್ನೆಗಳನ್ನು ಸ್ಪರ್ಶಿಸುವುದು)

**ಹೃಷಿಕೇಶಾಯ ನಮಃ ।** (ಕೈಗಳನ್ನು ತೊಳೆಯುವುದು)

**ಪದ್ಮನಾಭಾಯ ನಮಃ ।** (ಪಾದಗಳನ್ನು ಒರೆಸುವುದು)

**ಶ್ರೀದಾಮೊದರಾಯ ನಮಃ ।** (ಶಿರವನ್ನು ಸ್ಪರ್ಶಿಸುವುದು)

**ಸಂಕರ್ಷಣಾಯ ನಮಃ ।** (ಮೂಗಿನ ಸ್ಪರ್ಶ)

**ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ ।** (ಮೂಗಿನ ಬಲ, ಎಡ ಭಾಗಗಳನ್ನು ಸ್ಪರ್ಶಿಸುವುದು)

**ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ ।** (ಬಲಗಣ್ಣು, ಎಡಗಣ್ಣು ಸ್ಪರ್ಶಿಸುವುದು)

**ಅಧೋಕ್ಷಜಾಯ ನಮಃ ।** (ಬಲ ಕಿವಿಯನ್ನು ಸ್ಪರ್ಶಿಸುವುದು)

**ನಾರಸಿಂಹಾಯ ನಮಃ ।** (ಎಡ ಕಿವಿಯನ್ನು ಸ್ಪರ್ಶಿಸುವುದು)

**ಅಚ್ಯುತಾಯ ನಮಃ ।** (ಹೊಕ್ಕಳು ಸ್ಪರ್ಶಿಸುವುದು)

**ಜನಾರ್ದನಾಯ ನಮಃ ।** (ಎದೆ ಸ್ಪರ್ಶಿಸುವುದು)

**ಉಪೇಂದ್ರಾಯ ನಮಃ ।** (ಶಿರಸ್ಸು ಸ್ಪರ್ಶಿಸುವುದು)

**ಹರಯೇ ನಮಃ ।** (ಬಲಭುಜ ಸ್ಪರ್ಶಿಸುವುದು)

**ಶ್ರೀಕೃಷ್ಣಾಯ ನಮಃ ।** (ಎಡಭುಜ ಸ್ಪರ್ಶಿಸುವುದು)

*ಸಂಕಲ್ಪ :*

ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ – ಆದ್ಯ ಬ್ರಹ್ಮಣಃ, ದ್ವಿತೀಯ ಪರಾರ್ಧೇ – ಶ್ವೇತವರಾಹಕಲ್ಪೇ – ವೈವಸ್ವತ ಮನ್ವಂತರೇ – ಅಷ್ಟಾವಿಂಶತಿತಮೇ ಕಲಿಯುಗೇ – ಪ್ರಥಮಪಾದೇ – ಜಂಬೂದ್ವೀಪೇ – ಭರತವರ್ಷೇ – ಭರತಖಂಡೇ – ದಂಡಕಾರಣ್ಯೇ – ಗೋದಾವರ್ಯಾಃ ದಕ್ಷಿಣ ತೀರೇ – ಶಾಲಿವಾಹನಶಕೇ – ಬೌದ್ಧಾವತಾರೇ .......... ಸಂವತ್ಸರೇ .......... ಅಯನೇ .......... ಋತೌ .......... ಮಾಸೇ .......... ಪಕ್ಷೇ .......... ಶುಭತಿಥೌ .......... ಶುಭವಾಸರ ಯುಕ್ತಾಯಾಂ ಶುಭನಕ್ಷತ್ರ – ಶುಭಯೋಗ – ಶುಭಕರಣ – ಏವಂಗುಣ ವಿಶಿಷ್ಟಾಯಾಂ ಶುಭತಿಥೌ ಅಸ್ಮತ್ ಪತ್ಯಂಗರ್ತತ – ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಕೃಷ್ಣಪ್ರೇರಣಯ ಶ್ರೀಕೃಷ್ಣ ಪ್ರಿತ್ಯರ್ಥಂ ಯಥಾಶಕ್ತಿ ಕೃಷ್ಣ ಷಡಕ್ಷರ ಜಪ ತರ್ಪಣಾಖ್ಯಂ ಕರ್ಮ ಕರಿಷ್ಯೇ। [ನೀರು ಬಿಡುವುದು]

*ದೇವತಾ ಗುರುಗಳ ಪ್ರಾರ್ಥನೆ :*

ರಮಾಪತಿಂ ಪೂರ್ಣಗುಣಂ ಮುಕುಂದಂ ವ್ಯಾಸಂ ಚ ವಿಜ್ಞಾನ ಸಹಸ್ರಭಾನುಂ ।
ಪೂರ್ಣಪ್ರಬೋಧಂ ಚ ಸುತತ್ವ ದೀಪಂ ಕ್ರಮಾದ್ ಗುರೂಂಶ್ಚ ಪ್ರಣಮಾಮಿ ಮೂರ್ಧ್ನಾ ॥

ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತಪ್ರವರೋ ಹಿ ಸಃ ।
ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್ ॥

ನಮೋ ವಃ ತಾತ್ವಿಕಾ ದೇವಾಃ ವಿಷ್ಣುಭಕ್ತಿಪರಾಯಣಾಃ ।
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ॥

*ಆಸನ ಶುದ್ಧಿ :*

ಭೂತೋಚ್ಚಾಟನಂ –ಮಮ ಶರೀರಸ್ಯ ಅಂತರ್ಯಾಮಿ . . .ಪೃಥಿವ್ಯಾ ಮೇರುಪೃಷ್ಠಋಷಿಃ । ಕೂರ್ಮೋದೇವತಾ । ಸುತಲಂ ಛಂದಃ ಆಸನೇ ವಿನಿಯೋಗಃ ।

ಪೃಥ್ವಿ ತ್ವಯಾ ಧೃತಾ ಲೋಕಾಃ ದೇವಿ ತ್ವಂ ವಿಷ್ಣುನಾ ಧೃತಾ ।
ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ॥
ಅಪಸರ್ಪಂತು ಯೇ ಭೂತಾಃ ಯೇ ಭೂತಾ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಮತು ಶಿವಾಜ್ಞಯಾ ॥
ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಮಪ್ಯವಿರೋಧೇನ ಜಪಕರ್ಮ ಸಮಾರಭೇ ॥

**ಗುರು ನಮಸ್ಕಾರಃ :**

ಶ್ರೀ ಗುರುಭ್ಯೋ ನಮಃ । ಪರಮಗುರುಭ್ಯೋ ನಮಃ ।
ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ ।
ಶ್ರೀವೇದವ್ಯಾಸಾಯ ನಮಃ । ಶ್ರೀ ಭಾರತ್ಯೈ ನಮಃ ।
ಶ್ರೀ ಸರಸ್ವತ್ಯೈ ನಮಃ । ಶ್ರೀವಾಯವೇ ನಮಃ ।
ಶ್ರೀ ಬ್ರಹ್ಮಣೇ ನಮಃ । ಶ್ರೀ ಲಕ್ಷ್ಮ್ಯೈ ನಮಃ ।
ಶ್ರೀನಾರಾಯಣಾಯ ನಮಃ । ಶ್ರೀ ಕೃಷ್ಣಾಯ ನಮಃ ।
ಶ್ರೀವಾಸುದೇವಾಯ ನಮಃ । [ನಮಸ್ಕರಿಸುವುದು]

**ಕರಶುದ್ಧಿ :**

ಶ್ರೀಂ ಯಮ್ । ಶ್ರೀಂ ರಮ್ । ಶ್ರೀಂ ವಮ್ ।
ಶ್ರೀಂ ಯಮ್ । ಶ್ರೀಂ ರಮ್ । ಶ್ರೀ ವಮ್ ।
ಶ್ರೀಂ ಯಮ್ । ಶ್ರೀಂ ರಮ್ ।
ಶ್ರೀಂ ವಮ್ । ಶ್ರೀಂ ಅಸ್ತ್ರಾಯ ಫಟ್ ।

[ಮಣಿಗಂಟು, ಮೊಳಕೈಗಂಟು, ತೋಳಿನ ಮುಂಭಾಗ, ಇವುಗಳನ್ನು ಈ ಮೇಲಿನ ಮಂತ್ರಗಳಿಂದ ಸ್ಪರ್ಶಿಸುವುದು, ಅಸ್ತ್ರಾಯಫಟ್ ಮಂತ್ರದಿಂದ ಚಿಟಿಕೆ ಹಾಕಿ ದಿಗ್ಬಂಧನ ಮಾಡುವುದು]

**ಪಾಪಪುರುಷ ಧ್ಯಾನ :**

[ಹೊಟ್ಟೆಯ ಎಡಭಾಗ ಮುಟ್ಟಿ ಪಾಪ ಪುರುಷ ಧ್ಯಾನ ಮಾಡಬೇಕು]

**ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯ ಭುಜದ್ವಯಂ ।**

**ಸುರಾಪಾನಹೃದಾಯುಕ್ತಂ ಗುರುತಲ್ಪಕಟಿದ್ವಯಮ್ ॥**

**ತತ್ಸಂಯೋಗ ಪದ ದ್ವಂದ್ವಮಂಗ ಪ್ರತ್ಯಂಗ ಪಾತಕಮ್ ।**

**ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್ ॥**

**ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತಯೇತ್ ।**

ಶ್ರೀಂಯಮ್

**"ಷಟ್ಕೋಣ ಮಂಡಲ ಮಧ್ಯಸ್ಥೋ ನೀಲವರ್ಣೋ**

**ವಾಯ್ವಂತರ್ಗತಹ ಶ್ರೀ ಪ್ರದ್ಯುಮ್ನೋ ಭಗವಾನ್**

**ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು"**

[ಪಾಪಪುರುಷನನ್ನು ನಾಭಿಗೆ ತಂದು ನಾಭಿಯನ್ನು ಮುಟ್ಟಿಕೊಂಡು "ಯಂ" ಎಂಬ ವಾಯುಬೀಜ ಮಂತ್ರವನ್ನು ಆರು ಬಾರಿ ಜಪಿಸಿ ಪಾಪಪುರುಷನನ್ನು ಒಣಗಿಸುವುದು.]

**"ಶ್ರೀರವ್ । ತ್ರಿಕೋಣಮಂಡಲಮಧ್ಯಸ್ಥೋ ರಕ್ತವರ್ಣೋ ವಹ್ನ್ಯಂತರ್ಗತ ಶ್ರೀಮದನಿರುದ್ಧೋ ಭಗವಾನ್ ಮಚ್ಛರೀರಸ್ಥಂ ದಗ್ಧಪಾಪ ಪುರುಷಂ ವಹ್ನಿನಾ ನಿರ್ದಹತು ।** [ಶ್ರೀಂರಂ – 12 ಬಾರಿ ಜಪ]

[ಈ ಮಂತ್ರದಿಂದ ಪಾಪಪುರುಷನ ಭಸ್ಮವನ್ನು ಮೂಗಿನ ರಂಧ್ರದ ಮೂಲಕ ಹೊರಹಾಕುವುದು]

**ವರ್ತುಲಮಂಡಲ ಮಧ್ಯಸ್ಥಃ ಶ್ವೇತ ವರ್ಣಃ ವರುಣಾಂತರ್ಗತಃ ಮಚ್ಛರಿರಸ್ಥಂ ಪಾಪಪುರುಷಂ ಅಗ್ನಿನಾ ನಿರ್ಧಹತು ॥**

**ವರುಣಾಂತರ್ಗತಃ ಶ್ರೀ ವಾಸುದೇವೋ ಭಗವಾನ್ ಮಚ್ಛರೀರಂ ಅಮೃತವೃಷ್ಟ್ಯಾ ಆಪ್ಲಾವಯತು ॥**

[ಶ್ರೀವಂ ಶ್ರೀಂ ಎಂದು 24 ಬಾರಿ ಜಪಿಸಿ ಅಮೃತಪ್ಲಾವನದಿಂದ ಶುದ್ಧವಾಯಿತೆಂದು ಭಾವಿಸಬೇಕು.]

***ಪುಣ್ಯಪುರುಷಧ್ಯಾನಮ್*** : [ಹೊಟ್ಟೆಯ ಬಲಭಾಗ ಮುಟ್ಟುತ್ತಾ]

**ಅಶ್ವಮೇಧಶಿರಸ್ಕಂ ಚ ಮಹಾದಾನಭುಜದ್ವಯಂ ।**
**ಸೋಮಪಾನಹೃದಾಯುಕ್ತಂ ಬ್ರಹ್ಮಚರ್ಯಕಟಿದ್ವಯಂ ॥ 1 ॥**

**ತತ್ಸಂಯೋಗ ಪದದ್ವಂದ್ವಂ ಸಾಂಗೋಪಾಂಗಂ ಶುಭತ್ರಯಂ ।**
**ಸರ್ವವ್ರತಾಂಗರೋಮಾಣಂ ಗುರುಸೇವಾದಿಲೋಚನಂ ॥ 2 ॥**

**ಸಿಂಹಾಸನೇ ಸಮಾಸೀನಂ ಸ್ವರ್ಣವರ್ಣಂ ಕಿರೀಟನಂ ।**
**ಗೀರ್ವಾಣನುತ ಪಾದಾಬ್ಜಂ ಪುಣ್ಯಂ ಹೃದಿ ವಿಭಾವಯೇ ॥ 3 ॥**

**ಸ್ವಕುಕ್ಷಿದಕ್ಷಿಣೇ ಭಾಗೇ ತತ್ಪುಣ್ಯಪುರುಷಂ ಪ್ರಭುಂ ।**
**ಧ್ಯಾಯೇತ್ ತಂ ನಾಭಿದೇಶೇ ತು ಅನಿರುದ್ಧಾಭಿಧಾನಕಂ ॥ 4 ॥**

**ಪ್ರದ್ಯುಮ್ನಾಖ್ಯಂ ಹೃದಿ ಧ್ಯಾಯೇತ್ ಸಂಕರ್ಷಣಂ ಕಂಠದೇಶತಃ ।**
**ವಾಸುದೇವಂ ಭ್ರುವೋರ್ಮಧ್ಯೇ ಮೂರ್ಧ್ನಿ ನಾರಾಯಣಂ ಸ್ಮರೇತ್॥5॥**

[ನಾಭಿಯನ್ನು ಸ್ಪರ್ಶಿಸಿ ಅನಿರುದ್ಧನನ್ನು, ಎದೆ ಮುಟ್ಟಿ ಪ್ರದ್ಯುಮ್ನನನ್ನು, ಕುತ್ತಿಗೆ ಮುಟ್ಟಿ ಸಂಕರ್ಷಣನನ್ನು, ಹುಬ್ಬುಗಳ ಮಧ್ಯೆ ವಾಸುದೇವನನ್ನು, ಶಿರಸ್ಸನ್ನು ಮುಟ್ಟಿ ನಾರಾಯಣನನ್ನು ಶ್ರೀಂ ಎಂದು ಸರ್ವಾವಯವಗಳನ್ನೂ ಸ್ಪರ್ಶಿಸಿ ಭಗವಂತನನ್ನು ಹೃತ್ಕಮಲದಲ್ಲಿ ಸ್ಥಾಪಿಸಬೇಕು.]

***ಪ್ರಾಣಾಯಾಮ*** :

**"ಶ್ರೀ ಕ್ಲೀಂ ಕೃಷ್ಣಾಯ ನಮಃ ಶ್ರೀಂ"** ಎಂದು ಮೂರು ಬಾರಿ ಪ್ರಾಣಾಯಾಮ ಮಾಡಬೇಕು.

***ಕೃಷ್ಣಮಂತ್ರ ಅಂಗನ್ಯಾಸ*** :

**ಅಸ್ಯಶ್ರೀ ಕೃಷ್ಣಷಡಕ್ಷರ ಮಹಾಮಂತ್ರಸ್ಯ ಬ್ರಹ್ಮಾ ಋಷಿಃ** (ತಲೆಯ ಮೇಲೆ ಮುಟ್ಟುವುದು)

ಗಾಯತ್ರೀ ಛಂದಃ (ಮುಖೇ)

ಶ್ರೀಕೃಷ್ಣೋದೇವತಾ (ಹೃದಯ)

ಶ್ರೀಕೃಷ್ಣಪ್ರೇರಣಯಾ ಶ್ರೀಗೋಪಾಲಕೃಷ್ಣಪ್ರೀತ್ಯರ್ಥೇ ಜಪೇ ವಿನಿಯೋಗಃ॥

ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ ।

ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ ।

ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್ ।

ಪೂರ್ಣಾನಂದಾತ್ಮನೇ ಕವಚಾಯ ಹುಂ ।

ಪೂರ್ಣತೇಜ ಆತ್ಮನೇ ನೇತ್ರಾಭ್ಯಾಂ ವೌಷಟ್ ।

ಪೂರ್ಣಶಕ್ತ್ಯಾತ್ಮನೆ ಅಸ್ತ್ರಾಯ ಫಟ್ ॥ (ಇತಿ ದಿಗ್ಬಂಧಃ)

**ಧ್ಯಾನಮ್ :**

ಧ್ಯಾಯೇನ್ ಹರಿನ್ಮಣಿನಿಭಂ ಜಗದೇಕವಂದ್ಯಂ ಸೌಂದರ್ಯಸಾರಂ ಅರಿಶಂಖವರಾಭಯಾನಿ ।

ದೋರ್ಭಿಃ ದಧಾನಂ ಅಜಿತಂ ಸರಸಂ ಚ ಭೈಷ್ಮೀಸತ್ಯಾಸಮೇತಂ ಅಖಿಲಪ್ರದಮಿಂದಿರೇಶಮ್ ॥

ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿ ವಾಸುದೇವ – ಸಂಕರ್ಷಣ – ಪ್ರದ್ಯುಮ್ನಾನಿರುದ್ಧಾದಿ ಅನಂತಾವತಾರಾತ್ಮಕ ಶ್ರೀ ಭೈಷ್ಮೀಸತ್ಯಾಸಮೇತ ಶ್ರೀಗೋಪಾಲಕೃಷ್ಣಪ್ರೇರಣಯಾ ಶ್ರೀಗೋಪಾಲಕೃಷ್ಣ ಪ್ರೀತ್ಯರ್ಥಂ ಶ್ರೀಕೃಷ್ಣಷಡಕ್ಷರ ಮಂತ್ರ ಜಪಮಹಂ ಕರಿಷ್ಯೇ । [ನೀರನ್ನು ಬಿಡುವುದು]

"ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ"

(ಎಂದು 108, 10 ಹೀಗೆ ಜಪಿಸಬೇಕು)

ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಕೃಷ್ಣಂ ತರ್ಪಯಾಮಿ ।

[ಎಂದು ಹತ್ತಕ್ಕೆ 1 ಬಾರಿಯಂತೆ ತರ್ಪಣ ಬಿಡುವುದು]

**ಉಪಸಂಹಾರ :**

ಧಾಯೇದ್ ಹರಿನ್ಮಣಿನಿಭಂ ಜಗದೇಕವಂದ್ಯಂ
ಸೌಂದರ್ಯಸಾರಂ ಅರಿಶಂಕವರಾಭಯಾನಿ ।
ದೋರ್ಭಿರ್ದಧಾನಂ ಅಜಿತಂ ಸರಸಂ ಚ ಭೈಷ್ಮೀ-
ಸತ್ಯಾ ಸಮೇತಂ ಅಖಿಲ ಪ್ರದಮಿಂದಿರೇಶಮ್ ॥
ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ ।
ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ ।
ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್ ।
ಪೂರ್ಣಾನಂದಾತ್ಮನೇ ಕವಚಾಯ ನಮಃ ।
ಪೂರ್ಣತೇಜ ಆತ್ಮನೇ ನೇತ್ರಾಭ್ಯಾಂ ವೌಷಟ್ ।
ಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯ ಫಟ್ । (ಇತಿ ದಿಗ್ಬಂಧಃ)

ಅನೇನ ಕೃಷ್ಣ ಷಡಕ್ಷರ ಜಪತರ್ಪಣೇನ ಭಗವಾನ್ ಮಧ್ವಾಂತರ್ಗತ ಶ್ರೀಗೋಪಾಲಕೃಷ್ಣಃ ಪ್ರೀಯತಾಮ್ । ಶ್ರೀಕೃಷ್ಣಾರ್ಪಣಮಸ್ತು ।

ಅಚ್ಯುತಾಯ ನಮಃ । ಅನಂತಾಯ ನಮಃ । ಗೋವಿಂದಾಯ ನಮಃ ।

**ಹರಿಗುರು ಸ್ಮರಣೆ :**

ಗುರು – ಎಂದರೆ ನಮಗೆ ನೇರವಾಗಿ ಉಪದೇಶಿಸಿದ ಗುರುಗಳನ್ನು

ಪೂರ್ವಗುರು – ಎಂದರೆ ನಮ್ಮ ಗುರುವಿನ ಗುರುಗಳು

ಆದಿಗುರು – ಸಂಪ್ರದಾಯ ಪ್ರವರ್ತಕರಾದ ಶ್ರೀಮನ್ಮಧ್ವಾಚಾರ್ಯರು

ಮೂಲಗುರು – ಶ್ರೀಮದಾಚಾರ್ಯರಿಗೆ ಗುರುಗಳೆನಿಸಿ ಮೂಲಗುರು-ಗಳೆನಿಸಿರುವ ವೇದವ್ಯಾಸ ದೇವರು

ದೇವತಾ – ಭಾರತೀ, ಸರಸ್ವತೀ, ಬ್ರಹ್ಮಾ, ವಾಯು, ಲಕ್ಷ್ಮೀದೇವೀ ಹಾಗೂ ನಾರಾಯಣ ದೇವರು. ಇವರು ಮೂಲಗುರುಗಳೂ ಹೌದು.

ಶ್ರೀಕೃಷ್ಣಂ – ಕೃಷ್ಣಮಂತ್ರ ಪ್ರತಿಪಾದ್ಯ ದೇವತೆ

ವಾಸುದೇವ – ಮಂತ್ರಜಪದ ಮುಖ್ಯಫಲದಾತೃ.

**ಪಾಪಪುರುಷ ಧ್ಯಾನ –**

ಬಾಹ್ಯಶುದ್ಧಿ ಎಷ್ಟೇ ಸಂಪಾದಿಸಿದರೂ ಮಹಾಪಾತಕಗಳಿರುವಷ್ಟು ಕಾಲ

ನಾವು ಶುದ್ಧರಾಗುವುದಿಲ್ಲ. ಕಳೆಯನ್ನು ಕೀಳದೆ ಬೆಳೆಯು ಬೆಳೆಯುವುದಿಲ್ಲವಷ್ಟೇ. ಈ ಕಳೆಯನ್ನು ಕಿತ್ತಿ ಪುಣ್ಯವೆಂಬ ಫಲ ಪಡೆಯಲೆಂದೇ ಪಾಪಪುರುಷ ಧ್ಯಾನ –ಹಾಗೂ ವಿಸರ್ಜನೆ.

**'ಯಂ'** ಎಂಬ ವಾಯುವಿನ ಬೀಜಾಕ್ಷರವು.

**'ರಂ'** ಎಂಬುದು ಅಗ್ನಿಯ ಬೀಜಾಕ್ಷರವು.

**'ವಂ'** ವರುಣ ಬೀಜಾಕ್ಷರವು.

ವಾಯುಬೀಜದಿಂದ ಹೊಟ್ಟೆಯಲ್ಲಿರುವ ಪಾಪಪುರುಷನನ್ನು ಮೊದಲು ಧ್ಯಾನಿಸಬೇಕು.

ಪಾಪಪುರುಷನ ಬ್ರಹ್ಮಹತ್ಯೆಯೇ ಪಾಪಪುರುಷನ ತಲೆ

ಸುವರ್ಣಸ್ತೇಯವೇ ಎರಡು ಭುಜಗಳು

ಸುರಪಾನವೇ ಹೃದಯ

ಗುರುಹಿರಿಯರ ಸ್ತ್ರೀಯರನ್ನು ಭೋಗಿಸಿದ್ದೆ ಸೊಂಟ

ಈ ಮಹಾಪಾತಕ ಮಾಡಿದವರ ಸಂಪರ್ಕವೇ ಕಾಲುಗಳು ಬೇರೆ ಪಾತಕಗಳೇ ಇತರ ಅಂಗಗಳು.

ಉಪಪಾತಕಗಳೇ ರೋಮಗಳು ಹೀಗೆ

ಪಾತಕ ಉಪಪಾತಕಾದಿಗಳೇ ಯಾರ ಶಿರಸ್ಸು, ರೋಮ ಮೊದಲಾದ ಅಂಗಾಂಗಗಳಲ್ಲಿರುವುವೋ ಅಂತಹ ಕೆಂಪಾದ ಮೀಸೆ, ಕಣ್ಣುಗಳುಳ್ಳ, ಕತ್ತಿ, ಢಾಲು ಹಿಡಿದಿರುವ ಪಾಪಪುರುಷನನ್ನು ಚಿಂತಿಸಬೇಕು.

ಇಂತಹ ಪಾಪಪುರುಷನ ದಹನವಾಗಬೇಕಾದರೆ ಮೊದಲು ಹೊಟ್ಟೆಯ ಎಡಭಾಗದಲ್ಲಿ ಚಿಂತಿಸಿ, ಪಾಪಗಳ ಮೂರ್ತಿಯಂತಿರುವ ಪಾಪಪುರುಷನನ್ನು ಒಣಗಿಸಿ, ಸುಟ್ಟು ವಾರುಣ ಮಂತ್ರದಿಂದ ಅಮೃತಧಾರೆಯಿಂದ ಪ್ಲಾವಿತರಾಗಿ ಪವಿತ್ರೀಕೃತಗಾತ್ರರಾಗಬೇಕು.

***ಅಂಗನ್ಯಾಸಃ :***

ನ್ಯಾಸವೆಂದರೆ ಇಡುವುದು ಎಂದರ್ಥ.

ನಮ್ಮ ಅಂಗಗಳಲ್ಲಿ ಮಂತ್ರಪೂತವಾದ ಹಸ್ತವನ್ನು ಇಡುವುದೇ ಅಂಗನ್ಯಾಸ. ಹಸ್ತವನ್ನಿಟ್ಟರೆ ಸಾಲದು ಆಯಾ ಭಗವದ್ರೂಪಗಳನ್ನು ಚಿಂತಿಸಬೇಕು.

1) ಜ್ಞಾನಸ್ವರೂಪಿಯಾದ ಭಗವಂತನಿಗೆ ಈ ಹೃದಯವು ಅರ್ಪಿತವಾಗಲಿ.

2) ಶಿರಸ್ಸಿನಲ್ಲಿ ಶಿರಶ್ಶಬ್ದವಾಚ್ಯನಾದ ಭಗವಂತನಿಗೆ ಈ ಶಿರಸ್ಸು ಅರ್ಪಿತ. ಇದೇ ರೀತಿ ಉಳಿದದ್ದನ್ನು ತಿಳಿಯುವುದು.

## ಕ್ಲೀಂ ಬೀಜಾಕ್ಷರ :

ಸ್ತ್ರೀಯರು ಮಂತ್ರವನ್ನು ಜಪಿಸುವಾಗ "ಓಂ" ಎಂದು ಸೇರಿಸಿ ಜಪಿಸಬಾರದು. ಮಂತ್ರಘಟಕವಾಗಿ ಓಂ ಎಂದು ಹೇಳಬಾರದೆಂಬ ನಿಷೇಧವಿರುವುದರಿಂದ **ಓಂ ಕ್ಲೀಂ ಕೃಷ್ಣಾಯ ನಮಃ** ಎಂದು ಜಪಿಸಬಾರದು.

ಓಂ ಕಾರವು ಸಮಸ್ತ ವೇದಗಳ ಬೀಜರೂಪವಾದ್ದರಿಂದ ವೇದಾಧ್ಯಯನ ಮಾಡಲು ಸ್ತ್ರೀಯರಿಗೆ ನಿಷೇಧ ಮಾಡಿರುವುದರಿಂದ ಓಂಕಾರವನ್ನು ಸೇರಿಸಿ ಪಠಿಸಬಾರದು.

ಓಂಕಾರದ ಬದಲು ಸ್ತ್ರೀಯರು ಶ್ರೀಃ ಅಥವಾ ಶ್ರೀಂ ಎಂಬ ಪದವನ್ನು ಬಳಸುವ ಪದ್ಧತಿಯಿದೆ. ಆದ್ದರಿಂದ **ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ** ಎಂದು ಮಂತ್ರವನ್ನು ಜಪಿಸಬೇಕು.

ಓಂಕಾರ ಉಚ್ಚಾರಣೆಯಾಗಲೀ ಶ್ರೀಕಾರ ಉಚ್ಚಾರಣೆಯಲ್ಲಾಗಲಿ ಅರ್ಥದಲ್ಲಿ ಏನು ವ್ಯತ್ಯಾಸವಿರುವುದಿಲ್ಲ.

ಓಂಕಾರವೆಂದರೆ ಸಕಲಗುಣಪರಿಪೂರ್ಣ

ಶ್ರೀಕಾರ ಸಕಲಗುಣಗಳಿಗೆ ಆಶ್ರಯನಾಗಿರುವನು.

ಕ್ಲೀಂ ಎನ್ನುವ ಬೀಜಾಕ್ಷರವು ಚಿಂತಾಮಣಿಯಂತೆ ಸಮಸ್ತೇಷ್ಟಾರ್ಥ-ಪೂರಕವೆಂದು ಆಚಾರ್ಯರ ಅಭಿಪ್ರಾಯ.

ಮಂತ್ರದಲ್ಲಿ ಉಕ್ತವಾಗಿರುವ ಫಲವನ್ನು ಈ ಬೀಜಾಕ್ಷರವು ಸಂಕ್ಷೇಪವಾಗಿ ತಿಳಿಸುತ್ತದೆ.

## ತಪ್ತಮುದ್ರಧಾರಣ :

ತಪ್ತಮುದ್ರಾಧಾರಣೆಯನ್ನು ಸ್ತ್ರೀಯರೂ ಸ್ವೀಕರಿಸಬೇಕು. ಇದೊಂದು ವಿಷ್ಣುದೀಕ್ಷೆ.

**"ಅಂಕನಂ ನಾಮಕರಣಂ ಭಜನಂ ದಶಧಾ ಚ ತತ್ ।"** ಎಂಬ ಪ್ರಮಾಣದಂತೆ ವಿಷ್ಣುವಿನ ಆಯುಧಗಳ ಚಿಹ್ನೆ ಧರಿಸುವುದು, ಅವನ ಹೆಸರುಗಳನ್ನು ಇಟ್ಟುಕೊಳ್ಳುವುದು, ಭಗವಂತನ ಭಜನೆ ಇವು ವಿಷ್ಣುದೀಕ್ಷೆಯೆನಿಸಿವೆ.

ಇದರಲ್ಲಿ ಅಂಕನವು ಎರಡು ವಿಧ.

1) ನಿತ್ಯವೂ ಗೋಪಿಚಂದನದಿಂದ ಮುದ್ರೆಗಳನ್ನು ಧರಿಸುವುದು.

2) ತಪ್ತಮುದ್ರೆಗಳನ್ನು ಧರಿಸುವುದು.

ತಪ್ತಮುದ್ರಾಧಾರಣೆಯನ್ನು ಪ್ರತಿವರ್ಷದಲ್ಲಿಯೂ ವಿಶೇಷ ಸಂದರ್ಭಗಳಾದ ವಿವಾಹ, ಉಪನಯನಾದಿಗಳಲ್ಲಿಯೂ ಧರಿಸಬೇಕು. ಆದರೂ ಮಂತ್ರೋಪದೇಶ ಕಾಲ ಅಥವಾ ಶಯನೀ ಏಕಾದಶೀಗಳಲ್ಲಿ ಅತ್ಯಂತ ಪ್ರಶಸ್ತವಾದದ್ದು.

ತಪ್ತಮುದ್ರೆಗಳನ್ನು ಧರಿಸಿದರೆ ಗುರುಮಂತ್ರ ಜಪಾದಿಗಳಲ್ಲಿ, ಏಕಾದಶ್ಯಾದಿ ವ್ರತಗಳಲ್ಲಿ ಯೋಗ್ಯತೆಯುಂಟಾಗುತ್ತದೆ.

ಹಿಂದೆ ದೇವತೆಗಳು ತಪ್ತಮುದ್ರೆ ಧರಿಸಿ ವೃತ್ರಾಸುರನನ್ನು ಜಯಿಸಿದರು. ಮನುಗಳೂ ಇವುಗಳನ್ನು ಧರಿಸಿಯೇ ಲೋಕಸೃಷ್ಟಿಯನ್ನು ಆರಂಭಿಸಿದರು.

***ಶಾಕಲ್ಯ ಸಂಹಿತೆಯಲ್ಲಿ :***

**"ದೇವಾಸೋ ಯೇನ ವಿಧೃತೇನ ಬಾಹುನಾ ಸುದರ್ಶನೇನ ಪ್ರಯಾತಾಸ್ತಮಾಯನ್ । ಯೇನಾಂಕಿತಾ ಮನವೋ ಲೋಕಸೃಷ್ಟಿಂ ವಿತನ್ವಂತಿ ಬ್ರಾಹ್ಮಣಾಸ್ತದ್ವಹಂತಿ ।"**

ಆದ್ದರಿಂದ ತಪ್ತಮುದ್ರಧಾರಣೆಯಿಂದ ದುಷ್ಟಶಕ್ತಿಗಳ ವಿರುದ್ಧ ವಿಜಯವನ್ನು ಸದ್ವಿಚಾರಗಳ ಸೃಜನಶಕ್ತಿಯನ್ನೂ ಸಾಧಿಸಬಹುದು.

**ಮಾತುರ್ವಂಶಂ ಪಿತುರ್ವಂಶಂ ಭಾರ್ಯಾಯಾಶ್ಚ ಕುಲಂ ತಥಾ ।**
**ಪುನಾತಿ ಸಪ್ತಪರ್ಯಂತಂ ವಿಷ್ಣೋಃ ಚಕ್ರಾಂಕಿತಃ ಪುಮಾನ್ ॥**

*– ಪದ್ಮಪುರಾಣ*

ತಪ್ತಮುದ್ರಧಾರಣೆ ಮಾಡಿಕೊಂಡರೆ ತಂದೆಯ ಕುಲ, ತಾಯಿಯ ಕುಲ, ಹೆಂಡತಿಯ ಕುಲದ ಏಳು ತಲೆ ಪರ್ಯಂತದವರು ಪವಿತ್ರರಾಗುತ್ತಾರೆ.

**ಅಗ್ನಿತಪ್ತೇನ ಚಕ್ರೇಣ ಬಾಹ್ವೋರ್ಮೂಲೇ ತು ಲಾಂಛಿತಾಃ ।**
**ಸರ್ವಪಾಪಾನಿ ಸಂತೀರ್ಯ ಭವಿಷ್ಯಂತೀಶ್ವರೋಪಮಾಃ ॥**

ಬಾಹುಮೂಲದಲ್ಲಿ ತಪ್ತಮುದ್ರಾಂಕನ ಹೊಂದಿದವರು ಸಕಲ ಪಾಪರಹಿತರಾಗಿ ವಿಷ್ಣುಲೋಕವನ್ನು ಪಡೆಯುವರು.

ತಪ್ತಮುದ್ರೆಯ ಉದ್ದೇಶವಾದರೂ, ವೈಷ್ಣವತ್ವ ಸಿದ್ಧಿ ಹಾಗೂ ಭಗವಂತನ ಕೈಂಕರ್ಯ ರೂಪದಲ್ಲಿ ಶಾಸ್ತ್ರೋಕ್ತ ಕರ್ಮಗಳನ್ನು ನಡೆಸಲು ಸಿದ್ಧತೆ ಹಾಗೂ ಪೋಷಣೆಗೆ ಪೋಷಕವಾಗಿರುವುದೇ ಆಗಿದೆ.

* * * * *



# 5. ಭಗವಂತನ ಸ್ಮರಣೆ –ಸ್ತ್ರೀಯರು







- ***ಕಾಲನಿಯಾಮಕನ ಉಪಾಸನೆ :***

  **"ಸರ್ವೇಷು ಕಾಲೇಷು ಮಾಮನುಸ್ಮರ"** ಎಂಬಂತೆ ಸ್ತ್ರೀ ಪುರುಷರಿಬ್ಬರೂ ಭಗವಂತನ ತಾರಕ ಮಂತ್ರ ಹಾಗೂ ಭಗವದ್ರೂಪಗಳನ್ನು ಸ್ಮರಿಸುತ್ತಿರಬೇಕು.

  ನಮ್ಮ ಸಮಸ್ತ ಕೆಲಸಗಳಲ್ಲೂ ಅದರಲ್ಲೂ ಮನೆಯ ಕಾರ್ಯಗಳಾದ ದೇವರ ಪಾತ್ರೆಯ ಶುದ್ಧಿ– ಅಡಿಗೆ, ಬಟ್ಟೆ ಒಗೆಯುವ ಕೆಲಸಗಳಲ್ಲಿ ಭಗವಂತನನ್ನು ಸ್ಮರಿಸುತ್ತಿರಬೇಕು.

***ಕಾಲನಾಮಕನ ಉಪಾಸನೆ :***

1. **ಪ್ರಾತಃ ಕಾಲದಲ್ಲಿ ಭಗವಂತನ ಕಾಲ ನಿಯಾಮಕವಾದ** – ಶ್ರೀಕೇಶವಾಯ ನಮಃ
2. **ಮಧ್ಯಾಹ್ನ ಕಾಲ** – ಶ್ರೀವಿಷ್ಣವೇ ನಮಃ
3. **ಅಪರಾಹ್ನಕಾಲ** – ಶ್ರೀಮಧುಸೂದನಾಯ ನಮಃ
4. **ಸಾಯಂಕಾಲ** – ಶ್ರೀಮಧುನಾಮಕ ಪರಮಾತ್ಮನೇ ನಮಃ
5. **ಪ್ರದೋಷಕಾಲ** – ಶ್ರೀಹೃಷಿಕೇಶಾಯ ನಮಃ
6. **ಸಂಗವ ಕಾಲ** – ಶ್ರೀಗೋವಿಂದಾಯ ನಮಃ

7. **ರಾತ್ರಿಯ ಮೊದಲ ಭಾಗ** – ಶ್ರೀಪದ್ಮನಾಭಾಯ ನಮಃ
**(9 ರಿಂದ 12)**
8. **ರಾತ್ರಿಯ ಎರಡನೇ ಭಾಗ** – ಶ್ರೀವತ್ಸಾಯ ನಮಃ
**(12 ರಿಂದ 3)**

ಭಗವಂತನ ನಾಮಸ್ಮರಣೆ ಪೂರ್ವಕವಾಗಿ ನಿತ್ಯ ವಿಹಿತ ಕರ್ಮಗಳನ್ನು ಮಾಡಿದರೆ ಆ ಸಮಸ್ತ ಕ್ರಿಯೆಗಳು ಯಜ್ಞಗಳಾವುವು. ಪ್ರತಿ ಕಾರ್ಯದ ಪ್ರಾರಂಭದಲ್ಲಿ "ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ" ಶ್ರೀಹರಿಯ ವಿಶಿಷ್ಟ ರೂಪಗಳನ್ನು ಈ ಕೆಳಗಿನ ರೀತಿ ಚಿಂತಿಸಬೇಕು.

1. **ಪ್ರಾತಃ ಕಾಲದಲ್ಲಿ ಏಳುವಾಗ** – ಭಾ.ಮು. ಶ್ರೀನಾರಾಯಣಾಯ ನಮಃ
2. **ಮಲ–ಮೂತ್ರ ವಿಸರ್ಜನೆ ಕಾಲ** – ಭಾ.ಮು. ಶ್ರೀಕೇಶವಾಯ ನಮಃ
3. **ಮೃತ್ತಿಕಾ ಶೌಚ ಕಾಲ** – ಭಾ.ಮು. ಶ್ರೀತ್ರಿವಿಕ್ರಮಾಯ ನಮಃ
4. **ದಂತಧಾವನ ಕಾಲ** – ಭಾ.ಮು. ಶ್ರೀಹರಯೇ ನಮಃ
5. **ಮುಖಪ್ರಕ್ಷಾಲನಾ ಕಾಲ** – ಭಾ.ಮು. ಶ್ರೀಮಾಧವಾಯ ನಮಃ
6. **ಗೋವಿಂದನ ಕಾಲ** – ಭಾ.ಮು. ಶ್ರೀಉದ್ಗೀಥಾಭಿನ್ನ ಶ್ರೀಕೃಷ್ಣಾಯ ನಮಃ
7. **ಹಾಲು ಕರೆಯುವಾಗ** – ಭಾ.ಮು. ಶ್ರೀನಾರಾಯಣಾಯ ನಮಃ
8. **ತುಲಸೀ ವಂದನ ಕಾಲ** – ಭಾ.ಮು. ಶ್ರೀವಿಷ್ಣವೇ ನಮಃ
9. **ಸ್ನಾನ ಕಾಲ** – ಭಾ.ಮು. ಶ್ರೀತ್ರಿವಿಕ್ರಮಾಭಿನ್ನ ದ್ರವರೂಪಿ ವರಾಹಾಯ ನಮಃ
10. **ವಸ್ತ್ರ ಧರಿಸುವ ಕಾಲ** – ಭಾ.ಮು. ಶ್ರೀ ಉಪೇಂದ್ರಾಯ ನಮಃ
11. **ಆಹ್ನಿಕಕ್ಕೆ ಕೂಡುವಾಗ** – ಶನ್ಯೈಶ್ಚರಾಂತರ್ಗತ ಭಾ.ಮು. ಶ್ರೀಕೃಷ್ಣಾಯ ನಮಃ
12. **ಗೋಪಿಚಂದನ ಧಾರಣೆ** – ರತಿಪತಿ ಮನ್ಮಥಾಂತರ್ಗತ ಶ್ರೀ ಉಮಾಪತಿರುದ್ರಾಂತರ್ಗತ ಭಾ.ಮು. ಶ್ರೀ ಭೂವರಾಹಾಯ ನಮಃ
13. **ದ್ವಾದಶನಾಮ** – ಕೇಶವಾದಿ ದಾಮೋದರ (ಶುಕ್ಲಪಕ್ಷದಲ್ಲಿ)

## *ಸಂಕರ್ಷಣಾದಿ – ಶ್ರೀಕೃಷ್ಣಪರ್ಯಂತ (ಕೃಷ್ಣಪಕ್ಷದಲ್ಲಿ)*

| | |
|---|---|
| 14. **ಚಕ್ರಧಾರಣೆ** | – ಕಾಮಾಂತರ್ಗತ ದ್ಯುನಾಮಕ ಭಾ.ಮು. ಶ್ರೀ ಹಿಂಕಾರಾಭಿನ್ನ ಕೃದ್ಧೋಲ್ಕಾಯ ನಮಃ |
| 15. **ಶಂಖಮುದ್ರೆ** | – ಪೃಥ್ವಿನಾಮಕ ಭಾ.ಮು. ಶ್ರೀಪತಿಹಾಶರ ಶ್ರೀ ಅಪಾನಾಂತರ್ಗತ ಅಂಭೃಣೀಪತಿ ಮಹೋಲ್ಕಾಯ ನಮಃ |
| 16. **ಗದಾಮುದ್ರೆ (ಸ್ತ್ರೀಯರು)** | – ದಿಜನಾಮಕ ಭಾ.ಮು. ಶ್ರೀ ವ್ಯಾನಾಂತರ್ಗತ ಲಕ್ಷ್ಮೀಪತಿ ನಿಧನಾಭಿನ್ನ ವೀರೋಲ್ಕಾಯ ನಮಃ |
| 17. **ಪದ್ಮಮುದ್ರೆ** | – ವಾಜನಾಮಕ ಭಾ.ಮು. ಶ್ರೀ ಉದಾನಾಂತರ್ಗತ ದಕ್ಷಿಣಾಪತಿ ಪ್ರಸ್ಥಾವಾಭಿನ್ನ ದೂಲ್ಕಾಯ ನಮಃ |
| 18. **ನಾರಾಯಣ ಮುದ್ರೆ** | – ವಿದ್ಯುನ್ನಾಮಕ – ಭಾರತೀಪತಿ – ಸಮಾನಂತರ್ಗತ ಉದ್ಗೀಥಾಯ ನಮಃ |
| 19. **ನಿರ್ಮಾಲ್ಯ ತೀರ್ಥಪ್ರಾಶನ** | – ಪ್ರೋಕ್ಷಣೆ – ವಿಶ್ವಾಯನಮಃ, ತೈಜಸಾಯ ನಮಃ, ಪ್ರಾಜ್ಞಾಯ ನಮಃ |
| 20. **ಸಂಧ್ಯಾವಂದನೇ** | – ಭಾ.ಮು. ಶ್ರೀರಾಮಾಯ ನಮಃ |
| 21. **ಯಜ್ಞೋಪವೀತಧಾರಣೆ** | – ಭಾ.ಮು. ಶ್ರೀವಾಮನಾಯ ನಮಃ |
| 22. **ಶಂಖೋದಕ ಪ್ರೋಕ್ಷಣೆ** | – ಭಾ.ಮು. ಶ್ರೀಮುಕುಂದಾಯ ನಮಃ |
| 23. **ತೀರ್ಥಪ್ರಾಶನ** | – ಭಾ.ಮು. ಶ್ರೀರಾಮಾಯ ನಮಃ, ಶ್ರೀಕೃಷ್ಣಾಯ ನಮಃ, ಶ್ರೀವೇದವ್ಯಾಸಾಯ ನಮಃ |
| 24. **ತುಳಸೀ ಭಕ್ಷಣ** | – ಭಾ.ಮು. ಶ್ರೀರಾಮಾಯ ನಮಃ |
| 25. **ಗುರುಹಿರಿಯರಿಗೆ ನಮಸ್ಕರಿಸುವಾಗ** | – ಭಾ.ಮು. ಶ್ರೀಗರುಡಾಂತರ್ಗತ ಶ್ರೀಹರಯೇ ನಮಃ |

| | |
|---|---|
| 26. ದಾನ ಮಾಡುವಾಗ | – ಭಾ.ಮು. ಶ್ರೀ ಪರಶುರಾಮಾಯ ನಮಃ |
| 27. ಬಾಗಿಣ ಮೊದಲಾದ ದಾನ ತೆಗೆದುಕೊಳ್ಳುವಾಗ | – ಭಾ.ಮು. ಶ್ರೀ ವಾಮನಾಯ ನಮಃ |
| 28. ದಾರಿಯಲ್ಲಿ ನಡೆಯುವಾಗ | – ಭಾ.ಮು. ಶ್ರೀ ಭೂವರಾಹಾಯ ನಮಃ |
| 29. ನದಿಯನ್ನು ದಾಟುವಾಗ | – ಭಾ.ಮು. ಶ್ರೀ ಮತ್ಸ್ಯಾಯ ನಮಃ |
| 30. ಅಡವಿಯಲ್ಲಿ ಹೋಗುತ್ತಿರುವಾಗ | – ಭಾ.ಮು. ಶ್ರೀ ನಾರಸಿಂಹಾಯ ನಮಃ |
| 31. ವಿಮಾನದಲ್ಲಿ ಪ್ರಯಾಣ | – ಭಾ.ಮು. ಶ್ರೀ ತ್ರಿವಿಕ್ರಮಾಯ ನಮಃ |
| 32. ರೋಗಾದಿಗಳು ಬಂದಾಗ | – ಭಾ.ಮು. ಶ್ರೀ ಧನ್ವಂತರಯೇ ನಮಃ |
| 33. ಔಷಧಿ ಸ್ವೀಕಾರ ಕಾಲ | – ಭಾ.ಮು. ಶ್ರೀ ವೈದ್ಯರೂಪಿ ನಾರಾಯಣಾಯ ನಮಃ |
| 34. ಹೂವನ್ನು ಧರಿಸುವಾಗ (ಸ್ತ್ರೀಯರು) | – ಭಾ.ಮು. ಶ್ರೀ ಕಪಿಲಾಯ ನಮಃ |
| 35. ಮಗುವಿಗೆ ಹಾಲೂಡಿಸುವಾಗ | – ಭಾ.ಮು. ಶ್ರೀ ಬಾಲಕೃಷ್ಣಾಯ ನಮಃ |
| 36. ತಾಂಬೂಲ ಮೆಲ್ಲುವಾಗ | – ಭಾ.ಮು. ಶ್ರೀ ಪ್ರದ್ಯುಮ್ನಾಯ ನಮಃ |
| 37. ಸಂತೋಷದಲ್ಲಿರುವಾಗ | – ಭಾ.ಮು. ಶ್ರೀ ಹಯಗ್ರೀವಾಯ ನಮಃ |
| 38. ಭಗವಂತನ ಕಥೆ ಕೇಳುವಾಗ | – ಭಾ.ಮು. ಶ್ರೀ ವೇದವ್ಯಾಸಾಯ ನಮಃ |
| 39. ರತಿಕ್ರೀಡೆಯಲ್ಲಿ | – ಭಾ.ಮು. ಶ್ರೀ ಗೋಪಿಜನಜಾರಾಯ ನಮಃ |
| 40. ಮಲಗುವಾಗ | – ಭಾ.ಮು. ಶ್ರೀ ಪದ್ಮನಾಭಾಯ ನಮಃ ಅಥವಾ ಮಾಧವಾಯ ನಮಃ |

## *ಅಡಿಗೆ ಮಾಡುವಾಗ ಭಗವದ್ರೂಪ ಚಿಂತನ :*

| | |
|---|---|
| 1. ಅಡಿಗೆ ಮಾಡುವ ಒಲೆಗಳಲ್ಲಿ | – ಅಗ್ನಯೇ ನಮಃ ಭಾರ್ಗವಾಯ ನಮಃ |
| 2. ಇದ್ದಿಲು, ಕಟ್ಟಿಗೆ, ಬೆರಣಿ ಇವುಗಳಲ್ಲಿ | – ವಸಂತಾಯ ನಮಃ, ಭಾರ್ಗವಾಯ ನಮಃ |
| 3. ಅಡಿಗೆ ಪಾತ್ರೆಗಳಲ್ಲಿ | – ವಾರುಣ್ಯೈ ನಮಃ, ಅನಂತಾಯ ನಮಃ |
| 4. ಭೋಜನ ಪಾತ್ರೆ ಬಾಳೆ ಎಲೆ, ಮುತ್ತುಗದ ಎಲೆ ಇತ್ಯಾದಿಗಳಲ್ಲಿ | – ದುರ್ಗಾದೇವ್ಯೈ ನಮಃ, ಸತ್ಯನಾಮಕ ಭಗವಂತ |
| 5. ತುಪ್ಪದ ಬಟ್ಟಲು | – ಸೌಪರ್ಣೀ – ದತ್ತಾತ್ರೇಯ |

### *ಅಡಿಗೆ ಮಾಡುವಾಗ ಪಾಕಕರ್ತೃಗಳ ಸ್ಮರಣೆ :*

1. **ಅನ್ನ ಮಾಡುವವಳು** – ಸರಸ್ವತಿ ಬ್ರಹ್ಮದೇವರು
2. **ತೊವ್ವೆ** – ಶ್ರೀ ಲಕ್ಷ್ಮೀದೇವಿ
3. **ಭಕ್ಷ್ಯಗಳು** – ಶ್ರೀ ವಾಯುದೇವರು
4. **ಪಾಯಸ** – ಭಾರತೀದೇವಿಯವರು
5. **ತರಕಾರಿ ಪಲ್ಯ** – ಚಂದ್ರದೇವನು
6. **ನೈವೇದ್ಯ ಮಂಡಲ** – ಭೂದೇವಿ ಹಾಗೂ ಭೂವರಾಹ
7. **ಅಡಿಗೆ ಮಾಡುವವರಲ್ಲಿ** – ಶ್ರೀದೇವಿಯು, ವಿಶ್ವಂಭರ
8. **ತಯಾರಾದ ಅಡಿಗೆ ಪದಾರ್ಥಗಳ ಶುದ್ಧಿ** – ಕರ್ಮಾಭಿಮಾನಿ ಪುಷ್ಕರನು
9. **ಆಹಾರ ಪದಾರ್ಥಗಳ ಮೇಲೆ ಅಡ್ಡವಾಗಿ ಹಿಡಿಯುವ ವಸ್ತ್ರ** – ಗಣಪತಿ, ಸನತ್ಕುಮಾರರು
10. **ನೈವೇದ್ಯ ಕಾಲದಲ್ಲಿ ಹಾಕುವ ತುಳಸಿಯಲ್ಲಿ** – ರಮಾದೇವಿ, ಕಪಿಲ
11. **ನೈವೇದ್ಯದ ಪರದೆಯಲ್ಲಿ** – ವಿಶ್ವಕ್ಸೇನ – ಪುರುಷ

### *ಆಹಾರ ಪದಾರ್ಥಗಳಲ್ಲಿ ಭಗವಂತನ ರೂಪಗಳು :*

1. **ಉಪ್ಪು** – ನಿರ್ಋತಿ – ಜನಾರ್ದನ
2. **ವ್ಯಂಜನಗಳು** – ಬೃಹಸ್ಪತಿ – ಬ್ರಹ್ಮ – ಪ್ರದ್ಯುಮ್ನ
3. **ತರಕಾರಿಪಲ್ಯ** – ಶೇಷ – ಪದ್ಮನಾಭ
4. **ಸೊಪ್ಪು ಪಲ್ಯ** – ಮಿತ್ರ ಸೂರ್ಯ – ಹೃಷಿಕೇಶ
5. **ತೊವ್ವೆ** – ಗರುಡ – ಶ್ರೀಧರ
6. **ಹುಳಿ ಇಲ್ಲದ ಪದಾರ್ಥಗಳು** – ರುದ್ರ – ಸಂಕರ್ಷಣ
7. **ಹುಳಿ ಇರುವ ಪದಾರ್ಥಗಳು** – ಗೌರೀ – ದಾಮೋದರ

8. ಒಗರು ಪದಾರ್ಥಗಳು – ಯಮ – ಅನಿರುದ್ಧ
9. ಪಾಯಸ – ಭಾರತಿ – ನಾರಾಯಣ
10. ಭಕ್ಷ್ಯಗಳು – ಸೂರ್ಯ – ಮಾಧವ
11. ಮಂಡಿಗೆ – ಬ್ರಹ್ಮ – ಮಧೂಸೂದನ
12. ಸಕ್ಕರೆ, ಬೆಲ್ಲ – ಇಂದ್ರ – ವಾಸುದೇವ
13. ಕರಿದ ಪದಾರ್ಥಗಳು – ಜಯಂತ – ಅಧೋಕ್ಷಜ
14. ಉದ್ದಿನ ಪದಾರ್ಥ – ಸ್ವಾಯಂಭುಮನು – ಅಚ್ಯುತ
15. ಹಪ್ಪಳ, ಸಂಡಿಗೆ – ದಕ್ಷ ಪ್ರಜಾಪತಿ – ನರಸಿಂಹ
16. ಹಣ್ಣಿನ ರಸಗಳು – ಪ್ರಾಣ – ಉಪೇಂದ್ರ
17. ಅನ್ನದಲ್ಲಿ – ಚಂದ್ರ – ಕೇಶವ
18. ತುಪ್ಪ – ಲಕ್ಷ್ಮೀ ಗೋವಿಂದ+ಬ್ರಹ್ಮ
19. ಬೆಣ್ಣೆ – ಮುಖ್ಯಪ್ರಾಣ – ತ್ರಿವಿಕ್ರಮ
20. ಹಾಲು – ಸರಸ್ವತೀ(ಭಾರತೀ) – ವಿಷ್ಣು
21. ಮೊಸರು – ಚಂದ್ರ – ವಾಮನ
22. ಸಿಹಿನೀರು – ಬುಧ – ಕೃಷ್ಣ
23. ಸಾಸುವೆ, ಇಂಗು, ಏಲಕ್ಕಿ, ಕೇಸರೀ – ಮನ್ಮಥ – ಪುರುಷೋತ್ತಮ
24. ಪಾನಕ – ರತಿ – ವಿಶ್ವ
25. ತಾಂಬೂಲ – ಗಂಗಾ – ಶ್ರೀಹರಿ

***ಭೋಜನ ಯಜ್ಞಾನುಸಂಧಾನ :***

1. ಭುಂಜಿಸುವವನ ನೇತ್ರದಲ್ಲಿ – ಕಪಿಲನಿದ್ದು ಆಹಾರ ಪದಾರ್ಥಗಳನ್ನು ನೋಡಿ ಪವಿತ್ರ ಮಾಡುವನು.
2. ಭುಂಜಿಸುವವನ ನಾಸಿಕದಲ್ಲಿ – ನರಹರಿಯು ಇದ್ದು ಮೂಸುವನು.

3. ಬಾಯಿಯಲ್ಲಿ ಭಾರ್ಗವರಾಮನು ಇದ್ದು ಅವಕಾಶವನ್ನು ನೀಡುವನು.
4. ನಾಲಿಗೆಯಲ್ಲಿ ಮತ್ಸ್ಯನಾಮಕನಿದ್ದು ಆಹಾರ ಪದಾರ್ಥಗಳ ರುಚಿ ನೋಡುವನು.
5. ದಂತಗಳಲ್ಲಿ ಹಂಸನಾಮಕ ಭಗವಂತನಿದ್ದು ಆಹಾರ ಪದಾರ್ಥಗಳನ್ನು ಅಗಿಯುವನು.
6. ವಾಕಿನಲ್ಲಿ ಹಯಗ್ರೀವನಿದ್ದು ತನ್ನ ಧ್ಯಾನ ಮಾಡುವಂತೆ ಪ್ರೇರಿಸುವನು.
7. ಸಂಕರ್ಷಣ – ಪ್ರದ್ಯುಮ್ನರು ಭೋಜನ ಮಾಡುವವರಲ್ಲಿರುವರು ಹಾಗೂ ತಿನ್ನುವ ಶಕ್ತಿ ನೀಡುವರು.
8. ಅನಿರುದ್ಧ – ನಾರಾಯಣರು ಆಹಾರ ಪದಾರ್ಥಗಳಲ್ಲಿದ್ದು ರಕ್ಷಿಸುವರು.
9. ವಾಸುದೇವನು ಕಂಠ, ಉದರಗಳಲ್ಲಿದ್ದು ಭೋಜನ ಪದಾರ್ಥಗಳಿಗೆ ಅವಕಾಶ ನೀಡುವನು.

## *ಪಂಚಕೋಶಗಳಲ್ಲಿಯ ರೂಪಗಳ ಸಂಖ್ಯೆ :*

1. ಅನ್ನಮಯ ಕೋಶ – ಶಾಂತಿಪತಿ ಅನಿರುದ್ಧನು 8251 ರೂಪಗಳಿಂದಿರುವನು.
2. ಪ್ರಾಣಮಯ ಕೋಶ – ಕೃತಿಪತಿ – ಪ್ರದ್ಯುಮ್ನನು 5543 ರೂಪಗಳಿಂದಿರುವನು.
3. ಮನೋಮಯ ಕೋಶ – ಜಯಾಪತಿ ಸಂಕರ್ಷಣನು 5,62,107 ರೂಪಗಳಿಂದಿರುವನು.
4. ವಿಜ್ಞಾನಮಯ ಕೋಶ – ಮಾಯಾಪತಿ ವಾಸುದೇವನು 4374 ರೂಪಗಳಿಂದಿರುವನು.
5. ಆನಂದಮಯ ಕೋಶ – ಲಕ್ಷ್ಮೀಪತಿ ನಾರಾಯಣನು 5124 ರೂಪಗಳಿಂದಿರುವನು.

## *ಭೋಜನ – ವೈಶ್ವಾನರನ ಹೋಮ :*

ಭೋಜನವು ಕೇವಲ ಹೊಟ್ಟೆ ಹೊರೆಯುವ ಸಾಧನವಾಗಿರದೆ, ಅಗ್ನಿಹೋತ್ರ ಹೋಮವೆಂಬ ಭಾವನೆಯಿಂದ ಸ್ತ್ರೀ ಪುರುಷರು ಭುಂಜಿಸಬೇಕು.

**ವೈಶ್ವಾನರಿಗೆ ಆಹುತಿ ಪ್ರದಾನ :**

ನಮ್ಮ ದೇಹದಲ್ಲಿ ಪಂಚಾಗ್ನಿಗಳಿವೆ.

ಬಾಯಿಯಲ್ಲಿ – ಅಹವನೀಯಾಗ್ನಿ

ಹೃದಯದಲ್ಲಿ – ಗಾರ್ಹಪ್ಪತ್ಯಾಗ್ನಿ

ನಾಭಿಯಲ್ಲಿ – ದಕ್ಷಿಣಾಗ್ನಿ

ನಾಭಿಯ ಬಲಭಾಗದಲ್ಲಿ – ಶರಭಿ ಎಂಬ ಅಗ್ನಿ ಅಥವಾ ಸಭ್ಯ

ನಾಭಿಯ ಎಡಭಾಗದಲ್ಲಿ – ಅವಶರಭಿ ಎಂಬ ಅಗ್ನಿ ಇರುತ್ತದೆ ಅಥವಾ ಆವಸಥ್ಯ

ಈ ಪಂಚಾಗ್ನಿಗಳಿಗೂ ನಿಯಾಮಕನಾದ ವೈಶ್ವಾನರು ದೇಹಪೂರ್ಣ ವ್ಯಾಪಿಸಿರುವನು.

**ಆಹುತಿ ಚಿಂತನೆ :**

ಇದು ಪ್ರಾಣನಿಗೆ ಆಹುತಿ ಎಂದು ಬಾಯಿಯಲ್ಲಿ ಆಹವನೀಯಾಗ್ನಿಗೆ ನೀಡಬೇಕು.

ಇದು ಹೃದಯದಲ್ಲಿರುವ ಗಾರ್ಹಸ್ಪತ್ಯಾಗ್ನಿಗೆ ಎಂದು ಅಪಾನನ ಸ್ಮರಣೆ ಪೂರ್ವಕವಾಗಿ ಬಾಯಿಯಲ್ಲಿ ಹಾಕಿಕೊಳ್ಳುವುದು.

ಇದು ವ್ಯಾನನಿಗೆ ಆಹುತಿ ಎಂದು ನಾಭಿಯಲ್ಲಿರುವ ದಕ್ಷಿಣಾಗ್ನಿಗೆ ಎಂದು ಚಿಂತಿಸಿ ಬಾಯಿಯಲ್ಲಿ ಹಾಕಿಕೊಳ್ಳುವುದು.

ನಾಭಿಯ ಬಲಭಾಗದಲ್ಲಿರುವ ಶರಭೀ ಅಗ್ನಿಯಲ್ಲಿ ಅನ್ನವನ್ನು ಬಾಯಿಯಲ್ಲಿ ಹಾಕಿಕೊಳ್ಳುತ್ತಾ ಇದು ಉದಾನನಿಗೆ ಆಹುತಿ ಎಂದು ಹೋಮಿಸಬೇಕು.

ನಾಭಿಯ ಎಡಭಾಗದಲ್ಲಿರುವ ಅವಶರಭೀ ಅಗ್ನಿಗಾಗಿ ಇದು ಸಮಾನನಿಗೆ ಆಹುತಿ ಎಂದು ಬಾಯಿಯಲ್ಲಿ ಹೋಮಿಸಬೇಕು. ಇದು ಸ್ತ್ರೀಯರು ಮಾಡಬೇಕಾದ ಅನುಸಂಧಾನ. ಸ್ತ್ರೀಯರಿಗೆ ಮಂತ್ರಪೂರ್ವಕವಾಗಿ ಆಹುತಿ ಇರುವುದಿಲ್ಲ.

ಇದರ ಜೊತೆಗೆ ಜಠರಾಗ್ನಿಗೂ ಒಂದು ಬ್ರಹ್ಮನಿಗೆ ಈ ಆಹುತಿ ಎಂದು ಆಹುತಿ ಪ್ರದಾನ ಮಾಡಬೇಕು.

**ದೈನಂದಿನ ಕರ್ಮಗಳಲ್ಲಿ ಸ್ತ್ರೀಯರು ಚಿಂತಿಸಬೇಕಾದ ಭಗವದ್ರೂಪಗಳು:**

ಮಕ್ಕಳನ್ನು ಎಬ್ಬಿಸುವಾಗ – ನಾರಾಯಣ

ಮಕ್ಕಳನ್ನು ಮುದ್ದು ಮಾಡುವಾಗ – ಕೃಷ್ಣ

ಎಣ್ಣೆ ಹಚ್ಚಿ ಎರೆಯುವಾಗ – ಲಕ್ಷ್ಮೀ ನಾರಾಯಣ

ನೀರನ್ನು ಹಾಕುವಾಗ – ಗಂಗಾಜನಕ ವಿಷ್ಣು

ಮಗುವಿಗೆ ಅಲಂಕರಿಸುವಾಗ – ಮನ್ಮಥ ಪಿತಗೋಪಾಲ

ಮಗುವಿಗೆ ಊಟ ಮಾಡಿಸುವಾಗ – ಗೋವಿಂದ

ಮಲಗಿಸಿ ತೂಗುವಾಗ – ಬಾಲಕೃಷ್ಣ–ಪದ್ಮನಾಭ

ಮಗುವಿನ ಜೊತೆಗೆ ಆಡುವಾಗ – ಗೋವಿಂದ

**ಬಾಲರಕ್ಷಾ ಸ್ತೋತ್ರ (ಭಾಗವತ) :**

1. ಪಾದಗಳನು ಅಜನು ರಕ್ಷಿಸಲಿ
2. ಮೊಣಕಾಲುಗಳನು ಅಣುರೂಪಿ ರಕ್ಷಿಸಲಿ
3. ತೊಡೆಗಳನ್ನು ಯಜ್ಞನು ರಕ್ಷಿಸಲಿ
4. ಕಟಿಯನ್ನು ಅಚ್ಯುತನು ರಕ್ಷಿಸಲಿ
5. ಜಠರವನ್ನು ಹಯಗ್ರೀವನು ರಕ್ಷಿಸಲಿ
6. ನಾಭಿಯನ್ನು ಪದ್ಮನಾಭನು ರಕ್ಷಿಸಲಿ
7. ಗುಹ್ಯೇಂದ್ರೀಯವನ್ನು ಅನಿರುದ್ಧನು ರಕ್ಷಿಸಲಿ
8. ಹೃದಯವನ್ನು ಕೇಶವನು ರಕ್ಷಿಸಲಿ
9. ಎದೆಯನ್ನು ಈಶನು ರಕ್ಷಿಸಲಿ
10. ಭುಜಗಳನ್ನು ವಿಷ್ಣುವು ರಕ್ಷಿಸಲಿ
11. ಬಾಯಿಯನ್ನು ಉರುಕ್ರಮ ರಕ್ಷಿಸಲಿ
12. ಶಿರಸ್ಸನ್ನು ಈಶ್ವರನು ರಕ್ಷಿಸಲಿ

13. ಆಡುವಾಗ ಗೋವಿಂದನು ರಕ್ಷಿಸಲಿ
14. ನಡೆಯುವಾಗ ವೈಕುಂಠನು ರಕ್ಷಿಸಲಿ
15. ಕುಳಿತಿರುವಾಗ ಶ್ರೀಪತಿಯು ರಕ್ಷಿಸಲಿ
16. ದೃಷ್ಟಿತಗಲದಂತೆ ನರಸಿಂಹನು ರಕ್ಷಿಸಲಿ
17. ಮಗುವಿನ ಮುಂಭಾಗದಲ್ಲಿ ಈಶ್ವರನು ರಕ್ಷಿಸಲಿ
18. ಬಲಭಾಗದಲ್ಲಿ ಕೋದಂಡರಾಮ ರಕ್ಷಿಸಲಿ
19. ಮೇಲ್ಭಾಗದಲ್ಲಿ ಉಪೇಂದ್ರನು ರಕ್ಷಿಸಲಿ
20. ಕೆಳಗಡೆಯಲ್ಲಿ ಗರುಡವಾಹನ ರಕ್ಷಿಸಲಿ
21. ಇಂದ್ರಿಯಗಳನ್ನು ಹೃಷಿಕೇಶನು ರಕ್ಷಿಸಲಿ
22. ಚಿತ್ತವನ್ನು ನಾರಾಯಣನು ರಕ್ಷಿಸಲಿ
23. ಮನಸ್ಸನ್ನು ಯೋಗೀಶ್ವರನು ರಕ್ಷಿಸಲಿ.

ಹೀಗೆ ಮಕ್ಕಳಿಗೆ ರಕ್ಷಣೆ ಬೇಡಿದರೆ ಭಗವಂತನು ಮಕ್ಕಳನ್ನು ರಕ್ಷಿಸುವನು.

* * * * * *



# 6. ಮಂಗಳ ದ್ರವ್ಯಗಳು – ಸ್ತ್ರೀ







- ***ಮಂಗಳ ದ್ರವ್ಯಗಳು :***
- ***ಅರಿಷಿಣ :***

ಹರಿದ್ರಾ ಎಂಬ ಹೆಸರುಳ್ಳ ಅರಿಷಿಣವು ಸ್ತ್ರೀಯರಿಗೇಕೆ ಸರ್ವರಿಗೂ ಮುಖ್ಯವಾದದದ್ದು. ಹರಿದ್ರಾ ಎಂದರೆ ***"ಹರಿತಂ ರಾತಿ"*** ಎಂಬಂತೆ ಇದನ್ನು ಉಪಯೋಗಿಸಿದವರಿಗೆ ಅವರ ದೇಹವು ನಿತ್ಯ ಹಚ್ಚ ಹಸಿರಾಗುವಂತೆ ಅನುಗ್ರಹಿಸುವವಳೇ ಹರಿದ್ರಾ ಅಥವಾ ಪೂಜೆಗೆ ಹರಿದ್ರೆಯನ್ನು ಬಳಸಿದರೆ ಲಕ್ಷ್ಮೀದೇವಿಯು ಸಂತುಷ್ಟಳಾಗಿ ನಿತ್ಯ ಮುತ್ತೈದೆತನವನ್ನು ಕೊಡುವವಳು ಎಂದರ್ಥ.

ಅಥವಾ ಅರಿಷಿಣದಿಂದ ಪ್ರೀತಳಾದ ಲಕ್ಷ್ಮೀದೇವಿಯು ಹರಿಯ ಸಮೀಪಕ್ಕೆ ದ್ರಾ = (ದ್ರುಗತೌ) ಶೀಘ್ರವಾಗಿ ಸೇರುವಂತೆ ಮಾಡುವಳು ಎಂದು ಅರ್ಥವಿದೆ. ಅರಿ + ಷಿ + ಣ ಎಂದರೆ ಅರಿ ಎಂದರೆ ಶತ್ರುಗಳಾದ ಕಾಮಕ್ರೋಧಾದಿಗಳು, ಷಿ = ಎಂದರೆ ಷಿಞ ಬಂಧವೇ ಧಾತುವಿನಂತೆ ನಮ್ಮನ್ನು ಸಂಸಾರದಲ್ಲಿ ಬಂಧಿಸುವ ಇವುಗಳನ್ನು ನ = ನಿವೃತ್ತಿ ಮಾಡಿ, ಣ = ನಿರ್ವೃತಿ, ಸುಖವನ್ನು ಕೊಡುವಂತಾಹದ್ದು. ಸ್ತ್ರೀಯರಿಗಂತೂ ಅಲಂಕಾರ ಪ್ರಾಯವು ***"ಸ್ತ್ರೀಣಾಂ ಭೂಷಣಂ ಮತಾ"*** ಉಷ್ಣಗುಣವುಳ್ಳ ಅರಿಷಿಣವು ಶರೀರದ ಬಣ್ಣವನ್ನು ಸುಂದರಗೊಳಿಸುವುದಲ್ಲದೆ, ರಕ್ತಗತ

ದೋಷ ಕುಷ್ಠ, ಪ್ರಮೋಹ, ಬೊಂಗು, ಚರ್ಮ ರೋಗಗಳನ್ನೂ, ಪಾಂಡು, ಕಾಮಾಲೆ, ವಿಷ ವಿಕಾರಗಳನ್ನೂ ಪರಿಹರಿಸುವ ಶಕ್ತಿಯನ್ನು ಹೊಂದಿದೆ.

ಶರೀರದ ಹೊರಗೆ ಹಾಗೂ ಒಳಗೆ ಎಲ್ಲಾ ರೀತಿಯಿಂದಲೂ ಉಪಯೋಗಿಸತಕ್ಕದ್ದು. ಇಂತಹ ಅಮೂಲ್ಯ ಗುಣಗಳ ನಿಧಿಯಾದ ಹರಿದ್ರೆಯನ್ನು ಭಾರತೀಯರು ಪರಮಂಗಳ ವಸ್ತುವನ್ನಾಗಿ ಪರಿಗಣಿಸಿದ್ದಾರೆ. ಯಾವುದೇ ಶುಭ ಕಾರ್ಯದಲ್ಲಿಯೂ ಇದರ ಅವಶ್ಯಕತೆ ಇದ್ದೇ ಇದೆ. ವಿವಾಹಾದಿಯಲ್ಲಿ ಅಂತ್ಯದವರೆಗೂ ಅರಿಷಿಣದ ಪಾತ್ರ ದೊಡ್ಡದು. ಸುಮಂಗಲಿಯರಿಗೆ ಸೌಮಾಂಗಲ್ಯ ಪ್ರದರ್ಶನವನ್ನು ಮಾಡತಕ್ಕದ್ದು. ಅರಿಷಿಣವು ಕೇವಲ ಮಂಗಳದ್ರವ್ಯವೇ ಆಗದೆ ರೋಗನಿವಾರಕ ಗುಣಗಳನ್ನು ಪಡೆದಿದ್ದು ಪಾಕಶಾಸ್ತ್ರದಲ್ಲೂ ಇದರ ಉಪಯೋಗ ಅಧಿಕವಾಗಿದೆ. ಮಧುಮೇಹವನ್ನು ಗುಣಪಡಿಸುವುದರಲ್ಲಿ ಹೆಸರುವಾಸಿಯಾಗಿದೆ. ಈ ಕಾರಣದಿಂದಲೇ **"ಮೇಹಘ್ನೀ"** (ಮೇಹಂ ಹಂತೀತಿ).

ಪ್ರಕೃತ ಕೃತ್ರಿಮವಾದ ಹರಿದ್ರೆಯನ್ನು ಮಾರುವರು. ಅಂತಹ ಹರಿದ್ರೆಯಲ್ಲಿ ನಿರ್ದಿಷ್ಟ ಗುಣಗಳು ಪ್ರಕಟವಾಗುವುದಿಲ್ಲ. ಸ್ತ್ರೀಯರು ತಾವೇ ಅರಿಷಿಣದ ಕೊಂಬನ್ನು ತಂದು ಪುಡಿ ಮಾಡಿ ದೇವರಿಗೆ ಅರ್ಪಿಸಿ ತಾವೂ ಧರಿಸಬೇಕು.

ಸ್ತ್ರೀಯರು ಎಣ್ಣೆಯಲ್ಲಿ ಅರಿಷಿಣವನ್ನು ಸೇರಿಸಿ ಮೈಗೆ ಹಚ್ಚಿಕೊಳ್ಳಬೇಕು. ಇದರಿಂದ ಎಂತಹ ಚರ್ಮರೋಗವೂ ಪರಿಹೃತವಾಗುತ್ತದೆ.

ಅರಿಷಿಣವನ್ನು ತಂದು ಕುಟ್ಟಿ ಪುಡಿ ಮಾಡಿಕೊಂಡು ಸ್ವಲ್ಪ ತುಪ್ಪ ಸೇರಿಸಿ, ಪಚ್ಚಕರ್ಪೂರವನ್ನು ಸೇರಿಸಿ ಅದನ್ನು ನಾವು ಹಚ್ಚಿಕೊಳ್ಳುವ ಮೊದಲು ಸ್ತ್ರೀಯು ಲಕ್ಷ್ಮೀದೇವಿಗೆ ಶ್ರೀಸೂಕ್ತ, ಅಂಭ್ರಣೀ ಸೂಕ್ತ, ಶ್ರೀಶ್ರೀಶಗುಣದರ್ಪಣ ಇವುಗಳನ್ನು ಪತಿಯೋ ಅಥವಾ ಬ್ರಾಹ್ಮಣನೋ ಹೇಳುತ್ತಿರುವಾಗ ಅರ್ಚನೆ ಮಾಡಿ ಅದನ್ನು ಮೊದಲು ಎರಡು ಭಾಗ ಮಾಡಿ ಮೊದಲು ತನ್ನ ಪತಿಯಲ್ಲಿರುವ ಭಗವಂತನಿಂದ ಹಚ್ಚಿಸಿಕೊಂಡು ಮುತ್ತೈದೆಗೆ ಕೊಡಬೇಕು. ಇನ್ನೊಂದು ಭಾಗವನ್ನು ತಾನು ತುಲಸೀ ಪೂಜೆ, ದ್ವಾರದೇವತಾ ಪೂಜೆ ಇವುಗಳಿಗಾಗಿಯೇ ಮೀಸಲಾಗಿರಿಸಿರಬೇಕು. ಮುತ್ತೈದೆಗೆ ಅರಿಷಿಣ-ಕುಂಕುಮ ಕೊಡುವಾಗ ತಾನು ಮೊದಲು ಹಚ್ಚಿಕೊಂಡ ನಂತರವೇ ಕೊಡಬೇಕು. ಎರಡು ತಾಳಿಗಳಲ್ಲಿ ಒಂದರಲ್ಲಿ ಅರಿಷಿಣವನ್ನು ಮತ್ತೊಂದರಲ್ಲಿ ಕುಂಕುಮವನ್ನು ತುಂಬಿಸಿರಬೇಕು. ಮೂರನೇ ತಾಳಿಯ ಸಂಪ್ರದಾಯವಿದ್ದಾಗ

ಅದರಲ್ಲಿ ಅರಿಷಿಣ–ಕುಂಕುಮ ಎರಡನ್ನೂ ತುಂಬಿಸಬೇಕು. ತಾಳಿಯನ್ನು ಬೇರೆ ಯಾವ ಪುರುಷರಿಗೂ ತೋರಿಸಬಾರದು. ತೋರಿಸಿದರೆ ಗಂಡನ ಆಯುಷ್ಯವು ಹ್ರಾಸವಾಗುತ್ತದೆ. ಮೊದಲು ಮಂಗಲ ಸೂತ್ರಕ್ಕೆ ಹಚ್ಚಿಕೊಂಡು ನಂತರ ಎರಡು ಕಪೋಲ, ಎಡ ಹಾಗೂ ಬಲಗಳ ಮೊಳಕೈಗಳು, ಮೊಳಕಾಲುಗಳಿಗೂ ಹಚ್ಚಿಕೊಳ್ಳಬೇಕು. ಪಾದದಿಂದಾರಂಭಿಸಿ ಮಂಡಿ–ಯವರೆಗೂ ಹಚ್ಚಿಕೊಳ್ಳಬೇಕು. ಇದಲ್ಲದೆ ಎದೆಯ ಮಧ್ಯಭಾಗಗಳಿಗೂ ಹಚ್ಚಿಕೊಳ್ಳಬೇಕು. ಸ್ತ್ರೀಗೆ ವಕ್ಷಸ್ಥಳದ ಮಧ್ಯದಲ್ಲಿ ಕೂದಲು ಅಂಕುರಿಸುವುದು ಅತ್ಯಂತ ಅನಿಷ್ಟಸೂಚಕವು. ಅಲ್ಲಿ ಕೂದಲಿರುವ ಸ್ತ್ರೀಯನ್ನು ವಿವಾಹ–ವಾಗಬಾರದೆಂದು ಶಾಸ್ತ್ರದಲ್ಲಿ ನಿಷೇಧಿಸಿದ್ದಾರೆ. ಅಲೋಮಕಾಂ ಎಂದು.

**ಅನನ್ಯ ಪೂರ್ವಿಕಾಂ ಕಾಂತಾಂ ಅಸಪಿಂಡಾಂ ಅಲೋಮಕಾಂ ।**
**ಅರೋಗಿಣಿಂ ಭ್ರಾತೃಮತೀಂ ಅಸಮನಾರ್ಷಗೋತ್ರಜಾಂ ॥**

ಅರಿಷಿಣದಲ್ಲಿ ಶ್ರೀದೇವಿಯ ಸನ್ನಿಧಾನವಿದ್ದು ತನ್ನ ಪತಿಯಂತರ್ಗತನಾದ ನಾರಾಯಣನನ್ನು ಸ್ಮರಿಸುತ್ತಾ ಪೂರ್ವಾಭಿಮುಖವಾಗಿ ಹಚ್ಚಿಕೊಳ್ಳಬೇಕು.

ಸ್ತ್ರೀಯು ತಯಾರಿಸುವ ಅಡಿಗೆಯಲ್ಲಿ ಉದಾ : ಬೇಳೆಯಲ್ಲಿ, ತರಕಾರಿಪಲ್ಯ ಮಾಡುವ ಕಾಲದಲ್ಲಿ ನಿಯಮೇನ ಅರಿಷಿಣವನ್ನು ಹಾಕಬೇಕು. ಇದರಿಂದ ಲಕ್ಷ್ಮಿಯ ಸನ್ನಿಧಾನವುಂಟಾಗಿ ಅವುಗಳು ಭಗವಂತನಿಗೆ ನಿವೇದಿಸಲು ಯೋಗ್ಯವಾಗುತ್ತದೆ. ಭಾಗವತದಲ್ಲಿ ಕಾತ್ಯಾಯನೀ ದೇವಿಯ ಪೂಜೆಯಿಂದ ಲಕ್ಷ್ಮೀದೇವಿಯ ಸನ್ನಿಧಾನ ಪಾತ್ರರಾದ ಗೋಪಿಕೆಯನ್ನು ಶ್ರೀಕೃಷ್ಣನು ಸ್ವೀಕರಿಸಿದಂತೆ ನಮ್ಮ ನೈವೇದ್ಯವನ್ನು ಸ್ವೀಕರಿಸುವನು. ಲಕ್ಷ್ಮಿಯು ಮುಟ್ಟದ ವಸ್ತುವನ್ನು ಭಗವಂತನು ಸ್ವೀಕರಿಸಲಾರ.

- ***ಕುಂಕುಮ :***

ಕುಂ ಎಂದರೆ ಪಾಪ, ಅಥವಾ ಕುರೂಪವನ್ನು, **ಕುಕತೇ ಸಮೀಕರೋತಿ** = ಸ್ವೀಕರಿಸುತ್ತದೆ (ಕುಕ = ಆದಾನೆ) ಎಂಬರ್ಥದಲ್ಲಿ ಕುಂಕುಮ ಎಂದಾಗಿದೆ. ಕುಂಕುಮ ಧಾರಣೆಯು ನಾವು ಮಾಡಿರುವ ಪಾಪವನ್ನು ಸ್ವೀಕರಿಸಿ ಪಾಪದ ಫಲವಾಗಿ ಬರಬೇಕಾಗಿದ್ದ ಕುರೂಪವನ್ನು ಪರಿಹರಿಸುವುದು ಎಂದರ್ಥ.

ಕುಂಕುಮದಲ್ಲಿ ದುರ್ಗಾ ನರಸಿಂಹ ದೇವರ ಸಾನ್ನಿಧ್ಯವಿದೆ. ಕೆಲವು ಕಡೆ ಭೂ ವರಾಹನ ಸಾನ್ನಿಧ್ಯವಿದೆ ಎಂದು ಹೇಳಲಾಗಿದೆ. ಕುಂಕುಮದ ಬಣ್ಣವು

ದೋಷ ಕುಷ್ಠ, ಪ್ರಮೋಹ, ಬೊಂಗು, ಚರ್ಮ ರೋಗಗಳನ್ನೂ, ಪಾಂಡು, ಕಾಮಾಲೆ, ವಿಷ ವಿಕಾರಗಳನ್ನೂ ಪರಿಹರಿಸುವ ಶಕ್ತಿಯನ್ನು ಹೊಂದಿದೆ.

ಶರೀರದ ಹೊರಗೆ ಹಾಗೂ ಒಳಗೆ ಎಲ್ಲಾ ರೀತಿಯಿಂದಲೂ ಉಪಯೋಗಿಸತಕ್ಕದ್ದು. ಇಂತಹ ಅಮೂಲ್ಯ ಗುಣಗಳ ನಿಧಿಯಾದ ಹರಿದ್ರೆಯನ್ನು ಭಾರತೀಯರು ಪರಮಂಗಳ ವಸ್ತುವನ್ನಾಗಿ ಪರಿಗಣಿಸಿದ್ದಾರೆ. ಯಾವುದೇ ಶುಭ ಕಾರ್ಯದಲ್ಲಿಯೂ ಇದರ ಅವಶ್ಯಕತೆ ಇದ್ದೇ ಇದೆ. ವಿವಾಹಾದಿಯಲ್ಲಿ ಅಂತ್ಯದವರೆಗೂ ಅರಿಷಿಣದ ಪಾತ್ರ ದೊಡ್ಡದು. ಸುಮಂಗಲಿಯರಿಗೆ ಸೌಮಾಂಗಲ್ಯ ಪ್ರದರ್ಶನವನ್ನು ಮಾಡತಕ್ಕದ್ದು. ಅರಿಷಿಣವು ಕೇವಲ ಮಂಗಳದ್ರವ್ಯವೇ ಆಗದೆ ರೋಗನಿವಾರಕ ಗುಣಗಳನ್ನು ಪಡೆದಿದ್ದು ಪಾಕಶಾಸ್ತ್ರದಲ್ಲೂ ಇದರ ಉಪಯೋಗ ಅಧಿಕವಾಗಿದೆ. ಮಧುಮೇಹವನ್ನು ಗುಣಪಡಿಸುವುದರಲ್ಲಿ ಹೆಸರುವಾಸಿಯಾಗಿದೆ. ಈ ಕಾರಣದಿಂದಲೇ **"ಮೇಹಘ್ನೀ"** (ಮೇಹಂ ಹಂತೀತಿ).

ಪ್ರಕೃತ ಕೃತ್ರಿಮವಾದ ಹರಿದ್ರೆಯನ್ನು ಮಾರುವರು. ಅಂತಹ ಹರಿದ್ರೆಯಲ್ಲಿ ನಿರ್ದಿಷ್ಟ ಗುಣಗಳು ಪ್ರಕಟವಾಗುವುದಿಲ್ಲ. ಸ್ತ್ರೀಯರು ತಾವೇ ಅರಿಷಿಣದ ಕೊಂಬನ್ನು ತಂದು ಪುಡಿ ಮಾಡಿ ದೇವರಿಗೆ ಅರ್ಪಿಸಿ ತಾವೂ ಧರಿಸಬೇಕು.

ಸ್ತ್ರೀಯರು ಎಣ್ಣೆಯಲ್ಲಿ ಅರಿಷಿಣವನ್ನು ಸೇರಿಸಿ ಮೈಗೆ ಹಚ್ಚಿಕೊಳ್ಳಬೇಕು. ಇದರಿಂದ ಎಂತಹ ಚರ್ಮರೋಗವೂ ಪರಿಹೃತವಾಗುತ್ತದೆ.

ಅರಿಷಿಣವನ್ನು ತಂದು ಕುಟ್ಟಿ ಪುಡಿ ಮಾಡಿಕೊಂಡು ಸ್ವಲ್ಪ ತುಪ್ಪ ಸೇರಿಸಿ, ಪಚ್ಚಕರ್ಪೂರವನ್ನು ಸೇರಿಸಿ ಅದನ್ನು ನಾವು ಹಚ್ಚಿಕೊಳ್ಳುವ ಮೊದಲು ಸ್ತ್ರೀಯು ಲಕ್ಷ್ಮೀದೇವಿಗೆ ಶ್ರೀಸೂಕ್ತ, ಅಂಭ್ರಣೀ ಸೂಕ್ತ, ಶ್ರೀಶ್ರೀಶಗುಣದರ್ಪಣ ಇವುಗಳನ್ನು ಪತಿಯೋ ಅಥವಾ ಬ್ರಾಹ್ಮಣನೋ ಹೇಳುತ್ತಿರುವಾಗ ಅರ್ಚನೆ ಮಾಡಿ ಅದನ್ನು ಮೊದಲು ಎರಡು ಭಾಗ ಮಾಡಿ ಮೊದಲು ತನ್ನ ಪತಿಯಲ್ಲಿರುವ ಭಗವಂತನಿಂದ ಹಚ್ಚಿಸಿಕೊಂಡು ಮುತ್ತೈದೆಗೆ ಕೊಡಬೇಕು. ಇನ್ನೊಂದು ಭಾಗವನ್ನು ತಾನು ತುಲಸೀ ಪೂಜೆ, ದ್ವಾರದೇವತಾ ಪೂಜೆ ಇವುಗಳಿಗಾಗಿಯೇ ಮೀಸಲಾಗಿರಿಸಿರಬೇಕು. ಮುತ್ತೈದೆಗೆ ಅರಿಷಿಣ–ಕುಂಕುಮ ಕೊಡುವಾಗ ತಾನು ಮೊದಲು ಹಚ್ಚಿಕೊಂಡ ನಂತರವೇ ಕೊಡಬೇಕು. ಎರಡು ತಾಳಿಗಳಲ್ಲಿ ಒಂದರಲ್ಲಿ ಅರಿಷಿಣವನ್ನು ಮತ್ತೊಂದರಲ್ಲಿ ಕುಂಕುಮವನ್ನು ತುಂಬಿಸಿರಬೇಕು. ಮೂರನೇ ತಾಳಿಯ ಸಂಪ್ರದಾಯವಿದ್ದಾಗ

ಅದರಲ್ಲಿ ಅರಿಷಿಣ–ಕುಂಕುಮ ಎರಡನ್ನೂ ತುಂಬಿಸಬೇಕು. ತಾಳಿಯನ್ನು ಬೇರೆ ಯಾವ ಪುರುಷರಿಗೂ ತೋರಿಸಬಾರದು. ತೋರಿಸಿದರೆ ಗಂಡನ ಆಯುಷ್ಯವು ಹ್ರಾಸವಾಗುತ್ತದೆ. ಮೊದಲು ಮಂಗಲ ಸೂತ್ರಕ್ಕೆ ಹಚ್ಚಿಕೊಂಡು ನಂತರ ಎರಡು ಕಪೋಲ, ಎಡ ಹಾಗೂ ಬಲಗಳ ಮೊಳಕೈಗಳು, ಮೊಳಕಾಲುಗಳಿಗೂ ಹಚ್ಚಿಕೊಳ್ಳಬೇಕು. ಪಾದದಿಂದಾರಂಭಿಸಿ ಮಂಡಿ–ಯವರೆಗೂ ಹಚ್ಚಿಕೊಳ್ಳಬೇಕು. ಇದಲ್ಲದೆ ಎದೆಯ ಮಧ್ಯಭಾಗಗಳಿಗೂ ಹಚ್ಚಿಕೊಳ್ಳಬೇಕು. ಸ್ತ್ರೀಗೆ ವಕ್ಷಸ್ಥಳದ ಮಧ್ಯದಲ್ಲಿ ಕೂದಲು ಅಂಕುರಿಸುವುದು ಅತ್ಯಂತ ಅನಿಷ್ಟಸೂಚಕವು. ಅಲ್ಲಿ ಕೂದಲಿರುವ ಸ್ತ್ರೀಯನ್ನು ವಿವಾಹ–ವಾಗಬಾರದೆಂದು ಶಾಸ್ತ್ರದಲ್ಲಿ ನಿಷೇಧಿಸಿದ್ದಾರೆ. ಅಲೋಮಕಾಂ ಎಂದು.

**ಅನನ್ಯ ಪೂರ್ವಿಕಾಂ ಕಾಂತಾಂ ಅಸಪಿಂಡಾಂ ಅಲೋಮಕಾಂ ।**
**ಅರೋಗಿಣಿಂ ಭ್ರಾತೃಮತೀಂ ಅಸಮನಾರ್ಷಗೋತ್ರಜಾಂ ॥**

ಅರಿಷಿಣದಲ್ಲಿ ಶ್ರೀದೇವಿಯ ಸನ್ನಿಧಾನವಿದ್ದು ತನ್ನ ಪತಿಯಂತರ್ಗತನಾದ ನಾರಾಯಣನನ್ನು ಸ್ಮರಿಸುತ್ತಾ ಪೂರ್ವಾಭಿಮುಖವಾಗಿ ಹಚ್ಚಿಕೊಳ್ಳಬೇಕು.

ಸ್ತ್ರೀಯು ತಯಾರಿಸುವ ಅಡಿಗೆಯಲ್ಲಿ ಉದಾ : ಬೇಳೆಯಲ್ಲಿ, ತರಕಾರಿಪಲ್ಯ ಮಾಡುವ ಕಾಲದಲ್ಲಿ ನಿಯಮೇನ ಅರಿಷಿಣವನ್ನು ಹಾಕಬೇಕು. ಇದರಿಂದ ಲಕ್ಷ್ಮಿಯ ಸನ್ನಿಧಾನವುಂಟಾಗಿ ಅವುಗಳು ಭಗವಂತನಿಗೆ ನಿವೇದಿಸಲು ಯೋಗ್ಯವಾಗುತ್ತದೆ. ಭಾಗವತದಲ್ಲಿ ಕಾತ್ಯಾಯನೀ ದೇವಿಯ ಪೂಜೆಯಿಂದ ಲಕ್ಷ್ಮೀದೇವಿಯ ಸನ್ನಿಧಾನ ಪಾತ್ರರಾದ ಗೋಪಿಕೆಯನ್ನು ಶ್ರೀಕೃಷ್ಣನು ಸ್ವೀಕರಿಸಿದಂತೆ ನಮ್ಮ ನೈವೇದ್ಯವನ್ನು ಸ್ವೀಕರಿಸುವನು. ಲಕ್ಷ್ಮಿಯು ಮುಟ್ಟದ ವಸ್ತುವನ್ನು ಭಗವಂತನು ಸ್ವೀಕರಿಸಲಾರ.

- ***ಕುಂಕುಮ :***

ಕುಂ ಎಂದರೆ ಪಾಪ, ಅಥವಾ ಕುರೂಪವನ್ನು, **ಕುಕತೇ ಸಮೀಕರೋತಿ** = ಸ್ವೀಕರಿಸುತ್ತದೆ (ಕುಕ = ಆದಾನೆ) ಎಂಬರ್ಥದಲ್ಲಿ ಕುಂಕುಮ ಎಂದಾಗಿದೆ. ಕುಂಕುಮ ಧಾರಣೆಯು ನಾವು ಮಾಡಿರುವ ಪಾಪವನ್ನು ಸ್ವೀಕರಿಸಿ ಪಾಪದ ಫಲವಾಗಿ ಬರಬೇಕಾಗಿದ್ದ ಕುರೂಪವನ್ನು ಪರಿಹರಿಸುವುದು ಎಂದರ್ಥ.

ಕುಂಕುಮದಲ್ಲಿ ದುರ್ಗಾ ನರಸಿಂಹ ದೇವರ ಸಾನ್ನಿಧ್ಯವಿದೆ. ಕೆಲವು ಕಡೆ ಭೂ ವರಾಹನ ಸಾನ್ನಿಧ್ಯವಿದೆ ಎಂದು ಹೇಳಲಾಗಿದೆ. ಕುಂಕುಮದ ಬಣ್ಣವು

ಕೆಂಪಾಗಿದ್ದು, ಕೆಂಪಾಗಿರುವ ಕಮಲಕ್ಕೆ ಭೂಮಿಯು ಅಭಿಮಾನಿಯಾದಂತೆ ಕೇಸರಿಗೂ ಅಭಿಮಾನಿಯು. ಭೂ ನಿಯಾಮಕನು ವರಾಹನಾಗಿರುವುದು ಯುಕ್ತವೇ ಆಗಿದೆ. ಆದ್ದರಿಂದಲೇ **ಕುಂ** = ಭೂಮಿಂ, ***ಕೋಕತೇ ಸ್ವೀಕರೋತೀತಿ*** ಎಂಬಂತೆ ಭೂ ವರಾಹನೂ ಕುಂಕುಮ ಶಬ್ದವಾಚ್ಯನಾಗಿರುವನು.

ಕುಂಕುಮಕ್ಕೆ ಕಾಶ್ಮೀರಜ, ಅಗ್ನಿಶಿಖ, ಬಾಹ್ನೀಕ, ಪೀತನ, ಲೋಹಿತಚಂದನ ಮೊದಲಾದ ಹೆಸರುಗಳಿವೆ.

ಕಾಶ್ಮೀರ ದೇಶದ ಕುಂಕುಮಾದ್ರಿಯಲ್ಲಿ ಸಿಗುವ ಕಮಲದ ವಾಸನೆಯಿರುವ ಕೇಸರಿಯು ಶ್ರೇಷ್ಠವಾದದ್ದು ಕುಂಕುಮ ಕೇಸರಿಯ ಎಸಳುಗಳಿಂದಲೇ ಕುಂಕುಮ ತಯಾರಿಸುವರು. ಕುಂಕುಮ ಪುಷ್ಪದ ಪರಾಗಗಳೇ ಕೇಸರಿಯು.

ಸ್ತ್ರೀಯರಿಗೆ ಇರಲೇಬೇಕಾದ ಪಂಚಮಂಗಳ ವಸ್ತುಗಳಲ್ಲಿ ಕುಂಕುಮವೂ ಒಂದಾಗಿದೆ.

**ಕುಂಕುಮಂ ಕಜ್ಜಲಂ ಕಾಚಂ ಕಂಕಣಂ ಕಂಠಭೂಷಣಂ ।**
**ಕಕಾರಪಂಚಭಿರ್ಹೀನಾ ನ ಸೌಭಾಗ್ಯ ಮವಾಪ್ನುಯಾತ್ ॥**

ಎಂಬಂತೆ ಕುಂಕುಮವು ಮುತ್ತೈದೆಯರ ಸೌಭಾಗ್ಯ ವರ್ಧನೀಯವಾಗಿದೆ.

***ಕುಂಕುಮ ತಯಾರಿಸುವುದು –***

ಇತ್ತೀಚೆಗೆ ಶುದ್ಧವಾದ ಕುಂಕುಮಗಳನ್ನು ಅಂಗಡಿಗಳಲ್ಲಿ ಪಡೆಯಲಾರೆವು. ಕುಂಕುಮವನ್ನು ಬೆರಳಲ್ಲಿ ಉಜ್ಜಿ ನೋಡಿದಾಗ ಬೆರಳು ಹಳದಿ ಬಣ್ಣದ್ದಾದರೆ ಅದು ಉತ್ತಮ ಕುಂಕುಮ. ಶ್ರೀರಂಗ, ತಿರುಪತಿ ಸ್ಥಳಗಳಲ್ಲಿ ಲಭ್ಯವಾಗುತ್ತವೆ ಅಥವಾ ಮನೆಯಲ್ಲಿ ನಾವೇ ತಯಾರಿಸಬಹುದು. ಶುದ್ಧವಾದ ಅರಿಷಿಣ ಬೇರುಗಳನ್ನು ತಂದು, ಅರಿಷಿಣ ಹಾಗೂ ಸ್ವಲ್ಪ ಸುಣ್ಣವನ್ನು ಬೆರಸಿದ ನೀರನ್ನು ಕುದಿ ಬಂದಾಗ, ಅರಿಷಿಣ ಬೇರುಗಳನ್ನು ಹಾಕಿ ಕುದಿಸುವುದು. ನಂತರ ಅದನ್ನು ತೆಗೆದು ಬಿಸಿಲಲ್ಲಿ ಚೆನ್ನಾಗಿ ಒಣಗಿಸಬೇಕು. ನಂತರ ಪುಡಿ ಮಾಡಿ ಅದರಲ್ಲಿ ಸ್ವಲ್ಪ ಪಚ್ಚಕರ್ಪೂರ, ಕೇಸರೀ, ತುಪ್ಪಗಳನ್ನು ಸೇರಿಸಿ ಮಿಶ್ರ ಮಾಡಿದಾಗ ಶುದ್ಧವಾದ ಕುಂಕುಮವು ಲಭಿಸುತ್ತದೆ. ಅರಿಶಿಣಕ್ಕೆ ನಿಂಬೆಹಣ್ಣಿನ ರಸ ನಿಯಮಿತವಾಗಿ ಬೆರೆಸಿ ಒಣಗಿಸಿದಾಗ ಕುಂಕುಮ–ವಾಗುತ್ತದೆ. ಇದನ್ನು ದೇವರಿಗೆ ಅರ್ಪಿಸಿ ನಂತರ ಅರಿಷಿಣದಂತೆ ಎರಡು

ಭಾಗವನ್ನು ಮಾಡಿ, ಒಂದನ್ನು ತುಳಸೀ ಪೂಜೆ, ಗೌರೀಪೂಜೆಗಾಗಿ ತೆಗೆದಿಟ್ಟುಕೊಂಡು, ಇನ್ನೊಂದು ಭಾಗವನ್ನು ಮನೆಗೆ ಬರುವ ಮುತ್ತೈದೆಯರಿಗೆ ಕೊಡಲು ಇಟ್ಟಿರಬೇಕು. ಮುತ್ತೈದೆ ಸ್ತ್ರೀಯರಂತೆ ಕನ್ಯೆಯರೂ ಕೂಡ ಹಣೆಯಲ್ಲಿ ಉದ್ದವಾಗಿ ದೀಪಾಕಾರವಾಗಿ ಹಚ್ಚಬೇಕು.

***ಕುಂಕುಮಧಾರಣ ಮಂತ್ರ –***

**ಆಚಮನ – ಶುಭತಿಥೌ – ಮಮ ಪತ್ಯಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗಥ ಶ್ರೀಲಕ್ಷ್ಮೀನಾರಾಯಣಭಿನ್ನ ಶ್ರೀ ಭೂವರಾಹ ಪ್ರೇರಣಯಾ – ತತ್ಪ್ರೀತ್ಯರ್ಥಂ ಮಮ ಭರ್ತುರಾಯುಷ್ಯವೃದ್ಧ್ಯರ್ಥಂ ಊರ್ಧ್ವಪುಂಡ್ರಸಹಿತ ಕುಂಕುಮಧಾರಣಾಖ್ಯಂ ಕರ್ಮಕರಿಷ್ಯೇ ।**

**ಊರ್ಧ್ವಂಪುಂಡ್ರಂ ಲಲಾಟೇ ತು ಭರ್ತುರಾಯುಷ್ಯವರ್ಧನಂ ।**
**ಲಲಾಟೇ ಕುಂಕುಮಂ ಚೈವ ಸದಾ ಲಕ್ಷ್ಮೀ ನಿವಾಸಕಮ್ ॥**
**ರಮಾಮಪರ್ಣಾಂ ಸಾವಿತ್ರೀಂ ವೈದೇಹೀಂ ಜನಕಾತ್ಮಜಾಂ ।**
**ಸೌಭಾಗ್ಯಾಯ ನಮಸ್ಕೃತ್ಯ ಕುಂಕುಮಂ ಧಾರಯಾಮ್ಯಹಂ ॥**

***ಕುಂಕುಮ ಧಾರಣೆಯ ಕ್ರಮ –***

ಸ್ತ್ರೀಯರು ಗೋಪೀಚಂದನ ಧರಿಸದೆ ಕುಂಕುಮವನ್ನು ಧರಿಸಬಾರದು. ಸ್ತ್ರೀಯರು ಕುಂಕುಮವನ್ನು ಹುಬ್ಬಿನ ಮಧ್ಯ ಭಾಗಕ್ಕಿಂತ ಸ್ವಲ್ಪ ಮೇಲಿನಿಂದಾರಂಭಿಸಿ ದೀಪಾಕಾರವಾಗಿ ಉದ್ದವಾಗಿ ಬೈತಲೆಗೆ ತಗಲುವಂತೆ ಧರಿಸಬೇಕು. ಬೈತಲೆಯಲ್ಲಿ ಸಿಂಧೂರವನ್ನು ಧರಿಸಬೇಕು. ಸಿಂಧೂರದಲ್ಲಿಯೂ ಲಕ್ಷ್ಮೀಯ ಸನ್ನಿಧಾನವಿರುತ್ತದೆ. ಉದ್ದವಾಗಿ ಧರಿಸಿರುವ ಕುಂಕುಮವು ತಲೆಕೆಳಗಾದ ಮೇರುಪರ್ವತವೆಂದು ಈ ಮೇರು ಪರ್ವತದ ತುದಿಗೆ ಎಂದರೆ ಹಣೆಗೆ ಗಂಗೆಯು ಬಿದ್ದು ಸೀತಾ–ಅಲಕನಂದಾ – ಚಕ್ಷು–ಭದ್ರಾ ಎಂದು ನಾಲ್ಕು ಹೆಸರಿನಿಂದ ಸಮುದ್ರವನ್ನು ಸೇರುತ್ತವೆ. ಅಲಕನಂದೆಯರೂ ದಕ್ಷಿಣಕ್ಕೆ ಹರಿದು ಗಂಗೆ ಎನಿಸಿಕೊಳ್ಳುತ್ತದೆ ***(ಗಾಂ ಆಗತಾ ಗಂಗಾ)***. ಈ ಗಂಗೆಯು ಸ್ತ್ರೀಯರ ಬೈತಲೆಯಲ್ಲಿರುವಳು. ಮುತ್ತೈದೆಯರು ತಲೆಯಲ್ಲಿ ತ್ರಿವೇಣೀ ಸನ್ನಿಧಾನವಿದ್ದು ಆ ಬೈತಲೆಗೆ ಹಚ್ಚುವ ಕುಂಕುಮವು ಗಂಗೆಯ ದಂಡೆಗೆ ಹಚ್ಚುವ ಕುಂಕುಮವೆಂದು ಅನುಸಂಧಾನವೆನಿಸಿದರೆ ಮಾತ್ರ ಗಂಗಾ ಸನ್ನಿಧಾನ ಲಭಿಸುತ್ತದೆ. ಉದ್ದವಾಗಿ ಇಡದೆ ವೃತ್ತಕಾರವಾಗಿ ರಚಿಸಿದರೆ ಈ ಅನುಸಂಧಾನ ದುರ್ಲಭವಾಗಿ ಶಾಸ್ತ್ರೋಕ್ತ ಫಲವು ಲಭಿಸುವುದಿಲ್ಲ.

- ***ಕರೀಮಣೀ :***

ಕರೀಮಣಿಯನ್ನು ನೀಲರೋಹಿತವೆಂದು, ಕಾಚಮಣಿಯೆಂದು ಸಂಸ್ಕೃತದಲ್ಲಿ ಕರೆಯಲಾಗಿದೆ. ಇದರ ಹೆಸರೇ ಸೂಚಿಸುವಂತೆ ಕಪ್ಪು ಮಣಿಯಾದರೂ ಇದರಲ್ಲಿ ಶ್ರೀಲಕ್ಷ್ಮೀದೇವಿಯರ ವಿಶೇಷ ಸನ್ನಿಧಾನವಿರುವುದರಿಂದ ಇದನ್ನು ಧರಿಸಿದ ಸ್ತ್ರೀಯರ ಸೌಭಾಗ್ಯವು ವೃದ್ಧಿಯಾಗುವುದು. ಹಿಂದಿನ ಕಾಲದಲ್ಲಿ ನವರತ್ನಗಳಲ್ಲಿ ಒಂದಾದ ನೀಲಮಣಿಯಿಂದ ತಯಾರಿಸುತ್ತಿದ್ದರು. ಈಗ ಅದರ ಬೆಲೆ ಅಧಿಕವಾದ್ದರಿಂದ ಸಾಮಾನ್ಯ ಸ್ತ್ರೀಯರು ಧರಿಸಲು ಅಶಕ್ಯವಾಗಿದ್ದು ಅದೇ ರೀತಿ ಲಕ್ಷ್ಮೀ ಸನ್ನಿಧಾನವುಳ್ಳ ಸಾಮಾನ್ಯ ಕರೀಮಣಿಯನ್ನೂ ಧರಿಸಬಹುದಾಗಿದೆ.

ಇದರ ಜೊತೆಗೆ ಹವಳ, ಮುತ್ತು, ಬಂಗಾರದ ಗುಂಡುಕೊವಿ ಇವುಗಳನ್ನು ಸೇರಿಸಿಯೂ ಧರಿಸಬಹುದು.

ಹೊಸದಾಗಿ ಧರಿಸುವಾಗ ಲಕ್ಷ್ಮೀನಾರಾಯಣರಿಗೆ, ತುಲಸಿ ಮಾತೆಗೆ, ರುದ್ರ ರುದ್ರಾಣಿಯರಿಗೆ ಅರ್ಪಿಸಿ ಪತಿಯ ಕೈಯಿಂದ ಕಟ್ಟಿಸಿಕೊಳ್ಳಬೇಕು.

ಆದರೆ ಇತ್ತೀಚಿನ ದಿವಸಗಳಲ್ಲಿ ಧರಿಸುವ ಪ್ಲಾಸ್ಟಿಕ್‌ನಿಂದ ತಯಾರಾದ ಅಥವಾ ಫಳಫಳ ಹೊಳೆಯುವ ಮಣಿಗಳಲ್ಲಿ ಅಲಕ್ಷ್ಮೀಯ ಸನ್ನಿಧಾನವಿರುತ್ತದೆ. ಇದನ್ನು ಧರಿಸಿದ ಮಹಿಳೆಯರ ಮನೆಯಲ್ಲಿ ಕಲಹವುಂಟಾಗುತ್ತದೆ.

- ***ಬೆಂಡೋಲೆ :***

ಸಂಸ್ಕೃತದಲ್ಲಿ ***"ತಾಟಂಕ"*** ಎಂದು ಕರೆಯಲಾಗಿದೆ. ಕರಿಮಣಿಯಂತೆ ಬೆಂಡೋಲೆಯೂ ಲಕ್ಷ್ಮೀದೇವಿಯ ಸನ್ನಿಧಾನವುಳ್ಳದ್ದಾಗಿದ್ದು ಮುತ್ತಿನಂತಹ ಐದು ವಸ್ತುಗಳಲ್ಲಿ ಇದೂ ಒಂದಾಗಿದೆ. ಸಾಮಾನ್ಯವಾಗಿ ಅಷ್ಟದಳ ಪದ್ಮದಂತೆ ಎಂಟು ದಳವಿರಬೇಕು.

ಹೃದಯಕಮಲದಲ್ಲಿರುವ ಭಗವಂತನ ಕಥೆಯು ಸರ್ವದಾ ಬೀಳುವಂತಿರಲಿ ಎಂಬ ಅನುಸಂಧಾನದಿಂದ ಧರಿಸಬೇಕು.

ಬೆಂಡೋಲೆಯಿಲ್ಲದ ಕಿವಿಗಳನ್ನು ನೋಡಿದರೆ ಆ ಪಾಪ ಪರಿಹಾರಕ್ಕಾಗಿ ಸೂರ್ಯನನ್ನು ನೋಡಬೇಕು.

ಅಭ್ಯಂಜನ ಮಾಡುವಾಗಲೂ ಬೆಂಡೋಲೆಯನ್ನು ಬಿಚ್ಚಿ ನಂತರ ಧರಿಸುವುದು

ಪದ್ಧತಿಯಲ್ಲಿದೆ. ಆ ಸಮಯದಲ್ಲೂ ಲಕ್ಷ್ಮೀ ಸನ್ನಿಧಾನವುಳ್ಳ ತುಳಸಿ ಕಾಷ್ಠದ ಕಡ್ಡಿಯನ್ನು ಧರಿಸಬೇಕೇ ವಿನಹ ಖಾಲಿ ಇರಬಾರದು.

ಯಾರ ಕಿವಿಗಳ ರಂಧ್ರಗಳು ಖಾಲಿ ಇರುತ್ತವೆಯೋ ಆ ರಂಧ್ರಗಳಿಂದ ಸೂರ್ಯಕಿರಣ ಹೊರ ಹೊಮ್ಮಿದರೆ ಅವರ ಪುಣ್ಯವೂ ಹರಿದು ಹೋಗುತ್ತದೆ. ಆದ್ದರಿಂದ ಪುರುಷರಾಗಲಿ, ಸ್ತ್ರೀಯರಾಗಲಿ ಕಿವಿಯ ರಂಧ್ರವು ಖಾಲಿಯಾಗದಂತೆ ನೋಡಿಕೊಳ್ಳಬಹುದು.

ಸ್ತ್ರೀಯರು ಅಭ್ಯಂಜನವನ್ನು ಮಾಡುವಾಗ ಕಿವಿಯೋಲೆಯನ್ನು ತೆಗೆದು ತೊಳೆದು ಪುನಃ ಸ್ನಾನಾನಂತರ ಧರಿಸಿಕೊಳ್ಳುವರು.

ಈ ಅಭ್ಯಂಜನ ಸಮಯದಲ್ಲಿ ಓಲೆಯನ್ನು ತೆಗೆದು ಕಿವಿಗೆ ಎಣ್ಣೆಯನ್ನು ಲೇಪಿಸುವುದರಿಂದ ಲಕ್ಷ್ಮೀದೇವಿಯು ಎಣ್ಣೆಯಲ್ಲಿರುವುದರಿಂದ ***(ತೈಲೇ ಲಕ್ಷ್ಮೀಃ)*** ಓಲೆಯನ್ನು ತೆಗೆದರೂ ಮತ್ತೊಂದು ರೂಪದಿಂದ ಲಕ್ಷ್ಮೀಯು ಇರುವುದರಿಂದ ಅಲಕ್ಷ್ಮೀಯು ಅಲ್ಲಿಗೆ ಬರಲು ಸಾಧ್ಯವಿರುವುದಿಲ್ಲ. ಈ ನಿಯಮವು ನಿಷಿದ್ಧವಲ್ಲದ ದಿವಸಗಳಲ್ಲಿ ಸ್ತ್ರೀಯರು ಅಭ್ಯಂಜನ ಮಾಡುವಾಗ ಮಾತ್ರ ಹೊರತು ಉಳಿದ ನಿಷಿದ್ಧ ದಿವಸಗಳಲ್ಲಿ ಲಕ್ಷ್ಮೀಯು ಎಣ್ಣೆಯಲ್ಲಿರುವುದಿಲ್ಲ, ಆಗ ಅಲಕ್ಷ್ಮೀಯಿರುತ್ತಾಳೆ.

ಈ ಬಿಚ್ಚೋಲೆಯಿರುವಷ್ಟು ಕಾಲ ಲಕ್ಷ್ಮೀದೇವಿಯ ಸನ್ನಿಧಾನವಿರುವುದರಿಂದ ಅಲಕ್ಷ್ಮೀಯು ಬರಲು ಲಕ್ಷ್ಮೀಯು ಹೊಡೆದೋಡಿಸುವಳು. ಈ ಕಾರಣದಿಂದಲೇ ತಾಟಂಕ, ತಾಡಂಕ, ತಾಡಪತ್ರ ಇತ್ಯಾದಿ ಹೆಸರು ಪ್ರಸಿದ್ಧವಾಗಿದೆ. ತಾಡಂಕ ಎಂದರೆ ***ತಾಟ್ಯತೆ ಇತಿ ತಾಟಂಕಃ*** ["ತಟ ತಡ ಆಘಾತೇ" ಘಞ ಪ್ರತ್ಯಯ] ಬಡತನದಿಂದಾಗಿ ಬೆಲೆಬಾಳುವ ಓಲೆಯನ್ನು ಧರಿಸಲು ಅಶಕ್ಯವಾದಾಗ ಸ್ಥಾನದಲ್ಲಿ ತಾಡಪತ್ರ ಧರಿಸಬಹುದು. ಇದೂ ಕೂಡ ಅಲಕ್ಷ್ಮೀಯನ್ನು ಓಡಿಸುತ್ತದೆ. ಈ ಕಾರಣದಿಂದಲೇ ತಾಳೆಮರಕ್ಕೆ ***"ತಾಡೀ"*** ಎಂಬ ಹೆಸರಿದೆ.

ಹೀಗೆ ಒಂದು ಸಾರಿ ಕಿವಿಯಿಂದ ತೆಗೆದಾಗ ಪುನಃ ನೀರಿನಿಂದ ತೊಳೆದು ಅರಿಷಿಣ–ಕುಂಕುಮಗಳಿಂದ ಅಲಂಕರಿಸಿ ಪತಿಯ ಕೈಗೆ ಕೊಟ್ಟು ಪುನಃ ಸ್ವೀಕರಿಸಿದ ನಂತರ ಧರಿಸಬೇಕು.

### *ಓಲೆ ಧರಿಸುವಾಗ ಹೇಳಬೇಕಾದ ಶ್ಲೋಕ –*

**ತಾಟಂಕೇ ತ್ವಂಮಹಾಭಾಗೇ ಸೌಭಾಗ್ಯವೃದ್ಧಿಕಾರಿಣೀ ।**
**ಅತಸ್ತ್ವಾಂ ಧಾರಯಿಷ್ಯಾಮಿ ಸೌಭಾಗ್ಯಂ ದೇಹಿ ಮೇ ಶುಭೇ ॥**

- ***ಬಳೆಗಳು :***

ಬಳೆಗಳನ್ನು ಧರಿಸುವುದು ಸ್ತ್ರೀಯರಿಗೆ ರಕ್ಷಣೆಯಾಗಿರುತ್ತದೆ. ಲಕ್ಷ್ಮಿ ಸನ್ನಿದಾನವಿರುವ ಗಾಜಿನ ಬಳೆಗಳು ಬೇರೆಯವರು ಮಾಡುವ ಮಾಟ, ಮದ್ದು, ಕೃತ್ಯೆ, ಮೊದಲಾದ ದುಷ್ಕೃತ್ಯಗಳನ್ನು ತಡೆಯಲು ಸಾಧ್ಯವಾಗುತ್ತದೆ.

**ಕಬರೀ ಕಾಚಮಣಯಃ ಕಜ್ಜಲಂ ಕಂಕಣಂ ತಥಾ ।**

**ಪಾದಾಂಗುಲೀಯಕಂ ಚೇತಿ ಸ್ತ್ರೀಣಾಂ ರಕ್ಷಣ ಪಂಚಕಂ ॥**

ಸ್ತ್ರೀಯರ ರಕ್ಷಣ ಪಂಚಕಗಳಲ್ಲಿ ಗಾಜಿನ ಬಳೆಗಳೂ ಒಂದು. ಆದ್ದರಿಂದ ಕಂಕಣಗಳಿಂದ ರಹಿತರಾದರೆ ಅನಿಷ್ಟವಾಗುವುದು ಖಂಡಿತಾ, ಅನಿಷ್ಟವೆಂದರೆ ಗಂಡನ ಆಯುಷ್ಯ ನಾಶವೆ.

ಬಳೆಗಳಲ್ಲಿ ಹವಳ, ರತ್ನ, ಪಚ್ಚೆ ಇವುಗಳಲ್ಲಿ ನಿರ್ಮಿತವಾದ ಬಳೆಗಳನ್ನು ಧರಿಸಬಹುದು. ಸುವರ್ಣನಿರ್ಮಿತ ಬಳೆಗಳಲ್ಲಿಯೂ ಲಕ್ಷ್ಮಿಯು ಸನ್ನಿಹಿತಳಾಗಿರುವುದರಿಂದ ಅವುಗಳನ್ನು ಧರಿಸಬಹುದು.

ಆದರೆ ಅಂಗಡಿಯಿಂದ ತಂದ ಕೂಡಲೇ ಹಾಗೆಯೇ ಧರಿಸಬಾರದು. ಅದನ್ನು ತೊಳೆದು ಗೋಮೂತ್ರ ಹಾಗೂ ಗೋಮಯದಿಂದ ಪ್ರೋಕ್ಷಿಸಿ ನಂತರ ಪತಿಯಿಂದ ಪಡೆದು ಧರಿಸಬೇಕು. ಧರಿಸುವಾಗ ಪಠಿಸಬೇಕಾದ ಮಂತ್ರ–

**ಯಸ್ಮಾತ್ ಕಲಿ ವಿನಾಶಾಯ ನಿರ್ಮಿತೋ ಬ್ರಹ್ಮಣಾ ಪುರಾ ।**

**ತಸ್ಮಾತ್ತ್ವಾಂ ಪೂಜಯಿತ್ವಾ ತು ಕಂಕಣೇ ಧಾರಯಾಮ್ಯಹಮ್ ॥**

ಬಳೆಗಳಲ್ಲಿ ಲಕ್ಷ್ಮಿಯ ಸನ್ನಿಧಾನವಿರುವುದರಿಂದ ಶುಕ್ರವಾರ, ಮಂಗಳವಾರ, ಗೌರಿಹಬ್ಬ, ವರಮಹಾಲಕ್ಷ್ಮೀವ್ರತಾದಿ ಪರ್ವಕಾಲಗಳಲ್ಲಿ ತೆಗೆಯಬಾರದು ಹಾಗೂ ಒಡೆಯಬಾರದು. ಸಂಜೆಯಂತೂ ಸರ್ವಥಾ ತೆಗೆಯಬಾರದು. ಆದರೆ ಬಳೆಗಳನ್ನು ಧರಿಸಬಹುದು.

ವಿವಾಹವಾದ ನಂತರ ಎಂದೂ ಯಾವ ಕಾರಣಕ್ಕೂ ಬಳೆಗಳನ್ನು ತಮಾಷೆಗಾಗಿಯೂ ಒಡೆದು ತೆಗೆಯಬಾರದು. ತೆಗೆಯುವಾಗ ತಾವೆ ಒಡೆದರೆ ದೋಷವಿಲ್ಲ. ಬಳೆಯನ್ನು ಬೇರೆಯವರಿಂದ ಹಾಕಿಸಿಕೊಳ್ಳುವಾಗ ಸ್ತ್ರೀಯ

ಬಳೆಗಾರ್ತಿಯರಿಂದಲೇ ಹಾಕಿಸಿಕೊಳ್ಳಬೇಕು. ಪುರುಷನಿಂದ, ಯುವಕನಿಂದ ಹಾಕಿಸಿಕೊಳ್ಳಬಾರದು.

ಹಾಗೆ ಹಾಕಿಸಿಕೊಳ್ಳುವಾಗಲೂ ಪತ್ಯಂತರ್ಗತ ನಾರಾಯಣನ ಸ್ಮರಣೆ ನಿರಂತರವಾಗಿ ಮಾಡುತ್ತಿರಬೇಕು.

ಬಳೆ ಧರಿಸದ ವಿವಾಹಿತ ಸ್ತ್ರೀಯರಿಂದ ತಯಾರಾದ ಪಾಕಾದಿಗಳು ನೈವೇದ್ಯಾದಿಗಳಿಗೆ ಬರುವುದಿಲ್ಲ. ಅಂತಹ ಸ್ತ್ರೀಯನ್ನು ನೋಡಿದರೆ ಅಂದು ಕಲಹವಾಗುವುದೆಂದು ಶಾಸ್ತ್ರ ಎಚ್ಚರಿಕೆ ನೀಡಿದೆ.

**ಕಂಕಣೈಃ ರಹಿತಾ ಯಾತು ತತ್ಪಾಕಂ ನಿಷ್ಫಲಂ ಭವೇತ್ ।**

ಕಂಕಣ ಎಂಬ ಶಬ್ದವನ್ನು ಬಿಡಿಸಿದರೂ ಶುಭವನ್ನು ***[ಕಂ ಶುಭಂ ಕಣತಿ ಕಣಶಬ್ದೇ]*** ಕೋರುವುದು ಯಾವುದೋ ಅದೇ ಕಂಕಣ ಅಥವಾ ಕಂ ಜಲಂ, ಕಣಂ = ಅದರ ಕಣ. ಜಲದ ಕಣಗಳೇ ಕಂಕಣ. ಜಲದ ಕಣಗಳಂತೆ ಸರ್ವದಾ ಪವಿತ್ರಗಳಾದವುಗಳು ಎಂದರ್ಥ.

ಬಳೆಗಳನ್ನು ಧರಿಸುವಾಗ ಮುತ್ತೈದೆಯರಿಗೆ ಬಳೆಗಳನ್ನು ದಾನ ಮಾಡಿ ನಂತರ ತಾನೂ ಧರಿಸಬಹುದು. ಅಮಾವಾಸ್ಯೆಯಂದು ಬಳೆಗಳನ್ನು ಧರಿಸಬಾರದು.

- ***ಮೂಗುತಿ :***

ಮೂಗುತಿಯನ್ನು ಸ್ತ್ರೀಯರು ಧರಿಸುವುದು ಅತ್ಯಂತ ಶ್ರೇಯಸ್ಕರವಾಗಿದೆ. ಮೂಗುತಿಯನ್ನು ಮುತ್ತಿನಿಂದ ಅಥವಾ ಶ್ರೇಷ್ಠವಾದ ಹರಳಿನ ಅಥವಾ ಸುವರ್ಣದಿಂದ ತಯಾರಾದ ಮೂಗುತಿಯನ್ನೂ ಧರಿಸಬಹುದು.

ಮೂಗುತಿಯನ್ನು ಮೂಗಿನ ಎರಡೂ ಹೊರಳೆಗಳಲ್ಲಿಯೂ ಧರಿಸಬೇಕು. ಎಡಭಾಗದ ಮೂಗುತಿಯು ಪತಿಗೆ ಶ್ರೇಯಸ್ಕರ. ಬಲಭಾಗದ್ದು ತನಗೆ ಶ್ರೇಯಸ್ಕರವು ಮೂಗುತಿಯಲ್ಲಿ ಲಕ್ಷ್ಮೀ ಹಾಗೂ ಭಾರತೀದೇವಿಯರ ಸನ್ನಿಧಾನವಿರುತ್ತದೆ. ಮೂಗುತಿಯನ್ನು ಧರಿಸದ ಮೂಗನ್ನು ದೊಡ್ಡವರಿಗೆ ಹಾಗೂ ಪತಿಗೆ ತೋರಿಸಬಾರದು.

**ನ ದರ್ಶಯೇತ್ ನಾಸಿಕಾಂ ತು ಮೌಕ್ತಿಕೈಃ ರಹಿತಾಂ ಶುಭಾ ।**

ಕನ್ಯೆಯು ತಾನು ಮೊದಲು ಬಲಭಾಗದ ಮೂಗನ್ನು ಚುಚ್ಚಿಸಿಕೊಂಡಿರಬೇಕು.

ವಿವಾಹವಾದ ನಂತರ ಪತಿಯು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಎಡಭಾಗದ ಮೂಗಿಗೆ ಮುತ್ತಿನ ಮೂಗುತಿಯನ್ನು ವೇದಘೋಷದ ಮೂಲಕ ಗಂಡನೇ ಹಾಕುವನು.

ಪುರಂದರದಾಸರ ಪತ್ನಿಯ ಮೂಗುತಿಯ ಕಥೆಯು ಸ್ತ್ರೀ ಜೀವನದಲ್ಲಿ ಮೂಗುತಿಯ ಪಾತ್ರ ತಿಳಿಸುತ್ತದೆ.

***"ನಾಸಾಗ್ರೇ ನವಮೌಕ್ತಿಕಂ"*** ಎಂಬಂತೆ ಭಗವಂತನೂ ನಾಸಾಗ್ರದಲ್ಲಿ ಧರಿಸಿರುವನು. ಎಂದರೆ ಲಕ್ಷ್ಮೀದೇವಿಯೇ ಮೌಕ್ತಿಕವಾಗಿ ಭಗವಂತನ ಸೇವೆ ಮಾಡುವಳು. ನಿತ್ಯ ಮುತ್ತೈದೆಯಾಗಲು ಮೂಗುತಿ ಧರಿಸಲೇಬೇಕು.

ಲಕ್ಷ್ಮೀದೇವಿಯೂ ಕೂಡ ಮುತ್ತಿನ ಮೂಗುತಿಯನ್ನು ಧರಿಸಿಕೊಂಡಿರುವಳು. **"ಮುತ್ತಿನ ಓಲೆಯನ್ನಿಟ್ಟಳೀ ಮಹಾಲಕ್ಷ್ಮೀ"** ಇದನ್ನು ಶೇಷದೇವರು ಲಕ್ಷ್ಮೀದೇವಿಗೆ ನೀಡಿದರೆಂದು ಪುರಾಣ ವಚನ. ಇದಲ್ಲದೆ ಚಂದ್ರದೇವನಿಂದ ಅಭಿಮನ್ಯವಾದ ಮುತ್ತಿನ ಮೂಗುತಿಯನ್ನು ಧರಿಸಿದರೆ ಸಮಸ್ತ ರೋಗಗಳು ಪಾಪಗಳೂ ಪರಿಹಾರವಾಗುತ್ತದೆ.

ಲಕ್ಷ್ಮೀದೇವಿಯ ಚಂಚಲೆಯಾಗಿದ್ದರೂ ಮುತ್ತಿನ ಮೂಗುತಿ ಹಾಗೂ ಓಲೆ ಧರಿಸಿದ ಸ್ತ್ರೀಯರನ್ನು ಬಿಟ್ಟು ಹೋಗುವುದಿಲ್ಲವೆಂದು ಪ್ರಮಾಣವಿದೆ.

**ಏವಂ ಸರ್ವಗುಣೋಪೇತಂ ಮೌಕ್ತಿಕಂ ಯೇನ ಧಾರ್ಯತೇ ।**
**ಚಂಚಲಾಪಿ ಸ್ಥಿರಾಭೂತ್ವಾ ಕಮಲಾ ತತ್ರ ತಿಷ್ಠತಿ ॥**

- ***ಕಾಲುಂಗುರ :***

ಕಾಲುಂಗುರವನ್ನು ಪಾದಾಂಗುಲೀಯಕವೆನ್ನುವರು. ಲಕ್ಷ್ಮೀಶೋಭಾನದಲ್ಲಿ ವಾದಿರಾಜರು ಲಕ್ಷ್ಮೀದೇವಿಯು ಕಾಲುಂಗುರ ಧರಿಸಿದ್ದಳೆಂದು ತಿಳಿಸಿರುವರು. ***"ಈ ಲಕ್ಷ್ಮೀದೇವಿಯ ಕಾಲುಂಗುರ ಘಲಕೆನಲು ಲೋಲಾಕ್ಷಿ ಮೆಲ್ಲನೆ ನಡೆತಂದಳು"*** – (15 ಶ್ಲೋಕ)

ಈ ಶ್ಲೋಕದಲ್ಲಿ "ಕಾಲುಂಗುರ ಧರಿಸಿದಳು" ಎನ್ನದೆ "ಕಾಲುಂಗುರ ನಡೆತಂದಳು" ಎಂದಿರುವುದು ಪ್ರತಿ ಸ್ತ್ರೀಯರಿಗೂ ಕಾಲುಂಗುರ ಧರಿಸಲೇಬೇಕೆಂಬ ಧರ್ಮವನ್ನು ನಡೆಯಲ್ಲಿ ತೋರಿಸುತ್ತಿರುವಳು ಎಂದರ್ಥ. ಇದರಿಂದ ಕಾಲುಂಗುರದ ಮಹಿಮೆ ತಿಳಿದಂತಾಯಿತು. ಕಾಲುಂಗುರದಲ್ಲಿ ಹಾಗೂ ಪಿಲ್ಲೆಯಲ್ಲಿ ಲಕ್ಷ್ಮೀದೇವಿಯ ಸನ್ನಿಧಾನವಿರುತ್ತದೆ.

ಕಾಲುಂಗುರವನ್ನು ಧರಿಸುವುದರಿಂದ ನಿತ್ಯ ಮುತ್ತೈದೆತನವನ್ನು ಪಡೆಯಬಹುದಾಗಿದೆ.

ವಿವಾಹದಲ್ಲಿ ನಡೆಯುವ ಸಪ್ತಪದಿಯು ಅತ್ಯಂತ ಪ್ರಧಾನ ಕಾರ್ಯಕ್ರಮವಾಗಿದೆ. ವಧುವು ಏಳು ಹೆಜ್ಜೆಗಳನ್ನು ಮಂತ್ರಪೂರ್ವಕವಾಗಿ ಇಡುವುದು.

ಕಾಲುಂಗುರವನ್ನು ಹಾಕುವುದೆಂದರೆ ವಧುವು ತನ್ನ ತಂದೆಯ ಗೋತ್ರದಿಂದ ವರನ ಗೋತ್ರಕ್ಕೆ ಬರುತ್ತಿರುವುದು ಎಂದರ್ಥ. ಸಪ್ತಪದಿಯಾಗದೆ ವಿವಾಹವು ಪೂರ್ಣವಾಗುವುದಿಲ್ಲ.

**ಸ್ವಗೋತ್ರಾತ್ ಭ್ರಶ್ಯತೇ ನಾರೀ ವಿವಾಹಾತ್ ಸಪ್ತಮೇ ಪದೇ ॥**

ವಿವಾಹವಾದ ಮೇಲೆ ಕಾಲುಂಗುರವಿಲ್ಲದೆ ಮನೆಯ ಹೊಸ್ತಿಲನ್ನು ದಾಟಬಾರದು. ಮಹಾ ಅನರ್ಥವು ಶೃತವಾಗಿದೆ. ಗೋತ್ರ ರಹಿತಳೇ ಆಗುವಳು.

ಆದ್ದರಿಂದಲೇ ಅಂಗುಷ್ಠದ ಪಕ್ಕದ ಬೆರಳು ಕಾಲುಂಗುರದಿಂದ ತೊಂದರೆಗೀಡಾಗಿ ತೆಗೆಯಬೇಕಾಗಿ ಬಂದಾಗ ಅದರ ಸ್ಥಾನವನ್ನು ತೂಗುವುದೇ ಪಿಲ್ಲೆ. ಪಿಲ್ಲೆಯನ್ನು ಎಲ್ಲರೂ ಧರಿಸಲೇಬೇಕು. ಇದೊಂದು ಕಾಲುಂಗುರದ ಪ್ರತಿನಿಧಿ. ಇದನ್ನೇ ವಾದಿರಾಜರು –

**ಪಿಲ್ಲೆ ಕಾಲುಂಗುರವಾದ – ಅಂಘ್ರಿ**

**ಚಲಿಸುವ ದಿವ್ಯ ಸುಸ್ವಾದ** – ಎಂದಿದ್ದಾರೆ.

ಆದ್ದರಿಂದ ಕಾಲುಂಗುರವನ್ನು ಯಾವಾಗಲೂ ತೆಗೆಯದೆ ಇರಬೇಕು.

- ***ಹೂವು :***

ಅರಿಷಿಣ – ಕುಂಕುಮಗಳಂತೆ ತಲೆಯಲ್ಲಿ ಹೂವು ಧರಿಸುವುದು ಮಾಂಗಲಿಕವಾದದ್ದು. ಭಗವಂತನಿಗೆ, ಲಕ್ಷ್ಮಿಗೆ ಅರ್ಪಿಸಿದ ಹೂವನ್ನೇ ಧರಿಸಬೇಕು. ದಾರಿಯಲ್ಲಿ ಧರಿಸುವಾಗಲೂ ಸೂರ್ಯನಾರಾಯಣನಿಗೆ ತೋರಿಸಿ, ಅರ್ಪಿಸಿ ಧರಿಸಬೇಕು. ಭಗವಂತನಿಗೆ ಅರ್ಪಿತವಾಗದ ಪುಷ್ಪದಲ್ಲಿ ಕಲಿಭಾರ್ಯೆಯ ಸಂಪರ್ಕವಿರುತ್ತದೆ.

ಮಲ್ಲಿಗೆ, ಮಂದಾರ, ಜಾಜಿ ಹೂವುಗಳನ್ನು ಧರಿಸಬಹುದು. ಪಾರಿಜಾತದಲ್ಲಿ ಹನುಮಂತ, ಬಿಳಿ ಹೂವಿನಲ್ಲಿ ಶಂಕರ, ಕಲ್ಹಾರದಲ್ಲಿ ಭೀಮ, ತಾಲ ಹಾಗೂ ಹಿಂತಾಲದಲ್ಲಿ ಸರಸ್ವತೀ, ಔದುಂಬರದಲ್ಲಿ ಅಗ್ನಿಯು, ಪುನ್ನಾಗದಲ್ಲಿ ಗರುಡ, ದೇವದಾರುವಿನಲ್ಲಿ ಸರ್ವದೇವತೆಗಳೂ ಇರುವುದರಿಂದ ಇವೆಲ್ಲವನ್ನೂ ಭಗವಂತನಿಗೆ ಅರ್ಪಿಸಿ ಸ್ವೀಕರಿಸಬಹುದು.

ಭಗವಂತನಿಗೆ ಪತಿಯು ಅರ್ಪಿಸಿದ ಮೇಲೆ ನಂತರ ತುಲಸಿ, ಗೌರಿದೇವಿ, ಗಂಗೆಗೆ ಅರ್ಪಿಸಿ ಮುತ್ತೈದೆಗೆ ತೆಗೆದಿಟ್ಟು ಅಥವಾ ಕೊಟ್ಟು ತಾನು ಮುಡಿಯಬೇಕು.

ದೇವರಿಗೆ ಏರಿಸಿದ ಹೂವನ್ನು ಸ್ತ್ರೀಯಾದವಳು ತುಳಿಯುವ ಸ್ಥಳದಲ್ಲಿ ಹಾಕಬಾರದು. ದೇವರ ನಿರ್ಮಾಲ್ಯವನ್ನು ದಾಟಿದರೆ ಹತ್ತು ಸಾವಿರ ಜನ ಬ್ರಾಹ್ಮಣರ ಎಂಜಲೆಲೆಯನ್ನು ಎತ್ತಬೇಕಾಗುತ್ತದೆ. ಮುಡಿದ ಮೇಲೆ ಅದನ್ನು ತುಳಿದರೆ ಪ್ರಾಯಶ್ಚಿತ್ತ ಬೇಕಿಲ್ಲ.

### ಏಕಾದಶಿಯಂದು ಹೂವು –

ಏಕಾದಶಿಯಂದು ಸರ್ವಾಲಂಕಾರವು ವರ್ಜ್ಯವಾಗಿರುವುದರಿಂದ ಹೂವನ್ನು ಧರಿಸುವುದು ಸಲ್ಲ. ಆದರೂ ಮುತ್ತೈದೆತನಕ್ಕಾಗಿ ಹಿಂದಿನ ದಿವಸ ಏರಿಸಿದ ಒಂದು ಹೂವನ್ನು ಮಾತ್ರ ಧರಿಸಬೇಕು. ರಜಸ್ವಲೆಯರಾಗಿದ್ದಾಗಂತೂ ಸರ್ವಥಾ ಹೂವನ್ನು ಧರಿಸಬಾರದು. ಇದರಿಂದ ದೌರ್ಭಾಗ್ಯವುಂಟಾಗುತ್ತದೆ.

ಶಾಸ್ತ್ರದಲ್ಲಿ ನಿಷೇಧಿಸಿದ ಬಣ್ಣಬಣ್ಣದ ಸ್ಫಟಿಕ, ಚೆಂಡು, ಮಲ್ಲಿಗೆ, ಅತಿಕೆಂಪಾದ ಹೂವು (ಕನಕಾಂಬರ ನಿಷಿದ್ಧವಲ್ಲ)ಗಳನ್ನು ಬಿಡಬೇಕು. ಇದು ಅಲಕ್ಷ್ಮಿಯ ಸನ್ನಿಧಾನವಿರುವ ಪುಷ್ಪಗಳು.

ಸ್ತ್ರೀಯರು ಮಧ್ಯಾಹ್ನದಂದು ಇನ್ನು ಮೊಗ್ಗು ಆಗಿರುವ ಮೊಗ್ಗು ಹೂವುಗಳನ್ನು ಬಳ್ಳಿಯಿಂದ ಬಿಡಿಸಿ ಬೇರ್ಪಡಿಸಬಾರದು. ಬಳ್ಳಿಯು *"ನೀನು ಬಂಜೆಯಾಗು ಎಂದು ಶಪಿಸುತ್ತದೆ"* ಎಂದು ಹರಿವಂಶ ಮಹಾತ್ಮ್ಯ ಹೇಳಿದೆ. ನಿಷಿದ್ಧ ಪುಷ್ಪವನ್ನು ಭಗವಂತನಿಗೆ ಏರಿಸಬಾರದು.

ಹೀಗೆ ಭಗವದರ್ಪಿತವಾದ ಶ್ವೇತ ಪುಷ್ಪಗಳ ಧಾರಣೆಯಿಂದ ಸಾತ್ವಿಕಭಾವ ಮೂಡುವುದು.

- ***ಜಡೆ :***

ಕೂದಲು ಸ್ತ್ರೀಯರಿಗೆ ಅತ್ಯುತ್ತಮ ಮಂಗಲಕಾರಕವಾಗಿದೆ. ಪತಿವ್ರತೆಯರ ಕೂದಲಿನಲ್ಲಿ ವೇಣೀ ಎನಿಸಿದ ಲಕ್ಷ್ಮೀದೇವಿಯ ಹಾಗೂ ಮಾಧವನ ಸನ್ನಿಧಾನವಿರುತ್ತದೆ. ಇದಲ್ಲದೆ ಮುತ್ತೈದೆ ಸ್ತ್ರೀಯರ ಬೈತಲೆಯಲ್ಲಿ ಭಾಗೀರಥಿಯು, ಎಡಭಾಗದಲ್ಲಿ ಯಮುನೆಯು, ಬಲಭಾಗದಲ್ಲಿ ಸರಸ್ವತೀದೇವಿಯರು ಸನ್ನಿಹಿತರಾಗಿರುತ್ತಾರೆ. ಆದ್ದರಿಂದ ಈ ತ್ರಿವೇಣೀ ಸಂಗಮದಲ್ಲಿ ವೇಣೀ ಮಾಧವನಿರುವುದು ಅಚ್ಚರೀ ಏನಲ್ಲ.

ಜಡೆಯನ್ನು ಹಾಕಿಕೊಳ್ಳುವಾಗ ಜಡೆಯ ಒಂದೊಂದು ಎಳೆಯಲ್ಲೂ ಗಂಗೆ, ಯಮುನೆ, ಸರಸ್ವತಿಯರನ್ನು ಸ್ತೋತ್ರ ಮಾಡಿ ಜಡೆ ಹೆಣೆದುಕೊಂಡಾಗ ಮಾತ್ರ "ತ್ರಿವೇಣಿ ಸಂಗಮ"ವುಂಟಾಗುತ್ತದೆ.

**ಭೂತಭಾವಿ ವರ್ತಮಾನಂ ಆರ್ದ್ರಂ ಶುಷ್ಕಂ ಚ ಯತ್ಕೃತಂ ।**
**ಏತೇ ವೈ ಸರ್ವಪಾಪೌಘಃ ನಶ್ಯಂತು ಮಮ ಜಾಹ್ನವಿ ॥**

**ಗತಂ ಪಾಪಂ ಗತಂ ದುಃಖಂ ಗತೋ ಮೇ ಪಾಪಸಂಚಯಃ ।**
**ನಿಷ್ಪಾಪಾ ಯಮುನೆ ದೇವಿ ಪ್ರಸಾದಾತ್ ತವ ನಾನ್ಯಥಾ ॥**

**ಶ್ರೀಗಂಗಾ ಯಮುನಯೋರ್ಮಧ್ಯೇ ಸ್ಥಿತಾಸಿ ತ್ವಂ ಸರಸ್ವತಿ ।**
**ಉದ್ಧಾರಾರ್ಥಂ ತು ಲೋಕಾನಾಂ ಮಾಮುದ್ಧರ ಭವಾರ್ಣವಾತ್ ॥**

ಈ ಮೂರು ಶ್ಲೋಕಗಳನ್ನು ಹೇಳುತ್ತಾ ಜಡೆ ಹೆಣೆದುಕೊಳ್ಳಬೇಕು. ಇದರಿಂದ ಕೂದಲಿನಲ್ಲಿರಬಹುದಾದ ಪಾಪಗಳು ತ್ರಿವೇಣಿಯರ ಸನ್ನಿಧಾನದಿಂದಾಗಿ ನಾಶ ಹೊಂದುತ್ತದೆ.

***ನಾಲ್ಕು ಜಡೆ –***

ಲಕ್ಷ್ಮೀದೇವಿಯು ನಾಲ್ಕು ಜಡೆ ಹಾಕಿಕೊಂಡಿರುವಳೆಂದು ಋಗ್ವೇದ ಹಾಗೂ ವಾದಿರಾಜರ ಶ್ರೀಶ್ರೀಶಗುಣದರ್ಪಣದಲ್ಲಿ ತಿಳಿಸಲಾಗಿದೆ.

**"ಚತುಷ್ಕಪರ್ದಾ ಯುವತಿಃ ಸುಪೇಶಾ"**

**"ಚತುಃಶಿಖಂಡಾ ಯುವತಿಃ ಸುಪೇಶಾ"**

**"ಚತುಷ್ಕಪರ್ದೀ ಯಾ ದೇವಿ ಚತುರಾಸ್ಯಾದಿಭಿಃ ಸ್ತುತಾ"**

ಇದರರ್ಥ ಹೀಗೆ – ಮಧ್ಯದಲ್ಲಿ ಬೈತಲೆಯನ್ನು ತೆಗೆಯಬೇಕು. ಸೊಟ್ಟವಾಗಿ ಬೈತಲೆ ನಿಷಿದ್ಧವಾಗಿದೆ. ಮೊದಲು ಬಲಭಾಗದ ಕೂದಲನ್ನು ಮೂರು ಮೂರು ಎಳೆಯನ್ನಾಗಿ ಮಾಡಿ ಎರಡು ಜಡೆಗಳನ್ನು ಹಾಕಿಕೊಳ್ಳಬೇಕು. ಹಾಗೆಯೇ ಎಡಭಾಗದ ಕೂದಲನ್ನು ಆರು ಎಳೆ ಮಾಡಿ ಮೂರು ಮೂರರ ಎರಡು ಜಡೆಗಳನ್ನು ಹೆಣೆದು ಆ ಎರಡು ಜಡೆಗಳನ್ನು ಒಂದು ಮಾಡಿ ಹೆಣೆದ ನಂತರ ಹೂವನ್ನು ಮುಡಿಯಬೇಕು. ಇದೊಂದು ವೇಣಿಮಾಧವರ ಅಲಂಕಾರವಾದ್ದರಿಂದ ಸಮಯ ವ್ಯರ್ಥವಾಗುತ್ತದೆ ಎಂಬ ಭಾವನೆ ಸಲ್ಲದು.

ಇದು ಅಸಾಧ್ಯವಾದಾಗ ಗಂಗಾದಿ ತ್ರಿವೇಣಿಯರ ಸನ್ನಿಧಾನಕ್ಕಾಗಿ ಮೂರು ಎಳೆಯ ಜಡೆಯನ್ನಾದರೂ ಹೆಣೆದುಕೊಳ್ಳಬೇಕು.

ಸ್ತ್ರೀಯಾದವಳು ಜಡೆ ಹಾಕಿಕೊಳ್ಳದೆ ಕೂದಲನ್ನು ಹಾಗೆ ಬಿಟ್ಟಿರಬಾರದು. ಜಡೆಯಲ್ಲಿ ಗಂಟು ಇದ್ದರೆ ದುರ್ಗೆಯ ಸನ್ನಿಧಾನವಿರುತ್ತದೆಯಾಗಿ ಅಲಕ್ಷ್ಮಿಯು ಬರುವುದಿಲ್ಲ. ಆದ್ದರಿಂದ ಯಾವಾಗಲೂ ಗಂಟು ಹಾಕಿಕೊಂಡಿರಲೇ ಬೇಕು. ಗೃಹಿಣಿಯು ಈ ಮಾರ್ಗವನ್ನು ತಮ್ಮ ಹೆಣ್ಣು ಮಕ್ಕಳಿಗೂ ಸರಿಯಾಗಿ ತಿಳಿಸಿ ಯಾವಾಗಲೂ ಜಡೆ ಹಾಕಿಕೊಂಡಿರುವುದನ್ನು ಕಲಿಸಬೇಕು. ಅಭ್ಯಂಜನ ಮಾಡಿದ ದಿವಸವೂ ಕೂದಲು ಒಣಗುವವರೆಗೂ ತುದಿಯಲ್ಲಿ ಒಂದು ಗಂಟು ಹಾಕಿಕೊಂಡು ಒಣಗಿದ ಮೇಲೆ ಜಡೆ ಹಾಕಿಕೊಳ್ಳಬೇಕು.

### ***ಕೂದಲು ಕತ್ತರಿಸುವಿಕೆ –***

ಸ್ತ್ರೀಯು ಅದರಲ್ಲೂ ವಿವಾಹಿತ ಸ್ತ್ರೀಯು ಯಾವುದೇ ಕಾರಣಕ್ಕಾಗಿಯೂ ತಲೆಕೂದಲನ್ನು ಕತ್ತರಿಸಬಾರದು.

ತೀರ್ಥಕ್ಷೇತ್ರಗಳಿಗೆ ಹೋದಾಗ ಪ್ರತಿಯೊಬ್ಬರು ತಮ್ಮ ಪಾಪಗಳನ್ನು ಪರಿಹರಿಸಿಕೊಳ್ಳಲೆಂದು ವಪನ ಮಾಡಿಸಬೇಕು. ಇದು ಮುತ್ತೈದೆ ಸ್ತ್ರೀಯರಿಗೆ ವಪನ ಎನ್ನದೆ "ವೇಣೀದಾನ" ಎಂಬ ಹೆಸರಿನಿಂದ ಉಲ್ಲೇಖಿಸಲಾಗಿದೆ.

**ಮನುಷ್ಯಾಣಾಂ ಹಿ ಪಾಪಾನಿ ತೀರ್ಥಾನಿ ಪ್ರತಿಗಚ್ಛತಾಮ್ ।**
**ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾದ್ ವಪನ ಮಾಚರೇತ್ ॥**

*– ಪದ್ಮ –5–16/21*

ಇದನ್ನು ಬೇರೆ ಕ್ಷೌರಿಕರು ಮಾಡುವುದಲ್ಲ. ತನ್ನ ಪತಿಯೇ ಎರಡಂಗುಲ ಕತ್ತರಿಸಿ ತ್ರಿವೇಣಿಯಲ್ಲಿ ಬಾಗಿಣದಾನ ಸಹಿತ ಅರ್ಪಿಸಬೇಕು.

*ವೇಣೀದಾನ ಸಂಕಲ್ಪ –*

ಮಮ ಜನ್ಮಪ್ರಭೃತಿ ಮನೋವಾಕ್ಕಾಯ ಜನಿತ ದೋಷ ಪರಿಹಾರಾರ್ಥಂ, ಜ್ಞಾನತೋಽಜ್ಞಾನತೊ ಅಭ್ಯಸ್ತಾನಾಂ ಚ ಸಕೃತ್ ಕೃತಾನಾಂ ಸ್ವಾಭಿಲಾಷಪರಪುರುಷ ನಿರೀಕ್ಷಣ, ಸಂಭಾಷಣ ಸಂಭೋಗಜನಿತಪಾತಕಾನಾಂ, ರಜಸ್ವಲಾವಸ್ಥಾಯಾಂ ಸಂಪರ್ಕಜನಿತ ಪಾತಕಾನಾಂ ಭರ್ತೃಮನೋಭಂಗ, ಆಜ್ಞಾ ಉಲ್ಲಂಘನಾದಿ ವಿವಿಧ ಪಾತಕಾನಾಂ ಅಪನೋದನಾರ್ಥಂ, ಅಸ್ಮಿನ್ ತೀರ್ಥರಾಜೇ ಪ್ರಯಾಗೇ ಮಹಾಕ್ಷೇತ್ರೇ ಶ್ರೀಗಂಗಾಯಮುನಾ ಸರಸ್ವತೀ ಸಂಗಮೇ ಪತ್ಯಾ ಸಹ ಸ್ನಾನಮಹಂ ಕರಿಷ್ಯೇ ತಥಾ ವೇಣೀದಾನಂ ಚ ಕರಿಷ್ಯೆ ॥

*ಗಂಡನು ಈ ಮಂತ್ರದಿಂದ ಕತ್ತರಿಸುವುದು –*

ಸ್ತ್ರೀಣಾಂ ಸಭರ್ತೃಕಾಣಾಂ ಚ ಸರ್ವಪಾಪಾಪನುತ್ತಯೇ ।
ಸರ್ವಾನ್ ಕೇಶಾನ್ ಸಮುದ್ಧೃತ್ಯ ಛೇದಯೇತ್ ಅಂಗುಲದ್ವಯಂ ॥

*ಸ್ತ್ರೀಯು ಸಮರ್ಪಿಸುವಾಗ ಹೇಳಬೇಕಾದ ಮಂತ್ರ –*

ತ್ರಿವರ್ಣೇ ತ್ರ್ಯಯಂಬಕೇ ದೇವಿ ತ್ರಿವಿಧಾಘವಿನಾಶಿನಿ ।
ತ್ರಿಮಾರ್ಗೇ ತ್ರಿಗುಣೇ ತ್ರಾಹಿ ತ್ರಿವೇಣಿ ಶರಣಾಗತಾಂ ॥
ಧರ್ಮಾರ್ಥ ಕಾಮಮೋಕ್ಷಾಣಾಂ ಭೂಮಿಕೇ ಭೂಮಿವಿಶ್ರುತೇ ।
ವೇಣೀ ತ್ವಂ ಪಾಹಿ ಮಾಂ ಸಾಕ್ಷಾತ್ ದೃಷ್ಟೇ ಸೃಷ್ಟೋವಗಾಹಿತೇ ॥
ತೀರ್ಥರಾಜೇ ಪ್ರಯಾಗೇಽಸ್ಮಿನ್ ಪ್ರತ್ಯಕ್ಷಾಸಿ ಜಗದ್ಧಿತೇ ।
ನಾನಾಜನ್ಮಕೃತಾಭ್ಯಾಸಾತ್ ಪಾತಕಾತ್ ಉದ್ಧರಸ್ವ ಮಾಂ ॥
ಸಂಸಾರಾನಲಸಂತಪ್ತಂ ಕಾಮಕ್ರೋಧಾದಿವೇಷ್ಟಿತಂ ।
ಪತಿತಂ ತ್ವತ್ಪದಾಜ್ಜೇ ಮಾಂ ಶೀತಲಂ ಕುರು ವೇಣಿಕೇ ॥
ನಮೋ ವೇಣ್ಯೈ ನಮೋ ವೇಣ್ಯೈ ನಮೋ ವೇಣ್ಯೈ ನಮೋ ನಮಃ ॥

ಹೀಗೆ ಸ್ತೋತ್ರ ಮಾಡಿ ಎರಡಂಗುಲ ವೇಣಿಯನ್ನು ದಾನ ಮಾಡುವುದು.

**ಪ್ರಥಮಂ ಮುಂಡನಂ ಕಾರ್ಯಂ ದ್ವಿತೀಯೇ ಶ್ರಾದ್ಧಮೋಚನಂ ।**
**ತೃತಿಯೇ ವೇಣಿಕಾದಾನಂ ಚತುರ್ಥೇ ತೀರ್ಥಮಾಹರೇತ್ ॥**

ಈ ರೀತಿ ವೇಣಿ ದಾನವನ್ನು ಬಿಟ್ಟರೆ ಬೇರೆ ಯಾವ ಸಂದರ್ಭದಲ್ಲೂ ಕೂದಲನ್ನು ಕತ್ತರಿಸಬಾರದು.

- ***ಚೌರೀ :***

ಭಗವಂತನ ಪೂಜಾ ಕಾಲದಲ್ಲಿ ಚಮರೀ ಮೃಗದಿಂದ ತಯಾರಾದ ಚಾಮರ ಬೀಸುವುದು ಪದ್ಧತಿಯಲ್ಲಿದೆ. ಚಾಮರವು ಅತ್ಯಂತ ಮಂಗಳ ವಸ್ತುವಾಗಿದೆ. ಹಾಗೆಯೇ ಶ್ರೀಕಂಠ ಮೃಗದ ಬಾಲದಿಂದ ತಯಾರಾದ ಶ್ರೀಕಂಠ ಚೌರಿಯು ಸ್ತ್ರೀಯರಿಗೆ ಅತ್ಯಂತ ಮಂಗಲಕರವಾಗಿದ್ದು ಅದನ್ನು ಧರಿಸುವ ಪದ್ಧತಿಯಿದೆ. ಚಾಮರವು ಹೇಗೆ ಭಗವಂತನ ಪೂಜೆಯಲ್ಲಿ ಉಪಯುಕ್ತವಾಗಿದ್ದು ಲಕ್ಷ್ಮೀ ಸನ್ನಿಧಾನಯುಕ್ತವಾದದ್ದೋ ಹಾಗೆ ಶ್ರೀಕಂಠಚೌರಿಯೂ ಸಹ ಧರಿಸಿದರೆ ವೇಣಿ ಮಾಧವನ ಜೊತೆಗೆ ಲಕ್ಷ್ಮೀಯನ್ನೂ ಸೇರಿಸಿದ ಮಹಾಫಲಕ್ಕೆ ಭಾಗಿಯಾಗುವರು. ಇದಕ್ಕೆ "ಗಂಗಾವನ"ವೆಂಬ ಹೆಸರಿದ್ದು ಗಂಗೆಯಿಂದ ರಚಿಸಲ್ಪಟ್ಟದ್ದು ಎಂದರ್ಥ-ವಾಗುವುದು.

**ಶ್ರೀಕಂಠನೆಂದರೆ ವಿಷಕಂಠನು ರುದ್ರದೇವನು ತನ್ನ ಕೂದಲನ್ನು ಕಿತ್ತಿ ವೀರಭದ್ರನನ್ನು ಸೃಷ್ಟಿಸಿದ ಮೇಲೆ ಅದರಲ್ಲಿರುವ ಬಿಳಿ ಹಾಗೂ ಕಪ್ಪು ಕೂದಲುಗಳನ್ನು ಪಡೆಯಲು ಚಮರೀಮೃಗ ಹಾಗೂ ಶ್ರೀಕಂಠ ಮೃಗಗಳು ಶಿವನನ್ನುದ್ದೇಶಿಸಿ ತಪಸ್ಸನ್ನು ಮಾಡಿದವು. ನಿನ್ನ ಈ ಕೂದಲು ನಮ್ಮ ದೇಹದಲ್ಲಿ ಕಾಣಿಸಲಿ ಎಂದು ಶ್ರೀಕಂಠ ಮೃಗಗಳು ಕೇಳಿದರೇ, ನಿನ್ನ ಬಿಳಿಕೂದಲು ನಮ್ಮ ಬಾಲದಲ್ಲಿ ಕಾಣಿಸಲಿ ಎಂದು ಚಮರೀಮೃಗವು ಕೇಳಿತು.

- ***ಕಂಠಸ್ನಾನ :***

ಸ್ತ್ರೀಯರಿಗೆ ಕಂಠಸ್ನಾನ ಮಾತ್ರ ವಿಹಿತವಾಗಿದೆ. ಕಾರಣ ಭಾಗೀರಥಿಯ ಸನ್ನಿಧಾನವಿರುವುದರಿಂದ ತಲೆಯ ಮೇಲೆ ಸ್ನಾನ ಮಾಡಬೇಕಾದ ಅವಶ್ಯಕತೆ ಇಲ್ಲ.

***"ಅಶಿರಸ್ಕಂತು ಯತ್ ಸ್ನಾನಂ".*** ಆದರೆ ಈ ನಿಯಮ ಮಾಘಮಾಸಾದಿ

ಸ್ನಾನಗಳಿಗೂ, ತೀರ್ಥಕ್ಷೇತ್ರಾದಿ ಸ್ನಾನಾದಿಗಳಿಗೂ ಅನ್ವಯವಾಗುವುದಿಲ್ಲ. ಎಂದರೆ ತಲೆಯ ಮೇಲೆ ಸ್ನಾನವನ್ನು ಮಾಡಲೇಬೇಕು.

- ***ಕುಪ್ಪಸ ಸೀರೆ :***

ಸ್ನಾನವಾದ ಮೇಲೆ ಒಗೆದಿರುವ, ಹೊಸದಾಗಿರುವ, ಬಿಳಿ ಬಣ್ಣದ ಅಂಚಿರುವ, ಮತ್ತೊಬ್ಬರು ಧರಿಸದೆ ಇರುವ ವಸ್ತ್ರವನ್ನು ಅಹತವೆಂದು ಕರೆಯುವರು. ಇಂತಹ ವಸ್ತ್ರವನ್ನು ಧರಿಸಬೇಕು.

**ಈಷದ್ಧೌತಂ ನವಂ ಶ್ವೇತಂ ಸದಶಂ ಯನ್ನ ಧಾರಿತಂ ।**
**ಅಹತಂ ತಂ ವಿಜಾನೀಯಾತ್ ಸರ್ವಕರ್ಮಸು ಪಾವನಂ ॥**

ಪೂಜಾಕಾಲದಲ್ಲಿ, ಅಡುಗೆ ಮಾಡುವಾಗ, ಬಡಿಸುವಾಗಲಾದರೂ ಕಚ್ಚೆ ಹಾಕಿಕೊಳ್ಳಬೇಕು. ತಮ್ಮ ಮಕ್ಕಳಿಗೂ ಚಿಕ್ಕ ವಯಸ್ಸಿನಿಂದಲೇ ಕಚ್ಚೆ ಹಾಕುವ ಅಭ್ಯಾಸ ಮಾಡಿಸಬೇಕು.

ರೇಷ್ಮೆ ವಸ್ತ್ರಗಳು ಇತರ ವಸ್ತ್ರಗಳ ಅಭಾವದಲ್ಲಿ ಧರಿಸಬಹುದು.

ಯಂತ್ರದಲ್ಲಿ ಹೊಲಿದಿರುವ ವಸ್ತ್ರಗಳು ಮೈಲಿಗೆಯೆಂದು ಶಾಸ್ತ್ರದ ಪರಿಭಾಷೆ. ಹೊಲಿದಿರುವ ವಸ್ತ್ರಧರಿಸಿ ದೇವತಾ ಕಾರ್ಯವನ್ನು ಮಾಡಬಾರದು.

**ನಗ್ನಃ ದಗ್ಧವಸ್ತ್ರಸ್ಸ್ಯಾತ್ ನಗ್ನಃ ಸ್ಯೂತಪಟಸ್ತಥಾ ॥**

ಹಾಗೆಯೇ ಸುಟ್ಟಿರುವ, ತೂತಾಗಿರುವ, ಸೀರೆಯನ್ನು ಧರಿಸಬಾರದು.

ಶೂದ್ರರು ಧರಿಸಬಹುದಾದ ಕಪ್ಪುವಸ್ತ್ರಗಳನ್ನು ಸ್ತ್ರೀಯರು ಧರಿಸಬಾರದು. ತಾಮಸ ಗುಣದ ಸಂಕೇತವದು. ಬ್ರಾಹ್ಮಣ ಸ್ತ್ರೀಗೆ ವಿಹಿತವಾದದ್ದು ಬಿಳಿ, ಹಳದಿ, ಹಸಿರು, ಗುಲಾಬಿಕೆಂಪು ಇವುಗಳು ಮಾತ್ರ. ಕಪ್ಪು ಸರ್ವಥಾ ನಿಷಿದ್ಧವಾಗಿದೆ.

- ***ವಸ್ತ್ರ ಪರಿಧಾನ :***

- **ರೇಷ್ಮೆ ಸೀರೆ ಧರಿಸಿ ಪೂಜಾದಿ ಮಾಡಬಹುದೆ?**

ಖಂಡಿತಾ ಮಾಡಬಹುದು. ಆದರೆ ಆ ಸೀರೆ ಧರಿಸಿ ಭೋಜನ ಮತ್ತು ಮಲೋತ್ಸರ್ಗವನ್ನು ಮಾಡಿರಬಾರದು. ಮಾಡಿದ್ದರೆ ನೀರಿನಲ್ಲಿ ಶುದ್ಧಿ ಮಾಡಿ ಪುನಃ ಧರಿಸಬಹುದು.

**ಶಸ್ತಂ ಪ್ರಾವರಣೇ ಪ್ರೋಕ್ತಂ ಸ್ಪರ್ಶದೋಷೋ ನ ವಿದ್ಯತೇ ।**
**ಭೋಜನಂ ಚ ಮಲೋತ್ಸರ್ಗಂ ಕುರುತೇ ತ್ರಿರಸರಾವೃತಃ ।**
**ಪ್ರಕ್ಷಾಲ್ಯ ಕ್ಷೌಮವಸ್ತ್ರಾಣಿ ಕರ್ಮ ಕುರ್ಯಾತ್ ಯಥಾ ತಥಾ ॥**

– *ಆಚಾರಭೂಷಣ*

- **ನೀಲಿ ವಸ್ತ್ರ ಕೆಂಪು ವಸ್ತ್ರ ಧರಿಸಲೇಬಾರದೆ?**

ಹಾಗೇನಿಲ್ಲ. ಪೂಜಾದಿ ಕರ್ಮಗಳಲ್ಲಿ ಮಾತ್ರ ನಿಷಿದ್ಧವಿರುತ್ತದೆ. ಸ್ತ್ರೀ ವಿಹಾರಾದಿಗಳಲ್ಲಿ ಶಯನ ಕಾಲದಲ್ಲಿ ದೋಷವಿರುವುದಿಲ್ಲ.

**ನೀಲೀರಕ್ತಂ ತು ಯದ್ವಸ್ತ್ರಂ ದೂರತಃ ಪರಿವರ್ಜಯೇತ್ ।**
**ಸ್ತ್ರೀಣಾಂ ಕ್ರೀಡಾರ್ಥ ಸಂಯೋಗೇ ಶಯನೀಯೇ ನ ದುಷ್ಯತಿ ॥**

- **ಹಾಗಾದರೆ ಪ್ರತಿಕರ್ಮದಲ್ಲಿಯೂ ಬೇರೆ ಬೇರೆ ವಸ್ತ್ರಗಳೇ?**

ಹೌದು.

**ಅನ್ಯದೇವ ಭವೇದ್ವಾಸಃ ಶಯನೀಯೇ ನರಾಧಿಪ ।**
**ಅನ್ಯದ್ ರಥ್ಯಾಸು ದೇವಾನಾಮರ್ಚಾಯಾಮನ್ಯದೇವ ಹಿ ॥**

- **ವಿಧವಾಸ್ತ್ರೀಯರಿಗೆ ಹೇಗೆ?**

ವಿಧವಾ ಸ್ತ್ರೀಯಾದರೂ ಕೆಂಪುಬಟ್ಟೆ ಧರಿಸಬಹುದಾದರೂ, ನೀಲಿ ವಸ್ತ್ರಾದಿಗಳನ್ನು ಧರಿಸಲೇಬಾರದು, ನರಕವಾದೀತು.

**ಮೃತೇ ಭರ್ತರಿ ಯಾ ನಾರೀ ನೀಲೀವಸ್ತ್ರಂ ಪ್ರಧಾರಯೇತ್ ।**
**ಭರ್ತಾತು ನರಕಂ ಯಾತಿ ಸಾ ನಾರೀ ತದನಂತರಮ್ ॥**

– *ಅಂಗಿರಾಸ್ಮೃತಿ*

- ***ಕಚ್ಚೆ ಎಂದರೇನು?***

**ಧಾರಿತೇನ್ಯೈವ ವಸ್ತ್ರೇಣ ಗುಪ್ತಾಂಗಸ್ಯ ನಿಗೂಹನಂ ।**
**ಕಚ್ಚೇತಿ ಕಥಿತಾ ಪೂರ್ವೈಃ ಸರ್ವ ಕರ್ಮಸು ಪಾವನಾ ॥**

- **ಕಚ್ಚೆಯಿಲ್ಲದೆ ಪೂಜಾದಿಗಳ ನಿಷಿದ್ಧ–**

ಕಚ್ಚೆಯಿಲ್ಲದವನನ್ನು ವಸ್ತ್ರಧರಿಸಿದ್ದರೂ 'ನಗ್ನ' ಎನ್ನಲಾಗಿದೆ.

**ವಿಕಚ್ಛೋऽನುತ್ತರೀಯಶ್ಚ ನಗ್ನಶ್ಚಾವಸ್ತ್ರ ಏವ ಚ ।**
**ಶ್ರೌತಂ ಸ್ಮಾರ್ತಂ ತಥಾ ನ ಕುರ್ಯಾತ್ ಚಿಂತಯೇದಪಿ ॥**
**ಮೋಹಾತ್ ಕುರ್ವನ್ ಅಧೋ ಗಚ್ಛೇದ್ ಭವೇದಾಸುರಂ ಕೃತಂ ॥**

- **ಕಚ್ಚೆ ಎಂದರೆ ಸಿಕ್ಕಿಸಿಕೊಳ್ಳುವುದು. ಇದು ಕರ್ಮತಂತ್ರದಲ್ಲಿ ಪ್ರಧಾನ ಹೇಗೆ?**

ಗುಪ್ತಾಂಗವನ್ನೂ ಸೇರಿಸಿ ಹಿಂದಿನಿಂದ ಗೂಹನ ಮಾಡುವುದೇ ಕಚ್ಚೆ. ಹಿಂದಿನಿಂದ ಮಾತ್ರವೆ ಮಾಡಲಾಗದು. ಆದ್ದರಿಂದ ಅಯ್ಯರುಗಳು ಹಾಕಿಕೊಳ್ಳುವ ಮೂರು ಕಚ್ಚೆಗಳು, ವೈಷ್ಣವರು ಹಾಕಿಕೊಳ್ಳುವ ಪಂಚಕಚ್ಚೆಗಳೂ ಪ್ರಸಿದ್ಧವಿದೆ.

- **ಕಚ್ಚೆಯ ಫಲವೇನು?**

ಕಚ್ಚೆಯನ್ನು ಹಾಕದ ಸ್ತ್ರೀಪುರುಷರು ದೇವತಾ ಕರ್ಮ ಮಾಡುವುದು ನಿಷಿದ್ಧವೆಂದು, ಅಸುರ ಕರ್ಮವಾಗುವುದೆಂದು ಹೇಳಿದ್ದರೂ – ವಿಶೇಷ ಫಲವನ್ನೂ ಹೇಳಲಾಗಿದೆ.

ತ್ರಿಕಚ್ಚೆ – ಪಂಚಕಚ್ಚೆಗಳಿಂದ ಕರ್ಮ ಮಾಡಿದಾಗ –

ಕಾಯಕ–ವಾಚಕ–ಮಾನಸಿಕ ಪಾಪಗಳ ನಾಶ ಫಲವಾದರೆ, ಪಂಚ ಕಚ್ಚೆಯಿಂದ ಪಂಚ ಮಹಾಪಾತಕ ಪರಿಹಾರವನ್ನು ಹೇಳಲಾಗಿದೆ.

**ನಾಭೌ ಚ ವಾಮಕುಕ್ಷೌ ಚ ಪೃಷ್ಠೇ ಚೈವ ಯಥಾಕ್ರಮಂ ।**
**ವಸ್ತ್ರ ಪ್ರಾವರಣಂ ಯತ್ ಸ್ಯಾತ್ ತ್ರಿಕಚ್ಚಮುದಾಹೃತಮ್ ॥**

ಮೊದಲು ಎಡ ಅಥವಾ ಬಲಭಾಗದಲ್ಲಿ ಎರಡು ತುದಿಗಳನ್ನು ಹಿಡಿದು ಒಂದು ಗಂಟು ಹಾಕಿಕೊಳ್ಳುವುದು. ನೆರಿಗೆ ಹಿಡಿದು ನಾಭಿಯ ಮೇಲೆ ಸಿಕ್ಕಿಸಿಕೊಳ್ಳುವುದು ಒಂದು ಕಚ್ಚೆ. ನಂತರ ಬೆನ್ನ ಹಿಂದೆ ಒಂದು ಕಚ್ಚೆ. ಮುಂದೆ ಜೋತಾಡುತ್ತಿರುವ ಭಾಗವನ್ನು ಹೊಟ್ಟೆಯ ಎಡಭಾಗದಲ್ಲಿ ಸಿಕ್ಕಿಸಿಕೊಳ್ಳುವುದು.

ಹೊಟ್ಟೆಯ ಎಡ–ಬಲಭಾಗಗಳು, ಬೆನ್ನ ಹಿಂದೆ, ನಾಭಿಯ ಮೇಲೆ ಎರಡೂ ತುದಿಗಳನ್ನು ಸಿಕ್ಕಿಸಿಕೊಳ್ಳುವುದು. ಹೀಗೆ ಪಂಚಕಚ್ಚೆ.

**ಕುಕ್ಷಿದ್ವಯೇ ತಥಾ ಪೃಷ್ಠೇ ನಾಭೌ ದ್ವೌ ಪರಿಕೀರ್ತಿತಂ ।**
**ಪಂಚಕಚ್ಚಾಸ್ತು ತೇ ಪ್ರೋಕ್ತಾಃ ಸರ್ವಕರ್ಮಸು ಪಾವನಾಃ ॥**

ಕಚ್ಚೆಯಿಲ್ಲದೆ, ಪುಚ್ಛಕಚ್ಚೆಯಿಂದಲಾಗಲೀ ಮಾಡಿದ ಕರ್ಮಗಳು ಜಾರಿ ಹೋಗುತ್ತವೆ. ರಾಕ್ಷಸರ ಪಾಲಾಗುತ್ತದೆ.

- **ಕಚ್ಚೆ ಎಂಬ ಶಬ್ದ ಹೇಗೆ ಬಂದಿದೆ?**

ಸಂಸ್ಕೃತದಲ್ಲಿ ಕಚ್ಛಾ, ಕಚ್ಛೋಟಿಕಾ ಇತ್ಯಾದಿ ಪದಗಳಿವೆ ಎಂದು ಹೇಮಚಂದ್ರಕೋಶ ಹೇಳಿದೆ. ***"ಕಚ್ಛಾಸ್ಯಾತ್ ಪರಿಧಾನಾಂಚಲೇ ಸ್ತ್ರೀ"*** ಈ ಶಬ್ದವು ಧರಿಸುವ ವಸ್ತ್ರದ ತುದಿ ಎಂಬರ್ಥ ನೀಡುತ್ತದೆ. ವಸ್ತ್ರದ ಎರಡೂ ತುದಿಗಳಿಂದ ನೋಡುವವರಿಗೆ ಮನೋವ್ಯಾಕುಲತೆಯಾಗದಂತೆ ಗುಪ್ತಾಂಗ ರಕ್ಷಣೆಯೇ ಮುಖ್ಯಾರ್ಥ.

- **ಕಾಚಾ ಧರಿಸಿ ಕರ್ಮ ಮಾಡಬಹುದಲ್ಲ?**

ಕಾಚಾ ಎಂಬ ಶಬ್ದವು ಕಚ್ಛಾ, ಕಚ್ಛೋಟಿಕಾ ಶಬ್ದಗಳಿಂದಲೇ ಬಂದಿರುವುದಾರೂ, 'ಒಳಗೆ ಒಂದು ವಸ್ತ್ರ, ಹೊರಗಿನಿಂದ ಮತ್ತೊಂದು ವಸ್ತ್ರ ಧರಿಸುವುದು 'ದ್ವಿಕಚ್ಛ'ವೆನಿಸಿದ್ದು, ಈ ರೀತಿ ದ್ವಿಕಚ್ಛನಾಗಿ ಕರ್ಮ ಮಾಡುವುದು 'ಶೂದ್ರನ ಕೆಲಸ' ಎಂದಿದೆ.

**ಅಕಚ್ಛಃ ಪುಚ್ಛಕಚ್ಛೋ ವಾ ದ್ವಿಕಚ್ಛಃ ಕಟಿಸೂತ್ರಕಃ ।**
**ದ್ವಿಶಿಖೋ ವಿಶಿಖಶ್ಚೈವ ಶೂದ್ರ ಏವ ನ ಸಂಶಯಃ ॥** –ಸ್ಮೃತಿರತ್ನ

- ***ಒದ್ದೆ ಬಟ್ಟೆ :***

- **ಒದ್ದೆ ಬಟ್ಟೆ ಧರಿಸಿ ಕರ್ಮವನ್ನು ಸ್ತ್ರೀಯರು ಮಾಡಬಾರದು?**

ಒದ್ದೆ ಬಟ್ಟೆಯಲ್ಲಿ ಕಲಿಯು ವಾಸಿಸುವುದರಿಂದ 'ಕುವಾಸ' ಎನ್ನಲಾಗಿದೆ. ***'ಕುತ್ಸಿತಸ್ಯ ಕಲೇಃ ವಾಸ ಯತ್ರ'.***

ಇದರಿಂದಾಗಿ ಒದ್ದೆ ಬಟ್ಟೆಯನ್ನು ಅಮಂಗಲ ಎನ್ನಲಾಗಿದೆ.

**ಅಮಂಗಲಾನಿ ಸರ್ವಾಣಿ ಆರ್ದ್ರವಸ್ತ್ರಾಣಿ ಯಾನಿ ಚ ।**

**ತಸ್ಮಾನ್ನ ಧಾರಯನ್ನಾರ್ದ್ರಂ ಕರ್ಮ ಕುರ್ಯಾದ್ ವಿಚಕ್ಷಣಃ ॥**

ತ್ಯಾಜ್ಯ ವಸ್ತುವನ್ನು ಹೇಳುವಾಗ **"ಜಲಾರ್ದ್ರಂ"** ಎಂದು ಒದ್ದೆ ಬಟ್ಟೆಯನ್ನೂ ಬಿಡಲಾಗಿದೆ.

**ದಶಾಹೀನಂ ಜಲಾರ್ದ್ರಂಚ ವರ್ಜಯೇದಂಬರಂ ಬುಧಃ ॥** – ಭೃಗು

ಆರ್ದ್ರವಸ್ತ್ರವನ್ನುಟ್ಟ ನಾರಿಯು ಮಂಥರೆಯೇ ಸರಿ.

**ಆರ್ದ್ರಾಂಬರಧರಾ ನಾರೀ ಅಲಕ್ಷ್ಮೀ ನಾತ್ರ ಸಂಶಯಃ ॥** – *ಭೃಗು*

- **ಒಣಗಿರುವ ವಸ್ತ್ರವಿಲ್ಲದಿದ್ದಲ್ಲಿ ಕರ್ಮ ಹೇಗೆ?**

ಒಣಗಿರುವ ವಸ್ತ್ರವಿಲ್ಲದಿರುವಾಗ ವಸ್ತ್ರವನ್ನು ಏಳು ಬಾರಿ ಝಾಡಿಸಿದರೆ ಒಣಗಿರುವ ವಸ್ತ್ರದಂತೆ ಆಗುತ್ತದೆ.

**ಸಪ್ತವಾತಾಹತಂ ವಸ್ತ್ರಂ ಶುಷ್ಕವತ್ ಪ್ರತಿಪಾದಿತಮ್ ।**
**ಆರ್ದ್ರಂ ಚಾಪಿ ದ್ವಿಜಾತೀನಾಂ ಆದೃತಂ ॥** – *ಗೌತಮರು*

- **ಕುಪ್ಪಸ ಮಲಿನವೋ – ಮಡಿಯೋ?**

ಕುಪ್ಪಸವನ್ನು ಕತ್ತರಿಸಿ ಯಂತ್ರದಲ್ಲಿ ಹೊಲಿಯುವುದರಿಂದ ವಸ್ತುತಃ ಮೈಲಿಗೆಯೆನಿಸಿದ್ದರೂ, ಕುಪ್ಪಸ ಧಾರಣೆ ಶಾಸ್ತ್ರ ವಿಹಿತವಾದ್ದರಿಂದ, ಅದನ್ನು ಧಾರಣೆಯ ಮೊದಲು ನೀರಿನಿಂದ ಪ್ರೋಕ್ಷಿಸಲು ವಿಧಿಸಿದೆ.

**ನ ಸ್ಯೂತೇನ ನ ದಗ್ಧೇನ ಪಾರಕ್ಯೇಣ ವಿಶೇಷತಃ ।**
**ಮೂಷಿಕೋತ್ಕೀರ್ಣ ಜೀರ್ಣೇನ ಕರ್ಮ ಕುರ್ಯಾದ್ ವಿಚಕ್ಷಣಃ ॥**
**"ಯಂತ್ರ ನಿರ್ಮುಕ್ತ – ನೂತನ ವಾಸಸಾಂ ಪ್ರೋಕ್ಷಣಾದ್ ಶುದ್ಧಿಃ"**

- ***ಕುಪ್ಪಸ :***

ಕಂಚುಕವೆಂದು ಕರೆಯಲಾಗಿರುವ ಕುಪ್ಪಸವು ಸ್ತ್ರೀಯರಿಗೆ ಅತಿಮಂಗಳಕರ–ವಾದದ್ದು. ಇದು ಹೊಲಿದಿದ್ದರೂ, ಕತ್ತರಿಸಿದ್ದರೂ ದೋಷಾದಾಯಕ–ವಾಗುವುದಿಲ್ಲ. ಆದರೆ ಈ ಕತ್ತರಿಸಿ ಹೊಲಿದ ಕುಪ್ಪಸದ ಮುಂಭಾಗದಲ್ಲಿ ಗಂಟು ಹಾಕಿದ್ದು ಅದಕ್ಕೆ ಅರಿಷಿಣ–ಕುಂಕುಮ ಹಚ್ಚಿದ್ದರೆ ಮಾತ್ರ ದುರ್ಗಾ ಸನ್ನಿಧಾನವುಂಟಾಗಿ ಧರಿಸಲು ಯೋಗ್ಯವಾಗುತ್ತದೆ. ಆದರೆ ಇತ್ತೀಚಿನ ದಿವಸಗಳಲ್ಲಿ ಬೆನ್ನ ಹಿಂದಿನಿಂದ ತೆಗೆಯುವ ಪದ್ಧತಿಯಿದ್ದು ಪ್ರತಿಯೊಬ್ಬರ ಹಿಂದಿನ ಬೆನ್ನಿನಲ್ಲಿ ಕಲಿಯು ವಾಸಿಸುತ್ತಿದ್ದು ಅವನ ಪತ್ನಿಯೇ ಇರುವಳು. ಹಿಂದಿನಿಂದ ತೆಗೆಯುವುದರಿಂದ ಅವರಿಬ್ಬರ ಪ್ರಭಾವಕ್ಕೆ ಒಳಗಾಗಿ ಗಂಡಹೆಂಡಂದಿರ ಜಗಳಕ್ಕೆ ಕಾರಣರಾಗುವರು.

ತೀರ್ಥ ಕಾಲದಲ್ಲಿ ಮುತ್ತೈದೆ ಸ್ತ್ರೀಯರಿಗೆ ತುಲಸ್ಯಾದಿಗಳು ಬಂದಾಗ

ಭಗವಂತನ ಪ್ರಸಾದವೆಂದು ಸ್ವೀಕರಿಸಿ ಭಕ್ತಿಯಿಂದ ಧರಿಸಬೇಕು. ತುಲಸಿಯನ್ನಾದರೂ ಕುಪ್ಪಸದ ಗಂಟಿನಲ್ಲಿಡಬೇಕು. ಇದರಿಂದ ಪರಪುರುಷರು ಎದೆಯನ್ನು ನೋಡಿದ ಪಾಪಹರಿತವಾಗುವುದು. ಇದನ್ನು ದೂಷಿಸಬಾರದು.

***–ಸ್ಕಾಂದಪುರಾಣ – ಕಾಶೀಖಂಡ–27***

ಪತಿವ್ರತೆಯು, ಅರಿಷಿಣ–ಕುಂಕುಮ, ಸಿಂಧೂರ, ಕಾಡಿಗೆ ಕುಪ್ಪಸ–ತಾಂಬೂಲ, ಮಾಂಗಲ್ಯ ಕೇಶ ಸಂಸ್ಕಾರ, ಕೂದಲು, ಜಡೆ, ಕೈ ಹಾಗೂ ಕಿವಿಯ ಆಭರಣಗಳಾದ ಬಳೆ ಮತ್ತು ಕಿವಿಯೋಲೆಗಳನ್ನು ದೂಷಿಸಬಾರದು.

**ಹರಿದ್ರಾ ಕುಂಕುಮಂ ಚೈವ ಸಿಂಧೂರಂ ಕಜ್ಜಲಂ ತಥಾ ।**
**ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಂ ಶುಭಂ ॥**
**ಕೇಶಸಂಸ್ಕಾರ ಕಬರೀ ಕರ–ಕರ್ಣವಿಭೂಷಣಂ ।**
**ಭರ್ತ್ಯುರಾಯುಷ್ಯಮಿಚ್ಛಂತೀ ದೂಷಯೇನ್ನ ಪತಿವ್ರತಾ ॥**

- ***ಕಾಡಿಗೆ :***

ಕಾಡಿಗೆಯನ್ನು ಅಂಜನವೆಂದು, ಕಜ್ಜಲವೆಂದು ಕರೆಯಲಾಗಿದೆ. ಕಜ್ಜಲವೆಂದರೆ ***"ಕುತ್ಸಿತಂ ಜಲಂ ಅಚ್"*** ಎಂಬಂತೆ ಕಣ್ಣಿನಲ್ಲಿರುವ ಕೊಳೆಯನ್ನು ತೆಗೆದುಬಿಡುವ ವಸ್ತು ಎಂದರ್ಥ. ಅಂಜನವೆಂದರೂ ***ಅನಕ್ತಿ ನೇತ್ರ ದೋಷಂ*** ಇತಿ ಎಂಬಂತೆ ನೇತ್ರ ದೋಷಗಳನ್ನು ಪರಿಹರಿಸುವ ಸಾಧನ.

ಸ್ತ್ರೀಯರ ರಕ್ಷಣ ಮಾಡುವ ಸಾಧನಗಳಲ್ಲಿ ಕಾಡಿಗೆಯೂ ಒಂದಾಗಿದೆ. ಕಾಡಿಗೆಯು ದುರ್ಗಾದೇವಿಯ ಸನ್ನಿಧಾನವುಳ್ಳದ್ದಾಗಿದ್ದು ಪರಪುರುಷರ ದರ್ಶನದಿಂದಾಗುವ ದೋಷವನ್ನು ಪರಿಹರಿಸುತ್ತಾಳೆ.

**ಕಂಕಣಂ ಕಾಚಮಣಯಃ ಕಜ್ಜಲಂ ಕಂಕಣಂ ತಥಾ ।**
**ಪಾದಾಂಗುಲೀಯಕಂ ಚೇತಿ ಸ್ತ್ರೀಣಾಂ ರಕ್ಷಣ ಪಂಚಕಂ ॥**

ಕುಂಕುಮ, ಕಾಡಿಗೆ, ಕರಿಮಣಿ, ಕಂಕಣ, ಕಂಠಭೂಷಣ ಈ ಐದು ಕಕಾರರಹಿತಳಾದವಳು ವಿಧವೆಯೇ ಸರಿ.

**ಕುಂಕುಮಂ ಕಜ್ಜಲಂ ಕಾಚಂ ಕಂಕಣಂ ಕಂಠಭೂಷಣಂ ।**
**ಕಕಾರಪಂಚಭಿರ್ಹೀನಾ ನೈವ ಸ್ತ್ರೀ ವಿಧವಾ ಸ್ಮೃತಾ ॥**

**ಕಾಡಿಗೆಯಲ್ಲಿರುವ ವಿಧಗಳು –**

ಕಾಡಿಗೆಯು ಆರು ವಿಧದಲ್ಲಿ ಸಿಗುತ್ತದೆ. ಸೌವೀರ, ಜಾಂಬಲ, ತುತ್ಥ, ಮಯೂರ ಶ್ರೀಕರ, ದರ್ವಿಕಾ, ನೀಲಮೇಘ ಎಂದು.

**ಸೌವೀರಂ ಜಾಂಬಲಂ ತುತ್ಥಂ ಮಯೂರಶ್ರೀಕರಂ ತಥಾ ।**
**ದರ್ವಿಕಾ ನೀಲಮೇಘಂ ಚ ಅಂಜನಾನಿ ಭವಂತಿ ಷಟ್ ॥**

ನೀರಿನಂತೆ ಹರಿಯುವ ಸ್ವಭಾವವಿರುವ ಕಾಡಿಗೆಯು ಸೌವೀರವೆನಿಸಿದೆ. ಗಟ್ಟಿಯಾಗಿರುವ ಕಾಡಿಗೆಯನ್ನು ಜಾಂಬಲವೆಂದು ಕರೆಯಲಾಗಿದೆ.

**ಕಾಡಿಗೆ ತಯಾರಿಸುವ ವಿಧಾನ –**

ಕಾಡಿಗೆಯನ್ನು ಶಾಸ್ತ್ರೀಯ ಕ್ರಮದಲ್ಲಿ ತಯಾರಿಸಿದಾಗ ಮಾತ್ರ ದುರ್ಗೆಯು ಸನ್ನಿಹಿತಳಾಗುವಳು. ತಯಾರಿಸಿದ ನಂತರ ದೇವಿಗೆ ಹಾಗೂ ಮುತ್ತೈದೆಯರಿಗೆ ನೀಡಿ ನಂತರ ತಾನೂ ಧರಿಸಬೇಕು.

**ಪ್ರದದ್ಯಾತ್ ಸರ್ವದೇವೇಭ್ಯಃ ದೇವೀಭ್ಯಾಶ್ಚಾಪಿ ಪುತ್ರಕ ।**

ಕಾಡಿಗೆಯನ್ನು ವಿಧವೆಯರು ತಯಾರಿಸಬಾರದು. ವಿಧವೆಯರು ಮಾಡಿದ ಕಾಡಿಗೆಯನ್ನು ದೇವತೆಗಳು ಸ್ವೀಕರಿಸುವುದಿಲ್ಲ.

**ವಿಧವಾ ನಾಂಜನಂ ಕುರ್ಯಾತ್ ದೇವೇಭ್ಯೋ ದರ್ವಿಕಾಂಜನಂ ।**
**ನಾದತ್ತೆ ತ್ವಂಜನಂ ದೇವಿ ವೈಷ್ಣವೀ ವಿಧವಾ ಕೃತಮ್ ॥**
*– ಕಾಲಿಕಪುರಾಣ–67*

ತಾಮ್ರದ ಪಾತ್ರೆಯಲ್ಲಿ ಶುದ್ಧವಾದ ನೀರನ್ನು ತುಂಬಿ ಹರಳೆಣ್ಣೆಯ ದೀಪವನ್ನು ಜೋರಾಗಿ ಉರಿಸಬೇಕು. ಆ ದೀಪದ ಕರಿಯು (ಕಪ್ಪು) ತಾಮ್ರದ ಪಾತ್ರೆಯ ಬುಡಕ್ಕೆ ಸಂಗ್ರಹವಾಗುವಂತೆ ಇಡಬೇಕು. ತುಪ್ಪದ ದೀಪವಾದರೂ ಪರವಾಗಿಲ್ಲ. ಒಂದು ದಿವಸ ಪೂರ್ತಿ ಕಪ್ಪು ಸಂಗ್ರಹವಾದ ಮೇಲೆ ಅದರ ಮೇಲೆ ***"ಶ್ರೀಂ ದುಂ ದುರ್ಗಾಯೈ ನಮಃ"*** ಎಂದು ಬರೆದು ಆನಂತರ ಅದನ್ನು ಕೆರೆದು ತೆಗೆಯಬೇಕು. ಆ ಕಪ್ಪಿಗೆ ಬೆಣ್ಣೆ, ಸ್ವಲ್ಪ ಪಚ್ಚಕರ್ಪೂರವನ್ನೂ ಸೇರಿಸಿ ಮಿಶ್ರಣ ಮಾಡಿ ಸಣ್ಣ ಸಣ್ಣ ಉಂಡೆಗಳನ್ನು ತಯಾರಿಸಬೇಕು. ನಂದ್ಯಾವರ್ತ ಪುಷ್ಪವನ್ನು ಸಂಗ್ರಹಿಸಿ ಅದರ ರಸವನ್ನು ತೆಗೆದು ಇದರೊಂದಿಗೆ ಸೇರಿಸಬೇಕು.

- ***ಸಂವತ್ಸರ ಕಜ್ಜಲ ವ್ರತ :***

ಹೀಗೆ ಕಾಡಿಗೆಯನ್ನು ತಯಾರಿಸಿ ಅದನ್ನು ಶಕ್ತಿ ಇದ್ದರೆ ಸಣ್ಣ ಸಣ್ಣ ಬೆಳ್ಳಿ ಬಟ್ಟಲುಗಳಲ್ಲಿ ಹಾಕಿ, 360 ಉಂಡೆಗಳನ್ನು ಬಟ್ಟಲು ಅಥವಾ ವಿಳೆದೆಲೆಗಳಲ್ಲಿ ಹಾಕಿ ಪ್ರತಿದಿವಸವೂ ಅರಿಷಿಣ-ಕುಂಕುಮಗಳೊಂದಿಗೆ ಒಂದೊಂದು ಉಂಡೆಯಿರುವ ಬಟ್ಟಲುಗಳನ್ನು ದಾನ ಮಾಡಬೇಕು. ಇದೇ "ಸಂವತ್ಸರ ಕಜ್ಜಲ ವ್ರತ". ಈ ವ್ರತದಿಂದ ನೇತ್ರದೋಷರಹಿತರಾಗಿ ಭಗವಂತನನ್ನೇ ನೋಡುವ ಭಾಗ್ಯ ಲಭಿಸುವುದು. ಜನ್ಮ ಜನ್ಮಾಂತರದಲ್ಲೂ ಮುತ್ತೈದೆ ಭಾಗ್ಯ ಲಭಿಸುವುದು.

**ಘೃತತೈಲಾದಿಯೋಗೇನ ತಾಮ್ರಾದೌ ದೀಪವಹ್ನಿನಾ ।**
**ಯದಂಜನಂ ಜಾಯತೇ ತು ದರ್ವಿಕಾ ಪರಿಕೀರ್ತಿತಾ ॥**

- ***ಗೋಪೀಚಂದನ :***

ದ್ವಾರಕೆಯಲ್ಲಿರುವ ಗೋಪೀತೀರ್ಥದಿಂದ ತಂದಿರುವ ಗಂಧದಂತೆ ಸುಗಂಧವಿರುವ ಮೃತ್ತಿಕೆಗೆ 'ಗೋಪೀಚಂದನ' ಎನ್ನಲಾಗಿದೆ. ಸ್ತ್ರೀಯರು ಗೋಪಿಚಂದನ ಧರಿಸದೆ ಕುಂಕುಮವನ್ನು ಧರಿಸಬಾರದು.

***ಗೋಪೀಚಂದನದ ಅವಶ್ಯಕತೆ –***

ಊರ್ಧ್ವಪುಂಡ್ರವನ್ನು ಧರಿಸದೆ ಸಮಸ್ತ ದೇವತಾ ಕಾರ್ಯಗಳು ರಾಕ್ಷಸರಿಂದ ಅಪಹೃತವಾಗುತ್ತದೆ.

**ಊರ್ಧ್ವಪುಂಡ್ರವಿಹೀನಸ್ತು ಕರ್ಮ ಯತ್ಕಿಂಚಿದಾಚರೇತ್ ।**
**ತತ್ಸರ್ವಂ ರಾಕ್ಷೈರ್ನೀತಂ ಜಪಹೋಮಾದಿಕಂ ತಥಾ ॥**

ಊರ್ಧ್ವಪುಂಡ್ರ ವಿಲ್ಲದವಳ ಮುಖವನ್ನು ನೋಡಿದ ಮಾತ್ರಕ್ಕೆ ಆದಿತ್ಯನನ್ನು ನೋಡಬೇಕು.

ಊರ್ಧ್ವಪುಂಡ್ರವಿಲ್ಲದೆ ಮಾಡಿದ ಅಡಿಗೆಯೂ ನೈವೇದ್ಯಕ್ಕೆ ಬರುವುದಿಲ್ಲ.

ಗೋಪಿಚಂದನವನ್ನು ಧರಿಸಿರುವವಳ(ನ) ಮನೆಯಲ್ಲಿ ನಾರಾಯಣನು ಲಕ್ಷ್ಮೀಸಹಿತ ವಾಸಿಸುವನು.

ಗೋಪಿಚಂದನ ಧರಿಸಿ ಮಾಡುವ ದೇವತಾ ಕಾರ್ಯಗಳು ಕೋಟಿ ಪಟ್ಟು ಫಲ ನೀಡುತ್ತದೆ.

ಕಲಿಯ ಸನ್ನಿಧಾನದಿಂದುಂಟಾಗುವ ಸಮಸ್ತ ದೋಷಗಳನ್ನೂ ಪರಿಹರಿಸುತ್ತದೆ.

ಗೋಪೀಚಂದನವೆಂದರೆ ಶ್ರೀಕೃಷ್ಣನು ಗೋಪಿಕಾ ಸ್ತ್ರೀಯರಿಂದ ಲೇಪಿಸಲ್ಪಟ್ಟ ಗಂಧವನ್ನು ದ್ವಾದಶನಾಮಗಳಿಂದ ಧರಿಸಬೇಕು.

ಗೋಪೀಚಂದನವನ್ನು ಸ್ತ್ರೀಯರು ಹಣೆಗೆ ಮಾತ್ರ ಧರಿಸಬೇಕು. ಬ್ರಾಹ್ಮಣನಿಗೆ ದ್ವಾದಶ, ಕ್ಷತ್ರಿಯನಿಗೆ ಎಂಟು, ವೈಶ್ಯನಿಗೆ ಆರು, ಸ್ತ್ರೀಶೂದ್ರಾದಿಗಳಿಗೆ ಹಣೆಯಲ್ಲಿ ಒಂದು ಮಾತ್ರ. ಇದನ್ನು ಕಂಠಸ್ನಾನಾನಂತರ ಆಚಮನ ಮಾಡಿ ಊರ್ಧ್ವಪುಂಡ್ರ ಧರಿಸಿ ನಂತರ ಕುಂಕಮದಿಂದ ಊರ್ಧ್ವಪುಂಡ್ರದ ಮೇಲೆ ದೀಪದಂತೆ ಊರ್ಧ್ವಮುಖವಾಗಿ ಧರಿಸಬೇಕು.

**ಆಚಮ್ಯ ಧಾರಯೇದ್ ಊರ್ಧ್ವಂ ಊರ್ಧ್ವಪುಂಡ್ರಂ ಮೃದೈವತು ।**
**ಚಂದನೇನಾಥ ಕಸ್ತೂರ್ಯಾ ಕುಂಕುಮೇನಾಥವಾ ಸತೀ ಹಾರೀತರು॥**

ಊರ್ಧ್ವಪುಂಡ್ರವನ್ನು ಹಣೆಯಲ್ಲಿ ಸ್ತ್ರೀಯರು ಕೋಲಿನ ಹಾಗೆ ಉದ್ದವೂ, ಸುಂದರವೂ, ಮಧ್ಯದಲ್ಲಿ ರಂಧ್ರದಿಂದ ಯುಕ್ತವಾಗಿರುವಂತೆ ಧರಿಸಬೇಕು. ಈ ರಂಧ್ರವೇ ಶ್ರೀಕೃಷ್ಣದೇವನ ಮನೆಯೆನಿಸುತ್ತದೆ. ಈ ರಂಧ್ರದ ಮಧ್ಯದಲ್ಲಿ ಅರಿಷಿಣ ಪುಡಿಯಿಂದ ಮೇಲ್ಮುಖವಾದ ರೇಖೆಯನ್ನು ಬರೆಯಬೇಕು. ಆ ರೇಖೆಯೇ ಲಕ್ಷ್ಮೀದೇವಿಯೆಂದು ತಿಳಿಯಬೇಕು.

**ಸಾಂತರಾಲೋರ್ಧ್ವಪುಂಡ್ರಸ್ಯ ಮಧ್ಯೆ ಕೃಷ್ಣಸ್ಯ ಧಾಮನಿ ।**
**ಹರಿದ್ರಾಸಾರಸಂಭೂತಂ ಸ್ತ್ರೀ ಚ ಚೂರ್ಣಂ ಪ್ರದಾರಯೇತ್ ॥**
**ತೇನೋರ್ಧ್ವರೇಖಾಂ ರಚಯೇತ್ ತಾಂ ಶ್ರೀ ಯಂ ಪರಿಚಿಂತಯೇತ್॥**

– *ವಸಿಷ್ಠಸ್ಮೃತಿ*

## ***ಮುತ್ತೈದೆ ಸ್ತ್ರೀಯರಿಗೂ ಕಡ್ಡಾಯ –***

ಗೋಪಿಚಂದನವನ್ನು ಸ್ತ್ರೀಯರೂ ಧರಿಸಲೇಬೇಕು. ಗೋಪಿಚಂದನ ಧರಿಸದೆ ಮಾಡಿದ ಅಡುಗೆಯನ್ನು ತಿನ್ನಲು ಬರುವುದಿಲ್ಲ.

**ಸುವಾಸಿನ್ಯೋಽಪಿ ಬಿಭೃಯುಃ ತಿಲಕೋಪರಿ ಕುಂಕುಮಂ ।**
**ಅನ್ಯಥಾ ಪಾತಕಂ ಪ್ರೋಕ್ತಂ ತತ್ಪಾಕಂ ನಿಷ್ಫಲಂ ಭವೇತ್ ॥**

### *ಗೋಪೀಚಂದನ ತೆಗೆಯುವ ಸ್ಥಳ –*

ಪುರುಷರು ಗೋಪೀಚಂದನವನ್ನು ಎಡಗೈಯಲ್ಲಿ ತೆಗೆಯುವುದು. ಆದರೆ ಮುತ್ತೈದೆ ಸ್ತ್ರೀಯರು ಎಡಗೈಯ ಹೆಬ್ಬೆರಳಿನ ಹಿಂಭಾಗದ ಗಂಟಿನ ಕೆಳಗೆ ತೆಗೆಯುವರು. ಈ ಗಂಟಿನಲ್ಲಿ ಗೌರಿ–ರುದ್ರರಿರುವರು.

**ಸ್ತ್ರೀಣಾಮಂಗುಷ್ಠಪರ್ವೇಷು ಮಾಂಗಲ್ಯಾರ್ಥಂ ತು ಭಾಮಿನಿ ।**
**ಪಾರ್ವತೀ ವಸತೇ ನಿತ್ಯಂ ಪತ್ಯಾ ಸಹ ಶುಭಪ್ರದಾ ॥**

*–ಹಿರಣ್ಯಕೇಶೀ ಸೂತ್ರ*

ಪಾರ್ವತೀ ಪರಮೇಶ್ವರರು ದಾಂಪತ್ಯದಂಪತಿಗಳಾದ್ದರಿಂದ ದಾಂಪತ್ಯಕ್ಕಾಗಿ, ಸುಖಕ್ಕಾಗಿ ವಾಸಿಸುತ್ತಿದ್ದು ಗೋಪೀಚಂದನವನ್ನು ಅಲ್ಲಿ ತೆಗೆದು ಧರಿಸಿದರೆ ಪತಿಗೆ ಅಯುಷ್ಯ ನೀಡಿ ಸೌಭಾಗ್ಯ ನೀಡುವರು. ಇವರು ವಾಸಿಸುತ್ತಿರುವ ಸ್ಥಳದಲ್ಲಿ ಕಲಿಪತ್ನಿಯು ಇರುವುದಿಲ್ಲ.

### *ತೆಗೆಯುವ ಕ್ರಮ –*

ಮುತ್ತೈದೆಯರು ಯಾವಾಗಲೂ ಕುಂಕುಮಾದಿಗಳನ್ನು ಧರಿಸುವಾಗ ಮೊದಲು ಅರಿಷಿಣವನ್ನು ಹಣೆಗೆ ಹಚ್ಚಿಕೊಂಡು ನಂತರ ಕುಂಕುಮವನ್ನು ಹಚ್ಚಿಕೊಳ್ಳಬೇಕು. ಕೇವಲ ಕುಂಕುಮವನ್ನು ಧರಿಸುವ ಪದ್ಧತಿಯಿಲ್ಲ. ಗೋಪೀಚಂದನವನ್ನು ಹಚ್ಚಿದ ಮೇಲೆ ಕುಂಕುಮವನ್ನೂ ಹಚ್ಚ–ಬೇಕಾಗಿರುವುದರಿಂದ ಅರಿಷಿಣವನ್ನೂ ಊರ್ಧ್ವಪುಂಡ್ರದಂತೆ ಧರಿಸಿ ನಂತರ ಕುಂಕುಮ ಹಚ್ಚಬೇಕು. ಇದರ ಬದಲಾಗಿ ಗೋಪೀಚಂದನ ತೆಗೆಯುವ ಮೊದಲೇ ಸ್ವಲ್ಪ ಅರಿಷಿಣವನ್ನು ಸೇರಿಸಿಕೊಂಡೆ ಗೋಪೀಚಂದನವನ್ನು ತೆಗೆಯಬೇಕು. ನಂತರ ಊರ್ಧ್ವಪುಂಡ್ರ ಧರಿಸಿ ಕುಂಕುಮ ಧರಿಸುವುದು ಪದ್ಧತಿಯಲ್ಲಿದೆ.

- ***ಗೋ ಪೂಜೆ :***

ಪ್ರಾಣಿಗಳಲ್ಲಿ ಗೋವಿಗಿಂತ ಅತ್ಯಂತ ಪವಿತ್ರವಾದ ಮತ್ತೊಂದು ಪ್ರಾಣಿ ಇರುವುದಿಲ್ಲ.

**ಗಾವಃ ಪವಿತ್ರಾಃ ಪುಣ್ಯಾಶ್ಚ ಪಾವನಂ ಪರಮಂ ಮಹತ್ ।**

ಗೋವನ್ನು ನಿತ್ಯವೂ ಪೂಜಿಸುವುದರಿಂದ ಕನ್ಯೆಯರು ಸುಂದರ ಯೋಗ್ಯನಾದ ಪತಿಯನ್ನು ಹೊಂದುವರು.

ಗೋವುಗಳು ಗೋಪಾಲಕೃಷ್ಣನಿಗೆ ಅತ್ಯಂತ ಪ್ರಿಯವಾಗಿದ್ದು ಗೋ ಸೇವೆಯಿಂದ ಗೋಪಾಲಕೃಷ್ಣನ ಸೇವೆಯನ್ನು ಸಲ್ಲಿಸಿದಂತಾಗುತ್ತದೆ.

ಗೋವುಗಳು ಭಾರತೀಯರಿಗೆ ತಾಯಿಗಿಂತ ಮಿಗಿಲಾದುದು ಗೋವಿಗಿಂತ ಧರ್ಮಬುದ್ಧಿ ಪ್ರಾಣಿ ಇನ್ನೊಂದಿಲ್ಲ. ನಿಸ್ವಾರ್ಥದ ಮೂರುತಿಯೆಂದರೆ ಗೋವು. ಅವುಗಳ ಋಣ ಪರಿಹಾರವೇ ಗೋಪೂಜೆ.

ಗೋವಿನಲ್ಲಿ ಸಮಸ್ತ ದೇವತೆಗಳೂ ಸನ್ನಿಹಿತರಾಗಿರುವರು. ಗೋವಿನ ಸೆಗಣಿಯಲ್ಲಿ ಸಾಕ್ಷಾತ್ ಲಕ್ಷ್ಮೀಯೇ ಸನ್ನಿಹಿತಳಾಗಿರುವಳು.

**ಹೃಷ್ಟಾಪುಷ್ಟಾ ಮಹಾಲಕ್ಷ್ಮೀ ಗೋಮಯೆ ಸಂಸ್ಥಿತಾ ಸದಾ ।**

ಗೋಮೂತ್ರದಲ್ಲಾದರೂ ಸಾಕ್ಷಾತ್ ಗಂಗೆಯೇ ಇರುವಳು.

**ಮಾತಾರುದ್ರಾಣಾಂ ದುಹಿತಾ ವಸೂನಾಂ ಸ್ವಸಾ ಆದಿತ್ಯಾನಾಂ ಅಮೃತಸ್ಯ ನಾಭಿಃ ॥** –*ಋಗ್ವೇದ*

ಗೋವಿಗೆ ಮಾತೆಯ ಸ್ಥಾನ ನೀಡಿರುವುದು ವೇದದಲ್ಲಿ ಕಂಡು ಬಂದಿದೆ.

**ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿದಾಕೃತಂ ।**
**ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ॥**

ಬ್ರಾಹ್ಮಣ ಹಾಗೂ ಗೋವಿನ ಮೂಲ ಒಂದೇ ಆಗಿದ್ದು ಮುಂದೆ ಬ್ರಹ್ಮದೇವರು ಬ್ರಾಹ್ಮಣ, ಧೇನು ಎಂದು ಎರಡು ಕುಲವನ್ನಾಗಿ ಮಾಡಿದರಂತೆ, ಇದರಿಂದ ಒಂದರಲ್ಲಿ ಮಂತ್ರಗಳನ್ನು ಇನ್ನೊಂದರಲ್ಲಿ ಹವಿಸ್ಸನ್ನು ಇಟ್ಟನಂತೆ.

ಬ್ರಾಹ್ಮಣ ಪೂಜೆ, ಅಗ್ನಿಪೂಜೆ, ನವನೀತ ಪೂಜೆ, ಜಲ ಪೂಜೆ ಮೊದಲಾದ ಏಳು ಪೂಜೆಗಳಲ್ಲಿ ನವನೀತ ಪೂಜೆಯೇ ಗೋ ಪೂಜೆ. ಈ ಪೂಜೆಗಳಿಂದ ಆಯುರಾರೋಗ್ಯ ಪ್ರಾಪ್ತವಾಗುತ್ತದೆ.

### *ಗೋ ಸ್ತೋತ್ರ –*

**ಸದಾ ಗಾವಃ ಪ್ರಣಮ್ಯಾಸ್ತು ಮಂತ್ರೇಣಾನೇನ ಪಾರ್ಥಿವ**
**ನಮೋಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವ ಚ ।**

**ನಮೋ ಬ್ರಹ್ಮ ಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ।**
**ಮಂತ್ರಸ್ಯ ಸ್ಮರಣಾದೇವ ಗೋದಾನ ಫಲಮಾಪ್ನುಯುಃ ॥**

***ಪಂಚಗವ್ಯ :***

ಗೋವಿನ ಸಗಣಿ, ಗಂಜಲ, ಹಾಲು, ಮೊಸರು, ಬೆಣ್ಣೆಗಳ ಸಂಯೋಗದಿಂದ ಪಂಚಗವ್ಯವಾಗುತ್ತದೆ. ಇದನ್ನು ಪ್ರಾಶನ ಮಾಡಿದರೆ ಪಾಪ ಪರಿಹಾರ.

ಗೋವಿಗೆ ಅಂಕಿತ ನೀಡಲೆಂದೆ ಶ್ರೀಕೃಷ್ಣನು ಗೋಪಾಲಕನಾದನು.

***ಗೋಗ್ರಾಸ :***

ಪ್ರತಿದಿನವು ಗೋಗ್ರಾಸಕ್ಕಾಗಿ ಅನ್ನ, ಹಿಂಡಿ, ಬೂಸ ಮೊದಲಾದವುಗಳನ್ನು ಗವಾಂತರ್ಯಾಮಿ ಗೋಪಾಲಕೃಷ್ಣನ ಪ್ರೀತಿಗಾಗಿ ಇಡಬೇಕು. ಗೋಗ್ರಾಸಕ್ಕೆ ವಿಶೇಷ ಫಲವೆಂದರೆ ನೂರು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಿದಂತೆಯೇ ಸರಿ.

**ಗೋಗ್ರಾಸಸ್ಯ ವಿಶೇಷೋಽಸ್ತಿ ಹಸ್ತ ಸಂಪೂರ್ಣ ಮಾತ್ರತಃ ।**
**ಶತ ಬ್ರಾಹ್ಮಣ ಭುಕ್ತೇನ ಸಮಮಾಹುಃ ಯುಧಿಷ್ಠಿರ ॥**

***ಗೋಗ್ರಾಸ ಮಂತ್ರ :***

**ಸುರಭಿಸ್ತ್ವಂ ಜಗನ್ಮಾತಃ ದೇವಿ ವಿಷ್ಣುಪದೇ ಸ್ಥಿತಾ ।**
**ಸರ್ವದೇವಮಯೀ ಗ್ರಾಸಂ ಮಯಾ ದತ್ತಮಿಮಂ ಗ್ರಸ ॥**

ಸ್ತ್ರೀಯು ಪ್ರತಿದಿವಸದಲ್ಲೂ ಗೋಗ್ರಾಸ ನೀಡಬೇಕು. ಇದರಿಂದ ಸಮಸ್ತ ತೀರ್ಥಗಳಲ್ಲಿ ಸ್ನಾನ, ದಾನ, ಬ್ರಾಹ್ಮಣರ ಭೋಜನದಿಂದ ಬರುವ ಪುಣ್ಯವು. ಸಂಪೂರ್ಣ ಉಪವಾಸಾದಿ ವ್ರತಗಳು, ಶ್ರೀಹರಿ ಸೇವೆ ಭೂಪ್ರದಕ್ಷಿಣೆ, ವೇದಾಧ್ಯಯನ, ಸಮಸ್ತ ಯಜ್ಞಗಳ ಫಲವು ಗೋಗ್ರಾಸದಿಂದ ಲಭಿಸುತ್ತದೆ.

ಗೋವಿನಿಂದ, ಬ್ರಾಹ್ಮಣ, ವೇದ, ಪತಿವ್ರತೆ, ಸತ್ಯವಾದಿ, ತೃಪ್ತಿ, ದಾನಿ ಈ ಏಳರಿಂದ ಭೂಮಿಯು ಧರಿಸಲ್ಪಟ್ಟಿದೆ.

***ಗೋಪೂಜೆ :***

ಪತಿವ್ರತೆಯು ತನ್ನ ಮನೆಯಲ್ಲಿ ಗೋವನ್ನು ಸಾಕಬೇಕು. ಗೋ ಸೇವೆಯೆಂದರೆ

33 ಕೋಟಿ ದೇವತಾ ಸೇವೆಯಾಗಿರುತ್ತದೆ. ಬೇರೆಯವರ ಮನೆಯ ಗೋವನ್ನಾದರೂ ಪೂಜಿಸಬೇಕು.

ಗೋವನ್ನು ನೋಡಿ ನಮಸ್ಕರಿಸಬೇಕು. ನಂತರ ಪ್ರದಕ್ಷಿಣೆ ಮಾಡಿದರೆ ಸಪ್ತದ್ವೀಪಸಹಿತ ಭೂಮಂಡಲ ಪ್ರದಕ್ಷಿಣೆಯ ಫಲ ಲಭಿಸುತ್ತದೆ.

**ಗವಾಂ ದೃಷ್ಟ್ವಾ ನಮಸ್ಕೃತ್ಯ ಕೃತ್ವಾ ಚೈವ ಪ್ರದಕ್ಷಿಣಮ್ ।**
**ಪ್ರದಕ್ಷಿಣೀ ಕೃತಾ ತೇನ ಸಪ್ತದ್ವೀಪಾ ವಸುಂಧರಾ ॥**

ನಿತ್ಯವೂ ಗೋಪೂಜೆ ಅವಶ್ಯಕವಾದ್ದರಿಂದಲೇ ಗೌರೀಪೆಟ್ಟಿಗೆಯಲ್ಲಿ ಸವತ್ಸ ಗೋವನ್ನು ಪೂಜಿಸುವ ಪದ್ಧತಿಯಿದೆ.

### *ಹಸುವಿನ ಯಾವ ವಸ್ತುವೂ ವ್ಯರ್ಥವಾಗಿಲ್ಲ –*

**ಪಯಸಾ ಹವಿಷಾ ದಧ್ನಾ ಶಕೃತಾಪ್ಯಥ ಚರ್ಮಣಾ ।**
**ಅಸ್ಥಿಭಿಶ್ಚೋಪಕುರ್ವಂತಿ ಬಾಲೈಃ ಶೃಂಗೈಶ್ಚ ಭಾರತ ॥**
**ಗೋಭಿರ್ವೇದೈಶ್ಚ ವಿಪ್ರೈಶ್ಚ ಸತೀಭಿಃ ಸತ್ಯವಾದಿಭಿಃ ।**
**ಅಲುಬ್ಧೈಃ ದಾನಶೂರೈಶ್ಚ ಸಪ್ತಭಿಃ ಧಾರ್ಯತೇ ಮಹೀ ॥**
**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।**
**ಪಂಚಗವ್ಯಮಿದಂ ಪ್ರೋಕ್ತಂ ಮಹಾಪಾತಕನಾಶನಂ ॥**

### *ಗೋವುಗಳು ಶ್ರೇಷ್ಠ ಹೇಗೆ ?*

ಮಹಾಭಾರತದಲ್ಲಿ ಅನುಶಾಸನ ಪರ್ವದಲ್ಲಿ ಬಂದಿರುವ ಗೋವಿನ ಶ್ರೇಷ್ಠತೆಗೆ ಬ್ರಹ್ಮದೇವರ ವರವೇ ಕಾರಣವಾಗಿರುವುದು.

ಬ್ರಹ್ಮದೇವನನ್ನು ಕುರಿತು ತಪಸ್ಸನ್ನು ಮಾಡಿ ಪ್ರತ್ಯಕ್ಷೀಕರಿಸಿಕೊಂಡ ಗೋವುಗಳು ಹೀಗೆ ಬ್ರಹ್ಮನನ್ನು ವರ ಬೇಡಿದವು.

"ದಾನಗಳೆಲ್ಲ ಗೋದಾನ ಶ್ರೇಷ್ಠವೆನಿಸಬೇಕು, ಯಾವುದೇ ದೋಷಗಳು ನಮ್ಮಲ್ಲಿ ಇರಬಾರದು. ಗೋಮಯ ಸ್ನಾನದಿಂದ ಸರ್ವರೂ ಪವಿತ್ರ–ರಾಗಬೇಕು. ಹೋಮಾದಿಗಳಲ್ಲೂ ಸ್ಥಳ ಶುದ್ಧಿ, ಮೊದಲಾದ ಪಾವಿತ್ರ್ಯತೆಗಾಗಿ ನಮ್ಮ ಸೆಗಣಿಯನ್ನು ಬಳಸಬೇಕು. ಆದ್ದರಿಂದಲೇ ಬ್ರಹ್ಮನ ವರದಂತೆ ಗೋವುಗಳು ಶ್ರೇಷ್ಠವೆನಿಸಿವೆ."

**ತೀರ್ಥ ಸ್ನಾನೇಷು ಯತ್ಪುಣ್ಯಂ ಯತ್ಪುಣ್ಯಂ ವಿಪ್ರಭೋಜನೇ ।**
**ಸರ್ವವ್ರತೋಪವಾಸೇಷು ಸರ್ವೇಷ್ವೇವ ತಪಸಸು ಚ ।**
**ಯತ್ಪುಣ್ಯಂ ಲಭತೇ ಪ್ರಾಜ್ಞೋ ಗೋಭ್ಯ ದತ್ವಾ ತೃಣಾನಿ ಚ ॥**
**ದಕ್ಷಿಣಾನಾಂ ಚ ಸರ್ವಾಸಾಂ ಲೋಕೇಽಸ್ಮಿನ್ ವಯಮುತ್ತಮಾಃ ।**
**ಭವೇಮ ನ ಚ ಲಿಪ್ಯೇಮ ದೋಷೇಣೇತಿ ಪರಂತಪ ॥**
**ಅಸ್ಮತ್ ಪುರೀಷ ಸ್ನಾನೇನ ಜನಃ ಪೂಯೇತ ಸರ್ವದಾ ।**
**ಶಕೃತಾ ಚ ಪವಿತ್ರಾರ್ಥಂ ಕುರ್ವೀರನ್ ದೇವಮಾನುಷಾಃ ॥**
*–ಮಹಾ. ಅನು. 79, ಅ1 ರಿಂದ 3*

ಗೋವುಗಳಿಂದಲೇ ಅತಿಥಿ, ಶ್ರಾದ್ಧ, ಯಜ್ಞ ನಡೆಯುವುದು. ಹವ್ಯಕವ್ಯಗಳೂ ಗೋವಿನಿಂದಲೇ ಸಿದ್ಧವಾಗುವುದು. ಗೋವುಗಳು ಸರ್ವಾಂಗಗಳಲ್ಲಿಯೂ ಪವಿತ್ರಳು. ಕಾರಣ ಲಕ್ಷ್ಮೀನಾರಾಯಣರ ಹಾಗೂ ಅಂಗ ಪತ್ರ್ಯಂಗಗಳಲ್ಲಿ ಸಮಸ್ತ ದೇವತೆಗಳು ಇರುವರು.

**ಗೋಮಯೇ ವಸತೇ ಲಕ್ಷ್ಮೀಃ ಗೋಮೂತ್ರೇ ಜಾನ್ಹವೀ ಸ್ವಯಂ ।**
**ಹೃಷ್ಟಾಪುಷ್ಟಾ ಮಹಾಲಕ್ಷ್ಮೀಃ ಗೋಮಯೇ ಸಂಸ್ಥಿತಾ ಸದಾ ॥**

ಹಣೆಯಲ್ಲಿ ರುದ್ರದೇವನು, ಗೋಮುಖದಲ್ಲಿ ವೇದಾಭಿಮಾನಿಗಳು, ತಲೆಯಲ್ಲಿ ಬ್ರಹ್ಮದೇವನು, ಕಣ್ಣುಗಳಲ್ಲಿ ಚಂದ್ರಸೂರ್ಯರು, ಹಲ್ಲುಗಳಲ್ಲಿ ಗರುಡದೇವನು, ನಾಲಿಗೆಯಲ್ಲಿ ಸರಸ್ವತೀ, ಅಪಾನದಲ್ಲಿ ಸಮಸ್ತ ತೀರ್ಥಗಳು, ಗೋಮೂತ್ರದಲ್ಲಿ ಗಂಗೆಯೇ ಇರುವಳು.

**ಗಾಂ ಚ ಸ್ಪೃಶತಿ ಯೋ ನಿತ್ಯಂ ಸ್ನಾನೋ ಭವತಿ ನಿತ್ಯಶಃ ।** – *ಪದ್ಮ 50/164*

ಗೋವಿನ ಸ್ಪರ್ಶ ಮಾತ್ರದಿಂದ ಸ್ನಾನ ಮಾಡಿದ ಫಲವನ್ನು ಪಡೆಯಬಹುದಾಗಿದೆ.

**ಗೌಶ್ಚ ಯಸ್ಮಿನ್ ಗೃಹೇ ನಾಸ್ತಿ ತದ್ ಬಂಧುರಹಿತಂ ಗೃಹಂ ।**

ಯಾರ ಮನೆಯಲ್ಲಿ ಗೋವು ಇಲ್ಲವೋ ಆ ಮನೆ ಬಂಧುರಹಿತವಾದ ಗೃಹವೆಂದು, ಗೋವೆ ಬಂಧುವೆಂದು ಪದ್ಮಪುರಾಣ ತಿಳಿಸಿದೆ.

ಗೋ ಹಾಗೂ ಬ್ರಾಹ್ಮಣರ ಮಧ್ಯೆ ಪ್ರವೇಶ ಮಾಡಿದರೆ ಗೋಹತ್ಯೆ ಹಾಗೂ ಬ್ರಹ್ಮಹತ್ಯೆಯನ್ನು ಪಡೆಯುವರು.

ಆಹಾರ, ನೀರು ಕುಡಿಯುತ್ತಿರುವ ಗೋವನ್ನು ಓಡಿಸಿದರೆ ಗೋಹತ್ಯೆ ಬರುವುದು.

ಗೋವಿಗೆ ಎಂಜಲು ಎಲೆಯನ್ನು, ಎಂಜಲನ್ನು ತಿನಿಸಿದರೆ ಗೋಹತ್ಯೆ.

**ಯಾತಿ ಗೋವಿಪ್ರಯೋರ್ಮಧ್ಯೇ ಗೋಹತ್ಯಾಂ ಚ ಲಭೇತ್ತು ಸಃ ।**
**ಆಹಾರಂ ಕುರ್ವತೀಂ ಗಾಂ ಚ ಪಿಬಂತೀ ಯೋ ನಿವಾರಯೇತ್ ।**
**ದದಾತಿ ಗೋಭ್ಯಃ ಉಚ್ಛಿಷ್ಟಂ ತಥಾ ಉಚ್ಛಿಷ್ಟ ಪತ್ರಕಮ್ ॥**
*–ಬ್ರಹ್ಮವೈ–ಪ್ರಕೃತಿ 30/167*

## ಇತರ ಬಲಿಗಳು :

ಗೋಗ್ರಾಸದಂತೆಯೇ ಗೃಹಿಣಿಯು ಶ್ವಾನಬಲಿ, ಕಾಕಬಲಿ, ಪಿಪೀಲಿಕಾ ಬಲಿಗಳನ್ನು ನೀಡಿ ಭಗವಂತನ ಪ್ರೀತಿಗೆ ಪಾತ್ರಳಾಗಬೇಕು.

ಶ್ವಾನಗಳೆಂದರೆ ಯಮನ ಸೇವಕರೂ, ಮೃತ್ಯು ದೇವತೆಯ ಮಕ್ಕಳೂ ಆಗಿರುವ ಶ್ಯಾಮ–ಶಬಲವೆಂಬ ನಾಯಿಗಳು.

ಇವುಗಳಿಗೆ ನೀಡುವ ಬಲಿಯಿಂದ ಸಾರಮೇಯಾದನವೆಂಬ ನರಕದ ದುಃಖವುಂಟಾಗುವುದಿಲ್ಲ.

ವೈಶ್ವದೇವಾನಂತರ ನೀಡುವ ಕಾಕಬಲಿಯಿಂದ ಯಮಧರ್ಮನು ಸಂತುಷ್ಟನಾಗುವನು.

ದ್ವಾದಶಿಯಂದು ದೇವರ ನೈವೇದ್ಯವಾದ ಮೇಲೆ ಅಕ್ಕಿಯನ್ನು ಕುಟ್ಟಿ ಪುಡಿ ಮಾಡಿ ಇರುವೆಗಳಿರುವ ಹುತ್ತಕ್ಕೆ ಅರ್ಪಿಸಬೇಕು.

* * * * * *



# 7. ರಜಸ್ವಲಾ ಧರ್ಮ



### *ರಜಸ್ವಲಾ ಧರ್ಮ :*

ಇಂದ್ರ ದೇವರು ವಿಶ್ವರೂಪಾಚಾರ್ಯರನ್ನು ಸಂಹರಿಸಿದ್ದರಿಂದ ಪ್ರಾಪ್ತವಾದ ಬ್ರಹ್ಮಹತ್ಯೆಯನ್ನು ನಾಲ್ಕು ಭಾಗಗಳಾಗಿ ವಿಭಾಗಿಸಿ ಅದನ್ನು ಸ್ತ್ರೀಯರು, ನದಿಗಳು, ವೃಕ್ಷ ಹಾಗೂ ಭೂಮಿಗಳಲ್ಲಿ ಹಂಚಿದರು.

- ***ಭೂಮಿ :***

ಭೂಮಿಯಾದರೂ ತೋಡಿದ ಹಳ್ಳವು ಕ್ರಮೇಣ ತುಂಬಬೇಕೆಂಬ ವರ ಪಡೆದು ಒಂದು ಭಾಗ ಸ್ವೀಕರಿಸಿದಳು. ಭೂಮಿಯಲ್ಲಿ ಚೌಳು ಭೂಮಿಯು ರಜಸ್ವಲೆಯ ಧರ್ಮವುಳ್ಳದ್ದಾಗಿದ್ದು ಅಲ್ಲಿರುವ ಮಣ್ಣನ್ನು ತೋಡುವುದು, ಶೌಚಕ್ಕಾಗಿ ಉಪಯೋಗಿಸುವುದು ನಿಷಿದ್ಧವಾಗಿದೆ.

- ***ವೃಕ್ಷ :***

ವೃಕ್ಷಗಳಿಂದ ಹೊರಬರುವ ವೃಕ್ಷ ನಿರ್ಯಾಸ (ಅಂಟು ಗೊಂದು) ಇವುಗಳು ರಜಸ್ಸು ಎನಿಸಿದ್ದು ಅದನ್ನು ಮುಟ್ಟುವುದು, ಉಪಯೋಗಿಸುವುದು ನಿಷಿದ್ಧ. ಈ ನಿಯಮ ಕೆಂಪು ಬಣ್ಣದ ಅಂಟು ದ್ರವಕ್ಕೆ ಮಾತ್ರ, ಬಿಳಿ ಬಣ್ಣದ ವೃಕ್ಷ ನಿರ್ಯಾಸಕ್ಕೆ ದೋಷವಿಲ್ಲ. ಆದ್ದರಿಂದಲೇ ಬಿಳಿ ಇಂಗು ವೃಕ್ಷ ನಿರ್ಯಾಸವಾದರೂ ಅಡುಗೆಗೆ ಉಪಯೋಗಿಸುವರು. ಕೆಂಪು ಇಂಗು ಮಾತ್ರ ನಿಷಿದ್ಧವಾಗಿದೆ.

- ***ನದೀ ಸ್ತ್ರೀ ಶುದ್ಧಿ :***

**ಮೃತ್ತೋಯೈಃ ಶುದ್ಧ್ಯತೇ ಶೋಧ್ಯಂ ನದೀ ವೇಗೇನ ಶುದ್ಧ್ಯತಿ ।**
**ರಜಸಾ ಸ್ತ್ರೀಮನೋ ದುಷ್ಟಾ ಸನ್ಯಾಸೇನ ದ್ವಿಜೋತ್ತಮಃ ॥**
**ಮಾತಾ ತಸ್ಯಾಃ ಪಿತಾ ತಸ್ಯಾಃ ಜ್ಯೇಷ್ಠ ಭ್ರಾತಾ ತಥೈವ ಚ ।**
**ತ್ರಯಸ್ತೇ ನರಕಂ ಯಾಂತಿ ದೃಷ್ಟ್ವಾ ಕನ್ಯಾಂ ರಜಸ್ವಲಾಂ ॥** – ಮನುಸ್ಮೃತಿ

ಸಿಂಹ – ಕರ್ಕಾಟಕ ಮಾಸಗಳ ಮಧ್ಯದಲ್ಲಿ ಎಲ್ಲಾ ನದಿಗಳೂ ರಜಸ್ವಲಾ ದೋಷದಿಂದ ಕೂಡಿರುತ್ತವೆ.

**ಸಿಂಹ ಕರ್ಕಟಕಯೋ ಮಧ್ಯೇ ಸರ್ವಾಃನದ್ಯಃ ರಜಸ್ವಲಾಃ ।**

ರಜಸ್ವಲಾ ನಿಯಮವಿರುವಾಗ ನದಿಗಳಲ್ಲಿ ಸ್ನಾನ ಮಾಡಬಾರದು.

ಈ ನಿಯಮವೂ ಕೂಡ ಆ ಕ್ಷೇತ್ರದಲ್ಲಿಯೇ ವಾಸ ಮಾಡುವವರಿಗೆ ಮಾತ್ರ ಬೇರೆ ಕ್ಷೇತ್ರದಿಂದ ಸ್ನಾನ ಮಾಡಲು ಬಂದವರಿಗೆ ಸ್ನಾನ ಮಾಡಲು ಅಡ್ಡಿಯಿಲ್ಲ. ನೇರವಾಗಿ ಸಮುದ್ರಕ್ಕೆ ಸೇರುವ ಮಹಾನದಿಗಳಿಗೆ ರಜಸ್ವಲಾ ನಿಯಮವಿರುವುದಿಲ್ಲ.

- ***ಸ್ತ್ರೀ :***

ಗರ್ಭಧಾರಣೆಯಾದ ಮೇಲೂ ಪತಿಯಿಂದ ಮೊದಲಿನಂತೆಯೇ ಸುಖವನ್ನು ಪಡೆಯುವ ವರವನ್ನು ಪಡೆದು ಸ್ತ್ರೀಯರು ನಾಲ್ಕನೇ ಭಾಗ ಸ್ವೀಕರಿಸಿದರು.

ಇದೊಂದು ದೋಷವೆಂದು ಸ್ತ್ರೀಯರು ಭಾವಿಸಬಾರದು. ಪ್ರತಿದಿನ ಮನೆಯ ಕೆಲಸ ಮಾಡಿ ಬಳಲಿರುವ ಸ್ತ್ರೀಯರಿಗೆ ಈ ಮೂರು ದಿನಗಳಲ್ಲಿ ವಿಶ್ರಾಂತಿಯು ಲಭಿಸಿ ಮುಂದಿನ ಕಾರ್ಯಗಳು ಮಾಡಲು ವಿಶ್ವಾಸವುಂಟಾಗುತ್ತದೆ.

ಇದಲ್ಲದೆ ಸಣ್ಣಪುಟ್ಟ ಪಾಪಗಳೂ, ಅಜ್ಞಾತವಾಗಿ ಮಾಡಿದ ಪಾಪಗಳೂ, ಮನಃಪೂರ್ವಕವಾಗಿ ಮಾಡಿಲ್ಲದ ಪಾಪಗಳೂ ರಜೋ ರೂಪದಿಂದ ಪ್ರತಿ ತಿಂಗಳೂ ಹೋಗುವುದರಿಂದ ಇದೊಂದು ಪಾಪಪರಿಹಾರಕವಾದದ್ದು. ಇದರಿಂದಲೇ ಸ್ತ್ರೀಯರು ಯಾವಾಗಲು ಪವಿತ್ರರೆನಿಸುವರು ಎಂದು ಬೋಧಾಯನರು ಹೇಳಿದ್ದಾರೆ.

**ಸ್ತ್ರಿಯಃ ಪವಿತ್ರಮತುಲಂ ನೈತಾ ದುಷ್ಯಂತಿ ಕರ್ಹಿಚಿತ್ ।**
**ಮಾಸಿ ಮಾಸಿ ರಜೋ ಹ್ಯಾಸಾಂ ದುರಿತಾನ್ಯಪಕರ್ಷತಿ ॥**

ಸ್ತ್ರೀಯು ರಜಸ್ವಲೆಯಾಗಿದ್ದಾಗ ಮೂರು ದಿನಗಳು ಅಸ್ಪೃಶ್ಯಳಾಗಿರುವಳು. ರಜಸ್ವಲೆಯು ಪ್ರಥಮ ದಿವಸದಲ್ಲಿ ಚಂಡಾಲಳಂತೆ ಅತಿಯಾಗಿ ಅಸ್ಪೃಶ್ಯಳಾಗಿರುವಳು. ದ್ವಿತೀಯ ದಿವಸದಲ್ಲಿ ಬ್ರಹ್ಮಹತ್ಯೆ ಮಾಡಿರುವ ಸ್ತ್ರೀಯಂತೆ ಅಸ್ಪೃಶ್ಯಳು. ಮೊದಲ ದಿವಸದಲ್ಲಿ ರಜಸ್ಸು ಹೋಗಿರುವುದರಿಂದ ಮೊದಲ ದಿವಸಕ್ಕಿಂತ ಸಲ್ಪ ಕಡಮೆ ಅಸ್ಪೃಶ್ಯಳು. ಮೂರನೇ ದಿವಸ ಅಗಸಗಿತ್ತಿಯಂತೆ ಅಸ್ಪೃಶ್ಯಳು. ಮೊದಲೆರಡು ದಿವಸಗಳಿಕ್ಕಿಂತ ಸ್ವಲ್ಪ ಶುದ್ಧಿಯಾಗಿರುವಳು.

ಆಪಸ್ತಂಬರು –

**ಪ್ರಥಮೇ ಅಹನಿ ಚಾಂಡಲೀ, ದ್ವಿತೀಯೇ ಬ್ರಹ್ಮಘಾತಿನಿ ।**
**ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿ ಶುದ್ಧ್ಯತಿ ॥**ಎಂದಿದ್ದಾರೆ.

- ***ನಾಲ್ಕನೇ ದಿನ ಶುದ್ಧಿ :***

ಸ್ತ್ರೀಯರು ಮೂರು ದಿನ ಮೈಲಿಗೆ ಎನಿಸಿದ್ದು ನಾಲ್ಕನೇಯ ದಿವಸ ಸ್ನಾನ ಮಾಡಿದ ಮೇಲೆ ಶುದ್ಧರಾಗುವರು. ನಾಲ್ಕನೇ ದಿವಸ ಸೂರ್ಯೋದಯವಾದ ಮೇಲೆ ಅವಳು ಉಟ್ಟಿರುವ ಬಟ್ಟೆ ಸಹಿತವಾಗಿ ಸ್ನಾನ ಮಾಡಬೇಕು. ಸೂರ್ಯೋದಯದ ಮೊದಲು ಸ್ನಾನ ಮಾಡಿದರೆ ಶುದ್ಧಿ ಎನಿಸುವುದಿಲ್ಲ.

**ಸ್ನಾತಾ ಸಾ ತ್ರಿರಾತ್ರಾಂತೇ ಸಚೇಲಮುದಿತೇ ರವೌ ।**
**ವಿಲೋಕ್ಯ ಭರ್ತೃವದನಂ ಶುದ್ಧಾಭವತಿ ಧರ್ಮತಃ ॥**

ನಾಲ್ಕನೇ ದಿವಸ ಸ್ನಾನಾನಂತರ ಪತಿಯ ಮುಖವನ್ನು ನೋಡಿದ ಮೇಲೆ ಪವಿತ್ರಳಾಗುವಳು.

**ಸುಸ್ನಾತಾ ಭರ್ತೃವದನಂ ಪಶ್ಯೇದ್ ಅನ್ಯಸ್ಯ ನ ಕ್ವಚಿತ್ ।**
**ಅಥವಾ ಮನಸಿ ಧ್ಯಾತ್ವಾ ಪತಿಂ ಭಾನುಂ ವಿಲೋಕಯೇತ್ ॥**

– *ಸ್ಕಂಧ ಪುರಾಣ*

ನಾಲ್ಕನೇ ದಿವಸ ಗಂಡನನ್ನು ಬಿಟ್ಟು ಬೇರೆ ಯಾರನ್ನು ನೋಡಬಾರದು. ಗಂಡನು ಮನೆಯಲ್ಲಿ ಇಲ್ಲದಿದ್ದರೆ ಮನಸ್ಸಿನಲ್ಲಿ ಪತಿಯನ್ನು ಧ್ಯಾನಿಸಿ ಸೂರ್ಯನನ್ನು ನೋಡಬೇಕು.

**ಶುದ್ಧಾ ಭರ್ತುಶ್ಚತುರ್ಥೇಽಹ್ನಿ ಸ್ನಾನೇ ಸ್ತ್ರೀ ರಜಸ್ವಲಾ ।**
**ದೈವೇ ಕರ್ಮಣಿ ಪಿತ್ರ್ಯೇ ಚ ಪಂಚಮೇಽಹನಿ ಶುದ್ಧ್ಯತಿ ॥**

ನಾಲ್ಕನೇ ದಿವಸ ಪತಿ ಕಾರ್ಯದಲ್ಲಿ ಮಾತ್ರ ಶುದ್ಧಳಾದರೂ ದೇವತಾ ಕಾರ್ಯಗಳಲ್ಲಿ ಅಂದರೆ ತುಲಸೀ ಪೂಜಾದಿಗಳಿಗೆ ಅಧಿಕಾರ ರಹಿತ–ಳಾಗಿರುತ್ತಾರೆ. ಐದನೇ ದಿನ ಸ್ನಾನಾನಂತರ ಶುದ್ಧಿ.

**ಸಾಧ್ವಾಚಾರಾ ನ ತಾವತ್ ಸ ರಜೋ ಯಾವತ್ ಪ್ರವರ್ತತೇ ।**
**ವೃತ್ತೇ ರಜಸಿ ಸಾಧ್ವೀ ಸ್ಯಾದ್ ಗೃಹಕರ್ಮಣಿ ಚೇಂದ್ರಿಯೇ ॥**

ಸ್ರಾವ ನಿಲ್ಲುವವರೆಗೂ ದೇವತಾ ಕಾರ್ಯಗಳಾದ ತುಲಸೀ ಪೂಜೆ, ದೇವರ ಪಾತ್ರೆಗಳ ಶುದ್ಧಿ, ಹೋಮದಲ್ಲಿ ಕೂಡುವುದು ಇವುಗಳು ನಿಷಿದ್ಧವಾಗಿದೆ. ಪೂರ್ಣವಾಗಿ ಸ್ರಾವ ನಿಂತ ಮೇಲೆ ದೇವತಾ ಕಾರ್ಯಗಳನ್ನು ಮಾಡಬಹುದು. ರೋಗಾದಿಗಳಿಂದ ಹೆಚ್ಚು ಸ್ರಾವವಾಗುತ್ತಿದ್ದರೆ ಈ ನಿಯಮ ಅನ್ವಯವಾಗುವುದಿಲ್ಲ.

### ರಜಸ್ವಲೆಯರ ಧರ್ಮ :

**ಸ್ತ್ರೀ ಧರ್ಮಿಣೀ ತ್ರಿರಾತ್ರಂ ತು ಸ್ವಮುಖಂ ನೈವ ದರ್ಶಯೇತ್ ।**
**ಸ್ವವಾಕ್ಯಂ ಶ್ರಾವಯೇನ್ ನಾಪಿ ಯಾವತ್ ಸ್ನಾತಾ ವಿಶುದ್ಧ್ಯತಿ ॥**

ರಜಸ್ವಲೆಯರು ತಮ್ಮ ಮುಖವನ್ನು ಮೂರು ದಿವಸ ಪರ್ಯಂತ ತೋರಿಸಬಾರದು. ಹಾಗೂ ತನ್ನ ಮಾತು ಇನ್ನೊಬ್ಬನಿಗೆ ಕೇಳಿಸದಂತೆ ಎಚ್ಚರಿಕೆ ವಹಿಸಬೇಕು.

**ಏಕಾಂಬರಾ ಕೃಶಾ ದೀನಾ ಸ್ನಾನಾಲಂಕಾರ ವರ್ಜಿತಾ ।**

ಮೌನಿಯಾಗಿದ್ದು, ಅಧೋಮುಖಿಯಾಗಿ, ನೆಲದ ಮೇಲೆ ಚಾಪೆ ಹಾಸಿ ಮಲಗಬೇಕು.

ಒಂದೇ ವಸ್ತ್ರಧರಿಸಬೇಕು. ಪುಷ್ಪಾದಿಗಳಿಂದ ತನ್ನನ್ನು ಅಲಂಕರಿಸಬಾರದು.

**ನಾಪ್ಸು ಸ್ನಾಯಾತ್ ಅಧಃ ಶಯೀತ ದಿವಾ ನ ಸ್ವಪ್ಯಾತ್ ॥**

ಅಗ್ನಿಯನ್ನು ಮುಟ್ಟಬಾರದು, ಅಭ್ಯಂಜನವೂ ನಿಷಿದ್ಧ, ಮೂರು ದಿನಗಳ

ಮೊದಲು ಸ್ನಾನಾದಿಗಳನ್ನು ಮಾಡದೆ ಇರಬೇಕು. ನೀರಿನಲ್ಲಿ ಜಲಾಭಿಮಾನಿಗಳು ಇರುವುದರಿಂದ ಅವರನ್ನು ಮುಟ್ಟಿ ಅವಮಾನಿಸಿದ ದೋಷವುಂಟಾಗುತ್ತದೆ. ಹಗಲಿನಲ್ಲಿ ಮಲಗಬಾರದು.

ಅಟ್ಟಹಾಸ ಮಾಡುತ್ತಾ ನಗುವುದು, ಚಂದ್ರಾದಿ ಗ್ರಹಗಳನ್ನು ನೋಡಬಾರದು. ಒಂದು ಹೊತ್ತು ಊಟ ಮಾಡಿದರೆ ಬಹಳ ಒಳ್ಳೆಯದು.

**ಸ್ತ್ರೀಧರ್ಮಿಣೀ ತ್ರಿರಾತ್ರಂ ಸ್ವಮುಖಂ ತು ನೈವ ದರ್ಶಯೇತ್ ।**
**ಸ್ವವಾಕ್ಯಂ ಶ್ರಾವಯೇನ್ ನಾಪಿ ಯಾವತ್ ಸ್ನಾತಾ ವಿಶುಧ್ಯತಿ ॥**

ದೊಡ್ಡವರು, ಪಂಡಿತರು ಮನೆಗೆ ಬಂದಾಗ ತನ್ನ ಮಾತನ್ನು ಅವರಿಗೆ ಕೇಳಿಸಬಾರದು. ತನ್ನ ಮುಖವನ್ನೂ ತೋರಿಸಬಾರದು.

## *ರಜಸ್ವಲೆ ಏನು ಮಾಡಬೇಕು?*

ರಜಸ್ವಲೆಯರು ನಿರಂತರ ಭಗವಂತನ ಧ್ಯಾನ ಮಾಡುತ್ತಿರಬಹುದು. ಇದಕ್ಕೆ ದ್ರೌಪದೀದೇವಿಯು ರಜಸ್ವಲೆಯಾಗಿದ್ದಾಗಲೇ ವಸ್ತ್ರಾಪಹರಣವು ನಡೆದಿದ್ದು ಆ ಕಾಲದಲ್ಲೂ ಭಗವಂತ ಸ್ಮರಣೆಯನ್ನು ಮಾಡುತ್ತಿದ್ದಳು.

**ಏವಂ ಶುದ್ಧ ಶುಕ್ರಾರ್ತವಾ ಋತೌ, ಪ್ರಥಮ ದಿವಸಾತ್**
**ಪ್ರಭೃತಿ ಬ್ರಹ್ಮಚಾರಿಣೀ, ದಿವಾಸ್ವಪ್ನಾಂಜನಾಶ್ರುಪಾತ – ಸ್ನಾನಾ –**
**ನುಲೇಪನ – ಆಭ್ಯಂಗ – ನಖಚ್ಛೇದನ – ಪ್ರಧಾವನ – ಹಸನ –**
**ಕಥನ – ಅತಿಶಬ್ಧ ಶ್ರವಣ – ಆಲೇಖನಾತ್ಯಾಯಾಸಾನ್ ಪರಿಹರೇತ್॥**

ಪ್ರಥಮ ದಿವಸದಿಂದಾರಂಭಿಸಿ ಬ್ರಹ್ಮಚಾರಿಣಿಯಾಗಿಯೂ, ಹಗಲು ನಿದ್ರಿಸದೇ, ಕಾಡಿಗೆ ಹಚ್ಚದೇ, ಅಭ್ಯಂಜನ ಮಾಡದೇ, ಉಗುರು ಕತ್ತರಿಸದೇ, ಓಡಾಡದೇ, ನಗದಂತೇ, ತಲೆಯನ್ನು ಬಾಚಿಕೊಳ್ಳದೇ, ಗಾಳಿಯಲ್ಲಿ ಓಡಾಡದೇ, ಎಂದಿಗೂ ಮಾತಾಡದೇ ಇರಬೇಕು.

## *ರಜಸ್ವಲೆಯ ಶುದ್ಧಿ :*

ಸ್ತ್ರೀಯರು ರಜಸ್ವಲೆಯರಾದಾಗ ಜಾತಾಶೌಚ, ಮೃತಾಶೌಚಕ್ಕಿಂತಲೂ ಹೆಚ್ಚು ಅಶುದ್ಧರಾಗಿರುತ್ತಾರೆ. ಆದ್ದರಿಂದ ತಮ್ಮ ಮಕ್ಕಳನ್ನು ತಾವೇ ಹಿಡಿದಿಟ್ಟುಕೊಂಡು ಬೇರೆ ವಸ್ತುಗಳ ಸಂಪರ್ಕವನ್ನು ತಪ್ಪಿಸಬೇಕು.

ಹಳ್ಳಿಗಳಲ್ಲೂ ಸಹ ರಜಸ್ವಲೆಯರಾದಾಗ ಪ್ರತ್ಯೇಕ ಕೋಣೆಯಲ್ಲಿದ್ದು,

ಎಲೆಯಲ್ಲಿಯೇ ಊಟವನ್ನು ಮಾಡುತ್ತಾ ಹೊರಗೆ ಬರಲು ಸಹ ಹೆದರುವರು. ಇದು ಸರಿಯಾದ ಮಾರ್ಗವು. ನಗರದಲ್ಲಾದರೂ ಸ್ತ್ರೀಯರು ದುಡಿಯುತ್ತಾರೆ. ಅವರಿಂದ ಇತರ ವಸ್ತುಗಳು ಸಹ ಅಶುದ್ಧವಾಗುತ್ತಿವೆ. ಮತ್ತೆ ಕೆಲವರು ಸ್ನಾನ ಮಾಡಿದರೆ ಪವಿತ್ರರಾಗುತ್ತೇವೆ ಎಂದು ಭ್ರಮಿಸಿದ್ದಾರೆ, ಇದೂ ಮಹಾಪರಾಧವಾಗುತ್ತದೆ. ಸ್ತ್ರೀಯರು ಸ್ನಾನ ಮಾಡಬಾರದು. ಜಲಾಭಿಮಾನಿ ದೇವತೆಗಳ ಅವಮಾನ ಮಾಡಿದಂತಾಗುತ್ತದೆ.

ಸ್ತ್ರೀಯರಿಗೆ ರಜೋದರ್ಶನ ಕಾಲದಿಂದ ದಿನತ್ರಯ ಪರ್ಯಂತ ಅವರ ರೋಮಗಳಿಂದ ವಿಷದ ಕೀಟಾಣುಗಳು ಹೊರಬರುತ್ತಿರುತ್ತವೆ. ಅದರ ಪರಿಣಾಮ ಇತರ ವಸ್ತುಗಳಿಗೆ ಬಿದ್ದಾಗ ವಿಷಭರಿತವಾಗಿ ಆರೋಗ್ಯ ಹಾಳಾಗುವ ಸಾಧ್ಯತೆಗಳೇ ಹೆಚ್ಚು. ಆದ್ದರಿಂದ ಮೂರು ದಿವಸಗಳಲ್ಲೂ ಬೇರೆ ಸ್ಥಳದಲ್ಲಿ ಬೇರೆಯವರ ಜೊತೆಗೆ ಮಾತನಾಡದೆ, ಮಾನಸಿಕವಾಗಿ ದೇವರ ಧ್ಯಾನಾದಿಗಳನ್ನು ನಡೆಸಬಹುದು.

ಕೆಲವು ಬಾರಿ ದೈಹಿಕ ತೊಂದರೆಯಿಂದಾಗಿ 15ನೇ ದಿವಸಕ್ಕೆ ರಜಸ್ವಲೆಯರಾಗುವುದು ಕಂಡುಬಂದಿದೆ. ಆಗ ಅವರ ಆಚರಣೆ ಹೇಗೆ? ಎಷ್ಟು ದಿವಸ ಕುಳಿತುಕೊಳ್ಳಬೇಕು? ಎಂದು ಸಾಮಾನ್ಯವಾಗಿ ಪ್ರಶ್ನೆ ಏಳುತ್ತದೆ. ಅದಕ್ಕೆ ಹೀಗೆ ಉತ್ತರವಿದೆ.

1. ರೋಗಾದಿಗಳಿಂದ ಅಕಾಲದಲ್ಲಿ ರಜಸ್ಸಿನ ಬರುವಿಕೆಯಾದರೆ ದೋಷವಿರುವುದಿಲ್ಲ.

2. ಸಾಮಾನ್ಯವಾಗಿ 1 ತಿಂಗಳಿಗೆ ಒಂದು ಬಾರಿ ರಜಸ್ವಲೆಯಾಗುವವರು, ಒಮ್ಮೆ ರಜಸ್ವಲೆಯಾದ 17 ದಿವಸಗಳಲ್ಲಿ ಪುನಃ ರಜಸ್ವಲೆಯಾದರೆ ಸ್ನಾನ ಮಾಡಿದರೆ ಸಾಕು ಕುಳಿತುಕೊಳ್ಳಬೇಕಾಗಿಲ್ಲ.

   18 ದಿನಕ್ಕೆ ಪುನಃ ಕುಳಿತರೆ 1 ರಾತ್ರಿಯ ತನಕ ಇದ್ದು ಮಾರನೆ ದಿನ ಸ್ನಾನ ಮಾಡಿದರೆ ಶುದ್ಧರಾಗುವರು.

   19 ನೇ ದಿನವು ರಜೋದರ್ಶನ ಕಂಡು ಬಂದರೆ ಎರಡು ದಿವಸವು.

   20ನೇ ದಿನದಂದು ರಜಸ್ವಲೆಯಾದರೆ 3 ದಿನ ಪೂರ್ಣ ಕುಳಿತುಕೊಳ್ಳಬೇಕು. ನಾಲ್ಕನೇ ದಿನ ಸ್ನಾನದಿಂದ ಶುದ್ಧಿ.

3. 20 ದಿವಸಗಳಿಗೆ ರಜೋದರ್ಶನವಾಗುವ ಸ್ತ್ರೀಯರು ರಜಸ್ವಲೆಯರಾಗಿ ಕೇವಲ 14 ದಿವಸಗಳಲ್ಲೇ ಪುನಃ ರಜಸ್ವಲೆಯಾದರೆ ಸ್ನಾನ ಮಾತ್ರ ಸಾಕು.

15ನೇ ದಿವಸದಂದು ರಜಸ್ವಲೆಯಾದರೆ 1 ದಿನ ಮಾತ್ರ

16ನೇ ದಿನ ರಜಸ್ವಲೆಯಾದರೆ 1 ದಿನ ಮಾತ್ರ

17ನೇ ದಿನ ರಜಸ್ಸು ಕಾಣಿಸಿದರೆ ಪುನಃ ಮೂರು ದಿನವಿದ್ದು ನಾಲ್ಕನೇ ದಿನ ಸ್ನಾನದಿಂದ ಶುದ್ಧರಾಗುವರು.

ಈ ನಿಯಮವೂ ಸಹ ವಯಸ್ಸಾಗುತ್ತಿದ್ದ ಹಾಗೆ ನಿಲ್ಲುವ ಸೂಚನೆಗಾಗಿ ಪದೆ ಪದೆ ರಜೋದರ್ಶನವಾಗಬಹುದು. ಆಗ ಪೂಜಾದಿಗಳಿಗಾಗಿ ಸ್ನಾನ ಮಾಡಬೇಕು. ಕುಳಿತುಕೊಳ್ಳುವುದು ಬೇಡ. ಸಾಮಾನ್ಯವಾಗಿ 45ರ ನಂತರ ಈ ರೀತಿ ಆಗುವ ಸಂದರ್ಭಗಳಿವೆ. 40 ವಯಸ್ಸಿನಲ್ಲಿ ಕಾಣಬಹುದಾದ ರಜಸ್ಸಿಗಿಂತ 20 ರಿಂದ 35ರವರೆಗೆ ರಜಸ್ಸು ಹೆಚ್ಚು ಅಪವಿತ್ರ 12 ರಿಂದ 20ರ ವಯಸ್ಸಿನ ಕಾಣುವ ರಜಸ್ಸು ಮುಂದಿನ ವಯಸ್ಸಿನ ರಜಸ್ಸಿಗಿಂತ ಹೆಚ್ಚು ಅಪವಿತ್ರವು. ಆದ್ದರಿಂದ ಪೂರ್ವ ವಯಸ್ಸಿನ ಸ್ತ್ರೀಯರು ಚೆನ್ನಾಗಿ ರಜಸ್ವಲಾ ನಿಯಮವನ್ನು ಪಾಲಿಸಬೇಕು. ಅನಾರೋಗ್ಯದಿಂದ ಮೂರು ಮೂರು ದಿವಸಕ್ಕೆ ರಜೋದರ್ಶನವಾಗುತ್ತಿದ್ದರೆ ಮಲ ಮೂತ್ರಾದಿಗಳಂತೆ ಕೈಕಾಲು ಬಾಯಿಗಳನ್ನು ಶುದ್ಧಿ ಮಾಡಿದರೆ ಸಾಕು.

ಕೆಲವರಿಗೆ 15 ದಿವಸಕ್ಕೆ ರಜಸ್ವಲೆಯರಾಗುವರು. ಅವರು ಈ ಮಧ್ಯದಲ್ಲಿ 10 ದಿನಗಳೊಳಗೆ ಪುನಃ ರಜಸ್ವಲೆಯರಾದರೆ ಸ್ನಾನ ಮಾಡಿದರೆ ಸಾಕು.

- ***ಅಕಾಲದಲ್ಲಿ ರಜಸ್ಸುಂಟಾದರೆ ಹೇಗೆ ಆಚರಣೆ?***

ರಜಸ್ವಲೆಯಾಗಿ ಹದಿನಾರು ದಿನದೊಳಗೆ ರಜಸ್ಸುಂಟಾದರೆ ಅದು ರಜಸ್ಸು ಎನಿಸುವುದಿಲ್ಲ. ಅದು ಕೇವಲ ರಕ್ತವೆನ್ನಲಾಗಿದೆ. ಇದೊಂದು ಗಾಯವಾದಾಗ ಬರುವ ರಕ್ತದಂತೆ, ಅಶುಚಿಯಾಗುವುದಿಲ್ಲ.

**ಅಕಾಲೇ ಯದ್ ಭವೇತ್ ಸ್ತ್ರೀಣಾಂ ರಕ್ತಮಾಹುರ್ಮನೀಷಿಣಃ ।**

- ***ಜ್ವರ ಪೀಡಿತಳಾದಾಗ ರಜಸ್ವಲಾ ಶುದ್ಧಿ :***

ದೀರ್ಘಕಾಲೀನ ಸನ್ನಿಪಾತಾದಿ ಜ್ವರಪೀಡಿತಳಾದ ಸ್ತ್ರೀಯು ರಜಸ್ವಲೆಯಾದಾಗ ಸ್ನಾನ ಮಾಡುವಂತಿಲ್ಲ. ನಾಲ್ಕನೆಯ ದಿವಸ ಶುದ್ಧಿ ಹೇಗೆ? ಧರ್ಮಶಾಸ್ತ್ರಜ್ಞರು ಹೀಗೆ ಪರಿಹಾರ ಹೇಳಿದ್ದಾರೆ.

ರಜಸ್ವಲೆಯ ನಾಲ್ಕನೆ ದಿವಸ ಜ್ವರ ಪೀಡಿತಳಾದ ರಜಸ್ವಲೆಯನ್ನು ಶುದ್ಧಳಾಗಿರುವ ಮತ್ತೊಬ್ಬ ಸ್ತ್ರೀಯು ಮುಟ್ಟಬೇಕು.

ಸಚೇಲ ಸ್ನಾನ ಒಂದು ಆಚಮನ ಮಾಡಬೇಕು. ಪುನಃ ಅವಳನ್ನು ಮುಟ್ಟಬೇಕು. ಹೀಗೆ ಹತ್ತು ಬಾರಿ ಮಾಡಿದಾಗ ಜ್ವರ ಪೀಡಿತ ರಜಸ್ವಲೆಯು ಪವಿತ್ರಳಾಗುವಳು. ರಜಸ್ವಲೆಗೆ ಬೇರೆ ಬೇರೆ ಸೀರೆ ಉಡಿಸಿ ಪುಣ್ಯಾಹ ಜಲದಿಂದ ಪ್ರೋಕ್ಷಿಸಿದಾಗ ಪವಿತ್ರಳಾಗುವಳು.

**ಜ್ವರಾಭಿಭೂತಾಯಾ ನಾರೀ ರಜಸಾ ಚ ಪರಿಪ್ಲುತಾ ।**
**ಚತುರ್ಥೇಽಹನಿ ಸಂಪ್ರಾಪ್ತೆ ಸ್ಪೃಶೇದ್ ಅನ್ಯಾ ತು ತಾಂ ಸ್ತ್ರಿಯಮ್ ॥**
**ಸಾ ಸಚೈಲಾಽವಗಾಹ್ಯಾಪಃ ಸ್ನಾತ್ವಾ ಸ್ನಾತ್ವಾ ಪುನಃ ಸ್ಪೃಶೇತ್ ।**
**ದಶ ದ್ವಾದಶಕೃತ್ವೋ ವಾ ಹ್ಯಾಚಾಮೇಚ್ಚ ಪುನಃ ಪುನಃ ।**
**ಅಂತೇ ಚ ವಾಸಸ್ತ್ಯಾಗಃ ಪುಣ್ಯಾಹೇನ ವಿಶುದ್ಧ್ಯತಿ ॥**– *ಉಶನಾ*

- ***ತಾಯಿ ಮಗಳು ರಜಸ್ವಲೆಯಾದಾಗ ಒಟ್ಟಿಗೆ ಕೂಡಬಹುದೇ?***

ಯಾವುದೇ ರಜಸ್ವಲೆಯು ಮತ್ತೊಬ್ಬ ರಜಸ್ವಲೆಯನ್ನು ಮುಟ್ಟುವುದು – ಮಾತನಾಡುವುದು – ಒಟ್ಟಿಗೆ ಭೋಜನಾದಿಗಳು, ಒಟ್ಟಿಗೆ ಮಲಗುವುದು ಇವು ನಿಷಿದ್ಧವಾಗಿರುತ್ತದೆ.

ಇದರಿಂದ ಭಯಂಕರ ಪಾಪವುಂಟಾಗುತ್ತದೆ. ಇದಕ್ಕೆ ಪ್ರಾಯಶ್ಚಿತ್ತ ಸ್ಪರ್ಶದ ದಿನದಿಂದಾರಂಭಿಸಿ ನಾಲ್ಕನೇ ದಿನ ನೀರು ಆಗುವವರೆಗೂ ಉಪವಾಸ–ವಿರಬೇಕು.

**ಆರ್ತವಾಭಿಪ್ಲುತಾ ನಾರೀ ಸಾರ್ತವಾಂ ಯದಿ ಸಂಸ್ಪೃಶೇತ್ ।**
**ಆಸ್ನಾನ ಕಾಲಾನ್ ನಾಶ್ನೀಯಾತ್ ಭುಕ್ತ್ವಾ ಚಾಂದ್ರಾಯಣಂ ಚರೇತ್॥**

- ***ರಜಸ್ವಲೆಯಾಗಿದ್ದಾಗ ಜಾತಾಶೌಚ – ಮೃತಾಶೌಚ –***

ಜಾತಾಶೌಚಕ್ಕಿಂತ ಮೃತಾಶೌಚ ಅಧಿಕ, ಮೃತಾಶೌಚಕ್ಕಿಂತ ರಜಸ್ವಲಾಶೌಚ ಅಧಿಕವಾಗಿದ್ದು ಜಾತಾಶೌಚ – ಮೃತಾಶೌಚ ಮುಗಿದರೂ ರಜಸ್ವಲೆಯು ತನ್ನ ಮೂರು ದಿನ ಮುಗಿದಾಗಲೇ ಸ್ನಾನದಿಂದ ಶುದ್ಧಳಾಗುವಳು.

- ***ರಜಸ್ಸನ್ನು ತಿಳಿದಾಗ ಮಾತ್ರವೇ ಮೈಲಿಗೆ –***

ಸ್ತ್ರೀಯು ತನಗೆ ರಜಸ್ಸುಂಟಾದದ್ದನ್ನು ತಿಳಿದ ಕೂಡಲೇ ಮೈಲಿಗೆಯಾಗುವಳು.

15ನೇ ದಿವಸದಂದು ರಜಸ್ವಲೆಯಾದರೆ 1 ದಿನ ಮಾತ್ರ

16ನೇ ದಿನ ರಜಸ್ವಲೆಯಾದರೆ 1 ದಿನ ಮಾತ್ರ

17ನೇ ದಿನ ರಜಸ್ಸು ಕಾಣಿಸಿದರೆ ಪುನಃ ಮೂರು ದಿನವಿದ್ದು ನಾಲ್ಕನೇ ದಿನ ಸ್ನಾನದಿಂದ ಶುದ್ಧರಾಗುವರು.

ಈ ನಿಯಮವೂ ಸಹ ವಯಸ್ಸಾಗುತ್ತಿದ್ದ ಹಾಗೆ ನಿಲ್ಲುವ ಸೂಚನೆಗಾಗಿ ಪದೆ ಪದೆ ರಜೋದರ್ಶನವಾಗಬಹುದು. ಆಗ ಪೂಜಾದಿಗಳಿಗಾಗಿ ಸ್ನಾನ ಮಾಡಬೇಕು. ಕುಳಿತುಕೊಳ್ಳುವುದು ಬೇಡ. ಸಾಮಾನ್ಯವಾಗಿ 45ರ ನಂತರ ಈ ರೀತಿ ಆಗುವ ಸಂದರ್ಭಗಳಿವೆ. 40 ವಯಸ್ಸಿನಲ್ಲಿ ಕಾಣಬಹುದಾದ ರಜಸ್ಸಿಗಿಂತ 20 ರಿಂದ 35ರವರೆಗೆ ರಜಸ್ಸು ಹೆಚ್ಚು ಅಪವಿತ್ರ 12 ರಿಂದ 20ರ ವಯಸ್ಸಿನ ಕಾಣುವ ರಜಸ್ಸು ಮುಂದಿನ ವಯಸ್ಸಿನ ರಜಸ್ಸಿಗಿಂತ ಹೆಚ್ಚು ಅಪವಿತ್ರವು. ಆದ್ದರಿಂದ ಪೂರ್ವ ವಯಸ್ಸಿನ ಸ್ತ್ರೀಯರು ಚೆನ್ನಾಗಿ ರಜಸ್ವಲಾ ನಿಯಮವನ್ನು ಪಾಲಿಸಬೇಕು. ಅನಾರೋಗ್ಯದಿಂದ ಮೂರು ಮೂರು ದಿವಸಕ್ಕೆ ರಜೋದರ್ಶನವಾಗುತ್ತಿದ್ದರೆ ಮಲ ಮೂತ್ರಾದಿಗಳಂತೆ ಕೈಕಾಲು ಬಾಯಿಗಳನ್ನು ಶುದ್ಧಿ ಮಾಡಿದರೆ ಸಾಕು.

ಕೆಲವರಿಗೆ 15 ದಿವಸಕ್ಕೆ ರಜಸ್ವಲೆಯರಾಗುವರು. ಅವರು ಈ ಮಧ್ಯದಲ್ಲಿ 10 ದಿನಗಳೊಳಗೆ ಪುನಃ ರಜಸ್ವಲೆಯರಾದರೆ ಸ್ನಾನ ಮಾಡಿದರೆ ಸಾಕು.

- ***ಅಕಾಲದಲ್ಲಿ ರಜಸ್ಸುಂಟಾದರೆ ಹೇಗೆ ಆಚರಣೆ?***

ರಜಸ್ವಲೆಯಾಗಿ ಹದಿನಾರು ದಿನದೊಳಗೆ ರಜಸ್ಸುಂಟಾದರೆ ಅದು ರಜಸ್ಸು ಎನಿಸುವುದಿಲ್ಲ. ಅದು ಕೇವಲ ರಕ್ತವೆನ್ನಲಾಗಿದೆ. ಇದೊಂದು ಗಾಯವಾದಾಗ ಬರುವ ರಕ್ತದಂತೆ, ಅಶುಚಿಯಾಗುವುದಿಲ್ಲ.

**ಅಕಾಲೇ ಯದ್ ಭವೇತ್ ಸ್ತ್ರೀಣಾಂ ರಕ್ತಮಾಹುರ್ಮನೀಷಿಣಃ ।**

- ***ಜ್ವರ ಪೀಡಿತಳಾದಾಗ ರಜಸ್ವಲಾ ಶುದ್ಧಿ :***

ದೀರ್ಘಕಾಲೀನ ಸನ್ನಿಪಾತಾದಿ ಜ್ವರಪೀಡಿತಳಾದ ಸ್ತ್ರೀಯು ರಜಸ್ವಲೆಯಾದಾಗ ಸ್ನಾನ ಮಾಡುವಂತಿಲ್ಲ. ನಾಲ್ಕನೆಯ ದಿವಸ ಶುದ್ಧಿ ಹೇಗೆ? ಧರ್ಮಶಾಸ್ತ್ರಜ್ಞರು ಹೀಗೆ ಪರಿಹಾರ ಹೇಳಿದ್ದಾರೆ.

ರಜಸ್ವಲೆಯ ನಾಲ್ಕನೆ ದಿವಸ ಜ್ವರ ಪೀಡಿತಳಾದ ರಜಸ್ವಲೆಯನ್ನು ಶುದ್ಧಳಾಗಿರುವ ಮತ್ತೊಬ್ಬ ಸ್ತ್ರೀಯು ಮುಟ್ಟಬೇಕು.

ಸಚೇಲ ಸ್ನಾನ ಒಂದು ಆಚಮನ ಮಾಡಬೇಕು. ಪುನಃ ಅವಳನ್ನು ಮುಟ್ಟಬೇಕು. ಹೀಗೆ ಹತ್ತು ಬಾರಿ ಮಾಡಿದಾಗ ಜ್ವರ ಪೀಡಿತ ರಜಸ್ವಲೆಯು ಪವಿತ್ರಳಾಗುವಳು. ರಜಸ್ವಲೆಗೆ ಬೇರೆ ಬೇರೆ ಸೀರೆ ಉಡಿಸಿ ಪುಣ್ಯಾಹ ಜಲದಿಂದ ಪ್ರೋಕ್ಷಿಸಿದಾಗ ಪವಿತ್ರಳಾಗುವಳು.

**ಜ್ವರಾಭಿಭೂತಾಯಾ ನಾರೀ ರಜಸಾ ಚ ಪರಿಪ್ಲುತಾ ।**
**ಚತುರ್ಥೇಽಹನಿ ಸಂಪ್ರಾಪ್ತೆ ಸ್ಪೃಶೇದ್ ಅನ್ಯಾ ತು ತಾಂ ಸ್ತ್ರಿಯಮ್ ॥**
**ಸಾ ಸಚೈಲಾಽವಗಾಹ್ಯಾಪಃ ಸ್ನಾತ್ವಾ ಸ್ನಾತ್ವಾ ಪುನಃ ಸ್ಪೃಶೇತ್ ।**
**ದಶ ದ್ವಾದಶಕೃತ್ವೋ ವಾ ಹ್ಯಾಚಾಮೇಚ್ಚ ಪುನಃ ಪುನಃ ।**
**ಅಂತೇ ಚ ವಾಸಸ್ತ್ಯಾಗಃ ಪುಣ್ಯಾಹೇನ ವಿಶುದ್ಧ್ಯತಿ ॥**– *ಉಶನಾ*

- ***ತಾಯಿ ಮಗಳು ರಜಸ್ವಲೆಯಾದಾಗ ಒಟ್ಟಿಗೆ ಕೂಡಬಹುದೇ?***

ಯಾವುದೇ ರಜಸ್ವಲೆಯು ಮತ್ತೊಬ್ಬ ರಜಸ್ವಲೆಯನ್ನು ಮುಟ್ಟುವುದು – ಮಾತನಾಡುವುದು – ಒಟ್ಟಿಗೆ ಭೋಜನಾದಿಗಳು, ಒಟ್ಟಿಗೆ ಮಲಗುವುದು ಇವು ನಿಷಿದ್ಧವಾಗಿರುತ್ತದೆ.

ಇದರಿಂದ ಭಯಂಕರ ಪಾಪವುಂಟಾಗುತ್ತದೆ. ಇದಕ್ಕೆ ಪ್ರಾಯಶ್ಚಿತ್ತ ಸ್ಪರ್ಶದ ದಿನದಿಂದಾರಂಭಿಸಿ ನಾಲ್ಕನೇ ದಿನ ನೀರು ಆಗುವವರೆಗೂ ಉಪವಾಸ-ವಿರಬೇಕು.

**ಆರ್ತವಾಭಿಪ್ಲುತಾ ನಾರೀ ಸಾರ್ತವಾಂ ಯದಿ ಸಂಸ್ಪೃಶೇತ್ ।**
**ಆಸ್ನಾನ ಕಾಲಾನ್ ನಾಶ್ನೀಯಾತ್ ಭುಕ್ತ್ವಾ ಚಾಂದ್ರಾಯಣಂ ಚರೇತ್॥**

- ***ರಜಸ್ವಲೆಯಾಗಿದ್ದಾಗ ಜಾತಾಶೌಚ – ಮೃತಾಶೌಚ –***

ಜಾತಾಶೌಚಕ್ಕಿಂತ ಮೃತಾಶೌಚ ಅಧಿಕ, ಮೃತಾಶೌಚಕ್ಕಿಂತ ರಜಸ್ವಲಾಶೌಚ ಅಧಿಕವಾಗಿದ್ದು ಜಾತಾಶೌಚ – ಮೃತಾಶೌಚ ಮುಗಿದರೂ ರಜಸ್ವಲೆಯು ತನ್ನ ಮೂರು ದಿನ ಮುಗಿದಾಗಲೇ ಸ್ನಾನದಿಂದ ಶುದ್ಧಳಾಗುವಳು.

- ***ರಜಸ್ಸನ್ನು ತಿಳಿದಾಗ ಮಾತ್ರವೇ ಮೈಲಿಗೆ –***

ಸ್ತ್ರೀಯು ತನಗೆ ರಜಸ್ಸುಂಟಾದದ್ದನ್ನು ತಿಳಿದ ಕೂಡಲೇ ಮೈಲಿಗೆಯಾಗುವಳು.

ತಿಳಿಯದಿದ್ದರೆ ಅಶುದ್ಧಳೆನಿಸುವುದಿಲ್ಲ. ಸಂಶಯವಿದ್ದರೂ ಅಶುಚಿ-ಯೆನಿಸುವುದಿಲ್ಲ. ಸಂದೇಹವಿದ್ದಾಗ ಸ್ನಾನ ಮಾಡಿದರೆ ಸಾಕು.

**ಅವಿಜ್ಞಾತೇ ರಜಃಸ್ರಾವೇ ಜ್ಞಾನಾದಶುಚಿರಿಷ್ಯತೇ ।**
**ಸಂದಿಗ್ಧಮಾತ್ರೇ ಸ್ನಾನಂ ಸ್ಯಾದ್ ॥**

- ***ರಜಸ್ವಲಾಧರ್ಮ ಸಂಗ್ರಹ –***

ಅಭ್ಯಂಜನ ಮಾಡುವುದು – ಸ್ನಾನ ಮಾಡುವುದು – ದಂತಕಾಷ್ಠಗಳಿಂದ ದಂತಧಾವನ ನಿಷಿದ್ಧವಾಗಿರುತ್ತದೆ. ಮನೆಯಲ್ಲಿನ ಯಾವುದೇ ಗೃಹಕೃತ್ಯಗಳನ್ನು ಅಂದರೆ ಕಸ ಗುಡಿಸುವುದು – ಪಾತ್ರೆ ತೊಳೆಯುವುದು– ಬಟ್ಟೆ ಒಗೆಯುವುದು – ನೆಲ ಒರಸುವುದು ಇತ್ಯಾದಿ ಸರ್ವಥಾ ಮಾಡಬಾರದು. ಉಟ್ಟ ವಸ್ತ್ರದಲ್ಲಿಯೇ ಮೂರು ದಿವಸವಿರಬೇಕು. ಬೇರೆ ವಸ್ತ್ರ ಧರಿಸಬಾರದು.

- ***ದೇವರಿಗೆ ನಮಸ್ಕಾರ ಮಾಡಬಾರದು –***

**ವರ್ಜಯೇಚ್ಚ ನಮಸ್ಕಾರಂ ದೇವತಾನಾಂ ರಜಸ್ವಲಾ ।**
**ಏಕಾದಶೀ, ಕೃಷ್ಣಾಷ್ಟಮೀ, ಚಾತುರ್ಮಾಸ್ಯ ಕಡ್ಡಾಯಃ ॥**

ಸೂತಕ, ಮೃತಾಶೌಚ, ರಜಸ್ವಲಾಶೌಚ ಇವುಗಳು ಇರುವಾಗಲೂ ಏಕಾದಶ್ಯಾದಿ ವ್ರತಗಳನ್ನು ಆಚರಿಸಲೇಬೇಕು.

**ಸೂತಕೇ ಮೃತಕೇ ವಾಪಿ ಹ್ಯೇಕಾದಶ್ಯಾಂ ನ ಭೋಜನಮ್ ।**
**ಕುರ್ಯಾದ್ ರಜೋ ದರ್ಶನೇಽಪಿ ವಾ–**

ಗ್ರಹ–ನಕ್ಷತ್ರ–ಚಂದ್ರಾದಿಗಳನ್ನು ನೋಡಬಾರದು, ಬುಟ್ಟಿ ಹೆಣೆಯಬಾರದು, ಉಗುರು ಕತ್ತರಿಸುವುದು ನಿಷಿದ್ಧವಾಗಿರುತ್ತದೆ.

**ನ ಕುರ್ಯಾತ್ ಸಾರ್ತವಾ ನಾರೀ ಗ್ರಹಾಣಾಮೀಕ್ಷಣಂ ತಥಾ ।**
**ನಖಾನಾಂ ಕೃಂತನಂ ರಜ್ಜು ತಾಲಾದಿ ಬಂಧನಮ್ ॥**

ರಜಸ್ವಲೆಯಾದಾಗ ಶೌಚವಿರುವುದಿಲ್ಲ. ಹಾಡನ್ನು ಹೇಳುವುದು, ಪ್ರಯಾಣ ಮಾಡುವುದು, ಪಗಡೆಯಾಟವಾಡುವುದು ನಿಷಿದ್ಧವಾಗಿರುತ್ತದೆ. ದೇವರ ಸ್ತೋತ್ರಗಳನ್ನು ಹೇಳಬಾರದು. ದೇವರನ್ನು ನೋಡಬಾರದು, ದೇವರಿಗೆ ನಮಸ್ಕರಿಸಲೂಬಾರದು. ತಾಂಬೂಲ ಸವಿಯುವುದು, ಸ್ನಾನ–ಅಲಂಕಾರ

ಧಾರಣೆ, ಹಗಲು ಮಲಗುವುದು – ಅಳುವುದು – ವ್ಯಾಯಾಮ ಮಾಡುವುದು – ಜೋರಾಗಿ ನಗುವುದು – ತಲೆ ಬಾಚಿಕೊಳ್ಳುವುದು – ಮೊದಲಾದವು ನಿಷಿದ್ಧವಾಗಿರುತ್ತವೆ. ಈ ಧರ್ಮಗಳನ್ನು ಪಾಲಿಸಿದ ಸ್ತ್ರೀಯು ಯಾವುದೇ ದೋಷವಿಲ್ಲದ ಪುತ್ರನಿಗೆ ತಾಯಿಯಾಗುವ ಅರ್ಹತೆ ಪಡೆಯುವಳು.

- ***ರಜಸ್ವಲಾ ದೋಷದಿಂದ ಮಗುವು ಹೀನಾಂಗ –***

ಹಗಲು ಮಲಗಿದರೆ ನಿದ್ರಾಲುವಾದ ಮಗುವು, ಕಾಡಿಗೆ ಹಚ್ಚಿದ್ದರಿಂದ ಕಣ್ಣಿನ ದೋಷಿಯು, ಅಳುವುದರಿಂದ ದೃಷ್ಟಿದೋಷವುಳ್ಳವನೂ ಸ್ನಾನ–ಗಂಧಾದ್ಯನು ಲೇಪನದಿಂದ ದುಃಖ ಭೂಯಿಷ್ಠನೂ, ಅಭ್ಯಂಜನ ಮಾಡಿದರೆ ಕುಷ್ಠರೋಗಿಯು, ಉಗುರನ್ನು ಕತ್ತರಿಸುವವಳಿಗೆ ಸುಟ್ಟು ಹೋದಂತಿರುವ ಉಗುರುಳ್ಳವನೂ, ನಗುವಳಿಗೆ ಕಪ್ಪು ಹಲ್ಲು, ತುಟಿ, ದವಡೆವುಳ್ಳವನೂ, ಆಯಾಸವುಂಟು ಮಾಡುವ ಕಾರ್ಯಗಳನ್ನು ಮಾಡುವವಳಿಗೆ ಬುದ್ಧೀಹೀನರಾದ ಮಕ್ಕಳೂ ಹುಟ್ಟುವರು.

- ***ರಜಸ್ವಲಾ ನಿರ್ಣಯ :***

ಸಾಮಾನ್ಯವಾಗಿ ಹಗಲಿನಲ್ಲಿ ರಜಸ್ವಲೆಯಾದಾಗ ಅಂದಿನಿಂದ ನಾಲ್ಕನೇ ದಿನದಲ್ಲಿ ಬೆಳಿಗ್ಗೆ ಸಂಗವ ಕಾಲದಲ್ಲಿ (8.30 ಸು.) ಸ್ನಾನ ಮಾಡಿದಾಗ ಶುದ್ಧಿ ಏರ್ಪಡುತ್ತದೆ.

ರಾತ್ರಿಯಲ್ಲಿ ಯಾವಾಗ ರಜಸ್ವಲೆಯಾದರೂ ಅದು ಒಂದು ದಿನವೆಂದು ಮುಂದೆ ಇನ್ನೂ ಎರಡು ದಿನ ಕಳೆದು ಬೆಳಿಗ್ಗೆ ಸಂಗವ ಕಾಲದಲ್ಲಿ ಸ್ನಾನ ಮಾಡಿದಾಗ ಶುದ್ಧಳಾಗುವಳು. ಸಾಮಾನ್ಯವಾಗಿ ಇದೇ ನಿಯಮವನ್ನೇ ಈಗ ಪಾಲಿಸಲಾಗುತ್ತಿದೆ.

**ರಾತ್ರಾವೇವ ಸಮುತ್ಪನ್ನೇ ಮೃತೇ ರಜಸಿ ಸೂತಕೇ ।**
**ಪೂರ್ವಮೇವ ದಿನಂ ಗ್ರಾಹ್ಯಂ ಯಾವನ್ನೋದಯತೇ ರವಿಃ ॥**
**ಕೇಚಿತ್ತು ಸೂರ್ಯೋದಯ ಪರ್ಯಂತ ರಾತ್ರೌ ರಜೋದರ್ಶನೇ ।**
**ಪೂರ್ವದಿನಮೇವ ಗ್ರಾಹ್ಯಮ್ ಇತ್ಯಾಹುಃ ॥** – *ಸಂಗ್ರಹ*

ಅರ್ಧರಾತ್ರಿಗಿಂತ ಪೂರ್ವದಲ್ಲಿ ರಜಸ್ಸು ಕಂಡರೆ ಹಿಂದಿನ ದಿನವೂ,

ಅರ್ಧರಾತ್ರಿಗಿಂತ ನಂತರ ರಜಸ್ಸು ಕಂಡರೆ ಮರುದಿನಕ್ಕೆ ಸೇರುತ್ತದೆ. ಪದ್ಧತಿಯಂತೆ ಮಾಡುವುದು. ರಾತ್ರಿ ಹನ್ನೆರಡು ಗಂಟೆಯು ಅರ್ಧರಾತ್ರಿಯು.

- ***ಹನ್ನೆರಡರಿಂದ ಐವತ್ತು ವರ್ಷದವರೆಗೂ ರಜಸ್ವಲಾಧರ್ಮ :***

ಹನ್ನೆರಡರಿಂದಾರಂಭಿಸಿ ಐವತ್ತು ವರ್ಷದವರೆಗೂ ರಜಸ್ವಲಾಧರ್ಮಕ್ಕೆ ಸ್ತ್ರೀಯರು ಒಳಪಟ್ಟಿರುತ್ತಾರೆ. ಇದರಲ್ಲೂ ಮೊದಮೊದಲು ಇದರ ಪ್ರಭಾವ ಅಧಿಕವಾಗಿರುವುದರಿಂದ ಚೆನ್ನಾಗಿ ಪಾಲನೆ ಮಾಡಬೇಕು. ಐವತ್ತರ ನಂತರ ಕಾಣಿಸಿದ ರಜಸ್ಸು ತನ್ನ ಪ್ರಭಾವವನ್ನು ಕಳೆದುಕೊಂಡಿರುತ್ತದೆ. ಆದ್ದರಿಂದ ರಜಸ್ವಲೆಯಾದ ಹದಿನಾರು ದಿನದಲ್ಲಿಯೇ ಪುನಃ ಆಗಬಹುದು. ಆಗ ಸ್ನಾನ ಮಾತ್ರ ಮಾಡಿದರೆ ಸಾಕು. ಮೂರು ದಿವಸ ಇರಬೇಕಾದದ್ದಿಲ್ಲ.

**ವತ್ಸರಾತ್ ದ್ವಾದಶಾದೂರ್ಧ್ವಂ ಯಾತಿ ಪಂಚಾಶತಃ ಪರಮ್ ।**
**ಪ್ರಭಾವಸ್ತ್ವಧಿಕಃ ಪೂರ್ವಂ ಉತ್ತರತ್ರ ಪ್ರಶಾಮ್ಯತಿ ॥** – *ವ.ಸ್ಮ.*

- ***ಮಕ್ಕಳ ಶುದ್ಧಿ ಹೇಗೆ?***

ಮಕ್ಕಳಿರುವ ತಾಯಿಯು ರಜಸ್ವಲೆಯಾದಾಗ ಮಕ್ಕಳು ಅಲ್ಲಿಂದ ಇಲ್ಲಿಗೆ ಅಡ್ಡಾಡುತ್ತಿರುತ್ತಾರೆ. ಹಟ ಮಾಡುತ್ತಿರುವಾಗ ಬಟ್ಟೆ ತೆಗೆದು ಬೇರೆಯವರು ಎತ್ತಿಕೊಳ್ಳಬೇಕಾಗುತ್ತದೆ. ಮಗುವಿನ ಶುದ್ಧಿ ಹೇಗೆ?

ಶಿಶು, ಬಾಲ, ಕುಮಾರರೆಂದು ಮಕ್ಕಳಲ್ಲಿ ಮೂರು ವಿಧ. ಅನ್ನಪ್ರಾಶನ–ವಾಗಿಲ್ಲದ ಅಂದರೆ 6 ತಿಂಗಳಿನ ಮೊದಲು ಶಿಶುವೆಂದು, ಚೌಲವಾಗದ ಅಂದರೆ ಮೂರು ವರ್ಷದ ಶಿಶುವು ಬಾಲಕನೆಂದೂ, ಮುಂಜೀಯಾಗದ ಬಾಲಕನು ಕುಮಾರನೆಂದು ಶಾಸ್ತ್ರವು ತಿಳಿಸಿದೆ.

ಶಿಶುವಾದರೆ ಮಗುವಿಗೆ ನೀರನ್ನು ಪ್ರೋಕ್ಷಿಸಿದರೆ ಸಾಕು ಶುದ್ಧವಾಗುತ್ತದೆ. ಬಾಲಕನಾದರೆ ಮುಟ್ಟಿದವರು ಆಚಮನ ಮಾಡಿದರೆ ಸಾಕು. ಉಪನಯನ–ವಾದವರು ರಜಸ್ವಲೆಯನ್ನು ಮುಟ್ಟಿದರೆ ಸ್ನಾನ ಮಾಡಬೇಕು. ಉಪವೀತ ಬೇರೆ ಧರಿಸಬೇಕು.

**ಶಿಶೋರಭ್ಯುಕ್ಷಣಂ ಪ್ರೋಕ್ತಂ ಬಾಲಸ್ಯಾಚಮನಂ ತಥಾ ।**
**ರಜಸ್ವಲಾದಿ ಸಂಸ್ಪರ್ಶೇ ಸ್ನಾನಮೇವ ಕುಮಾರಕೇ ॥**

- ***ರಜಸ್ವಲೆಯು ಕುಳಿತಿದ್ದ ಸ್ಥಳ ಶುದ್ಧವಾಗುವ ರೀತಿ –***

ರಜಸ್ವಲೆಯು ಕುಳಿತಿದ್ದ ಜಾಗವನ್ನು ಮೊದಲು ಮಣ್ಣಿನಿಂದ ಹಾಗೂ ನಂತರ ಗೋಮಯದಿಂದ ಸಾರಿಸಿ ತೊಳೆಯಬೇಕು. ಮಿಶ್ರವಾದ ನೀರಿನಿಂದ ಪ್ರೋಕ್ಷಿಸಿ ಒರೆಸಬೇಕು. ನಂತರ ಪುಣ್ಯಾಹ ಜಲದಿಂದ ಪ್ರೋಕ್ಷಿಸಿದರೆ ಸ್ಥಳ ಶುದ್ಧವಾಗಿ ಇತರರು ಉಪಯೋಗಿಸಲು ಬರುತ್ತದೆ. ಗೋವನ್ನು ಪ್ರವೇಶಿದರಂತೂ ಅತ್ಯಂತ ಶುದ್ಧವಾಗುತ್ತದೆ.

**ಉದಕ್ಯಾಃ ಶಯನಂ ಸ್ಥಾನಂ ಭುಕ್ತದೇಶಂ ಚ ಗೋಮಯೈಃ ।**
**ಉಪಲಿಪ್ಯ ಗವಾಕ್ರಾಂತ್ಯಾ ಪುಣ್ಯಾಹೇನ ವಿಶುದ್ಧ್ಯತಿ ॥**

ಅವಳು ಉಪಯೋಗಿಸಿದ ದಿಂಬು, ರಗ್ಗು ಮೊದಲಾದವುಗಳು ಬಿಸಿಲಿನಲ್ಲಿ ಹಾಕುವುದರಿಂದಲೂ, ಚಾಪೆಯನ್ನು ನೀರಿನಿಂದ ತೊಳೆಯುವುದರಿಂದಲೂ ಶುದ್ಧವಾಗುತ್ತದೆ.

- ***ನಾಲ್ಕನೇ ದಿನ ಪತಿಮುಖಾವಲೋಕನ :***

ನಾಲ್ಕನೇ ದಿನದಂದು ಸ್ತ್ರೀಯು ಯಾರನ್ನು ನೋಡುವಳೋ ಅಂತಹ ಸ್ವಭಾವದ ಪುತ್ರನಿಗೆ ಜನ್ಮ ಕೊಡುವಳು. ಆದ್ದರಿಂದ ಪತಿಯ ಮುಖವನ್ನೇ ನೋಡಬೇಕು.

**ಋತು ಸ್ನಾತಾ ಯದಾ ನಾರೀ ಯತ್ ಸ್ನೇಹಾನ್ನರ ಮೀಕ್ಷತೇ ।**
**ತಾದೃಶಂ ಜನಯೇತ್ ಪುತ್ರಂ ಪತಿಮೇವ ನಿರೀಕ್ಷಯೇತ್ ॥**

- ***ಪರಪುರುಷನನ್ನು ನೋಡಲೇಬಾರದು :***

ಪತಿಯು ಬೇರೆಡೆ ಇದ್ದಾಗ ಪತಿಯನ್ನು ನೆನೆದು ಸೂರ್ಯನನ್ನು ನೋಡಬೇಕು.

**ಸುಸ್ನಾತಾ ಭರ್ತೃವದನ ಮೀಕ್ಷಾತೇಽನ್ಯಸ್ಯ ನ ಕ್ವಚಿತ್ ।**
**ಅಥವಾ ಮನಸಿ ಧ್ಯಾತ್ವಾ ಪತಿಂ ಭಾನುಂ ವಿಲೋಕಯೇತ್ ॥**

- ***ಕನ್ಯೆಯು ಮೊದಲು ರಜಸ್ವಲೆಯಾದಾಗ ಕರ್ತವ್ಯಗಳು :***

ಪ್ರಪ್ರಥಮವಾಗಿ ರಜಸ್ವಲೆಯಾದ ಕನ್ಯೆಯನ್ನು ಒಂದು ಕೋಣೆಯಲ್ಲಿ ಚೆನ್ನಾಗಿರುವ ಮಣೆ ಅಥವಾ ಆಸನದಲ್ಲಿ ಕೂಡಿಸಬೇಕು. ನಾಲ್ಕು ದಿವಸಗಳ

ಪರ್ಯಂತವಾಗಿ ಆಸನದಲ್ಲಿ ಕೂಡಿಸಿ ಅವಳು ಇರುವ ಕೋಣೆಯಲ್ಲಿ ನಾಲ್ಕು ದಿನ ಪರ್ಯಂತ ದೀಪವನ್ನು ಬೆಳಗಬೇಕು. ಮುತ್ತೈದೆಯರು ಆರತಿಯನ್ನು ಬೆಳಗಿ ಆಶೀರ್ವದಿಸಬೇಕು.

ಅರಿಷಿಣ ಕುಂಕುಮ ಮೊದಲಾದ ಮಂಗಳ ವಸ್ತುಗಳನ್ನು ಅವಳಿಗೆ ನೀಡಿ 'ಪತಿಪುತ್ರವತಿಯಾಗು' ಎಂದು ಮುತ್ತೈದೆಯರು ಆಶೀರ್ವದಿಸಬೇಕು. ದೀಪದಿಂದ ಆರತಿ ಮಾಡಬೇಕು. ಅವಳಿರುವ ಕೋಣೆಯಲ್ಲಿ ದೀಪವು ಆರದಂತೆ ಎಚ್ಚರ ವಹಿಸಬೇಕು. ಅನೇಕ ಬಗೆಯ ಉಂಡೆಗಳು, ಅಪೂಪ, ಚಕ್ಕುಲಿ, ವಿವಿಧ ಹಣ್ಣುಗಳನ್ನು ಅವಳಿಗೆ ನೀಡಬೇಕು. ನಾಲ್ಕನೇ ದಿನದಂದು ಸ್ನಾನ ಮಾಡಿಸಬೇಕು.

ಋತುಕಾಲವು ಸ್ತ್ರೀಯರಿಗೆ ಮಹಾನ್ ವರವಾಗಿದೆ. ಇದರಿಂದ ಗರ್ಭಧಾರಣೆಗೆ ಯೋಗ್ಯಳಾಗುವ ಸಂಕೇತ. ಈ ಸಮಯದಲ್ಲಿ ಪುರುಷನೊಂದಿಗೆ ಸೇರುವ ಉತ್ಕಟೇಚ್ಛೆವುಂಟಾಗುತ್ತದೆ. ಈ ಕಾರಣದಿಂದಲೇ ರಜಸ್ವಲೆಯಾಗುವ ಮೊದಲೇ ವಿವಾಹ ಮಾಡಬೇಕೆಂದು ಶಾಸ್ತ್ರ ವಿಧಿಸಿದೆ. ಪರಪುರುಷಕಾಮನೆಯಿಂದಾಗಿ ದೂಷಿತಳಾಗುವುದು ಬೇಡವೆಂದು, ಎಂಟು ವರ್ಷಕ್ಕೆ ಉಪನಯನವಿದ್ದಂತೆ ವಿವಾಹವನ್ನು ವಿಧಿಸಿದೆ.

**ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ ॥**

ಈ ಋತು ಕಾಲದಲ್ಲಿ ವಿವಾಹವಾಗಿಲ್ಲದಿದ್ದರೆ ವ್ಯಭಿಚಾರಾದಿ ದೋಷಗಳು ಪ್ರಾಪ್ತವಾಗುವ ಸಂಭವವಿದೆ. ಕಾಮನೆಯಿಂದಾಗಿ ಬಲಾತ್ಕಾರವಾಗಿ ಪುರುಷ ದರ್ಶನ ಮಾಡುತ್ತಾಳೆ. ಅನೇಕ ಪುರುಷರ ಚಿತ್ರ ಚಿತ್ತದಲ್ಲಿ ಮನೆ ಮಾಡಿ ಆದರ್ಶ ಸತೀತ್ವವನ್ನು ಕಳೆದುಕೊಳ್ಳುವ ಸಂದರ್ಭಗಳಿವೆ. ಋತು ಸ್ನಾತಳಾಗಿ ಯಾವ ಪುರುಷನನ್ನು ಮನಸ್ಸಿನಲ್ಲಿ ಚಿಂತಿಸುವಳೋ ಆ ಚಿತ್ರವು ಚಿತ್ತದಲ್ಲಿ ನೆಲೆವೂರುತ್ತದೆ. ವಿವಾಹವಾಗಿದ್ದರೆ ತನ್ನ ಪತಿಯ ಚಿತ್ರವನ್ನೇ ಚಿಂತಿಸುವಳು. ಇದರಿಂದ ಪತಿಯಂತಹ ಪುತ್ರನೇ ಲಭಿಸುವನು.

ರಜಸ್ವಲೆಯಾದಾಗ ಅವಳಿಗೆ ತನ್ನ ಪತಿಯೊಂದಿಗೆ ಸೇರಬೇಕೆಂಬ ಬಯಕೆಯಿದ್ದರೂ, ತನ್ನ ಪತಿ ಅನುಮೋದಿಸಿದರೂ ಅದಕ್ಕೆ ಅವಕಾಶ ನೀಡಬಾರದು. ಇದರಿಂದಾಗಿ ಪತಿಯ ತೇಜಸ್ಸು, ಬಲ, ಕಣ್ಣುಗಳು ನಾಶವಾಗುತ್ತವೆ.

**ರಜಸಾಭಿಪ್ಲುತಾಂ ನಾರೀಂ ನರಸ್ಯ ಹ್ಯುಪಗಚ್ಛತಃ ।**
**ಪ್ರಜ್ಞಾತೇಜೋ ಬಲಂ ಚಕ್ಷುರಾಯುಶ್ಚೈವ ಪ್ರಹೀಯತೇ ॥** – ಮನು

- ***ಬ್ರಹ್ಮಹತ್ಯೆಯ ಪ್ರಭಾವ :***

ರಜಸ್ವಲೆಯಾದಾಗ ಯಾವುದೇ ವಸ್ತುವನ್ನು ಸ್ಪರ್ಶಿಸುವುದು, ನೋಡುವುದೂ ಸಹ ನಿಷಿದ್ಧವಾಗಿದೆ. ಋತು ಕಾಲದಲ್ಲಿ ಅವಳಿಂದ ಒಂದು ವಿಷದಂತಹ ವಸ್ತು ಹೊರಹೊಮ್ಮುತ್ತಿರುತ್ತದೆ. ಇವಳು ನೋಡಿದ ಹೂವು, ಹೂವಿನ ಗಿಡಗಳು ಸಾಯುತ್ತವೆ. ಈ ಅಂಶವನ್ನು ಅಮೇರಿಕಾ ಜರ್ನಲ್ ಆಫ್ ಕ್ಲಿನಿಕಲ್ ಮೆಡಿಸಿನ್ ಸಂಸ್ಥೆಯು 1921ರಲ್ಲಿ ಪ್ರೋ. ಶೀಕ್ ಎಂಬುವರು ಪ್ರಯೋಗ ಮಾಡಿ ಸಾಬೀತು ಪಡಿಸಿದ್ದಾರೆ.

ಮೂರು ದಿನಗಳ ಕಾಲ ರಕ್ತಸ್ರಾವವಾಗುತ್ತಿರುತ್ತದೆ. ನಾಲ್ಕನೇ ದಿನವೂ ರಕ್ತಸ್ರಾವವಾಗುತ್ತಿದ್ದರೆ ಸ್ನಾನದಿಂದ ಶುದ್ಧಿಯಾಗುವುದಿಲ್ಲ. ಪೂರ್ಣ ನಿಂತ ಮೇಲೆಯೇ ಶುದ್ಧಳಾಗುವಳು.

- ***ರಜಸ್ವಲೆಯರ ದಿಂಬು, ಹಾಸಿಗೆ ಇವುಗಳ ಶುದ್ಧಿ ಹೇಗೆ?***

ರಜಸ್ವಲೆಯರಿಗೆ ದಿಂಬು, ಹಾಸಿಗೆ, ಮಂಚಗಳ ಮೇಲೆ ಮಲಗಲು ಹೇಳಿಲ್ಲ. ಕೇವಲ ಚಾಪೆಯ ಮೇಲೆ ಮಲಗಬೇಕು.

**'ದರ್ಭಸಂಸ್ತರ ಶಾಯಿನೀಂ ಕರತಲಶರಾವ ಪರ್ಣಾನ್ನೃತಭೋಜಿನೀಂ'**
– ಎಂದು ದರ್ಭೆಯ ಚಾಪೆಯಲ್ಲಿ ಮಲಗಬೇಕು ಎನ್ನಬೇಕು.

ಅಶಕ್ತರಾದವರು ಬಹಿಷ್ಠೆಯರಾದಾಗ ತಲೆದಿಂಬು, ಹಾಸಿಗೆ ಮೊದಲಾದವು–ಗಳನ್ನು ಉಪಯೋಗಿಸಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಹತ್ತಿಯ ದಿಂಬು, ಹಾಸಿಗೆ ರಜಸ್ಸಿನಿಂದ ಮಲಿನವಾದ ವಸ್ತ್ರ, ಇತರ ವಸ್ತುಗಳನ್ನು ಬಿಸಿಲಿನಲ್ಲಿ ಹಾಕಿ ಒಣಗಿಸಬೇಕು. ಪುನಃ ನೀರಿನಿಂದ ಸಮ್ಮಾರ್ಜನೆ ಮಾಡಿ ಬಿಸಿಲಿನಲ್ಲಿ ಒಣಗಿಸಿ, ಪುನಃ ಮೈಲಿಗೆ ಇಲ್ಲದವರು ನೀರಿನಿಂದ ಪ್ರೋಕ್ಷಿಸಿದರೆ ಶುದ್ಧಿಯಾಗಿ ಕಾರ್ಯ ಯೋಗ್ಯವಾಗುತ್ತದೆ. ನಾರಿನಿಂದ ಮಾಡಿದ ಹಾಸಿಗೆ ಉತ್ತಮ ಪಕ್ಷ.

**ತೂಲಿಕಾಮುಪಧಾನಂ ಚ ಪುಷ್ಪರಕ್ತಾಂಬರಂ ತಥಾ ।**
**ಶೋಷಯಿತ್ವಾಽಽತಪೇ ಕಿಂಚಿತ್ ಕರೈಃ ಸಮ್ಮಾರ್ಜಯೇನ್ ಮು ।**
**ಪಶ್ಚಾಚ್ಚ ವಾರಿಣಾ ಪ್ರೋಕ್ಷ್ಯ ವಿನಿಯುಂಜೀತ ಕರ್ಮಣಿ ॥** – ಮಿತಾಕ್ಷರೀ

- ***ಸ್ತ್ರೀಯರಿಗೆ ವ್ರತ ವಿಧಾನ :***

ಪ್ರತಿಯೊಬ್ಬರಿಗೂ ಏಕಾದಶೀ ವ್ರತ, ಚಾತುರ್ಮಾಸ್ಯ ವ್ರತ, ಕಾರ್ತೀಕಾದಿ ವ್ರತಗಳು ಮುಖ್ಯವಾದವುಗಳು.

ಕಾರ್ತೀಕದಲ್ಲಿ ಸೂರ್ಯನು ತುಲಾರಾಶಿಯಲ್ಲಿರುವನು. ಆ ಕಾಲದಲ್ಲಿ ಪ್ರಾತಃಕಾಲ ಬೇಗನೆ ಎದ್ದು ಪತಿಗೆ ವಂದಿಸಿ, ಸ್ನಾನ ಮಾಡಿದರೆ ಪಾಪಗಳು ದೂರವಾಗುವುವು. ದೇವಾಲಯಕ್ಕೆ ಹೋಗಿ ಕಸಗುಡಿಸಿ ಗೋಮಯ ನೀರಿನಿಂದ ಸಾರಣ ಮಾಡಿ, ರಂಗವಲ್ಯಾದಿಗಳಿಂದ ಅಲಂಕರಿಸಿದರೆ ಮಹಾಪುಣ್ಯವು.

ದೀಪಾರಾಧನೆ, ಏಕಾದಶಿಗಳಲ್ಲಿ ಉಪವಾಸ ಜಾಗರಣೆ ಹರಿಗುರು ಪೂಜೆ ಮಾಡಬೇಕು. ಕಾರ್ತೀಕದಲ್ಲಿ ದೀಪವನ್ನು ಬೆಳಗಿ, ದೀಪದಾನ ಮಾಡುವುದರಿಂದ ಅತ್ಯಪೂರ್ವ ಸೌಂದರ್ಯವುಂಟಾಗುತ್ತದೆ. ನೇತ್ರ ದೋಷವಿರುವುದಿಲ್ಲ.

ಚೈತ್ರದಲ್ಲಿ ದವನದಿಂದ ಪೂಜೆ, ಚೈತ್ರದಲ್ಲಿ ಪ್ರತಿದಿನವೂ ಆಯಾಯ ತಿಥಿಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ದವನದಿಂದ ಪೂಜಿಸಬೇಕು. ದ್ವಾದಶಿಯಂದು ಪ್ರದ್ಯುಮ್ನ ಇವೆ ಭಗವಂತನನ್ನು ಪೂಜಿಸಬೇಕು. ಪೌರ್ಣಿಮೆಯಂದು ಸಮಸ್ತ ದೇವತೆಗಳನ್ನು ದವನದಿಂದ ಪೂಜಿಸಬೇಕು.

ಹೀಗೆ ಚೈತ್ರ ವೈಶಾಖದಲ್ಲಿ ದವನದಿಂದ ಪೂಜಿಸಿದವರಿಗೆ ಸಾವಿರ ಗೋದಾನ ಫಲವುಂಟಾಗುತ್ತದೆ. ದವನ– ಮರುಗ ಇವೆರಡೂ ಶ್ರೀಹರಿಗೆ ಅತಿ ಪ್ರಿಯವಾದ ವಸ್ತುಗಳು.

* * * * * *



# 8. ಋಷಿ ಪಂಚಮೀ ವ್ರತ





ಭಾದ್ರಪದ ಶುಕ್ಲ ಪಂಚಮಿಯೇ ಋಷಿ ಪಂಚಮೀ. ಈ ವ್ರತಾಚರಣೆಯಿಂದ ರಜಸ್ವಲಾ ದೋಷದಿಂದಾಗಿ ಪ್ರಾಪ್ತವಾದ ದೋಷಗಳು ದೂರವಾಗುವುವು. ಸ್ತ್ರೀಯರಿಗೆ ಇರುವ ದೋಷವೆಂದರೆ ರಜಸ್ವಲಾ ದೋಷವೊಂದೆ ಆಗಿರುವುದು.

**ಸ್ತ್ರೀಣಾಂ ಚ ಪರಮಂ ಪಾಪಂ ರಜೋದೋಷ ಸಮುದ್ಭವಮ್ ।**
**ತಸ್ಯ ಪಾಪಸ್ಯ ಶಾಂತ್ಯರ್ಥಂ ಕಾರ್ಯೇಯಂ ಋಷಿಪಂಚಮೀ ॥**

ರಜಸ್ವಲಾ ದೋಷದಿಂದಾಗಿ ಮನೆಯಲ್ಲಿ ನಿರಂತರ ಜಗಳ ವೈಮನಸ್ಯಗಳುಂಟಾಗುತ್ತಿರುತ್ತವೆ.

**ಋತು ಸಂಪರ್ಕದೋಷೇಣ ಗೃಹೇ ಚ ಕಲಹಃ ಸದಾ ॥**

ಶ್ಯೆತಾ ಎಂಬುವಳು ಶ್ರಾದ್ಧ ಕಾಲದಲ್ಲಿ ತಯಾರಿಸಿದ್ದ ಭಕ್ಷ್ಯಾದಿಗಳನ್ನು ನೋಡಿ ಅಪವಿತ್ರಗೊಳಿಸಿದ್ದರಿಂದ ಅವಳಿಗೆ ಹುಟ್ಟಿದ ಆರು ಮಕ್ಕಳೂ ಮೃತರಾದರು. ಏಳನೇ ಮಗುವೂ ಸಾಯಲಿರುವಾಗಲೇ ಶ್ಯೆತೆಯು ಮಗುವನ್ನೆತ್ತಿಕೊಂಡು ಕಾಡಿಗೆ ಓಡಿದಳು. ಅಲ್ಲಿ ಸಪ್ತರ್ಷಿಗಳ ಆಶ್ರಮವಿತ್ತು. ಆಶ್ರಮದ ಋಷಿಯೊಬ್ಬರು ಹಸ್ತ–ಪಾದಪ್ರಕ್ಷಾಲನೆ ಮಾಡುತ್ತಿರುವಾಗ ಅಕಸ್ಮಾತ್ ಋಷಿ ಪಾದೋದಕವು ಆ ಮೃತ ಮಗುವಿನ ಮೇಲೆ ಬಿತ್ತು. ಕೂಡಲೇ ಜೀವ ಬಂದು ಉಸಿರಾಡತೊಡಗಿತು. ಆ ಋಷಿಗೆ ಪ್ರಣಾಮ ಮಾಡಿ ಕೃತಜ್ಞತೆ ಹೇಳಿ, ನನಗೇಕೆ ಇಂತಹ ದೌರ್ಭಾಗ್ಯವೊದಗಿತು? ಎಂದಳು.

ನೀನು ಶ್ರಾದ್ಧ ಕಾಲದಲ್ಲಿ ಬ್ರಾಹ್ಮಣ ಭಕ್ಷ್ಯ ಯೋಗ್ಯಗಳಾದ ಆಹಾರ ಪದಾರ್ಥಗಳನ್ನು ನೋಡಿ ದೂಷಿತಗೊಳಿಸಿರುವೆ. ಅದರ ದುಷ್ಫಲವೇ ಇದು ಎಂದರು.

**ಪಿತೃಭೋಜ್ಯಂ ಶ್ರಾದ್ಧಕಾಲೇ ದೂಷಿತಂ ಪಿತೃಶ್ರಾದ್ಧಹಾ ।**

ಈ ಪಾಪ ಪರಿಹಾರಕ್ಕಾಗಿ ಭಾದ್ರಪದ ಶುದ್ಧ ಪಂಚಮಿಯಂದು ಕಶ್ಯಪಾತ್ರಿ ಭರದ್ವಾಜಾದಿ ಸಪ್ತರ್ಷಿಗಳನ್ನು ಉಪವಾಸದಿಂದಿದ್ದು, ಯಾಮ-ಯಾಮಕ್ಕೆ ಪೂಜಿಸು. ಹೀಗೆ ಏಳು ವರ್ಷ ಮಾಡು. ಪೂರ್ಣಫಲಕ್ಕಾಗಿ ಉದ್ಯಾಪನ ಮಾಡಿ ಬ್ರಾಹ್ಮಣ ದಂಪತಿಯರಿಗೆ ಭೋಜನ ಮಾಡಿಸಿ, ಬಾಗಿಣವನ್ನು ನೀಡು. ಇದರಿಂದ ನಿನ್ನ ರಜಸ್ವಲಾ ದೋಷ ನಿಮಿತ್ತ ಪಾಪ ಪರಿಹಾರವಾಗುವುದೆಂದರು.

**ಋಷಿಭಿಃ ಕಥಿತಾ ಚೇಯಂ ತಸ್ಮಾದ್ ವೈ ಋಷಿಪಂಚಮೀ ।**
**ಋತು ಸಂಪರ್ಕದೋಷಘ್ನೀ ಮಹಾಪಾಪವಿನಾಶಿನೀ ॥**

*ಋಷಿ ಪಂಚಮಿ ಸಂಕಲ್ಪ :*

ಪ್ರಾತಃ ಕಾಲದಲ್ಲಿ ಉತ್ತರಾಣಿಯಿಂದ (ಅಪಾಮಾರ್ಗ) ದಂತ ಧಾವನವನ್ನು ಮಾಡಬೇಕು.

**ಆಯುರ್ಬಲಂ ಯಶೋ ವರ್ಚಃ ಪ್ರಜಾ ಪಶುಧನಾನಿ ಚ ।**
**ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವನ್ನೋ ದೇಹಿ ವನಸ್ಪತೇ ॥**

ನದಿ ತೀರಕ್ಕೆ ಹೋಗಿ – ಸಂಕಲ್ಪಪೂರ್ವಕ ಸ್ನಾನವನ್ನು ಮಾಡಿ, ಸಾಲಿಗ್ರಾಮ ತೀರ್ಥವನ್ನು ಸ್ವೀಕರಿಸಿ, ನಂತರ ಪಂಚಗವ್ಯ ಪ್ರಾಶನವನ್ನು ಮಾಡಿ ನಿತ್ಯ ಕರ್ಮಗಳನ್ನು ಮುಗಿಸಿ, ಆಚಮನ – **ಪ್ರಾಣಾಯಾಮ ಮಾಡಿದ ನಂತರ, ಶುಭೆಶೋಭನೇ ಮುಹೂರ್ತೆ ........ ಸಂವತ್ಸರೇ ದಕ್ಷಿಣಾಯನೇ ವರ್ಷ ಋತೌ ಭಾದ್ರಪ್ರದಮಾಸೇ, ಶುಕ್ಲಪಕ್ಷೇ ...... ಪಂಚಮ್ಯಾಂ ಶುಭತಿಥೌ ........ ಅಮುಕವಾಸರೇ. ಮಮ ಇಹ ಜನ್ಮನಿ, ಜನ್ಮಾಂತರೇ ವಾ ಬಾಲ್ಯ – ಕೌಮಾರ – ಯೌವ್ವನ, ಜಾಗ್ರತ–ಸ್ವಪ್ನ – ಸುಷುಪ್ತ್ಯವಸ್ಥಾಸು, ವಾಙ್ಮನಃಕಾಯ ಕರ್ಮೇಂದ್ರಿಯ ವ್ಯಾಪಾರೈಃ ಜ್ಞಾನತೋಽಜ್ಞಾನತೋ ವಾ ಋತು ಸಂಪರ್ಕ ಜನಿತ ದೋಷ ಪರಿಹಾರದ್ವಾರಾ ಪರಮಾತ್ಮನಃ ಅನುಗ್ರಹ ಸಿದ್ಧ್ಯರ್ಥಂ**

**ಕಶ್ಯಪಾದಿ ಸಪ್ತರ್ಷ್ಯಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀವೇದವ್ಯಾಸ ಪ್ರೇರಣಯಾ ಶ್ರೀವೇದವ್ಯಾಸ ಪ್ರೀತ್ಯರ್ಥಂ ಋಷಿ ಪಂಚಮೀವ್ರತಾಂಗ ಆರುಂಧತ್ಯಾದಿ ಸಹಿತ ಕಶ್ಯಪಾದಿ ಸಪ್ತಋಷೀಣಾಂ ಆವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೆ** ಎಂದು ಸಂಕಲ್ಪಿಸಬೇಕು.

## ಅಥ ಋಷಿ ಪಂಚಮೀ ಕಥಾಸಾರ ಸಂಗ್ರಹ ಪ್ರಾರಂಭಃ

*ಯುಧಿಷ್ಠಿರೋವಾಚ–*

**ಶುತ್ರಾನಿ, ದೇವದೇವೇಶ, ವ್ರತಾನಿ, ಸುಬಹೂನಿ ಚ ।**
**ಸಾಂಪ್ರತಂ, ತ್ವನ್ಯದಾಚಕ್ಷ್ವ ವ್ರತಂ ಪಾಪಪ್ರಣಾಶನಮ್ ॥**

*ಶ್ರೀಕೃಷ್ಣ ಉವಾಚ –*

**ಅಥಾನ್ಯದಪಿ, ರಾಜೇಂದ್ರ, ಪಂಚಮೀಋಷಿಸಂಜ್ಞಿತಾಮ್ ।**
**ಪ್ರವಕ್ಷ್ಯಾಮಿ, ಚ, ಯಾಂ, ಕೃತ್ವಾನಾರೀ ಪಾಪಾತ್ ಪ್ರಮುಚ್ಯತೇ ॥**

*ಯುಧಿಷ್ಠಿರ ಉವಾಚ –*

**ಕೀದೃಶೀ, ಪಂಚಮೀ ಕೃಷ್ಣ, ಕಥಂ, ವೈ ಋಷಿಸಂಜ್ಞಕಾ ॥**
**ಪಾತಕಾನ್ಮುಚ್ಯತೇ, ಕಸ್ಮಾನ್ನಾರಿ ಯದುಕುಲೋದ್ಭವ ।**
**ಪಾಪಾನಿ, ಸುಬಹೂನ್ಯತ್ರ, ವಿದ್ಯಂತೇ ಕಿಲ ಕೇಶವ ।**
**ಕೃತಾಂ ಋಷಿಪಂಚಮ್ಯಾಂ ಕಸ್ಮಾತ್ ಪಾಪಾತ್ ಪ್ರಮುಚ್ಯತೇ ॥**

*ಶ್ರೀಕೃಷ್ಣ ಉವಾಚ –*

**ಆಜ್ಞಾನಾದ್ಯದಿ, ವಾ, ಜ್ಞಾನಾದ್‌ಯಾ ಸ್ತ್ರೀ ಜಾತಾ ರಜಸ್ವಲಾ ।**
**ದುಷ್ಟಾ ಸ್ಪೃಶತಿ ಭಾಂಡಾನಿ, ಗೃಹ ಕರ್ಮಣಿ, ಸಂಸ್ಥಿತಾ ॥**

ಧರ್ಮರಾಜನು ಶ್ರೀ ಕೃಷ್ಣನಿಗೆ ಪ್ರಶ್ನೆ ಮಾಡುತ್ತಾನೆ. ದೇವ ದೇವೇಶನಾದ ಶ್ರೀಕೃಷ್ಣನೇ ನಿನ್ನ ಮುಖದಿಂದ ಎಷ್ಟೋ ವ್ರತಗಳು ನನ್ನಿಂದ ಕೇಳಲ್ಪಟ್ಟಿತು. ಇನ್ನು ಎಲ್ಲಾ ಪಾಪ ಪರಿಹಾರವಾಗುವ ಬೇರೊಂದು ವ್ರತವಿದ್ದರೆ ನನಗೆ ಹೇಳೆಂದು ಕೇಳಿದನು. ಅದಕ್ಕೆ ಕೃಷ್ಣನು ಹೇಳುವನು. ಧರ್ಮರಾಜನೇ ಕೇಳು, ಸ್ತ್ರೀಯರು ಯಾವ ವ್ರತ ಮಾಡುವುದರಿಂದ ಸರ್ವಪಾಪಗಳಿಂದ ಮುಕ್ತರಾಗುವರೋ ಅಂಥ

ವಿಷಯದಲ್ಲಿ ಋಷಿ ಪಂಚಮೀ ಎಂಬ ಒಂದು ವ್ರತವಿದೆ. ಅದನ್ನು ಹೇಳುವೆನು, ಧರ್ಮರಾಜನು ಕೇಳುವನು ಪಂಚಮೀ ಎಂದರೆ ಯಾವುದು ಅದಕ್ಕೆ ಋಷಿಪಂಚಮೀ ಎಂಬುದಾಗಿ ಏಕೆ ಹೇಳುವರು. ಹೆಂಗಸರು ಯಾವ ಪಾಪದಿಂದ ಮುಕ್ತರಾಗುವರು, ಪಾಪಗಳು, ಅನೇಕ ವಿಧವಿದೆ ಅದರಲ್ಲಿ ಯಾವ ಪಾಪದಿಂದ ಮುಕ್ತರಾಗುವರು ಎಂದು ಕೇಳಲು ಕೃಷ್ಣನು ಹೇಳುವನು. ಮುಟ್ಟಾದ ಸ್ತ್ರೀಯರು ತನಗೆ ತಿಳಿದೆ ಆಗಲಿ, ತಿಳಿಯದೆ ಆಗಲಿ ತನ್ನ ಮನೆಯ ಕೆಲಸವನ್ನು ಮುಟ್ಟಿ ಮಾಡುವುದು ಇವುಗಳಿಂದ ಮಹಾ ಪಾಪಗಳುಂಟಾಗುತ್ತವೆ. ಪಾತ್ರೆ ಪರಿಕರಗಳನ್ನು ಮುಟ್ಟುವುದು, ಇದರಿಂದ ಮುಕ್ತಳಾಗಿ ಉತ್ತಮ ಲೋಕವನ್ನು ಹೊಂದುವಳು. ಮುಟ್ಟಾದವಳು ಮನೆ ಪಾತ್ರೆ ಪರಿಕರ ಮುಟ್ಟಿ ಮನೆ ಕೆಲಸ ಮಾಡುವುದರಿಂದ ಅವಳಿಗೆ ನರಕವೇ ಗತಿಯು. ಆದ್ದರಿಂದ ಮುಟ್ಟಾದ ಹೆಂಗಸನ್ನು ಯಾವ ಕೆಲಸದಲ್ಲೂ ಉಪಯೋಗಿಸದೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ಈ ನಾಲ್ಕು ವರ್ಣದ ಜನರಿಂದ ದೂರದಲ್ಲಿಯೇ ಇಡತಕ್ಕದ್ದಾಗಿದೆ. ಆ ಕಾರಣದಿಂದ ಋಷಿ ಪಂಚಮೀ ಮಾಡಿದ್ದಲ್ಲಿ ರಜಸ್ವಲಾ ದೋಷ ಪರಿಹಾರವಾಗುವುದು. ಹಿಂದೆ ನಡೆದು ಬಂದ ಇತಿಹಾಸವನ್ನು ಹೇಳುವೆನು । ಹಿಂದೆ ಇಂದ್ರನು ಬ್ರಾಹ್ಮಣನ ಮಗನಾದ ವೃತ್ರಾಸುರನೆಂಬುವವನನ್ನು ಯುದ್ಧದಲ್ಲಿ ಕೊಂದಿದ್ದರಿಂದ ಅವನಿಗೆ ಬ್ರಹ್ಮಹತ್ಯಾ ದೋಷ ಬಂದಿತು. ಇಂದ್ರನು ವೃತ್ರಹತ್ಯದಿಂದ ಪೀಡಿತನಾಗಿಯೂ ತೇಜೋಹೀನನಾಗಿಯೂ ಅಂಥ ಪಾಪದ ಬಿಡುಗಡೆ ಯಾಗುವುದಕ್ಕಾಗಿ ಅತಿ ನಾಚಿಕೆಯಿಂದ ಇಂದ್ರನು ಬ್ರಹ್ಮನಿಗೆ ಶರಣು ಹೋದನು. ಬ್ರಹ್ಮನು ಇಂದ್ರನ ಹೀನಸ್ಥಿತಿಯನ್ನು ನೋಡಿ ಎಲ್ಲಾ ದೇವತೆಗಳಿಂದ ಕೂಡಿ ಕ್ಷಣಕಾಲ ವಿಚಾರ ಮಾಡಿ, ನಂತರ ಸಂತೋಷವಾದ ಮನಸ್ಸಿನಿಂದ ಇಂದ್ರನ ದೋಷವನ್ನು ಈ ರೀತಿಯಲ್ಲಿ ವಿಭಾಗಿಸಿ ಆ ಬ್ರಹ್ಮಹತ್ಯೆಯನ್ನು ನಾಲ್ಕು ಕಡೆ ಹಾಕಿದನು. ಮೊದಲನೇ ಭಾಗವನ್ನು ಬೆಂಕಿಯ ಜ್ವಾಲೆಯಲ್ಲಿ, ಎರಡನೇ ಭಾಗವನ್ನು ನದಿಯ ನೀರಿನಲ್ಲಿ, ಮೂರನೇ ಭಾಗವನ್ನು ಪರ್ವತದ ಶಿಖರದಲ್ಲಿ ಹಾಗೂ ಮರಗಿಡದಲ್ಲೂ, ನಾಲ್ಕನೇ ಭಾಗವನ್ನು ಹೆಂಗಸರ ರಜಸ್ಸಿನಲ್ಲಿ ಹಾಕಿದನು. ಈ ಕಾರಣದಿಂದ ಮುಟ್ಟಾದ ಸ್ತ್ರೀಯನ್ನು ಯಾವ ಕಾರಣದಿಂದಲೂ ಪ್ರಯತ್ನ ಪೂರ್ವಕವಾಗಿಯೂ ಬ್ರಹ್ಮನ ಆದೇಶದ ಮೇರೆಗೆ ನಾಲ್ಕು ವರ್ಣದವರೂ ದೂರದಲ್ಲಿಯೇ ಇಡತಕ್ಕದ್ದು. ಮುಟ್ಟಾದ ಹೆಂಗಸು ಮೊದಲ ದಿನ ಚಂಡಾಲರಂತೆ

ಶುದ್ಧಳಲ್ಲ. ಎರಡನೇ ದಿನ ಬ್ರಹ್ಮಘಾತಿನಿಯಂತೆ ಅಶುದ್ಧಳು. ಮೂರನೇ ದಿನ ಅಗಸಗಿತ್ತೀಯಂತೆ ಅಪವಿತ್ರಳು. ನಾಲ್ಕನೆ ದಿನ ಶುದ್ಧಳಾಗುವಳು. ಗಂಡನ ಸೇವೆಯಲ್ಲಿಯೇ ಶುದ್ಧಳು ಹೊರತು, ಪಿತೃ ದೇವತಾ ಕಾರ್ಯಗಳಲ್ಲಿ ಶುದ್ಧಳಲ್ಲ. ಅಂಥ ಕಾರ್ಯಕ್ಕೆ ಐದನೇ ದಿನವೇ ಶುದ್ಧಿಯನ್ನು ಹೊಂದುವಳು. ಮುಟ್ಟಾದ ಪಾಪ ನಿವಾರಣೆಗಾಗಿ ಈ ಋಷಿಪಂಚಮಿಯನ್ನು ಮಾಡಬೇಕು. ಇದರಿಂದ ಎಲ್ಲಾ ಪಾಪಗಳೂ ಉಪದ್ರವಗಳೂ ನಿವಾರಣೆಯಾಗುವುದು. ಇದನ್ನು ನಾಲ್ಕು ವರ್ಣದ ಜನರೂ ಪಾಲಿಸಬೇಕು. ಇದಕ್ಕಾಗಿ ಒಂದು ಇತಿಹಾಸವನ್ನು ಶ್ರೀಕೃಷ್ಣನು ಧರ್ಮರಾಯನಿಗೆ ಹೇಳುವನು.

ವಿದರ್ಭ ದೇಶದಲ್ಲಿ ಶ್ಯೇನಜಿತ್ ಎಂಬ ರಾಜನಿದ್ದನು. ಅವನ ದೇಶದಲ್ಲಿ ಸುಮಿತ್ರನೆಂಬ ಒಬ್ಬ ಬ್ರಾಹ್ಮಣನು ಇದ್ದನು. ಅವನಿಗೆ ಜಯಶ್ರೀ ಎಂಬ ಹೆಂಡತಿಯೂ ಇದ್ದಳು. ಇವರು ಮನೆಯಲ್ಲಿ ಕೆಲಸದವರು, ಸ್ನೇಹಿತರೂ, ಆಪ್ತಜನರು ಹೀಗೆ ಬಹಳ ಜನ ಇರುತ್ತಿದ್ದರು. ಆ ಜನರೆಲ್ಲರ ಹೇಗೆ ಹೊಟ್ಟೆ ತುಂಬುವದೆಂಬ ಚಿಂತೆಯಿಂದ ಮಳೆಗಾಲದಲ್ಲಿ ಮನೆ ಕೆಲಸ ಮುಗಿಸಿ, ನಂತರ ಹೊಲದಲ್ಲಿ ಹೋಗಿ ಕೆಲಸ ಮಾಡುತ್ತಿದ್ದರು. ಹೊಲದ ಕೆಲಸವನ್ನು ಜಯಶ್ರೀಯನೂ ಮಾಡುತ್ತಿದ್ದಳು. ಹೀಗಿರಲು ಒಂದು ದಿನ ಇವಳು ಮುಟ್ಟಾದಳು. ಆದರೂ ಮನೆಯ ಪಾತ್ರಪರಿಕರಗಳನ್ನು ಮುಟ್ಟಿ ಮನೆಯ ಕೆಲಸವನ್ನು ಮಾಡಿದಳು. ಮುಂದೆ ಕೆಲವು ಕಾಲದ ನಂತರ ಅವಳು ಸತ್ತು ಹೋದಳು. ಆದಾದ ಕೆಲವು ದಿವಸದಲ್ಲಿಯೇ ಅವಳ ಗಂಡನಾದ ಸುಮಿತ್ರನೂ ಸತ್ತು ಹೋದನು. ಹೀಗೆ ಅವರಿಬ್ಬರೂ ಕರ್ಮವಶರಾದ ಮೇಲೆ ಅವರ ಮಗನಾದ ಸುಮಿತ್ರನ ಮನೆಯಲ್ಲೇ ತಾಯಿಯಾದ ಜಯಶ್ರೀಯು ನಾಯಿಯ ಜನ್ಮವನ್ನೂ, ತಂದೆಯಾದ ಸುಮಿತ್ರನು ಎತ್ತಿನ ಜನ್ಮವನ್ನು ಹೊಂದಿದ್ದರು. ಆದರೆ ಅವರಿಗೆ ಹಿಂದಿನ ಜನ್ಮದ ಸ್ಮರಣೆ ಇದ್ದಿತು. ಸುಮತಿಯಾದರೋ ಗುರುಸೇವಾ ತತ್ಪರನಾಗಿ, ಧರ್ಮ ಮಾರ್ಗದಿಂದ ದೇವರು ಅತಿಥಿ ಪೂಜಾದಲ್ಲಿಯೇ ನಿರತನಾಗಿದ್ದನು. ಸುಮತಿಯ ಹೆಂಡತಿಯ ಹೆಸರು ಚಂದ್ರವತಿ ಎಂಬುದಾಗಿತ್ತು. ಸಹಧರ್ಮಿಣಿಯಾಗಿದ್ದಳು. ಹೀಗಿರುವಾಗ ಸುಮತಿಯು ಚಂದ್ರಮತಿಗೆ ಹೀಗೆ ಹೇಳಿದನು. ಈ ದಿನ ನಮ್ಮ ತಂದೆಯ ಶ್ರಾದ್ಧವಿದೆ ಬ್ರಾಹ್ಮಣರ ಭೋಜನವಾಗಬೇಕಾಗಿದೆ. ಅದಕ್ಕಾಗಿ ನೀನು ಅಡಿಗೆಯನ್ನು ಮಾಡೆಂದು ಹೇಳಿದನು. ಗಂಡನ ಮಾತಿನಂತೆ ಚಂದ್ರಮತಿಯು ಅಡಿಗೆ ಸಿದ್ಧಪಡಿಸಿದಳು. ಪಾಯಸದ ಪಾತ್ರೆಯನ್ನು ಒಲೆಯ ಮೇಲೆಯೇ ಇಟ್ಟಿದ್ದಳು. ಅದರಲ್ಲಿ ಒಂದು ಹಾವು ತನ್ನ ವಿಷವನ್ನು ಚೆಲ್ಲಿತು. ಇದನ್ನು ನಾಯಿಯೂ

ನೋಡಿತು. ಈ ಪಾಯಸವನ್ನು ತಿಂದ ಬ್ರಾಹ್ಮಣರು ವಿಷವೇರಿ ಸಾಯುವರೆಂದು ಅದರಿಂದ ನನ್ನ ಮಗನಿಗೆ ಬ್ರಹ್ಮಹತ್ಯೆ ದೋಷ ಬರುವುದೆಂದು ಯೋಚಿಸಿ, ಭಯಗೊಂಡು ತಾನು ಹೋಗಿ ಆ ಅಡಿಗೆ ಪಾತ್ರೆಗಳನ್ನು ಮುಟ್ಟಿತು. ಇದನ್ನು ನೋಡಿದ ಚಂದ್ರವತಿಯು ಸಿಟ್ಟಿನಿಂದ ಆ ನಾಯಿಯನ್ನು ಉರಿಯುವ ಕಟ್ಟಿಗೆಯಿಂದ ಹೊಡೆದು, ಆ ಅಪವಿತ್ರವಾದ ಅಡಿಗೆಯನ್ನು ಹೊರಗೆ ಹಾಕಿ ಶುದ್ಧ ಮಾಡಿ ಬೇರೆ ಅಡಿಗೆಯನ್ನು ಮಾಡಿದಳು. ಸುಮತಿಯು ವಿಧಿಪೂರ್ವಕ ಶ್ರಾದ್ಧಕರ್ಮವನ್ನು ಮಾಡಿ ಮುಗಿಸಿದನು. ಬ್ರಾಹ್ಮಣರ ಭೋಜನವು ಆಯಿತು. ಬ್ರಾಹ್ಮಣರ ಎಂಜಲನ್ನು ಸಹ ಚಂದ್ರಮತಿಯು ಹೊರಗೆ ಹಾಕದೆ ಒಂದು ನೆಲದಲ್ಲಿ ಹಳ್ಳ ಮಾಡಿ ಅದರಲ್ಲಿ ಮುಚ್ಚಿಟ್ಟಳು. ಆ ದಿನ ನಾಯಿಗೆ ಉಪವಾಸವೇ ಆಯಿತು. ಅಂದಿನ ರಾತ್ರಿ ನಾಯಿಯು ಎತ್ತಿನ ಹತ್ತಿರ ಹೋಗಿ ಹೀಗೆ ಹೇಳಿತು. "ಈ ದಿನ ನನಗೆ ಬಹಳ ಹಸಿವೆ ಆಗಿದೆ. ಪ್ರತಿದಿನವೂ ನನ್ನ ಮಗನು ನನಗೆ ಏನಾದರೂ ತಿನ್ನಲು ಕೊಡುತ್ತಿದ್ದನು. ಆದರೆ ಈ ದಿನ ಏನನ್ನೂ ಕೊಡಲಿಲ್ಲ ಕಾರಣ ತಿಳಿಯದಾಗಿದೆ. ಈ ದಿನ ನನ್ನ ಸೊಸೆಯು ಅಡಿಗೆ ಮಾಡುತ್ತಿದ್ದ ಪಾಯಸದ ಪಾತ್ರೆಯಲ್ಲಿ ಹಾವು ವಿಷ ಚೆಲ್ಲಿತು. ಅದನ್ನು ನೋಡಿದ ನಾನು ಆ ಪಾಯಸದ ಪಾತ್ರೆಯಲ್ಲಿ ಹೋಗಿ ಮುಟ್ಟಿದೆ. ಅದರಿಂದ ಕೋಪಗೊಂಡ ಸೊಸೆಯು ಉರಿಯುವ ಕಟ್ಟಿಗೆಯಿಂದ ನನಗೆ ಹೊಡೆದಳು. ನಡುವು ಮುರಿಯಿತು" ಎಂಬುದಾಗಿ ನಾಯಿ ಹೇಳಲು, ಎತ್ತು ಸಹ ತನ್ನ ಮನಸ್ಸಿನಲ್ಲಿ ಖೇದವನ್ನು ಹೊಂದಿ ನಾನೇನು ಮಾಡಲಿ. ಈ ದಿನ ನಿನ್ನ ಮಗನ ಹೊಲದಲ್ಲಿ ಸಾಯಂಕಾಲದವರೆಗೂ ನೇಗಿಲನ್ನು ಜಗ್ಗಿದೆನು. ನನ್ನ ಮಗನು ಮೋರೆಗೆ ಜಾಳಿಗೆ ಹಾಕಿ ಮುಖವನ್ನು ಕಟ್ಟಿ ಬಹಳ ಹೊಡೆದನು. ನನಗೂ ಆಹಾರವಿಲ್ಲ ಹಸಿವೆಯಾಗಿದೆ. ನನ್ನ ಮಗನು ಇಷ್ಟು ಭಕ್ತಿಯಿಂದ ಶ್ರಾದ್ಧ ಮಾಡಿದರೂ ನನಗೆ ಸೌಖ್ಯವಾಗದ ಕಾರಣ ಆ ಶ್ರಾದ್ಧವು ವ್ಯರ್ಥವೇ ಸರಿ ಎಂಬುದಾಗಿ ನಾಯಿಗೆ ಹೇಳಿತು ಎತ್ತು. ಕೃಷ್ಣನು ಹೇಳುತ್ತಾನೆ ! ಧರ್ಮರಾಜನೇ ಈ ರೀತಿ ನಾಯಿ, ಎತ್ತುಗಳ ಸಂವಾದವನ್ನು ಸುಮತಿಯು ಕೇಳಿ ಇವರು ತನ್ನ ತಾಯಿ-ತಂದೆಗಳೇ ಆಗಿದ್ದಾರೆಂದು ತಿಳಿದು ಬಹಳ ದುಃಖದಿಂದ ಆ ರಾತ್ರಿಯಲ್ಲೆ ಅವಕ್ಕೆ ಹೊಟ್ಟೆ ತುಂಬ ಅನ್ನವನ್ನು ಹಾಕಿದನು. ಹೀಗೆ ಯೋಚಿಸಿದನು. ಅಂಥ ನೀಚ ಅವಸ್ಥೆ ಅವರಿಗೆ ಹೇಗೆ ಬಂದಿತು. ಅದರ ಬಿಡುಗಡೆಗೆ ಕಾಡಿಗೆ ಹೋಗಿ ಜ್ಞಾನವೃದ್ಧರಾದ ಋಷಿಗಳನ್ನು ನೋಡಿ ವಿಚಾರಿಸಿಕೊಂಡು ಬರುವುದೆಂದು

ಯೋಚಿಸಿ, ಮರುದಿನ ಕಾಡಿಗೆ ಹೋಗಿ ಅಲ್ಲಿರತಕ್ಕ ಪರಮಧಾರ್ಮಿಕರಾದ ಋಷಿಗಳನ್ನು ನೋಡಿ ಅವರಿಗೆ ನಮಸ್ಕಾರ ಮಾಡಿ ಹೀಗೆ ಪ್ರಾರ್ಥಿಸುವನು. ಋಷಿಗಳಿರೇ ! ನನ್ನದೊಂದು ವಿಚಾರವಿದೆ. ನನ್ನ ತಾಯಿ-ತಂದೆಗಳು ಸ್ವತಃ ತಾವು ಸದಾಚಾರಿಗಳಾಗಿದ್ದರೂ ನನ್ನ ತಂದೆಯು ಎತ್ತಾಗಿಯೂ, ನನ್ನ ತಾಯಿಯು ನಾಯಿಯಾಗಿ ನೀಚಯೋನಿಯಲ್ಲಿ ಹೇಗೆ ಉತ್ಪನ್ನರಾದರು ? ಅಂಥ ಪಾಪದ ಬಿಡುಗಡೆಯನ್ನು ಹೇಗೆ ಹೊಂದಬಹುದು ಎನ್ನುವುದನ್ನು ತಿಳಿದು ಹೇಳಿರೆಂದು ಬೇಡಿದನು. ಕೃಷ್ಣನು ಧರ್ಮರಾಜನಿಗೆ ಹೇಳುವನು. ಶ್ರೇಷ್ಠನಾದ ಸರ್ವತಪ ಎಂಬುವನು ಹೀಗೆ ಹೇಳಿದನು. ನಿನ್ನ ತಾಯಿಯು ಹಿಂದಿನ ಜನ್ಮದಲ್ಲಿ ಮುಟ್ಟಾದದ್ದು ತಿಳಿದೂ ಮೂರ್ಖತನದಿಂದ ಮನೆ ಕೆಲಸ ಮಾಡಿ ಪಾತ್ರೆ ಪಗಡನ್ನು ಮುಟ್ಟಿರುವುದರಿಂದ ಅವಳು ನಾಯಿಯಾದಳು. ನಿನ್ನ ತಂದೆಯು ನಿನ್ನ ತಾಯಿಯ ಸಂಪರ್ಕ ದೋಷದಿಂದ ಎತ್ತಿನ ಜನ್ಮವನ್ನು ಪಡೆದನು. ನಿನ್ನ ತಂದೆಯು ಸ್ವತಃ ನಿರ್ದೋಷಿಯು. ನಿನ್ನ ತಾಯಿಯ ಸಂಪರ್ಕ ದೋಷದಿಂದ ಎತ್ತಿನ ಜನ್ಮ ಬಂತು ಇದರ ನಿವಾರಣೆಗಾಗಿ ನೀನು ಋಷಿ ಪಂಚಮೀ ಎಂಬ ವ್ರತವನ್ನು ನಿನ್ನ ಹೆಂಡತಿಯಿಂದ ಕೂಡಿ ಮಾಡಿ, ಸಪ್ತರ್ಷಿಗಳನ್ನು ಪೂಜಿಸು. ಏಳು ವರ್ಷ ಕಾಲ ಈ ವ್ರತವನ್ನು ಮಾಡಬೇಕು. ಉದ್ಯಾಪನೆಯನ್ನೂ ಸಹ ಯೋಗ್ಯತೆಗೆ ತಕ್ಕಂತೆ ಮಾಡಬೇಕು. ಅನುಕೂಲತೆಯನ್ನು ನೋಡಿ ಪ್ರಾರಂಭದಲ್ಲಾಗಲೀ-ಮಧ್ಯದಲ್ಲಾಗಲೀ, ಕೊನೆಯಲ್ಲಾಗಲೀ ಉದ್ಯಾಪನೆ ಮಾಡಬೇಕು. ವ್ರತದ ದಿವಸ ನೇಗಿಲನ್ನು ಹೊಡಿಸಿಕೊಳ್ಳದಿರುವ ಭೂಮಿಯಲ್ಲಿ ಬೆಳೆದ ನವಣೆ ಮುಂತಾದ ಧಾನ್ಯದಿಂದ ಶಾಕಾಹಾರದಿಂದ ಉಪಹಾರ ಮಾಡಬೇಕು. ಗೆಡ್ಡೆಗೆಣಸನ್ನು ಸೇವಿಸಬೇಕು. ಭಾದ್ರಪದ ಶುದ್ಧಪಂಚಮೀ ತಿಥಿ ಬರಲು ಆ ದಿನ ಮಧ್ಯಾಹ್ನ ನದಿ ಮುಂತಾದ ಜಲಾಶಯದ ನಿರ್ಮಲವಾದ ನೀರಿನಲ್ಲಿ ಉತ್ತರಾಣಿಕಡ್ಡಿಗಳಿಂದ ಮೊದಲು ಹಲ್ಲುಗಳನ್ನು ಸ್ವಚ್ಛ ಮಾಡಿ, ಮೊದಲು ವನಸ್ಪತಿಗೆ ಪ್ರಾರ್ಥನೆ ಮಾಡಿ ನಂತರ ಮೃತ್ತಿಕಸ್ನಾನ ಮುಂತಾದ ಏಳು ಸ್ನಾನಗಳನ್ನು ಮಾಡಿ ನೆಲ್ಲಿಕಾಯಿಯ ಕಲ್ಕದಿಂದ ಕೂದಲನ್ನು ಚೆನ್ನಾಗಿ ತೊಳೆದುಕೊಂಡು ಶುಭ್ರವಾದ ಮಡಿ ವಸ್ತ್ರವನ್ನು ಧರಿಸಿ ಏಕಚಿತ್ತದಿಂದ ಅರುಂಧತಿ ಸಹಿತರಾದ ಕಶ್ಯಪಾದಿ ಸಪ್ತಋಷಿಗಳನ್ನು ಪೂಜಿಸಿದರೆ ಋತುಸಂಪರ್ಕ ದೋಷದಿಂದ ಮುಕ್ತರಾಗುವರು. ಈ ವಿಷಯದಲ್ಲಿ ಸಂಶಯವಿಲ್ಲ. ಕೃಷ್ಣನು ಹೇಳುವನು, ಎಲೈ ಧರ್ಮರಾಜನೇ ಕೇಳು, ಈ ಮಾತನ್ನು

ಕೇಳಿದ ಸುಮತಿಯು ಈ ವ್ರತವನ್ನು ಹಿಂದೆ ಯಾರು ಮಾಡಿದ್ದರು, ಇದು ಹೇಗೆ ಭೂಮಿಯಲ್ಲಿ ಪ್ರಸಿದ್ಧಿ ಹೊಂದಿತು. ಸರ್ವತಪನು ಹೀಗೆ ಹೇಳಿದನು. ಋಷಿಪಂಚಮಿ ಎಂಬ ವ್ರತವಿದೆ ಇದನ್ನು ಮಾಡುವುದರಿಂದ ನರಕದರ್ಶನವಿಲ್ಲ. ಇದರ ಇತಿಹಾಸವನ್ನು ಹೇಳುವೆನು ಕೇಳು. ವಿದರ್ಭ ದೇಶದಲ್ಲಿ ಉತ್ತಂಕನೆಂಬ ಒಬ್ಬ ಬ್ರಾಹ್ಮಣನು ಇದ್ದನು. ಅವನಿಗೆ ಮಹಾಪತಿವ್ರತೆಯಾದ ಸುಶೀಲಾ ಎಂಬ ಹೆಂಡತಿಯೂ, ಸುವಿಭೂಷಣ ಎಂಬ ಮಗನೂ ಒಬ್ಬ ಮಗಳೂ ಇದ್ದರು. ಮಗನನ್ನು ವೇದಶಾಸ್ತ್ರದಲ್ಲಿ ನಿರತನನ್ನಾಗಿ ಮಾಡಿ ಅವನಿಗೆ ಮದುವೆ ಮಾಡಿ ತನ್ನ ಮಗ ಸೊಸೆಯನ್ನು ಮನೆಯಲ್ಲಿಟ್ಟು ತಾನು ಹೆಂಡತಿ ಮಗಳಿನೊಂದಿಗೆ ಕಾಡಿಗೆ ಹೋಗಿ ಅಲ್ಲಿ ಶಿಷ್ಯರಿಗೆ ವೇದಾಭ್ಯಾಸ ಮಾಡಿಸುತ್ತಾ ಇದ್ದನು. ಉತ್ತಂಕನು ತನ್ನ ಒಬ್ಬ ಮಗಳನ್ನು ಕುಲೀನ ಬ್ರಾಹ್ಮಣನಿಗೆ ಕೊಟ್ಟು ಲಗ್ನ ಮಾಡಿದ್ದನು. ಆದರೆ ಲಗ್ನವಾದ ಸ್ವಲ್ಪ ದಿವಸದಲ್ಲಿಯೇ ಆಕೆಯ ಗಂಡನು ಸತ್ತು ಹೋದನು. ಇದರಿಂದ ಅವಳಿಗೆ ವೈಧವ್ಯ ಬಂದಿತು. ಈಕೆಯು ತನ್ನ ಪತಿವ್ರತಾಧರ್ಮವನ್ನು ಪಾಲಿಸುವ ಉದ್ದೇಶದಿಂದ ತನ್ನ ತಂದೆಯ ಮನೆಯಲ್ಲಿ ಇದ್ದು ತಂದೆ ತಾಯಿಯ ಸೇವಾ ಮಾಡುತ್ತಾ ಇದ್ದಳು. ಹೀಗಿರಲು ಒಂದು ದಿನ ಮಗಳು ತಂದೆಯ ಸೇವೆಯಲ್ಲಿ ಕಾಲ ಕಳೆಯುತ್ತಿರಲು ದಣಿವು ಹೆಚ್ಚಾಗಿ ರಾತ್ರಿ ಮಲಗಿರುವಾಗ ಅವಳ ದೇಹವು ಕಾಣದೆ ಹುಳುಗಳ ರಾಶಿ ಮಾತ್ರ ಕಾಣಿಸುತ್ತಿತ್ತು. ಹೀಗಿರುವ ಗುರು ಪುತ್ರಿಯನ್ನು ನೋಡಿದ ಶಿಷ್ಯರೂ ಕೂಡಲೇ ಅವರ ತಾಯಿಯ ಹತ್ತಿರ ಹೋಗಿ ಹೀಗೆ ಹೇಳಿದರು. 'ತಾಯೇ ! ನಿನ್ನ ಮಗಳು ರಾತ್ರಿ ಮಲಗಿದ್ದವಳು ನಮಗೆ ಕಾಣದೆ ಹುಳುಗಳ ರಾಶಿ ಮಾತ್ರ ಕಾಣಿಸುತ್ತಿದೆ. ನೀವೇ ಬಂದು ನೋಡಿರೆಂದು' ಹೇಳುವರು. ವಜ್ರಘಾತಕ್ಕೆ ಸಮನಾದ ಶಿಷ್ಯರ ಈ ಮಾತನ್ನು ಕೇಳಿ ಉತ್ತಂಕನ ಹೆಂಡತಿಯು ಭ್ರಾಂತಳಾಗಿ ಕೂಡಲೆ ತನ್ನ ಮಗಳ ಹತ್ತಿರ ಬಂದವಳಾಗಿ ಸಂತಪ್ತವಾದ ಮನಸ್ಸಿನಿಂದ ದುಃಖಿತಳಾಗಿ ಅಲ್ಲಿಯೇ ಮೂರ್ಛೆ ಹೋದಳು. ನಂತರ ಮೂರ್ಛೆಯಿಂದ ಎದ್ದು ಕುಳಿರತಕ್ಕ ತನ್ನ ಮಗಳನ್ನು ಚೆನ್ನಾಗಿ ಕುಳ್ಳರಿಸಿ ಕಣ್ಣಿಗೆ ನೀರನ್ನು ಹಾಕಿ, ತನ್ನ ಎರಡು ಕೈಗಳಿಂದ ಮಗಳನ್ನು ಹಿಡಿದು ಆಕೆಯ ತಂದೆಯ ಹತ್ತಿರ ಕರೆತಂದು ಹೀಗೆ ಕೇಳಿದಳು. ಎಲೈ ಸ್ವಾಮಿಯೇ! ಮಹಾಪತಿವ್ರತೆಯಾದ ನಿಮ್ಮ ಮಗಳು ಯಾವ ಕರ್ಮದಿಂದ ಮಧ್ಯರಾತ್ರಿಯಲ್ಲಿ ಮಲಗಿದ್ದ ಸಮಯದಲ್ಲಿ ದೇಹವೆಲ್ಲಾ ಹುಳುಗಳ ರಾಶಿಯಾಯಿತು. ಇದರ ಕಾರಣವೇನೆಂದು ಕೇಳುವಳು.

ಕ್ಷಣಹೊತ್ತು ವಿಚಾರ ಮಾಡಿ ಉತ್ತಂಕನು ಹೇಳುವನು, ಪ್ರಿಯೇ ಕೇಳು !

ನಿನ್ನ ಮಗಳು ಹಿಂದಿನ ತನ್ನ ಏಳನೆಯ ಜನ್ಮದಲ್ಲಿ ಒಬ್ಬ ಬ್ರಾಹ್ಮಣನ ಹೆಂಡತಿಯಾಗಿದ್ದು ತಾನು ರಜಸ್ವಲೆಯಾಗಿದ್ದಾಗ ಮನೆಯ ಕೆಲಸವನ್ನು ಮುಟ್ಟಿ ಮಾಡಿದ ಕಾರಣದಿಂದ ಈ ಕಾಲಕ್ಕೆ ಇವಳ ದೇಹವು ಹುಳುರಾಶಿಯಾಗಿತ್ತು. ಮುಟ್ಟಾದವಳು ಯಾವಾಗಲೂ ಮನೆಯ ಕೆಲಸವನ್ನು ಮಾಡಬಾರದು. ಮುಟ್ಟಾದವಳು ಮೊದಲನೆ ದಿನ ಚಂಡಾಲರಂತೆ ಇರುವವಳು. ಎರಡನೆಯ ದಿನ ಬ್ರಾಹ್ಮಣರನ್ನು ಕೊಂದವಳೂ, ಮೂರನೆಯ ದಿನ ಅಗಸಗಿತ್ತಿಯಂತೆ ಇರುವರು. ನಾಲ್ಕನೆಯ ದಿನ ಶುದ್ಧಳು. ಆ ನಿನ್ನ ಮಗಳು ಅದೇ ಜನ್ಮದಲ್ಲಿ ತನ್ನ ಗೆಳತಿಯರಿಂದ ಕೂಡಿ ಋಷಿಪಂಚಮೀ ವ್ರತಕ್ಕೆ ಅವಮಾನ ಮಾಡಿದ್ದಳು. ಆದರೂ ವ್ರತವನ್ನು ನೋಡಿದ ಪುಣ್ಯದಿಂದ ಈಗ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದಳು. ಅವಮಾನ ಮಾಡಿದ್ದರಿಂದ ಈಕೆಯ ದೇಹ ಕ್ರಿಮಿರಾಶಿಯಾಯಿತು ಎಂದನು. ಇವಳು ಅಂಥ ಪಾಪವೇನು ಮಾಡಿರುವಳೆಂದು, ಅದರ ಪರಿಹಾರವನ್ನು ತಿಳಿಸಬೇಕೆಂದು ಕೇಳಿದಳು. ಆ ಮಹಾ ಆಶ್ಚರ್ಯಕಾರಕವಾದ ವ್ರತವನ್ನು ಹೇಳಿರೆಂದೂ ಪ್ರಾರ್ಥಿಸಿದಳು. ಉತ್ತಂಕನು ಹೇಳುವನು, ಋತು ಸಂಪರ್ಕ ದೋಷದಿಂದ ಬಿಡುಗಡೆಯಾಗುವ ವ್ರತವಿದೆ. ಅದನ್ನು ಮಾಡುವುದರಿಂದ ಸ್ತ್ರೀಯರು ಎಲ್ಲ ದುಃಖದಿಂದ ಪಾರಾಗುವರು. ಎಲ್ಲ ರೀತಿಯಿಂದಲೂ ಮಂಗಳವೇ ಆಗುವುದು. ಐಶ್ವರ್ಯವು ಹೆಚ್ಚುವುದು. ಆಪತ್ತುಗಳು ನಾಶವಾಗುವುದು. ಭಾದ್ರಪದ ಶುದ್ಧ ಪಂಚಮೀ ದಿನ, ನದೀ ಮುಂತಾದ ಜಲಾಶಯದಲ್ಲಿ ಸ್ನಾನ ಮಾಡಿ ವ್ರತಕ್ಕಾಗಿ ಸಂಕಲ್ಪ ಮಾಡಿ ನಿತ್ಯ ಕರ್ಮವನ್ನು ಮಾಡಿ, ಚಂದನ, ಅಗರು, ಕರ್ಪೂರ ಮುಂತಾದ ಸುಗಂಧ ದ್ರವ್ಯಗಳಿಂದ ಹೂವುಗಳಿಂದ, ಧೂಪದೀಪದಿಂದಲೂ ಫಲಗಳನ್ನು ನಿವೇದಿಸಿ ಎಲ್ಲರಿಗೂ ಕ್ರಮವಾಗಿ ಅರ್ಘ್ಯವನ್ನು ಬಿಟ್ಟು, ನಾನು ಕೊಡುವ ಅರ್ಘ್ಯದಿಂದ ಸಂತುಷ್ಟರಾಗಿ ಸದಾ ನನ್ನಲ್ಲಿ ಸಂತೋಷದಿಂದ ಇರಲೆಂದು ಅರ್ಘ್ಯವನ್ನು ಕೊಟ್ಟು ಬ್ರಾಹ್ಮಣ ಸುವಾಸಿನಿಯರಿಗೆ ಭೋಜನ ಮಾಡಿಸಿ ತಮ್ಮ ಶಕ್ತ್ಯಾನುಸಾರವಾಗಿ ವಸ್ತ್ರಾಲಂಕಾರವನ್ನು ಕೊಟ್ಟು, ದಕ್ಷಿಣೆಯನ್ನು ಕೊಟ್ಟು ಪೂಜಿಸಬೇಕು. ಒಬ್ಬ ಉತ್ತಮ ದಂಪತಿಗೆ ಭೋಜನ ಮಾಡಿಸಿ ತೃಪ್ತಿಪಡಿಸಬೇಕು. ಈ ವ್ರತವನ್ನು ಮಾಡುವ ಹೆಂಗಸು ಮುತ್ತೈದೆಯಾದರೆ ತನ್ನ ಗಂಡನ ಅಪ್ಪಣೆ ಪಡೆದು ಪೂಜೆ ಮಾಡಬೇಕು, ಇಲ್ಲದಿದ್ದರೆ ಪಾಪಭಾಗಿನಿಯಾಗುವಳು. ವಿಧವೆಯು ಬ್ರಾಹ್ಮಣರ ಅಪ್ಪಣೆ ಪಡೆದು, ತನ್ನ ದೋಷ ಶಾಂತ್ಯರ್ಥವಾಗಿ ಈ ಪೂಜೆ ಮಾಡಬೇಕು.

ಪೂಜೆ ಮಾಡುವ ದಿವಸ ಉಪವಾಸವಿದ್ದು ಮನಸ್ಸಿನಲ್ಲಿ ಋಷಿಗಳನ್ನು ಧ್ಯಾನ ಮಾಡುತ್ತಾ ವ್ರತಸ್ಥರಾಗಿಯೇ ಇರಬೇಕು ಎಂಬುದಾಗಿ ಉತ್ತಂಕನು ಹೇಳಲು, ಕೂಡಲೇ ಮಗಳ ಕಡೆಯಿಂದ ಋಷಿಪಂಚಮೀ ಪೂಜೆಯನ್ನು ಮಾಡಿಸಿದಳು. ಆ ವ್ರತದ ಪ್ರಭಾವದಿಂದ ಉತ್ತಂಕನ ಮಗಳು ರಜಸ್ವಲಾ ದೋಷದಿಂದ ಮುಕ್ತಳಾಗಿ ಉತ್ತಮಗತಿಯನ್ನು ಪಡೆದಳು. ಶ್ರೀಕೃಷ್ಣನು ಹೇಳುವನು, ಧರ್ಮರಾಜನೇ ಕೇಳು, ಸುಮತಿಯು ಕೂಡಲೇ ತನ್ನ ಮನೆಗೆ ಬಂದವನಾಗಿ ತನ್ನ ಹೆಂಡತಿಯ ಸಂಗಡ ಈ ವ್ರತವನ್ನು ಮಾಡಿಸಿದನು. ಎಲ್ಲಾ ಪಾಪಗಳು ನಾಶ ಹೊಂದಿ ತನಗೆ ಬಂದಂಥ ಪುಣ್ಯಫಲವನ್ನು ತನ್ನ ತಾಯಿ ತಂದೆಗಳಿಗೆ ಕೊಟ್ಟನು. ತಾಯಿಯು ನಾಯಿಯ ಜನ್ಮದಿಂದ ಮುಕ್ತಳಾಗಿ ಸ್ವರ್ಗಲೋಕವನ್ನು ಕುರಿತು ಪ್ರಯಾಣ ಮಾಡಿದಳು. ತನ್ನ ತಂದೆಯು ಎತ್ತಿನ ಜನ್ಮದಿಂದ ಮುಕ್ತನಾಗಿ ಸೂರ್ಯನಂತೆ ಕಾಂತಿಯಿಂದ ಕೂಡಿದವನಾಗಿ ಸತ್ಯಲೋಕಕ್ಕೆ ಪ್ರಯಾಣ ಮಾಡಿದನು. ಧರ್ಮರಾಜನೇ ಉತ್ತಮವಾದ ಈ ಋಷಿ ಪಂಚಮೀ ವ್ರತವನ್ನು ನಿನಗೆ ಹೇಳಿದೆನು. ಇನ್ನೇನು ಹೇಳಲಿ ಎಂದು ಕೇಳಿದಾಗ ಧರ್ಮರಾಜನು ಶ್ರೀಕೃಷ್ಣನೇ ಇದರ ವಿಧಿ ಹೇಗೆಂದು ಕೇಳಲು, ನಾನು ನಿನಗೆ ಮೊದಲು ಹೇಳಿದ ವಿಧಿಯಂತೆ ಈ ವ್ರತ ಮಾಡಿದಲ್ಲಿ ಶರೀರ-ವಚನ-ಮನಸ್ಸಿನಿಂದ ಉಂಟಾದ ಯಾವತ್ತು ಪಾಪಗಳು ಹೆಸರಿಲ್ಲದಂತೆ ನಾಶವಾಗುವುದು. ಮನೆಯಲ್ಲಿ ಧನ-ಧಾನ್ಯ ಸಂತತಿಯು ವೃದ್ಧಿಯಾಗುವುದು. ಕೊನೆಯಲ್ಲಿ ಉತ್ತಮ ಲೋಕವು ದೊರೆಯುವುದು.

ಈ ಕಥೆಯನ್ನು ಹೇಳುವುದು, ಹೇಳಿದ್ದನ್ನು ಕೇಳುವುದು, ಹಾಗೂ ಮಾಡುವವರ ಯಾವತ್ತೂ ಪಾಪಗಳು ನಾಶವಾಗುವುದು. ಇದಕ್ಕೆ ಸಂಶಯವಿಲ್ಲ. ಹತ್ತುಸಾವಿರ ಯಜ್ಞ ಮಾಡಿದ ಫಲವು ಎಲ್ಲಾ ವ್ರತಗಳನ್ನು ಮಾಡುವುದರಿಂದ ಬರುವ ಪುಣ್ಯ ಬರುವುದು. ಎಲ್ಲಾ ತೀರ್ಥಯಾತ್ರೆಗೆ ಹೋಗುವುದರಿಂದ ಫಲ ಬರುವುದು, ಯಾವತ್ತು ದಾನಗಳನ್ನು ಕೊಡುವುದರಿಂದ ಏನು ಫಲ ಬರುವುದೋ ಅಷ್ಟೂ ಫಲವು ಈ ಒಂದು ವ್ರತವನ್ನು ಮಾಡುವುದರಿಂದ ಬರುವುದು. ಹೆಂಗಸರು ಈ ವ್ರತವನ್ನು ಮಾಡಿದರೆ ರೂಪಲಾವಣ್ಯದಿಂದ ಕೂಡಿ ಮಕ್ಕಳು-ಮೊಮ್ಮಕ್ಕಳುಗಳಿಂದ ಬಹುಕಾಲ ಸುಖದಿಂದ ಇದ್ದು, ಇಹಲೋಕದಲ್ಲಿ ಬೇಕಾದ ಸುಖವನ್ನು ಅನುಭವಿಸಿ ಪರಲೋಕದಲ್ಲಿ ಉತ್ತಮ ಸ್ಥಾನ ಬರುವುದು, ಎಲ್ಲಾ ವ್ರತಗಳಲ್ಲಿ ಶ್ರೇಷ್ಠವಾದ ಮತ್ತು ಸ್ತ್ರೀಯರಿಗೆ ಸಕಲ ಸಂಪತ್ತನ್ನು ಕೊಡುವ, ಪಾಪವನ್ನು ಕಳೆಯುವ ಈ

### ಋಷಿ ಪಂಚಮಿ ಪೂಜಾ ವಿಧಿಃ

ಋಷಿ ಪಂಚಮೀ ವ್ರತವನ್ನು ನಿನಗೆ ಹೇಳಿದೆನು. ಈ ವ್ರತದ ಕಥೆಯನ್ನು ಯಾರು ಹೇಳುವರು. ಯಾರು ಭಕ್ತಿಯಿಂದ ಕೇಳುವರು ಅವರೆಲ್ಲರ ಪಾಪದಿಂದ ಬಿಡುಗಡೆ ಹೊಂದಿ ಇಹಲೋಕದಲ್ಲಿ ಪುಷ್ಕಳವಾದ ಸೌಖ್ಯವನ್ನು ಪಡೆದು ಮುಂದಾದರೂ ಉತ್ತಮ ಗತಿಯನ್ನು ಹೊಂದುವರು.

॥ ಇತಿ ಋಷಿಪಂಚಮಿ ವ್ರತ ಪೂಜಾ ಕಥಾ ಸಾರಸಂಗ್ರಹ ಸಮಾಪ್ತಃ ॥



# 9. ವಿವಾಹ ಪ್ರಕ್ರಿಯೆ




"ವಿವಾಹ" ಎಂಬುದು ಹಿಂದೂ ಸಮಾಜದಲ್ಲಿ ಶತಶತಮಾನಗಳಿಂದ ಬಂದಿರುವ ಪದ್ಧತಿ. "ವಿವಾಹ" ಎಂಬ ಪದದಲ್ಲಿ ಮೂರೇ ಅಕ್ಷರಗಳಿದ್ದರೂ, ಅದರ ಹಿನ್ನೆಲೆಯನ್ನು ತಿಳಿಯಲು ವಿಶೇಷ ತಾಳ್ಮೆ ಅಗತ್ಯ.

ವಿವಾಹದ ಪೂರ್ವದಲ್ಲಿ ತಿಳಿಯಲೇಬೇಕಾದ ಅಂಶಗಳಿವೆ.

1. ಕನ್ಯೆಯು ಸಗೋತ್ರರಾಗಿರಬಾರದು.
2. ಅಕ್ಕನಿಗೆ ಮದುವೆಯಾಗದೆ ತಂಗಿ ಮಾಡಿಕೊಳ್ಳಬಾರದು.
3. ವಧೂ-ವರರ ಜಾತಕಗಳನ್ನು ಪರಿಶೀಲಿಸುವುದು.
4. ಅಗ್ನಿ ಸಾಕ್ಷಿಯಾಗಿ ವಿವಾಹ.
5. ರಜಸ್ವಲೆಯ ಮೊದಲೇ ವಿವಾಹ.

ಇದೇ ಮೊದಲಾದವುಗಳಿವೆ.

ಇವುಗಳಲ್ಲಿ ಒಂದೊಂದಾಗಿ ಪರಿಶೀಲಿಸೋಣ.

### *ವಿವಾಹದ ಅವಶ್ಯಕತೆ :*

ವಿವಾಹದ ಪ್ರಧಾನ ಉದ್ದೇಶವಾದರೂ ಸತ್ಸಂತಾನದ ಮೂಲಕ ಸತ್ಸಂಪ್ರದಾಯವನ್ನು ಕುಲಧರ್ಮವನ್ನು ಮುಂದುವರೆಸಿಕೊಂಡು

ಹೋಗುವುದು. ಇದರಲ್ಲಿ ವಧುವು ಹೊಲವಿದ್ದಂತೆ "ವರ"ನಾದರೂ ಬೀಜವನ್ನು ಬಿತ್ತುವ ರೈತನಂತೆ. ಇವರ ಫಲವಾದರೂ ಸತ್ಸಂತಾನ.

ವಿವಾಹವೆಂದರೆ ವಿಶೇಷವಾದ ಜವಾಬ್ದಾರಿಯನ್ನು ಪಡೆದಂತೆ. ಇದು ಕೇವಲ ಪಕ್ವಮನಸ್ಸಿನವರಾದ ವಧೂವರರು ಕೇವಲ ಶರೀರ ಸಂಬಂಧಕ್ಕಾಗಿ ಎಂದು ತಿಳಿಯಬಾರದು. ಇದೊಂದು ಭಗವತ್ಪೂಜೆ. ವಾಮದೇವನ ಯಜ್ಞ.

ಹೇಗೆ ರೈತನು ಅವಸರ ಮಾಡದೆ ತಾಳ್ಮೆಯಿಂದ ಇದ್ದು ಸಶಕ್ತಭೂಮಿಯಲ್ಲಿ ಸಶಕ್ತವಾದ ಬೀಜವನ್ನು ಬಿತ್ತಿ, ಒಳ್ಳೆಯ ಬೆಳೆಯನ್ನು ಬೆಳೆದು ಸಮಾಜವನ್ನು ಪೋಷಿಸುವನೋ ಹಾಗೆಯೇ ವರನೂ ಕೂಡ ಯೋಗ್ಯವಾದ ದಿವಸಗಳಲ್ಲಿ ನಿಷಿದ್ಧವಲ್ಲದ ದಿವಸಗಳಲ್ಲಿ, ಸತಿಯ ಜೊತೆ ಕೂಡಿ ಉತ್ತಮ ಫಲವು ಪಡೆದು ಆ ಸಂತತಿಯಿಂದ ಸಮಾಜವನ್ನು ಬಲಿಷ್ಠವನ್ನಾಗಿ ಮಾಡುವುದು.

ಬೀಜಕ್ಕೆ ಸಂಸ್ಕಾರ ಮಾಡದಿದ್ದರೆ ಹೇಗೆ ಉತ್ತಮ ಫಲ ಲಭಿಸುವುದಿಲ್ಲವೋ ಹಾಗೆಯೇ ವಧೂ-ವರರ ಶಾರೀರಿಕ ಮಾನಸಿಕ-ಬೌದ್ಧಿಕ ಉನ್ನತಿಗಾಗಿ, ಪರಿಶುದ್ಧಿಗಾಗಿ ಕೆಲವು ಸಂಸ್ಕಾರಗಳಿವೆ. ಇವುಗಳಲ್ಲಿ "ವಿವಾಹ ಸಂಸ್ಕಾರ"ವು ಪ್ರಧಾನವಾಗಿದೆ. ಈ ವಿವಾಹದಿಂದ ವರನಿಗೆ ದೇವಋಣ, ಪಿತೃಋಣಾದಿಗಳನ್ನು ತೀರಿಸಲು ಸಾಧ್ಯವಾಗುತ್ತದೆ. ವಿವಾಹದಿಂದ ಹೋಮಾರ್ಹತೆ ಲಭಿಸಿ ವೈಶ್ವದೇವ, ಪಂಚಯಜ್ಞಾದಿಗಳಿಂದ ದೇವಋಣ-ವನ್ನೂ, ಸತ್ಸಾಂತಾನದಿಂದ ಪಿತೃಋಣವನ್ನು ತೀರಿಸಬಹುದು.

ಈ ವಿವಾಹದಿಂದ ವರನು ಸಮಾವೃತ್ತನಾಗಿ ಗೃಹಸ್ಥಧರ್ಮವನ್ನು ಪಾಲಿಸಲು ಮಾನಸಿಕವಾಗಿ ಸಿದ್ಧನಾಗುವನು. ಇನ್ನು ಮುಂದೆ ತಾನು ಕೇವಲ ವ್ಯಕ್ತಿಯಲ್ಲ. "ಸಮಷ್ಠಿ" ಎಂದು ತಿಳಿಯುವನು. ಇನ್ನು ಮೇಲೆ ತಾವೊಂದು ಪರಿವಾರದ ಕೇಂದ್ರಬಿಂದುವಾಗುವವನು. ಆದ್ದರಿಂದ ಪ್ರಾಣಕ್ಕೆ ಅಪಾಯ ಬರುವ ಹುಡಗಾಟಿಕೆಯನ್ನು ಬಿಟ್ಟು ಗೃಹಸ್ಥನೆನಿಸುವನು ಹಾಗೂ ಸಮಾಜವನ್ನು ಪೋಷಿಸುವ ಜವಾಬ್ದಾರಿ ಹೊಂದುವನು. ಹಾಗೆಯೇ ವಧುವು ಕೂಡ ತಾಯಿ-ತಂದೆಗಳಿಂದ ಸುಶಿಕ್ಷಿತಳಾಗಿ ಇನ್ನು ಮುಂದೆ ತಾನು ತವರು ಮನೆ - ಪತಿಯ ಮನೆಗಳ ಸಂಸ್ಕೃತಿಗಳ "ಸಂಗಮಸ್ಥಾನ"ಳೆನಿಸುವೆಳು. ನನ್ನ ಸಹಾಯಶೀಲತೆ, ದೂರದೃಷ್ಟಿ, ಸಮ್ಮವತೆಯ ಚಾಣಾಕ್ಷತನ, ಸರ್ವಸಮರ್ಪಣಬುದ್ಧಿ ಹಾಗೂ ಉದಾರಭಾವನೆಯಿಂದ ಎರಡು ಕುಲಗಳ ಮತ್ತು ಉಭಯ ಕುಲತಾರಿಣಿಯಾಗಿ ಆ ಸಂಬಂಧ ಬಿಟ್ಟು ಹೋಗದಂತೆ

ಉಭಯಕುಲವನ್ನೂ ಜೋಡಿಸುವ ಕೊಂಡಿಯಾಗಿರುವೆನು. ಈ ವಿವಾಹ ಕೇವಲ ಭೋಗಕ್ಕಾಗಿ ಅಲ್ಲ.

**ಕನ್ಯಾ ಉಭಯಕುಲತಾರಿಣೀತಿ** । – ಮ.ಭಾ.ತಾ.ನಿ.

ಈ ವಿವಾಹವು 'ನಿಷ್ಕಾಮಕರ್ಮ'ಕ್ಕಾಗಿ ಇದೆ ಎಂದು ಹಸೆಮನೆ ಏರುತ್ತಾಳೆ. ಈ ರೀತಿಯ ಗುಣಗಳು ವೃದ್ಧಿಯಾಗಲು ಭಿನ್ನ ಭಿನ್ನರಾದ ತತ್ವಾಭಿಮಾನಿ ದೇವತೆಗಳನ್ನು, ಇಷ್ಟದೇವತೆ-ಕುಲದೇವತೆಗಳನ್ನು ಸಂಸ್ಕಾರಾಂಗ ದೇವತೆಗಳನ್ನು, ಗುರು-ಹಿರಿಯರನ್ನು ಪೂಜಿಸಿ ಅವರಿಂದ ವರ-ಆಶೀರ್ವಾದಗಳನ್ನು ಪಡೆದು, ಇದರಿಂದ ಲಬ್ಧವಾದ ಆಧ್ಯಾತ್ಮಿಕ ಶಕ್ತಿಯಿಂದ "ಗೃಹಸ್ಥಧರ್ಮ" ಆಚರಣೆಗಳ ಪೂರ್ವ ಸಿದ್ಧತೆಗಾಗಿ ಮಾಡುವ ಸಂಸ್ಕಾರವೆ "ವಿವಾಹ ಸಂಸ್ಕಾರ".

## *ಹಿರಿಯರಿರುವಾಗ ಕಿರಿಯರ ವಿವಾಹ ನಿಷಿದ್ಧವಾಗಿದೆ :*

ಕೆಲವು ಸಂದರ್ಭಗಳಲ್ಲಿ ಅಣ್ಣ ಅಥವಾ ಅಕ್ಕನಿಗಿಂತ ಮೊದಲೇ ತಮ್ಮ ತಂಗಿಯರು ವಿವಾಹವಾಗುವರು. ಆದರೆ ಅಣ್ಣನಾಗಲಿ, ಅಕ್ಕಳಾಗಲೀ, ವಿವಾಹಕ್ಕೆ ಯೋಗ್ಯರಾಗಿರುವಾಗ ಅವರನ್ನು ಬಿಟ್ಟು ತಂಗಿಯು ಮದುವೆ-ಯಾಗಬಾರದು. ಅಣ್ಣನಿಗಿಂತ ಮೊದಲು ತಮ್ಮನು ಮದುವೆಯಾದರೆ ಅವನಿಗೆ ***"ಪರಿವೇತ್ತಾ"*** ಎಂದು. ಅಕ್ಕನಿಗಿಂತ ತಂಗಿ ಮದುವೆಯಾದರೆ ಅವಳನ್ನು ***"ಅಗ್ರೇದಿಧೀಷು"*** ಅಥವಾ ***"ಪರಿವೇದಿನೀ"*** ಎಂದು ಶಾಸ್ತ್ರವು ನಿಂದಿಸಿದೆ. ಇಂತಹವರಿಗೆ ಕನ್ಯೆಯನ್ನು ಕೊಟ್ಟು ಹಾಗೂ ತೆಗೆದುಕೊಂಡ ತಂದೆ ತಾಯಿಯರಿಗೆ ಹಾಗೂ ವಿವಾಹ ಮಾಡಿಸಿದ ಪುರೋಹಿತರಿಗೆ "ನರಕ" ತಪ್ಪಿದ್ದಲ್ಲ. ಆದರೆ ಕೆಲವು ಅನಿವಾರ್ಯ ಪಕ್ಷದಲ್ಲಿ ವಿವಾಹ ಮಾಡಬೇಕಾಗಿ ಬಂದಾಗ ಈ ದೋಷ ನಿವಾರಣೆಗಾಗಿ 1008ಕ್ಕೆ ಕಡಮೆ ಇಲ್ಲದಂತೆ ದುರ್ಗೆ, ಅಗ್ನಿ, ವಿಷ್ಣುಗಳನ್ನು ಕುರಿತು ಆಜ್ಯಾಹುತಿಯನ್ನು ಹೋಮಿಸಬೇಕು ಅಥವಾ ಬಡಬ್ರಾಹ್ಮಣನ ಮಗಳ ವಿವಾಹವನ್ನು ತನ್ನ ಖರ್ಚಿನಿಂದಲೇ ಮಾಡುವುದು ಪಾಪಪರಿಹಾರವು.

## *ಕನ್ಯೆಯ ಲಕ್ಷಣ :*

***ಕನ್ಯೆಯನ್ನು ವರಿಸಬೇಕಾದರೆ ಈ ಕೆಳಗಿನ ಲಕ್ಷಣಗಳಿರಬೇಕು.***

1. ಬೇರೆಯವರನ್ನು ಮೊದಲು ವಿವಾಹವಾಗಿರಬಾರದು.

2. ಸುಂದರಿಯಾಗಿ ಮನೋಹರಳಾಗಿರಬೇಕು.
3. ಸಪಿಂಡದಾಯಾದರೊಳಗಿನವರಾಗಿರಬಾರದು.
4. ವರನಿಗಿಂತ ಕಿರಿಯಳಾಗಿರಬೇಕು.
5. ಯಾವುದೇ ರೋಗವಿರಬಾರದು.
6. ಅಣ್ಣ ತಮ್ಮಂದಿರನ್ನು ಹೊಂದಿದವಳಾಗಿರಬೇಕು.
7. ಸಮಾನಗೋತ್ರ ಹಾಗೂ ಪ್ರವರವುಳ್ಳವರಾಗಿರಬಾರದು.
8. ಗರ್ಭಿಣಿಯಾಗಿರಬಾರದು, ಹಡೆದವಳಾಗಿರಬಾರದು.

ಇಂತಹ ದೋಷಗಳಿಲ್ಲದ ಕನ್ಯೆಯನ್ನು ವರಿಸಬೇಕು.

ಇದಲ್ಲದೆ ತಂದೆಯ ತಂಗಿಯ ಕನ್ಯೆ, ತಾಯಿಯ ತಂಗಿಯ ಕನ್ಯೆ, ತಾಯಿಯ ತಂಗಿ ಇವರನ್ನು ವಿವಾಹವಾಗಬಾರದು.

**ಪೈತೃಷ್ವಸೇಯೀಂ ಭಗಿನೀಂ ಸ್ವಸ್ತ್ರೀಯಾಂ ಮಾತುರೇವ ಚ ।**
**ಏತಾಸ್ತಿಸ್ತಸ್ತು ಭಾರ್ಯಾರ್ಥೇ ನೋಪಯಚ್ಛೇತ ಬುದ್ಧಿಮಾನ್ ॥**
– *ಗೌತಮ*

**ಅನನ್ಯಪೂರ್ವಿಕಾಂ ಕಾಂತಾಂ ಅಸಪಿಂಡಾಂ ಯವೀಯಸೀಂ ।**
**ಅರೋಗಿಣೀಂ ಭ್ರಾತೃಮತೀಂ ಅಸಮಾನಾರ್ಷಗೋತ್ರಜಾಂ ॥** – *ವಸಿಷ್ಠ*

## *ಕನ್ಯೆಯ ವಿವಾಹ ಕಾಲ :*

ಎಂಟನೇ ವರ್ಷ ಕನ್ಯೆಯ ವಿವಾಹಕ್ಕೆ ಮುಖ್ಯ ಕಾಲವು. ಆರು ವರ್ಷಗಳೊಳಗೆ ವಿವಾಹ ಮಾಡಬಾರದು.

ಸಾಮಾನ್ಯವಾಗಿ ಹುಟ್ಟಿದ ಕನ್ನಿಕೆಯು ರಜಸ್ವಲೆಯಾಗಿ ಸಂತಾನೋತ್ಪತ್ತಿಗೆ ಸಿದ್ಧವಾಗಲು ಅದಕ್ಕೆ ಬೇಕಾದ ಶಾರೀರಿಕ–ಮಾನಸಿಕ ಸಿದ್ಧತೆಗಳನ್ನುಂಟು ಮಾಡುವ ಮೂರು ದೇವತೆಗಳಿರುವರು. ಚಂದ್ರ, ಗಂಧರ್ವ, ಅಗ್ನಿಗಳು.

ಸಾಮಾನ್ಯವಾಗಿ 7 ವರ್ಷದೊಳಗೆ ಆ ಬಾಲಿಕೆಯ ಶರೀರ ರಕ್ಷಣಾಭಾರ ಚಂದ್ರನದು. ಇವನಿಂದ ಕನ್ಯೆಯು ಮಾನಸಿಕ ವಿಕಾಸಕ್ಕೆ ಬೇಕಾದ ತರಬೇತಿ ಹೊಂದುವಳು. ಚಂದ್ರನು ಮನಸ್ಸಿನ ದೇವತೆಯಷ್ಟೆ.

ಚಂದ್ರನು ಶಾರೀರಿಕ ಪೋಷಣೆಗಾಗಿ 7 ರಿಂದ 12 ವರ್ಷದವರೆಗೂ ಗಂಧರ್ವರಿಗೆ ಒಪ್ಪಿಸುತ್ತಾರೆ. ಈ ಕಿಶೋರಿಯಲ್ಲಿ ಶಾರೀರಿಕ ಬದಲಾವಣೆಯನ್ನು ಗಂಧರ್ವನು ಕನ್ಯೆಯು ರಜಸ್ವಲೆಯಾಗಲು ಬೇಕಾದ ಸಿದ್ಧತೆಯನ್ನು ಮಾಡಿ ನಂತರ ಅವಳನ್ನು ಅಗ್ನಿಗೆ ಒಪ್ಪಿಸುತ್ತಾನೆ. ಅಲ್ಲಿಂದ ವಿವಾಹವಾಗುವವರೆಗೂ ಕನ್ಯೆಯ ಮಾನಸಿಕ ಶಾರೀರಿಕ ಬದಲಾವಣೆಗಳನ್ನು ಅಗ್ನಿಯೇ ಮಾಡುತ್ತಾನೆ.

**ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।**
**ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥**

- ***ವಿವಾಹದಲ್ಲಿ ಜಾತಕ :***

ಜಾತಕವೆಂದರೆ ಮಾನವನ ದೈಹಿಕ, ಮಾನಸಿಕ ವ್ಯಾವಹಾರಿಕದ ಇತಿಹಾಸವು. ವಧೂ-ವರರ ಜಾತಕವನ್ನು ಸರಿಯಾದ ಜ್ಯೋತಿಷಿಯ ಮೂಲಕ ಸರಿಯಾಗಿ ಹೊಂದಿದೆಯೆ ಎಂದು ನೋಡಿ ನಂತರ ವಿವಾಹದ ಬಗ್ಗೆ ಚಿಂತಿಸುವುದು.

ಉದಾಹರಣೆಗೆ ಗಣಕೂಟವನ್ನು ನೋಡೋಣ. ರಾಕ್ಷಸ ಗಣದ ವರನಿಗೂ, ಮನುಷ್ಯಗಣದ ವಧುವಿಗೂ ವಿವಾಹವಾದರೆ ಅಸ್ತವ್ಯಸ್ತವಾಗುತ್ತದೆ. ಕಾರಣ ರಾಕ್ಷಸಗಣದ ಮನುಷ್ಯನು ಶೀಘ್ರಕೋಪಿಷ್ಟ, ಅವಿಚಾರಿ ಕಾರ್ಯಕಾರಿ, ಇತರರನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಬಯಸುವವನು. ಮನುಷ್ಯ ಗಣದವರು ದಾಕ್ಷಿಣ್ಯಸ್ವಭಾವ, ಅಂಜುಬುರಕ, ಮಾನಸಿಕ ವಿರೋಧವನ್ನು ತಡೆಹಿಡಿಯುವವನು ಆಗಿರುವನು. ಇವರಿಬ್ಬರ ವರ್ತನೆಯಲ್ಲಿ ಅಜಗಜಾಂತರವಿದ್ದು ದಾಂಪತ್ಯ ಜೀವನ ದುಃಖಮಯವಾಗಿರುತ್ತದೆ.

ಇದೇ ರೀತಿ ಗೃಹಮೈತ್ರೀಕೂಟವನ್ನು ಉದಾಹರಿಸಬಹುದು. ರಾಶಿ ಅಧಿಪತಿಗಳು ಮಿತ್ರರಾಗಿರಬೇಕು. ಉದಾಹರಣೆಗೆ ಸೂರ್ಯನಿಗೆ ಗುರು, ಚಂದ್ರ, ಕುಜರು ಮಿತ್ರರು, ಶನಿ, ಶುಕ್ರರು ಶತ್ರುಗಳಾಗಿರುವರು. ವಧುವರರ ರಾಶಿಗಳ ಅಧಿಪತಿಗಳು ಮಿತ್ರರಾಗಿದ್ದರೆ 'ಗ್ರಹಮೈತ್ರಿಕೂಟ'ವು ಇರುತ್ತದೆ.

ಹಾಗೆಯೇ ವಧೂರಾಶಿಯಿಂದ ವರನ ರಾಶಿಯು ಎರಡನೇ ರಾಶಿಯಾದರೆ 'ದ್ವಿರ್ದ್ವಾದಶ' ಒಂದೇ ಆದರೆ ನಿರ್ಧನತ್ವವು, ಪರಸ್ಪರವಾಗಿ ಒಂಭತ್ತು ಪಂಚಮಗಳಾದರೆ ಪುತ್ರಹೀನತ್ವವು, ಪರಸ್ಪರ ಆರು ಎಂಟು ಆದರೆ (ಷಷ್ಠಾಷ್ಟಕ) ಮರಣದಂತಹ ಆಪತ್ತು ಪರಸ್ಪರ ರಾಶಿಗಳು ಸಪ್ತಮಗಳಾದರೆ ಒಳ್ಳೆಯದು,

ತೃತೀಯ – ಏಕಾದಶ ಹಾಗೂ ಚತುರ್ಥ – ದಶಮಗಳಾದರೆ ಶುಭವು. ಇಬ್ಬರದೂ ಒಂದೇ ರಾಶಿಯಾದರೆ ಅತೀಶುಭವು. ಹೀಗೆ ಮೇಲೆ ಗುಣಗಳನ್ನು ಕೂಡಿದಾಗ ಇಪ್ಪತ್ತು ಬಂದರೆ ಮಧ್ಯಮ, ಇಪ್ಪತ್ತಕ್ಕಿಂತ ಅಧಿಕವಾದರೆ ಅತಿಶುಭವು.

- ***ಕನ್ಯೆಯ ನಕ್ಷತ್ರ ಪರೀಕ್ಷೆ :***

ಮೂಲಾನಕ್ಷತ್ರದ ಮೊದಲಿನ ಮೂರು ಪಾದಗಳಲ್ಲಿ ಜನಿಸಿದ ಕನ್ಯೆ ಹಾಗೂ ವರರು ತಮ್ಮ ಮಾವಂದಿರಿಗೆ ತೊಂದರೆವುಂಟು ಮಾಡುವರು.

ಆಶ್ಲೇಷಾ ನಕ್ಷತ್ರ ಎರಡು, ಮೂರು, ನಾಲ್ಕು ಪಾದಗಳಲ್ಲಿ ಜನಿಸಿದವರು ಅತ್ತೆಗೆ ತೊಂದರೆವುಂಟು ಮಾಡುವರು.

ಜ್ಯೇಷ್ಠಾನಕ್ಷತ್ರದ ಅಂತ್ಯ ಪಾದದಲ್ಲಿ ಜನಿಸಿದವರು ಜ್ಯೇಷ್ಠನಾದ ಅಣ್ಣನಿಗೆ ತೊಂದರೆ ನೀಡುವರು.

ವಿಶಾಖಾನಕ್ಷತ್ರದ ಅಂತ್ಯ ಪಾದದಲ್ಲಿ ಜನಿಸಿದವರು ತಮ್ಮಂದಿರನ್ನು (ಮೈದುನರನ್ನು) ತೊಂದರೆಗೀಡು ಮಾಡುವರು. ಮಘಾನಕ್ಷತ್ರದ ಮೊದಲನೆಯ ಪಾದದಲ್ಲಿ ಜನಿಸಿದವರಿಗೆ ಮೂಲದಂತೆಯೇ ಫಲವು.

- ***ದುಷ್ಟನಕ್ಷತ್ರ ವಿಚಾರ :***

ವಿವಾಹ ಕಾಲವನ್ನು ಶಾಸ್ತ್ರದಲ್ಲಿ ಹೇಳಿರುತ್ತಾರೆ. ರೋಹಿಣೀ, ಸ್ವಾತೀ, ರೇವತೀ, ಮೃಗಶಿರಾ – ಮಘಾ, ಹಸ್ತಾ, ಅನೂರಾಧಾ, ಉತ್ತರಾಷಾಢ ಉತ್ತರಾಭಾದ್ರ ಇವುಗಳಲ್ಲಿ ವಿವಾಹ ಮಾಡಿದರೆ ಉತ್ತಮ ದಾಂಪತ್ಯ ಜೀವನ ಪಡೆಯಬಹುದಾಗಿದೆ. ಸ್ತ್ರೀಯರಿಗೆ ಜನ್ಮ, ಅನುಜನ್ಮ, ತ್ರಿಜನ್ಮ ನಕ್ಷತ್ರವು ಅತ್ಯಂತ ಶುಭವು. ಈ ನಕ್ಷತ್ರದಲ್ಲಿ ವಿವಾಹವಾದ ಕನ್ಯೆಯು ಪತಿಪ್ರಿಯಳೂ, ಕಲ್ಯಾಣಿಯೂ, ದೀರ್ಘಾಯುಸ್ಸುಳ್ಳವಳೂ ಆಗುವಳು.

**ಪತಿಪ್ರಿಯಾ ಚ ಕಲ್ಯಾಣೀ ದೀರ್ಘಾಯುಶ್ಚ ಸುಮಂಗಲಾ ।**

***ಮೂಲಾನಕ್ಷತ್ರ ಜನ್ಮಫಲಃ :***

ಮೂಲಾನಕ್ಷತ್ರದ ಕಡೆಪಾದ ಬಿಟ್ಟು ಉಳಿದ ಮೊದಲ ಮೂರು ಪಾದಗಳಲ್ಲಿ ಜನಿಸಿದ ಸ್ತ್ರೀಯು ಗಂಡನ ತಂದೆಗೆ (ಮಾವ) ಮಾರಕಳಾಗುತ್ತಾಳೆ. ಮಾವ ಇಲ್ಲದ ಮನೆಗೆ ಕೊಡಬೇಕು.

**'ಮೂಲಜಾ ಶ್ವಶುರಂ ಹಂತಿ'**

***ಆಶ್ಲೇಷಾ ನಕ್ಷತ್ರ :***

ಆಶ್ಲೇಷಾ ನಕ್ಷತ್ರದ ಮೊದಲನೆ ಪಾದ ಬಿಟ್ಟು ಮೂರು ಪಾದಗಳಲ್ಲಿ ಜನಿಸಿದ ಸ್ತ್ರೀಯು ಪತಿಯ ತಾಯಿಗೆ (ಅತ್ತೆಗೆ) ಮಾರಕಳಾಗುವಳು.

**'ವ್ಯಾಲಜಾ ಚ ತದಂಗನಾಮ್'**

ಜ್ಯೇಷ್ಠಾ ನಕ್ಷತ್ರದ ಕಡೆಪಾದ ಮಾತ್ರ ದುಷ್ಟವಾಗಿದ್ದು ಅದರಲ್ಲಿ ಜನಿಸಿದ ಸ್ತ್ರೀಯು ಪತಿಯ ಅಣ್ಣನನ್ನು ಭಾವನಿಗೆ ಪೀಡೆವುಂಟು ಮಾಡುವರು.

**'ಮಾಹೇಂದ್ರಜಾ ಪತಿಜ್ಯೇಷ್ಠಂ'**

***ವಿಶಾಖಾನಕ್ಷತ್ರ :***

ವಿಶಾಖಾ ನಕ್ಷತ್ರದ ಅಂತ್ಯಪಾದ ಮಾತ್ರ ದುಷ್ಟವಾಗಿದ್ದು ಅಂತ್ಯ ಪಾದದಲ್ಲಿ ಜನಿಸಿದ ಕನ್ಯೆಯು ತನ್ನ ಪತಿಯ ತಮ್ಮನನ್ನು (ಮೈದುನ) ಇಲ್ಲವಾಗಿಸುತ್ತಾಳೆ.

ಅವಳನ್ನು ಮೈದುನ ಇಲ್ಲದಿರುವ ಮನೆಗೆ ಕೊಡಬೇಕು.

**'ದೇವರಂ ತು ದ್ವಿದೇವತಾ'**

ಈ ಮೂಲಾ, ಆಶ್ಲೇಷಾ, ವಿಶಾಖಾದಿಗಳ ದೋಷ ನಿವೃತ್ತಿಯು ಶಾಂತಿಯಿಂದ ಪರಿಹರಿಸಬಹುದು.

**ಶಾಂತಿರ್ವಾ ಪುಷ್ಕಲಾ ಸ್ಯಾಚ್ಚೇತ್ ತರ್ಹಿ ದೋಷೋನ ವಿದ್ಯತೇ ॥**

***ಮೂಲಾನಕ್ಷತ್ರ–ಭಾನುವಾರ :***

ಭಾನುವಾರ ಮೂಲಾನಕ್ಷತ್ರದಲ್ಲಿ ಹುಟ್ಟಿದ ಸ್ತ್ರೀಯು ಮಾವನಿಗೆ ಮಾರಕಳಾಗುತ್ತಾಳೆ. ಮಂಗಳವಾರ ಜ್ಯೇಷ್ಠಾನಕ್ಷತ್ರದಲ್ಲಿ ಹುಟ್ಟಿದ ಕನ್ಯೆಯು ಗಂಡನ ಅಣ್ಣನಿಗೆ ಮಾರಕಳು.

- ***ಸೋದರಮಾವನ ಕನ್ಯೆಯನ್ನು ಮದುವೆಯಾಗಬಾರದು :***

***ಅಸಮಾನಾರ್ಷಗೋತ್ರಜಾಂ*** ಎಂದಿರುವುದರಿಂದ ಸಗೋತ್ರ ವಿವಾಹವನ್ನು ಮಾಡಬಾರದು. ಸಗೋತ್ರ ವಿವಾಹವೆಂದರೂ ಒಂದೇ ಅಣ್ಣ–ತಂಗಿಯರ ವಿವಾಹವೆಂದರೂ ಒಂದೇ. ಈ ರೀತಿ ವಿವಾಹಗಳಿಂದ ಕ್ಷಯರೋಗ,

ಹಾಗೂ ಮಧುಮೇಹ ರೋಗಗಳುಂಟಾಗುತ್ತವೆ. ಉದಾ : ವಿಶ್ವಾಮಿತ್ರ ಗೋತ್ರ ಹಾಗೂ ಕೌಶಿಕ ಗೋತ್ರದವರು ಪ್ರವರ ಒಂದೇ. ಆದ್ದರಿಂದ ವಿವಾಹವಿಲ್ಲ. ಕಶ್ಯಪ ಹಾಗೂ ಕಾಶ್ಯಪ, ಅವತ್ಸಾರನೈಧ್ರುವಾದಿಗಳಿಗೆ ವಿವಾಹ ನಿಷಿದ್ಧ.

ಹೀಗೆ ಸಗೋತ್ರದಲ್ಲಿ ಹುಟ್ಟಿದ ಮಕ್ಕಳೂ, ಚಾಂಡಾಲರೆನಿಸುವರು.

**ಸಗೋತ್ರೋಢಾಸುತಾಶ್ಚೈವ ಚಾಂಡಾಲಾಃ** ॥ – ಮನುಸ್ಮೃತಿ

ಅಜ್ಞಾನದಿಂದ ಸಗೋತ್ರ – ಸಪ್ರವರ ವಿವಾಹವಾದರೆ ಕನ್ಯೆಯನ್ನು ಧರ್ಮಕಾರ್ಯಗಳಲ್ಲಿ, ಸಂತಾನಾದಿಗಳಲ್ಲಿ ಅವಳನ್ನು ತ್ಯಜಿಸಿ ತಾಯಿಯಂತೆ ಪಾಲಿಸಬೇಕು.

**ಮಾತೃವತ್ ಪರಿಪಾಲಯೇತ್** ।

ಅವಳ ಸಂಪರ್ಕವಿಟ್ಟುಕೊಂಡರೆ ಚಾಂದ್ರಾಯಣ ಪ್ರಾಯಶ್ಚಿತ್ತ ಅಜ್ಞಾನದಿಂದ ಸಗೋತ್ರವಿವಾಹರಾದವರಲ್ಲಿ ಹುಟ್ಟಿದ ಮಕ್ಕಳನ್ನು 'ಕಾಶ್ಯಪಗೋತ್ರ'ದವರೆಂದು ವ್ಯವಹರಿಸಬೇಕು.

- ***ಪ್ರತ್ಯುದ್ವಾಹ ನಿಷಿದ್ಧ :***

ತನ್ನ ಕನ್ಯೆಯನ್ನು ಒಬ್ಬನ ಮಗನಿಗೆ ಕೊಟ್ಟು, ಅವನ ಮಗಳನ್ನು ತನ್ನ ಮಗನಿಗೆ ವಿವಾಹ ಮಾಡಿಸಿದರೆ 'ಪ್ರತ್ಯುದ್ವಾಹ'ವೆನ್ನುವರು. ಇದು ನಿಷಿದ್ಧ. ಆದರೆ ದಾರಿದ್ರ್ಯಾದಿ ಆಪತ್ಕಾಲದಲ್ಲಿ ನಿಷಿದ್ಧವಲ್ಲ.

ಒಬ್ಬ ವರನಿಗೆ ತನ್ನ ಎರಡು ಕನ್ಯೆಯನ್ನು ಕೊಡಬಾರದು. ಅಣ್ಣ–ತಮ್ಮಂದಿರಿಗೆ, ಅಕ್ಕತಂಗಿಯರನ್ನು ಕೊಡಬಾರದು. ಒಂದು ಮನೆಯಿಂದ ಒಂದೇ ಹೆಣ್ಣು ತರಬೇಕು. ಆದರೆ ಸಹೋದರರಿಬ್ಬರಿಗೆ ಸಹೋದರಿಯರಿಬ್ಬರನ್ನು ಒಂದು ವರ್ಷ ನಂತರ ಅಥವಾ ಮಹಾನದಿ ಮುಂತಾದ ಅಂತರವಾದರೆ ಕೊಡಬಹುದು. ಒಂದೇ ಕಾಲದಲ್ಲಿ ಒಂದೇ ಊರಿನಲ್ಲಿ ಅಕ್ಕತಂಗಿಯರನ್ನು ಅಣ್ಣತಮ್ಮಂದಿರಿಗೆ ಕೊಡಬಾರದು.

ಅಣ್ಣನಿಗೆ ಮದುವೆಯಾದ ನಂತರ ಆರು ತಿಂಗಳೊಳಗೆ ಕನ್ಯಾ ವಿವಾಹ ಮಾಡಬಾರದು. ಎಂದರೆ ಜ್ಯೇಷ್ಠಮಂಗಲದ ನಂತರ ಲಘು ಮಂಗಳವನ್ನಾಚರಿಸಬಾರದು.

ಗೃಹ ನಿರ್ಮಾಣ ಹಾಗೂ ವಿವಾಹವು ಒಂದು ವರ್ಷದ ಮಧ್ಯದಲ್ಲಿ ಮಾಡಬಾರದು. ಗೃಹವು ಅರ್ಧವಾಗಿದ್ದು ಗೃಹಪ್ರವೇಶ ಮಾಡಿ ವಿವಾಹ ಮಾಡಲು ಅಡ್ಡಿಯಿಲ್ಲ.

ಜ್ಯೇಷ್ಠಮಂಗಲವೆಂದರೆ ಮನೆಯ ಹೊರಗೆ ಮಾಡುವ ವಿವಾಹಾದಿಗಳು. ಮನೆಯಲ್ಲೇ ಮಾಡುವ ವಾಸ್ತುಪ್ರವೇಶಾದಿಗಳು ಲಘು ಮಂಗಲವೆನ್ನುವರು. ಆದರೆ ಇದು ನೈಮಿತ್ತಿಕ ಶಾಂತ್ಯಾದಿಗಳಿಗೆ ಅನ್ವಯಿಸುವುದಿಲ್ಲ.

ಹೀಗೆ ಒಂದೇ ಕಾಲದಲ್ಲಿ ಇಬ್ಬರಿಗೆ ಮುಂಡನಗಳು, ಉಪನಯನಗಳು ನಡೆಯಬಾರದು. ಆದರೆ ಅವಳಿ-ಜವಳಿಗಳಿದ್ದರೆ ಒಂದೇ ಕಾಲ ಹಾಗೂ ಒಂದೇ ಮಂಟಪದಲ್ಲಿ ಮಾಡಬಹುದು. ಅದೇ ರೀತಿ ಭಿನ್ನ ಭಿನ್ನ ಉದರ ಹುಟ್ಟಿದವರಿಗೆ ಒಂದೇ ಕಾಲದಲ್ಲಿ ಉಪನಯನ ದೋಷವಿಲ್ಲ.

ತಂದೆಯ ಮರಣದಲ್ಲಿ ಒಂದು ವರ್ಷ ವಿವಾಹ ನಡೆಯಬಾರದು. ಅತಿ ಸಂಕಟದಲ್ಲಿ ಆರು ತಿಂಗಳಾದರೂ ಬಿಡತಕ್ಕದ್ದು. ಇನ್ನೂ ಬಿಕ್ಕಟ್ಟಿನಲ್ಲಿ ಒಂದು ತಿಂಗಳ ನಂತರ ಶಾಂತಿ ಮಾಡಿ ವಿವಾಹವಾಗಬಹುದು.

- ***ತಂದೆ-ತಾಯಿಯರ ಮೃತಿಯಲ್ಲಿ ಮಗಳ ವಿವಾಹ ಅವಧಿ :***

ತಂದೆ ಅಥವಾ ತಾಯಿ ಮೃತರಾಗಿದ್ದಾಗ ತಂದೆಯ ಮೃತಿಯಲ್ಲಿ ಒಂದು ವರ್ಷ ಬಿಡತಕ್ಕದ್ದು. ತಾಯಿಯ ಮರಣದಲ್ಲಿ ಆರು ತಿಂಗಳು ಬಿಡತಕ್ಕದ್ದು. ಪತಿಯು ಮೃತನಾದರೆ ಮೂರು ತಿಂಗಳು, ಅಣ್ಣತಮ್ಮಂದಿರು ಮೃತರಾದರೆ ಒಂದೂವರೆ ತಿಂಗಳು ಶುಭವಿವಾಹಾದಿಗಳಿಲ್ಲ. ಆದರೆ ತಂದೆ-ತಾಯಿಯವರ ಮರಣವಾದಾಗ ಕರ್ತೃವಿಗೆ ಒಂದು ವರ್ಷ ಸೂತಕವಿರುತ್ತದೆ. ಆದ್ದರಿಂದ ಅವನು ಹಾಗೂ ಅವನ ತಮ್ಮಂದಿರಲ್ಲಿ ಒಂದು ವರ್ಷ ಶುಭವಿವಾಹಾದಿ-ಗಳಿಲ್ಲ. ಆದರೆ ಅದೇ ಅವಧಿಯಲ್ಲಿ ಮಗಳ ಮದುವೆಯಾಗಬಹುದು. ಲಕ್ಷ್ಮೀಯನ್ನು ಕಳುಹಿಸಬಹುದು. ಆದರೆ ಲಕ್ಷ್ಮೀದೇವಿಯ ಆಗಮನವಿಲ್ಲ.

- ***ಕನ್ಯೆಯ ರಜೋದೋಷ :***

ವಿವಾಹಕ್ಕಿಂತ ಮೊದಲು ಕನ್ಯೆಯು ರಜಸ್ವಲೆಯಾಗಿರಬಾರದು. ಆದ್ದರಿಂದಲೇ ಬಾಲ್ಯದಲ್ಲೇ ವಿವಾಹ ಮಾಡುತ್ತಿದ್ದರು. ಆದರೆ ಈಗ ಸರ್ಕಾರವೇ ವಧೂವರರ ವಯಸ್ಸನ್ನು 18-21 ಎಂದು ಆಜ್ಞೆ ಹೊರಡಿಸಿದೆ. ಇಂತಹ ಸಂದರ್ಭದಲ್ಲಿ

ಶಾಸ್ತ್ರವು ಹೀಗೆ ಉತ್ತರಿಸುತ್ತದೆ. ವಸ್ತುತ ವಿಚಾರಿಸಿದರೆ ಎಂಟನೆ ವರ್ಷದಲ್ಲೇ ವಿವಾಹ ಮಾಡುವುದುತ್ತಮ ಪಕ್ಷವು. ರಜಸ್ವಲೆಯಾದ ನಂತರ ಮಾಡಿದರೆ ಮಾತಾ–ಪಿತೃಗಳಿಗೆ ನರಕ ಪ್ರಾಪ್ತಿ. ಕನ್ಯೆಯು ವೃಷಲೀ ಎಣಿಸುವಳು. ಇವಳನ್ನು ಮದುವೆಯಾದವನು 'ವೃಷಲೀಪತಿ' ಎನಿಸುವನು. ವೃಷಲೀಪತಿಯನ್ನು ಯಾವುದೇ ಹವ್ಯ–ಕವ್ಯಗಳಲ್ಲಿ ಆಹ್ವಾನಿಸಬಾರದು ಎಂದು ಶಾಸ್ತ್ರವು ಆದೇಶಿಸಿದೆ. ಇದಕ್ಕೆ ಶುದ್ಧಿಕ್ರಮವೆಂದರೆ 'ಗೋದಾನ'ವು. ಗೋದಾನವೆಂದರೇನು? ಗೋ ಎಂದರೆ ಮಾತು, ದಾನ ಎಂದರೆ ನೀಡುವುದು. ಮಾತಿನಿಂದ ನೀಡುವುದು. ಇದರ ವಿವರಣೆಯನ್ನು ಸ್ಮೃತಿಗಳಲ್ಲಿ ಕಾಣಬಹುದು.

ರಜಸ್ವಲೆಯಾಗದ ಕನ್ಯೆಯನ್ನು ಶುಭದಿವಸದಲ್ಲಿ ತುಲಸಿಯ ಮುಂದೆ ಕುಳ್ಳಿರಿಸಿ, ತುಲಸೀವೃಂದಾವನದಲ್ಲಿ ಶ್ರೀಕೃಷ್ಣ ಪ್ರತಿಮೆಯಿಟ್ಟು, ಆವಾಹನಾದಿ ಷೋಡಶೋಪಚಾರ ಪೂಜೆಯನ್ನು ಮಾಡಿ ಕನ್ಯೆಯಲ್ಲಿ ಲಕ್ಷ್ಮಿಯನ್ನು ಆವಾಹಿಸಿ ಒಂದು ಲಕ್ಷ್ಮೀ ಇರುವ ಸುವರ್ಣ ನಾಣ್ಯವನ್ನು ಶ್ರೀಕೃಷ್ಣನಿಗೆ ಮುಟ್ಟಿಸಿ ತಂದೆ ಅಥವಾ ತಾಯಿಯೇ ಕನ್ಯೆಗೆ ಕಟ್ಟುವುದು. ಇದರಿಂದ 'ವೃಷಲೀತ್ವ' (ಚಾಂಡಲತ್ವ) ಬರುವುದಿಲ್ಲ ಅಥವಾ ಒಂದಾದರೂ ಗೋದಾನ ಮಾಡಿ ಯಥಾಶಕ್ತಿ ಬ್ರಾಹ್ಮಣರ ಭೋಜನ ಮಾಡಿಸಿಯೂ ದೋಷಮುಕ್ತ–ನಾಗಬಹುದು.

- ***ತ್ರಿಜ್ಯೇಷ್ಠ ವಿವಾಹ :***

ಜ್ಯೇಷ್ಠ ಪುತ್ರ, ಪುತ್ರಿಯರಾದ ವಧುವರರಿಗೆ ಜ್ಯೇಷ್ಠಮಾಸದಲ್ಲಿ ವಿವಾಹವನ್ನು ಮಾಡಬಾರದು. ಇದನ್ನೇ "ತ್ರಿಜ್ಯೇಷ್ಠ"ವೆನ್ನುವರು. ಇದೇ ರೀತಿ ತಿಥಿ, ವಾರ, ನಕ್ಷತ್ರ, ಯೋಗ, ಕರಣ ಇತ್ಯಾದಿ ದಿನಶುದ್ಧಿ, ಅಷ್ಟಮದಲ್ಲಿ ಕುಜನಿರುವುದು, ಚಂದ್ರ ಹಾಗೂ ದುಷ್ಟ ಗ್ರಹವಿರುವ ಲಗ್ನದಲ್ಲಿ ವಿವಾಹ, ಆರು, ಎಂಟರಲ್ಲಿ ಚಂದ್ರನಿರುವ ಲಗ್ನ, ಸಪ್ತಮದಲ್ಲಿ ಪಾಪಗ್ರಹ, ಲಗ್ನ ಹಾಗೂ ಸಪ್ತಮಶುದ್ಧಿಯಿಲ್ಲದಿರುವುದು, ಕರ್ತರೀಯೋಗ (ಲಗ್ನ ಹಾಗೂ ಚಂದ್ರರ ಹಿಂದೆ ಮುಂದೆ ಪಾಪಗ್ರಹಗಳಿರುವುದು).

ಇವೇ ಮೊದಲಾದ 21 ದೋಷಗಳನ್ನು ವಿವಾಹದಲ್ಲಿ ಬಿಡಬೇಕು.

* * * * *



# 10. ವಿವಾಹ ಕಾರ್ಯ




- ***ವಿವಾಹ ಸಂಸ್ಕಾರದ ಮುಖ್ಯಕ್ರಿಯೆಗಳು :***
- ***ಸೀಮಾಂತ ಪೂಜೆ :***

ಪುತ್ರಿಯನ್ನು ಇಷ್ಟು ದಿವಸ ಮುದ್ದಿನಿಂದ ಸಾಕಿ ಸಲಹಿ ಅವಳನ್ನು ಒಳ್ಳೆಯ ವರನಿಗೆ ದಾನ ಮಾಡಬೇಕು. ಕನ್ಯೆಯ ತಂದೆ-ತಾಯಿಗಳಾದರೂ ಅವರಲ್ಲಿ ವಿಷ್ಣುವನ್ನೇ ಕಾಣಬೇಕು. ಆದ್ದರಿಂದ ಬಂದ ವರನಲ್ಲಿ ಭಗವಂತನನ್ನು ಆವಾಹಿಸಿ ಅನುಸಂಧಾನಿಸಿ ಅವನಿಗೆ ಮಾಡುವ ಗೌರವ ಪೂರ್ವಕ ಪೂಜೆಯನ್ನೇ "ಸೀಮಾಂತ ಪೂಜೆ" ಎನ್ನುವರು. ಆದ್ದರಿಂದಲೇ ಮಂತ್ರಗಳನ್ನು ಪಠಿಸುತ್ತಿರುವಾಗ ಮಂತ್ರಾಕ್ಷತೆ ಮಿಶ್ರಿತ ಅಕ್ಕಿಯನ್ನು ಪರಸ್ಪರವಾಗಿ ಎರಚಿಕೊಂಡು ವಧು-ವರರು ಲಕ್ಷ್ಮೀನಾರಾಯಣರಾದರೆ ಬಂಧುಗಳೆಲ್ಲೂ ಇತರ ದೇವತಾಗಣದವರೆಂದು ಅನುಸಂಧಾನ ಮಾಡಿಕೊಂಡು ಸ್ವಾರ್ಥ, ಅಸೂಯೆ, ಕೊಂಕುನುಡಿ ಇವುಗಳನ್ನು ಬಿಟ್ಟು ದೈವೀಸಂಪತ್ತು ಸಂಪಾದಿಸಿ, ದೈವೀವಾತಾವರಣವನ್ನು ನಿರ್ಮಿಸಬೇಕು.

ಈ ಪ್ರಕರಣದಿಂದ ವರನಲ್ಲಿ ವಿಷ್ಣುವು ಸನ್ನಿಹಿತನಾಗಬೇಕಾದ ಯೋಗ್ಯತೆ ಇರಬೇಕೆಂದು ತಿಳಿಯುತ್ತದೆ. ಯೋಗ್ಯನಾದ ವರನು ಸಿಗದಿದ್ದಾಗ ಕನ್ಯೆಯು ಸಾಯುವ ತನಕ ತಂದೆಯ ಮನೆಯಲ್ಲಿಯೇ ಇರಬೇಕು. ಹೊರತು ಯೋಗ್ಯ ವರನು ಸಿಗಲಿಲ್ಲವೆಂದು ಅಯೋಗ್ಯನಿಗೆ ಕನ್ಯೆಯನ್ನು ಕೊಡಬಾರದು.

**ನ ಚೈವೈನಾಂ ಪ್ರಯಚ್ಛೇತ್ತು ಗುಣಹೀನಾಯ ಕರ್ಹಿಚಿತ್ ।**

ಅಂತು ಹೆಣ್ಣಿಗೆ ಯಾವ ವಯಸ್ಸಿನಲ್ಲಾದರೂ ಸರಿ ವಿವಾಹ ಸಂಸ್ಕಾರ-ವಾಗಲೇಬೇಕು. ಮಹಾಭಾರತದಲ್ಲಿ ಬರುವ ಕುಣಿಗಾರ್ಗ್ಯನ ಮಗಳು ವೃದ್ಧಳಾದ ಕನ್ಯೆಯು, ಸಾಯುವ ಮುನ್ನ ವಿವಾಹವಾಗಿ ನಂತರ ಸತ್ತಳು. ವಧು ಹಾಗೂ ವರರು ಪರಸ್ಪರ ಮೆಚ್ಚಿದಾಗ ಯಾವುದೇ ದೋಷವಿರುವುದಿಲ್ಲ.

**ದೋಷೇಽಪ್ಯತ್ರ ನ ದೋಷಃ ಸ್ಯಾತ್ ಅನ್ಯೋನ್ಯಂ ಭಜತೇ ದ್ವಯೋಃ।**

ಆದರೂ ಪ್ರಾಯಕ್ಕೆ ಬರುವ ಮೊದಲೇ ವಿವಾಹವಾದರೆ ಅವಳು ಗಂಡನ ಜೊತೆಗೆ ಅನ್ಯೋನ್ಯವಾಗಿ ಬಾಳಲು ಕಲಿಯುವಳೆಂದೇ ಅಪ್ರಾಪ್ತವಯಸ್ಕ ವಿವಾಹವು ಶಾಸ್ತ್ರದಲ್ಲಿ ಹೇಳಿದೆ.

***ಜಾನವಾಸ (ಖುಕ್ಕೋತ):*** ಸೀಮಾಂತ ಪೂಜೆ ಮುಗಿದ ಮೇಲೆ ಅವರಿಗೆ ಗೌರವ ಪೂರ್ವಕ ಕರೆತಂದು. ಅವರಿಗೆ ಪುಷ್ಪಾದಿಹಾರಗಳನ್ನು ಹಾಕಿ, ಕುಂಕುಮಾದಿಗಳನ್ನು ಹಚ್ಚಿ, ಪರಸ್ಪರ ಪರಿಚಯ ಮಾಡಿಕೊಳ್ಳಬೇಕು. ಇಂದಿನಿಂದ ನಾವೆಲ್ಲರೂ ಬಂಧುಗಳಾಗಿದ್ದೇವೆ. ನಮ್ಮ ನಿಮ್ಮ ಅಭಿಪ್ರಾಯ ಒಂದೇ ಆಗಿದೆ. ನಾವೆಲ್ಲರೂ ಪ್ರೀತಿಯಿಂದ ಇರೋಣ, ನಮ್ಮ ಈ ಬಾಂಧವ್ಯ ಬಲಗೊಳ್ಳಲಿ ಎಂದು ಪ್ರತಿಜ್ಞೆಯನ್ನು ಮಾಡಬೇಕು.

**ಸಮಾನೀವ ಆಕೂತಿಃ ಸಮಾನಾ ಹೃದಯಾನಿ ವಃ ।**
**ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾ ಸತಿ ॥**

ಇದಾದ ಮೇಲೆ ಜಗಳ, ತಕರಾರು, ವ್ಯಂಗ ಮಾತು, ಇವಾವುದೂ ವಿವಾಹದಲ್ಲಿ ಇಣಕಬಾರದು. ಹಾಗೆ ಆದರೆ ಲಕ್ಷ್ಮೀನಾರಾಯಣರ ಸನ್ನಿಧಾನಯುಕ್ತರಾದ ವಿವಾಹ ಕಾರ್ಯದಲ್ಲಿ ವಿಘ್ನವುಂಟು ಮಾಡಿದ ಪಾಪಕ್ಕೆ ಭಾಗಿಗಳಾಗಿ ನರಕವನ್ನುನುಭವಿಸುವರು.

- ***ಲಗ್ನಪತ್ರಿಕೆ (ವಾಙ್‌ನಿಶ್ಚಯ) :***

ವರ ಹಾಗೂ ವಧೂಪಕ್ಷದವರು ಹಾಗೂ ಬಂಧುಗಳು ಸೇರಿ ಗಣಪತಿ-ವರುಣ ಪೂಜೆಯನ್ನು ಮಾಡಿ, ನಮ್ಮ ಮುಂದಿನ ಕಾರ್ಯದಲ್ಲಿ ನಿರ್ವಿಘ್ನತೆಯನ್ನು ಹಾಗೂ ಮಂಗಲಮಯ ವಾತಾವರಣವನ್ನೂ ಬೇಡುವರು. ನಂತರ ಕನ್ಯಾದಾತೃವು ತನ್ನ ಕುಲ, ಗೋತ್ರಗಳನ್ನು ಹೇಳಿ, ವರನ ಕುಲಗೋತ್ರಗಳನ್ನು ಉಚ್ಚರಿಸಿ ಇಂತಹ ವಿಶಿಷ್ಟ ವರನಿಗೆ ತನ್ನ

ಮಗಳನ್ನು ಕೊಡುತ್ತೇನೆ ಎಂದು ಸಂಕಲ್ಪ ಮಾಡುವನು. ಹಾಗೆಯೇ ವರನ ತಂದೆಯೂ ಕೂಡ ತನ್ನ ಮಗನಿಗೆ, ಕನ್ಯೆಯನ್ನು ಸ್ವೀಕರಿಸುತ್ತೇನೆ ಎಂದು ಸ್ವೀಕಾರೋಕ್ತಿಯನ್ನು ಹೇಳುವನು. ಈ ಸಂದರ್ಭದಲ್ಲಿ ಸೇರಿದ್ದ ಉಭಯ ಪಕ್ಷದವರೂ ಎರಡೂ ಕುಲಗಳ ಸಮನ್ವಯವನ್ನು ಸಾಧಿಸುವವರಾಗಿ ವರನಿಗಾಗಿ ಹಾಗೂ ವಧುವಿಗಾಗಿ ಅನೇಕ ಉಡುಗೊರೆಗಳನ್ನು, ಮಂಗಳದ್ರವ್ಯಗಳನ್ನು ಕೊಡಬೇಕು. ನಂತರ ಹುಡುಗಿಯು ನೂತನ ವಸ್ತ್ರಧರಿಸಿ ಇಂದ್ರಾಣೀದೇವಿಯ ಪೂಜೆಯನ್ನು ಮಾಡಬೇಕು.

"ಇಂದ್ರಾಣಿಯೇ, ನೀನು ಈ ಹೆಂಗಸರ ಮಧ್ಯದಲ್ಲಿ ಅತ್ಯಂತ ಸೌಭಾಗ್ಯವಂತಳಾಗಿರುವಿ, ನಿನ್ನ ಪತಿಯಾದ ಇಂದ್ರದೇವನಿಗೆ ವೃದ್ಧಾಪ್ಯ, ಮರಣಾದಿಗಳು ಇಲ್ಲದಿರುವುದೇ ಇದಕ್ಕೆ ಕಾರಣ, ನನಗೂ ಹೀಗೆ ಸೌಭಾಗ್ಯವನ್ನು ನೀಡು" ಎಂದು ಪ್ರಾರ್ಥಿಸಬೇಕು.

**ದೇವೇಂದ್ರಾಣಿನಮಸ್ತುಭ್ಯಂ ದೇವೇಂದ್ರ ಪ್ರಿಯಭಾಮಿನಿ ।**
**ವಿವಾಹಭಾಗ್ಯಮಾರೋಗ್ಯಂ ಭರ್ತೃಲಾಭಂ ಚ ದೇಹಿ ಮೇ ॥**

ನಂತರ ವರಪೂಜೆ, ಕುಲದೇವತೆಯ ಪೂಜೆ, ಲಗ್ನಪತ್ರಿಕಾ ಪೂಜೆ, ಫಲ ದಾನ, ಸಂಪ್ರೀತಿ ಭೋಜನದಿಂದ ಈ ಕಾರ್ಯಕ್ರಮ ಮುಗಿಯುತ್ತದೆ.

- ***ಪುಣ್ಯಾಹವಾಚನ :***

ವಿವಾಹದ ದಿವಸ ವಧೂವರರು ಹಾಗೂ ಇತರ ಬಂಧುಗಳ ಮಂಗಳಸ್ನಾತರಾಗಿ, ಗಣಪತಿ, ವರಪೂಜೆಗಳನ್ನು ವಿಪ್ರರ ಮೂಲಕ ವೇದಮಂತ್ರಗಳಿಂದ ಈ ದಿನವು ಪುಣ್ಯಕರವಾಗಲಿ ಹಾಗೂ ಸಮೃದ್ಧಿಯಾಗಲಿ ಎಂದು ಆಶೀರ್ವಾದ ತೆಗೆದುಕೊಳ್ಳುವ ವಿಧಿಗೆ ಪುಣ್ಯಾಹವಾಚನ ಎನ್ನುವರು.

ಈ ಸಮಯದಲ್ಲಿ ಎಲ್ಲರೂ ಹಾಗೂ ಪುಣ್ಯಾಹವಾಚನಕ್ಕೆ ಕುಳಿತವರು ಎಲ್ಲೆಲ್ಲೋ ನೋಡದೆ, ಬೇರೆಯವರ ಜೊತೆ ಮಾತನಾಡದೆ, ಮಧ್ಯೆ ಎದ್ದು ಹೋಗದೆ ಭಕ್ತಿಯಿಂದ ಪೂಜೆ ಮಾಡಬೇಕು.

- ***ನಾಂದಿ ಸಮಾರಾಧನೆ :***

ಇದೊಂದು ಮಂಗಳದಾಯಕವಾದ ಪೂಜೆ. ಇದರಲ್ಲಿ ಗೌರೀ, ಪದ್ಮಾ, ಶಚೀ ಮೊದಲಾದ 16 ದೇವತೆಗಳನ್ನೂ, ಬ್ರಾಹ್ಮೀ, ಮಾಹೇಶ್ವರೀ ಮೊದಲಾದ

7 ಮಾತೃಕೆಯರನ್ನು ಹೊಸ ಮೊರದಲ್ಲಿ ಅಕ್ಕಿಯ ಮೇಲಿಟ್ಟ ಅಡಿಕೆಗಳಲ್ಲಿ ಆವಾಹಿಸುವುದು. ಸತ್ಯ ವಸುಸಂಜ್ಞಕರರೆಂಬುವರಿಗೆ ಹಾಗೂ 23 ದೇವತೆಗಳಿಗೆ ಅಸನಾದ್ಯುಪಚಾರ ಪೂಜೆ ಅರ್ಪಿಸುವುದು. ಇಬ್ಬರು ಬ್ರಾಹ್ಮಣರನ್ನು ಭೋಜನ ಮಾಡಿಸುವ ಉದ್ದೇಶದಿಂದ ಯಥಾಶಕ್ತಿ ದಕ್ಷಿಣೆಗಳಿಂದ ಪೂಜಿಸುವುದು.

- *ಮಂಟಪ ಪೂಜಾ :*

ಮಂಟಪವನ್ನು ಪುಷ್ಪಾದಿಗಳಿಂದ ಅಲಂಕರಿಸಿ, ಮಂತ್ರಾಕ್ಷತೆಯಿಂದ ನಂದಿನೀ, ನಲಿನೀ, ಮೈತ್ರಾ, ಉಮಾ, ಪಶುವರ್ಧಿನೀ, ಶಸ್ತ್ರಗರ್ಭಾ, ಭಗವತೀಗಳೆಂಬ ಮಂಟಪ ದೇವತೆಗಳನ್ನು ಆವಾಹಿಸಿ ಪೂಜಿಸಿ ಯಾವುದೇ ವಿಘ್ನ ಬರದಿರಲೆಂದು ವರ ಬೇಡುವುದು.

- *ಮಧುಪರ್ಕ :*

ಮನೆಗೆ ಬಂದ ಅತಿಥಿಗಳಿಗೆ ಮಧುವನ್ನು ಎಂದರೆ ಸಿಹಿಯನ್ನು ಕೊಟ್ಟು ಸತ್ಕರಿಸುವುದಕ್ಕೆ ಮಧುಪರ್ಕ ಎಂದು ವ್ಯವಹಾರ. ಮಧುಪರ್ಕವೆಂದರೆ ಜೇನು, ಮೊಸರು, ತುಪ್ಪಗಳ ಮಿಶ್ರಣವು. ನಂತರ ಗೋವನ್ನು ಬಿಡುವುದು. ಇಲ್ಲಿ ಮನೆಗೆ ಬಂದ ವರನು ವಿಷ್ಣುವಿನ ಸನ್ನಿಧಾನವುಳ್ಳವನೆಂದು ಅವನಿಗೆ ಮಾವನು ಮಧುವನ್ನು ಕೊಟ್ಟು ಪೂಜಿಸುವುದಕ್ಕೆ ಮಧುಪರ್ಕ ಎನ್ನುವರು. ವರನು ವಸುಗಳು, ರುದ್ರ, ಆದಿತ್ಯರಿಗೆ ಮತ್ತು ಪಂಚಭೂತಗಳಿಗೆ ಅದನ್ನು ಅರ್ಪಿಸಿ ನಂತರ ಸ್ವೀಕರಿಸುವನು. ಈ ಮಧುಪರ್ಕದಿಂದ ಕಾಂತಿ, ತೇಜಸ್ಸು, ಕೀರ್ತಿವುಂಟಾಗಲೆಂದು ಪ್ರಾರ್ಥನೆ ಇದೆ.

- *ಗೌರೀಪೂಜೆ :*

ಗೌರೀಪೂಜೆಯಿಂದ ದಾಂಪತ್ಯ ಜೀವನವು ಸುಖಮಯವಾಗಿರುವುದು. ಆದ್ದರಿಂದ ಸ್ತ್ರೀಯರ ನಿತ್ಯಜೀವನದಲ್ಲಿ ವಿವಾಹದ ಮೊದಲು ಹಾಗೂ ನಂತರ ಸೀಗೆಗೌರಿ, ಉಯ್ಯಾಲೆ ಗೌರೀ, ದೊಡ್ಡ ಗೌರೀ, ಮಂಗಳಗೌರೀ, ಸುವರ್ಣಗೌರೀ ಮೊದಲಾದ ಗೌರೀ ಪೂಜೆಗಳು ಹಾಸುಹೊಕ್ಕಾಗಿದೆ. ಮದುವೆಯಲ್ಲಿಯೂ ಈ ಗೌರಿ ಪೂಜೆಯನ್ನು ಮಾಡಿಸಲಾಗುವುದು. ದಾಂಪತ್ಯ ಜೀವನಕ್ಕಾಗಿ ಭವ ಹಾಗೂ ಭವಾನಿಯರ ಪೂಜೆ ಅತ್ಯವಶ್ಯವಾಗಿದೆ. ವಧುವು ಪೂರ್ವಾಭಿಮುಖವಾಗಿ ಕುಳಿತು ಗೌರಿ ಹಾಗೂ ರುದ್ರರನ್ನು ಪೂಜಿಸಿದರೆ ಸುಖಸೌಭಾಗ್ಯ ಹಾಗೂ ಸತ್ಪುತ್ರಪ್ರಾಪ್ತಿಯಾಗುವುದು.

ಈ ಗೌರೀಪೂಜೆಯನ್ನು ಕನ್ಯೆಯು ಭಕ್ತಿಯಿಂದ ಮಾಡಿ ದೊಡ್ಡ ಮುತ್ತೈದೆಯರಿಗೆ ಬಾಗಿಣವನ್ನು ಕೊಟ್ಟು ಅವರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ಈ ಕಾಲದಲ್ಲಿ "ಲಕ್ಷ್ಮೀಶೋಭನ" ಪಠಿಸುವುದು ಅತ್ಯುತ್ತಮ. ಈ ಪೂಜೆಯನ್ನು ಹುಡುಗನ ಅತ್ತೆಯೇ ಮಾಡಿಸುವುದು. ಮುಂದೆ ಮದುವೆಯಾಗಿ ಗಂಡನ ಮನೆಗೆ ಹೋಗುವ ಕನ್ಯೆಗೆ ಅತ್ತೆಯೇ ತಾಯಿಯೆನಿಸುವಳಷ್ಟೇ. ಆದ್ದರಿಂದ ಅತ್ತೆಯೇ ಗೌರೀಪೂಜೆಯನ್ನು ಮಾಡಿಸುತ್ತಾಳೆ.

- *ವಧೂವರ ನಿರೀಕ್ಷಣ : [ಅಂತರಪಟ] :*

ಇದನ್ನು ಮುಹೂರ್ತ ನಿರೀಕ್ಷಣ ಎನ್ನುವರು. ವಿವಾಹದಲ್ಲಿ ಇದು ಅತ್ಯಂತ ಮಹತ್ವವಾದ ಘಟ್ಟ ವಧೂ-ವರರು ಈ ಮೊದಲು ಎಷ್ಟು ಬಾರಿ ನೋಡಿದ್ದರೂ ಜ್ಯೋತಿಷಿಗಳು ನಿಶ್ಚೈಯಿಸಿದ ಮುಹೂರ್ತದಲ್ಲಿ ವಧೂ-ವರರು ಪರಸ್ಪರ ನೋಡುವುದನ್ನೇ 'ಮುಹೂರ್ತ ನಿರೀಕ್ಷಣ" ಎನ್ನಲಾಗಿದೆ.

ಮುಹೂರ್ತ ನಿರೀಕ್ಷಣದಲ್ಲಿ ವಧೂವರರು ನಿರಂತರವಾಗಿ ಲಕ್ಷ್ಮೀನಾರಾಯಣರ ಧ್ಯಾನ ಮಾಡುತ್ತಿರಬೇಕು. ಬೇರೆ ಯಾವುದಾದರೂ ವಿಷಯವನ್ನು ಚಿಂತಿಸಿದರೆ ಮುಹೂರ್ತದ ಬಲದಿಂದ ಅದು ಮುಂದೆ ಹಾಗೆ ನಡೆದೇ ತೀರುತ್ತದೆ. ಇದನ್ನೇ ಮನಸ್ಸು ಬೇರಡೆಗೆ ಹೋಗುವುದು ಬೇಡ ಎಂಬರ್ಥವುಳ್ಳ 'ಲಕ್ಷ್ಮೀನಾರಾಯಣ ಧ್ಯಾನ ಸಾವಧಾನ' ಎನ್ನುತ್ತಿರುತ್ತಾರೆ. ವಿವಾಹಕ್ಕೆ ಬಂದಿರುವ ಗುರುಹಿರಿಯರು, ಶಾಸ್ತ್ರವೇತ್ತರು, ಈ ಶುಭಮುಹೂರ್ತದಲ್ಲಿ ಈ ವಧೂವರರಿಗೆ, ಶ್ರೀಮನ್ನಾರಾಯಣ, ಬ್ರಹ್ಮಾದಿ ದೇವತೆಗಳು, ವಿಶ್ವಾಮಿತ್ರಾದಿ ಋಷಿಗಳು, ಮಾಂಧಾತಾದಿ ರಾಜರ್ಷಿಗಳು ಗಂಗಾದಿ ನದ್ಯಭಿಮಾನಿಗಳು, ಮೇರ್ವಾದಿ ಪರ್ವತಗಳು, ವೇದಾದಿ ಸರ್ವಶಾಸ್ತ್ರಾಭಿಮಾನಿಗಳು, ಆದಿತ್ಯಾದಿ ನವಗ್ರಹ ದೇವತೆಗಳು ಮಂಗಳವನ್ನುಂಟು ಮಾಡಲಿ" ಎಂದು ಆಶೀರ್ವದಿಸುವರು.

- *ಜೀರಿಗೆ ಬೆಲ್ಲ :*

ಮುಹೂರ್ತ ನಿರೀಕ್ಷಣದಲ್ಲಿ ಮಂಗಳಾಷ್ಟಕವನ್ನು ಪೂರ್ತಿ ಹೇಳಿ ಮುಗಿಸಿದ ಮೇಲೆ ವಧೂವರರು ಪರಸ್ಪರ ನೋಡಿ, ತಮ್ಮ ಕೈಯಲ್ಲಿದ್ದ ಜೀರಿಗೆ ಹಾಗೂ ಬೆಲ್ಲ ಮಿಶ್ರಣವನ್ನು ಪರಸ್ಪರವಾಗಿ ಎರಚಿಕೊಳ್ಳುವರು. ಜೀರಿಗೆ ಬೆಲ್ಲವನ್ನೆ

ಉಪಯೋಗಿಸುವರು, ಮೆಣಸು ಬೆಲ್ಲವನ್ನಲ್ಲ ಏಕೆ? ಮೆಣಸು ಮತ್ತು ಬೆಲ್ಲವನ್ನು ಬಾಯಲ್ಲಿ ಹಾಕಿಕೊಂಡು ಅಗಿಯುತ್ತಿದ್ದರೆ, ಮೆಣಸೇ ಒಂದು ರೀತಿ, ಬೆಲ್ಲವೇ ಒಂದು ರೀತಿಯಾದ ಫಲವನ್ನು ನೀಡುತ್ತವೆ. ಜೀರಿಗೆ ಬೆಲ್ಲವನ್ನು ಜಗಿದಾಗ 'ಸಮರಸ'ವನ್ನು ಅನುಭವಿಸುತ್ತೇವೆ. ಇದರಿಂದ ವಧೂ–ವರರು ಕೂಡ ಜೀರಿಗೆ–ಬೆಲ್ಲದಂತೆ ಸಮರಸವಾಗಿರಲಿ ಎಂದು ತದಭಿಮಾನಿಗಳನ್ನೂ ಬೇಡುವುದು.

ವಸ್ತುತಃ ವಧೂ–ವರರು ಮಾತ್ರವಲ್ಲ, ಬಂಧುಗಳೆಲ್ಲರೂ ಜೀರಿಗೆ–ಬೆಲ್ಲವನ್ನೇ ಹಾಕಬೇಕೆಂಬ ನಿಯಮವಿದೆ. ಜೀರಿಗೆ – ಬೆಲ್ಲದ ದುಬಾರಿ ಬೆಲೆಯಿಂದಾಗಿ ಅಕ್ಷತೆಯು ಆ ಸ್ಥಾನದಲ್ಲಿದೆ. ಈ ಸಂದರ್ಭದಲ್ಲಿ ಭಕ್ತಿ ಇಲ್ಲದೆ ಪರಸ್ಪರ ಎರಚುವುದು ಅಶಾಸ್ತ್ರೀಯ. ವಸ್ತುತಃ ಕನ್ಯೆಯೇ ಮೊದಲು ವರನ ಮೇಲೆ ಜೀರಿಗೆ ಬೆಲ್ಲವನ್ನು ಹಾಕಬೇಕು.

ಆಗ ವರನು ಈ ಕನ್ಯೆಯನ್ನು ಪತಿ, ಮಕ್ಕಳಿಗೆ ಸುಖದಾಯಕಳಾಗಿ, ಸಂಪತ್ತುದಾಯಕಳಾಗಿ ಆಗುವಂತೆ ಅನುಗ್ರಹಿಸೆಂದು ಬೃಹಸ್ಪತಿ, ಸೂರ್ಯರನ್ನು ಪ್ರಾರ್ಥಿಸುವನು.

ವಧುವನ್ನು ಕುರಿತು – ನೀನು ನನಗೆ ಶುಭದೃಷ್ಟಿಯಿಂದ ನೋಡುವಂತಾಗು, ಉಗ್ರದೃಷ್ಟಿ ಬೀರಬೇಡ. ನನಗೆ ಹಿತಪ್ರದಳಾಗು, ಪಶುಗಳಿಗೂ ಹಿತಪ್ರದಳಾಗು. ಅದೇ ರೀತಿ ಅತ್ತೆ–ಮಾವಂದಿರಲ್ಲಿ ಭಕ್ತಿ ತೋರು, ನಿನ್ನ ಮೈದುನನಲ್ಲಿ ಪ್ರೀತಿ ತೋರು, ನಿನ್ನ ನಾದಿನಿಯಲ್ಲಿ (ನನಾಂದಾ) ಪ್ರೀತಿ ವಿಶ್ವಾಸದಿಂದಿರು ಹೀಗೆ ಪ್ರಾರ್ಥಿಸುತ್ತಾನೆ.

**ಅಘೋರಚಕ್ಷುರಪತಿಘ್ನ್ಯೇಧಿ ಶಿವಾಪಶುಭ್ಯಃ ಸುಮನಾಃ ಸುವರ್ಚಾಃ । ವೀರಸೂಃ ದೇವಕಾಮಸ್ಯೋನಾ ಶಂ ನೋ ಭವದ್ ದ್ವಿಪದೇ ಶಂ ಚತುಷ್ಪದೇ ॥**

- *ಕನ್ಯಾದಾನ :*

ವಧೂ ಹಾಗೂ ವರರನ್ನು ಇಬ್ಬರನ್ನೂ ಅಲಂಕರಿಸಿ ನಂತರ ಕನ್ಯೆಯನ್ನು ಧಾರೆಯೆರೆಯಬೇಕು. ಇದನ್ನೇ 'ಸಾಲಂಕೃತ ಕನ್ಯಾದಾನ' ಎನ್ನಲಾಗಿದೆ. ಇದರಿಂದ ಅಶ್ವಮೇಧಯಾಗದ ಫಲ.

ಹೀಗೆ ಕನ್ಯಾದಾನ ಮಹತ್ವವನ್ನರಿತು ಧಾರ್ಮಿಕ ಪ್ರಜ್ಞೆಯಿಂದ ನಡೆಸುವ

ವಿವಾಹ ಸಫಲವಾಗುತ್ತದೆ. ವ್ಯಾವಹಾರಿಕ ದೃಷ್ಟಿ ಇರಬಾರದು. ಇದೊಂದು ಕನ್ಯಾದಾನವೆ ಹೊರತು ಕನ್ಯೆಯ ಮಾರಾಟವಲ್ಲ.

ಈ ರೀತಿ ಶಾಸ್ತ್ರೋಕ್ತ ರೀತಿಯಲ್ಲಿ ಮಾಡಿದ ಕನ್ಯಾದಾನದಿಂದ ಸಮಸ್ತ ಪಿತೃಗಳೂ ಉದ್ಧಾರವಾಗುವರು. ಹಿಂದಿನ ಹನ್ನೆರಡು ತಲೆಗಳು, ಮುಂದಿನ ಹನ್ನೆರಡು ತಲೆಗಳು ಉದ್ಧಾರವಾಗುವುವು.

ದಾತೃವು ಮೊದಲೇ ಕನ್ಯೆಯನ್ನು ಅಲಂಕರಿಸಿ, ಎದ್ದು ನಿಂತುಕೊಂಡು ವರುಣ ಪೂಜೆಯಿಂದ ನೀರನ್ನು ಶುದ್ಧ ಮಾಡಿ ಕನ್ಯೆಯನ್ನು ಹಿಡಿದುಕೊಂಡು ಕಂಚಿನಪಾತ್ರೆ (ತಟ್ಟೆ)ಯಲ್ಲಿ ಕನ್ಯೆ ಹಸ್ತವನ್ನಿಟ್ಟು ಅದರ ಮೇಲೆ ವರಹಸ್ತವನ್ನಿಟ್ಟು ಬಲಗಡೆಯಿರುವ ಪತ್ನಿಯು ಧಾರೆಯಾಗಿ ನೀರನ್ನು ಬಿಡುವುದು. *'ಧರ್ಮೇ ಚ ಅರ್ಥೇಚ ಕಾಮೇಚ ನಾತಿಚರಾಮಿ'* ಎಂದು ವರನಿಂದ ಹೇಳಿಸಬೇಕು ಇದರಿಂದ ಎಲ್ಲಾ ಧರ್ಮಕಾರ್ಯಗಳಲ್ಲೂ ಪತ್ನಿಗೆ ಸಮಾನಾಧಿಕಾರ–ವುಂಟಾಗುತ್ತದೆ.

**ದಂಪತ್ಯೋಃ ಸಹಾಧಿಕಾರಃ ।**

ನಂತರ ಕನ್ಯಾದಾನ ಪ್ರತಿಷ್ಠಾ ಸಿದ್ಧಿಗಾಗಿ ಭೋಜನಪಾತ್ರೆ, ಜಲಪಾತ್ರೆ, ಮೊದಲಾದವುಗಳನ್ನು ದಾನ ಮಾಡಬೇಕು.

ಇದಲ್ಲದೆ ಉಂಗುರ, ಕರ್ಣಕುಂಡಲ, ಗೋವು, ಭೂಮಿ, ವಾಹನ, ಶಯ್ಯಾ ಬೆಳ್ಳಿ ಇವೆ ಮೊದಲಾದವುಗಳನ್ನು ದಾನ ಮಾಡಬೇಕು. ಶಾಸ್ತ್ರದಲ್ಲಿ ಹೇಳಿದ್ದು ಇಷ್ಟು ಮಾತ್ರ. ಆದರೆ 'ವರದಕ್ಷಿಣೆ' ಎಂಬುದನ್ನು ಎಲ್ಲೂ ಹೇಳಿರುವುದಿಲ್ಲ.

ಪುರಾಣಗಳಲ್ಲಿ ವರದಕ್ಷಿಣೆಯ ಉಲ್ಲೇಖವಿದೆ. ಶ್ರೀನಿವಾಸನು ಪದ್ಮಾವತಿಯನ್ನು ವಿವಾಹವಾಗುವಾಗ ಆಕಾಶರಾಜನನ್ನು ಕೋಟಿ ಚಿನ್ನದ ನಾಣ್ಯ, ಮನೆ, ಗೋವು, ಭೂ, ದಾಸಿಯರು, ವಾಹನಗಳು, ಹಾಸಿಗೆ ಇವೇ ಮೊದಲಾದವುಗಳನ್ನು ಕೇಳಿ ಪಡೆದನೆಂದು ತಿಳಿಸಿದೆ. ಹೇಳುವಾಗ ಮಾತ್ರ, ರಾಜನೇ, ನಾನು ನಿನ್ನ ಮಗನಿದ್ದಂತೆ, ನೀನು ಏಕೆ ವರದಕ್ಷಿಣೆ ಕೊಡಬೇಕು ಎನ್ನುತ್ತಾನೆ.

**ದಾತವ್ಯಂ ಕಿಂ ತ್ವಯಾ ರಾಜನ್ ಪುತ್ರಸ್ಯ ತವ ಭೂಪತೇ ।**

ಇದರರ್ಥ ಕನ್ಯಾದಾನವೆಂದರೆ ಇವೆಲ್ಲ ಇರಲೇಬೇಕು. ದಾತೃವು

ಲೋಭವಿಲ್ಲದೆ ದಾನ ನೀಡಬೇಕು. ಅಳಿಯನಿಗೆ ಸಮಸ್ತವೂ ಹೋಗುತ್ತದೆಯೆಂದು ಪರಿತಪಿಸದೆ ವಿಷ್ಣುವಿನ ಪ್ರೀತಿಗಾಗಿ ದಾನ ಮಾಡಬೇಕು. ಅಳಿಯ ಹಾಗೂ ಮಾವಂದಿರಲ್ಲಿ ತಂದೆ-ಮಕ್ಕಳ ವಿಶ್ವಾಸವಿರಬೇಕು. ಆದ್ದರಿಂದಲೇ ಮಗನಿಗೆ ಕೊಡುವಾಗ ಪರಿತಪಿಸದಂತೆ ಅಳಿಯನಿಗೆ ಕೊಡುವಾಗಲೂ ಪರಿತಪಿಸಬಾರದೆಂದು, ಹೀಗಾದಾಗ ಮಾತ್ರ ದಕ್ಷಿಣೆಯು ವರವಾಗಿ ಪರಣಿಮಿಸಿ 'ವರದಕ್ಷಿಣೆ" ಎನಿಸುತ್ತದೆ. ಇಲ್ಲದಿದ್ದರೆ "ಶಾಪದಕ್ಷಿಣೆ" ಎನಿಸುತ್ತದೆ. ಈ ಸಂದರ್ಭದಲ್ಲಿ ಅಳಿಯನೂ ಬಲಾತ್ಕಾರವಾಗಿ ವರದಕ್ಷಿಣೆಗಾಗಿ ಬಲಾತ್ಕಾರ ಅಶಾಸ್ತ್ರೀಯ ಪದ್ಧತಿಯು. ಸಂಪತ್ತುಳ್ಳ ಮಾವನಿಂದ ಕೇಳಿ ಪಡೆದರೆ ದೋಷವಲ್ಲ. ಬಡವರಿಂದ ಪೀಡಿಸಿ ಕಾಡಿಸಿ ಪಡೆಯಬಾರದು.

ನಂತರ ವಧೂ-ವರರನ್ನು ಅಭಿಮಂತ್ರಿತ ಜಲದಿಂದ ಉತ್ತಮ ಆಶೀರ್ವಾದಗಳನ್ನು ಮಾಡುವರು. ಇದನ್ನೇ ಸ್ವರ್ಣಾಭಿಷೇಕ ಎನ್ನುವರು. ಇದೊಂದು ರೀತಿ ವಧೂ-ವರರ ಸ್ನಾನವಿದ್ದಂತೆ.

- *ಅಭಿಜಿನ್ಮುಹೂರ್ತ :*

ಸೂರ್ಯನು ನಡುನೆತ್ತಿಯ ಮೇಲಿರುವಾಗ ಒಂದು ಘಂಟೆ ಕಾಲವು 'ಅಭಿಜಿತ್' ಮೂಹೂರ್ತವೆನ್ನಲಾಗಿದೆ. ಇದು ಸಮಸ್ತ ದೋಷಗಳನ್ನು ದೂರ ಮಾಡುವ ಮುಹೂರ್ತ.

**ಮಧ್ಯಂದಿನಗತೇ ಸೂರ್ಯೇ ಮುಹೂರ್ತೋಽಭಿಜಿದಾಹ್ವಯಃ ।**
**ನಾಶಯತ್ಯಖಿಲನ್ ದೋಷಾನ್ ಪಿನಾಕೀ ತ್ರಿಪುರಂ ಯಥಾ ॥**

- *ಕಂಕಣ ಬಂಧನ :*

ಕಂಕಣ ಬಂಧನವು ವಿವಾಹದಲ್ಲಿ ಪ್ರಧಾನಪಾತ್ರವಹಿಸುತ್ತದೆ. ಉತ್ತಮ ಬ್ರಾಹ್ಮಣ ದಂಪತಿಗಳನ್ನು ಕುಳ್ಳಿರಿಸಿ ಹಾಲಿನಲ್ಲಿ ಅದ್ದಿದ ದಾರದುಂಡೆಯನ್ನು ಈಶಾನ್ಯದಿಂದಾರಂಭಿಸಿ ಐದು ಪ್ರದಕ್ಷಿಣೆ ಅಥವಾ ನಾಲ್ಕು ಪ್ರದಕ್ಷಿಣೆ ಅವರಿಂದ ಸುತ್ತಿಸಿ, ಅನೇಕ ಮಂತ್ರಗಳಿಂದ ಪವಿತ್ರವಾದ ಹಾಗೂ ಸುಮಂಗಲಿಯರು ಶೋಭಾನೆ ಹೇಳುವುದರಿಂದ ಸೌಭಾಗ್ಯದಾಯಕವಾದ ದಾರವನ್ನು ಕಂಬಳಿದಾರ ಹಾಗೂ ಅರಿಷಿಣ ಬೇರನ್ನು ಜೊತೆಗೆ ಸೇರಿಸಿ ಅದನ್ನು ವಧುವರರು ಪೂಜಿಸಿ ಪರಸ್ಪರ ಕಟ್ಟುವುದು. ವರನ ಬಲಗೈಯಲ್ಲಿಯೂ

ವಧುವಿನ ಎಡಗೈಯಲ್ಲಿಯೂ ಕಟ್ಟಬೇಕು. ಆದರೆ ಪದ್ಧತಿಯಲ್ಲಿ ಎಡಗೈಗೆ ಮುಟ್ಟಿಸಿ ಬಲಗೈಯಲ್ಲಿ ಕಟ್ಟುವುದು.

ಈ ಸಂದರ್ಭದಲ್ಲಿ ಹೇಳುವ ಮಂತ್ರದ ಪ್ರಾರ್ಥನೆ ಹೀಗಿದೆ.

'ಇಂದ್ರದೇವನೇ, ನಾವು ನಿನ್ನನ್ನು ಪ್ರಾರ್ಥಿಸುವೆವು. ನಮ್ಮ ಪ್ರಾರ್ಥನೆಯಿಂದ ಸಂತುಷ್ಟನಾಗಿ ವಧುವರರಿಗೆ ದೀರ್ಘಾಯುಷ್ಯವನ್ನು ಕೊಡು ಎಂದು.

- *ಅಕ್ಷತಾರೋಹಣ :*

  ವಧೂ-ವರರು, ತಮ್ಮ ಸುಖ, ಯಜ್ಞ, ಸಂಪತ್ತು, ಧರ್ಮ, ಸಂತಾನ, ಕೀರ್ತಿ ಇವುಗಳು ಪೂರ್ಣವಾಗಲಿ ಎಂದು ಪರಸ್ಪರವಾಗಿ ಹಾಲಿನಿಂದ ತೊಯ್ದ ಮಂತ್ರಾಕ್ಷತೆಯನ್ನು ಅಥವಾ ಅಕ್ಕಿಯನ್ನು ತಲೆಯ ಮೇಲೆ ಹಾಕುವರು.

- *ಮಾಂಗಲ್ಯಧಾರಣ :*

  ಅಷ್ಟಪುತ್ರೀ ಸಂಜ್ಞೆವುಳ್ಳ ಸೀರೆ ಕುಪ್ಪಸಗಳ ಮೇಲೆ ತಾಳಿಯನ್ನಿಟ್ಟು, ಅದರಲ್ಲಿ ಅರಿಷಿಣ-ಕುಂಕುಮವನ್ನು ತುಂಬಿ ಶ್ರೀಲಕ್ಷ್ಮೀನಾರಾಯಣರ ಆವಾಹನೆಯನ್ನು ಮಾಡಿ ಪೂಜಿಸಿ ನಂತರ ಮುತ್ತೈದೆ ಹಾಗೂ ಬ್ರಾಹ್ಮಣ ದಂಪತಿಗಳ ಕೈಯಲ್ಲಿ ಮುಟ್ಟಿಸಿ ನಂತರ ವಧುವಿನ ಕಂಠದಲ್ಲಿ ಹರಿವಾಯು ಸ್ಮರಣಪೂರ್ವಕವಾಗಿ ಕಟ್ಟುವುದು. ನಂತರ ಮೂರು ಗಂಟನ್ನು ಹಾಕಿ ಅರಿಷಿಣ-ಕುಂಕುಮವನ್ನು ಹಚ್ಚಿ, ಗ್ರಂಥಿ ದೇವತೆಯನ್ನು ಪೂಜಿಸಿ ನಮ್ಮಿಬ್ಬರ ಗಂಟು ಬಿಚ್ಚಿ ಹೋಗದಂತೆ ಅನುಗ್ರಹಿಸಲು ಕೇಳುವುದು. ಈ ಗ್ರಂಥಿಯಲ್ಲಿ ವಾಯು, ಭಾರತಿ, ರುದ್ರ-ರುದ್ರಾಣೀ, ಇಂದ್ರ-ಇಂದ್ರಾಣಿಯರಿರುವರು. ಐದು ಜನ ಮುತ್ತೈದೆಯರು ಈ ವಾಯು ಭಾರತ್ಯಾದಿಗಳಿಗೆ ಅರಿಷಿಣ-ಕುಂಕುಮ ಕೊಡುವುದರ ಮೂಲಕ ನೂತನ ದಂಪತಿಯರಿಗೆ ಆಯುರಾರೋಗ್ಯ ಸಂತಾನಾದಿಗಳನ್ನು ಪ್ರಾರ್ಥಿಸುವರು. ಈ ನಂತರ ಯಾವುದೇ ಕಾರಣಕ್ಕೂ ಇದನ್ನು ತೆಗೆಯಬಾರದು. ತೆಗೆದರೆ ಆ ವಿವಾಹಿತದೇವಿಯರಿಗೆ ಸ್ಥಾನವಿಲ್ಲದಂತಾಗಿ ತಮ್ಮ ಸ್ಥಾನಕ್ಕೆ ಮರಳುವರು. ಪುರುಷರಿಗೆ ಉಪನಯನ ಕರ್ಮವಿದ್ದರೆ ಸ್ತ್ರೀಯರಿಗೆ ವಿವಾಹವೆ ಉಪನಯನ.

**ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ ।**

ವಿವಾಹಾನಂತರದಲ್ಲಿ ಈ ದೇವಿಯರಿಗೆ ಯಾವಾಗಲೂ ಅರಿಷಿಣ-ಕುಂಕುಮವನ್ನು ಹಚ್ಚುತ್ತಿರಬೇಕು.

ಮಂಗಲಸೂತ್ರವೆಂದರೆ ಅನಿಷ್ಟ ಸಮೂಹವನ್ನು ಹೋಗಲಾಡಿಸಿ, ಇಷ್ಟಾರ್ಥವನ್ನು ಕೊಡುವುದು.

**ಮಂ = ಅನಿಷ್ಟನಿಚಯಂ, ಗ = ಗಮಯತಿ, ಲ = ಲಾತಿ ಇಷ್ಟಾರ್ಥಂ ಇತ ಮಂಗಲಮ್, ತಜ್ಜನಕಂ ಸೂತ್ರಮಿತ್ಯರ್ಥಃ ।**

ಮಾಂಗಲ್ಯ ಕಟ್ಟುವಾಗ ಹೇಳುವ ಮಂತ್ರದ ಅರ್ಥ ಹೀಗಿದೆ.

ಎಲೈ ಪತಿವ್ರತೆಯೇ, ಈ ನನ್ನ ಜೀವನಕ್ಕೆ ಕಾರಣವಾದ ಈ ಮಂಗಲಸೂತ್ರವನ್ನು ನಿನ್ನ ಕೊರಳಲ್ಲಿ ಕಟ್ಟುತ್ತಿದ್ದೇನೆ. ನೀನು ನನ್ನ ಜೊತೆಯಲ್ಲಿ ನೂರು ವರ್ಷ ಸುಖವಾಗಿ ಬಾಳು.

**ಮಾಂಗಲ್ಯತಂತುನಾನೇನ ಮಮ ಜೀವನ ಹೇತುನಾ ।**
**ಕಂಠೇ ಬಧ್ನಾಮಿ ಸುಭಗೆ ಸಾ ಜೀವ ಶರದಃ ಶತಂ ॥**

ಹೀಗೆ ವಿವಾಹವಾದ ಮೇಲೆ ಈ ಮಂಗಲಸೂತ್ರವನ್ನು ಬೇರೆ ಯಾವ ಪುರುಷನಿಗೂ ತೋರಿಸಬಾರದು. ಮುತ್ತೈದೆ ಸ್ತ್ರೀಯು ನೋಡಿದರೆ ದೋಷವಿಲ್ಲ. ಸಾವಿತ್ರಿಯಂತಹ ಮುತ್ತೈದೆಯರು ಈ ಮಾಂಗಲ್ಯ ಭಾಗ್ಯದಿಂದಲೇ ಪತಿ ದೀರ್ಘಾಯುಷ್ಯವನ್ನು ತಂದು ಕೊಟ್ಟಿರುವರು.

ಮಂಗಲಸೂತ್ರವು ದಾರದಿಂದಲೇ ಕಟ್ಟಿರಬೇಕು. ಬಂಗಾರದಿಂದ ಕಟ್ಟಿದ್ದರೆ ಆಭರಣವೆನಿಸಬಹುದು ಹೊರತು ಮಂಗಳಸೂತ್ರವಾಗುವುದಿಲ್ಲ. ದಾರದಿಂದ ಹಾಗೂ 27 ಕರಿಮಣಿಗಳು ಎರಡು ಗುಂಡು, ಎರಡು ಕೋವಿಗಳಿಂದ ಕೂಡಿದ ಸೂತ್ರವೇ ಮಂಗಳಸೂತ್ರ. ಈ ಮಂಗಳಸೂತ್ರವೆನಿಸಿದ ಇದು ಯಾವಾಗಲೂ ಪವಿತ್ರವಾಗಿರುತ್ತದೆ. ಆದರೆ ಪ್ರತಿದಿನ ಅರಿಷಿಣ-ಕುಂಕುಮಗಳಿಂದ ಅಲಂಕರಿಸುತ್ತಿರಬೇಕು. ಈ ಮಂಗಳ ಸೂತ್ರವಿರುವವರೆಗೂ ಮುತ್ತೈದೆ ಎನಿಸಿ ಸ್ವತಃ ಮಂಗಳಕರಳಾಗಿದ್ದು ಎದುರಿಗೆ ಬಂದ ಮುತ್ತೈದೆಯ ದರ್ಶನವಾದಾಗ ಪರಮಮಂಗಲವು. ಮಂಗಳಸೂತ್ರವೆಂದರೆ ಮಂಗಳಳಾದ ಭಾರತೀ ಹಾಗೂ ಸೂತ್ರನಾಮಕ ವಾಯುದೇವನ ಸನ್ನಿಧಿಯುಳ್ಳ ಒಂದು ಅಲಂಕಾರ. ಇದು ಇರುವಷ್ಟು ಕಾಲವೂ ಕಲಿ ಹಾಗೂ ಅವನ ಪತ್ನಿಯ ಪ್ರವೇಶವಿರುವುದಿಲ್ಲ. ಆದರೆ ಮಂಗಳಸೂತ್ರವನ್ನು ಒಂದು ಬಾರಿ

ಕುತ್ತಿಗೆಯಿಂದ ತೆಗೆದರೆ ಸನ್ನಿಧಾನವು ಕಡಮೆ ವಿಧವಾ ಸಮಳೆನಿಸುವಳೂ. ಇದರಿಂದ ಯಾವ ಕಾರಣಕ್ಕೂ ಇದನ್ನು ತೆಗೆಯಬಾರದು. ಇದಕ್ಕೆ ಇನ್ನೊಂದು ಹೆಸರು 'ತಾಳಿ'. ಇದರರ್ಥವಾದರೂ 'ಕುತ್ತಿಗೆಯಿಂದ ತೆಗೆಯುವುದು ಬೇಡ ತಾಳಿರಿ'. ಗಂಡನು ಬದುಕಿರುವಾಗ ಗಂಡನು ಕಟ್ಟಿರುವ ತಾಳಿಯನ್ನು ತೆಗೆಯುವುದಾದರೂ ತಾಳಿ, ತೆಗೆಯಬೇಡಿರಿ ಎಂಬರ್ಥವಿದೆ. ಅಥವಾ ಬೇರೊಬ್ಬರೂ ಈ ಪರಸ್ತ್ರೀಯನ್ನು ಆಕ್ರಮಿಸಲು ಬರುವಾಗ 'ತಾಳಿ' ಇವಳು ಪರಸ್ತ್ರೀಯು ಎಂದು ಸೂಚಿಸುವುದರಿಂದಲೂ ತಾಳಿಯೇ. ಒಂದು ಬಾರಿ ಕಟ್ಟಿದ ತಾಳಿಯನ್ನು ಕಟ್ಟಿದ ಗಂಡನೇ ತೆಗೆಯಲು ಅಧಿಕಾರ ಹೊಂದಿರುವುದಿಲ್ಲವೆಂದ ಮೇಲೆ ಇತರರಿಗೆ ಮುಟ್ಟಲೂ ಅಧಿಕಾರವಿಲ್ಲ. ಮಂಗಳಸೂತ್ರವು ಗೃಹಿಣಿಯನ್ನಾಗಿ ಸ್ವೀಕರಿಸುವುದರಿಂದ 'ಗೃಹಣೀಗೃಹ' ಎನ್ನಲಾಗಿದೆ.

- *ವಿವಾಹ ಹೋಮ :*

ಸಹಧರ್ಮಿಣಿ ಪ್ರಾಪ್ತಿಯಿಂದ ವರನಿಗೆ ಔಪಾಸನಾಗ್ನಿ ಲಭಿಸುತ್ತದೆ. ವಿವಾಹದ ಪ್ರಧಾನ ಉದ್ದೇಶವಾದರೂ ವಿವಾಹಾಗ್ನಿ ಲಭಿಸುವುದು. ಇದರಿಂದ ವೈಶ್ವದೇವಾದಿ ಅಧಿಕಾರ ಸಿದ್ಧಿಸುವುದು. ವಿವಾಹಾನಂತರ ಗೃಹ್ಯಾಗ್ನಿಗಾಗಿ ವರನು 'ಯೋಜಕ'ನೆಂಬ ಅಗ್ನಿಯನ್ನು ಸ್ಥಾಪಿಸಿ ಹೋಮ ಮಾಡಬೇಕು. ಈ ಯೋಜಕಾಗ್ನಿ ಪ್ರತಿಷ್ಠಾಪನೆ ಹಾಗೂ ಹೋಮದಿಂದ ವಧೂ-ವರರ ಮನಸ್ಸನ್ನು ಒಂದಾಗುವಂತೆ ಮಾಡಲಾಗುತ್ತದೆ. ಹೀಗೆ ವಧುವರರ ಮನಸ್ಸನ್ನು ಯೋಜಿಸುವುದರಿಂದಲೇ ಯೋಜಕ ಎಂದು ಹೆಸರು.

- *ಪ್ರಾಣಿಗ್ರಹಣ :*

ವರನು ವಧುವಿನ ಕೈಯನ್ನು ವಧುವೆ, ನಾವಿಬ್ಬರೂ ದೀರ್ಘಕಾಲ ಸುಖವಾಗಿ ಬಾಳಲೆಂದು, ನಿನ್ನ ಹಸ್ತವನ್ನು ಹಿಡಿಯುತ್ತೇನೆ. ಭಗ, ಅರ್ಯಮಾ, ಸವಿತಾ, ಪೂಷಾ ಈ ನಾಲ್ವರು ದೇವತೆಗಳು ಗೃಹಸ್ಥಾಶ್ರಮವನ್ನು ಪಾಲಿಸಲು ನಿನ್ನನ್ನು ನನಗೆ ನೀಡಿದ್ದಾರೆ ಎಂದು ಕನ್ಯೆಯ ಬಲಗೈಯನ್ನು ಹಿಡಿಯುವುದು.

- *ಲಾಜಾಹೋಮ :*

ಲಾಜಾ ಎಂದರೇ ಅರಳು. ಎಂಟು ಮಂಗಳ ದ್ರವ್ಯದಲ್ಲಿ ಇದೂ ಒಂದು. ಲಾಜಾ ದೇವತೆಗಳು ಅರ್ಯಮಾ, ವರುಣ ಹಾಗೂ ಪೂಷಾ ಎಂಬುವರು.

ಲಾಜಾದಿಂದ ಹೋಮ ಮಾಡಿದಾಗ ಈ ಕನ್ನಿಕೆಯ ಬಂಧುಗಳಲ್ಲಿ ಇರುವ ಅಭಿಮಾನವನ್ನು ಕಡಮೆ ಮಾಡಿ ಪತಿಯ ಮೇಲೆ ಇರುವಂತೆ ಮಾಡುವರು. ಇದಲ್ಲದೆ ಕನ್ಯೆಯ ತಂದೆ-ತಾಯಿಯರ ಮೇಲಿನ ಪ್ರೀತಿಯನ್ನು ಅತ್ತೆ-ಮಾವಂದಿರ ಮೇಲಿರುವಂತೆ ಮಾಡಲೂ ಲಾಜಾ ಹೋಮ ಅವಶ್ಯಕವಾಗಿದೆ. ತವರಿನ ಸಂಬಂಧಕ್ಕಿಂತ ಗಂಡನ ಮನೆಯ ಸಂಬಂಧವೇ ಪ್ರಧಾನವಾಗುತ್ತದೆ. ವಿವಾಹಾನಂತರ ಕನ್ಯೆಯು ಪೂರ್ಣವಾಗಿ ತವರನ್ನು ತ್ಯಜಿಸುವುದು ಬೇಡ. ನಮ್ಮ ಋಣ ವಿವಾಹಕ್ಕೆ ಮುಗಿಯುವುದಿಲ್ಲ ಎಂದು ಸೂಚಿಸುತ್ತಾ "ಇವಳು ನಮ್ಮ ಕುಲವನ್ನು ತ್ಯಜಿಸದಿರಲಿ" ಎನ್ನುತ್ತಾ ಹುಡುಗಿಯ ತಮ್ಮನು ಕನ್ಯೆಯ ಕೈಯಲ್ಲಿ ಭತ್ತದರಳನ್ನು ತುಂಬಿಸುವನು.

ನಂತರ ವರನು ನಾವಿಬ್ಬರೂ ಹೀಗೆ ಇರುವಂತಾಗಲೀ ಎಂದು ಆಶಿಸುವನು.

ನಾನು ಸಾಮವೇದ, ನೀನು ಋಗ್ವೇದ,

ನಾನು ಆಕಾಶ, ನೀನು ಭೂಮಿ.

ನಾವಿಬ್ಬರೂ ಅಗ್ನಿ ಹಾಗೂ ಬ್ರಾಹ್ಮಣರ ಸಮಕ್ಷಮದಲ್ಲಿ ವಿವಾಹಿತರಾಗೋಣ, ಸತ್ಸಂತಾನ ಹೊಂದೋಣ. ನಾವಿಬ್ಬರೂ ಪರಸ್ಪರವಾಗಿ ಒಂದಾಗಿ ನಿಷ್ಕಪಟಿಗಳಾಗಿ ನೂರು ವರ್ಷ ಬಾಳೋಣ – ಎಂದು ಹೇಳುತ್ತಾ ಅಗ್ನಿಗೆ ಪ್ರದಕ್ಷಿಣೆ ಬರಬೇಕು.

- ***ಅಶ್ಮರೋಹಣ :***

ವರನು ವಧುವಿಗೆ ಈ ಸಂದರ್ಭದಲ್ಲಿ ಅವಳು ತಂದಿಟ್ಟ ಒಂದು ಕಲ್ಲಿನ ಮೇಲೆ ಕೈ ಹಿಡಿದು ನಿಲ್ಲಿಸುತ್ತಾನೆ.

ಇದರರ್ಥ ಸಂಸಾರದಲ್ಲಿ ನೀನು ಈ ಕಲ್ಲಿನಂತೆ ಸ್ಥಿರವಾಗಿರು, ಕಷ್ಟಕಾರ್ಪಣ್ಯಗಳು ಬಂದಾಗ ಸ್ಥಿರವಾಗಿ ಧೈರ್ಯಗುಂದಬೇಡ ಎಂದು. ನಿನ್ನ ಮನಸ್ಸು ಹೃದಯ ಗಟ್ಟಿ ಮಾಡಿಕೊಂಡಿರು. ಶರೀರದಾರ್ಢ್ಯ, ಮನೋದಾರ್ಢ್ಯಗಳಲ್ಲಿ ನೀನು ಕಲ್ಲಿನಂತಿರು.

- ***ಸಪ್ತಪದಿ-ಕಾಲುಂಗುರಧಾರಣೆ :***

ತಾಳಿ ಕಟ್ಟಿದ ಮಾತ್ರಕ್ಕೆ ವಿವಾಹ ಮುಗಿದು ಕನ್ಯೆಯು ವರನ ಪತ್ನಿಯೆನಿಸುವುದಿಲ್ಲ. ವಿವಾಹದಲ್ಲಿ 'ಸಪ್ತಪದಿ' ಶಾಸ್ತ್ರ ಮುಗಿದ ಮೇಲೆಯೇ

ಕನ್ಯೆಯು ವರನ ಪತ್ನಿಯೆನಿಸುವಳು. ಸಪ್ತಪದಿಯಲ್ಲಿ ಅಕ್ಕಿಯ 7 ರಾಶಿಯಲ್ಲಿ ಸಪ್ತಋಷಿಗಳನ್ನು ಆವಾಹಿಸಿ ಅವರ ಸಾಕ್ಷಿಯಾಗಿ ಕಾಲುಂಗುರವನ್ನು ಹಾಕುವುದು. ಕಾಲುಂಗುರ ಧಾರಣೆಯು ವಧುವು ತನ್ನ ತಂದೆಯ ಗೋತ್ರದಿಂದ ವರನ ಗೋತ್ರಕ್ಕೆ ಸೇರುತ್ತಿರುವ ಸಂಕೇತ.

ಉದಾ : ಕನ್ಯೆಯ ಗೋತ್ರ ವಿಶ್ವಾಮಿತ್ರವೆಂದು, ವರನ ಗೋತ್ರ ವಸಿಷ್ಠವೆಂದು ತಿಳಿಯೋಣ. ಕಾಲುಂಗುರವನ್ನು ವರನು ತೊಡಿಸಿದಾಗ ವಿಶ್ವಾಮಿತ್ರ ಗೋತ್ರದಿಂದ, ವಶಿಷ್ಠ ಗೋತ್ರಕ್ಕೆ ಬಂದಳೆಂದರ್ಥ. ಇದಕ್ಕೆ ಸಪ್ತರ್ಷಿಗಳು ಸಾಕ್ಷಿಯಾಗಿರುವರು. ಹೀಗೆ ಸಪ್ತಪದಿ ಕಾಲದಲ್ಲಿ ವರನಿಂದ ಧಾರಣೆ ಮಾಡಿಸಿದ ಕಾಲುಂಗುರವನ್ನು ಯಾವುದೇ ಕಾರಣಕ್ಕಾಗಿ ತೆಗೆಯಬಾರದು. ಹಾಗೂ ಕಾಲುಂಗುರವಿಲ್ಲದೇ ಹೊಸ್ತಿಲನ್ನು ದಾಟಿದರೆ ಅವಳ ಜೊತೆಗೆ ಸಂಪತ್ತು ಹೊರಗೆ ಹೋಗುವುದು, ಪುನಃ ಬರುವುದಿಲ್ಲ. ಆದ್ದರಿಂದಲೇ ಕಾಲುಂಗುರದ ಜೊತೆಗೆ ಮೂರನೇ ಬೆರಳಿಗೂ "ಪಿಲ್ಲೇ" ಧರಿಸುವ ಪದ್ಧತಿಯಿದೆ. ಕಾಲುಂಗುರವನ್ನು ಕಾರಣಾಂತರಗಳಿಂದ ತೆಗೆಯಲೇ–ಬೇಕಾದಾಗ ಪಿಲ್ಲೆಯು ಅದರ ಸ್ಥಾನವನ್ನು ತುಂಬುತ್ತದೆ. ಆದ್ದರಿಂದಲೇ ಲಕ್ಷ್ಮೀಶೋಭಾನ ಪದದಲ್ಲಿ 'ಪಿಲ್ಲೆ, ಕಾಲುಂಗುರ'ವೆಂದು ಪ್ರತ್ಯೇಕವಾಗಿ ಹೇಳಿದ್ದಾರೆ.

ಏಳು ಹೆಜ್ಜೆಗಳನ್ನಿಡುವಾಗಲೂ ಸದುದ್ದೇಶವಿದೆ. ವಧುವೆ, ನೀನು ನನ್ನ ಸಂಗಾತಿಯಾಗಿರುವೆ. ಸಮೃದ್ಧವಾಗಿ ಅನ್ನ ಸಿಗಲು ಮೊದಲನೆ ಹೆಜ್ಜೆ ಇಡು. ಬಲಸಂವರ್ಧನೆಗೆ ಎರಡನೆ ಹೆಜ್ಜೆ ಇಡು, ಸಂಪತ್ತಿಗಾಗಿ ಮೂರನೇ ಹೆಜ್ಜೆಯನ್ನಿಡು, ಉತ್ತಮವಾದ ಸುಖವೃದ್ಧಿಗಾಗಿ ನಾಲ್ಕನೇ ಹೆಜ್ಜೆಯಿಂದ, ಉತ್ತಮ ಸಂತತಿಗಾಗಿ ಐದನೆಯ ಹೆಜ್ಜೆಯಿಡು, ಎಲ್ಲ ಋತುಗಳಿಂದಲೂ ಒಳ್ಳೆಯ ಸುಖ ನೀಡಲು ಆರನೇ ಹೆಜ್ಜೆಯನ್ನಿಡು, ನಮ್ಮೀರ್ವರ ಸ್ನೇಹವು ದೃಢವಾಗಿರಲು ಏಳನೆಯ ಹೆಜ್ಜೆಯನ್ನಿಡು.

ಹೀಗೆ ಅನ್ನ, ಬಲ, ಸಂಪತ್ತು, ಪ್ರಣಯ ಸುಖ, ಸಂತಾನ, ಅನುಕೂಲ ಋತು, ಸಖ್ಯ ಇವುಗಳಿಗಾಗಿ ಏಳು ಹೆಜ್ಜೆ. ಹೀಗೆ ಏಳು ಹೆಜ್ಜೆಗಳನ್ನಿರಿಸಿ ಸಪ್ತಋಷಿಗಳನ್ನು ಈ ಮೇಲಿನ 7 ಸಂಪತ್ತುಗಳಿಗಾಗಿ ಪ್ರಾರ್ಥಿಸುವುದೇ ಸಪ್ತಪದಿಯ ಉದ್ದೇಶ. ನಂತರ ಇವರಿಗೆ ಇವರ ಇಷ್ಟಾರ್ಥ ಪೂರ್ತಿಯಾಗಲಿ ಎಂದು ಮಂತ್ರಗಳಿಂದ ಅಭಿಷೇಕ ಮಾಡುವರು.

- ***ಅರುಂಧತೀ ದರ್ಶನ :***

ಅರುಂಧತಿಯು ವಸಿಷ್ಠರ ಧರ್ಮಪತ್ನಿಯು, ವಸಿಷ್ಠರು ನಕ್ಷತ್ರವಾಗಿ ಹೋದರೂ ಅವರನ್ನೇ ಅನುಸರಿಸಿದ ಧರ್ಮಿಷ್ಠಳು, ಅರುಂಧತೀ. ಇವಳನ್ನು ದರ್ಶನ ಮಾಡಿ "ನೀನು ಹೇಗೆ ಪತಿಯನ್ನು ಬಿಡದೆ ಪತಿಪರಾಯಣ-ಳಾಗಿರುವೆಯೋ ಹಾಗೆ ನನ್ನನ್ನೂ ಅನುಗ್ರಹಿಸು" ಎಂದು ಬೇಡುವುದು.

ಅರುಂಧತಿ ಎಲ್ಲಿದೆ? – ರಾತ್ರಿ ವಧುವಿಗೆ ಅರುಂಧತೀ ದರ್ಶನ ಮಾಡಿಸಬೇಕು. ಆದರೆ ಸಪ್ತರ್ಷಿ ಗುರು, ಶುಕ್ರಾದಿಗಳನ್ನು ತೋರಿಸಬೇಕು. ವಿವಾಹದಲ್ಲಿ ಅರುಂಧತಿಯನ್ನು ತೋರಿಸುವವರಿಗೂ ಯಾವುದು ಅರುಂಧತಿಯೆಂದು ತಿಳಿದಿರುವುದಿಲ್ಲ. ಉತ್ತರ ದಿಕ್ಕಿನಲ್ಲಿ ನೋಡಿದಾಗ ಏಳು ನಕ್ಷತ್ರಗಳು ಗಾಳಿಪಟದಂತೆ ಕಾಣಿಸುವುವು. ಅವುಗಳ ಬಾಲದಲ್ಲಿ ಜಮದಗ್ನಿ ನಕ್ಷತ್ರವಾದರೆ, ಎರಡನೇ ನಕ್ಷತ್ರವೇ ವಸಿಷ್ಠ ನಕ್ಷತ್ರ, ವಸಿಷ್ಠ ನಕ್ಷತ್ರ ಸಮೀಪದಲ್ಲೇ ಅರುಂಧತಿಯೂ ಇರುತ್ತದೆ. ಇದನ್ನು ನೋಡಬೇಕು.

ಅರುಂಧತಿಯನ್ನು, ಸಂಜೆ ಸಂಧ್ಯಾವಂದನೆಯನ್ನು ಮುಗಿಸಿ ವಧುವನ್ನು ಹೊರಗೆ ಕರೆದುಕೊಂಡು ಹೋಗಿ ಸಪ್ತರ್ಷಿಮಂಡಲ ಹಾಗೂ ಧ್ರುವನಕ್ಷತ್ರವನ್ನು ಅರುಂಧತಿಯನ್ನು ತೋರಿಸುವುದು. ಅರುಂಧತಿ ದರ್ಶನ ಮಾಡುವಾಗ ಹೀಗೆ ಬೇಡಬೇಕು.

'ನನ್ನ ಪತಿ ಶತಾಯುಷಿ ಆಗಲಿ, ನನಗೆ ಇವನಿಂದ ಯೋಗ್ಯ ಸಂತತಿಯಾಗಲಿ' ಎಂದು.

- ***ಗೃಹ ಪ್ರವೇಶನೀಯ ಹೋಮ :***

ಈ ಹೋಮವನ್ನು ಪ್ರಜಾಪತಿಯು ಒಳ್ಳೆಯ ಮಕ್ಕಳನ್ನು ಕೊಡಲು, ದೀರ್ಘಾಯುಷ್ಯ ಕೊಡಲು ಮಾಡುವರು.

ಇಂದ್ರದೇವನನ್ನು 'ಹತ್ತು ಜನ ಮಕ್ಕಳನ್ನು ಕೊಡಲು ಪ್ರಾರ್ಥಿಸಿ-ಕೊಳ್ಳಲಾಗುವುದು.'

ವಧುವೆ, ನೀನು, ನಿನ್ನ ಒಳ್ಳೆಯ ಗುಣದಿಂದ ಅತ್ತೆ, ಮಾವ, ಮೈದುನ, ಭಾವ, ನಾದಿನಿ, ಅತ್ತಿಗೆಯವರಿಗೆ ಪ್ರೀತ್ಯಾಸ್ಪದಳಾಗು ಎಂದು ಬೇಡುವನು.

- ***ನಿಷೇಕ :***

ಪತ್ನಿಯಾದವಳು ವಿವಾಹದಲ್ಲಿ ಒಂದೊಂದೇ ಅವಯವಗಳನ್ನು ಪತಿಗೆ ಅರ್ಪಿಸಿ ನಿಷೇಕದಲ್ಲಿ ಸರ್ವಾಂಗಗಳನ್ನೂ ಅರ್ಪಿಸುವುದು. ಇದೊಂದು ವಾಮದೇವ ಯಜ್ಞವೆನ್ನಲಾಗಿದೆ.

ವಧುವಿನಲ್ಲಿ ಭಾರತಿಯನ್ನು, ಭಾರತಿಯಲ್ಲಿ ಲಕ್ಷ್ಮೀದೇವಿಯನ್ನು ಚಿಂತಿಸಬೇಕು. ವರನಲ್ಲಿ ವಾಯುದೇವನನ್ನು ಅವನಲ್ಲಿ ನಾರಾಯಣನನ್ನೂ ಚಿಂತಿಸಿ, ಭಗವಂತನನ್ನು ಧ್ಯಾನಿಸುತ್ತಾ ಯಜ್ಞದಲ್ಲಿ ಪಾಲ್ಗೊಳ್ಳಬೇಕು. ಇದರಿಂದ ಸತ್ಸಂತಾನ ಹಾಗೂ ವಂಶೋದ್ಧಾರಕ ಜನಿಸುವನು.

ಶಾಸ್ತ್ರದಲ್ಲಿ ವಿವಾಹದ ದಿನ, ಮೊದಲು ಮಾಡಿ ಮೂರು ದಿನ ನಿಷೇಕ ನಿಷಿದ್ಧವಾಗಿದೆ. ಯಾಕೆಂದರೆ ತನ್ನ ಪತ್ನಿಯಾದರೂ ದೇವತೆಗಳ ಸ್ವತ್ತಾದ್ದರಿಂದ ಪರಸ್ತ್ರೀಗೆ ಸಮಾನಳು. ಆದ್ದರಿಂದಲೇ ನಾಲ್ಕನೆಯ ದಿನದಂದು 'ನಾಗೋಲಿ' ಉತ್ಸವಾನಂತರ 'ವಿಶ್ವಾವಸು' ಎಂಬ ಗಂಧರ್ವನು ವಧುವನ್ನು ಬಿಟ್ಟು ಹೋದ ಮೇಲೆಯೇ ವರನ ಪತ್ನಿಯೆನಿಸುವಳು. ಆದ್ದರಿಂದ ನಾಲ್ಕನೇ ದಿನ ರಾತ್ರಿ ನಿಷೇಕಕ್ಕೆ ಯೋಗ್ಯವಾಗಿರುತ್ತದೆ. ಈಗ ವಿವಾಹದ ದಿನದಂದೇ ನಾಗೋಲಿಯನ್ನು ಮಾಡಿ ನಿಷೇಕವನ್ನೂ ಅಂದೇ ಮಾಡುವ ಪದ್ಧತಿಯಿದೆ.

ಪ್ರೌಢವಿವಾಹಕ್ಕಾಗಿ ಅಂದರೆ ಕನ್ಯೆಯು ಪ್ರೌಢಳಾದ್ದರಿಂದ ವಿವಾಹಕ್ಕೆ ನಿಷಿದ್ಧಳಾಗಿರುವಳು. ಇದಕ್ಕಾಗಿ 'ಭುವನೇಶ್ವರೀ ಶಾಂತಿ'ಯನ್ನು ಮಾಡಿ ಅವಳ ದೇಹ ಶುದ್ಧಿಯನ್ನು ಸಂಪಾದಿಸತಕ್ಕದ್ದು. ಇದರಿಂದ ಉತ್ತಮ ಸಂತಾನಪ್ರಾಪ್ತಿಯಾಗುವುದು.

- ***ಅಷ್ಟಪುತ್ರೀ ವಸ್ತ್ರ :***

ಕನ್ಯೆಯು ಸೌಭಾಗ್ಯಕ್ಕಾಗಿ 'ಗೌರೀಹರ' ಪೂಜೆಯನ್ನು ಅಕ್ಷತಾರೋಪಣಕ್ಕಿಂತ ಮೊದಲು ಮಾಡಬೇಕಾಗಿರುವುದು. ಈ ಸಂದರ್ಭದಲ್ಲಿ ಹಳದಿ ಬಣ್ಣದ ಸೀರೆಯನ್ನು ಧರಿಸಿರಬೇಕು. ಈ ಸೀರೆ ಮಾಂಗಲ್ಯ ಸೂತ್ರ ಕಟ್ಟುವವರೆಗೂ ಬಿಚ್ಚಬಾರದು. ಈ ಸೀರೆಯನ್ನು ಧರಿಸಿಯೇ ಮೂರು ದಿವಸ ಒಂದೇ ಹಾಸಿಗೆಯಲ್ಲಿ ಬ್ರಹ್ಮಚರ್ಯದಿಂದಿರಬೇಕು. ನಾಲ್ಕನೇ ದಿನ ಈ ಸೀರೆಯನ್ನು ಸೂರ್ಯಾಸಾವಿತ್ರೀ ಸೂಕ್ತದ ಅರ್ಥವನ್ನು ತಿಳಿದಿರುವ ಬ್ರಾಹ್ಮಣನಿಗೆ ದಾನ ಮಾಡಬೇಕು. ಆಗ ಅವನು ***'ಅಷ್ಟಪುತ್ರಾ ಭವತ್ವಂ ಚ'*** ಎಂದು ಹೇಳುವನು. ಈ ಸಂದರ್ಭದಲ್ಲಿ ವರನು ***'ಸೋಮಾದ್ಯುಪಭುಕ್ತದೋಷಪರಿಹಾರಾರ್ಥಂ ವಧೂವಸ್ತ್ರದಾನಮಹಂ ಕರಿಷ್ಯೇ'*** ಎಂದು ಸಂಕಲ್ಪ ಮಾಡಬೇಕು. ಆದರೆ

ಅಷ್ಟಪುತ್ರಿ ವಸ್ತ್ರಧಾರಣ ಹಾಗೂ ದಾನ ಇವೆರಡು ಲುಪ್ತವಾಗುತ್ತಿದೆ. ಇದು ಸರಿಯಲ್ಲ. ಋಗ್ವೇದ (10–2–36) ಈ ವಸ್ತ್ರವನ್ನು ದಾನ ಮಾಡದೇ ಇದ್ದರೆ ಇದರ ಸಂಪರ್ಕದಿಂದ ಪತಿಯ ತೇಜಸ್ಸು ನಾಶವಾಗಿ ರೋಗಿಯಾಗುವನು ಎಂದಿದೆ.

- ***ನಾಕಬಲಿ (ನಾಗೋಲಿ) :***

ವಿವಾಹದ ನಾಲ್ಕನೇ ದಿನ ಅಥವಾ ವಿವಾಹ ದಿನದಂದೇ ನಾಗೋಲಿ ಉತ್ಸವವನ್ನು ಮಾಡುವ ಪದ್ಧತಿಯಿದೆ. ಇದೊಂದು ಎಂಟು ದಿಕ್ಕಿನ ಆನೆಗಳಿಗೆ ಕೊಡುವ ಬಲಿಯಾಗಿದೆ. ಇದರಿಂದ ಸಂತೃಪ್ತರಾದ ನಾಗಗಳು (ಆನೆ) ವಧೂ–ವರರು ದೇಶದಯ ಯಾವ ಮೂಲೆಗೆ ಹೋಗಲಿ ರಕ್ಷಿಸುತ್ತವೆ.

ನಾಗೋಲಿಯ ದಿನ ರಂಗೋಲಿಯಿಂದ ಮಾನಸಸರೋವರದ ಚಿತ್ರ ಬರೆಯುವುದು. ಅದರ ಇಕ್ಕೆಲಗಳಲ್ಲಿ ಉಪ್ಪಿನ ಆನೆ ಹಾಗೂ ಅಕ್ಕಿ ಆನೆಯನ್ನು ಚಿತ್ರಿಸುವುದು. ಇದು ಕ್ರಮೇಣ ಭದ್ರಮಾತಂಗ ಹಾಗೂ ಮತ್ತಮಾತಂಗ–ಗಳೆಂದು ಹೆಸರು. ಇವರ ಸುತ್ತಲೂ ಪಚ್ಚಕರ್ಪೂರ, ಮೊದಲಾದವುಗಳಿಂದ ಸುಗಂಧ ಜಲವನ್ನು ಕುಂಭದಲ್ಲಿ ತುಂಬಿಸಿ ಕುಂಭದಲ್ಲಿ ಬ್ರಹ್ಮ–ಸಾವಿತ್ರೀ, ಲಕ್ಷ್ಮೀನಾರಾಯಣ, ಶಿವ–ಪಾರ್ವತೀ, ಶಚಿ ಪುರಂದರರನ್ನು ಆವಾಹಿಸ–ಬೇಕು. ಮಂಡಲದ ಸುತ್ತಲೂ ಅಷ್ಟದಿಗ್ಗಜಗಳನ್ನು ದಿಕ್ಪಾಲಕರನ್ನೂ, ಸಪ್ತಮಾತೃಕೆಯರನ್ನೂ ಆವಾಹಿಸಿ ಪೂಜಿಸುವುದು. ಕುಂಭದ ಹತ್ತಿರ ಚಾಕು, ಮಂಗಳ ಸೂತ್ರ, ತಾಂಬೂಲಗಳನ್ನಿಟ್ಟು ಚುರಿಕಾದೇವಿಯನ್ನು ಆವಾಹಿಸುವುದು. ಭದ್ರ–ಮಾತಂಗ, ಮತ್ತಮಾತಂಗಗಳನ್ನು ಪೂಜಿಸುವುದು. ನಂತರ ಕನ್ಯೆಯ ತಾಯಿಯು ಅನ್ನ ಹಾಗೂ ಅಪೂಪಾದಿ ಭಕ್ಷ್ಯಗಳಿಂದ ತುಂಬಿದ ಪಾತ್ರೆಯನ್ನು ತಲೆಯ ಮೇಲೆ ಹೊತ್ತು ಮೂರು ಪ್ರದಕ್ಷಿಣೆ ಹಾಕಿ ದೀಪದಾನ ಮಾಡಬೇಕು. ಈ ದೀಪದ ಬೆಳಕಿನಲ್ಲಿ ಚೂರಿಯಿಂದ ಕಪ್ಪು ತೆಗೆದು ವಧೂ–ವರರಿಗೆ ರಕ್ಷೆಯನ್ನು ಹಚ್ಚಿಸುವುದು. ಇದೇ ವಧೂ–ವರರಿಗೆ ರಕ್ಷೆಯು.

ಇದಾದ ಮೇಲೆ ರೇಷ್ಮೆ ಮಡಿ ಧರಿಸಿದ ವರನು, ರೇಷ್ಮೆಯ ಸೀರೆ ಧರಿಸಿದ ವಧುವಿಗೆ ಕುಂಕುಮಾದಿಗಳಿಂದ ಅಲಂಕರಿಸಿ "ನೀಲಮಣಿ"(ಕರಿಮಣಿ) ತಾಳಿ ಕಟ್ಟಬೇಕು. ನಂತರ ಭದ್ರಮಾತಂಗ ಮತ್ತಮಾತಂಗಗಳ ಮೇಲೆ ವಧೂವರರು ಹತ್ತಬೇಕು. ಈ ಸಂದರ್ಭದಲ್ಲಿ ವಧೂ–ವರರ ಪರಸ್ಪರವಾಗಿ ಹೆಸರುಗಳನ್ನು ಹೇಳಿಸುವುದು ಪದ್ಧತಿಯಿದೆ. ವಿವಾಹವಾದ ಮೇಲೆ ವಧುವು

ಗಂಡನ ಹೆಸರನ್ನು ಹಿಡಿದು ಕರೆದರೆ ಗಂಡನ ಆಯುಷ್ಯ ಕಡಮೆಯಾಗಿ ಆ ಆಯುಸ್ಸು ಪತ್ನಿಗೆ ಬರುತ್ತದೆ.

ಕೆಲವರು ಸುತ್ತಲೂ ನಾಲ್ಕು ಕಲಶಗಳನ್ನಿಟ್ಟು ಮಧ್ಯದಲ್ಲಿ ಒಂದು ಕಲಶ ಹೀಗೆ ಒಟ್ಟು ಐದು ಕಲಶಗಳನ್ನಿಡುವರು. ಈ ಕಲಶಗಳ ಮೇಲೆ ಹಾಲಿನಿಂದ, ಗೋಧಿಹಿಟ್ಟು ಹಾಗೂ ಅರಿಷಿಣದಿಂದ ಮಾಡಿದ ಎರಡೆರಡು ದೀಪಗಳನ್ನು ಇಟ್ಟು, ದೀಪವನ್ನು ಹಚ್ಚಿ ಕಾಲನಿಯಮಕನಾದ ವಸಂತನು ನಮ್ಮೀರ್ವರ ಇಚ್ಛೆಯನ್ನು ಪೂರೈಸಲಿ ಎಂದು ಪ್ರಾರ್ಥಿಸುವುದು.

ಈ ಕಾಲದಲ್ಲೇ ವರನ ಕಡೆಯವರು ವಧುವಿಗೆ ರೇಷ್ಮೆ ವಸ್ತ್ರ, ಸುವರ್ಣಾಭರಣಗಳನ್ನೂ ಕೊಟ್ಟು ಉಡಿ ತುಂಬಿಸಬೇಕು. ನಂತರ ವರನು ವಧುವಿನ ಬೈತಲೆಯನ್ನು ಸಿಂಧೂರದಿಂದ ಅಲಂಕರಿಸುವನು. ಅಂದಿನಿಂದ ತಲೆಯಲ್ಲಿ ಭೂದೇವಿಯ ಸನ್ನಿಧಾನವುಂಟಾಗುತ್ತದೆ.

- ***ಐರಿಣೀ ಪೂಜೆ :***

ಈ ಪೂಜೆಯನ್ನು ಅವಶ್ಯ ಮಾಡಲೇಬೇಕು. ಇದರಿಂದ ವಧೂವಿನ ವಂಶವೃದ್ಧಿಯಾಗುತ್ತದೆ. ಬಿದಿರಿನ ಮೊರ(ವಂಶಪೂರ್ವ)ದಲ್ಲಿ ಅನೇಕ ವಸ್ತುಗಳನ್ನಿಟ್ಟು ಅದರಲ್ಲಿ ಎರಡು ದೀಪಗಳನ್ನಿಟ್ಟು ಕನ್ಯೆಯ ತಂದೆಯು ಹಾಗೂ ತಾಯಿಯು ಪಾರ್ವತೀ ಪರಮೇಶ್ವರನನ್ನು ಪೂಜಿಸಬೇಕು. ನಂತರ ವರನ ತಾಯಿಯು ಇದನ್ನು ತಲೆಯ ಮೇಲೆ ಧರಿಸಿ ನಮ್ಮ ವಂಶದಲ್ಲಿ ವಂಶ ಬೆಳೆಸುವ ಕುಲದೀಪಗಳು ಉದಯಿಸಲಿ ಎಂದು ಪ್ರಾರ್ಥಿಸುವುದು.

ಇದನ್ನು ವರನ ತಾಯಿಗೆ ಕೊಡುವ ಮೊದಲು, ಕನ್ಯೆಯ ತಾಯಿಯನ್ನು ವರನ ತಾಯಿಯು ಪೂಜಿಸಿ, ಅವಳಿಗೆ ಮಗಳ ಹೊಟ್ಟೆಯು ತಣ್ಣಗಿರಿಸಲು ಸೀರೆ ಕುಪ್ಪಸ ಕೊಡುವಳು. ಇದನ್ನು ತಾಯಿಯು ಧರಿಸಿ ಆ ಪಾತ್ರೆಯನ್ನು (ಬಿದಿರಿನ ಮೊರ) ತಲೆ ಮೇಲೆ ಧರಿಸಿಕೊಂಡು ಕಲಶಗಳಿಗೆ ಪ್ರದಕ್ಷಿಣೆ ಮಾಡುವಳು. ಆಗ ಕನ್ಯೆಯ ಅಣ್ಣತಮ್ಮಂದಿರಾಗಲಿ, ಸೋದರಮಾವನಾಗಲೀ ಚಾಕುವಿಗೆ ಲಿಂಬೆಹಣ್ಣನ್ನು ಚುಚ್ಚಿ ದೀಪದ ಮೇಲೆ ಹಿಡಿಯಬೇಕು. ಅದಕ್ಕೆ ಹತ್ತಿದ ಕಪ್ಪನ್ನು ವಧು-ವರರಿಗೆ ಮುತ್ತೈದೆಯರು ಹಚ್ಚಿ ಆಶೀರ್ವದಿಸುವರು. ನಂತರ ವರನ ತಾಯಿಗೆ ನೀಡಬೇಕು.

- ***ವಧುವನ್ನು ಮನೆಗೆ ತುಂಬಿಸಿಕೊಳ್ಳುವುದು :***

ವಿವಾಹವಾದ ಮೇಲೆ ಹದಿನಾರು ದಿವಸಗಳಲ್ಲಿ ಸಮ ದಿವಸಗಳಲ್ಲಿ ವಧುವನ್ನು

ತುಂಬಿಸಿಕೊಳ್ಳಬಹುದು. ಬೇರೆ ದಿನಗಳಲ್ಲಿ ಐದನೆಯ, ಏಳನೆಯ, ಒಂಬತ್ತನೆಯ ದಿವಸಗಳು ಯೋಗ್ಯವೇ. ಹದಿನಾರು ದಿವಸಗಳಲ್ಲಿಯೂ ಈ ಮೇಲಿನ ದಿವಸಗಳಲ್ಲಿ ಪ್ರವೇಶಿಸುವಾಗ ನಕ್ಷತ್ರ, ತಿಥಿ, ವಾರಗಳನ್ನು ನೋಡಬೇಕಿಲ್ಲ. ಹದಿನಾರು ದಿನ ಕಳೆದ ಮೇಲೆ ತಿಂಗಳೊಳಗೆ ಹೋಗುವುದಾದರೆ ಐದು, ಏಳು, ಒಂಭತ್ತು, ಹನ್ನೊಂದು ವಿಷಮ ದಿವಸಗಳು ಶ್ರೇಷ್ಠ. ಹದಿನಾರು ದಿವಸಗಳಲ್ಲಿ ಶ್ರೀಲಕ್ಷ್ಮೀನಾರಾಯಣರ ಸನ್ನಿಧಾನ–ವಿರುವುದರಿಂದ ಯಾವ ದಿವಸವಾದರೂ ದೋಷವಿಲ್ಲವೆಂದು ತಿಳಿಯುವುದು.

- ***ಆಷಾಢದಲ್ಲಿ ಅತ್ತೆ–ಸೊಸೆ ಒಂದೆಡೆ ಇರಬಾರದು :***

ವಿವಾಹವಾದ ಮೊದಲನೇ ವರ್ಷದಲ್ಲಿ ವಧುವು ಪತಿಯ ಮನೆಯಲ್ಲಿರುವಾಗ ಅದು ಆಷಾಢಮಾಸವಾದರೆ ಅತ್ತೆಯು ಮೃತಳಾಗಲು ಕಾರಣವಾಗುವಳು. ಕ್ಷಯಮಾಸದಲ್ಲಿ ಪತಿಯ ಮನೆಯಲ್ಲಿದ್ದರೆ ತನ್ನನ್ನೇ ಆತ್ಮಹತ್ಯೆಯಿಂದ ಕೊನೆಗಾಣಿಸುವಳು. ಜ್ಯೇಷ್ಠದಲ್ಲಿ ಉಳಿದರೆ ಪತಿಯ ಜ್ಯೇಷ್ಠನಿಗೆ ಹಾನಿ, ಪುಷ್ಯದಲ್ಲಿ ಉಳಿದರೆ ಮಾವನಿಗೆ ಹಾನಿಯು, ಅಧಿಕ ಮಾಸದಲ್ಲಿ ಗಂಡನ ಮನೆಯಲ್ಲಿದ್ದರೆ ಗಂಡನಿಗೆ ಮಾರಕಳಾಗುವಳು.

ಚೈತ್ರಮಾಸದಲ್ಲಿ ತಂದೆಯ ಮನೆಯಲ್ಲಿರಬಾರದು. ತಂದೆಗೆ ಮಾರಕಳಾಗುವಳು. ಆದರೆ ಆಯಾಯ ಜನರು ಈ ಮೊದಲೇ ಮೃತರಾಗಿದ್ದರೆ ದೋಷವಿಲ್ಲ ಅತ್ತೆಯಿಲ್ಲದಿದ್ದರೆ ಆಷಾಢದಲ್ಲಿ ಪತಿಯ ಗೃಹದಲ್ಲಿ ಇರಬಹುದು.

- ***ವಿವಾಹಿತ ಸ್ತ್ರೀಯರ ನಿಯಮಗಳು :***

ವಿವಾಹಿತ ಸ್ತ್ರೀಯು ಮನೆಯ ವ್ಯವಹಾರಗಳನ್ನು ಆಯ–ವ್ಯಯಗಳನ್ನು ತಾನೇ ನೋಡಿಕೊಳ್ಳಬೇಕು. ಮನೆಯ ಹಾಗೂ ದೇವರ ಪಾತ್ರೆ ಶುಚಿಯಾಗಿಡುವುದು, ಅತಿಥಿ ಸತ್ಕಾರಾದಿಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಬೇಕು.

**ಅರ್ಥಸ್ಯಸಂಗ್ರಹೇ ಚೈನಾಂ ವ್ಯಯೇ ಚೈವಂ ನಿಯೋಜಯೇತ್ ।**
**ಶೌಚೇ ಧರ್ಮೇऽನ್ನ ಪಕ್ತ್ಯಾ ಪಾರಿಣಾಹ್ಯಸ್ಯ ವೇಕ್ಷಣೇ ॥**

ಗಂಡನ ಪೂಜೆಗಾಗಿ ಬೇಕಾದ ಪಾತ್ರೋಪಕರಣಗಳನ್ನು ದಿನಂಪ್ರತಿ ಶುದ್ಧಿಕರಿಸಿ ಪೂಜೆಗೆ ಅಣಿ ಮಾಡಿಕೊಡಬೇಕು. ಇದರಿಂದ ಗಂಡನು ಮಾಡಿದ ಪೂಜೆಯ

ಗಂಡನ ಹೆಸರನ್ನು ಹಿಡಿದು ಕರೆದರೆ ಗಂಡನ ಆಯುಷ್ಯ ಕಡಮೆಯಾಗಿ ಆ ಆಯುಸ್ಸು ಪತ್ನಿಗೆ ಬರುತ್ತದೆ.

ಕೆಲವರು ಸುತ್ತಲೂ ನಾಲ್ಕು ಕಲಶಗಳನ್ನಿಟ್ಟು ಮಧ್ಯದಲ್ಲಿ ಒಂದು ಕಲಶ ಹೀಗೆ ಒಟ್ಟು ಐದು ಕಲಶಗಳನ್ನಿಡುವರು. ಈ ಕಲಶಗಳ ಮೇಲೆ ಹಾಲಿನಿಂದ, ಗೋಧಿಹಿಟ್ಟು ಹಾಗೂ ಅರಿಷಿಣದಿಂದ ಮಾಡಿದ ಎರಡೆರಡು ದೀಪಗಳನ್ನು ಇಟ್ಟು, ದೀಪವನ್ನು ಹಚ್ಚಿ ಕಾಲನಿಯಮಕನಾದ ವಸಂತನು ನಮ್ಮೀರ್ವರ ಇಚ್ಛೆಯನ್ನು ಪೂರೈಸಲಿ ಎಂದು ಪ್ರಾರ್ಥಿಸುವುದು.

ಈ ಕಾಲದಲ್ಲೇ ವರನ ಕಡೆಯವರು ವಧುವಿಗೆ ರೇಷ್ಮೆ ವಸ್ತ್ರ, ಸುವರ್ಣಾಭರಣಗಳನ್ನೂ ಕೊಟ್ಟು ಉಡಿ ತುಂಬಿಸಬೇಕು. ನಂತರ ವರನು ವಧುವಿನ ಬೈತಲೆಯನ್ನು ಸಿಂಧೂರದಿಂದ ಅಲಂಕರಿಸುವನು. ಅಂದಿನಿಂದ ತಲೆಯಲ್ಲಿ ಭೂದೇವಿಯ ಸನ್ನಿಧಾನವುಂಟಾಗುತ್ತದೆ.

- ***ಐರಿಣೀ ಪೂಜೆ :***

ಈ ಪೂಜೆಯನ್ನು ಅವಶ್ಯ ಮಾಡಲೇಬೇಕು. ಇದರಿಂದ ವಧೂವಿನ ವಂಶವೃದ್ಧಿಯಾಗುತ್ತದೆ. ಬಿದಿರಿನ ಮೊರ(ವಂಶಪೂರ್ವ)ದಲ್ಲಿ ಅನೇಕ ವಸ್ತುಗಳನ್ನಿಟ್ಟು ಅದರಲ್ಲಿ ಎರಡು ದೀಪಗಳನ್ನಿಟ್ಟು ಕನ್ಯೆಯ ತಂದೆಯು ಹಾಗೂ ತಾಯಿಯು ಪಾರ್ವತೀ ಪರಮೇಶ್ವರನನ್ನು ಪೂಜಿಸಬೇಕು. ನಂತರ ವರನ ತಾಯಿಯು ಇದನ್ನು ತಲೆಯ ಮೇಲೆ ಧರಿಸಿ ನಮ್ಮ ವಂಶದಲ್ಲಿ ವಂಶ ಬೆಳೆಸುವ ಕುಲದೀಪಗಳು ಉದಯಿಸಲಿ ಎಂದು ಪ್ರಾರ್ಥಿಸುವುದು.

ಇದನ್ನು ವರನ ತಾಯಿಗೆ ಕೊಡುವ ಮೊದಲು, ಕನ್ಯೆಯ ತಾಯಿಯನ್ನು ವರನ ತಾಯಿಯು ಪೂಜಿಸಿ, ಅವಳಿಗೆ ಮಗಳ ಹೊಟ್ಟೆಯು ತಣ್ಣಗಿರಿಸಲು ಸೀರೆ ಕುಪ್ಪಸ ಕೊಡುವಳು. ಇದನ್ನು ತಾಯಿಯು ಧರಿಸಿ ಆ ಪಾತ್ರೆಯನ್ನು (ಬಿದಿರಿನ ಮೊರ) ತಲೆ ಮೇಲೆ ಧರಿಸಿಕೊಂಡು ಕಲಶಗಳಿಗೆ ಪ್ರದಕ್ಷಿಣೆ ಮಾಡುವಳು. ಆಗ ಕನ್ಯೆಯ ಅಣ್ಣತಮ್ಮಂದಿರಾಗಲಿ, ಸೋದರಮಾವನಾಗಲೀ ಚಾಕುವಿಗೆ ಲಿಂಬೆಹಣ್ಣನ್ನು ಚುಚ್ಚಿ ದೀಪದ ಮೇಲೆ ಹಿಡಿಯಬೇಕು. ಅದಕ್ಕೆ ಹತ್ತಿದ ಕಪ್ಪನ್ನು ವಧು-ವರರಿಗೆ ಮುತ್ತೈದೆಯರು ಹಚ್ಚಿ ಆಶೀರ್ವದಿಸುವರು. ನಂತರ ವರನ ತಾಯಿಗೆ ನೀಡಬೇಕು.

- ***ವಧುವನ್ನು ಮನೆಗೆ ತುಂಬಿಸಿಕೊಳ್ಳುವುದು :***

ವಿವಾಹವಾದ ಮೇಲೆ ಹದಿನಾರು ದಿವಸಗಳಲ್ಲಿ ಸಮ ದಿವಸಗಳಲ್ಲಿ ವಧುವನ್ನು

ತುಂಬಿಸಿಕೊಳ್ಳಬಹುದು. ಬೇರೆ ದಿನಗಳಲ್ಲಿ ಐದನೆಯ, ಏಳನೆಯ, ಒಂಬತ್ತನೆಯ ದಿವಸಗಳು ಯೋಗ್ಯವೇ. ಹದಿನಾರು ದಿವಸಗಳಲ್ಲಿಯೂ ಈ ಮೇಲಿನ ದಿವಸಗಳಲ್ಲಿ ಪ್ರವೇಶಿಸುವಾಗ ನಕ್ಷತ್ರ, ತಿಥಿ, ವಾರಗಳನ್ನು ನೋಡಬೇಕಿಲ್ಲ. ಹದಿನಾರು ದಿನ ಕಳೆದ ಮೇಲೆ ತಿಂಗಳೊಳಗೆ ಹೋಗುವುದಾದರೆ ಐದು, ಏಳು, ಒಂಭತ್ತು, ಹನ್ನೊಂದು ವಿಷಮ ದಿವಸಗಳು ಶ್ರೇಷ್ಠ. ಹದಿನಾರು ದಿವಸಗಳಲ್ಲಿ ಶ್ರೀಲಕ್ಷ್ಮೀನಾರಾಯಣರ ಸನ್ನಿಧಾನ–ವಿರುವುದರಿಂದ ಯಾವ ದಿವಸವಾದರೂ ದೋಷವಿಲ್ಲವೆಂದು ತಿಳಿಯುವುದು.

- ***ಆಷಾಢದಲ್ಲಿ ಅತ್ತೆ–ಸೊಸೆ ಒಂದೆಡೆ ಇರಬಾರದು :***

ವಿವಾಹವಾದ ಮೊದಲನೇ ವರ್ಷದಲ್ಲಿ ವಧುವು ಪತಿಯ ಮನೆಯಲ್ಲಿರುವಾಗ ಅದು ಆಷಾಢಮಾಸವಾದರೆ ಅತ್ತೆಯು ಮೃತಳಾಗಲು ಕಾರಣವಾಗುವಳು. ಕ್ಷಯಮಾಸದಲ್ಲಿ ಪತಿಯ ಮನೆಯಲ್ಲಿದ್ದರೆ ತನ್ನನ್ನೇ ಆತ್ಮಹತ್ಯೆಯಿಂದ ಕೊನೆಗಾಣಿಸುವಳು. ಜ್ಯೇಷ್ಠದಲ್ಲಿ ಉಳಿದರೆ ಪತಿಯ ಜ್ಯೇಷ್ಠನಿಗೆ ಹಾನಿ, ಪುಷ್ಯದಲ್ಲಿ ಉಳಿದರೆ ಮಾವನಿಗೆ ಹಾನಿಯು, ಅಧಿಕ ಮಾಸದಲ್ಲಿ ಗಂಡನ ಮನೆಯಲ್ಲಿದ್ದರೆ ಗಂಡನಿಗೆ ಮಾರಕಳಾಗುವಳು.

ಚೈತ್ರಮಾಸದಲ್ಲಿ ತಂದೆಯ ಮನೆಯಲ್ಲಿರಬಾರದು. ತಂದೆಗೆ ಮಾರಕಳಾಗುವಳು. ಆದರೆ ಆಯಾಯ ಜನರು ಈ ಮೊದಲೇ ಮೃತರಾಗಿದ್ದರೆ ದೋಷವಿಲ್ಲ ಅತ್ತೆಯಿಲ್ಲದಿದ್ದರೆ ಆಷಾಢದಲ್ಲಿ ಪತಿಯ ಗೃಹದಲ್ಲಿ ಇರಬಹುದು.

- ***ವಿವಾಹಿತ ಸ್ತ್ರೀಯರ ನಿಯಮಗಳು :***

ವಿವಾಹಿತ ಸ್ತ್ರೀಯು ಮನೆಯ ವ್ಯವಹಾರಗಳನ್ನು ಆಯ–ವ್ಯಯಗಳನ್ನು ತಾನೇ ನೋಡಿಕೊಳ್ಳಬೇಕು. ಮನೆಯ ಹಾಗೂ ದೇವರ ಪಾತ್ರೆ ಶುಚಿಯಾಗಿಡುವುದು, ಅತಿಥಿ ಸತ್ಕಾರಾದಿಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಬೇಕು.

**ಅರ್ಥಸ್ಯಸಂಗ್ರಹೇ ಚೈನಾಂ ವ್ಯಯೇ ಚೈವಂ ನಿಯೋಜಯೇತ್ ।**
**ಶೌಚೇ ಧರ್ಮೇಽನ್ನ ಪಕ್ತ್ಯಾ ಪಾರಿಣಾಹ್ಯಸ್ಯ ವೇಕ್ಷಣೇ ॥**

ಗಂಡನ ಪೂಜೆಗಾಗಿ ಬೇಕಾದ ಪಾತ್ರೋಪಕರಣಗಳನ್ನು ದಿನಂಪ್ರತಿ ಶುದ್ಧಿಕರಿಸಿ ಪೂಜೆಗೆ ಅಣಿ ಮಾಡಿಕೊಡಬೇಕು. ಇದರಿಂದ ಗಂಡನು ಮಾಡಿದ ಪೂಜೆಯ

ಅರ್ಧಫಲ ಪಡೆಯಬಹುದಾಗಿದೆ. ಗಂಡನ ಅತಿಥಿ ಸತ್ಕಾರ, ಬಲಿ, ವೈಶ್ವದೇವಾದಿಗಳಿಗೆ ಬೇಕಾದ ಅನುವು ಆಲಸ್ಯವಿಲ್ಲದೆ ಮಾಡುತ್ತಿರಬೇಕು. ಅತ್ತೆ-ಮಾವಂದಿರಿಂದ ಹಿಡಿದು ಗೋವು ಮೊದಲಾದವರಿಗೂ ವಿಭಾಗಿಸಿ ತಾನೂ ತಿನ್ನಬೇಕು.

**ಅವಿಭಜ್ಯ ನ ಚಾಶ್ನೀಯಾದ್ ದೇವ-ಪಿತ್ರತಿಥಿಷ್ವಪಿ ।**
**ಪರಿಚಾರಕವರ್ಗೇಷು ಗೋಷು ಭಿಕ್ಷುಕುಲೇಷು ಚ ॥**

ಈರುಳ್ಳಿ, ಬೆಳ್ಳುಳ್ಳಿ, ಬದನೆ, ಸೋರೆ, ಮೂಲ್ಲಂಗಿ, ಮೊದಲಾದ ತಾಮಸ ತರಕಾರಿಗಳನ್ನು ಮನೆಯಲ್ಲಿ ಬೇಯಿಸಬಾರದು. ಆಹಾರದಂತೆ ಬುದ್ಧಿಯು.

**ದೀಪೋ ಭಕ್ಷಯತೇ ಧ್ವಾಂತಂ ಕಜ್ಜಲಂ ಚ ಪ್ರಸೂಯತೇ ।**
**ಯಥಾಽನ್ನಂ ಭುಂಜತೇ ಲೋಕೇ ತಥಾ ಬುದ್ಧಿಃ ಪ್ರಜಾಯತೇ ॥**

ಕೆಟ್ಟ ಸ್ತ್ರೀಯರ ಜೊತೆ ಯಾವುದೇ ಸಂಪರ್ಕವಿಟ್ಟುಕೊಳ್ಳಬಾರದು. ವಸ್ತ್ರ ಧರಿಸದೆ ಬೆತ್ತಲೆಯಲ್ಲಿ ಸ್ನಾನ ಮಾಡಬಾರದು. ಹೀಗೆ ಸ್ನಾನ ಮಾಡಿದರೆ ದಿಕ್ಕಿನ ಹಾಗೂ ನೀರಿನಲ್ಲಿರುವ ದೇವತೆಗಳನ್ನು ಅವಮಾನಿಸಿದಂತಾಗಿ ಶಾಪ ಬರುವ ಸಾಧ್ಯತೆಯಿದೆ. ನಲಕೂಬರ ಮಣಿಗ್ರೀವರು ನಾರದರ ಮುಂದೆ ಬೆತ್ತಲೆ ನಿಂತಿದ್ದರಿಂದಲೇ ವೃಕ್ಷವಾಗಿರೆಂದು ಶಾಪ ಪಡೆದರು.

ವಧುವೂ ಅತ್ತೆ-ಮಾವಂದಿರನ್ನು ಸೇವಿಸುವುದೂ ಮುಖ್ಯ ಕರ್ತವ್ಯವಾಗಿದೆ. ಮದುವೆಯಾಗಿ ಗಂಡನ ಮನೆಗೆ ಬಂದ ವಿವಾಹಿತ ಸ್ತ್ರೀಗೆ ಅತ್ತೆ ಮಾವಂದಿರೇ ತಂದೆ ತಾಯಿಗಳು. ಇವರ ಸೇವೆಯನ್ನು ಭಕ್ತಿಯಿಂದ ಅತ್ತೆ-ಮಾವಂದಿರ ಅಂತರ್ಯಾಮಿಯ ಸೇವೆಯೆಂದು ಮಾಡಬೇಕು. ಹೀಗೆ ಉಪಾಸಿಸಿದರೇ ಭಗವಂತನು ವಿಶೇಷವಾಗಿ ಪ್ರೀತಿಸುವನು. ಶ್ರೀನಿವಾಸಕಲ್ಯಾಣದ ಮಾಧವ ಬ್ರಾಹ್ಮಣನ ಪತ್ನಿ ಚಂದ್ರಕಾಂತೆಯು ಗಂಡನು, ಕುಂತಲೆಯೆಂಬ ಚಂಡಾಲಕನ್ಯೆಯ ಜೊತೆ ಸಂಸಾರ ನಡೆಸುತ್ತಿದ್ದಾಗ ವೃದ್ಧರಾದ ಅತ್ತೆ ಮಾವಂದಿರ ಸೇವೆಯನ್ನು ಅಂತರ್ಯಾಮಿ ಪ್ರೀತಿಯಾಗಲೆಂದು ಮಾಡಿದ್ದರಿಂದ ಮುಂದೆ ಇವಳು "ಧರಣೀದೇವಿ"ಯಾಗಿ ಹುಟ್ಟಿದಳು. ಶ್ರೀನಿವಾಸನು ಇವಳನ್ನು ತನ್ನ ಅತ್ತೆಯನ್ನಾಗಿ ಸ್ವೀಕರಿಸಿದನು. ಯಾರು ಹೇಗೆ ಉಪಾಸಿಸುವರೋ ಅವರನ್ನು ಹಾಗೆ ನೋಡುತ್ತಾನೆ ಭಗವಂತ.

**ತಂ ಯಥಾ ಯಥೋಪಾಸತೇ ತಥೈವ ಭವತಿ ॥**

ಇದರ ಬದಲಾಗಿ ಅತ್ತೆ ಮಾವಂದಿರನ್ನು ಬಿಟ್ಟು ಗಂಡನ ಜೊತೆಗೆ ಬೇರೆ ಮಾಡುವುದು, ಅವರಿಗೆ ದುಃಖವುಂಟು ಮಾಡುವುದು, ನಿಷ್ಠುರ ನುಡಿಗಳನ್ನಾಡುವುದು ಮಾಡಬಾರದು. ಮನೆಯಲ್ಲಿ ಸಣ್ಣ ವಿಷಯಗಳಿಗೆಲ್ಲ ಜಗಳ ಮಾಡುವುದು ಪತಿಯನ್ನು ನಿಂದಿಸುವುದು ಇವುಗಳಿಂದ ಮುಂದೆ ಜಿಗಣೆಯಾಗಿ ಹುಟ್ಟುವಳು. ಪತಿಯನ್ನು ದುಃಖಪಡಿಸುವವಳು ತಲೆಯ ಹೇನಾಗಿ ಹುಟ್ಟುವಳು.

**ಶ್ವಶ್ರೋಃ ಗಾಲಿಪ್ರದಾ ನಾರೀ ನಿತ್ಯಂ ಕಲಹಕಾರಿಣೀ ।**
**ಸಾ ಜಲೌಕಾ ಚ ಯೂಕಾ ಸ್ಯಾದ್ ಭರ್ತಾರಂ ಭರ್ತ್ಸತೀ ಚ ಯಾ ॥**

ಪತಿಯನ್ನು ಸಂತೋಷಪಡಿಸಿದರೆ ಭಗವಂತ ಸಂತುಷ್ಟನಾಗುವನು.

**ಆರಾಧಿತೇಷು ಪತಿಷು ವಿಷ್ಣುಃ ಸರ್ವಸುರೇಶ್ವರಃ ।**
**ಪ್ರಸನ್ನೋ ಭವತಿ ತ್ವತ್ರ ಪ್ರಸನ್ನೇ ಕಿಮು ದುರ್ಲಭಂ ॥** – *ಪದ್ಮ*

ಸ್ತ್ರೀಯರಲ್ಲಿರಬೇಕಾದ ದ್ವಾದಶ ಗುಣಗಳನ್ನು ಪತಿವ್ರತೆಯರಾದ ಸಾವಿತ್ರೀ ಮೊದಲಾದವರ ಕಥೆಯ ಮೂಲಕ ತಿಳಿದು ಅದರಂತೆ ನಡೆಯಬೇಕು.

ಗಂಡನಿಗಾಗಿ ಮಾತ್ರ ಸೌಂದರ್ಯ ಮುಡುಪಾಗಿಡುವುದು. ಶೀಲ ಕಾಪಾಡಿಕೊಳ್ಳುವುದು. ಅಪ್ರಿಯವಲ್ಲದ ಸತ್ಯವನ್ನೇ ಆಡುವುದು, ಸದಾಚಾರತೆ, ಪುಣ್ಯಸಂಪಾದನೆ, ಮಧುರವಾದ ಮಾತು, ಆಂತರಿಕವಾಗಿ ಹಾಗೂ ಬಹಿರಂಗವಾಗಿ ಶುದ್ಧಿ ಹೊಂದಿರುವುದು, ಪತಿಯಲ್ಲಿ ಪರಮಭಕ್ತಿ, ಪತಿಯ ಸೇವೆ, ಸಾಂಸಾರಿಕ ಜಂಜಾಟದಲ್ಲಿ ಅಪಾರ ಸಹನೆ, ತನ್ನ ದೇಹವನ್ನು ಪತಿಗೆ ಮಾತ್ರ ಮೀಸಲು ಇಡುವುದು ಹಾಗೂ ಅಖಂಡ ಪಾತಿವ್ರತ್ಯ ಇವುಗಳೇ ನಿಜವಾದ ಆಭರಣಗಳು.

ಯಾವುದಾದರೂ ವಸ್ತುವನ್ನು ಪತಿ ತಂದು ಕೊಟ್ಟಾಗ ಬಾರಿ ಸಂತೋಷ ವ್ಯಕ್ತಪಡಿಸಬೇಕು. ಚೆನ್ನಾಗಿಲ್ಲದಿದ್ದರೂ "ತುಂಬಾ ಚೆನ್ನಾಗಿದೆ" ನನಗೆ ಇಂತಹದೆ ಇಷ್ಟ ಎನ್ನಬೇಕು. ವಸ್ತುವು ತನಗೆ ದೊರೆಯದಿದ್ದಾಗ ದುಃಖಿಸಬಾರದು. ದೊರೆತಾಗ ಅತಿಯಾಗಿ ಸಂತೋಷಪಡಬಾರದು.

**ಅಲಾಭೇ ನ ವಿಷಾದೀ ಸ್ಯಾತ್ ಲಾಭೇ ಚೈವ ನ ಹರ್ಷಯೇತ್ ।**
**ಪ್ರಾಣಯಾತ್ರಿಕ ಮಾತ್ರಾ ಸ್ಯಾದ್ ಮಾತ್ರಾಸಂಗಾದ್ ವಿನಿರ್ಗತಃ ॥**

ಪತ್ನಿಗೆ ಗಂಡನಷ್ಟು ನೀಡುವವರು ಬೇರೆ ಯಾರೂ ಇರುವುದಿಲ್ಲ.

**ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ।**
**ಅಮಿತಸ್ಯ ಹಿ ದಾತಾರಂ ಭರ್ತಾರಂ ಕಾ ನ ಪೂಜಯೇತ್ ॥**

*– ವಾ.ರಾ.*

ಪತಿಸೇವನೆಯಿಂದ ಜ್ಞಾನ, ವಿಜ್ಞಾನ, ಆರೋಗ್ಯಾದಿ ಸಕಲ ಭಾಗ್ಯಗಳೂ ಲಭಿಸುತ್ತವೆ.

**ಜ್ಞಾನಂ ವಿಜ್ಞಾನಮಾರೋಗ್ಯಂ ರೂಪಂ ಸಂಪತ್ ತಥೈವ ಚ ।**
**ಸೌಭಾಗ್ಯಂ ಚೈವ ಸ್ತ್ರೀಣಾಂ ಪ್ರಾಪ್ಯತೇ ಪತಿಸೇವಯಾ ॥**

ಸ್ತ್ರೀಯು ದೇವಾಲಯಕ್ಕೆ ಹೋಗಿ ಅಲ್ಲಿರುವ ದೇವತೆಯನ್ನು ಪೂಜಿಸುವುದಕ್ಕಿಂತಲೂ, ಮನೆಯಲ್ಲಿರುವ ದೇವರಿಗೆ ಪ್ರತ್ಯಕ್ಷ ಪ್ರತೀಕವೆನಿಸಿರುವ ಪತಿಯನ್ನು ಪೂಜಿಸುವುದೇ ಶ್ರೇಷ್ಠ.

**ನ ಚ ಸ್ತ್ರೀಣಾಂ ಪೃಥಗ್ ಯಜ್ಞಂ ನ ವ್ರತಂ ನಾಪ್ಯುಪೋಷಣಂ ।**
**ಭರ್ತಾ ಯದ್ ವದತೇ ವಾಕ್ಯಂ ತತ್ತತ್ ಕುರ್ಯಾದತಂದ್ರಿತಃ ॥**

ಸ್ತ್ರೀಯರಿಗೆ ಪತಿಯನ್ನು ಸಂತೋಷಪಡಿಸುವುದನ್ನು ಬಿಟ್ಟು ಬೇರೆ ಪ್ರತ್ಯೇಕವಾದ ಯಜ್ಞವಾಗಲಿ, ವ್ರತವಾಗಲೀ, ಉಪವಾಸವಾಗಲಿ ಇರುವುದಿಲ್ಲ.

**ಸಧವಾನಾಂ ಹಿ ನಾರೀಣಾಂ ನೋಪವಾಸಾದಿಕವ್ರತಂ ।**
**ಪತ್ಯಾಜ್ಞಯಾ ಚರೇದ್ ಯತ್ತು ತತ್ತು ತಾಸಾಂ ವ್ರತಂ ಪರಂ ॥**

*– ಪದ್ಮ 8/7*

- ***ಗಂಡನ ಅನುಮತಿ :***

ವಿವಾಹಿತ ಸ್ತ್ರೀಯು ಪತಿಯ ಅನುಮತಿ ಪಡೆಯದೆ ಯಾವುದೇ ಉಪವಾಸಾದಿ ವ್ರತವನ್ನು ಆಚರಿಸಬಾರದು. ಆಚರಿಸಿದರೆ ಗಂಡನ ಆಯುಷ್ಯವನ್ನು ಸೆಳೆದಂತಾಗುತ್ತದೆ ಹಾಗೂ ವ್ಯರ್ಥವೂ ಹೌದು.

**ಅಫಲಂ ಸರ್ವಮೇವ ಸ್ಯಾದ್ ಭರ್ತ್ರನುಜ್ಞಾಂ ವಿನಾ ಕೃತಂ ।**

* * * * * *



# 11. ಗರ್ಭಿಣಿಯ ಧರ್ಮಗಳು





- ***ಗರ್ಭಿಣಿಯ ನಿಯಮಗಳು :***

ಗರ್ಭಾಧಾನ ಸಂಸ್ಕಾರವು ಅವಶ್ಯ ಮಾಡಲೇಬೇಕಾದ ಸಂಸ್ಕಾರವಾಗಿದೆ. ಇತ್ತೀಚೆಗೆ ಇದು ಲೋಪವಾಗುತ್ತಿದೆ. ಸ್ತ್ರೀ-ಪುರುಷರು ಶರೀರ-ಮನಸ್ಸುಗಳು ಸ್ವಸ್ಥತೆ ಹೊಂದಿರುವಾಗ - ಸಂತೋಷದಿಂದ ಕೂಡಿರುವಾಗ ಶಾಸ್ತ್ರದಲ್ಲಿ ಹೇಳಿದ ತಿಥಿ-ವಾರ-ಸಮಯದಲ್ಲಿ ಗರ್ಭಾಧಾಷನ ಮಾಡಿದರೆ ಶ್ರೇಷ್ಠವಾದ ಸಂತಾನವಾಗುವುದು. ದಂಪತಿಯರ ಶರೀರ - ಮನಸ್ಸುಗಳು ಪ್ರಫುಲ್ಲವಾಗಿರುವಾಗ ಉಂಟಾದ ಗರ್ಭವು ಶ್ರೇಷ್ಠ ಸಂತಾನಕ್ಕೆ ಮೂಲವಾಗುತ್ತದೆ.

ಸಂತಾನವಾಗದಿದ್ದಾಗ ವಧೂ-ವರರು ವೈದ್ಯರಿಗೆ ತೋರಿಸಿ ಪರೀಕ್ಷೆಗೆ ಒಳಪಡಿಸಬೇಕು. ಇಬ್ಬರಲ್ಲೂ ಯಾವುದೇ ದೋಷವಿಲ್ಲವೆಂದು ನಿಶ್ಚಯವಾದಾಗ ಶ್ರದ್ಧಾ-ಭಕ್ತಿಪೂರ್ವಕ ಹರಿವಂಶವನ್ನು ಶ್ರವಣ ಮಾಡಬೇಕು.

ಸಂತಾನ ಗೋಪಾಲಮಂತ್ರವನ್ನು ಉಪದೇಶ ಹೊಂದಿ ದಂಪತಿಗಳು ಲಕ್ಷಕ್ಕೆ ಕಡಮೆ ಇಲ್ಲದಂತೆ ಜಪಿಸಿ, ಹೋಮಿಸಿ, ಬ್ರಾಹ್ಮಣ ಭೋಜನ ಮಾಡಿಸಬೇಕು.

ಘೃತ ದೀಪದಾನ - ಬೆಳ್ಳಿಯ ನಂದಿಯ ದಾನ - ಕೂಷ್ಮಾಂಡ ದಾನ, ಶ್ರೀಕೃಷ್ಣಪ್ರತಿಮಾ ಸಹಿತ ತೊಟ್ಟಿಲು ದಾನ - ಶಾವಿಗೆ ಪಾಯಸ ದಾನಗಳನ್ನು ಮಾಡಬೇಕು.

- ***ಸಂತಾನ ಗೋಪಾಲಕೃಷ್ಣ ಮಂತ್ರ :***

**ದೇವಕಿಸುತಗೋವಿಂದ ವಾಸುದೇವ ಜಗತ್ಪತೇ ।**

**ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಃ ॥**

ಪ್ರಾತಃ ಕಾಲದಲ್ಲಿ ಎದ್ದು ನಿತ್ಯಕರ್ಮ ಮುಗಿಸಿ ಈ ಮಂತ್ರವನ್ನು ಯಥಾಶಕ್ತಿ ಜಪಿಸಬೇಕು. ತನ್ನ ಮುಂದೆ ಬಾಲಕೃಷ್ಣನ – ಬೆಣ್ಣೆ ಕೃಷ್ಣ, ಉಡುಪಿ ಕೃಷ್ಣನ ಚಿತ್ರಪಟ ಇಟ್ಟು ಅದನ್ನೇ ನೋಡುತ್ತಾ ಜಪಿಸಬೇಕು. ಪ್ರತಿದಿನ 108 ತುಲಸೀ ಮಣಿಯಿಂದ ಜಪಿಸಬೇಕು. ದಿನವೊಂದಕ್ಕೆ 55 ಆವರ್ತಿ ಮಾಡುತ್ತಾ ಒಂದು ತಿಂಗಳು ಜಪಿಸಿದರೆ ಸಿದ್ಧಿಯಾಗುತ್ತದೆ.

- ***ವಾಮದೇವ ಯಜ್ಞಾನುಸಂಧಾನ :***

ಜಪ ಮಾಡುತ್ತಿರುವ ಕಾಲದಲ್ಲಿಯೇ ಪತ್ನಿಯು ರಜಸ್ವಲೆಯಾದಾಗ ಕಾಮವಿಕಾರಕ್ಕೆ ಬಲಿಯಾಗದೆ ಯುಗ್ಮ ದಿವಸಗಳಲ್ಲಿ 'ವಾಮದೇವಯಜ್ಞ'ವೆಂಬ ಅನುಸಂಧಾನದಿಂದಲೂ, ತನ್ನ ಪತ್ನಿಯಲ್ಲಿರುವ ಭಾರತಿಯು, ತನ್ನಲ್ಲಿರುವ ವಾಯುದೇವನಿಂದಲೂ, ತನ್ನ ಪತ್ನಿಯಲ್ಲಿರುವ ಲಕ್ಷ್ಮೀದೇವಿಯಲ್ಲಿ, ತನ್ನಲ್ಲಿರುವ ಭಗವಂತನು ತನ್ನಲ್ಲಿರುವ ಲಕ್ಷ್ಮೀದೇವನೊಂದಿಗೆ ಗರ್ಭಾಧಾನ ಮಾಡುತ್ತಿರುವನೆಂಬ ಭಾವನೆಯಿಂದ ಸಂಗ ಮಾಡಬೇಕು.

ರಜಸ್ವಲೆಯಾದ ಮೊದಲನೆ ಹದಿನಾರು ದಿವಸಗಳು ಸಂಯೋಗಕ್ಕೆ ಪ್ರಶಸ್ತವಾಗಿರುತ್ತದೆ. ಇವುಗಳಲ್ಲಿ ರಜಸ್ವಲೆಯಾಗಿರುವ ನಾಲ್ಕು ದಿವಸಗಳು ನಿಷಿದ್ಧವು. ಐದನೇ ದಿನದಿಂದ ಹದಿನಾರನೆ ದಿವಸಗಳವರೆಗೂ ಗರ್ಭಾಧಾನಕ್ಕೆ ಪ್ರಶಸ್ತವು. ಇವುಗಳಲ್ಲಿಯೂ ಕೂಡ ಸಂಧ್ಯಾಕಾಲ, ಹಗಲು ನಡೆಸಬಾರದು. ಅಷ್ಟಮಿಗಳು, ಚತುರ್ದಶಿ – ಪೂರ್ಣಿಮೆ – ಅಮಾವಾಸ್ಯೆ ದಿನಗಳು, ಶ್ರಾದ್ಧದ ದಿನಗಳು, ಶ್ರಾದ್ಧದ ಹಿಂದಿನ ದಿನ, ವ್ಯತೀಪಾತ – ವೈಧೃತಿ, ಸಂಕ್ರಮಣ – ಗ್ರಹಣ – ಮಧ್ಯರಾತ್ರಿಯಲ್ಲಿ ಗರ್ಭಾಧಾನ ನಡೆಸಬಾರದು.

ಮೊದಲನೆಯ ನಾಲ್ಕು ದಿವಸಗಳು ಮತ್ತು ಬೆಸಸಂಖ್ಯೆಯ 5, 7, 9, 11, 13, 15 ಇವುಗಳನ್ನು ಬಿಟ್ಟು ಉಳಿದದ್ದು ಐದು ರಾತ್ರಿಗಳು ಮಾತ್ರ. 6, 8, 10, 12, 14 ಇವುಗಳಲ್ಲಿ ಪರ್ವ ರಾತ್ರಿಗಳನ್ನು ತ್ಯಜಿಸಿದರೆ ನಾಲ್ಕು ದಿನ ಮಾತ್ರ ಉಳಿಯುತ್ತದೆ. ಇದು ಪ್ರಶಸ್ತ.

- ***ನಿಷಿದ್ಧ ದಿನಗಳಲ್ಲಿ ಗರ್ಭಧಾನ ದುಷ್ಫಲ :***

ನಾಲ್ಕನೆ ದಿನ ಅಲ್ಪಾಯು ಪುತ್ರ, ಪಂಚಮಿಯಂದು ಹೆಣ್ಣು ಮಗು, ಆರನೇ ದಿನ ವಂಶೋದ್ಧಾರಕ ಪುತ್ರ, ಸಪ್ತಮಿಯಲ್ಲಿ ಬಂಜೆಯು, ಎಂಟನೆ ದಿನ ಪುತ್ರ, ನವಮೀ ಸುಂದರಿಯಾದ ಕನ್ಯೆ, ದಶಮಿಯಲ್ಲಿ ಭಗವದ್ಭಕ್ತ ಪುತ್ರ, ಹನ್ನೊಂದನೇ ದಿನ ವಿರೂಪಿಯಾದ ಹೆಣ್ಣು ಮಗು, ಹನ್ನೆರಡನೇ ದಿನ ಶ್ರೀಮಂತ ಪುತ್ರ, ಹದಿಮೂರು ಪಾಪಿಷ್ಠಳಾದ ಹೆಣ್ಣು ಮಗು, ಹದಿನಾಲ್ಕನೇ ದಿನ ಧರ್ಮಶೀಲ ಪುತ್ರ, ಹದಿನೈದು ಶ್ರೀಮಂತ ಕನ್ಯೆಯು, ಹದಿನಾರನೇ ದಿನ ಗರ್ಭಾಧಾನವಾದರೆ ಸರ್ವಶಾಸ್ತ್ರಜ್ಞನಾದ ಪುತ್ರನು ಹುಟ್ಟುವನು. (ಜಾತಕ ಪಾರಿಜಾತ).

- ***ಗರ್ಭಧಾನ ಯೋಗ್ಯಕಾಲ :***

ಚಂದ್ರ, ಸೂರ್ಯ, ಲಗ್ನವು ಪಾಪಗ್ರಹದಿಂದ ಯುಕ್ತವಾಗಿರಬಾರದು. ಸಪ್ತಮಭಾವವು ಪಾಪಗ್ರಹಗಳಿಂದ ಕೂಡಿರಬಾರದು. ಅಷ್ಟಮದಲ್ಲಿ ಕುಜನಿರಬಾರದು. ಲಗ್ನದಿಂದ ನಾಲ್ಕು, ಐದು, ಏಳು, ಒಂಭತ್ತು, ದಶಮ ಸ್ಥಾನಗಳಲ್ಲಿ ಶುಭಗ್ರಹಗಳಿರಬೇಕು.

- ***ಗರ್ಭಿಣಿಯಾದ ಮೇಲೆ ಕರ್ತವ್ಯಗಳು :***

ಋತು ಕಾಲದಲ್ಲಿ ನಡೆಸಿದ ಸಂಪರ್ಕದಿಂದ ಉತ್ಪನ್ನವಾದ ಭ್ರೂಣವು ರಾತ್ರಿ ದ್ರವದಂತೆಯೂ, ಏಳು ರಾತ್ರಿಯಲ್ಲಿ ಗುಳ್ಳೆಯಂತೆಯೂ, ಹದಿನೈದರಲ್ಲಿ ಒಂದು ಚೆಂಡಿನಂತೆಯೂ, ಒಂದು ತಿಂಗಳ ನಂತರ ಗಟ್ಟಿಯಾಗುತ್ತದೆ.

ಎರಡನೇ ತಿಂಗಳಲ್ಲಿ ತಲೆ, ಮೂರರಲ್ಲಿ ಕೈ-ಕಾಲುಗಳು, ನಾಲ್ಕರಲ್ಲಿ ಉದರ, ತೊಡೆಗಳು, ಕೀಲುಗಳು ಹುಟ್ಟುತ್ತವೆ. ಐದರಲ್ಲಿ ಬೆನ್ನು, ಬೆನ್ನುಹುರಿ, ಆರರಲ್ಲಿ ಮುಖ, ಮೂತಿ, ನೇತ್ರಗಳು, ಕಿವಿಗಳು ಉತ್ಪತ್ತಿಯಾಗುತ್ತವೆ. ಎಂಟರಲ್ಲಿ ಎಲ್ಲಾ ಅವಯವಗಳು ತುಂಬಿಕೊಳ್ಳುತ್ತವೆ. ಒಂಭತ್ತರಲ್ಲಿ ವೃದ್ಧಿಯಾಗುತ್ತದೆ. ತಾಯಿಯು ಸೇವಿಸಿದ ಆಹಾರದಂತೆ ಮಗುವಿನ ಬುದ್ಧಿಯು ಬೆಳೆಯುತ್ತದೆ. ತಾಯಿಯು ಸೇವಿಸಿದ ಆಹಾರ ಪದಾರ್ಥಗಳು ಆಪ್ಯಾಯನೀ ನಾಡಿಯ ಮೂಲಕ ಗರ್ಭಸ್ಥ ಶಿಶುವಿಗೆ ತಲುಪುತ್ತದೆ. ಒಂಭತ್ತನೆಯ ತಿಂಗಳಲ್ಲಿ ಮಗುವಿಗೆ ಎಲ್ಲಾ ಲಕ್ಷಣಗಳೂ ಬಂದಿರುತ್ತವೆ.

ಗರ್ಭಿಣಿಯು ಒಳ್ಳೊಳ್ಳೆಯ ಚಿಂತನೆಯನ್ನು ಮಾಡುತ್ತಿರಬೇಕು. ಅಸೂಯೆ

– ಕೋಪ – ತಾಪಗಳು ಮಗುವಿನ ಮೇಲೆ ಪ್ರಭಾವ ಬೀರುತ್ತವೆ. ದೇವರ ಸ್ತೋತ್ರ – ಕಥಾಶ್ರವಣ – ಹರಿವಂಶ ಪಠಣ – ದೇವರನಾಮಗಳನ್ನು ಹಾಡುವುದು – ಸಾತ್ವಿಕವಾದ ಆಹಾರ – ಈರುಳ್ಳಿ ಮೊದಲಾದ ನಿಷಿದ್ಧ ವಸ್ತುಗಳನ್ನು ಸರ್ವಥಾ ತಿನ್ನಬಾರದು.

ಕಯಾಧುವು ನಾರದರಿಂದ ದೇವರ ಮಹಿಮೆಗಳನ್ನು ಕೇಳಿದ್ದರಿಂದ ಪರಮಭಾಗವತನಾದ ಪ್ರಹ್ಲಾದನು ಜನಿಸಿದನು.

ಅರ್ಜುನನು ಸುಭದ್ರೆಯೊಂದಿಗೆ ನಡೆಸಿದ ಚಕ್ರವ್ಯೂಹ ಭೇದವನ್ನು ಕೇಳಿದ್ದ ಗರ್ಭಸ್ಥ ಶಿಶುವು ಚಕ್ರವ್ಯೂಹಭೇದನ ಮಾಡುವ ಪ್ರಕಾರವನ್ನು ತಿಳಿಯುವಂತಾಯಿತು.

- ***ಗರ್ಭಿಣಿಯ ಕರ್ತವ್ಯ :***

ಗರ್ಭಿಣಿಯೂ ಯಾರಿಗೂ ಶಾಪ ಹಾಕಬಾರದು, ಸುಳ್ಳು ಹೇಳಬಾರದು, ಉಗುರು–ಕೂದಲು ಕತ್ತರಿಸಬಾರದು, ಅಪವಿತ್ರ ಅಮಂಗಳ ವಸ್ತುಗಳನ್ನು ಸ್ಪರ್ಶಿಸಬಾರದು. ಕೋಪಗೊಳ್ಳಬಾರದು, ದುಷ್ಟರೊಂದಿಗೆ ಸಲ್ಲಾಪ ವರ್ಜಿಸಬೇಕು. ಸಂಧ್ಯಾಕಾಲದಲ್ಲಿ ಹೊರಗೆ ಹೋಗಬಾರದು. ಉತ್ತರಕ್ಕೆ, ಪಶ್ಚಿಮಕ್ಕೆ ತಲೆ ಹಾಕಿ ಮಲಗಬಾರದು. ಸಂಧ್ಯಾಕಾಲದಲ್ಲಿ ತಿನ್ನಬಾರದು. ಪ್ರತಿದಿನವೂ ಸ್ನಾನ ಮಾಡಿ ಮಂಗಳಕರ ವಸ್ತುಗಳನ್ನು ಧರಿಸಬೇಕು. ಹರಿ ನಿರ್ಮಾಲ್ಯ – ಹರಿ ತೀರ್ಥ – ಪ್ರಸಾದ ತಿನ್ನಬೇಕು. ಹರಿಗೆ ನಿವೇದಿಸದ ಯಾವ ವಸ್ತುವನ್ನೂ ತಿನ್ನಬಾರದು. ಹರಿನಾಮ ಸ್ಮರಣೆ ನಿರಂತರ–ವಾಗಿರಬೇಕು. ದೇವರ ಕಥೆ ಬಿಟ್ಟು ಬೇರೆ ಕಥೆಯನ್ನು ಹೇಳಬಾರದು. ದೂರದರ್ಶನವನ್ನು ನೋಡಲೇಬಾರದು. ಪ್ರತಿದಿನವೂ ಗೋವು, ಬ್ರಾಹ್ಮಣರು, ಲಕ್ಷ್ಮೀನಾರಾಯಣರ ಪೂಜೆ ಮಾಡುತ್ತಿರಬೇಕು. ಪತಿಯನ್ನು ವಿಶೇಷವಾಗಿ ಪ್ರೀತಿಸಬೇಕು. ಪತಿಸೇವೆ ಮಾಡಬೇಕು.

ಹೀಗೆ ಮಾಡುವುದರಿಂದ ತೇಜಸ್ವಿಯೂ, ಮೇಧಾವಿಯೂ, ಧಾರ್ಮಿಕನೂ ಭಗವದ್ಭಕ್ತನೂ ಜನಿಸುವುದರಲ್ಲಿ ಸಂಶಯವಿಲ್ಲ.

ಕಸವಿರುವ ಸ್ಥಳದಲ್ಲಿ, ಒನಕೆ, ಒರಳುಗಳ ಮೇಲೆ ಕುಳಿತುಕೊಳ್ಳಬಾರದು. ನೀರಿನಲ್ಲಿ ಮುಳುಗಿ ಸ್ನಾನ ಮಾಡಬಾರದು. ಏಕಾಂತ ಸ್ಥಳದಲ್ಲಿರುವುದು ಅಪಾಯ. ಹುತ್ತಗಳ ಮೇಲೆ ನಿಲ್ಲಬಾರದು.

ಅಂಗಾರದಿಂದ ಉಗುರಿನಿಂದ ನೆಲದ ಮೇಲೆ ಬರೆಯಬಾರದು.

ವ್ಯಾಯಾಮವನ್ನು ಮಾಡಲೇಬಾರದು. ಯಾರೊಂದಿಗೆ ಜಗಳವಾಡಬಾರದು. ನಗ್ನಳಾಗಿರಬಾರದು. ಅತ್ತೆ ಮಾವಂಒರ ಸೇವೆ ಮಾಡುತ್ತಿರಬೇಕು. ಅವರಿಂದ ಆಶೀರ್ವಾದ ಪಡೆಯಬೇಕು.

- ***ಗರ್ಭಿಣಿಯ ಆಹಾರ – ವಿಹಾರಗಳು :***

ಗರ್ಭಿಣಿಯು ತಿನ್ನುವ ಆಹಾರಗಳು ಗರ್ಭಸ್ಥ ಶಿಶುವಿಗೆ ತಲುಪುವುದರಿಂದ ಪಥ್ಯಗಳಾದ ಆಹಾರಗಳನ್ನು ಮಾತ್ರ ಸೇವಿಸಬೇಕು. ಅತಿ ಖಾರ ಪದಾರ್ಥಗಳು ಅಹಿತವೆನಿಸುತ್ತವೆ. ಹಿಪ್ಪಲೀ, ಶುಂಠೀ, ಮೆಣಸು ಮೊದಲಾದ ದ್ರವ್ಯಗಳಿಂದ ತಯಾರಾದ ಆಹಾರ ಸೇವಿಸಬೇಕು. ಸಿಹಿಯಾದ ಪದಾರ್ಥ ತಿನ್ನಲು ಚರಕ ಸಮ್ಮತಿ ನೀಡಿದೆ.

ಹಾಲು, ಮೊಸರು, ತುಪ್ಪ, ಅನ್ನ, ಪಾಯಸ, ತೆಂಗು, ಸೊಪ್ಪು ಮೊದಲಾದ ತರಕಾರಿ, ಖರ್ಜೂರ ಇವುಗಳನ್ನು ಹಿತಮಿತವಾಗಿ ಸ್ವೀಕರಿಸಬಹುದು. ಹಾಲು ಎಲ್ಲದಕ್ಕಿಂತ ಪಥ್ಯವಾಗಿರುತ್ತದೆ. ದಿನಕ್ಕೆ ಎರಡು–ಮೂರು ಬಾರಿ ಗೋಕ್ಷೀರ ಸೇವಿಸಬಹುದು. ಮೂರನೇ ತಿಂಗಳಲ್ಲಿ ಜೇನುತುಪ್ಪದೊಂದಿಗೆ ಅನ್ನವನ್ನು ತಿನ್ನಬೇಕು. ಜೋಳ, ಗೋಧಿ, ಹೆಸರು, ಪಕ್ವವಾದ ಹಣ್ಣುಗಳು ತಿನ್ನಬಹುದು. ಐದನೇ ತಿಂಗಳಲ್ಲಿ ಕೆನೆಯಿರುವ ಹಾಲಿನೊಂದಿಗೆ ಆಹಾರ ಸೇವಿಸುವುದುತ್ತಮ. ಎಂಟರಲ್ಲಿ ಹಾಲಿನೊಂದಿಗೆ ಬಾರ್ಲಿ ಮತ್ತು ಸಬ್ಬಕ್ಕಿ ಕೊಡಬೇಕು.

ಗರ್ಭಿಣಿಗೆ ಮಲಶುದ್ಧಿಯಿರಬೇಕು ಹಾಗೂ ವಾಯುಶುದ್ಧಿ ಅವಶ್ಯಕ–ವಾಗಿರುತ್ತದೆ. ಇದಕ್ಕಾಗಿ ಹಾಲಿನೊಂದಿಗೆ ಶತಾವರೀಯನ್ನು ಕೊಡಬೇಕು. ಹಾಲನ್ನ ಉತ್ತಮವಾಗಿರುತ್ತದೆ.

- ***ಗರ್ಭಿಣಿಯು ಉಪವಾಸ ಮಾಡಬಾರದು :***

ಇದಕ್ಕಾಗಿ ನೀರು – ಹಾಲುಗಳನ್ನು ಆಗಾಗ್ಗೆ ತೆಗೆದುಕೊಳ್ಳುತ್ತಿರಬೇಕು. ಹಸೀಹಾಲಿನೊಂದಿಗೆ ಅಷ್ಟೇ ಪ್ರಮಾಣ ನೀರು ಬೆರೆಸಿ ಹಗಲು – ರಾತ್ರಿ ಒಂದೊಂದು ಲೋಟದಷ್ಟು ಗರ್ಭಿಣಿಗೆ ನೀಡುತ್ತಿರಬೇಕು.

ಗರ್ಭಿಣಿಯರು ಭಾರಿ ಭೋಜನ ಮಾಡಬಾರದು. ಅತೀ ಬಿಸಿಯಾಗಲೀ ಅತೀ ಖಾರವಾಗಲೀ ತಿನ್ನಬಾರದು. ಕಾಪಿ–ಟೀ ಮಹಾನರ್ಥಕಾರಿ.

ಮನೆಯಲ್ಲಿ ಸಣ್ಣ–ಪುಟ್ಟ ಗೃಹಕೃತ್ಯವನ್ನು ಮಾಡುತ್ತಿರಬೇಕು. ಶುದ್ಧವಾದ ವಾಯುಸೇವನೆ ಅಗತ್ಯ.

ಪತಿಯೊಂದಿಗೆ ಸಂಗವನ್ನು ಬಿಡುವುದು ಉಚಿತವು. ಮಲ-ಮೂತ್ರಗಳನ್ನು ತಡೆಯಬಾರದು. ವಾಹನಗಳ ಮೇಲೆ ಏರಬಾರದು. ಭಾರ ಪದಾರ್ಥಗಳನ್ನೆತ್ತಬಾರದು. ಹಗಲು ಮಲಗಬಾರದು, ರಾತ್ರಿ ಎದ್ದಿರಬಾರದು. ಕೋಪ, ಶೋಕ-ಭಯಾದಿಗಳನ್ನು ತ್ಯಜಿಸಬೇಕು.

- ***ಗಂಡೋ ಹೆಣ್ಣೋ?***

ಪುರುಷನ ವೀರ್ಯವು ಅಧಿಕವಾದರೆ ಗಂಡು ಮಗು, ಶೋಣಿತವು ಅಧಿಕವಾದರೆ ಹೆಣ್ಣು ಮಗು. ಗಂಡು ಮಗುವು ಗರ್ಭದಲ್ಲಿದ್ದರೆ ಗರ್ಭಾಶಯವು ದುಂಡಾಗಿರುತ್ತದೆ. ಬಲಭಾಗದ ಸ್ತನದಲ್ಲಿ ಮೊದಲು ಹಾಲು ಉತ್ಪನ್ನ-ವಾಗುತ್ತದೆ. ಬಲ ತೊಡೆಯು ದಪ್ಪವಾಗಿರುತ್ತದೆ. ಬಲಗಣ್ಣು ಅಗಲವಾಗಿರುತ್ತದೆ.

ಹೆಣ್ಣಾದರೆ ಗರ್ಭಾಶಯವು ಗಾತ್ರದಲ್ಲಿ ಕಡಮೆಯಾಗಿಯೂ, ಬಲಸ್ತನಕ್ಕಿಂತಲೂ ಎಡಸ್ತನದಲ್ಲಿ ಹಾಲು ಮೊದಲು ಬರುತ್ತದೆ. ಎಡ ತೊಡೆಯು ದಪ್ಪ-ವಾಗಿರುತ್ತದೆ. ಎಡಗಣ್ಣು ಅಗಲವಾಗಿರುತ್ತದೆ.

- ***ಸುಖಪ್ರಸವ :***

ಅಥರ್ವವೇದದ 'ನಾರೀಸುಖಪ್ರಸೂತಿ' ಎಂಬ ಸೂಕ್ತವನ್ನು ಏಳು ಬಾರಿ ಪಾರಾಯಣ ಮಾಡಿ ಹೋಮಿಯೋಪತಿಯ 'ಕೈಮೋಮಿಲಾ 12' ಔಷಧಿಯನ್ನು ಗರ್ಭಿಣಿಗೆ ನೀಡಿದರೆ ಸುಖವಾಗಿ ಪ್ರಸವವಾಗುತ್ತದೆ.

***ಸುಖಪ್ರಸವ ಮಂತ್ರ :***

**ಅಸ್ತಿ ಗೋದಾವರೀ ತೀರೆ ಜಂಭಲಾ ನಾಮ ರಾಕ್ಷಸೀ ।**
**ತಸ್ಯಾಃ ಸ್ಮರಣ ಮಾತ್ರೇಣ ವಿಶಲ್ಯಾ ಗರ್ಭಿಣೀ ಭವೇತ್ ॥**

ಈ ಮಂತ್ರವನ್ನು ಪತ್ರದಲ್ಲಿ ಬರೆದು ಗರ್ಭಿಣಿಯ ತಲೆಯ ಭಾಗದಲ್ಲಿಟ್ಟಿದ್ದರೆ ಸುಖಪ್ರಸವವಾಗುತ್ತದೆ. ಅಥವಾ ಈ ಮಂತ್ರದಿಂದ ಅಭಿಮಂತ್ರಿತ ನೀರನ್ನು ಗರ್ಭಿಣಿಗೆ ಕುಡಿಸಿದರೂ ಸುಖಪ್ರಸವವಾಗುತ್ತದೆ.

**ಅಚ್ಯುತಾನಂತ ಗೋವಿಂದ ನಾಮೋಚ್ಚಾರಣಭೇಷಜಾತ್ ।**
**ನಶ್ಯಂತಿ ಸಕಲಾಃ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥**

- ***ಗರ್ಭಿಣಿಯ ಧರ್ಮಗಳು :***

***ಸ್ನಾನ ನಿಯಮ :***

ಉಗುರು ಬೆಚ್ಚಗಿನ ನೀರಿನಿಂದ ಸ್ನಾನ ಮಾಡಬೇಕು. ***(ಕಿಂಚಿದುಷ್ಣೇನ ವಾರಿಣಾ ಸ್ನಾನ ಮಾಚರೇತ್).*** ಸರೋವರಾದಿಗಳಲ್ಲಿ ಮುಳುಗಿ ಸ್ನಾನ ಮಾಡಬಾರದು. ಅತಿ ಬಿಸಿಯಾದ ನೀರಿನಿಂದಾಗಲೀ, ಅತಿ ತಣ್ಣಗಿರುವ ನೀರಿನಿಂದಾಗಲೀ ಸ್ನಾನ ಮಾಡಬಾರದು.

***ತೀರ್ಥಯಾತ್ರೆ ಪ್ರಯಾಣ :***

ನಾಲ್ಕನೇ ತಿಂಗಳು ತುಂಬಿದ ಮೇಲೆ ದೂರ ಪ್ರಯಾಣ ಯಾತ್ರೆಗಳನ್ನು ಮಾಡಬಾರದು. ಆಷಾಢಮಾಸವಂತೂ ಗರ್ಭಿಣಿಗೆ ಮಹಾ ನಿಷಿದ್ಧವು.

**ಯಾತ್ರಾ ನಿತ್ಯಂ ವಿವರ್ಜ್ಯಾ ಸ್ಯಾದ್ ಆಷಾಢೇ ತು ವಿಶೇಷತಃ ॥**

*– ಬೃಹ*

***ಆಹಾರ ನಿಯಮ :***

ಗರ್ಭವನ್ನು ರಕ್ಷಿಸಿಕೊಳ್ಳಲು ಬಯಸುವ ಗರ್ಭಿಣಿಯು ಹರಿನಿವೇದಿತ ಶುದ್ಧ ಸಾತ್ವಿಕಾಹಾರವನ್ನೆ ಭುಂಜಿಸಬೇಕು. ಹರಿಯನ್ನು ನಿರಂತರ ಚಿಂತಿಸುತ್ತಿರಬೇಕು.

**ಗರ್ಭಿಣೀ ಗರ್ಭರಕ್ಷಾರ್ಥಂ ಸಾತ್ವಿಕಾಹಾರ ಸಂಯುತಾ ।**
**ಸದಾಚಾರ ಧರ್ಮಶೀಲಾ ಸದಾ ದೇವಾರ್ಚನ ತತ್ಪರಾ ॥**

- ***ಹಾಲಿನ ದೋಷ ಕಾರಣಗಳು :***

ಅತಿ ಖಾರ – ಅತಿ ಹುಳಿ – ಅತಿ ಬಿಸಿ – ಅತಿ ತಂಪಾದ ಆಹಾರವನ್ನು ತಿನ್ನಬಾರದು. ಹೊಟ್ಟೆಗೆ ಭಾರವಾಗುವಂತೆ ಆಹಾರ ತಿನ್ನಬಾರದು. ಈ ರೀತಿ ತಿನ್ನುವುದರಿಂದ ತಾಯಿಯ ಎದೆ ಹಾಲು ದೋಷಪೂರಿತವಾಗುತ್ತದೆ. ಈ ಹಾಲನ್ನು ಕುಡಿಯುವ ಶಿಶುವಿಗೆ ಅನೇಕ ರೋಗಾದಿಗಳುಂಟಾಗುತ್ತವೆ.

**ಅತಿಕ್ಷಾರಂ ತು ನಾಶ್ನೀಯಾತ್ ಅತ್ಯಾಮ್ಲಮತಿಭೂರಿ ಚ ।**
**ಅತ್ಯುಷ್ಣಮತಿಶೀತಂ ಚ ಗುರ್ವಾಹಾರಾನ್ ಪರಿತ್ಯಜೇತ್ ॥**
**ಗುರುಭಿಃ ವಿವಿಧೈರನ್ನೈಃ ದುಷ್ಟೈಃ ದೋಷೈಃ ಪ್ರದೂಷಿತಮ್ ।**
**ಮಾತುಃ ಕ್ಷೀರಂ ಕುಮಾರಸ್ಯ ನಾನಾರೋಗಾಯ ಕಲ್ಪತೇ ॥**

ಬೆಳಿಗ್ಗೆ ಬೇಗ ಊಟ ಮಾಡುವುದು ಹಾಗೂ ಅಪರಾಹ್ಣ ಕಾಲದಲ್ಲಿ ತಡವಾಗಿ ಮಾಡಿ ಭುಂಜಿಸಬಾರದು.

- ***ಬಸುರಿಯ ಬಯಕೆ :***

ಗರ್ಭಿಣಿಯರಾಗಿರುವಾಗ ಅವರಿಗೆ ಬಯಕೆಗಳುಂಟಾಗುತ್ತವೆ. ಈ ಬಯಕೆಗಳನ್ನು ಆದಷ್ಟು ಪೂರ್ಣಗೊಳಿಸಬೇಕು. ಇದನ್ನೇ 'ದೋಹದ'-ವೆನ್ನಲಾಗಿದೆ. ಮೊದಲು ಒಂದೇ ಹೃದಯವಿದ್ದು, ಈಗ ಎರಡು ಹೃದಯಗಳಾಗಿವೆ.

ಬಯಕೆಯನ್ನು ಹೊಂದದ ಗರ್ಭಸ್ಥ ಶಿಶು ಅಂಗವೈಕಲ್ಯವುಂಟಾಗಬಹುದು. – ಅಷ್ಟೇಕೆ ಮರಣವನ್ನೇ ಹೊಂದುವ ಅವಕಾಶಗಳಿರುತ್ತವೆ.

**ದೋಹದಸ್ಯಾಪ್ರದಾನೇನ ಗರ್ಭೋ ದೋಷಮವಾಪ್ನುಯಾತ್ ।**
**ಗರ್ಭಿಣೀ ವಾಂಛಿತಂ ದ್ರವ್ಯಂ ತಸ್ಯೈ ದದ್ಯಾತ್ ಯಥೋವಿದಿತಮ್॥**

ಬಯಕೆ ಪೂರ್ಣವಾಗದ ಗರ್ಭಿಣಿಯು ಕುಬ್ಜನನ್ನೋ, ಕುಂಟ, ಜಡ, ಕುಳ್ಳ, ವಿಕರತವಾದ ಕಣ್ಣು–ಮೂಗುವುಳ್ಳವನಿಗೆ ಜನ್ಮ ನೀಡುವಳು.

**ದೌಹೃದಪ್ರದಾನಾನ್ನಾರೀ ಕುಬ್ಜಮ ಕುಣಿಂ ಖಂಜಂ ಜಡಂ ವಾಮನಂ।**
**ವಿಕೃತಾಕ್ಷನಾಸಂ ವಾ ನಾರೀ ಸುತಂ ಜನಯತಿ –**

ರಾಜದರ್ಶನ ಬಯಕೆ ತೀರಿಸಿದರೆ ಮಹಾಭಾಗ್ಯಶಾಲಿ ಪುತ್ರ ಜನಿಸುವನು. ಹೊಸ ಸೀರೆ, ರೇಷ್ಮೇ ಸೀರೆ, ಆಭರಣಗಳನ್ನು ನೀಡಿದಾಗ ಅಲಂಕಾರ ಪ್ರಿಯನಾದ ಪುತ್ರನಿಗೆ ಜನ್ಮ ನೀಡುವಳು.

ಬಸುರಿಯ ಬಯಕೆಯನ್ನು ಪೂರೈಸುವ ಭರದಲ್ಲಿ ನಿಷಿದ್ಧವಾದ ಆಹಾರಗಳನ್ನು ನೀಡಬಾರದು. ಗರ್ಭಸ್ಥ ಶಿಶುವಿನ ಮೇಲೆ ಪರಿಣಾಮ ಬೀರುವುದು.

ಕುದುರೆ, ಮಹಡಿ ಏರುವುದು, ನದೀ ದಾಟುವುದು, ಪರ್ವತ, ಸ್ಮಶಾನ ನೋಡುವುದು ನಿಷಿದ್ಧವಾಗಿದೆ.

ಕೂದಲನ್ನು ಕೆದರಿಕೊಂಡಿರಬಾರದು. ಅಭ್ಯಂಜನ ಮಾಡಬಾರದು, ನೆಲ ಮೇಲೆ ಮಲಗದೆ ಮಂಚದಲ್ಲಿಯೇ ಮಲಗಬೇಕು. ವ್ಯಾಯಾಮ – ಬೇಗ ಬೇಗ ನಡೆಯುವುದು, ಕುಕ್ಕುಟಾಸನದಲ್ಲಿ ಕೂಡುವುದು, ಶೋಕ ಪಡುವುದು,

ಭಯಗೊಳ್ಳುವುದು, ಹಗಲು ನಿದ್ರೆ – ರಾತ್ರಿ ಜಾಗರಣೆ, ಪತಿಯೊಂದಿಗೆ ಸಂಗಾದಿಗಳನ್ನು ತ್ಯಜಿಸಬೇಕು.

- ***ಮಂಗಳವಸ್ತುಗಳನ್ನು ಧರಿಸಬೇಕು :***

ಹರಿದ್ರಾ, ಕುಂಕುಮ, ಸಿಂಧೂರ, ಕಜ್ಜಲ, ಕುಪ್ಪಸ, ತಾಂಬೂಲ, ಮಾಂಗಲ್ಯಾಧ್ಯಾಭರಣಗಳನ್ನು ಗಂಡನ ಆಯುಸ್ಸನ್ನು ವೃದ್ಧಿಯಾಗಲು ತ್ಯಜಿಸಬಾರದು.

**ಹರಿದ್ರಾ ಕುಂಕುಮಂ ಚೈವ ಸಿಂಧೂರಂ ಕಜ್ಜಲಂ ತಥಾ ।**
**ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಂ ಶುಭಮ್ ।**
**ಭರ್ತುರಾಯುಷ್ಯಮಿಚ್ಛಂತೀ ವರ್ಜಯೇದ್ ಗರ್ಭಿಣೀ ನ ಹಿ ॥**

– *ಬೃಹಸ್ಪತಿಃ*

- ***ಸುಪುತ್ರಪ್ರಾಪ್ತಿಗಾಗಿ ದಾನಗಳು :***

ಗರ್ಭಿಣಿಯು ದಾನಶೀಲಳಾಗಿರಬೇಕು.

ಮೂರನೆ ತಿಂಗಳಲ್ಲಿ ಬಿಳಿ ಪಂಚೆ, ಸುಗಂಧದ್ರವ್ಯ, ಏಲಕ್ಕಿ, ಪಚ್ಚಕರ್ಪೂರ, ಕೇಸರಿ, ಬೂದು ಗುಂಬಳಕಾಯಿಯನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಕುಂಬಳಕಾಯಿಯ ಮೇಲೆ ಎರಡು ಬೆಳ್ಳಿಯ ದೀಪಗಳನ್ನು ಹಚ್ಚಿ ದೇವರ ಮುಂದೆ ಸ್ವಲ್ಪಕಾಲವಿಟ್ಟು ನಂತರ ಸಂತಾನ ಗೋಪಾಲಕೃಷ್ಣನನ್ನು ಬ್ರಾಹ್ಮಣನಲ್ಲಿ ಆವಾಹಿಸಿ 'ದೇವಕೀಸುತ' ಎಂಬ ಶ್ಲೋಕದ ತಾತ್ಪರ್ಯವನ್ನು ಅವನಿಂದ ಶ್ರವಣ ಮಾಡಿಸಿ ನಂತರ ದಾನ ಮಾಡಬೇಕು. ಇದರಿಂದಾಗಿ ಕುಂಬಳಕಾಯಿ ಒಡೆದಿದ್ದ ದೋಷ ಪರಿಹಾರವಾಗಿ ಗರ್ಭ ನಿಲ್ಲುತ್ತದೆ.

**ದೀಪ ಪ್ರಲೋಭನಂ ಪುಂಸಾಂ ಕೂಷ್ಮಾಂಡಭೇದನಂ ಸ್ತ್ರೀಯಃ ।**
**ಅಚಿರೇಣ ಕಾಲೇನ ಗರ್ಭಪಾತೋ ನಂ ಸಂಶಯಃ ॥**

**ತದ್ದೋಷ ಪರಿಹಾರರ್ಥಂ ಕೂಷ್ಮಾಂಡಂ ದಾಪಯೇತ್ ಸುಧೀಃ ॥**

ಮೂರನೇ ತಿಂಗಳಲ್ಲಿ ದಾಳಿಂಬೆ ಹಣ್ಣನ್ನು, ನಾಲ್ಕನೇ ತಿಂಗಳಲ್ಲಿ ಮಾದಲ ಫಲವನ್ನೂ, ಐದರಲ್ಲಿ ತೆಂಗಿನಕಾಯಿಯನ್ನು, ಆರನೇ ತಿಂಗಳಲ್ಲಿ ಹಲಸಿನ ಹಣ್ಣು ಹಾಗೂ ಮಾವಿನಹಣ್ಣನ್ನೂ, ಏಳು ಹಾಗೂ ಎಂಟನೇ ತಿಂಗಳಲ್ಲಿ ನಿಂಬೆಹಣ್ಣನ್ನೂ, ಒಂಭತ್ತನೇ ತಿಂಗಳಲ್ಲಿ ಬಾಳೆಹಣ್ಣುಗಳು (ಗೊನೆ ಸಹಿತ)

ದಾನಕ್ಕೆ ಪ್ರಶಸ್ತವಾಗಿರುತ್ತದೆ. ಮೂರನೇ ತಿಂಗಳಲ್ಲಿ ದಾಳಿಂಬೆಯೂ ಪ್ರಶಸ್ತವೇ ಆಗಿರುತ್ತದೆ.

**ತೃತೀಯೇ ತು ಕೂಷ್ಮಾಂಡಂ ಚತುರ್ಥೇ ಮಾತುಲಂಗಕಂ ।**
**ಪಂಚಮೇ ನಾರಿಕೇಲಂ ಚ ಷಷ್ಠೇ ಪನಕುಚೂತಕಮ್ ।**
**ಸಪ್ತಮೇ ಚಾಷ್ಟಮೇ ಚೈವ ಲಿಕುಚಂ ನಿಂಬುಕಂ ತಥಾ ॥**
**ನವಮೇ ಚೈವ ಕದಲೀಫಲಗುಚ್ಛಕಮ್ ॥**
**ಏವಂದಾನೇನ ನಾರೀಣಾಂ ಸಂತತಿ ಪ್ರತಿಬಂಧಕಾಃ ।**
**ನಶ್ಯಂತಿ ಸಂತತಿಂ ಶುದ್ಧಾಂ ಯಾಸ್ಯಂತಿ ಶುಭಕರ್ಮಭಿಃ ॥**

*– ಪ್ರ.ಪಾರಿಜಾತ*

- ***ಅಷ್ಟಮಂಗಲ ದಾನ :***

ಅರಿಷಿಣ, ಕಿವಿಯೋಲೆ, ಬೆಲ್ಲ, ಜೀರಿಗೆ, ಅರಳು, ಲವಣ, ಪುಷ್ಪ ಹಾಗೂ ಹಣ್ಣುಗಳು ಅಷ್ಟಮಂಗಳವೆನಿಸಿದೆ.

ಇವುಗಳನ್ನು ವಸ್ತ್ರದಲ್ಲಿಟ್ಟು ಬ್ರಾಹ್ಮಣನನ್ನು ಸುವಾಸಿನಿಯನ್ನು ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ, ದಾನ ಮಾಡಿ ಆಶೀರ್ವಾದ ಪಡೆಯಬೇಕು.

**ಹರಿದ್ರಾಂ ಕರ್ಣಪತ್ರಂ ಚ ಗುಡಂ ಜೀರಕಮೇವ ಚ ।**
**ಲಾಜಾಶ್ಚ ಲವಣಂ ಪುಷ್ಪಂ ಫಲಮಿತ್ಯಷ್ಟಮಂಗಲಮ್ ।**
**ಸೂಕ್ಷ್ಮ ವಸ್ತ್ರೇಣ ಸಂವೇಷ್ಟ್ಯ ಗಂಧ ಪುಷ್ಪಾಕ್ಷತಾದಿಭಿಃ ।**
**ಅಭ್ಯರ್ಚ್ಯೈಕಂ ವಿಧಾನೇನ ಯಥಾಲಾಭಂ ಪ್ರದೀಯತೇ ॥**

*– ಪ್ರ.ಪಾರಿಜಾತ*

ಹಸ್ತ, ಮೃಗಶಿರ, ಶ್ರವಣ, ಪುನರ್ವಸು ಸೀಮಂತಕ್ಕೆ ಶ್ರೇಷ್ಠ.

- ***ವರ್ಜ್ಯ ಸಂಗ್ರಹಃ :***

ಕಸಕಡ್ಡಿಗಳ ಮೇಲೆ ಕೂಡುವುದು, ಒನಕೆ, ಒರಳು, ಪೊರಕೆ ಅಗ್ಗಿಷ್ಟಿಕೆ, ಬೀಸೆಕಲ್ಲು ಇವುಗಳ ಮೇಲೆ ಕುಳಿತುಕೊಳ್ಳಬಾರದು. ನೀರಿನಲ್ಲಿ ಮುಳುಗಿ ಸ್ನಾನ ನಿಷಿದ್ಧ. ಒಬ್ಬಂಟಿಗಳಾಗಿ ಭಯಪಡುವುದು. ಉಗುರುಗಳಿಂದ ಭೂಮಿಯನ್ನು ಲೇಖನ ಮಾಡುವುದು, ಯಾವಾಗಲೂ ಮಲಗಿರುವುದು, ವ್ಯಾಯಾಮ ಮಾಡುವುದು, ಎಲುಬು, ಹೊಲಸು ಪದಾರ್ಥ

ತುಳಿಯುವುದು, ಜಗಳವಾಡುವುದು, ಮೈಮುರಿಯುವುದು, ತಲೆ ಬಿರಿ, ಹಾಕಿಕೊಂಡು ಕೂತಿರುವುದು, ಬೊರಳಾಗಿ ಮಲಗುವುದು.

ವಸ್ತ್ರಹೀನಳಾಗಿ ಸ್ನಾನವಾಗಲಿ, ಮಲಗುವುದಾಗಲಿ, ಮಾಡಬಾರದು.

ಒದ್ದೆ ಕಾಲದಲ್ಲಿ ಮಲಗುವುದು ಮಾಡಬಾರದು. ಅವಾಚ್ಯ ಶಬ್ದವನ್ನಾಡಬಾರದು.

ಜೋರಾಗಿ ನಗುವುದು, ಅಳುವುದು ನಿಷಿದ್ಧ.

ಮಂಗಳವಸ್ತುಗಳಾದ ಅರಿಷಿಣ, ಕುಂಕುಮ, ಹೂವು ಮುಡಿದಿರಬೇಕು. ಅತ್ತೆಮಾವಂದಿರ ಸೇವೆ, ಹರಿವಾಯುಗಳ ಸ್ಮರಣೆ, ಹರಿವಂಶಾದಿಗಳನ್ನು ಕೇಳುವುದು, ನಿಷಿದ್ಧ ಪದಾರ್ಥಗಳಾದ ಈರುಳ್ಳಿ, ಬೆಳ್ಳುಳ್ಳಿ, ಬದನೆ, ಗಜ್ಜರಿ ಇವುಗಳನ್ನು ಸರ್ವಥಾ ತಿನ್ನಬಾರದು. ಹುಟ್ಟುವ ಮಗುವಿನ ಮೇಲೆ ಇವೆಲ್ಲ ಪರಿಣಾಮ ಬೀರುವುವು. ಆದ್ದರಿಂದ ಜಾಗ್ರತೆ ವಹಿಸಬೇಕು.

ಸಂಧ್ಯಾಕಾಲದಲ್ಲಿ ತಿನ್ನುವುದು, ನಿಷಿದ್ಧ. ಮನೆಯ ವಾಸ್ತುದೇವತೆ, ಹೊಸ್ತಿಲಿನ ದೇವತಾ ಪೂಜೆ ಸ್ಮರಣೆ ಮಾಡಲೇಬೇಕು. ಯಾವಾಗಲೂ ಬಾಗಿಣ, ವಸ್ತ್ರ ಧನಾದಿಗಳನ್ನು ಮಗುವಿನ ಕ್ಷೇಮಕ್ಕಾಗಿ ಕೊಡಬೇಕು ಅಥವಾ ಕೊಡಿಸುವ ವ್ಯವಸ್ಥೆ ಮಾಡಬೇಕು. ಪ್ರತಿನಿತ್ಯ ಧರ್ಮ ಬಿಡಬಾರದು, ಏಕದಶ್ಯಾದಿಗಳಲ್ಲಿ ಅನ್ನಾದಿ ಬೇಯಿಸಿದ ಆಹಾರ ತಿನ್ನದೆ ಹರಿನಿವೇದಿತ ಹಣ್ಣು, ಹಾಲು ಸ್ವೀಕರಿಸಬೇಕು. ಉಪವಾಸ ಮಾಡಿದರೆ ಉತ್ತಮ ಹರಿಪ್ರೀತಿಯಾಗಿ ಹರಿಭಕ್ತನಾದ ಮಗ ಹುಟ್ಟುತ್ತಾನೆ.

- ***ಗರ್ಭಿಣೀ ಸಂಸ್ಕಾರಗಳು :***

***ಪುಂಸವನ :***

ಗರ್ಭ ನಿಂತ ಮೇಲೆ ಮೂರನೇ ತಿಂಗಳಲ್ಲಿ ಪುಂಸವನ ಸಂಸ್ಕಾರ ಮಾಡಬೇಕು. ಇದೊಂದು ಗರ್ಭವೃದ್ಧಿಯಾಗಲು ಮಾಡುವ ಸಂಸ್ಕಾರ.

**ಗರ್ಭೇ ಜಾತೇ ಪುಂಸವನಂ ತೃತೀಯೇ ಮಾಸಿ ಶಸ್ಯತೇ ।**

ಈ ಪುಂಸವನ ಕರ್ಮದಿಂದ ಪುರುಷನ ವೀರ್ಯವು ಅಧಿಕವಾಗಿ ಗಂಡುಮಗುವೇ ಜನಿಸುತ್ತದೆ.

**ಪುಂಪ್ರಸೂತಿ ವಿಧನಾಯ ತದ್ವೀರ್ಯಸ್ಯಾಬಿವೃದ್ಧಯೇ ।**
**ಪುಂಪ್ರಸೂತೇಃ ನಿಮಿತ್ತತ್ವಾತ್ ತತ್ ಪುಂಸವನ ಮಿತೀರ್ಯತೇ ॥**

ಪುಂಸವನದಲ್ಲಿ ಹೋಮವೂ ವಿಹಿತವಾಗಿದ್ದು ನೀರಾಜನ ಮಾಡಿ ಬಂಧುಗಳಿಗೆ ಭೋಜನ ಮಾಡಿಸಬೇಕು.

ಪುಂಸವನ ಹಾಗೂ ಸೀಮಂತೋನ್ನಯನಗಳನ್ನು ಒಟ್ಟಿಗೆಯೂ ಮಾಡಬಹುದು. ಪುಂನಕ್ಷತ್ರಳಾದ ಶ್ರವಣ, ಸ್ವಾತೀ, ಹಸ್ತ, ಪುನರ್ವಸು, ಮೂಲ, ಪ್ರೋಷ್ಠಪದ, ಅನುರಾಧಾ, ಮೃಗಶಿರಾ, ಅಶ್ವಿನೀ ಇವುಗಳಲ್ಲಿ ಪುಂಸವನ ಶ್ರೇಷ್ಠ.

***ಅನವಲೋಭನಂ :***

ದೂರ್ವೆಯನ್ನು ಕಲ್ಲಿನಿಂದ ಕುಟ್ಟಿ ಉಂಡೆಯಂತೆ ಮಾಡಿ, ಬಟ್ಟೆಯಲ್ಲಿಟ್ಟು ಹಿಂಡಿ ರಸವನ್ನು ತೆಗೆಯಬೇಕು. ಆ ತೇ ಗರ್ಭ ಮಂತ್ರವನ್ನು ಹೇಳುತ್ತಾ, ಗರ್ಭಿಣಿಯ ಮುಖವನ್ನೆತ್ತಿ ಮೂಗಿನ ಬಲಹೊರಳೆಯಲ್ಲಿ ದೂರ್ವಾ ರಸವನ್ನು ಹೆಬ್ಬೆರಳಿನಿಂದ ಹನಿಹನಿಯಾಗಿ ಬಿಡಬೇಕು.

- ***ಒಂದು ಬಾರಿ ಮಾತ್ರ ಸೀಮಂತ :***

ಪತ್ನಿಯ ಮೊದಲ ಗರ್ಭವನ್ನು ಕಬಳಿಸಲು ಕೆಲವು ರಾಕ್ಷಸಿಯರು ಹೊಂಚು ಹಾಕುತ್ತಿರುತ್ತಾರೆ. ಇವರ ಪೀಡೆ ತೊಲಗಿಸಲು ಪತ್ನಿಯಲ್ಲಿ ಲಕ್ಷ್ಮೀದೇವಿಯ ಸನ್ನಿಹಿತಳಾಗುವಂತೆ ಮಾಡುವುದೇ ಸೀಮಂತ. ನಾಲ್ಕನೇ ತಿಂಗಳಲ್ಲಿ ಸೀಮಂತವನ್ನು ಹೇಳಲಾಗಿದ್ದರೂ ಆರು, ಏಳು, ಎಂಟು ತಿಂಗಳಲ್ಲಿಯೂ ಮಾಡಬಹುದು.

ಇದನ್ನು ಸಾಮಾನ್ಯವಾಗಿ ಏಳು ಅಥವಾ ಎಂಟನೇ ತಿಂಗಳಲ್ಲಿ ದೇಶಭೇದದಿಂದ ಮಾಡುವುದಿದೆ. ಅಥವಾ ಪ್ರಸವಕ್ಕಿಂತ ಮೊದಲಾದರೂ ಸೀಮಂತ ನಡೆಸಲೇಬೇಕು. ಕಾರಣಾಂತರಗಳಿಂದ ಪ್ರಸವವಾಗಿ ಹೋದರೆ ಆ ಮಗುವನ್ನು ತಾಯಿಯ ತೊಡೆಯಲ್ಲಿರಿಸಿ ಅಥವಾ ಬುಟ್ಟಿಯಲ್ಲಿಟ್ಟು ಮಾಡಲೇಬೇಕು.

ಸೀಮಂತವು ಒಂದು ಗರ್ಭಕ್ಕೆ ಮಾಡವ ಸಂಸ್ಕಾರವಾಗಿದ್ದು ಒಂದು ಬಾರಿ ಮಾಡಿದರೆ ಸಾಕು. ಮುಂದಿನ ಗರ್ಭಕ್ಕೆಲ್ಲ ಸಂಸ್ಕಾರವಾದಂತೆಯೇ ಸರಿ.

**ಸಕೃತ್ ಸುಕೃತ್ ಸಂಸ್ಕಾರಾಃ ಸೀಮಂತೇನ ದ್ವಿಜಸ್ತ್ರಿಯಃ ।**
**ಯಂ ಯಂ ಗರ್ಭಂ ಪ್ರಸೂಯಂತೇ ಸ ಸರ್ವಃ ಸಂಸ್ಕೃತೋ ಭವೇತ್॥**

ಮುಳ್ಳಹಂದಿಯ ಮುಳ್ಳುಗಳಿಂದ ತಯಾರಾದ ಬಾಚಣಿಗೆಯ ಜೊತೆಗೆ ದರ್ಭೆಗಳನ್ನು ಸೇರಿಸಿಕೊಂಡು ಭೂರ್ಭುವಸ್ವಃ ಎಂದು ಹಣೆಯಿಂದ ಬೈತಲೆಯನ್ನು ಬಾಚುವುದು.

**ಏಕೀಕೃತ್ಯ ಗೃಹೀತ್ವಾಥ ಶಲಲೀಂ ತ್ರಿಕುಶಾಂಕುರಾನ್ ।**
**ತಸ್ಯ ಪುಂಜಸ್ಯ ಮೂಲೇನ ನಾರ್ಯಾಃ ಕೇಶಲಲಾಟಯೋಃ ॥**
**ಕೇಶಾನೂರ್ಧ್ವಂ ಪೃಥಕ್ಕುರ್ಯಾದ್ ಆಮೂಲಂ ಪರಭಾಗತಃ ॥**

– *ಸಂಗ್ರಹ*

**ಜಾತೇ ಪುತ್ರೇಽಪಿ ಕರ್ತವ್ಯಃ ಸೀಮಂತ ಇತಿ ಗೌತಮಃ ॥**

ಸೀಮಂತವೂ ಗರ್ಭದ ಮಗುವಿಗೆ ಮಾಡುವ ಸಂಸ್ಕಾರವಾದ್ದರಿಂದ ಪ್ರತಿಗರ್ಭ ಮಾಡಲೇಬೇಕೆಂದು ಅಭಿಪ್ರಾಯ ಪಡುವರು. ಕೆಲವರು ಕ್ಷೇತ್ರ ಸಂಸ್ಕಾರವಾದ್ದರಿಂದ ಒಂದೇ ಬಾರಿ ಸಾಕೆಂದು ಮತ್ತೆ ಕೆಲವರು. ರೂಢಿಯಲ್ಲಿ ಎರಡನೇ ಪಕ್ಷ ಪ್ರಚಲಿತವಿದೆ. ಯಾರ ಪದ್ಧತಿಯಲ್ಲಿ ಪ್ರತಿ ಗರ್ಭಕ್ಕೂ ಸಂಸ್ಕಾರದ ಪದ್ಧತಿಯಿದ್ದರೆ ಮಾಡಿಕೊಳ್ಳಬೇಕು.

(ಅತ್ರ ಸರ್ವತ್ರಗೃಹ್ಯೋದಿತಮಾರ್ಗತಹ ವ್ಯವಸ್ಥಾ)

* * * * * *



# 12. ಸಂಸ್ಕಾರಗಳು – ಸ್ತ್ರೀಯರು



- ***ತೊಟ್ಟಿಲು ಶಾಸ್ತ್ರ :***

  ಮಗುವಿಗೆ ಹತ್ತನೆ ಅಥವಾ ಹನ್ನೆರಡನೇ ದಿವಸ ತೊಟ್ಟಿಲಲ್ಲಿ ಮಲಗಿಸಬೇಕು. ಹನ್ನೆರಡನೇ ದಿನ ಗಂಡುಮಗುವಿಗೂ, ಹದಿಮೂರನೇ ದಿನ ಹೆಣ್ಣು ಮಗುವಿಗೂ ದೋಲಾರೋಹಣ ಮಾಡಬೇಕು.

  **ಆಂದೋಲಾಶಯನೆ ಪುಂಸಃ ದ್ವಾದಶೋ ದಿವಸಃ ಶುಭಃ ।**
  **ತ್ರಯೋದಶಸ್ತು ಕನ್ಯಾಯಾಃ ನ ನಕ್ಷತ್ರ ವಿಚಾರಣಾ ॥**

- ***ನಾಮಕರಣ :***

  ಮಗು ಜನ್ಮ ತಾಳಿದ ಹನ್ನೊಂದನೇ ದಿವಸ ಅಥವಾ ಹನ್ನೆರಡನೇ ದಿವಸ ಶಿಶುವಿಗೆ ನಾಮಕರಣ ಮಾಡಬೇಕು. ಜಾತಕರ್ಮದಿಂದಾರಂಭಿಸಿ ಚೌಲದವರೆಗೂ ಎಲ್ಲಾ ಸಂಸ್ಕಾರಗಳನ್ನು ಮಂತ್ರರಹಿತವಾಗಿ ಮಾಡಬೇಕು. ವಿವಾಹವನ್ನು ಮಾತ್ರ ಸಮಂತ್ರಕವಾಗಿ ಮಾಡಬೇಕು. ಪಾತ್ರೆಯಲ್ಲಿ ಅಕ್ಕಿಯನ್ನು ಹರವಿ ಅದರ ಮೇಲೆ ಚಿನ್ನದ ಕಡ್ಡಿಯಿಂದ ಕುಲದೇವತಾನಾಮವನ್ನು, ತಿಂಗಳಿಗೆ ಸಂಬಂಧಿಸಿದ ಹೆಸರನ್ನು ಇಡಬೇಕು. ಗಂಡು ಮಗುವಾದರೆ ಸಮಾಕ್ಷರಗಳು, ಹೆಣ್ಣಾದರೆ ಚಂದ್ರಿಕಾ, ಶ್ರೀದೇವಿ ಇತ್ಯಾದಿ ಬೆಸಾಕ್ಷರಗಳನ್ನು ಇಡಬೇಕು. ಕುಲದೇವತಾನಕ್ಷತ್ರ ಸಂಬಂಧಿಸಿದಂತೆ ಹೆಸರನ್ನಿಡಬೇಕು. ರೇವತೀ–ಉತ್ತರ ಇತ್ಯಾದಿ ನಕ್ಷತ್ರ ನಾಮವನ್ನು ಇಡಬಹುದು.

  **'ನಾಕ್ಷತ್ರಮಪಿ ನಾಮ ಕುರ್ಯಾತ್'**

- ***ಕರ್ಣವೇಧ (ಕಿವಿ ಚುಚ್ಚುವುದು) :***

ಆರನೇ ತಿಂಗಳಾಗಲೀ, ಏಳು, ಎಂಟರಲ್ಲಾಗಲೀ, ಪುಣ್ಯ–ಅಯಸ್ಸು ಅಭಿವೃದ್ಧಿಗಾಗಿ ಕಿವಿಯನ್ನು ಚುಚ್ಚಬೇಕು. ಕಾರ್ತಿಕ, ಪುಷ್ಯ, ಚೈತ್ರ, ಫಾಲ್ಗುಣ ಪ್ರಶಸ್ತವಾಗಿರುತ್ತದೆ.

ಸೂಜಿಯು ಬ್ರಾಹ್ಮಣ ಶಿಶುವಿಗೆ ರಜತದ್ದೇ ಆಗಿರಬೇಕು. ಮೊದಲು ಬಲಗಿವಿ, ನಂತರ ಎಡಗಿವಿ ಚುಚ್ಚಬೇಕು.

**"ರಾಜತೀ ವಿಪ್ರವೈಶ್ಯೈಯೋಃ"**

- ***ನಿಷ್ಕ್ರಮಣ :***

ಮೂರು–ನಾಲ್ಕನೇ ತಿಂಗಳಲ್ಲಿ ನಿಷ್ಕ್ರಮಣ ಸಂಸ್ಕಾರವನ್ನು ಮಾಡಬೇಕು.

**ಮಾಸೇ ಚತುರ್ಥೇ ಕರ್ತವಯ ಶಿಶೋಃ ನಿಷ್ಕಮಣಂ ಗೃಹಾತ್ ।**

ಪುಣ್ಯಾಹ ವಾಚನ ಮಾಡಿ ಚಂದ್ರ–ಸೂರ್ಯ–ಗಗನ ದೇವತೆ ಗಣಪತಿಯನ್ನು ಪೂಜಿಸಿ ಹೊರಗೆ ಬಂದು ಸೂರ್ಯ–ಚಂದ್ರ–ಧೇನುಗಳ ದರ್ಶನ ಮಾಡಿಸಬೇಕು. ಇದು ಮಗುವನ್ನು ರಕ್ಷಿಸಲು ಇಂದ್ರಾದಿಗಳನ್ನು ಬೇಡಿಕೊಳ್ಳುವ ಕಾರ್ಯಕ್ರಮ.

**ಅಪ್ರಮತ್ತಂ ಪ್ರಮತ್ತಂ ವಾ ದಿವಾರಾತ್ರಮಥಾಪಿ ವಾ ।**
**ರಕ್ಷಂತು ಸತತಂ ಸರ್ವೇ ದೇವಾ ಶಕ್ರ ಪುರೋಗಮಾಃ ॥**

- ***ಭೂಮಿಯಲ್ಲಿ ಕೂಡಿಸುವ ಕಾರ್ಯ :***

ಐದನೇ ತಿಂಗಳಲ್ಲಿ ಭೂಮಿಯಲ್ಲಿ ಕೂಡಿಸಬೇಕು. ಮಂಗಳವಾರವಾದರೂ ಚಿಂತೆಯಿಲ್ಲ. ಮೊದಲು ವರಾಹನನ್ನು ಹಾಗೂ ಭೂಮಿಯನ್ನು ಪೂಜಿಸಬೇಕು. ಸಂಕಲ್ಪ ಪೂರ್ವಕ ಪುಣ್ಯಾಹ ಮಾಡಿ ಮಗುವನ್ನು ಮಣೆಯ ಮೇಲೆ ಕೂಡಿಸಬೇಕು. ವರಾಹ ಹಾಗೂ ಭೂಮಿಯುನ್ನು ಷೋಡಶೋಪಚಾರ ಪೂಜೆ ಮಾಡಿ ಪ್ರಾರ್ಥಿಸಬೇಕು. ಮಗುವಿನ ಮುಂದೆ ಐದಾರು ಧಾನ್ಯಗಳನ್ನು ಹರವಿ ಅದರ ಮೇಲೆ ಹೊಸ ವಸ್ತ್ರ ಹಾಸಿ ಮಗುವನ್ನು ಭೂಮಿಯಲ್ಲಿ ಕೂಡಿಸಬೇಕು.

ವರಾಹ ಹಾಗೂ ಭೂತಾಯಿಯನ್ನು ಹೀಗೆ ಪ್ರಾರ್ಥಿಸಬೇಕು.

**ರಕ್ಷೈನಾಂ ವಸುಧೇ ದೇವಿ ಸದಾ ಸರ್ವಗತಂ ಶುಭೇ ।**
**ಆಯುಃ ಪ್ರಮಾಣಂ ಸಕಲಂ ನಿಕ್ಷಿಪಸ್ವ ಹರಿಪ್ರಿಯೇ ॥**
**ಕುಮಾರಂ ಪಾಹಿ ಮಾತಸ್ತ್ವಂ ಬ್ರಹ್ಮಾ ತದನುಮನ್ಯತಾಮ್ ।**

- ***ಉಡುದಾರ ಕಟ್ಟುವುದು :***

ಭೂಮಿಯ ಪ್ರಾರ್ಥನೆಯ ನಂತರ ಮಗುವಿಗೆ ಸೊಂಟಕ್ಕೆ ಉಡುದಾರ ಕಟ್ಟಬೇಕು. ಇದರಿಂದ ಸೊಂಟ ನಿಲುತ್ತದೆ. ಕೆಲವರು ಅನ್ನಪ್ರಾಶನದಿಂದಲೇ ಭೂಮಿಯಲ್ಲಿ ಕೂಡಿಸುವ – ಉಡುದಾರ ಕಟ್ಟುವ ಸಂಸ್ಕಾರ ಮಾಡುವರು.

- ***ಅನ್ನಪ್ರಾಶನಮ್ :***

ಆರನೇ ತಿಂಗಳಲ್ಲಿ ಮಗುವಿಗೆ ಅನ್ನವನ್ನು ತಿನ್ನಿಸುವ ಸಂಸ್ಕಾರ ನಡೆಸಬೇಕು. ಇದರರ್ಥ ಆರು ತಿಂಗಳು ತಾಯಿಯ ಹಾಲನ್ನು ಬಿಟ್ಟು ಬೇರೇನನ್ನೂ ತಿನ್ನಿಸಬಾರದು. ತಾಯಿಯ ಹಾಲಲ್ಲಿ 96 ಮೂಲಿಕೆಗಳಿಂದ ಕೂಡಿರುವ ಔಷಧಾಂಶಗಳಿರುತ್ತವೆ. ಯಾವುದೇ ಕಾರಣಕ್ಕೂ ಮಗುವಿಗೆ ಹಾಲು ಕೊಡುವುದನ್ನು ನಿಲ್ಲಿಸಬಾರದು. ತಾಯಿಯ ಹಾಲನ್ನು ಕುಡಿಯುತ್ತಿದ್ದಷ್ಟು ಆರೋಗ್ಯ ಹಾಗೂ ಮಮತೆ ಹೆಚ್ಚುತ್ತದೆ. (ಬಾಟಲ್ ಹಾಲು ಒಂದು ವೈಪರೀತ್ಯ) ಸೌಂದರ್ಯ ಹೋಗುವುದೆಂದು ಕುಡಿಯುವ ಹಾಲನ್ನು ಕಿತ್ತುಕೊಳ್ಳುವ ತಾಯಿಯು ತಾಯಿಯಲ್ಲ.

ಹಲ್ಲು ಬಂದ ನಂತರವೂ ಅನ್ನಪ್ರಾಶನ ಮಾಡುವುದಿದೆ. ಅನ್ನಪ್ರಾಶನವೆಂದರೆ ಅನ್ನವನ್ನು ತಿನ್ನಿಸುವುದಲ್ಲ. ಜೇನುತುಪ್ಪ-ತುಪ್ಪ-ಮೊಸರು ಮಿಶ್ರಿತವಾದ ಪಾಯಸವನ್ನು ಬಂಗಾರದ ಉಂಗುರದಿಂದ ಅದ್ದಿ ತಿನ್ನಿಸುವುದು.

**ಮಧ್ವಾಜ್ಯ ದಧಿಸಂಯುಕ್ತಂ ಪ್ರಾಶಯೇತ್ ಪಾಯಸಂ ತು ವಾ ।**

- ***ಜೀವಿಕಾ ಪರೀಕ್ಷಾ :***

ಅನ್ನಪ್ರಾಶನವಾದ ಮೇಲೆ ಮಗುವಿನ ಮುಂದೆ ಜೀವನಕ್ಕೆ ಸಂಬಂಧಪಟ್ಟ ಪುಸ್ತಕ, ಸೌಟು, ವೈದ್ಯಕೀಯ, ತಾಂತ್ರಿಕ ಉಪಕರಣಗಳನ್ನು ಹರಡಿರಬೇಕು. ಯಾವ ವಸ್ತುವನ್ನು ಮೊದಲು ಮುಟ್ಟುವುದೋ ಅದರಲ್ಲಿಯೇ ಮುಂದೆ ಪರಿಣತಿ ಹೊಂದುವನೆಂದು ತಿಳಿಯಬೇಕು.

- ***ವರ್ಷಪೂರ್ತಿ :***

ಮಗುವಿಗೆ ಒಂದು ವರ್ಷ ತುಂಬಿದ ಕೂಡಲೇ ಮಾರ್ಕಂಡೇಯರನ್ನು ಭಕ್ತಿಯಿಂದ ಪೂಜಿಸಿ, ಅಶ್ವತ್ಥಾಮ, ಬಲಿ, ವ್ಯಾಸ, ರಾಮ, ದ್ರೌಣಿ–ಕೃಪರನ್ನು, ಪ್ರಹ್ಲಾದ, ಹನುಮಂತ, ವಿಭೀಷಣರನ್ನು ಭಕ್ತಿಯಿಂದ ಪೂಜಿಸಬೇಕು.

ತಂದೆ ಹಾಗೂ ಮಗುವು ಅಭ್ಯಂಜನ ಮಾಡಿ ನೂತನ ವಸ್ತ್ರಧರಿಸಿ, ದೇಶಕಾಲಾದಿ ಸಂಕಲ್ಪ ಮಾಡಿ ಶಿಶುವಿಗೆ ಆಯುರಾರೋಗ್ಯ ಸಿದ್ಧಿಸಲು ವರ್ಷ ತುಂಬಿದ ಪ್ರಯುಕ್ತ ಮಾಡುವ ಕೃತ್ಯಗಳನ್ನು ಮಾಡಬೇಕು. ಗಣೇಶ, ಮಾರ್ಕಂಡೇಯ, ಸೂರ್ಯ, ವ್ಯಾಸ, ಪರಶುರಾಮ, ಅಶ್ವತ್ಥಾಮ, ಕೃಪ–ಬಲಿ–ಪ್ರಹ್ಲಾದ – ಹನುಮಂತ – ವಿಭೀಷಣರನ್ನು, ನಕ್ಷತ್ರ ದೇವತೆಯನ್ನು, ಪ್ರಜಾಪತಿ – ಮಾರ್ಕಾಂಡೇಯ ಹೋಮ – ಸಪ್ತ ಚಿರಂಜೀವಿ ಹೋಮ – ನೃಸಿಂಹ ಹೋಮಗಳನ್ನು ಮಾಡಬೇಕು. ನಂತರ ಗೋರೋಚನ – ಗುಗ್ಗುಲ – ಬೇವು – ಸಾಸುವೆ– ದೂರ್ವೆಗಳನ್ನು ಬಟ್ಟೆಯಲ್ಲಿ ಸುತ್ತಿ ಮಗುವಿನ ಹಸ್ತದಲ್ಲಿ ಕಟ್ಟಿ ಹೀಗೆ ಪ್ರಾರ್ಥಿಸಬೇಕು.

**ಮಾರ್ಕಂಡೇಯ ಮಹಾಭಾಗ ಸಪ್ತಕಲ್ಪಾಂತ ಜೀವನ ।**
**ಆಯುರಾರೋಗ್ಯ ಸಿದ್ಧ್ಯರ್ಥಂ ಅಸ್ಮಾಕಂ ವರದೋ ಭವ ॥**

ಗುಡ – ತಿಲ – ಮಿಶ್ರಿತ ಹಾಲಿನ ಅರ್ಧ ಬೊಗಸೆ ಮಗುವಿಗೆ ಪ್ರಾಶನ ಮಾಡಿಸಬೇಕು.

- ***ಅಕ್ಷರಾಭ್ಯಾಸ :***

ಮಗುವಿನ ಐದನೇ ವರ್ಷದಲ್ಲಿ ಅಕ್ಷರಾಭ್ಯಾಸ ಮಾಡಿಸಬೇಕು. ಶ್ರೀಹರಿ, ಲಕ್ಷ್ಮೀ, ಸರಸ್ವತಿ, ಗಣಪತಿ, ವಿಷ್ಣುವನ್ನು ಸೂತ್ರಕಾರರಾದ ವೇದವ್ಯಾಸರನ್ನು ಆವಾಹಿಸಿ – ಪ್ರತಿಷ್ಠಾಪನ ಮಂತ್ರದಿಂದ ಸ್ಥಿರಗೊಳಿಸಿ ಪೂಜಿಸಬೇಕು. ಹೋಮವನ್ನು ಮಾಡಿ, ಅಗ್ನಿಯ ಉತ್ತರಭಾಗದಲ್ಲಿ ಪೂರ್ವಭಿಮುಖವಾಗಿ ಅಕ್ಷರಾಭ್ಯಾಸ ಮಾಡಿಸುವ ತಂದೆಯನ್ನು ಗಂಧಾದಿಗಳಿಂದ ಪೂಜಿಸಿ, ದೇವತೆಗಳಿಗೆ ನಮಸ್ಕರಿಸಿ ಮೂರು ಪ್ರದಕ್ಷಿಣೆ ಬಂದು ತಂದೆಯಭಿಮುಖವಾಗಿ ಕುಳಿತುಕೊಳ್ಳಬೇಕು. ಮುಹೂರ್ತಕ್ಕೆ ಸರಿಯಾಗಿ ಅಕ್ಕಿಯ ರಾಶಿಯಲ್ಲಿ ಓಂಕಾರದಿಂದ ಪ್ರಾರಂಭಿಸಿ, ಹೆಣ್ಣು ಮಗುವಾದರೆ ಶ್ರೀಕಾರಪೂರ್ವಕವಾಗಿ ಅಕ್ಷರಾಭ್ಯಾಸ ಮಾಡಿಸಬೇಕು. ಬ್ರಾಹ್ಮಣರಿಗೆ ದಕ್ಷಿಣೆ ನೀಡಿ ಆಶೀರ್ವಾದ ಪಡೆಯಬೇಕು.

- ***ವಿವಾಹ :***

ಹದಿನಾರು ಸಂಸ್ಕಾರಗಳಲ್ಲಿ ಕಡೆಯದು ವಿವಾಹ ಸಂಸ್ಕಾರ. ವಿವಾಹವಾದ ಪುರುಷರು ಗೃಹಸ್ಥಾಶ್ರಮ ಹೊಂದುವರು.

- ***ವಿವಾಹದ ಉದ್ದೇಶ :***

ವಿವಾಹವೆಂಬುದು ಕೇವಲ ಕಾಮೋಪಭೋಗಕ್ಕಾಗಿ ವಿಧಿಸಲಾಗಿರುವುದಿಲ್ಲ. ಮೈಥುನಾದಿ ಪ್ರಾಣಿ ಸಾಧಾರಣವಾಗಿದ್ದರೂ ದಾಂಪತ್ಯ ಜೀವನ ಸ್ಥಿರತೆ ತಂದು ಕೊಡಲು ವಿವಾಹ ಅಗತ್ಯವಾಗಿದೆ.

ಮಾನವನು ತಾನು ಜನ್ಮದೊಂದಿಗೆ ಮೂರು ಋಣಗಳಿಂದಲೇ ಜನಿಸಿರುತ್ತಾನೆ. ದೇವ–ಋಷಿ–ಪಿತೃಋಣಗಳಲ್ಲಿ ಪಿತೃ ಋಣ ತೀರುವುದು ಉತ್ತಮವಾದ ವಿವಾಹಿತ ಪತ್ನಿಯ ದ್ವಾರಾ – (ಪ್ರಜಯಾ ಪಿತೃಭ್ಯಃ) ವಿವಾಹದಿಂದಾಗಿ ಕಾಲಕ್ರಮೇಣ ಸಂಯಮವನ್ನು ಹೊಂದಿ ಸರ್ವತ್ಯಾಗಕ್ಕೂ ಅಣಿಯಾಗಬಲ್ಲ.

ಸಂತಾನೋತ್ಪತ್ತಿಯ ಮೂಲಕ ವಂಶದ ರಕ್ಷಣೆ– ಪಿತೃ ಋಣದ ಪರಿಹಾರವು ವಿವಾಹದಿಂದಲೇ ಸಾಧ್ಯವಾಗಿರುವುದು.

ವಿವಾಹವು ಒಂದು ಧಾರ್ಮಿಕ ಸಂಸ್ಕಾರವೆನಿಸಿದೆ. ಮೋಕ್ಷ ಹೊಂದಲು ಸೋಪಾನವೆನಿಸಿದೆ.

- ***ವಿವಾಹದ ಅವಶ್ಯಕತೆ :***

ಸ್ತ್ರೀಯರಿಗೆ ಉಪನಯನವನ್ನು ಕಲಿಯುಗದಲ್ಲಿ ನಿಷೇಧಿಸಲಾಗಿದೆ. ಸ್ತ್ರೀಯರಿಗೆ ವಿವಾಹವೇ ಉಪನಯನವು. ಆದ್ದರಿಂದಲೇ ***ಅಷ್ಟವರ್ಷಾಂ ಬ್ರಾಹ್ಮಣೀಂ ಉಪನಯೀತ*** ಎಂದಿದೆ.

ಉಪನಯನವೆಂದರೆ ಅಧಿಕವಾದ ಕಣ್ಣು. ಪತಿಯನ್ನು ಪತಿಬಾಂಧವರನ್ನು ನೋಡಿಕೊಳ್ಳಲು ಕಣ್ಣು ಚುರುಕುಗೊಳಿಸಬೇಕು. ಉಪನಯನವೆಂದರೆ ಗುರುವಿನ ಸಮೀಪಕ್ಕೆ ಒಯ್ಯುವುದು. ತಂದೆಯ ಮನೆಯಿಂದ ಪತಿಯ ಮನೆಗೆ ಒಯ್ಯುವುದು. ಉಪನಯನದ ಬ್ರಹ್ಮಸೂತ್ರಕ್ಕಿಂತಲೂ ಮಂಗಳಸೂತ್ರ ಶ್ರೇಷ್ಠವು. ಬ್ರಹ್ಮಸೂತ್ರವು ಆಶೌಚಾದಿಗಳಲ್ಲಿ ತೆಗೆದು ಬೇರೆ ಹಾಕಿಕೊಳ್ಳಬೇಕು. ಮಂಗಳಸೂತ್ರವನ್ನು ರಜಸ್ವಲೆಯಾದಾಗಲೂ ತೆಗೆಯುವುದಿಲ್ಲ. ಅಷ್ಟು ಮಡಿ.

ಉಪನೀತನು ಗುರುಕುಲವಾಸಕ್ಕೆ ಹೋದರೆ, ವಿವಾಹಿತಳು ತನಗೆ ಗುರು–

ದೈವ – ಸರ್ವಸ್ವವೂ ಆಗಿರುವ ಪತಿಯ ಸೇವೆಗಾಗಿ ಪತಿಯ ಮನೆಗೆ ಹೋಗವಳು. ಉಪನೀತನು ಅಗ್ನಿಕಾರ್ಯ ಮಾಡಿದರೆ ವಿವಾಹಿತಳು ಅಗ್ನಿಯಲ್ಲಿ ಆಹಾರ ತಯಾರಿಸಿ ನೈವೇದ್ಯಕ್ಕಾಗಿ ಇಡುವಳು.

**ಸ್ತ್ರೀಣಾಂ ಪ್ರಧಾನಕರ್ಮೈವ ಯಥೋಪನಯನಂ ತಥಾ ।**
**ವಿವಾಹೋ ಹೃಷ್ಟವರ್ಷಾಯಾಃ ಕನ್ಯಾಯಾಸ್ತು ಪ್ರಶಸ್ಯತೇ ॥** – *ಸಂವರ್ತ*

ಮನೆಯಿದ್ದ ಮಾತ್ರಕ್ಕೆ ಗೃಹಸ್ಥನಾಗಲಾರ. ಗೃಹಿಣಿಯಿಂದಲೇ ಗೃಹಸ್ಥನಾಗುವನು.

**ನ ಗೃಹೇಣ ಗೃಹಸ್ಥ ಸ್ಯಾದ್ ಭಾರ್ಯಯಾ ಕಥ್ಯತೇ ಗೃಹೀ ।**

- ***ವಿವಾಹಕ್ಕೆ ಯೋಗ್ಯ ವಧೂ–ವರರು :***

ಪುರುಷನು ತನ್ನ ಮುಂದಿನ ಜೀವನ ಸುಖಕರವಾಗಿರಬೇಕಾದರೆ ಕುರೂಪಿಯಾಗಿದ್ದರೂ ಒಳ್ಳೆಯ ಕುಲದಲ್ಲಿ ಹುಟ್ಟಿರುವ ಕನ್ಯೆಯನ್ನೇ ವಿವಾಹವಾಗಬೇಕು. ಸುರೂಪಿ ಸುಂದರಿಯಾಗಿದ್ದರೂ ಬೇರೆ ಕುಲದ ಕನ್ಯೆಯನ್ನು ತರಬಾರದು.

**ವರಯೇತ್ ಕುಲಜಾಂ ಪ್ರಾಜ್ಞೋ ವಿರೂಪಾಮಪಿ ಕನ್ಯಕಾಮ್ ।**
**ಸುರೂಪಾಂ ಸುನಿತಂಬಾಂ ಚ ನಾಕುಲೀನಾಂ ಕದಾಚನ ॥**
– *ಗರುಡ–110/5*

ಸಂಬಂಧಿಕರಲ್ಲಿ ವಿವಾಹವಾಗುವುದಾದರೂ ತಾಯಿಯ ಕಡೆಯಿಂದ ಐದು ತಲೆಬಿಟ್ಟು, ತಂದೆಯ ಕುಲದಲ್ಲಿ ಏಳು ತಲೆ ನಂತರವೂ ವಿವಾಹ–ವಾಗಬಹುದು. ಆದರೆ ಒಂದೇ ಗೋತ್ರದ ಹಾಗೂ ಒಂದೇ ಪ್ರವರದ ಕನ್ಯೆಯನ್ನು ವಿವಾಹವಾಗಬಾರದು.

**ಪಂಚಮೀಂ ಮಾತೃಪಕ್ಷಾಚ್ಚ ಪಿತೃಪಕ್ಷಾಚ್ಚ ಸಪ್ತಮೀಂ ।**
**ನ ಸಗೋತ್ರಾಂ ನ ಸಮಾನಪ್ರವರಾಂ ಭಾರ್ಯಾಂ ವಿಂದೇತ ॥**

ಸಗೋತ್ರ – ಪ್ರವರದ ಕನ್ಯೆಯನ್ನು ವಿವಾಹವಾದವನಿಗೆ ಗುರುತಲ್ಪಗಾಮಿತ್ವ ದೋಷವುಂಟಾಗುತ್ತದೆ.

ಅಜ್ಞಾನದಿಂದಾಗಿ ಸಗೋತ್ರ ವಿವಾಹವಾಗಿದ್ದರೆ ಅವಳೊಂದಿಗೆ ದೈಹಿಕ ವ್ಯವಹಾರವಿಟ್ಟುಕೊಳ್ಳದೆ ತಾಯಿಯಂತೆ ಪಾಲನೆ ಮಾಡಬೇಕು.

**ಭೋಗತಃ ತಾಂ ಪರಿತ್ಯಜ್ಯ ಪಾಲಯೇತ್ ಜನನೀರಿವ ॥**

ಬ್ರಾಹ್ಮಣನು – ಬ್ರಾಹ್ಮಣನ ಕನ್ಯೆಯನ್ನೇ ವಿವಾಹವಾಗಬೇಕು. ಕ್ಷತ್ರಿಯ ವೈಶ್ಯ, ಶೂದ್ರ, ಸ್ತ್ರೀಯರನ್ನಲ್ಲ. ಬ್ರಾಹ್ಮಣನು ಕ್ಷತ್ರಿಯ ವೈಶ್ಯರನ್ನು ವಿವಾಹವಾಗಿರುವುದು ಸಹ್ಯವಾದೀತು. ಆದರೆ ಬ್ರಾಹ್ಮಣನು ಶೂದ್ರ ಕನ್ಯೆಯನ್ನು ಮಾತ್ರ ಎಂತಹ ಸಂದರ್ಭದಲ್ಲಿಯೂ ವಿವಾಹವಾಗಬಾರದು.

**ನ ತು ಶೂದ್ರಾಂ ದ್ವಿಜಃ ಕಶ್ಚಿನ್ನಾಧಮಃ ಪೂರ್ವವರ್ಣಜಮ್ ।**
**ತಸ್ಯಂ ಜಾತಾಃ ಸುತಾಸ್ತೇಷಾಂ ಪಿತೃಪಿಂಡಂ ನ ವಿದ್ಯತೇ ॥**

*– ಅತ್ರಿ – 387*

ಅಣ್ಣ ವಿವಾಹ ನಂತರದಲ್ಲಿ ಆರು ತಿಂಗಳ ನಂತರವೆ ವಿವಾಹವಾಗಬೇಕು.

**ಪುತ್ರೋ ದ್ವಾಹತ್ ಪರಂ ಪುತ್ರೀವಿವಾಹೋ ನ ಋತುತ್ರಯೆ ।**

ಒಂದು ಮಂಗಳ ಕಾರ್ಯವಾದ ಮೇಲೆ ಇನ್ನೊಂದು ಮಂಗಳವನ್ನು ಆರು ತಿಂಗಳೊಳಗೆ ನಡೆದರೆ ಮೂರು ವರ್ಷದೊಳಗೆ ಇಬ್ಬರಲ್ಲಿ ಒಬ್ಬರು ವಿಧವೆಯಾಗುವುದು ನಿಶ್ಚಯ.

**ವಿವಹಶ್ಚೈಕಜನ್ಯಾನಾಮ ಷಣ್ಮಾಸಾಭ್ಯಂತರೇ ಯದಿ ।**
**ಅಸಂಶಯಂ ತ್ರಿಭಿರ್ವರ್ಷೈಃ ತತ್ರೈಕಾ ವಿಧವಾ ಭವೇತ್ ॥**

*– ನಾರದ–56/515–516*

- ***ಅದಲು ಬದಲು ವಿವಾಹ ನಿಷಿದ್ಧ :***

ತನ್ನ ಪುತ್ರನಿಗೆ ಮತ್ತೊಬ್ಬನ ಮಗಳನ್ನೂ, ತನ್ನ ಮಗಳಿಗೆ ಮತ್ತೊಬ್ಬನ ಪುತ್ರನನ್ನು ವಿವಾಹ ಮಾಡುವುದು ನಿಷಿದ್ಧವಾಗಿದೆ. ಹಾಗೂ ಒಬ್ಬನಿಗೆ ಇಬ್ಬರು ಹೆಣ್ಣು ಮಕ್ಕಳನ್ನು ಕೊಡುವುದೂ ನಿಷಿದ್ಧವೆ. ಒಂದೇ ಮನೆಯ ಅಣ್ಣತಮ್ಮಂದಿರಿಗೆ ಒಂದೇ ತಾಯಿಯ ಇಬ್ಬರು ಕನ್ಯೆಯನ್ನು ಕೊಡಬಾರದು. ಒಂದು ಮನೆಯಿಂದ ಒಂದು ಹೆಣ್ಣು ಮಾತ್ರ.

**ಪ್ರತ್ಯುದ್ವಾಹೋ ನೈವ ಕಾರ್ಯೋ ನೈಕಸ್ಮೈ ದುಹಿತೃದ್ವಯಮ್ ।**
**ನ ಚೈಕಜನ್ಯಯೋಃ ಪುಂಸೋರೇಕಜನ್ಯೇ ತು ಕನ್ಯಕೇ ॥**

*– ನಾರದ–29*

- ***ಜ್ಯೇಷ್ಠಪುತ್ರ – ಪುತ್ರೀ ವಿವಾಹ ನಿಷಿದ್ಧ :***

ಜ್ಯೇಷ್ಠ ಪುತ್ರನಿಗೂ ಜ್ಯೇಷ್ಠ ಪುತ್ರಿಗೂ ವಿವಾಹ ಕೂಡದು.

ಜ್ಯೇಷ್ಠ ಮಾಸದಲ್ಲಿ ಹುಟ್ಟಿದವರಿಗೆ ಜ್ಯೇಷ್ಠಮಾಸದಲ್ಲಿ ವಿವಾಹ ನಿಷಿದ್ಧ.

**ನೈವೋದ್ವಾಹೋ ಜ್ಯೇಷ್ಠಪುತ್ರೀಪುತ್ರಯೋಶ್ಚ ಪರಸ್ಪರಮ್ ।**
**ಜ್ಯೇಷ್ಠಮಾಸಜಯೋರೇಕ ಜ್ಯೇಷ್ಠೇ ಮಾಸೇ ಹಿ ನಾನ್ಯತಾ ॥**

*– ನಾ–29/8*

ಜನ್ಮಮಾಸ – ಜನ್ಮನಕ್ಷತ್ರ – ಜನ್ಮದಿವಸದಂದು ವಿವಾಹ ಮಾಡಬಾರದು. ಇದು ಮೊದಲ ಸಂತಾನಕ್ಕೆ ಮಾತ್ರ ಹೇಳಿರುವಂತಹುದು.

**ನ ಜನ್ಮಮಾಸೇ ಜನ್ಮರ್ಕ್ಷೇ ನ ಜನ್ಮ ದಿವಸೇಽಪಿ ವಾ ।**
**ನಾದ್ಯಗರ್ಭಸುತಸ್ಯಾಥ ದುಹಿತುರ್ವಾ ಕರಗ್ರಹಮ್ ॥**

*– ನಾರದ 29/7*

ಸ್ತ್ರೀಯರಿಗೆ ಜನ್ಮದಿಂದ ಸಮ ವರ್ಷದಲ್ಲಿಯೂ, ಪುರುಷನಿಗೆ ಜನ್ಮತಃ ವಿಷಮ ವರ್ಷದಲ್ಲಿ ವಿವಾಹ ಶುಭವಾಗಿರುತ್ತದೆ. ವ್ಯತ್ಯಾಸ ಮಾಡಿದರೆ ಮೃತ್ಯುವು.

- ***ಧರ್ಮ ಮಾಡಲು ಪತ್ನಿಯ ಅಗತ್ಯ :***

ಗೃಹಸ್ಥನು ಧರ್ಮಾದಿ ಪುರುಷಾರ್ಥ ಪಡೆಯಲು ಹಾಗೂ ದೇವಋಣ – ಋಷಿಋಣ– ಪಿತೃಋಣಗಳನ್ನು ತೀರಿಸಲು ಭಾರ್ಯೆಯೊಂದಿಗೆ ಸಾಧ್ಯ.

ದೇವ ಋಣವನ್ನು ಯಜ್ಞಯಾಗಾದಿಗಳಿಂದ ತೀರಿಸಬೇಕು. ಪತ್ನಿಯಲ್ಲ ಯಜ್ಞಾಧಿಕಾರವಿರುವುದಿಲ್ಲ. ***"ಪತ್ಯುರ್ನೋಽಯಜ್ಞಸಂಯೋಗೇ"*** ಎಂಬ ಸೂತ್ರ ಇದನ್ನು ವಿವರಿಸುತ್ತದೆ.

ವಿವಾಹದಿಂದಾಗಿ ಸತ್ಪ್ರಜೆಗಳು ಜನಿಸಿದಾಗ ಪಿತೃಋಣದಿಂದ ಮುಕ್ತನಾಗ– ಬಹುದು.

**ಯಜ್ಞೇನ ದೇವಋಣಂ, ಪ್ರಜಾಭ್ಯಃ ಪಿತೃಋಣಂ ।**
**ಅಯಜ್ಞೋ ವಾ ಏಷ ಯೋಽಪತ್ನೀಕಃ ॥** *–ತೈ.ಬ್ರಾ. 3/2*

ಸ್ತ್ರೀಯರಿಗೂ ಸಹ ವಿವಾಹ ಸಂಸ್ಕಾರವಾಗದೆ ಎಷ್ಟೇ ಸಾಧನೆ ಮಾಡಿದರೂ

ಉತ್ತಮ ಲೋಕಗಳಿರುವುದಿಲ್ಲವೆಂದು ಕುಣಿಗಾರ್ಗ್ಯನ ಮಗಳಿಗೆ – ನಾರದರು ಉಪದೇಶ ಮಾಡಿರುವರು. ಅವಳಾದರೂ ಶೃಂಗವಾನ್‌ನನ್ನು ವಿವಾಹವಾಗಿ ಪತಿಸೇವೆ ಮಾಡಿ, ಧರ್ಮಗಳನ್ನು ಆಚರಿಸಿ ಸದ್ಗತಿ ಹೊಂದಿದಳು.

**ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಃ ತವಾನಘೇ ।**

(ವಿವಾಹ ಸಂಸ್ಕಾರವಾಗದ ನಿನಗೆ ಸದ್ಗತಿ ಹೇಗಾಗುತ್ತದೆಯಮ್ಮಾ!)

- ***ಕನ್ಯೆ ಹೇಗಿರಬೇಕು?***

ರೂಪವಂತಳಲ್ಲದಿದ್ದರೂ ಕುಲದಲ್ಲಿ ಹುಟ್ಟಿದ ಕನ್ಯೆಯನ್ನು ತರಬೇಕು. ಕುಲಹೀನಳಾದವಳು ಎಷ್ಟೇ ಸುಂದರಿಯಾಗಿದ್ದರೂ ವಿವಾಹವಾಗಬಾರದು.

**ವರಯೇತ್ ಕುಲಜಾಂ ಪ್ರಾಜ್ಞೋ ವಿರೂಪಾಮಪಿ ಕನ್ಯಕಾಮ್ ॥**
– *ಗ.ಪು.*

**'ಅನನ್ಯಪೂರ್ವಾಂ ಅಸಪಿಂಡಾಂ ಯವೀಯಸೀಂ ಅರೋಗಿಣೀಂ ಭ್ರಾತೃಮತೀಂ ಅಸಮಾನಾರ್ಷಗೋತ್ರಾಂ ಉದ್ವಹೀತ'**

ಒಂದೇ ಗೋತ್ರದ, ಒಂದೇ ಪ್ರವರವಿರುವವಳನ್ನು ವಿವಾಹವಾಗಬಾರದು. ತಾಯಿಯಿಂದ ಐದನೇಯವಳು, ತಂದೆಯಿಂದ ಏಳನೆಯವಳಾದವಳನ್ನು ವಿವಾಹವಾಗಬಹುದು.

**ಪಂಚಮಾತ್ ಸಪ್ತಮಾದೂರ್ಧ್ವಂ ಮಾತೃತ್ವಃ ಪಿತರಥಸ್ತಥಾ ॥**
– *ಯಜ್ಞ – 1/53*

ಸಮಾನಗೋತ್ರದವಳನ್ನು ವಿವಾಹವಾದರೆ ಗುರುಪತ್ನಿಯನ್ನು ಭೋಗಿಸಿದ ಪಾಪಕ್ಕೆ ಗುರಿಯಾಗುವನು.

- ***ಕನ್ಯೆಯ ಗುಣಗಳು :***

ಬಂಧು ಬಾಂಧವರಿರುವ, ಮತ್ತೊಬ್ಬರಿಂದ ಭೋಗಿಸಲ್ಪಡದ, ಸಮಾನ ಜಾತಿಯವಳಾದ, ಸಮಾನ ಗೊತ್ರಪ್ರವರದವಳಲ್ಲದ, ಚಿಕ್ಕವಳಾದ ಋತುಮತಿಯಲ್ಲದ – ಕುಚೋತ್ಥಾನ ಹೊಂದಿರದ ನಗ್ನಿಕಾ ಕನ್ಯೆಯು ಯೋಗ್ಯಳು.

**ಅವ್ಯಂಗಾಂನೀಂ ಸೌಮ್ಯನಾಮ್ನೀಂ ಹಂಸವಾರಣಗಾಮಿನೀಮ್ ।**
**ತನುಲೋಮ ಕೇಶದಶನಾಂ ಮೃದ್ವಂಗೀಮುದ್ವಹೇತ್ ಸ್ತ್ರೀಯಮ್ ॥**

- ***ಐದು ಲಕಾರವಿರುವ ಲಲನೆ :***

**ಅನುಕೂಲ–ವಿಮಲ–ಕುಲಜ, ಸುಶೀಲಾ–ಕುಶಲಾಂ ಕನ್ಯಾಮುದ್ವಹೀತ।**
**ಪಂಚಲಕಾರಾಂ ಭಾರ್ಯಾಂ ಪುರುಷೋ ಆದಧೀತ ॥** – *ಸಂಗ್ರಹ*

- ***ನಾರಿಯರ ಭೂಷಣ :***

ಕ್ಷಮೆ, ಪ್ರೇಮ, ಉದಾರತೆ, ನಿರಭಿಮಾನತೆ, ವಿನೀತತೇ, ಕಷ್ಟಸಹಿಷ್ಣುತೆ, ಶಾಂತಿ, ಧೈರ್ಯ, ಪರದುಃಖಕಾತರತೆ, ಸತ್ಯತೆ, ಸೇವಾಭಾವ, ಅಹಿಂಸೆ, ಬ್ರಹ್ಮಚರ್ಯೆ, ಶೀಲ, ಪತಿಭಕ್ತಿ ಇವುಗಳು ನಾರಿಯಲ್ಲಿರಬೇಕಾದ ಭೂಷಣಗಳು, ಲಜ್ಜೆಯು ಅತ್ಯಂತ ಶ್ರೇಷ್ಠಭೂಷಣ. ಇವುಗಳಿಗೆ ವಿರುದ್ಧವಾದ ಗುಣಗಳೆಲ್ಲ ನಾರಿಗೆ ದೂಷಣವೆನಿಸುತ್ತದೆ. ಪದ್ಮಪುರಾಣವು ಗುಣ, ಶೀಲ, ಸತ್ಯ, ಋಜುತ್ವ, ಧರ್ಮ, ಮಧುರತೆ, ಶುದ್ಧತೆ ಸ್ತ್ರೀಯರ ಭೂಷಣಗಳೆಂದಿದೆ.

- ***ಸ್ತ್ರೀಯರಿಗೆ ವಿವಾಹವೇ ಉಪನಯನ :***

**ಸ್ತ್ರೀಣಾಂ ಪ್ರದಾನ ಕರ್ಮೇವ ಯಥೋಪನಯನಂ ತಥಾ ।**

ಎಂದು ಶಾಸ್ತ್ರದಲ್ಲಿ ಉಲ್ಲೇಖಿತವಾಗಿದ್ದರೂ ವೇದಮಂತ್ರಗಳನ್ನು ಪಠಿಸಬಾರದು. ಅನುಪನೀತರು ಸಹ ವೇದಗಳನ್ನು ಪಠಿಸಬಾರದು.

**ಸ್ತ್ರೀ ಶೂದ್ರೋಽನುಪನೀತಶ್ಚ ವೇದಮಂತ್ರಾನ್ ವಿವರ್ಜಯೇತ್ ।**

- ***ಸ್ತ್ರೀಯ ವಿವಾಹ ಕಾಲ :***

ಸ್ತ್ರೀಯು ತನ್ನ ಹನ್ನೆರಡನೆ ವಯಸ್ಸಿನಲ್ಲಿ ಸಾಮಾನ್ಯವಾಗಿ ರಜಸ್ವಲೆಯಾಗುವಳು. ಹೀಗೆ ವಿವಾಹವು ಅವಶ್ಯಕವೆಂದಾದ ಮೇಲೆ ವಿವಾಹ ಮಾಡುವ ಕಾಲವನ್ನು ಶಾಸ್ತ್ರ ತಿಳಿಸಿದೆ. ಎಂಟು ವರ್ಷದ ಕನ್ಯೆಯನ್ನು 'ಕನ್ಯೆ'ಯೆಂದು, ಒಂಭತ್ತು ವರ್ಷದ ಕನ್ಯೆಯನ್ನು 'ರೋಹಿಣೀ' ಎಂದೂ, ಹತ್ತು ವರ್ಷದವಳನ್ನು 'ಗೌರೀ' ಎಂದು ಶಾಸ್ತ್ರ ತಿಳಿಸಿದೆ. ಹತ್ತು ವರ್ಷದ ನಂತರದ ಕನ್ಯೆಯರು 'ರಜಸ್ವಲೆ' ಎನಿಸುವಳು.

**ಅಷ್ಟವರ್ಷಾಭವೇತ್ ಕನ್ಯ ನವವರ್ಷಾ ತು ರೋಹಿಣೀ ।**
**ದಶವರ್ಷಾ ಭವೇದ್ ಗೌರೀ ಅತ ಊರ್ಧ್ವಟ ರಜಸ್ವಲಾ ॥**

ಕನ್ಯೆಯು ರಜಸ್ವಲೆಯಾಗುವ ಮೊದಲೇ ಕನ್ಯಾದಾನ ಮಾಡಬೇಕೆಂಬ

ನಿಯಮವಿದೆ. ಆ ವಯಸ್ಸು ಮೀರಿದ ಕನ್ಯೆಯು 'ವೃಷಲೀ' ಎನಿಸುವಳು. ಅವಳನ್ನು ವಿವಾಹವಾದ ಪತಿಯು 'ವೃಷಲೀಪತಿ' ಎನಿಸಿ, ಕಸರ್ವಹವ್ಯಕವ್ಯಗಳನ್ನು ಗರ್ಹಿತನಾಗುವನು.

**ಪಿತುರ್ಗೃಹೇ ತು ಯಾ ಕನ್ಯಾ ರಜಃ ಪಶ್ಚತ್ಯಸಂಸ್ಕೃತಾ ।**
**ಸಾ ಕನ್ಯಾ ವೃಷಲೀ ಜ್ಞೇಯಾ ತತ್ಪತಿಃ ವೃಷಲೀಪತಿಃ ॥**

ವೃಷಲೀತ್ವವನ್ನು ಪರಿಹರಿಸುವ ಮಾರ್ಗ ಶಾಸ್ತ್ರದಲ್ಲಿದೆ.

ಕನ್ಯೆಯು ವಿವಾಹದ ಪೂರ್ವದಲ್ಲಿಯೇ ಮೂರು ದಿನ ಉಪ್ಪನ್ನು ಸೇರಿಸದ ಆಹಾರ ಪದಾರ್ಥವನ್ನು ತಿನ್ನುತ್ತಾ 'ಅಲವಣ' ವ್ರತ ಮಾಡಿದರೆ ದೋಷವಿರುವುದಿಲ್ಲ.

ವೃಷಲೀಪತಿಯಾದರೂ 'ಕೂಷ್ಮಾಂಡ ಹೋಮ' ಮಾಡಿದರೆ ಪ್ರಾಯಶ್ಚಿತ್ತವು.

ತೈತ್ತರೀಯ ಅರಣ್ಯದಲ್ಲಿ ಬರುವ ವಾತರಶನದಿಂದ ಕಂಡುಕೊಂಡ ದ್ವಿಸಪ್ತತಿ (72) ಮಂತ್ರಗಳೇ ಕೂಷ್ಮಾಂಡ ಮಂತ್ರಗಳು. ಈ ಮಂತ್ರಗಳಿಂದ ಹೋಮ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

ವೃಷಲೀತ್ವ ಪರಿಹರಿಸುವ ಮತ್ತೊಂದು ಮಾರ್ಗವೂ ಇದೆ. ತುಲಸೀ ವಿವಾಹದ ದಿವಸವಾಗಲೀ ಅಥವಾ ಪಂಚಾಂಗ ಶುದ್ಧಿಯಿರುವ ದಿನದಂದು ಕುಲದೇವತೆಯಾದ ಶ್ರೀನಿವಾಸನಿಗೆ ಮಗಳನ್ನು ನೀಡುವುದು. ಶ್ರೀನಿವಾಸಕಲ್ಯಾಣವನ್ನು ಶ್ರವಣ ಮಾಡಿ ತಾಯಿಯು ತನ್ನ ಕೈಯಿಂದಲೇ ತನ್ನ ಮಗಳನ್ನು ಶ್ರೀನಿವಾಸನಿಗೆ ಕನ್ಯಾದಾನ ಮಾಡಿ, ಲಕ್ಷ್ಮೀ ಚಿಹ್ನೆ ಇರುವ ಮಾಂಗಲ್ಯದ ಕಾಸನ್ನು ಶ್ರೀನಿವಾಸನಿಗೆ ಮುಟ್ಟಿಸಿ ತಾಯಿಯೇ ಮಗಳ ಕೊರಳಿಗೆ ಕಟ್ಟುವುದು.

ಋತುಕಾಲ ಹೊಂದುವ ಮೊದಲೇ ಕನ್ಯೆಗೆ ತಂದೆಯು ವಿವಾಹ ಮಾಡಬೇಕು. ಋತುಮತಿಯಾಗಿ ವಿವಾಹ ಸಂಸ್ಕಾರ ಹೊಂದಿದರೆ ಭ್ರೂಣಹಿಂಸ ಪಾಪವು ತಂದೆಗೆ ಪ್ರಾಪ್ತವಾಗುತ್ತದೆ.

**ಋತುಮತ್ಯಾಂ ಹಿ ತಿಷ್ಠಂತ್ಯಾಂ ದೋಷಃ ಪಿತರಮೃಚ್ಛತಿ ।**

ರಜಸ್ಸು ಹೊರಹೊಮ್ಮುವುದು ದೇಶಕಾಲಾದಿ ಭೇದದಿಂದ ಭಿನ್ನವಾದರೂ ರಜೋದರ್ಶನಕ್ಕಿಂತ ಮೊದಲೇ ಸ್ತನಗಳ ವೃದ್ಧಿಯಾಗಿರುವುದನ್ನು ನೋಡಿ ವಿವಾಹ ಮಾಡಬೇಕು.

**ತಸ್ಮಾದ್ ವಿವಾಹಯೇತ್ ಕನ್ಯಾಂ ಯಾನ್ನರ್ತುಮತೀ ಭವೇತ್ ।**
**ವಿವಾಹೋ ಹೃಷ್ಟವರ್ಷಾಯಾಃ ಕನ್ಯಾಯಸ್ತು ವಿಧೀಯತೇ ॥** –*ಸಂವರ್ತ*

- ***ವಿವಾಹ ವರ ಯೋಗ್ಯತೆ :***

ವಿತ್ತ, ರೂಪ, ವಿದ್ಯಾ, ಪ್ರಜ್ಞೆ, ಬಾಂಧವರಿರುವ ವರನು ವಿವಾಹ ಯೋಗ್ಯನಾಗಿರುತ್ತಾನೆ. ಕನ್ಯೆಯ ತಂದೆಯು ಈ ಐದನ್ನೂ ನೋಡಿ ಮಗಳನ್ನು ಕೊಡಬೇಕು. ಇವುಗಳಲ್ಲಿ ಧನವಿಲ್ಲದಿದ್ದರೂ ಪರವಾಯಿಲ್ಲ, ರೂಪವಿಲ್ಲದಿದ್ದರೂ, ವಿದ್ಯೆಯಿಲ್ಲದಿದ್ದರೂ, ಪ್ರಜ್ಞೆಯಿದ್ದರೆ ವಧುವನ್ನು ನೀಡಬಹುದು.

- ***ವರನ ಏಳು ಗುಣ :***

**ಕುಲ ಚ ಶೀಲ ಚ ವಯಶ್ಚ ರೂಪಂ ವಿದ್ಯಾಂ ಚ ವಿತ್ತಂ ಚ ಸನಾಥತಾಂ। ಏತಾನ್ ಗುಣಾನ್ ಸಪ್ತ ಪರೀಕ್ಷ್ಯ ದೇಯಾ ಕನ್ಯಾಬುದ್ಧೈಃ ಶೇಷಮಚಿಂತನೀಯಮ್ ॥**

- ***ಪುರುಷನ ವಿವಾಹ ಸಾರ್ಥಕತೆ :***

ಜರತ್ಕಾರವು ತಮ್ಮ ಪಿತೃಗಳು ಅಧೋಗತಿ ಬೀಳುತ್ತಿದ್ದದ್ದನ್ನು ಅವರಿಂದಲೇ ತಿಳಿದು ವಿವಾಹವಾಗಿ ಅವನ ಹೆಸರೇ ಇರುವ ಕನ್ಯೆಯನ್ನು ವಿವಾಹವಾಗಿ ಪಿತೃಗಳನ್ನುದ್ಧರಿಸಿದನು.

- ***ಗೃಹಸ್ಥಾಶ್ರಮದಿಂದ ಅಭಯ ದಾನ :***

ಗೃಹಸ್ಥಾಶ್ರಮಿ ಮಾತ್ರ ಯತಿಗಳಿಗೆ ಭಿಕ್ಷೆ ನೀಡಬಹುದು.

ಬ್ರಹ್ಮಚಾರಿಗೆ ಗೃಹಿಣಿಯು ಭಿಕ್ಷೆ ಹಾಕುವಳು.

ಅತಿಥಿ – ಅಭ್ಯಾಗತ ಸೇವೆ ಗೃಹಸ್ಥನಿಂದಲೇ ಸಾಧ್ಯ.

ಅಗ್ನಿಹೋತ್ರಾದಿ ಹೋಮಗಳು – ವೈಶ್ವದೇವಾದಿಗಳು ಮಾಡುವುದು ಗೃಹಸ್ಥನಾದಾಗಲೇ ಸಾಧ್ಯ. ಇದರಿಂದ ಸ್ವರ್ಗಾದಿ ಉತ್ತಮಲೋಕ ಪ್ರಾಪ್ತಿ. ಪಿತೃಗಳ ತಾರಣ ವಿವಾಹ ಫಲವೆಂದು ಮುನಿಗಳು ತಿಳಿಸಿದ್ದಾರೆ.

**ಪತ್ನ್ಯಾ ಸಹಾಗ್ನಿ ಹೋತ್ರಾದಿ ತಸ್ಯ ಸ್ವರ್ಗಫಲಂ ಸ್ಫುಟಮ್ ।**
**ಬ್ರಾಹ್ಮಾದ್ಯುದ್ವಾಹ ಸಂಭೂತಃ ಪಿತೃಣಾಂ ತಾರಕಃ ಸುತಃ ॥**
**ವಿವಾಹಸ್ಯ ಫಲಂ ತ್ವೇತತ್ ವ್ಯಾಖ್ಯಾತಂ ಪರಮರ್ಷಿಭಿಃ ।**

ಧರ್ಮಾರ್ಥ ಕಾಮಗಳನ್ನು ಹೊಂದಲು ಹೊರಟಿರುವ ಪುರುಷನಿಗೆ ಸಹಾಯ ಮಾಡುವವಳು ಸಹಧರ್ಮಿಣೀ.

**ಧರ್ಮಾಥಕಾಮಮೋಕ್ಷೇಷು ಭಾರ್ಯಾ ಪುಂಸಃ ಸಹಾಯಿನೀ ।**

- ***ಪತ್ನಿಯ ಪತಿಸೇವೆ – ವಿಷ್ಣು ಪೂಜೆ :***

ಕೈ ಹಿಡಿದ ಪತ್ನಿಯೂ ಸಹ ಇದೊಂದು ನನ್ನ ಕರ್ಮ ಎಂದು ತೆಗಳದೆ ಪತಿ, ಪುತ್ರಿ, ಅತ್ತೆ ಮಾವಂದಿರನ್ನು ವಿಷ್ಣುಪೂಜೆ ಎಂದು ತಿಳಿದು ಶ್ರದ್ಧಾಭಕ್ತಿಯಿಂದ ಸೇವಿಸಬೇಕು.

ಪತಿಯನ್ನು ವಿಷ್ಣುವಿನ ಪ್ರತಿಮೆಯೆಂದು ತಿಳಿದು ಪತಿಯನ್ನು ಕಾಲಕಾಲಕ್ಕೆ ಬೇಸರಿಸದೆ ಉಪಚರಿಸುತ್ತಿರಬೇಕು.

ಹೀಗೆ ಸ್ವಧರ್ಮನಿಷ್ಠಳಾದ ಪತ್ನಿಯಲ್ಲಿ ಹುಟ್ಟಿದ ಮಕ್ಕಳಿಂದ ವಿವಾಹಿ ಸ್ತ್ರೀ ಹಾಗೂ ತನ್ನ ಮೇಲಿನ ದಶಕುಲಗಳು, ತನ್ನ ನಂತರದ ಹತ್ತು ಕುಲಗಳೂ ಹೀಗೆ ಇಪ್ಪತ್ತೊಂದು ಕುಲ ಉದ್ಧಾರವಾಗುತ್ತದೆ.

**ದಶಪೂರ್ವಾನ್, ದಶಪರಾನ್ ಆತ್ಮನಶ್ಚೇತ್ಯಕವಿಂಶತಿ ಕುಲಾನ್ ಉದ್ಧರ್ತುಮ್ ।**

ಎಂದು ಸಂಕಲ್ಪದಲ್ಲಿ ಹೇಳಲಾಗುತ್ತದೆ.

- ***ಭಾರ್ಯಾ ಭರ್ತೃಗಳ ಅನ್ಯೋನ್ಯತೆ :***

ಯಾವ ಗೃಹದಲ್ಲಿ ಭರ್ತೃ – ಭಾರ್ಯೆಯರು ಅನ್ಯೋನ್ಯವಾಗಿ ಸಂತೋಷದಿಂದಿರುವರೋ ಆ ಮನೆಯಲ್ಲಿ ನಿತ್ಯವೂ ಕಲ್ಯಾಣವೇ.

**ಯತ್ರ ತುಷ್ಯತಿ ಭರ್ತ್ರಾ ಸ್ತ್ರೀ ಸ್ತ್ರೀಯಾ ಭರ್ತಾ ಚ ತುಷ್ಯತಿ ।**
**ತತ್ರ ವೇಶ್ಮನಿ ಕಲ್ಯಾಣಂ ಸಂಪದ್ಯೇತ ಪದೇ ಪದೇ ॥**

*– ಸ್ಕಾಂ. ಕಾ. –40/60*

ಯಾರ ಪಾಕವು ತನಗಾಗಿ ಮಾತ್ರವೋ ಯಾರ ಮೈಥುನವು ಕೇವಲ ಸಂತೋಷಕ್ಕಾಗಿಯೇ ಅವನ ಜೀವನ ವ್ಯರ್ಥವು.

**ಆತ್ಮಾರ್ಥಂ ಭೋಜನಂ ಯಸ್ಯ ರತ್ಯರ್ತಂ ಯಸ್ಯ – ಮೈಥುನಂ ।**
**ನಿಷ್ಫಲಂ ತಸ್ಯ ಜೀವಿತಂ – ಕೂರ್ಮ ॥** *–ಉ.–19/18*

ಯಾರ ಮನೆಯಲ್ಲಿರುವ ವಸ್ತುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವುವೋ ಪಾತ್ರೆಗಳು ಭಿನ್ನವಾಗಿರುವ ಹರಿದಿರುವ ಚಾಪೆ ಮೊದಲಾದವು ಸ್ತ್ರೀಯರಿಗೆ ಗೌರವವಿಲ್ಲದೆ ಕಣ್ಣೀರಿಗೆಡೆಯಾದ ಮನೆಯಲ್ಲಿ ನಡೆಯುವ ಪೂಜಾದಿಗಳು ಪಿತೃ–ದೇವತೆಗಳು ಸ್ವೀಕರಿಸುವುದಿಲ್ಲ. ಪಾತ್ರೆಗಳು ಒಡೆದು ತೂತಾಗಿದ್ದರೆ ಕಲಿಯ ಸಂಕೇತವಾದರೆ, ಮುರಿದ ಮಂಚವು ಧನಕ್ಷಯದ ಸೂಚಕ.

**ಭಿನ್ನಬಾಂಡೆ ಕಲಿಂ ಪ್ರಾಹುಃ ಖಟ್ವಾಯಾಂ ಧನಕ್ಷಯಃ ॥** – ಅನು

ಪತ್ನಿಯು ಪತಿಗೆ ಅನುಕೂಲವಾದ ಸಣ್ಣ–ದೊಡ್ಡದಾದ ಇಚ್ಛೆಗಳನ್ನು ಪೂರೈಸುತ್ತಾ, ವಿನಯದಿಂದಲೂ, ಇಂದ್ರಿಯ ನಿಗ್ರಹದಿಂದಲೂ ಸತ್ಯವೂ ಪ್ರಿಯವೂ ಆಗಿರುವ ಮೃದು ಮಧುರ ವಾಕ್ಯಗಳಿಂದ ಪ್ರೇಮದಿಂದಲೂ ಆಯಾಯ ಕಾಲದಲ್ಲಿ ಪತಿಯನ್ನು ಸೇವಿಸಬೇಕು.

**ಕಾಮೈರುಚ್ಚಾವಚೈಃ ಸಾಧ್ವೀಃ ಪ್ರಶ್ರಯೇಣ ದಮೇನ ಚ ।**
**ವಾಕ್ಯೈಃ ಸತ್ಯೈಃ ಪ್ರಿಯೈಃ ಪ್ರೇಮ್ಣಾ ಕಾಲೇ ಕಾಲೇ ಭಜೇತ್ ಪತಿಮ್ ॥**

- ***ಪತಿಯ ಉಚ್ಛಿಷ್ಟ ಭೋಜನ :***

ಪತಿಯ ಭೋಜನವಾದ ಮೇಲೆ ಅವನು ಭುಂಜಿಸಿದ ಎಲೆಯಲ್ಲಿಯೇ ಹೋಮಶೇಷವೆಂದು ಸಾಧ್ವಿಯು ತಿನ್ನಬೇಕು. ಕೇವಲ ಭೋಜನವನ್ನು ಮಾತ್ರ, ಯಾವುದೇ ರೀತಿಯ ಹಣ್ಣು–ಹಾಲು ಮೊದಲಾದವುಗಳನ್ನು ಪತಿಗೆ ನೀಡಿ ನಂತರ ಅವನಿಂದಲೇ ಸ್ವೀಕರಿಸಿ ಭುಂಜಿಸಬೇಕು.

**ಸೇವೇತ ಭರ್ತುರುಚ್ಛಿಷ್ಟಂ ಇಷ್ಟಮನ್ನಂ ಫಲಾದಿಕಮ್ ।**

ತೀರ್ಥಸ್ನಾನ ಮಾಡಬೇಕೆಂಬ ಹಂಬಲವುಳ್ಳ ಸಾಧ್ವಿಯು ಪತಿಯ ಪಾದಗಳನ್ನು ತೊಳೆದು ಪತ್ಯಂತರ್ಗತ ವರಾಹದೇವನ ಪಾದೋದಕವೆಂದು ಸ್ವೀಕರಿಸಬೇಕು.

**ತೀರ್ಥಸ್ನಾನಾರ್ಥಿನೀ ನಾರೀ ಪತಿ ಪಾದೋದಕಂ ಪಿಬೇತ್ ।**

ದ್ವಾರದಲ್ಲಿ ಕುಳಿತು ಬಹಳ ಕಾಲ ಹರಟೆ ಹೊಡೆಯುವುದು. ಅಸತ್‌ಪ್ರಲಾಪ – ಹಾಸ್ಯ – ಮತ್ತೊಬ್ಬರನ್ನು ನಿಂದಿಸುವುದು – ಕುಲಸ್ತ್ರೀಯರಿಗೆ ಯೋಗ್ಯವಲ್ಲ. ಕಿಟಕಿಯ ಮೂಲಕ ಹೊರಗೆ ಪರಪುರುಷರನ್ನು ನೋಡುವುದು ಇತ್ಯಾದಿ ನಿಷಿದ್ಧವು.

- ***ಪುರಾಣ ಶ್ರವಣ – ಪಠನ :***

ಸ್ತ್ರೀಯರು ಪುರಾಣ ಶ್ರವಣವನ್ನು ಮಾಡುತ್ತಿರಬೇಕು. ಬಿಡುವಿನ ವೇಳೆಯಲ್ಲಿ ಪುರಾಣವನ್ನು ಓದುತ್ತಿರಬೇಕು. ಕಲಿಯುಗದಲ್ಲಿ ಅದೊಂದೇ ತಾರಕವಾಗಿದೆ.

**ಕಲೌ ಯುಗೇ ವಿಶೇಷೇಣ ಪುರಾಣಶ್ರವಣಾದೃತೇ ।**
**ನಾಸ್ತಿ ಧರ್ಮಃ ಪರಃ ಪುಣ್ಯಂ ನಾಸ್ತಿಕ ಮುಕ್ತಿಕರಃ ಪಥಃ ॥** – *ಅತ್ರಿಸಂಹಿತೆ*

ಮುಹೂರ್ತವಾದರು ದಿನದಲ್ಲಿ ಶ್ರವಣವಾಗಬೇಕು.

**ಸದಾऽಶಕ್ತಃ ಸದಾ ಶ್ರೋತುಂ ಕಥಾಂ ಪೌರಾಣಿಕೀ ನರಃ ।**
**ಮುಹೂರ್ತಂ ವಾऽಪಿ ಶೃಣುಯಾನ್ನಿಯತಾತ್ಮಾ ದಿನೇ ದಿನೇ ॥**
– *ಸ್ಕಾಂದ – ಉ*

ಪ್ರತಿದಿನವೂ ಕೇಳಲು ಅಶಕ್ತಳಾದ ಸ್ತ್ರೀಯು ಪ್ರೋಷ್ಠಪದಿಯಲ್ಲಾಗಲೀ, ಏಕದಶ್ಯಾದಿ ಹರಿದಿವಸಗಳಲ್ಲಾಗಲಿ ಶ್ರವಣ ಮಾಡಲೇಬೇಕು.

ಪುರಾಣ ಶ್ರವಣ ಅಸಾಧ್ಯವಾದಾಗ ತಾನೇ ಹರಿಯ ನಾಮವನ್ನು ಉಚ್ಚರಿಸುತ್ತಾ ದೈನಂದಿನ ಪಾಕಾದಿಗಳಲ್ಲಿ ತೊಡಗಬೇಕು. ನಾಮ-ಸಂಕೀರ್ತನೆಯು ಪುರಾಣಕ್ಕಿಂತ ಮಿಗಿಲಾದದ್ದು.

ಪುರಾಣ ಕೇಳಬೇಕೆಂಬ ಬುದ್ಧಿ ಬಂದರೂ ಪುಣ್ಯವೇ.

**ಪುರಾಣಶ್ರವಣೇ ಬುದ್ಧಿರ್ಯಸ್ಯ ಪುಂಸಃ ಪ್ರಜಾಯತೇ ।**
**ಪುರಾಜೀತಾನಿ ಪಾಪಾನಿ ನಾಶಮಾಯಾಂತಿ ತಸ್ಯ ವೈ ॥**

* * * * *



# 13. ತುಳಸೀ ಸ್ತ್ರೀ





- ***ತುಳಸೀ ಕಥಾ :***

ಧರ್ಮಧ್ವಜನಿಗೆ ಮಧವೀ ಎಂಬ ಕನ್ಯೆಯಿದ್ದಳು.

ಕಾರ್ತಿಕ ಪೂರ್ಣಿಮಾದಲ್ಲಿ ಪದ್ಮೆಯು ತುಲಸಿಯಾಗಿ ಅವತರಿಸಿದಳು.

ನರರಾಗಲೀ, ನಾರಿಯಗಲಿ ಸೌಂದರ್ಯಾದಿ ಗುಣಗಳಿಗೆ ಸರಿಯಾದ ದೃಷ್ಟಾಂತ ನೀಡಲು ಅಸಮರ್ಥರಾದ್ದರಿಂದ "ತುಲಸೀ" ಎಂದೆ ಹೆಸರಿಟ್ಟರು.

ತಂದೆ ತಾಯಿಗಳು ಬೇಡವೆಂದರೂ ತಪಸ್ಸಿಗೆ ಹೊರಟಳು. ಬದರಿಯಲ್ಲಿದ್ದು ನಿರಂತರ ತಪಸ್ಸಿನಿಂದ, ನಾರಾಯಣನನ್ನೇ ಪತಿಯನ್ನಾಗಿ ಪಡೆಯಬೇಕೆಂಬ ಹಂಬಲವಾಗಿತ್ತು. ನೀರು, ಅಗ್ನಿ, ಸೂರ್ಯ ಪ್ರಕಾಶಗಳಲ್ಲಿ, ಹಣ್ಣು, ಎಲೆ, ವಾಯ್ವಾಹಾರಗಳಿಂದ ಬ್ರಹ್ಮದೇವನನ್ನು ಕುರಿತು ತಪಸ್ಸನ್ನಾಚರಿಸಿದಳು.

**ತತ್ರ ದೈವಾಬ್ಧಲಕ್ಷಂ ಚ ಚಕಾರ ಪರಮಂ ತಪಃ ।**
**ಅಹಂ ನಾರಾಯಣಂ ಕಾಂತಂ ಶಾಂತಂ ಸುಂದರಂ ವಿಗ್ರಹಂ ।**
**ಸಾಂಪ್ರತಂ ಲಬ್ಧುಮಿಚ್ಛಾಮಿ ವರಮೇವಂ ಚ ದೇಹಿ ಮೇ ॥**

ಬ್ರಹ್ಮದೇವನು ಪ್ರತ್ಯಕ್ಷನಾಗಿ – ನಿನ್ನ ಮನಸ್ಸಿನಲ್ಲಿ ಏನು ಬಯಕೆ ಇದೆ ಅದನ್ನು ಕೇಳು ಎಂದನು.

ನನಗೆ ನಾರಾಯಣನನ್ನೇ ಪತಿಯನ್ನಾಗಿ ಪಡೆಯುವ ಆಸೆ ಎಂದಳು.

**ಶಾಪಾನ್ನಾರಾಯಣಸ್ಯೈವ ಕಲಯಾ ದೈವಯೋಗತಃ ।**
**ಪ್ರಾಪ್ನೋಷಿ ಸವೃಕ್ಷರೂಪಂ ತಂ ತ್ವಂ ಪೂತಾ ವಿಶ್ವಪಾವನೀ ॥**

ಬ್ರಹ್ಮದೇವನಾದರೂ, ನೀನು ಮೊದಲು ಶಾಪದಿಂದ ಶಂಖಚೂಡ-ನೆನಿಸಿರುವ ಸುಧಾಮ ನಾಮಕನಾದ ಗೋಪಾಲನನ್ನು ವಿವಾಹವಾಗಿ ನಂತರ ನಾರಾಯಣನನ್ನು ಪಡೆಯುವೆ.

ನಂತರ ಭಗವಂತನ ಇಚ್ಛೆಯಂತೆ ವೃಕ್ಷರೂಪತ್ವವನ್ನು ಶಾಪದಿಂದ ಪಡೆಯುವೆ. ವೃಕ್ಷ ರೂಪದಲ್ಲಿ ಅತ್ಯಂತ ಪವಿತ್ರಳೂ, ವಿಶ್ವಪಾವನಿಯೂ, ಭಗವಂತನಿಗೆ ಅತ್ಯಂತ ಪ್ರೀಯಳೂ ಆಗುವೆ. ನೀನು ಇಲ್ಲದಿರುವ ಪೂಜೆ ನಿಷ್ಫಲವಾಗುವುದು. ವೃಂದಾವನದಲ್ಲಿ ಆಶ್ರಯ ಪಡೆದು "ವೃಂದಾವನೀ" ಎನಿಸುವೆ.

**ತ್ವಯಾ ವಿನಾ ಚ ಸರ್ವೇಷಾಂ ಪೂಜಾ ಚ ವಿಫಲಾ ಭವೇತ್ ।**
**ವೃಂದಾವನೇ ವೃಕ್ಷರೂಪಾ ನಾಮ್ನಾ ವೃಂದಾವನೀತಿ ಚ ॥**
*– ಬ್ರಹ್ಮವೈವರ್ತ ಪ್ರಕೃತಿಖಂಡ – 16–34–35*

ಮುಂದೆ ಗಣಪತಿಯ ಶಾಪದಿಂದ ತುಲಸಿಯು ಗಿಡವಾದಳು.

ಒಂದು ಸಲ ತುಲಸಿಯು ತೀರ್ಥಗಳನ್ನು ಅರಸುತ್ತಾ ಗಂಗಾತೀರದಲ್ಲಿ ತಪಸ್ಸು ಮಾಡುತ್ತಿರುವ ಗಣಪತಿಯನ್ನು ನೋಡಿದಳು. ಅವನ ಸುಂದರರೂಪ ನೋಡಿ ಅವನನ್ನು ವಿವಾಹವಾಗಲು ಬಯಸಿದಳು. ಆದರೆ ಗಣಪತಿಯಾದರೂ ಸಂಸಾರ ಮಾಡುವ ಇಚ್ಛೆ ನನಗೆ ಇಲ್ಲ ಎಂದು ತಿರಸ್ಕರಿಸಿದನು. ನನ್ನ ತಪಸ್ಸನ್ನು ಭಂಗಪಡಿಸಿದ ನಿನಗೆ ಅಶುಭವಾಗದಿರಲಮ್ಮ ಎಂದನು.

**ಕೃಷ್ಣಃ ಕರೋತು ಕಲ್ಯಾಣಂ ಹಂತು ವಿಘ್ನಂ ಕೃಪಾನಿಧಿಃ ।**
**ತದ್ ಧಯಾನ್ ಭಂಗಜಾದ್ ದೋಷಾನ್ ನಾಶುಭುಂ ಸ್ಯಾತ್ತು ತೇ ಶುಭೇ ॥** – *ಬ್ರಹ್ಮವೈವರ್ತ ಪು. – ಗಣೇಶಖಂಡ – 46–19*

ಈ ಮಾತಿನಿಂದ ಸಂತುಷ್ಟಳಾಗದ ತುಲಸಿಯು ನಿನಗೆ ಸಾಧ್ವಿಮಣಿಗಳಾಗದ ಪತ್ನಿಯರು ನಿನ್ನ ಕೈ ಹಿಡಿಯಲಿ ಎಂದು ಶಪಿಸಿದಳು.

**ದಾರಾಸ್ತೇ ಭವಿತಾಽಸಾಧ್ವೀ ಗಣೇಶ್ವರ ನ ಸಂಶಯಃ ।**
**ದೇವಿ ತ್ವಮಸುರಗ್ರಸ್ತಾ ಭವಿಷ್ಯಸಿ ನ ಸಂಶಯಃ ।**
**ತತ್ ಪಶ್ಚಾತ್ ಮಹತಾಂ ಶಾಪಾತ್ ವೃಕ್ಷತ್ವಂ ಭವಿತೇತಿ ॥**

ಗಣಪತಿಯು ತನಗೆ ಶಾಪ ನೀಡಿದ್ದಕ್ಕಾಗಿ ತಾನೂ ಶಪಿಸಿದನು.

ಎಲೈ ತುಲಸಿ, ನಿನ್ನನ್ನು ಅಸುರನು ವಿವಾಹವಾಗಲಿ, ನಂತರ ವೃಕ್ಷತ್ವವನ್ನು ಹೊಂದುವಿ ಎಂದು.

**ಪುಷ್ಪಾಣಾಂ ಸಾರಭೂತಾ ತ್ವಂ ಭವಿಷ್ಯತಿ ಮನೋರಮೇ ।**
**ಪೂಜಾ ವಿಮುಕ್ತದಾ ನೃಣಾ ಮಯಾ ಭೋಗ್ಯಾ ನ ನಿತ್ಯಶಃ ॥**

ಇದಲ್ಲದೆ ಪೂಜಾ ಪುಷ್ಪಗಳಲ್ಲಿ ಶ್ರೇಷ್ಠಳಾದ ನೀನು ಭಗವಂತನಿಗೆ ಪ್ರಿಯಳಾಗುವಿ ಆದರೆ ನನಗೆ ಯಾವಾಗಲೂ ಪ್ರಿಯಳಾಗುವುದಿಲ್ಲ ಎಂದನು.

ಶ್ರೀ ತುಳಸಿಯು ಸಾಕ್ಷಾತ್ ಲಕ್ಷ್ಮೀದೇವಿಯೇ ಆಗಿರುವಳು.

**ಇಯಂ ಸ್ತ್ರೀ ತುಳಸೀ ಸಾಕ್ಷಾತ್ ಮಹಾಲಕ್ಷ್ಮೀನ ಸಂಶಯಃ ।**

***ತುಳಸಿಯೆಂದು ಹೆಸರು ಬರಲು ಕಾರಣ ಹೀಗಿದೆ–***

ಭಗವಂತನಿಗೆ ಮೂರು ಜನ ಸ್ತ್ರೀಯರು, ಲಕ್ಷ್ಮೀ–ಸರಸ್ವತೀ–ಗಂಗೆ, ಇವರಲ್ಲಿ ಲಕ್ಷ್ಮಿಯು ಭಾರ್ಯೆಯು, ಸರಸ್ವತಿ–ಸೊಸೆ, ಗಂಗೆ–ಮಗಳು. ಈ ಮೂವರು ಪ್ರೀತ್ಯಾದರಗಳಿಂದ ಹರಿಸನ್ನಿಧಿಯಲ್ಲಿದ್ದರು.

ಒಂದು ದಿನ ಗಂಗೆಯು ವಿಷ್ಣುವನ್ನು ನಿರೀಕ್ಷಿಸಿದಳು. ನನ್ನ ತಂದೆ ಎಂತಹ ಮಹಿಮಾನ್ವಿತನೆಂದು ನೋಡುತ್ತಿರುವಾಗಲೇ ಭಗವಂತನೂ ಅವಳನ್ನು ನೋಡಿ ಮಂದಹಾಸ ಬೀರಿದನು.

ಇದನ್ನು ನೋಡಿದ ಸರಸ್ವತಿಯು ಕೋಪದಿಂದ ನಮಗಿಂತಲೂ ಹೆಚ್ಚು ಸ್ವಾಮಿ ಸೌಭಾಗ್ಯವನ್ನು ಹೊಂದಲು ಇಚ್ಛಿಸುವೆಯಾ? ಎಂದು ಗಂಗೆಯ ಕೂದಲನ್ನು ಹಿಡಿದು ಹೊಡೆಯಲು ಹೋದಳು. ಇವರಿಬ್ಬರ ಮಧ್ಯೆ ಇರುವ ಲಕ್ಷ್ಮೀದೇವಿಯು ಜಗಳವನ್ನು ತಡೆಯಲ್ಲಿಲ್ಲ. ಅವಳ ಮೇಲೂ ಕೋಪಿಸಿಕೊಂಡ ಸರಸ್ವತಿಯೂ, ಲಕ್ಷ್ಮೀದೇವಿಗೂ, ಗಂಗೆಗೂ ಹೀಗೆ ಶಪಿಸಿದಳು.

ನೀನು ಏನನ್ನೂ ಹೇಳದ ವೃಕ್ಷದಂತೆ ತಟಸ್ಥಳಾಗಿದ್ದರಿಂದ ವೃಕ್ಷವಾಗು ಹಾಗೂ ಗಂಗೆಯು ನದಿಯಾಗಲಿ ಎಂದು.

**ವೃಕ್ಷರೂಪ ಸರಿದ್ರೂಪಾ ಭವಿಷ್ಯಸಿ ನ ಸಂಶಯಃ ।**
**ಸಂತಿಷ್ಠಸಿ ಸಭಾಮಧ್ಯೆ ಯಥಾವೃಕ್ಷೋ ಯಥಾ ಸರಿತ್ ॥**

– *ಬ್ರ.ವೈ. ಪ್ರಕೃತಿ*

**ಶಾಪಾನ್ನಾರಾಯಣಸ್ಯೈವ ಕಲಯಾ ದೈವಯೋಗತಃ ।**
**ಪ್ರಾಪ್ಸ್ಯೋಽಪಿ ಸವೃಕ್ಷರೂಪಂ ತಂ ತ್ವಂ ಪೂತಾ ವಿಶ್ವಪಾವನೀ ॥**

ಬ್ರಹ್ಮದೇವನಾದರೂ, ನೀನು ಮೊದಲು ಶಾಪದಿಂದ ಶಂಖಚೂಡ-ನೆನಿಸಿರುವ ಸುಧಾಮ ನಾಮಕನಾದ ಗೋಪಾಲನನ್ನು ವಿವಾಹವಾಗಿ ನಂತರ ನಾರಾಯಣನನ್ನು ಪಡೆಯುವೆ.

ನಂತರ ಭಗವಂತನ ಇಚ್ಛೆಯಂತೆ ವೃಕ್ಷರೂಪತ್ವವನ್ನು ಶಾಪದಿಂದ ಪಡೆಯುವೆ. ವೃಕ್ಷ ರೂಪದಲ್ಲಿ ಅತ್ಯಂತ ಪವಿತ್ರಳೂ, ವಿಶ್ವಪಾವನಿಯೂ, ಭಗವಂತನಿಗೆ ಅತ್ಯಂತ ಪ್ರೀಯಳೂ ಆಗುವೆ. ನೀನು ಇಲ್ಲದಿರುವ ಪೂಜೆ ನಿಷ್ಫಲವಾಗುವುದು. ವೃಂದಾವನದಲ್ಲಿ ಆಶ್ರಯ ಪಡೆದು "ವೃಂದಾವನೀ" ಎನಿಸುವೆ.

**ತ್ವಯಾ ವಿನಾ ಚ ಸರ್ವೇಷಾಂ ಪೂಜಾ ಚ ವಿಫಲಾ ಭವೇತ್ ।**
**ವೃಂದಾವನೇ ವೃಕ್ಷರೂಪಾ ನಾಮ್ನಾ ವೃಂದಾವನೀತಿ ಚ ॥**
*- ಬ್ರಹ್ಮವೈವರ್ತ ಪ್ರಕೃತಿಖಂಡ - 16-34-35*

ಮುಂದೆ ಗಣಪತಿಯ ಶಾಪದಿಂದ ತುಲಸಿಯು ಗಿಡವಾದಳು.

ಒಂದು ಸಲ ತುಲಸಿಯು ತೀರ್ಥಗಳನ್ನು ಅರಸುತ್ತಾ ಗಂಗಾತೀರದಲ್ಲಿ ತಪಸ್ಸು ಮಾಡುತ್ತಿರುವ ಗಣಪತಿಯನ್ನು ನೋಡಿದಳು. ಅವನ ಸುಂದರರೂಪ ನೋಡಿ ಅವನನ್ನು ವಿವಾಹವಾಗಲು ಬಯಸಿದಳು. ಆದರೆ ಗಣಪತಿಯಾದರೂ ಸಂಸಾರ ಮಾಡುವ ಇಚ್ಛೆ ನನಗೆ ಇಲ್ಲ ಎಂದು ತಿರಸ್ಕರಿಸಿದನು. ನನ್ನ ತಪಸ್ಸನ್ನು ಭಂಗಪಡಿಸಿದ ನಿನಗೆ ಅಶುಭವಾಗದಿರಲಮ್ಮ ಎಂದನು.

**ಕೃಷ್ಣಃ ಕರೋತು ಕಲ್ಯಾಣಂ ಹಂತು ವಿಘ್ನಂ ಕೃಪಾನಿಧಿಃ ।**
**ತದ್ ಧಯಾನ್ ಭಂಗಜಾದ್ ದೋಷಾನ್ ನಾಶುಭುಂ ಸ್ಯಾತ್ತು ತೇ ಶುಭೇ ॥** - *ಬ್ರಹ್ಮವೈವರ್ತ ಪು. - ಗಣೇಶಖಂಡ - 46-19*

ಈ ಮಾತಿನಿಂದ ಸಂತುಷ್ಟಳಾಗದ ತುಲಸಿಯು ನಿನಗೆ ಸಾಧ್ವಿಮಣಿಗಳಾಗದ ಪತ್ನಿಯರು ನಿನ್ನ ಕೈ ಹಿಡಿಯಲಿ ಎಂದು ಶಪಿಸಿದಳು.

**ದಾರಾಸ್ತೇ ಭವಿತಾಽಸಾಧ್ವೀ ಗಣೇಶ್ವರ ನ ಸಂಶಯಃ ।**
**ದೇವಿ ತ್ವಮಸುರಗ್ರಸ್ತಾ ಭವಿಷ್ಯಸಿ ನ ಸಂಶಯಃ ।**
**ತತ್ ಪಶ್ಚಾತ್ ಮಹತಾಂ ಶಾಪಾತ್ ವೃಕ್ಷತ್ವಂ ಭವಿತೇತಿ ॥**

ಗಣಪತಿಯು ತನಗೆ ಶಾಪ ನೀಡಿದ್ದಕ್ಕಾಗಿ ತಾನೂ ಶಪಿಸಿದನು.

ಎಲೈ ತುಲಸಿ, ನಿನ್ನನ್ನು ಅಸುರನು ವಿವಾಹವಾಗಲಿ, ನಂತರ ವೃಕ್ಷತ್ವವನ್ನು ಹೊಂದುವಿ ಎಂದು.

**ಪುಷ್ಪಾಣಾಂ ಸಾರಭೂತಾ ತ್ವಂ ಭವಿಷ್ಯತಿ ಮನೋರಮೇ ।**
**ಪೂಜಾ ವಿಮುಕ್ತದಾ ನೃಣಾ ಮಯಾ ಭೋಗ್ಯಾ ನ ನಿತ್ಯಶಃ ॥**

ಇದಲ್ಲದೆ ಪೂಜಾ ಪುಷ್ಪಗಳಲ್ಲಿ ಶ್ರೇಷ್ಠಳಾದ ನೀನು ಭಗವಂತನಿಗೆ ಪ್ರಿಯಳಾಗುವಿ ಆದರೆ ನನಗೆ ಯಾವಾಗಲೂ ಪ್ರಿಯಳಾಗುವುದಿಲ್ಲ ಎಂದನು.

ಶ್ರೀ ತುಳಸಿಯು ಸಾಕ್ಷಾತ್ ಲಕ್ಷ್ಮೀದೇವಿಯೇ ಆಗಿರುವಳು.

**ಇಯಂ ಸ್ತ್ರೀ ತುಳಸೀ ಸಾಕ್ಷಾತ್ ಮಹಾಲಕ್ಷ್ಮೀನ ಸಂಶಯಃ ।**

### *ತುಳಸಿಯೆಂದು ಹೆಸರು ಬರಲು ಕಾರಣ ಹೀಗಿದೆ–*

ಭಗವಂತನಿಗೆ ಮೂರು ಜನ ಸ್ತ್ರೀಯರು, ಲಕ್ಷ್ಮೀ–ಸರಸ್ವತೀ–ಗಂಗೆ, ಇವರಲ್ಲಿ ಲಕ್ಷ್ಮಿಯು ಭಾರ್ಯೆಯು, ಸರಸ್ವತಿ–ಸೊಸೆ, ಗಂಗೆ–ಮಗಳು. ಈ ಮೂವರು ಪ್ರೀತ್ಯಾದರಗಳಿಂದ ಹರಿಸನ್ನಿಧಿಯಲ್ಲಿದ್ದರು.

ಒಂದು ದಿನ ಗಂಗೆಯು ವಿಷ್ಣುವನ್ನು ನಿರೀಕ್ಷಿಸಿದಳು. ನನ್ನ ತಂದೆ ಎಂತಹ ಮಹಿಮಾನ್ವಿತನೆಂದು ನೋಡುತ್ತಿರುವಾಗಲೇ ಭಗವಂತನೂ ಅವಳನ್ನು ನೋಡಿ ಮಂದಹಾಸ ಬೀರಿದನು.

ಇದನ್ನು ನೋಡಿದ ಸರಸ್ವತಿಯು ಕೋಪದಿಂದ ನಮಗಿಂತಲೂ ಹೆಚ್ಚು ಸ್ವಾಮಿ ಸೌಭಾಗ್ಯವನ್ನು ಹೊಂದಲು ಇಚ್ಛಿಸುವೆಯಾ? ಎಂದು ಗಂಗೆಯ ಕೂದಲನ್ನು ಹಿಡಿದು ಹೊಡೆಯಲು ಹೋದಳು. ಇವರಿಬ್ಬರ ಮಧ್ಯೆ ಇರುವ ಲಕ್ಷ್ಮೀದೇವಿಯು ಜಗಳವನ್ನು ತಡೆಯಲ್ಲಿಲ್ಲ. ಅವಳ ಮೇಲೂ ಕೋಪಿಸಿಕೊಂಡ ಸರಸ್ವತಿಯೂ, ಲಕ್ಷ್ಮೀದೇವಿಗೂ, ಗಂಗೆಗೂ ಹೀಗೆ ಶಪಿಸಿದಳು.

ನೀನು ಏನನ್ನೂ ಹೇಳದ ವೃಕ್ಷದಂತೆ ತಟಸ್ಥಳಾಗಿದ್ದರಿಂದ ವೃಕ್ಷವಾಗು ಹಾಗೂ ಗಂಗೆಯು ನದಿಯಾಗಲಿ ಎಂದು.

**ವೃಕ್ಷರೂಪ ಸರಿದ್ರೂಪಾ ಭವಿಷ್ಯಸಿ ನ ಸಂಶಯಃ ।**
**ಸಂತಿಷ್ಠಸಿ ಸಭಾಮಧ್ಯೆ ಯಥಾವೃಕ್ಷೋ ಯಥಾ ಸರಿತ್ ॥**

– *ಬ್ರ.ವೈ. ಪ್ರಕೃತಿ*

ನಂತರ ಗಂಗೆಯೂ ಸರಸ್ವತಿಗೆ ಹೀಗೆ ಶಾಪವಿತ್ತಳು.

**ಸರಿತ್ ಸ್ವರೂಪಾ ಭವತು ಸ ಯಾ ತ್ವಾಮಶಪದ್ ರುಷಾ ।**

*–6–32–33*

**ಅಧೋ ಮರ್ತ್ಯಂ ಸಾ ಪ್ರಯಾತು ಸಂತಿ ಯತ್ರೈವ ಪಾಪಿನಃ ॥**

*–6–39*

"ನೀನು ಕೋಪದಿಂದ ನದಿಯಾಗು ಎಂದು ಶಪಿಸಿದ್ದರಿಂದ ನೀನೂ ನದಿಯಾಗು, ಪಾಪಿಗಳು ನಿನ್ನಲ್ಲಿ ಪಾಪಗಳನ್ನು ಬಿಡಲಿ" ಎಂದು.

ಸರಸ್ವತಿಯಾದರೂ ಗಂಗೆಗೂ ಶಾಪ ನೀಡಿದಳೂ.

ನೀನು ನದಿಯಾಗು ಹಾಗೂ ಪಾಪಿಗಳು ನಿನ್ನಲ್ಲಿ ಪಾಪಗಳನ್ನು ಬಿಡಲಿ ಎಂದು.

ಇದರ ಫಲವಾಗಿ ಲಕ್ಷ್ಮೀದೇವಿಯು ಗಿಡವಾಗಿ ಹುಟ್ಟಬೇಕಾಯಿತು.

ಭಗವಂತನಾದರೂ ಇವರನ್ನು ಸಮಾಧಾನಿಸುತ್ತಾ ಹೀಗೆಂದನು, "ಲಕ್ಷ್ಮೀಯೇ, ನೀನು ಒಂದಂಶದಿಂದ ಧರ್ಮಧ್ವಜನ ಪುತ್ರಿಯಾಗಿ ಅಯೋನಿಜೆಯಾಗಿ ಜನಿಸು. ಅಲ್ಲಿಯೂ ಅಸುರ ಮೋಹಕ್ಕಾಗಿ ವೃಕ್ಷವಾಗೆಂದು ಶಾಪದಿಂದ ತುಲಸೀ ಗಿಡವಾಗಿ ನನ್ನ ಪೂಜೆಗೆ ಅವಶ್ಯವಾಗಿ ಉಪಯುಕ್ತವಾಗಲಿ. ನೀನು ಶಾಪದಿಂದ ಗಿಡವಾಗಿ ಹುಟ್ಟಿದರೂ ನಿನಗೆ ಸಮಾನವಾದ ಗಿಡವು ಯಾವುದೂ ಇರುವುದಿಲ್ಲ. ಆದ್ದರಿಂದಲೇ ನಿನ್ನನ್ನು ತುಳಸೀ ಎನ್ನುವರು.

ಇದಲ್ಲದೆ ನನ್ನ ಪೂಜೆಗೆ ನಿನ್ನ ದಳಗಳು ಅವಶ್ಯಬೇಕು. ತುಳಸಿ ಇಲ್ಲದೆ ಮಾಡಿದ ಪೂಜೆ, ತೀರ್ಥ ಎಂದಿಗೂ ವ್ಯರ್ಥ. ತುಳಸೀ ಇಲ್ಲದೆ ಪೂಜೆ ಹರಿ ಒಪ್ಪುವುದಿಲ್ಲ.

ಕಮಲಪುಷ್ಪ, ಮಲ್ಲಿಗೆ, ಜಾಜಿ, ಸಂಪಿಗೆ ಮೊದಲಾದ ಪುಷ್ಪಗಳಿದ್ದರೂ ತುಳಸಿ ಇಲ್ಲದ ಪೂಜೆ ವ್ಯರ್ಥವೆನಿಸುವುದು. ನಿನ್ನಲ್ಲಿ ಸಮಸ್ತ ಔಷಧಿಯ ಗುಣಗಳೂ ತುಂಬಿರುತ್ತದೆ ಎಂದು ವರ ಕೊಟ್ಟನು.

**ಲಕ್ಷ್ಮೀ, ತ್ವಂ ಕಲಯಾ ಗಚ್ಛ ಧರ್ಮಧ್ವಜಗೃಹಂ ಶುಭೇ ।**
**ಅಯೋನಿಸಂಭವಾ ಭೂಮೌ ತಸ್ಯ ಕನ್ಯಾ ಭವಿಷ್ಯಸಿ ॥**

**ತತ್ರೈವ ದೈವದೋಷೇಣ ವೃಕ್ಷತ್ವಂ ಚ ಲಭಿಷ್ಯಸಿ ।**
**ತ್ರೈಲೋಕ್ಯಪಾವನೀ ನಾಮ್ನಾ ತುಲಸೀತಿ ಚ ಭಾರತೇ ॥**

**ಧರ್ಮಧ್ವಜಸುತಾ ಲಕ್ಷ್ಮೀಃ ವಿಖ್ಯಾತಾ ತುಲಸೀತಿ ಚ ॥**

ಲಕ್ಷ್ಮೀದೇವಿಯೆ ಒಂದಂಶದಿಂದ ಧರ್ಮಧ್ವಜನ ಮಗಳಾಗಿ ಅವತರಿಸಿದಳು.

**ಸಮಸ್ತ ಔಷಧಿಗಳ ತುಳಸಿಯ ಜನಕ.....।** – *ವಿಜಯದಾಸರು (ಧನ್ವಂತ್ರಿ ಸುಳಾದಿ)*

**ತುಳಸಿ ಇಲ್ಲದೆ ಪೂಜೆ ಒಲ್ಲನೋ ಹರಿ ಕೊಳ್ಳನೋ ।**

*–ಪುರಂದರದಾಸರು*

ನಂತರ ಸಮುದ್ರ ಮಥನ ಕಾಲದಲ್ಲಿ ಅಮೃತಕಲಶವನ್ನು ತಂದು ಧನ್ವಂತರಿಯು ಆವಿರ್ಭವಿಸಿದನು. ಧನ್ವಂತರಿಯ ಆನಂದಭಾಷ್ಪವು ಅಮೃತದ ಕಲಶದ ಮೇಲೆ ಬಿದ್ದು ತುಲಸಿಗಿಡವು ಆವಿರ್ಭವಿಸಿತು.

ಹೀಗೆ ಪರಮಾತ್ಮನ ಆನಂದಭಾಷ್ಪ (ದುಃಖಭಾಷ್ಪವೆಂಬುದು ಹರಿಗೆ ಇಲ್ಲ)ದಿಂದ ಅಮೃತದ ಸಂಪರ್ಕದಿಂದ ಜನಿಸಿದ ತುಳಸಿ, ಇದೆ ಸಸಿಯೇ ತುಳಸಿ ಎಂದೆನಿಸಿತು.

**ಸುಧೆಗಡಲ ಮಥಿಸುವ ಸಮಯದಲ್ಲಿ ವೈದ್ಯನಾಗಿ**
**ಪದುಮನಾಭನು ತಾನು ಉದುಭವಿಸಿ ಬರಲಂದು**
**ಉದುರಿದುವು ಕಣ್ಣಿಂದ ಉದಕವುತ್ಸಹದಿಂದಲದೆ ತುಳಸಿನಾಮವಾಗೆ।**
– *ವಿಜಯದಾಸರು*

**ತುಲಸ್ಯಮೃತ ಜನ್ಮಾಸಿ ಸದಾ ತ್ವಂ ಕೇಶವಪ್ರಿಯೇ ।**
**ಕೇಶವಾರ್ಥೇ ವಿಚಿನ್ವಾಮಿ ವರದಾ ಭವ ಶೋಭನೇ ॥**

ಲಕ್ಷ್ಮೀದೇವಿಯ ಪೂಜೆಯನ್ನು ಸ್ತ್ರೀಯರು ಅವಶ್ಯ ಮಾಡಬೇಕು. ಈ ಗಿಡದ ಮೂಲಕ ಸ್ತ್ರೀಯರು ಪೂಜಿಸಿದಾಗ ಭಗವಂತನ ಪರಿವಾರ ಸಹಿತ ಲಕ್ಷ್ಮೀ ನಾರಾಯಣನನ್ನು ಪೂಜಿಸಿದಂತಾಗುವುದರಿಂದ ಸ್ತ್ರೀಯರಿಗೆ ಈ ಪೂಜೆ ನಿಜಜೀವನದಲ್ಲಿ ಮುಖ್ಯವಾಗಿದೆ.

ತುಳಸಿಗೆ ಏಳು ಪ್ರದಕ್ಷಿಣೆ ನಮಸ್ಕಾರ ಹಾಕಿದರೆ ಏಳು ಜನ್ಮದ ಪಾಪ ಕಳೆಯುವಳು.

**ತುಲಸೀಂ ಯೇ ನಮಸ್ಯಂತಿ ಸಪ್ತವಾರಂ ದಿನೇ ದಿನೇ ।**
**ಸಪ್ತಜನ್ಮಕೃತಂ ಪಾಪಂ ಶ್ರೀದೇವೀ ಪರಿಹರಿಷ್ಯತಿ ॥**

- ***ತುಳಸಿಯ ಸಸಿ – ಸ್ತ್ರೀಯರು*** :

ಸ್ತ್ರೀಯರು ತುಳಸಿಯನ್ನು ಮುಟ್ಟಿ ಪೂಜಿಸಬಹುದಾದರೂ ತುಳಸಿಯನ್ನು ಕಿತ್ತಬಾರದು ಹಾಗೂ ತಿನ್ನಬಾರದು.

ಅದರಲ್ಲೂ, ಬೃಂದಾವನದಿಂದ ಪುರುಷರೂ ಸಹ ಎಂದೂ ಕಿತ್ತಬಾರದು. ತುಳಸಿಯು ಅಲಭ್ಯವಾಗಿದ್ದಾಗ ಮಾತ್ರ ಪೂಜೆಗಾಗಿ ಮಾತ್ರ ಎರಡು ದಳ ತೆಗೆದರೆ ದೋಷವಿಲ್ಲ. ಔಷಧಿಗಾಗಿ ಅಥವಾ ಬೇರೆ ಉಪಯೋಗಕ್ಕಾಗಿ ಬೃಂದಾವನದಿಂದ ಕಿತ್ತಬಾರದು. ಗಿಡ ಬೆಳೆಯಲು ಅವಕಾಶವಾಗುವಂತೆ ತೆನೆಯನ್ನು ತೆಗೆದರೆ ದೋಷವಿಲ್ಲ. ಇಷ್ಟೇ ನಿಷೇಧ ಹೊರತು ಗಿಡವನ್ನೇ ಮುಟ್ಟದಿರಲು ನಿಷೇಧವಿಲ್ಲ.

ಸುವಾಸಿನೀ ಸ್ತ್ರೀಯರು, ಕನ್ಯೆಯರೂ ಸಹ ಗಿಡವನ್ನು ಪಾತಿ ಮಾಡಿ ನೀರನ್ನು ಹಾಕಿ ಪೋಷಣೆ ಪಾಲನೆಯನ್ನು ಮಾಡಬಹುದು. ಮುತ್ತೈದೆಯರು ಅನಿವಾರ್ಯ ಸಮಯದಲ್ಲಿ ತುಳಸಿಯನ್ನು ಕಿತ್ತಿದರೂ ದೋಷವಿರುವುದಿಲ್ಲ.

- ***ತುಳಸಿಯನ್ನು ಮುಟ್ಟಿ ಪೂಜಿಸಬಹುದೆ?***

ಸ್ತ್ರೀಯರು ತುಳಸಿಯ ಗಿಡವನ್ನೇ ಮುಟ್ಟಬಾರದೆಂಬ ನಿಷೇಧವಿಲ್ಲ. ತುಳಸೀಗಿಡವನ್ನು ಮುಟ್ಟಿ ಪೂಜಿಸಬಹುದು. ಪುಷ್ಪಾದಿಗಳಿಂದ ಪೂಜಿಸುವಾಗ ಮಟ್ಟುವುದು ಅನಿವಾರ್ಯವಾಗಿದೆಯಷ್ಟೇ.

- ***ತೀರ್ಥದ ಕಾಲದಲ್ಲಿ ತುಳಸಿ ಪ್ರಸಾದ :***

ತೀರ್ಥಾದಿಗಳ ಸ್ವೀಕಾರ ಕಾಲದಲ್ಲಿ ಸ್ತ್ರೀಯರಿಗೆ ಪ್ರಸಾದವಾಗಿ ಹರಿನಿವೇದಿತ ಪುಷ್ಪಗಳನ್ನು ಕೊಡುವುದು ಪದ್ಧತಿಯಲ್ಲಿದೆ. ಪುರುಷರಿಗೆ ತುಳಸಿಯನ್ನು ಕೊಡುವುದಿದೆ.

ಆದರೆ ಈ ನಿಯಮ ಕಟ್ಟುನಿಟ್ಟಿನದ್ದಲ್ಲ. ಸ್ತ್ರೀಯರಿಗೆ ತುಳಸಿ ಪ್ರಸಾದ ದೊರಕಿದರೆ ಇದೊಂದು ಸೌಮಾಂಗಲ್ಯ ಸೂಚಕವಾಗಿದೆ ಎಂದು ತಿಳಿಯಬೇಕು.

ಗೋಪಿಕಾಸ್ತ್ರೀಯರು ಶ್ರೀಕೃಷ್ಣನು ಧರಿಸಿರುವ ತುಳಸಿಗಾಗಿ ಪರಿತಪಿಸುತ್ತಿದ್ದುದು ಗ್ರಂಥಗಳಲ್ಲಿ ಲಭಿಸುತ್ತವೆ.

ನಿರ್ಮಾಲ್ಯವಾದ ತುಳಸಿಯು ಮುತ್ತೈದೆಗೆ ಲಭಿಸಿದರೆ ತನ್ನ ಭಾಗ್ಯವೆಂದು

ತಿಳಿದು, ಅದನ್ನು ಕಂಚುಕದ (ಕುಪ್ಪಸದ) ಮುಂಭಾಗದ ಗಂಟಿನಲ್ಲಿ–ಟ್ಟುಕೊಳ್ಳಬೇಕು. ಇದರಿಂದ ಪತಿಪತ್ನಿಯರ ಸಂಬಂಧವು ದೃಢವಾಗುತ್ತದೆ. ಪದ್ಧತಿಯು ಹಾಗೆ ಇದೆ. ಆದ್ದರಿಂದಲೇ ಮುಂಭಾಗದಿಂದ ತೆಗೆಯುವ ಕಂಚುಕವನ್ನೇ ಧರಿಸುವುದು.

- ***ತಾರತಮ್ಯದಲ್ಲಿ ತುಳಸೀ :***

ತುಳಸಿಯನ್ನು ಷಣ್ಮಹಿಷಿಯರ ಕಕ್ಷ್ಯೆಯಲ್ಲಿ ಸೇರಿಸುವುದು ಪದ್ಧತಿಯಲ್ಲಿದೆ. ಜಾಂಬವತಿಯೇ ತುಳಸಿಯೆಂದು ಕೆಲವು ಅಭಿಪ್ರಾಯಪಟ್ಟಿರುವರು. ಶ್ರೀಮದಾಚಾರ್ಯರು ತುಳಸಿಯ ಬಗ್ಗೆ ವಿವರಗಳನ್ನು ನೀಡಿಲ್ಲ. ತಾರತಮ್ಯಕ್ಕೆ ಹೆಚ್ಚು ಒತ್ತು ಕೊಟ್ಟಿರುವ ಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರದಲ್ಲಿ ಜಾಂಬವತಿಯನ್ನು ಹೇಳಿದ್ದರೂ ಅವಳು ತುಳಸಿಯೆಂದು ಹೇಳಲಿಲ್ಲ. ಜಾಂಬವತಿಯ ಹಿಂದಿನ ಜನ್ಮಗಳನ್ನೂ ಗರುಡಪುರಾಣದ ಆಧಾರದಿಂದ ಹೇಳಿದ ಅವರು ತುಳಸಿ ಬಗ್ಗೆ ಹೆಚ್ಚು ವಿವರಣೆ ನೀಡಿದಂತಿಲ್ಲ.

ಇದಲ್ಲದೆ ಎಲ್ಲಾ ದಾಸರೂ ತುಳಸೀ ಎಂದೇ ಹೇಳುವುದಿಲ್ಲ "ಶ್ರೀತುಳಸೀ" ಎಂದು ಶ್ರೀಕಾರ ಸೇರಿಸಿಯೇ ತಿಳಿಸುವರು. ಇದರಿಂದ ಶ್ರೀತುಳಸಿಯೆಂದರೆ ಲಕ್ಷ್ಮೀದೇವಿಯೇ ಎಂದು ಅವರ ಅಭಿಪ್ರಾಯ.

ಇದಕ್ಕೆ ಬ್ರಹ್ಮವೈವರ್ತ ಪುರಾಣದ ಆಧಾರವೂ ಇದೆ.

ಸಮಸ್ತ ಸಂದೇಹಾಸ್ಪದ ವಿಷಯಗಳಿಗೂ ನಿರ್ಣಯ ನೀಡಿದ ಆಚಾರ್ಯರೂ ಸಹ ಸಾಕ್ಷಾತ್ ಲಕ್ಷ್ಮಿದೇವಿಯೇ ಎಂದು ವಿವರಣೆ ನೀಡಿಲ್ಲ.

ಜಾಂಬವತಿಯಾಗಿದ್ದರೆ ಯಾವಾಗಲೂ ಪ್ರಿಯಳಾಗಲು ಸಾಧ್ಯವಿಲ್ಲ. ಯಾವಾಗ ಲಕ್ಷ್ಮಿದೇವಿಯ ಆವೇಶವಿದೆಯೋ ಆವಾಗ ಬಲರಾಮನಿಗೆ ಸಮಳಾಗುವಳು ಎಂಬ ತತ್ವವು ತುಳಸಿಗೆ ಅನ್ವಯವಾಗುವುದಿಲ್ಲ. ತುಳಸಿಯು ಯಾವಾಗಲೂ ಪ್ರಿಯಳೇ.

ಜಾಂಬವತಿಯಾಗಿದ್ದರೆ ವಾಯು–ಬ್ರಹ್ಮಾದಿಗಳಿಗೂ ತುಳಸಿಯಿಂದ ಪೂಜೆ ಮಾಡಬಹುದಾಗಿತ್ತು. ಆದರೆ ಭಗವಂತನಿಗೆ ಮಾತ್ರ ತುಳಸೀ ಪೂಜೆ ಹರಿನಿರ್ಮಾಲ್ಯವೆಂದು ವಾಯ್ವಾದಿಗಳಿಗೆ ಕೊಡುವ ಪದ್ಧತಿ ಮಾತ್ರ ಇದೆ. ನೇರವಾಗಿ ಇರುವುದಿಲ್ಲ.

ಹಾಗಾದರೆ ***"ತುಳಸೀ ಶ್ರೀ ಸಖಿ ಶುಭೇ"*** ಎಂದು ಲಕ್ಷ್ಮೀದೇವಿಯ ಸಖಿ ಎಂದಿದ್ದಾರಲ್ಲ ಎಂದರೆ ಶ್ರೀಸಖಿ ಎಂಬ ಪದವು ಸಾವಕಾಶ ಪದವು. ಶ್ರೀ ಎಂದರೆ ಭಾರತೀ–ಸರಸ್ವತಿಯರೂ ಆಗುವರು.

***ಶ್ರಯತೇ ಸರ್ವೇ ಗುಣಾಃ ಇತಿಶ್ರೀಃ*** ಎಂಬಂತೆ

ಭಾರತೀ–ಸರಸ್ವತಿಯರು ಶ್ರೀ ಎನಿಸಿರುವರು.

ಭಗವಂತನು ವಾಯು ಸಖನಾದರೆ, ಶ್ರೀಮಹಾಲಕ್ಷ್ಮಿಯು ಭಾರತೀ ಸಖಿ ಎಂಬುದು ಯುಕ್ತವಾಗುತ್ತದೆ.

ತುಳಸೀ ಇಲ್ಲದ ಮನೆ ಸ್ಮಶಾನ.

**ಯದ್ಗೃಹೇ ನಾಸ್ತಿ ತುಳಸೀ ಸಾಲಿಗ್ರಾಮಶಿಲಾರ್ಚನಂ ।**
**ಸ್ಮಶಾನಸದೃಶಂ ವಿದ್ಯಾತ್ ತದ್ಗೃಹಂ ಶುಭವರ್ಜಿತಂ ॥**

–ಬೃಹನಾರದೀಯ

- ***ತುಳಸೀ ಬೆಳೆಸುವುದು :***

ಯಾರ ಮನೆಯಲ್ಲಿ ತುಳಸೀವನವಿದೆಯೋ ಆ ಮನೆಯು ದೊಡ್ಡ ತೀರ್ಥಕ್ಷೇತ್ರವೆನಿಸುತ್ತದೆ.

ತುಳಸೀವನವನ್ನು ಬೆಳೆಸಿದಾಗ ಎಷ್ಟು ತುಲಸೀ ಬೀಜಗಳು ಬೀಳುವುವೋ ಅಷ್ಟು ಸಹಸ್ರವರ್ಷ ವಿಷ್ಣುಲೋಕದಲ್ಲಿ ಸುಖಿಸುವರು.

**ಶ್ರೀ ತುಳಸಿ ಪದುಮಾಕ್ಷಿಸರಗಳನು**
**ಕಂಧರದ ಮಧ್ಯದಲ್ಲಿ ಧರಿಸಿ ಮು–**
**ಕುಂದ ಶ್ರೀ ಭೂರಮಣ ತ್ರಿಜಗ**
**ದ್ವಂದ್ವ ಸರ್ವಸ್ವಾಮಿ ಮಮ ಕುಲದೈವೆನೆ ಪೊರೆವ–**
**ಪಾಪಾನಿ ಯಾನಿ ರವಿಸೂನುಪಟಸ್ಥಿತಾನಿ ।**
**ಗೋಬ್ರಹ್ಮ ಬಾಲ ಪಿತೃಮಾತೃವಧಾದಿಕಾನಿ ನಶ್ಯಂತಿ ॥**

ಶ್ರೀ ತುಳಸಿಯು ಗೋಹತ್ಯೆ, ಬ್ರಹ್ಮಹತ್ಯೆ, ಶಿಶುಹತ್ಯೆ, ಮಾತಪಿತೃಹತ್ಯೆಯಂತಹ ಮಹಾಪಾತಕಗಳನ್ನು ಪರಿಹರಿಸುವಳು.

ತುಳಸಿ ನಿನ್ನಡಿಗೆ ನಾ ತಲೆವಾಗಿ ಬಿನ್ನೈಪೆ
ಕಲುಷ ಕರ್ಮಗಳ ಎಣಿಸದಲೆ
ಕಲುಷ ಕರ್ಮಗಳ ಎಣಿಸಿದಲೆ ಸಂಸಾರ
ಜಲಧಿಯಿಂದೆಮ್ಮ ಕಡೆ ಹಾಯ್ಸು ಸುವ್ವಿ ॥

ತುಳಸಿಯಲ್ಲಿ ಸಕಲ ತೀರ್ಥಗಳು ತದಭಿಮಾನಿಗಳಿದ್ದಾರೆ.

*ಶ್ರೀ ವಿಜಯದಾಸರಾಯರು –*

ಆತ್ಮಯಜ್ಞವ ಮಾಡುತಲಿ ಮಿಶ್ರದಿಂದ
ಹತ್ತೆಂಟುದಳ ನಿನಗೆ ಸತತ ಬೇಕು
ಹತ್ತದೆನೆಸಲ್ಲ ಶೇಷದೋಷದಿಂದ
ಮೃತ್ಯು ಬರುತ್ತಿದ್ದರು ನಿವಾರಣಾ
ಸತ್ತ ಮಾನವನೆನ್ನಿ ತುಳಸಿ ಮಿಶ್ರರಹಿತ
ತುತ್ತು ತೆಗೆದುಕೊಂಡರೆ ವಮನ ಸರಿಯೋ ॥

## ಸಾಲಿಗ್ರಾಮ ಪ್ರತಿಮೆ – ಸ್ತ್ರೀಯರು :

- ***ಸ್ತ್ರೀಯರು ಸಾಲಿಗ್ರಾಮ ಪೂಜೆ :***

ಸ್ತ್ರೀಯರು ಸಾಲಿಗ್ರಾಮ ಪೂಜೆಯನ್ನು ಮಾಡುವ ಸಂಪ್ರದಾಯವಿರುವುದಿಲ್ಲ. ಮನೆಯಲ್ಲಿ ಸಾಲಿಗ್ರಾಮವಿದ್ದರೇ ಅದನ್ನು ಬೇರೆಯವರಿಂದ ಪೂಜೆ ಮಾಡಿಸಬೇಕೇ ವಿನಃ ತಾನೇ ಪೂಜಿಸಬಾರದು.

**ನ ಜಾತುಚಿತ್ ಸ್ತ್ರಿಯಾ ಕಾರ್ಯಾಂ ಶಾಲಗ್ರಾಮಸ್ಯ ಪೂಜನಂ ।
ಹಿತ್ವಾ ಪುಣ್ಯಸಮೂಹಂ ಸಾ ಸತ್ವರಂ ನರಕಂ ವ್ರಜೇತ್ ॥**

ಮೋಹದಿಂದಾಗಲೀ, ಅಜ್ಞಾನದಿಂದಲಾಗಲೀ ಸಾಲಿಗ್ರಾಮ ಪೂಜೆಯನ್ನು ಮಾಡಿದರೆ ಎಷ್ಟೇ ಪತಿವ್ರತೆಯಾಗಿದ್ದರೂ, ಪುಣ್ಯವಂತಳಾಗಿದ್ದರೂ ಕೂಡಲೇ ಚ್ಯುತಳಾಗುವಳು.

**ಯದಿ ಭಕ್ತಿರ್ಭವೇತ್ ತಸ್ಯ ಸ್ತ್ರೀಣಾಂ ವಾಽಪಿ ವಸುಂಧರೆ ।
ದೂರಾದೇವಾಸ್ಪೃಶನ್ ಪೂಜಾಂ ಕಾರಯೇತ್ ಸುಸಮಾಹಿತಃ ॥**

– *ಮಾ 181*

ವಿಶೇಷವಾಗಿ ಭಕ್ತಿ ಇದ್ದರೆ ಸಾಲಿಗ್ರಾಮವನ್ನು ಮುಟ್ಟದೆ ದೂರದಲ್ಲಿ ಕುಳಿತಿದ್ದು ಬೇರೆ ಸಾಲಿಗ್ರಾಮ ಪೂಜಾಧಿಕಾರವಿರುವುವವರಿಂದ ಪೂಜೆ ಮಾಡಿಸಬೇಕು.

**ಶಾಲಿಗ್ರಾಮೋ ನ ಸ್ಪೃಷ್ಟವ್ಯೋ ಹೀನವರ್ಣೈಃ ವಸುಂಧರೇ ।**
**ಸ್ತ್ರೀಶೂದ್ರಕರಸಂಸ್ಪರ್ಶಃ ವಜ್ರಸ್ಪರ್ಶಾಧಿಕೋ ಮತಃ ॥**

ಸ್ತ್ರೀ ಶೂದ್ರಾದಿಗಳು ಶಾಲಿಗ್ರಾಮವನ್ನು ಮುಟ್ಟಬಾರದು. ಮುಟ್ಟಿದರೆ ವಜ್ರಾಯುಧದಿಂದ ದೇವರಿಗೆ ಹೊಡೆದ ಪಾಪಕ್ಕೆ ಗುರಿಯಾಗಬೇಕಾಗುತ್ತದೆ.

ಸ್ತ್ರೀಯರು ಮಾಡಿದ ಸಾಲಿಗ್ರಾಮ ಪೂಜೆಯನ್ನು ಭಗವಂತನು ಸ್ವೀಕರಿಸುವುದಿಲ್ಲ. ದೋಷವೂ ಪ್ರಾಪ್ತವಾಗುತ್ತದೆ.

***'ನ ಕದಾಚಿತ್ ಸ್ತ್ರೀಯಾ ಕಾರ್ಯಂ'*** ಎಂಬ ಪ್ರಮಾಣವು ಇದನ್ನೇ ವಿವರಿಸುತ್ತದೆ.

ಸಾಲಿಗ್ರಾಮದ ಮೇಲೆ ಸ್ತ್ರೀ ಹಾಕಿದ ಪುಷ್ಪಗಳು ಅಧಿಕ ಪಾಪಗಳನ್ನು ತಂದೊಡ್ಡುತ್ತದೆ.

**ಸ್ತ್ರೀ ಪಾಣಿಮುಕ್ತ ಪುಷ್ಪಾಣಿ ಶಾಲಿಗ್ರಾಮಶಿಲೋಪರಿ ।**
**ಪರ್ವೈರಧಿಕಪಾಪಾನಿ ವದಂತಿ ಬ್ರಾಹ್ಮಣೋತ್ತಮಾಃ ॥**

ಸ್ತ್ರೀಯರು ಸಾಲಿಗ್ರಾಮದ ಮೇಲೆ ಹಚ್ಚಿದ ಗಂಧದ ಲೇಪನ ವಿಷ್ಣುವಿಗೆ ವಿಷವನ್ನು ಲೇಪನ ಮಾಡಿದಂತೆ. (ಒಂದು ರೀತಿ ಪೂತನಿಯಂತೆ).

**ಚಂದನಂ ವಿಷಪಂಕಾಭಂ ಕುಂಕುಮಂ ವಜ್ರಸನ್ನಿಭಂ ।**
**ನೈವೇದ್ಯಂ ಕಾಲಕೂಟಾಭಂ ಭವೇದ್ ಭಗವತಃ ಕೃತಮ್ ॥**

ಕುಂಕುಮವು ವಜ್ರಾಯುಧದಿಂದ ಹೊಡೆದಂತೆ, ನೈವೇದ್ಯವಾದರೂ, ಕಾಲಕೂಟವನ್ನು ಕುಡಿಸಿದ ಪಾಪಕ್ಕೆ ಸಮಾನವಾಗುವುದು. ಆದ್ದರಿಂದ ಸ್ತ್ರೀಯರು ಸಾಲಿಗ್ರಾಮವನ್ನು ಸ್ಪರ್ಶಿಸಿದರೂ ಹದಿನಾಲ್ಕು ಇಂದ್ರರಿರುವ ತನಕ ನರಕದಲ್ಲಿ ಕೊಳೆಯಬೇಕಾಗುತ್ತದೆ.

**ತಸ್ಮಾತ್ ಸರ್ವಾತ್ಮನಾ ತ್ಯಾಜ್ಯಃ ಸ್ತ್ರೀಯಾ ಸ್ಪರ್ಶ ಶಿಲೊಪರಿ ।**
**ಕುರ್ವತೀ ನರಕಂ ಯಾತಿ ಯಾವದಿಂದ್ರಾಃ ಚತುರ್ದಶ ॥** *–ಪದ್ಮಪುರಾಣ*

**ಸ್ತ್ರೀಣಾಂ ಅನುಪನೀತಾನಾಂ ಶೂದ್ರಾಣಾಂ ಚ ಜನೇಶ್ವರ ।**
**ಸ್ಪರ್ಶನೇ ನಾಧಿಕಾರೋಽಸ್ತಿ ವಿಷ್ಣೋರ್ವಾಶಂಕರಸ್ಯ ಚ ॥**

ಆದರೆ ಸ್ಕಾಂದಪುರಾಣದಲ್ಲಿ ಬೈಜವನೋಪಾಖ್ಯಾನದಲ್ಲಿ (ನಾಗರಕಂಡ 243ನೇ ಅಧ್ಯಾಯ) ಸ್ತ್ರೀಶೂದ್ರಾದಿಗಳು ಮಾಡಬಾರದೆಂದರೆ ಅರ್ಥ ಅವಿವಾಹಿತ ಮಹಿಳೆ ಹಾಗೂ ಅಸಚ್ಛದ್ರರು ಮಾಡಬಾರದೆಂದರ್ಥ. ವಿವಾಹಿತ ಪತಿವ್ರತೆ ಹಾಗೂ ಸಚ್ಛೂದ್ರು ಸಾಲಿಗ್ರಾಮವನ್ನು ಪೂಜಿಸ-ಬಹುದೆಂಬ ಪ್ರಮಾಣವಿದೆ.

**ಅಸಚ್ಛೂದ್ರಗಂ ದಾಸನಿಷೇಧಂ ವಿದ್ಧಿ ಮಾನದ ।**
**ಸ್ತ್ರೀಣಾಮಪಿ ಚ ಸಾಧ್ವೀನಾಶಂ ನೈವಾಽಭಾವಃ ಪ್ರಕೀತಿತಃ ॥**

ಆದರೂ ***"ಚಂದನಂ ವಿಷಪಂಕಾಭಂ"*** ಎಂಬ ಬಲವತ್ತರ ಪ್ರಮಾಣಕ್ಕೆ ವಿರುದ್ಧವಾಗಿ ಈ ಶ್ಲೋಕವನ್ನು ವ್ಯಾಖ್ಯಾನಿಸಬೇಕು.

ಸಾಧ್ವಿಯರಾದರೆ ಸಾಲಿಗ್ರಾಮ ಪೂಜೆ ಮಾಡಿದ ಫಲವು ಬರುವುದರಿಂದ ಸಾಲಿಗ್ರಾಮ ಪೂಜೆಯಿಂದೇನು ಎಂಬರ್ಥ. ಈ ಅರ್ಥದಲ್ಲೇ ವಿಷ್ಣುರಹಸ್ಯವೂ ***"ಬ್ರಾಹ್ಮಣಾದಿ ಶ್ವಪಾಕಾಂತಾಃ"*** ಎಂದು ತಿಳಿಸಿದೆ.

ಪತಿವ್ರತೆಯರು ಪತಿಯನ್ನೆ ದೇವರ ಪ್ರತೀಕವೆಂದು ತಿಳಿಯ-ಬೇಕಾಗಿರುವುದರಿಂದ ಅವರನ್ನು ಸಂತೋಷಪಡಿಸಿದರೆ ಭಗವಂತನು ಸಂತೋಷಪಡುವುದರಿಂದ ಸಾಲಿಗ್ರಾಮದ ಪೂಜೆ ಮಾಡಿದಂತೆ ಆಯಿತು.

ಈ ಕಲಿಯುಗದಲ್ಲಿ ಇಂತಹ ಪಾತಿವ್ರತ್ಯ ಧರ್ಮವು ಅಸಾಧ್ಯವಾದ್ದರಿಂದ ಸಾಲಿಗ್ರಾಮ ಪೂಜೆ ಬೇಡವೆಂದು ನಿಷೇಧಿಸಲಾಗಿದೆ.

* * * * *



# 14. ಗೌರೀಪೂಜೆ ಸ್ತ್ರೀ





ನವದಂಪತಿಗಳಾದ ಮೇಲೆ ಆ ದಾಂಪತ್ಯ ಜೀವನ ಒಡೆದು ಹೋಗದಂತೆ ಇರಲು ಅನ್ಯೋನ್ಯವಾಗಿ ಪತಿಪತ್ನಿಯರ ಜೀವನ ಪಥದಲ್ಲಿ ಯಾವುದೇ ಎಡರು-ತೊಡರು ಇಲ್ಲದಂತೆ ನಡೆಯಲು 'ಗೌರೀ ಪೂಜೆ'ಯು ಅವಶ್ಯಕವಾಗಿದೆ.

ಗೌರೀಪೂಜೆ ಎಂದರೆ ಗೌರ – ಬಿಳಿಯಾದ ವಾಸುದೇವನು, ಗೌರೀ ಎಂದರೆ ಅವನ ಪತ್ನಿ ಮಾಯಾದೇವಿಯು ಅಥವಾ ಗೌರ – ಪರಶುಕ್ಲತ್ರಯರಲ್ಲಿ ಒಬ್ಬರಾದ ವಾಯು-ಭಾರತೀಯರು ಹಾಗೂ ದಾಂಪತ್ಯ ಜೀವನದಾತರಾದ ಉಮಾ-ಮಹೇಶ್ವರರ ಪೂಜೆ ಎಂದರ್ಥ.

ಗೌರೀದೇವಿಗೆ ಭಗವಂತನ ವರದಿಂದಾಗಿ ಯಾರೂ ಗೌರೀದೇವಿಯ ಅಂತರ್ಯಾಮಿಯ ಪೂಜೆಯನ್ನು ನಿತ್ಯವು ಮಾಡುವರೋ ಅವರಿಗೆ ಜೀವನದಲ್ಲಿ ಸುಖ, ಸಂತೋಷ-ಸೌಭಾಗ್ಯ-ಸಂತಾನಾದಿ ಲಾಭ-ಗಳುಂಟಾಗುತ್ತವೆ.

**ಭವ ಸೌಭಾಗ್ಯದಾ ದೇವಿ ಸರ್ವಾಸಾಮಪಿ ಯೋಷಿತಾಮ್ ।**
**ತ್ವತ್ಪ್ರಸಾದೇನ ವೈ ಸರ್ವಾ ಯೋಷಿತ್ ಸಹಭರ್ತೃಕಾ ॥**
**ನಿತ್ಯಂ ಸುಖಂ ಪ್ರಾಪ್ನುವಂತು ವಿನಿರ್ಮುಕ್ತಖಿಲಾಶಯಾಃ ॥** – ಬ್ರಹ್ಮ ಭಾಗವತವು ***'ದಾಂಪತ್ಯಾರ್ಥ್ಯಮುಮಾಂ ಸತೀಮ್ ।'*** ಎಂದು ಹೇಳಿದೆ.

- ***ರುಗ್ಮೀಣಿಯಿಂದ ಗೌರೀಪೂಜೆ :***

ಭಾಗವತದಲ್ಲಿ ರುಗ್ಮಿಣೀದೇವಿಯೂ ಸಹ ಕುಲದೇವಿಯಾತ್ರೆಯನ್ನು ಕಾಲು ನಡಿಗೆಯಲ್ಲಿಯೇ ಮಾಡಿ ಅವಳನ್ನು ಭಕ್ತಿಯುತಳಾಗಿ ಪೂಜಿಸಿ ಇತರ ಮದುವೆಯಾಗುತ್ತಿರುವ ಕನ್ಯೆಗೆ ಮಾರ್ಗದರ್ಶನ ಮಾಡಿರುತ್ತಾಳೆ.

**ಪದ್ಭ್ಯಾಂ ವಿನಿರ್ಯಯೌ ದ್ರಷ್ಟುಂ ಭವಾನ್ಯಾ ಪಾದಪಲ್ಲವಂ ।**

ಸಂಸಾರದಲ್ಲಿ ಬುದ್ಧಿಚಾತುರ್ಯ ನೀಡಲೂ ಸಹ ಬುದ್ಧ್ಯಭಿಮಾನಿಯಾದ ಪಾರ್ವತಿಯ ಪೂಜೆ ಅವಶ್ಯಕವೇ ಆಗಿರುತ್ತದೆ. ಭಗವಂತನ ಪರಿವಾರ ದೇವತೆಗಳೆಂದು ಪೂಜಿಸುವುದು ಶಾಸ್ತ್ರೀಯ ಪದ್ಧತಿಯೇ ಆಗಿದೆ.

ಕನ್ಯೆಯರು ವಿವಾಹದ ಮೊದಲು ನಂತರವೂ ಗೌರೀಪೂಜೆಯನ್ನು ಮಾಡುತ್ತಿರಬೇಕು. ಸದ್ಗುಣಿಯಾದ ಪತಿ ಹಾಗೂ ಪುತ್ರಸಂಪತ್ತಿಗಾಗಿ ದೇವೇಂದ್ರಾಣಿಯನ್ನು ಹಾಗೂ ರುದ್ರಾಣಿಯನ್ನು ಪೂಜಿಸುವ ಪದ್ಧತಿಯಿದೆ.

**ದೇವೇಂದ್ರಾಣಿ ನಮಸ್ತುಭ್ಯಂ ದೇವೇಂದ್ರ ಪ್ರಿಯಭಾಮಿನಿ ।**
**ವಿವಾಹ ಭಾಗ್ಯಮಾರೋಗ್ಯಃ ಭರ್ತುಲಾಭಂ ಚ ದೇಹಿ ಮೇ ॥**

**ವಿವಾಹಭಾಗ್ಯಮಾರೋಗ್ಯ ಪುತ್ರಲಾಭಂ ಚ ದೇಹಿ ಮೇ ।**

ರುಗ್ಮಿಣೀದೇವಿಯೂ ಸಹ ಕಷ್ಣನೇ ತನಗೆ ಪತಿಯಾಗಲೆಂದು ಭವಾನಿಯನ್ನು ಸ್ತುತಿಸಿದ್ದಾಳೆ.

**ನಮಸ್ತೇ ತ್ವಾಂಬಿಕೇಽಭೀಕ್ಷ್ಣಂ ಸ್ವಸಂತಾನಯುತಾಂ ಶಿವಾಂ ।**
**ಭೂಯಾತ್ ಪತಿರ್ಮೇ ಭಗವಾನ್ ಕೃಷ್ಣಸ್ತದನುಮೋದತಾಮ್ ॥**
*– ಭಾಗ. 10 ಸ್ಕಂಧ*

ಹೀಗೆ ಗೌರೀಪೂಜೆಯು ಸದ್ಗುಣಿಯಾದ ಪತಿ ಲಾಭಕ್ಕೆ ದಾಂಪತ್ಯಕ್ಕೆ ಪತಿಯ ಶ್ರೇಯೋಪ್ರಾಪ್ತಿಗೆ, ಆಯುರಾರೋಗ್ಯಕ್ಕೆ ಅಖಂಡ ಸೌಭಾಗ್ಯಕ್ಕಾಗಿ ಗೌರಿ–ಗೌರರ ಪೂಜೆ ಅವಶ್ಯಕವಾಗಿದೆ.

- ***ಕಾತ್ಯಾಯನೀವ್ರತಃ :***

ಈ ವ್ರತವನ್ನು ಕನ್ಯೆ ಒಳ್ಳೆಯ ಪತಿಲಾಭಕ್ಕೆ ಆಚರಿಸಬೇಕು. ಶ್ರೀಕೃಷ್ಣನೇ ತಮಗೆ ಪತಿಯಾಗಬೇಕೆಂದು ಬಯಸಿದ ಗೋಪಿಕಾಸ್ತ್ರೀಯರು 'ಕಾತ್ಯಾಯನೀವ್ರತ'ವನ್ನು ಮಾಡಿರುವರು.

**ಹೇಮಂತೇ ಪ್ರಥಮೇ ಮಾಸಿ ನಂದವ್ರಜಕುಮಾರಿಕಾಃ ।**
**ಚೇರುಃ ಹವಿಷ್ಯಂ ಭುಂಜಾನಾಃ ಕಾತ್ಯಾಯನ್ಯರ್ಚನ ವ್ರತಂ ॥**
**ಕಾತ್ಯಾಯನಿ ಮಹಾಮಾಯೇ ಮಹಾಯೋಗಿನ್ಯಧೀಶ್ವರೀ ।**
**ನಂದಗೋಪ ಸುತಂ ದೇವಿ ಪತಿಂ ಮೇ ಕುರು ತೇ ನಮಃ ॥**

ಹೀಗೆ ಒಂದು ತಿಂಗಳು ಈ ಗೌರೀಪೂಜೆಯನ್ನು ಮಾಡಿದ್ದಾರೆ.

**"ಏವಂ ಮಾಸವ್ರತಂ ಚಕ್ರುಃ ಕುಮಾರ್ಯಃ ಕೃಷ್ಣಚೇತಸಃ"**

ಇದನ್ನು ಸಹ ಅಖಂಡ ಸೌಭಾಗ್ಯಕ್ಕಾಗಿ ರಜಸ್ವಲೆಯಾಗಿರದ ಕನ್ಯೆಯರು ಮಾಡಬೇಕು. ಇದರಲ್ಲಿ ಐದು ಮಣ್ಣಿನಿಂದ ತಯಾರಿಸಿದ ಪ್ರತಿಮೆಗಳಲ್ಲಿ ಅಥವಾ ಉಂಡೆಯಾಗಿರುವ ಐದು ಅರಿಷಿಣ ಬೇರಿನಲ್ಲಾಗಲೀ ಪಂಚದೇವಿಯರನ್ನು ಆವಾಹಿಸಿ ಪೂಜಿಸಬೇಕು.

ಶ್ರೀ–ಭೂ–ಸರಸ್ವತೀ–ಭಾರತೀ–ಗೌರಿ ದೇವಿಯರನ್ನು ಆವಾಹಿಸಿ, ಷೋಡಶೋಪಚಾರ ಪೂಜೆಯನ್ನಾಚರಿಸಬೇಕು.

ಮೌನಗೌರೀವ್ರತದಲ್ಲಿ ಐದು ಸಂಖ್ಯೆಗೆ ಪ್ರಾಧಾನ್ಯವಿದೆ. ಐದು ವರ್ಷದ ಕನ್ಯೆಯರು ಐದು ಪ್ರತೀಕಗಳಲ್ಲಿ, ಐದು ಮಂದಿ ಮುತ್ತೈದೆಯರನ್ನು ಐದು ವರ್ಷ ಪೂಜಿಸಿ, ಐದು ಮುತ್ತೈದೆಯರಿಗೆ ಮುತ್ತಿನಂತಿರುವ ಅರಿಷಿಣ–ಕುಂಕುಮ–ಕಾಡಿಗೆ–ಕುಪ್ಪಸ–ಪಾದಾಂಗುಲೀ ಎಂಬ ಐದು 'ನಾರೀಮುದ್ರೆ'–ಯೆನಿಸಿದ ಐದು ವಸ್ತುದಾನ ಮಾಡಬೇಕು.

**ಕಬರೀ ಕಾಚಮಣಯಃ ಕಜ್ಜಲಂ ಕುಂಚುಕಂ ತಥಾ ।**
**ಪಾದಾಂಗುಲೀಯಕಂ ಚೆತಿ ನಾರೀಮುದ್ರಾ ಪ್ರಕೀರ್ತಿತಾ ॥**

– *ಪರಾಶರ ಸ್ಮೃತಿ*

(ಮೌ = 5, ನ = 5, ಗೌ + ರಿ = 3 + 2 = 5)

ಐದು ದೇವಿಯರನ್ನು, ಐದು ವರ್ಷ, ಐದು ವಸ್ತುಗಳಿಂದ ಪೂಜಿಸುವ ವ್ರತವೇ 'ಮೌನಗೌರೀ' ಎಂದರ್ಥ.

ಈ ವ್ರತವನ್ನು ಹೇಮಂತ ಋತುವಿನಲ್ಲಿ ಮಾಡಿದರೆ ಕಾತ್ಯಾಯನೀ ವ್ರತವೆನಿಸುತ್ತದೆ. ಮಾಘಪೂರ್ಣಿಮೆಯಿಂದ ಪಾಲ್ಗುಣಪೂರ್ಣಿಮೆಯವರೆಗೆ ಮಾಡಿದರೆ 'ಮೌನಗೌರೀ' ಎನಿಸುತ್ತದೆ.

ಈ ವ್ರತಾಚರಣೆಯಿಂದಾಗಿ ಅಖಂಡ ಸೌಭಾಗ್ಯ ಲಭಿಸುತ್ತದೆ.

**ಸುವಾಸಿನ್ಯಶ್ಚಾಪಿ ತಥಾ ವಸ್ತ್ರಾಲಂಕಾರ ಭೂಷಣೈಃ ।**
**ಪೂಜಯೇಚ್ಚ ತತಃ ಪಶ್ಚಾತ್ ಕುರ್ಯಾತ್ ಗೌರೀ ವಿಸರ್ಜನಮ್ ॥**
**ಏವಂ ಕೃತೇ ವಿಧಾನೇऽಸ್ಮಿನ್ ನಾರೀ ಅವೈಧವ್ಯಮಾಪ್ನುಯಾತ್ ॥**

- ***ನಿತ್ಯ ಗೌರೀ ಪೂಜೆ :***

ಸಾಧ್ವೀ ಸ್ತ್ರೀಯು ಪ್ರತಿದಿವಸವೂ ಶುಚಿಯಾಗಿ ಲಕ್ಷ್ಮೀಪೂಜೆ, ತುಲಸೀಪೂಜೆ, ಗೌರೀಪೂಜೆ, ಹೊಸ್ತಿಲಪೂಜೆ ಮೊದಲಾದವುಗಳನ್ನಾಚರಿಸುತ್ತಿರಬೇಕು.

ವಿವಾಹ ಕಾಲದಲ್ಲಿ ಲಭಿಸಿದ್ದ ಬೆಳ್ಳಿಯ ಗೌರಿದೇವಿ, ಗೋಮಾತೆ, ಗಂಗಾದೇವಿ ಥಾಲಿ ಮೊದಲಾದವುಗಳನ್ನು ಗೌರೀಪೆಟ್ಟಿಗೆಯಲ್ಲಿಟ್ಟು ಪ್ರತಿದಿನ ಪೂಜಿಸುತ್ತಿರಬೇಕು.

ಪ್ರತಿದಿವಸವು ನೀರನ್ನು ಹೂವಿನಿಂದ ಪ್ರೋಕ್ಷಿಸಿ, ಮಂತ್ರಾಕ್ಷತೆ ಹಾಕಿ, ಹರಿದ್ರಾ-ಕುಂಕುಮಾದಿಗಳನ್ನು ಅರ್ಪಿಸಿ, ಪುಷ್ಪಗಳಿಂದ ಅಲಂಕರಿಸಬೇಕು. ಒಣದ್ರಾಕ್ಷಿ, ಖರ್ಜೂರ, ಸಕ್ಕರೆ ಯಾವುದಾರೊಂದು ವಸ್ತುವನ್ನು ನಿವೇದಿಸಿ ಆರತಿ ಎತ್ತಬೇಕು.

***ಪ್ರತಿದಿನ ಗೌರೀಪೂಜೆಯಲ್ಲಿ–***

* ಭಾನುವಾರಂದು ಗಜಗೌರೀ (ಆನೇಗೌರೀ)
* ಸೋಮವಾರದಂದು ಸಿಂಹಾಸನಗೌರಿ (ಪಟ್ಟದ ಗೌರೀ)
* ಮಂಗಳವಾರ ವಟ ಸಾವಿತ್ರೀ ಗೌರೀ ( ಸಾವಿತ್ರಿಗೆ ಅನುಗ್ರಹಿಸಿದ ಗೌರೀ)
* ಬುಧವಾರ ಅನ್ನಪೂರ್ಣಾ ಗೌರೀ (ಶಿವನ ಕಪಾಲದಲ್ಲಿ ಅನ್ನ ಹಾಕಿದ ಗೌರೀ)
* ಗುರುವಾರ ಶೀಘ್ರಗೌರೀ (ಶೀಗೀ ಗೌರೀ)
* ಶುಕ್ರವಾರ ಅತುಲ ಗೌರೀ (ತುಲನೆಯಿಲ್ಲದ ತುಲಸೀ ಗೌರೀ)
* ಶನಿವಾರ ಜ್ಯೇಷ್ಠಾ ಗೌರೀ (ಹಿರೇಗೌರೀ)

ಹೀಗೆ ವಾರದಲ್ಲಿ ವಿಶೇಷವಾಗಿ ಅನುಗ್ರಹಿಸುವ ಗೌರಿಯ ರೂಪಗಳನ್ನು ಮಂತ್ರಾಕ್ಷತೆಯಿಂದ ಆವಾಹಿಸಿ ಪೂಜಿಸಬೇಕು. ಇದನ್ನೇ 'ವಾರಗೌರೀ' ಎನ್ನಲಾಗಿದೆ.

- ***ಪ್ರತಿತಿಥಿ ಗೌರೀ ವ್ರತ :***

ವಾರ ಗೌರಿಯ ಪೂಜೆಯಂತೆ ಪ್ರತಿಪದಾದಿ ಗೌರೀ ಪೂಜೆಯೂ ವಿಹಿತವಾಗಿದೆ.

ಪಾಡ್ಯದಂದು – ಮೌನಗೌರೀ

ಬಿದಿಗೆ – ಬಿಚ್ಚೋಲೆ ಗೌರೀ (ಓಲೆಯನ್ನು ಬಿಚ್ಚುವ ಸಂದರ್ಭವನ್ನೇ ತಾರದ ಗೌರೀ)

ತದಿಗೆ – ಉಯ್ಯಾಲೆ ಗೌರೀ

ಚತುರ್ಥಿ – ಅಚ್ಯುತಾಂಗಿನೀ ಗೌರಿ

ಪಂಚಮಿ – ಪಂಚನೇತ್ರೀ ಗೌರೀ

ಷಷ್ಠಿ – ಸೌಭಾಗ್ಯಮುಷ್ಠಿ ಗೌರೀ

ಸಪ್ತಮಿ – ಅಮೃತಗೌರೀ (ಸೊಂದ ಗೌರೀ)

ಅಷ್ಟಮಿ – ಅಷ್ಟಜಂಗಮ ಗೌರೀ (ಎಂಟು ದಿಕ್ಕಿನ ಭಕ್ತರ ಉದ್ಧಾರ ಮಾಡುವ ಗೌರೀ)

ನವಮಿ – ನವದುರ್ಗಾ ಗೌರೀ

ದಶಮೀ – ದಶಾವತಾರಿ ಗೌರೀ

ಏಕಾದಶಿ – ರುಗ್ಮಿಣೀ ಗೌರೀ (ರುಗ್ಮಿಣಿ ದೇವಿ ಪೂಜಿತಳು)

ದ್ವಾದಶಿ – ವೃಕ್ಷವಾಸಿನೀ ಗೌರೀ

ತ್ರಯೋದಶೀ – ಮಂಗಳಗೌರೀ

ಚತುದರ್ಶಿ – ಚತುರ್ಭುಜ ಭಗಿನೀ ಗೌರೀ (ಶ್ರೀಕೃಷ್ಣ ತಂಗಿಯಾದ ಗೌರೀ)

ಪೂರ್ಣಿಮೆ – ಪೂರ್ಣಗೌರೀ

ಅಮಾವಾಸ್ಯೆ – ಆಶ್ಲೇಷಾಗೌರೀ (ಸರ್ಪಗೌರೀ)

ಹೀಗೆ ಹದಿನೈದು ಗೌರಿಗಳನ್ನು ನಿತ್ಯ ಪೂಜಿಸುವವರಿಗೆ ನಿತ್ಯ ಸೌಭಾಗ್ಯ–ಆಯುರಾರೋಗ್ಯ – ಸೌಮಾಂಗಲ್ಯ ಭಾಗ್ಯ ಲಭಿಸುವುದು. (ವಾದಿರಾಜರ ಗೌರೀ ಪೂಜೆ)

- ***ಚೈತ್ರ ಗೌರೀ :***

ಚೈತ್ರಮಾಸದ ತದಿಗೆ ದಿನದಂದು ತೊಟ್ಟಲಲ್ಲಿ ಗೌರೀದೇವಿಯನ್ನು ಕೂಡಿಸಿ ಆವಾಹಿಸಿ ವೈಶಾಖ ಮಾಸ ಶುಕ್ಲ ತದಿಗೆಯವರೆಗೂ ಮಾಡುವ ಮಾಸಗೌರೀವ್ರತವು. ಈ ಕಾಲದಲ್ಲಿ ಪ್ರತಿದಿನವೂ ಪಾನಕ ಕೋಸಂಬರೀ ಮೊದಲಾದವುಗಳನ್ನು ನಿವೇದಿಸಿ, ದೇವರನಾಮಗಳಿಂದ ಸಂತೋಷಗೊಳಿಸಿ ಆರತಿಯನ್ನೆತ್ತಬೇಕು.

ನೂತನವಾಗಿ ವಿವಾಹಿತರಾದ ನವವಧುಗಳು ವಿವಾಹವಾದ ವರ್ಷದಿಂದಾರಂಭಿಸಿ ಐದು ವರ್ಷ ಮಾಡಬೇಕಾದ ವ್ರತವಿದು. ವಿವಾಹವಾದ ದಿವಸ ತಾಯಿಯ ಮನೆಯಲ್ಲಿಯೇ ಆಚರಿಸಬೇಕು. ಉಳಿದ ನಾಲ್ಕು ವರ್ಷ ಪತಿಯ ಮನೆಯಲ್ಲಿ ಆಚರಿಸಿ ಉದ್ಯಾಪನ ಮಾಡಬೇಕು.

ಶ್ರಾವಣ ಮಂಗಳವಾರದಂದು ಅಭ್ಯಂಜನ ಮಾಡಿ ಶುದ್ಧಳಾಗಿ, ಶುದ್ಧವಾದ ರೇಷ್ಮೇ ಸೀರೆ ಧರಿಸಿ, ತಾನು ಹರಿನಿವೇದಿತ ಪುಷ್ಪಗಳಿಂದ ಅಲಂಕೃತಳಾಗಿ, ಮಂಟಪದಲ್ಲಿ ಅಷ್ಟದಳ ಪದ್ಮ ಬರೆದು ಅಕ್ಕಿಯನ್ನು ಹರಡಿ, ಕಲಶವನ್ನು ಸ್ಥಾಪಿಸಬೇಕು. ಕುಪ್ಪಸದ ಕಣವನ್ನು ತ್ರಿಕೋಣಾಕಾರವಾಗಿ ಮಡಚಿ, ಕಳಶದ ಎರಡೂ ಬದಿಯಲ್ಲಿಡಬೇಕು. ಹದಿನಾರು ದೀಪ ಬೆಳಗಬೇಕು. ದೇವಿಯನ್ನು ಭಕ್ತ್ಯಾದರಗಳಿಂದ ಪೂಜಿಸಿ, ಮಂಗಲದ್ರವ್ಯಗಳನ್ನು ಅರ್ಪಿಸಿ ಬಾಗಿಣವನ್ನು ಅರ್ಪಿಸಬೇಕು. ನಂತರ ತಾಯಿ ಹಾಗೂ ಹದಿನಾರು ಮುತ್ತೈದೆಯರಿಗೆ ಭೋಜನ ಮಾಡಿಸಬೇಕು.

**ಮಾತ್ರೇ ಸುವಾಸಿನೀಭ್ಯಶ್ಚೋಪಾಯನಂ ದೇಯಮುತ್ತಮಂ ।**
**ಜನನೀ ಮಾತೃಸಂಬಂಧೀಸ್ತ್ರಿಯಃ ಷೋಡಶ ಭೋಜಯೇತ್ ॥**

ಇದೊಂದು ನಿತ್ಯ ಮುತ್ತೈದೆತನ ನೀಡುವ ವ್ರತವಾಗಿದೆ. ಪತಿಗೆ ಆಯುರ್ದಾನ.

**ಪಂಚಸಂವತ್ಸರೇಷ್ವೇವಂ ಕರ್ತವ್ಯ ಪತಿಮಿಚ್ಛುಭಿಃ ।**
**ಸೌಮಾಂಗಲ್ಯಂ ಚ ಸೌಭಾಗ್ಯಂ ಪ್ರಾಪ್ನುವಂತಿ ನ ಸಂಶಯಃ ॥**
– *ಭ.ಪು.*

- ***ಸುವರ್ಣಗೌರೀ ವ್ರತ :***

ಸುವರ್ಣಗೌರೀ ಅಥವಾ ಸ್ವರ್ಣಗೌರಿವ್ರತವನ್ನು ಎಲ್ಲಾ ಸ್ತ್ರೀಯರು ಶ್ರಾವಣ ಶುಕ್ಲ ತೃತೀಯಾ ದಿನದಂದು (ಭಾದ್ರಪದ ತೃತೀಯದಲ್ಲಿ) ಗೌರೀ – ಪರಮೇಶ್ವರನನ್ನು ಪೂಜಿಸುವ ಪದ್ಧತಿಯಿದೆ.

ಸುವರ್ಣವೆಂದರೆ ಹದಿನಾರು ಎಂದರ್ಥ. (ಸು = 7, ವ = 4, ಣ = 5 =16) ಒಟ್ಟು ಹದಿನಾರು ವರ್ಷ ಮಾಡಲೇಬೇಕಾದ ವ್ರತವೆಂದರ್ಥ.

ಹದಿನಾರು ಗ್ರಂಥಿಗಳುಳ್ಳ ದಾರವನ್ನು ಅರ್ಚಿಸಿ, ಅರ್ಪಿಸಿ ಧರಿಸುವುದು. ಹದಿನಾರು ಬಾಗಿನ ದಾನ ಮಾಡಬೇಕು.

**ವಾಯನಾನಿ ಪ್ರದೇಯಾನಿ ದಂಪತೀಭ್ಯಸ್ತು ಷೋಡಶ ।**
**ಏವಂ ಷೋಡಶವರ್ಷಾಣಿ ಅಷ್ಟೌ ಚತ್ವಾರಿ ವಾ ಪುನಃ ॥**

- ***ಹರಿತಾಲಿಕಾ ವ್ರತ :***

ಭಾದ್ರಪದ ತೃತೀಯಾದಂದೇ ಹರಿತಾಲಿಕಾ ಗೌರೀವ್ರತವನ್ನು ಮಾಡುವ ಪದ್ಧತಿಯಿದೆ.

- ***ಜ್ಯೇಷ್ಠಾಗೌರೀವ್ರತ :***

ಸುವರ್ಣಗೌರೀವ್ರತ ಮಾಡುವ ಪದ್ಧತಿಯಿಲ್ಲದವರು ಎಳೆಯಷ್ಟಮೀ ವ್ರತ ಮಾಡುವರು. ಸಪ್ತಮಿಯಂದು ಜ್ಯೇಷ್ಠಾಗೌರೀಯನ್ನು ಆವಾಹಿಸಿ, ಜ್ಯೇಷ್ಠಾ ನಕ್ಷತ್ರವಿರುವ ಅಷ್ಟಮಿಯಂದು ಪೂಜೆ ಮಾಡಿ, ಮೂಲಾ ನಕ್ಷತ್ರವಿರುವ ನವಮಿಯಂದು ವಿಸರ್ಜಿಸಬೇಕು. ನವಮಿಯಂದು ದೋರವನ್ನು ಕಟ್ಟಿಕೊಳ್ಳಬೇಕು.

- ***ದಿವಶೀ ಗೌರೀ :***

ಆಷಾಢ ಅಮಾವಾಸ್ಯೆಯಂದು ನೂತನ ವಧುಗಳು ಮಾಡುವ ವ್ರತವಾಗಿದೆ ಕೊಬ್ಬರಿಬಟ್ಟಲು, ಒಂಬತ್ತು ಅಡಿಕೆ, ಒಂಬತ್ತು ವೀಳೆದೆಲೆ, ಒಂಬತ್ತು ಎಳೆಯ ದಾರದಿಂದ ಗೌರೀಯನ್ನು ಪೂಜಿಸುವುದು.

ಒಂಬತ್ತು ಎಳೆಯ ದಾರಕ್ಕೆ ಒಂಬತ್ತು ಗ್ರಂಥಿಗಳಿರಬೇಕು. ಹೂರಣದ ಕಡುಬು ನೈವೇದ್ಯಕ್ಕೆ ಹತ್ತಕ್ಕೆ ಕಡಮೆ ಇರದಂತೆ ಮಾಡಬೇಕು. ಒಂಬತ್ತು ಹೂರಣದ ಆರತಿ ಬೆಳಗಬೇಕು. ವಿವಾಹವಾಗದಿರುವ ಕನ್ಯೆಯರು ಐದು ಎಳೆಯ ದಾರಕ್ಕೆ ಐದು ಗಂಟುಗಳನ್ನು ಹಾಕಿ, ಗೌರಿಗೆ ಏರಿಸಿ, ಐದು ಗಂಟಿನ ದಾರವನ್ನು ಧರಿಸಿ, ಐದು ಹೂರಣದ ಆರತಿ ಬೆಳಗಬೇಕು.

ಇದನ್ನೇ ಭೀಮೇಶ್ವರ ವ್ರತವೆಂಬುದಾಗಿ ಆಚರಿಸುತ್ತಾರೆ. ಮಣ್ಣಿನಿಂದ ತಯಾರಾದ ಪ್ರತಿಮೆಗಳನ್ನು ಅಲಂಕರಿಸಿ, ದೊಡ್ಡ ಪ್ರತೀಕದಲ್ಲಿ ಭೀಮನಾಯಕ ಶಿವನನ್ನು ಚಿತ್ರಪ್ರತೀಕದಲ್ಲಿ ಗೌರೀದೇವಿಯನ್ನೂ ಪೂಜಿಸಿ, ಹೋಳಿಗೆಯನ್ನು ನಿವೇದಿಸುತ್ತಾರೆ. ಇದನ್ನೇ 'ಗಂಡನ ಪೂಜೆ' ಎನ್ನಲಾಗಿದೆ. ಒಳ್ಳೆಯ ಪತಿ ದೊರಕಲು ಈ ವ್ರತ ಮಾಡಬೇಕು.

- ***ಶೀಗೀ ಗೌರೀ :***

ವಿಜಯದಶಮಿಯಂದು ಸಂಜೆ ಶೀಗೀಗೌರಿಯನ್ನು ಪ್ರತಿಷ್ಠಾಪಿಸಿ, ಉಪಚಾರ ಪೂಜೆಗಳನ್ನು ಅರ್ಪಿಸಬೇಕು. ಹಣ್ಣಿನಿಂದ ಆರತೀ ಎತ್ತಬೇಕು.

- ***ಹುಣ್ಣಿಮೇ ಗೌರೀ :***

ಉತ್ಥಾನ ದ್ವಾದಶಿಯಂದೆ ಗೌರೀ-ಪರಮೇಶ್ವರರನ್ನು ಕೂಡಿಸಿ, ಹುಣ್ಣಿಮೆಯವರೆಗೂ ಸಂಜೆ ನಿತ್ಯ ಪೂಜಿಸಿ ಹಣ್ಣುಗಳಿಂದ ಆರತಿ ಮಾಡಿ, ಹುಣ್ಣಿಮೆಯಂದು ನೈವೇದ್ಯ ಮಾಡಿ ವಿಸರ್ಜನೆ ಮಾಡುವುದು. ಇದೇ ಗೌರೀ ಹುಣ್ಣಿಮೆ.

ಹೀಗೆ ವಿವಾಹ ಕಾಲದ ಗೌರೀ ಪೂಜೆಯಿಂದಾರಂಭಿಸಿ ವಿವಾಹವಾದ ಹೊಸ ವರ್ಷಗಳಲ್ಲಿ ಹಾಗೂ ಮುಂದಿನ ವರ್ಷಗಳಲ್ಲಿ ಒಂದಲ್ಲ ಒಂದು ಗೌರೀ ಪೂಜೆ ಮಾಡುವುದು ಶಾಸ್ತ್ರೀಯವಾಗಿದೆ. ಇದನ್ನಾರಿಸಿದ ಸ್ತ್ರೀಯರು ಉತ್ತಮ ಪತಿಯ ಆದೇಶ ಪಾಲನಾ ವ್ರತ, ಏಕದಶ್ಯಾದಿ ವ್ರತ, ಪಾಕಕ್ರಿಯೆಯಿಂದ ಅಗ್ನಿವ್ರತ ಹೀಗೆ ಮೂರು ವ್ರತಗಳಿಂದ ಭಗವಂತನ ಮೂರು ರೂಪಗಳನ್ನು ಸಂತೋಷಪಡಿಸುವ ಸ್ತ್ರೀಯೇ ಪತಿವ್ರತೆ.

**ಯಾ ತ್ರಿಭಿಃ ವ್ರತೈಃ ಸಹಿತಾ ಸೈವ ಸ್ತ್ರೀ ತು ಪತಿವ್ರತಾ ॥**

ತನ್ನ ಕರ್ಮ, ಮನಸ್ಸು ಮಾತುಗಳೆಂಬ ತ್ರಿಕರಣಗಳಿಂದಲೂ ತನ್ನ ಪತಿಯ ಹಿತವನ್ನೇ ಬಯಸುವ ಸ್ತ್ರೀಯೆ ಪತಿವ್ರತೆ.

**ಕರ್ಮಣಾ ಮನಸಾ ವಾಚಾ ಭರ್ತುಃ ಪ್ರಿಯಹಿತೈಷಿಣೀ ।**
**ಸಾ ಚಾಪಿ ಕಥ್ಯತೆ ನಾರೀ ಪತಿವ್ರತ ಪರಾಯಣಾ ॥** – *ಪದ್ಮ*
**ಮನ್ಯತೇ ಚ ಪರಂ ಸಾಧ್ವೀ ಸಾ ಚ ಭಾರ್ಯಾ ಪತಿವ್ರತಾ ।**
– *ಪದ್ಮ-ಸೃಷ್ಟಿ -47/60*

ಯಾವ ಸಾಧ್ವಿಯು ಪ್ರತಿದಿನವೂ ತನ್ನ ಪತಿಯ ಹಿತ ಸಾಧನೆಯನ್ನೇ ಚಿಂತಿಸುವಳೋ, ತವರು ಮನೆ-ಗಂಡನ ಮನೆ ಎರಡನ್ನೂ ಉದ್ಧರಿಸುವಳೋ ಅವಳೇ ಪತಿವ್ರತೆ.

ಯಾವ ಸ್ತ್ರೀಯು ತನ್ನ ಪುತ್ರಾದಿಗಳಿಗಿಂತಲೂ ನೂರರಷ್ಟು ಸ್ನೇಹವನ್ನು ಪತಿಯಲ್ಲಿ ತೋರುವಳೋ, ಸೇವಕರು ರಾಜನಿಗೆ ಭಯಪಟ್ಟು ನಡೆಯುವಂತೆ ಪತಿಗೆ ಅಂಜಿ ನಡೆಯುವಳೋ, ಪತಿಯನ್ನು ಭಗವಂತನ ಅಧಿಷ್ಠಾನವೆಂದೇ ಸೇವಿಸುವಳೋ ಅವಳೇ ನಿಜವಾದ ಪತಿವ್ರತೆ.

**ಪುತ್ರಾಣಾಂ ಶತಗುಣಂ ಚ ಸ್ನೇಹಂ ಕುರ್ಯಾತ್ ಪತಿಂ ಸತೀ ।**
**ಯಾ ಪತಿಂ ಹರಿಭಾವೇನ ಭಜೇತ್ ಶ್ರೀರಿವ ತತ್ಪರಾ ।**
**ಹರ್ಯಾತ್ಮನಾ ಹರೇರ್ಲೋಕೇ ಪತ್ಯ ಶ್ರೀರಿವ ಮೋದತೇ ॥**
– *ಭಾಗ-7ಸ್ಕಂ*

ಯಾವ ಸ್ತ್ರೀಯು ಪತಿಯ ಆದೇಶವನ್ನು ಚಾಚೂ ತಪ್ಪದೇ ಪಾಲಿಸುವ ವ್ರತ, (ಭರ್ತುರಾದೇಶವರ್ತಿನೀ) ಏಕಾದಶೀ ವ್ರತ, ವಿಷ್ಣುಪಂಚಕಾದಿ ವ್ರತ, ಹಾಗೂ ಪಾಕ ತಯಾರಿಯಿಂದ ಪತಿಯ ವೈಶ್ವದೇವಾದಿಗಳಿಗೆ ಅನುವು ಮಾಡಿ ಪಾಕವ್ರತ. ಹೀಗೆ ಆದೇಶಪಾಲೆ ಪತ್ಯಂತರ್ಗತ ನಾರಾಯಣನನ್ನು ಪಾಕಾದಿಗಳಿಂದ ಅತಿಥಿ ಅಭ್ಯಾಗತ ಸೇವಾವ್ರತದಿಂದ ಭಗವದಾರಾಧನೆ ಮಾಡುವ ಸ್ತ್ರೀಯೇ ಪತಿವ್ರತೆ.

- ***ಶಂಕರ ಪಾರ್ವತೀ ಪೂಜೆ :***

ಶಾಸ್ತ್ರದಲ್ಲಿ ಪುತ್ರ ನಿಲ್ಲದವನಿಗೆ ಗತಿಯಿಲ್ಲ ಎನ್ನಲಾಗಿದೆ.

**ಅಪುತ್ರಸ್ಯ ಗತಿರ್ನಾಸ್ತಿ**

ಪುತ್ರರಹಿತನು ಪುನ್ನಾಮ ನರಕಕ್ಕೆ ಬೀಳುವನು.

**ಪುನ್ನಾಮನರಕಂ ಪುತ್ರವಿಹೀನಃ ಪರಿಪಶ್ಯತಿ ।**
**ನ ತಪೋಭಿರ್ನ ಧರ್ಮೇಣ ತನ್ಮೋಚಯಿತುಮೀಶ್ವರಃ ॥** – *ಕಾ.ಪು.*

ಇದಕ್ಕಾಗಿ ಶಿವಪಾರ್ವತಿಯರ ವಿಶೇಷ ಪೂಜಾದಿಗಳಿಂದ ಸತ್ಸಂತಾನವನ್ನು ಪಡೆಯಬಹುದಾಗಿದೆ.

* * * * * *



# 15. ಬಾಗಿಣ

- ***ಬಾಗಿಣ – ಸ್ತ್ರೀಯರು :***

  ಮುತ್ತೈದೆ ಸ್ತ್ರೀಯರು ತಮ್ಮ ಪತಿಯ ಆಯುಸ್ಸು ಅಭಿವೃದ್ಧಿಯಾಗಲು ಪುತ್ರವತಿಯಾದ ಮುತ್ತೈದೆಗೆ ವಿಶೇಷ ಸಂದರ್ಭಗಳಲ್ಲಿ ಬಾಗಿಣ ಕೊಡಬೇಕು.

  ಪ್ರತಿ ಶುಕ್ರವಾರ, ಮಂಗಳವಾರ, ದ್ವಾದಶೀ, ಪೂರ್ಣಿಮೆ, ಹಬ್ಬದಿವಸಗಳು, ಮದುವೆ, ವೈಶಾಖಶುದ್ಧ ಪೂರ್ಣಿಮೆ, ಕಾರ್ತಿಕ ಶುದ್ಧ ಪೂರ್ಣಿಮೆ, ಮಾಘ ಶುದ್ಧ ಪೂರ್ಣಿಮೆ, ಆಷಾಢ ಶುದ್ಧ ಪೂರ್ಣಿಮೆಯಂದು ಸಾವಿತ್ರಿಯ ಪೂಜೆ ಮಾಡಿ ತಾಂಬೂಲ ದಕ್ಷಿಣೆ ಸಹಿತ ಬಾಗಿಣ ಕೊಡಬೇಕು.

  ಸಂಕ್ರಮಣದ ಹಿಂದಿನ ದಿನವಾದ ಭೋಗಿ ಹಬ್ಬದಂದು ಪ್ರತಿಯೊಂದು ಪದಾರ್ಥಗಳು, ಪರಿಮಳ ದ್ರವ್ಯಗಳು, ತಾಂಬೂಲಾದಿಗಳನ್ನು ದಾನ ಮಾಡಬೇಕು.

  ಬಾಗಿಣವನ್ನು ಸ್ತ್ರೀಯರು ತಮ್ಮ ಸೌಭಾಗ್ಯ ವೃದ್ಧಿಗಾಗಿ ನೀಡಲು ಶಾಸ್ತ್ರದಲ್ಲಿ ತಿಳಿಸಲಾಗಿದೆ. ಬಾಗಿಣ ದಾನದಿಂದ ರಜಸ್ವಲಾ ದೋಷದಿಂದುಂಟಾದ ಪಾಪವು ಪರಿಹೃತವಾಗುತ್ತದೆ.

- ***ಬಾಗಿಣದಲ್ಲಿರಬೇಕಾದ ವಸ್ತುಗಳು :***

- ***ಮೊರ :*** ಮೊರಕ್ಕೆ ವಂಶಪಾತ್ರ, ವೇಣುಪಾತ್ರ, ಶೂರ್ಪ ಮೊದಲಾದ

ಹೆಸರುಗಳಿವೆ. ಮುಖ್ಯವಾಗಿ ವಂಶಪಾತ್ರ ದಾನವು ದಾನ ಮಾಡಿದವರ ವಂಶವನ್ನು ಬೆಳಗಿಸುತ್ತದೆ. ಬಿದಿರು ಯಾವ ರೀತಿ ಒಂದರ ಜೊತೆಗೆ ಮತ್ತೊಂದು ಹುಟ್ಟಿರುತ್ತದೆಯೋ ಹಾಗೆ ನಮ್ಮ ವಂಶವೂ ಸಂತಾನದಿಂದ ತುಂಬಲಿ ಎಂಬ ಭಾವನೆ ವಂಶಪಾತ್ರದಾನದಲ್ಲಿದೆ. ಈ ಕಾರಣದಿಂದಲೇ ಪ್ಲಾಸ್ಟಿಕ್ ಡಬ್ಬಗಳಲ್ಲಿ ಬಾಗಿಣವು ನಿಷೇಧ ಮಾಡಲಾಗಿದೆ.

ಮೊರವಾದರೂ ಯಾವ ಭಾಗದಲ್ಲಿಯೂ ಛಿನ್ನವಾಗಿರದೇ ಅಖಂಡವಾಗಿರಬೇಕು. ಛಿನ್ನ ಭಿನ್ನವಾದ, ಹುಳುಗಳು ರಂಧ್ರ ಮಾಡಿರುವ, ದಾನ ಬಂದಿರುವ ಮೊರಗಳನ್ನು ಪುನಃ ದಾನ ಮಾಡಲು ಉಪಯೋಗಿಸಬಾರದು.

- ***ತೆಂಗಿನಕಾಯಿ :*** ಭೂ ದಾನಕ್ಕೆ ಸಮವಾದದ್ದು ತೆಂಗಿನಕಾಯಿ ದಾನ. ನಮ್ಮಲ್ಲಿರುವ ದೊಡ್ಡ ತೆಂಗಿನಕಾಯಿಯನ್ನು ಬಾಗಿಣದಲ್ಲಿಡಬೇಕು. ಚಿಕ್ಕ ಕಾಯಿಯನ್ನು ಇಡಬಾರದು. ಇದರ ಜೊತೆಗೆ ಬಾಳೇಹಣ್ಣು ಹಾಗೂ ಇತರ ಹಣ್ಣುಗಳನ್ನು ದಾನ ಮಾಡಿದರೆ ಅಧಿಕ ಪುಣ್ಯ.
- ***ತಾಳಿ-ಕಾಲುಂಗುರ :*** ಸೌಭಾಗ್ಯ ಚಿಹ್ನೆಯಾದ ತಾಳಿ ಹಾಗೂ ಕಾಲುಂಗುರವನ್ನೂ ಬಾಗಿಣದಲ್ಲಿಡಬೇಕು. ಸುವರ್ಣದ ತಾಳಿ ಅತ್ಯಂತ ಶ್ರೇಷ್ಠ. ಶಕ್ತಿ ಇರದಿದ್ದರೆ ಪ್ರತ್ಯಾಮ್ನಾಯವಾಗಿ ಕಿಂಚಿತ್ ಧನವನ್ನಾದರೂ ದಾನ ಮಾಡಬಹುದು.
- ***ಶ್ರೀಕಂಠಚೌರಿ = ಗಂಗಾವನ :*** ಬಾಗಿಣದಲ್ಲಿ ಗಂಗಾವನವನ್ನು ಶ್ರೀಕಂಠ ಮೃಗದ ಬಾಲದಿಂದ ತಯಾರಿಸಿದ್ದಾಗಿರಬೇಕು. [ಕೂದಲಿನಿಂದ ತಯಾರಾದ ಚೌರಿಯನ್ನು ದಾನ ಮಾಡಬಾರದು.] ಈ ದಾನದಿಂದ ಕಪ್ಪಾದ ಹಾಗೂ ಉದ್ದವಾದ ಕೂದಲುಂಟಾಗುತ್ತದೆ. ಇದರ ದಾನದಿಂದ ತಲೆಯಲ್ಲಿರುವ ಗಂಗಾ ಸನ್ನಿಧಾನವೂ ರಕ್ಷಿತವಾಗುತ್ತದೆ. ಅದಕ್ಕೆಂದೆ ಗಂಗಾವನ. ಶ್ರೀಕಂಠನೆಂದರೆ ರುದ್ರದೇವನು. ಶ್ರೀ ಎಂದರೆ ವಿಷ ಶ್ರೀಕಂಠನಾದರೆ ವಿಷಕಂಠ. ರುದ್ರದೇವನು ತನ್ನ ಕೂದಲನ್ನು ಕಿತ್ತಿ ವೀರಭದ್ರನನ್ನು ಸೃಷ್ಟಿಸಿದನು. ನಂತರ ಶ್ರೀಕಂಠ ಮೃಗಗಳು ಶಿವನನ್ನು ಸಂತೋಷಗೊಳಿಸಿ ಗಂಗೆಯಿಂದ ಪವಿತ್ರವಾದ ಶಿವನು ಕಿತ್ತ ಆ ಕೂದಲನ್ನು ತಮ್ಮ ಬಾಲದಲ್ಲಿ ಬರುವಂತೆಯೂ, ಸ್ತ್ರೀಯರು ಅದನ್ನು ಧರಿಸುವಂತೆಯೂ, ಇದರ ದಾನದಿಂದ ಮುಂದೆ ದಾನ ಕೊಟ್ಟ ಸ್ತ್ರೀಯರು 'ನಾಗವೇಣಿ'ಯರಾಗಬೇಕೆಂದು ವರವನ್ನು

ಬೇಡಿದವು. ಶಿವನು ಹಾಗೆ ಆಗಲೆಂದು ವರವನ್ನು ನೀಡಿದನು. ಇದರಿಂದ ಗಂಗೆಯು ಇರುವ ಶಿವನ ಕೂದಲು 'ಗಂಗಾವನ' ಎನಿಸಿತು.

- ***ಗಂಗಾವನ :*** ಗಂಗೆಯ ಸನ್ನಿಧಾನವುಳ್ಳ ಈ ಚೌರಿಗೆ "ಗಂಗಾವನ" ಗಂಗೆಗೆ ಆಶ್ರಯ ಎಂದು ಕರೆಯಲಾಗಿದೆ. ಇದನ್ನು ಧರಿಸದೆ ಗಂಗೆಯ ಸನ್ನಿಧಾನವು ಸ್ತ್ರೀಯರಿಗೆ ಬರಲಾರದು. ಆದ್ದರಿಂದ ಇದನ್ನು ಸರ್ವ ಮುತ್ತೈದೆ ಸ್ತ್ರೀಯರೂ ಧರಿಸಬೇಕು. ಆದ್ದರಿಂದಲೇ ಗಂಗಾವನದ ದಾನದಿಂದ ಸೌಭಾಗ್ಯಗಳು ಲಭಿಸುವುದು ಎಂದು ಪುರಾಣಗಳು ತಿಳಿಸಿವೆ.
- ***ಕಾಡಿಗೆ :*** ಕಾಡಿಗೆಯು ಪರಪುರುಷರನ್ನು ನೋಡಿದ ದೋಷವನ್ನು ಪರಿಹರಿಸುತ್ತದೆ. ಇಂತಹ ಕಾಡಿಗೆಯನ್ನು ದಾನ ಮಾಡಿದರೆ ಪರಪುರುಷದರ್ಶನ ದೋಷ ಹಾಗೂ ನೇತ್ರ ದೋಷವನ್ನು ಪರಿಹರಿಸುತ್ತದೆ.
- ***ಸೌಭಾಗ್ಯ ವಸ್ತುಗಳು :*** ಸುವರ್ಣದ ತಾಳಿ 1, ಬೆಳ್ಳಿ ಕಾಲುಂಗರ 1 ಜೊತೆ, 1 ಜೊತೆ ಕಿವಿಯೋಲೆ, ಮೂಗುತಿ, ಗೆಜ್ಜೆ, ಬಾಚಣಿಗೆ ಮರದ್ದು, ಗಂಗಾವನ, ಕಾಡಿಗೆ, ಕನ್ನಡಿ 1, ಬಳೆಗಳು 12, ಸೀರೆ (9 ಗಜದ್ದು), ಕುಪ್ಪಸ, ವಿಳೆದೆಲೆ ಅಡಿಕೆ 5, ಯಥಾಶಕ್ತಿ ದಕ್ಷಿಣೆ, ಫಲಗಳು, ಬೆಳ್ಳಿಯ ದೀಪ 1 ಜೊತೆ, ಇವುಗಳನ್ನು ಅರಿಷಿಣ-ಕುಂಕುಮ, ಅರಿಷಿಣದ ಬೇರು 5.
- ***ಧಾನ್ಯಗಳು :*** ಗಂಡ-ಹೆಂಡತಿ, ಮಕ್ಕಳು ಒಂದು ಹೊತ್ತು ಅಥವಾ ಒಂದು ದಿನ ಉದರ ಪೂರ್ತಿಯಾಗಿ ತಿನ್ನಲು ಸಾಕಾಗುವಷ್ಟು ಧಾನ್ಯಾದಿಗಳನ್ನು ಕೊಡಬೇಕು.

  ಅಕ್ಕಿ 1 ಸೇರು, ಎರಡಚ್ಚು ಬೆಲ್ಲ, ಉದ್ದಿನಬೇಳೆ, ಕಡಲೇಬೇಳೆ, ಹೆಸರುಬೇಳೆ, ಕಾಲು ಕೆ.ಜಿ. ಹುಣಸೆಹಣ್ಣು, ಕಲ್ಲು ಸಕ್ಕರೆ 100 ಗ್ರಾಂ, ತುಪ್ಪ ಕಾಲು ಕೆ.ಜಿ., ಸಾಂಬಾರ ಪದಾರ್ಥಗಳಾದ ಜೀರಿಗೆ, ಮೆಣಸು, ಮೆಂತ್ಯ, ಸಾಸುವೆ ಇವುಗಳು ನೂರು ತಲಾ ಗ್ರಾಂಗಳು, ಅರಿಷಿಣ, ಕುಂಕುಮ 100 ಗ್ರಾಂ ತಲಾ.

  ಮೊರದಲ್ಲಿ ಒಂದು ಬಾಳೆ ಎಲೆ ಅಥವಾ ಮುತ್ತುಗದ ಎಲೆ ಇಡಬೇಕು. ಈ ವಸ್ತುಗಳನ್ನು ಊಟದಲ್ಲಿ ಬಡಿಸುವ ಕ್ರಮದಲ್ಲೇ ಒಪ್ಪವಾಗಿಡಬೇಕು.

  ಇವುಗಳ ಜೊತೆಗೆ ಅರಿಷಿಣದಿಂದ ಸುತ್ತಲೂ ಸಾರಿಸಿ ಕುಂಕುಮ ಹಚ್ಚಿದ ಮೊರದ ಜೊತೆಯನ್ನು ಒಂದರ ಮೇಲೊಂದು ವಿರುದ್ಧ ದಿಕ್ಕಿನಲ್ಲಿರುವಂತೆ

ಬೋರಲು ಹಾಕಿ, ಅಡಿಕೆ ವಿಳೆದೆಲೆ, ಸುಣ್ಣ, ದಕ್ಷಿಣೆ, ಸೀರೆ-ಕುಪ್ಪಸ, ಪಂಚೆ, ತೆಂಗಿನಕಾಯಿ ಹಣ್ಣುಗಳನ್ನು ಇಟ್ಟು ಮೊದಲು ಲಕ್ಷ್ಮೀನಾರಾಯಣರಿಗೆ ಸಮರ್ಪಿಸಿ ನಂತರ ದಂಪತಿಗಳಲ್ಲಿ ಲಕ್ಷ್ಮೀನಾರಾಯಣರನ್ನು ಆವಾಹಿಸಿ ದಾನ ಮಾಡಬೇಕು.

ಮಕ್ಕಳಿರುವ ಮುತ್ತೈದೆಯರ ಪಾದವನ್ನು ತೊಳೆದು ಅರಿಷಿಣ-ಕುಂಕುಮದಿಂದ ಅಲಂಕರಿಸಿ ಹೂ ಮುಡಿಯಲು ಕೊಟ್ಟು ಮುತ್ತೈದೆಯ ಸೆರಗು ಹಾಗೂ ತನ್ನ ಸೆರಗನ್ನು ಮೊರದ ಮೇಲೆ ಹರಡಿ ಮೂರು ಬಾರಿ ತೂಗುತ್ತಾ ನಂತರ ದಾನ ಮಾಡಬೇಕು. ದಾನ ಗೋಪ್ಯವಾಗಿರಲೆಂದು ಒಂದು ಬಾರಿ ತೋರಿಸಿ ನಂತರ ನೀಡುವುದು.

- ***ಬಾಗಿಣದ ಅರ್ಥ :***

ಬಾಗಿಣದಲ್ಲಿ ಎರಡು ಹೊಸ ಮೊರಗಳಿರುತ್ತವೆ. ಇದು ಬಿದಿರಿನಿಂದ ತಯಾರಿಸಲ್ಪಟ್ಟಿರುತ್ತದೆ. ಬಿದಿರಿನಲ್ಲಿ ಲಕ್ಷ್ಮೀದೇವಿಯ ಸನ್ನಿಧಾನವಿರುತ್ತದೆ. ಬಿದಿರು ಎಂದರೆ "ವಂಶ". ನಮ್ಮ ವಂಶದಲ್ಲಿರುವ ಎಲ್ಲರಿಗೂ, ನನಗೂ ಸಹಿತ, ಸೌಭಾಗ್ಯ, ಕಾಂತಿ, ನೇತ್ರ, ಧನ ಧಾನ್ಯ ಸಮೃದ್ಧಿ ತಾಳಿಭಾಗ್ಯ, ಓಲೇ ಭಾಗ್ಯ, ಕಾಲುಂಗರ ಭಾಗ್ಯ ಮುಂತಾದ ವಸ್ತುಗಳನ್ನು ಅನುಭವಿಸುವ ಸಾಮರ್ಥ್ಯತೆ ಉಂಟಾಗಲೀ ಎಂದು ಬಾಗಿಣದಲ್ಲಿರುವ ವಸ್ತುಗಳು ಸೂಚಿಸುತ್ತವೆ. ಅರಿಷಿಣ ದಾನದಿಂದ ತೊನ್ನು ಮುಂತಾದ ಚರ್ಮರೋಗ ಬಾರದಿರುವಿಕೆಯನ್ನು ತಿಳಿಸುತ್ತದೆ. ಕೂದಲಿನ ರೋಗಗಳಾದ ಉದುರುವಿಕೆ, ಬೇಗ ನರೆಯುವಿಕೆ ಇವುಗಳನ್ನು ತಡೆಯಲು ಚೌರಿ ದಾನವು. ಮೊರವು ಯಾವ ಭಾಗದಲ್ಲಿಯೂ ತುಂಡಾಗಿರಬಾರದು. ಇದು ನಮ್ಮ ವಂಶದಲ್ಲಿ ಯಾರು ಸಂತಾನ ಹೀನರಾಗದಿರುವಿಕೆಯನ್ನು, ನಮ್ಮ ಮುಂದಿನ ಮೂರು ಪೀಳಿಗೆಗಳಲ್ಲಿ ಮಕ್ಕಳನ್ನು ತೊಟ್ಟಿಲಿನಲ್ಲಿ ತೂಗುವ ಭಾಗ್ಯ ಬರಲೆಂದು ಮೂರು ಬಾರಿ ತೂಗಿಸುವುದು.

ಸ್ತ್ರೀಯರ ಸೆರಗು ಸೌಭಾಗ್ಯವನ್ನು ಬೇಡುವ ಸಾಧನವಾಗಿದೆ. ಮುತ್ತೈದೆಯ ಸೆರಗಿನಲ್ಲಿದ್ದ ಮುತ್ತೈದೆತನವನ್ನು ನಮಗೂ ಅನುಗ್ರಹಿಸು ಎಂದು ಬೇಡುವುದೇ ಮೊರದ ಮೇಲೆ ಸೆರಗನ್ನು ಹಾಸುವುದು. ಮೊರದ ಮೇಲೆ

ಬೇಡಿದವು. ಶಿವನು ಹಾಗೆ ಆಗಲೆಂದು ವರವನ್ನು ನೀಡಿದನು. ಇದರಿಂದ ಗಂಗೆಯು ಇರುವ ಶಿವನ ಕೂದಲು 'ಗಂಗಾವನ' ಎನಿಸಿತು.

- ***ಗಂಗಾವನ :*** ಗಂಗೆಯ ಸನ್ನಿಧಾನವುಳ್ಳ ಈ ಚೌರಿಗೆ "ಗಂಗಾವನ" ಗಂಗೆಗೆ ಆಶ್ರಯ ಎಂದು ಕರೆಯಲಾಗಿದೆ. ಇದನ್ನು ಧರಿಸದೆ ಗಂಗೆಯ ಸನ್ನಿಧಾನವು ಸ್ತ್ರೀಯರಿಗೆ ಬರಲಾರದು. ಆದ್ದರಿಂದ ಇದನ್ನು ಸರ್ವ ಮುತ್ತೈದೆ ಸ್ತ್ರೀಯರೂ ಧರಿಸಬೇಕು. ಆದ್ದರಿಂದಲೇ ಗಂಗಾವನದ ದಾನದಿಂದ ಸೌಭಾಗ್ಯಗಳು ಲಭಿಸುವುದು ಎಂದು ಪುರಾಣಗಳು ತಿಳಿಸಿವೆ.

- ***ಕಾಡಿಗೆ :*** ಕಾಡಿಗೆಯು ಪರಪುರುಷರನ್ನು ನೋಡಿದ ದೋಷವನ್ನು ಪರಿಹರಿಸುತ್ತದೆ. ಇಂತಹ ಕಾಡಿಗೆಯನ್ನು ದಾನ ಮಾಡಿದರೆ ಪರಪುರುಷದರ್ಶನ ದೋಷ ಹಾಗೂ ನೇತ್ರ ದೋಷವನ್ನು ಪರಿಹರಿಸುತ್ತದೆ.

- ***ಸೌಭಾಗ್ಯ ವಸ್ತುಗಳು :*** ಸುವರ್ಣದ ತಾಳಿ 1, ಬೆಳ್ಳಿ ಕಾಲುಂಗರ 1 ಜೊತೆ, 1 ಜೊತೆ ಕಿವಿಯೋಲೆ, ಮೂಗುತಿ, ಗೆಜ್ಜೆ, ಬಾಚಣಿಗೆ ಮರದ್ದು, ಗಂಗಾವನ, ಕಾಡಿಗೆ, ಕನ್ನಡಿ 1, ಬಳೆಗಳು 12, ಸೀರೆ (9 ಗಜದ್ದು), ಕುಪ್ಪಸ, ವಿಳೆದೆಲೆ ಅಡಿಕೆ 5, ಯಥಾಶಕ್ತಿ ದಕ್ಷಿಣೆ, ಫಲಗಳು, ಬೆಳ್ಳಿಯ ದೀಪ 1 ಜೊತೆ, ಇವುಗಳನ್ನು ಅರಿಷಿಣ-ಕುಂಕುಮ, ಅರಿಷಿಣದ ಬೇರು 5.

- ***ಧಾನ್ಯಗಳು :*** ಗಂಡ-ಹೆಂಡತಿ, ಮಕ್ಕಳು ಒಂದು ಹೊತ್ತು ಅಥವಾ ಒಂದು ದಿನ ಉದರ ಪೂರ್ತಿಯಾಗಿ ತಿನ್ನಲು ಸಾಕಾಗುವಷ್ಟು ಧಾನ್ಯಾದಿಗಳನ್ನು ಕೊಡಬೇಕು.

  ಅಕ್ಕಿ 1 ಸೇರು, ಎರಡಚ್ಚು ಬೆಲ್ಲ, ಉದ್ದಿನಬೇಳೆ, ಕಡಲೇಬೇಳೆ, ಹೆಸರುಬೇಳೆ, ಕಾಲು ಕೆ.ಜಿ. ಹುಣಸೆಹಣ್ಣು, ಕಲ್ಲು ಸಕ್ಕರೆ 100 ಗ್ರಾಂ, ತುಪ್ಪ ಕಾಲು ಕೆ.ಜಿ., ಸಾಂಬಾರ ಪದಾರ್ಥಗಳಾದ ಜೀರಿಗೆ, ಮೆಣಸು, ಮೆಂತ್ಯ, ಸಾಸುವೆ ಇವುಗಳು ನೂರು ತಲಾ ಗ್ರಾಂಗಳು, ಅರಿಷಿಣ, ಕುಂಕುಮ 100 ಗ್ರಾಂ ತಲಾ.

  ಮೊರದಲ್ಲಿ ಒಂದು ಬಾಳೆ ಎಲೆ ಅಥವಾ ಮುತ್ತುಗದ ಎಲೆ ಇಡಬೇಕು. ಈ ವಸ್ತುಗಳನ್ನು ಊಟದಲ್ಲಿ ಬಡಿಸುವ ಕ್ರಮದಲ್ಲೇ ಒಪ್ಪವಾಗಿಡಬೇಕು.

  ಇವುಗಳ ಜೊತೆಗೆ ಅರಿಷಿಣದಿಂದ ಸುತ್ತಲೂ ಸಾರಿಸಿ ಕುಂಕುಮ ಹಚ್ಚಿದ ಮೊರದ ಜೊತೆಯನ್ನು ಒಂದರ ಮೇಲೊಂದು ವಿರುದ್ಧ ದಿಕ್ಕಿನಲ್ಲಿರುವಂತೆ

ಬೋರಲು ಹಾಕಿ, ಅಡಿಕೆ ವಿಳೆದೆಲೆ, ಸುಣ್ಣ, ದಕ್ಷಿಣೆ, ಸೀರೆ-ಕುಪ್ಪಸ, ಪಂಚೆ, ತೆಂಗಿನಕಾಯಿ ಹಣ್ಣುಗಳನ್ನು ಇಟ್ಟು ಮೊದಲು ಲಕ್ಷ್ಮೀನಾರಾಯಣರಿಗೆ ಸಮರ್ಪಿಸಿ ನಂತರ ದಂಪತಿಗಳಲ್ಲಿ ಲಕ್ಷ್ಮೀನಾರಾಯಣರನ್ನು ಆವಾಹಿಸಿ ದಾನ ಮಾಡಬೇಕು.

ಮಕ್ಕಳಿರುವ ಮುತ್ತೈದೆಯರ ಪಾದವನ್ನು ತೊಳೆದು ಅರಿಷಿಣ-ಕುಂಕುಮದಿಂದ ಅಲಂಕರಿಸಿ ಹೂ ಮುಡಿಯಲು ಕೊಟ್ಟು ಮುತ್ತೈದೆಯ ಸೆರಗು ಹಾಗೂ ತನ್ನ ಸೆರಗನ್ನು ಮೊರದ ಮೇಲೆ ಹರಡಿ ಮೂರು ಬಾರಿ ತೂಗುತ್ತಾ ನಂತರ ದಾನ ಮಾಡಬೇಕು. ದಾನ ಗೋಪ್ಯವಾಗಿರಲೆಂದು ಒಂದು ಬಾರಿ ತೋರಿಸಿ ನಂತರ ನೀಡುವುದು.

- ***ಬಾಗಿಣದ ಅರ್ಥ :***

ಬಾಗಿಣದಲ್ಲಿ ಎರಡು ಹೊಸ ಮೊರಗಳಿರುತ್ತವೆ. ಇದು ಬಿದಿರಿನಿಂದ ತಯಾರಿಸಲ್ಪಟ್ಟಿರುತ್ತದೆ. ಬಿದಿರಿನಲ್ಲಿ ಲಕ್ಷ್ಮೀದೇವಿಯ ಸನ್ನಿಧಾನವಿರುತ್ತದೆ. ಬಿದಿರು ಎಂದರೆ "ವಂಶ". ನಮ್ಮ ವಂಶದಲ್ಲಿರುವ ಎಲ್ಲರಿಗೂ, ನನಗೂ ಸಹಿತ, ಸೌಭಾಗ್ಯ, ಕಾಂತಿ, ನೇತ್ರ, ಧನ ಧಾನ್ಯ ಸಮೃದ್ಧಿ ತಾಳಿಭಾಗ್ಯ, ಓಲೇ ಭಾಗ್ಯ, ಕಾಲುಂಗರ ಭಾಗ್ಯ ಮುಂತಾದ ವಸ್ತುಗಳನ್ನು ಅನುಭವಿಸುವ ಸಾಮರ್ಥ್ಯತೆ ಉಂಟಾಗಲೀ ಎಂದು ಬಾಗಿಣದಲ್ಲಿರುವ ವಸ್ತುಗಳು ಸೂಚಿಸುತ್ತವೆ. ಅರಷಿಣ ದಾನದಿಂದ ತೊನ್ನು ಮುಂತಾದ ಚರ್ಮರೋಗ ಬಾರದಿರುವಿಕೆಯನ್ನು ತಿಳಿಸುತ್ತದೆ. ಕೂದಲಿನ ರೋಗಗಳಾದ ಉದುರುವಿಕೆ, ಬೇಗ ನರೆಯುವಿಕೆ ಇವುಗಳನ್ನು ತಡೆಯಲು ಚೌರಿ ದಾನವು. ಮೊರವು ಯಾವ ಭಾಗದಲ್ಲಿಯೂ ತುಂಡಾಗಿರಬಾರದು. ಇದು ನಮ್ಮ ವಂಶದಲ್ಲಿ ಯಾರು ಸಂತಾನ ಹೀನರಾಗದಿರುವಿಕೆಯನ್ನು, ನಮ್ಮ ಮುಂದಿನ ಮೂರು ಪೀಳಿಗೆಗಳಲ್ಲಿ ಮಕ್ಕಳನ್ನು ತೊಟ್ಟಿಲಿನಲ್ಲಿ ತೂಗುವ ಭಾಗ್ಯ ಬರಲೆಂದು ಮೂರು ಬಾರಿ ತೂಗಿಸುವುದು.

ಸ್ತ್ರೀಯರ ಸೆರಗು ಸೌಭಾಗ್ಯವನ್ನು ಬೇಡುವ ಸಾಧನವಾಗಿದೆ. ಮುತ್ತೈದೆಯ ಸೆರಗಿನಲ್ಲಿದ್ದ ಮುತ್ತೈದೆತನವನ್ನು ನಮಗೂ ಅನುಗ್ರಹಿಸು ಎಂದು ಬೇಡುವುದೇ ಮೊರದ ಮೇಲೆ ಸೆರಗನ್ನು ಹಾಸುವುದು. ಮೊರದ ಮೇಲೆ

ದೀಪಗಳನ್ನಿಡುವುದು ಈ ವಂಶ ದೀಪ ದಾನದಿಂದ ನಮ್ಮ ವಂಶದಲ್ಲಿ ಕುಲದೀಪಕರಾದ ಸಜ್ಜನರು ಹುಟ್ಟಲಿ ಎಂದು ಹಾರೈಸುವುದು.

ಹೀಗೆ ಮೊರದ ಬಾಗಿಣವು, ಸೌಭಾಗ್ಯತನ, ಗಂಡನಿಗೆ ಆಯುಷ್ಯದಾನ, ವಂಶೋದ್ಧಾರ ಮೊದಲಾದವುಗಳನ್ನುಂಟು ಮಾಡುವುದರಿಂದ ಗೌರೀಹಬ್ಬ, ಲಕ್ಷ್ಮೀ ಪೂಜೆ, ಭೀಮನ ಅಮಾವಾಸ್ಯೆ, ವಿವಾಹಾದಿಗಳಲ್ಲಿ ಮುತ್ತೈದೆಯರಿಗೆ ಬಾಗಿಣವನ್ನು ಕೊಡಲಾಗುವುದು. ಪ್ರತಿ ಶುಕ್ರವಾರ ಹಾಗೂ ದ್ವಾದಶಿಯಂದು ಬಾಗಿಣವನ್ನು ಕೊಡಬೇಕು. ಒಂದು ವರ್ಷದಲ್ಲಿ ಹದಿನಾರು ಬಾಗಿಣ ದಾನಕ್ಕೆ ಕಡಮೆ ಇಲ್ಲದಂತೆ 108ರವರೆಗೂ ದಾನ ಮಾಡಬಹುದು.

ರಜಸ್ವಲಾ ದೋಷವು ಸರಿಯಾಗಿ ಪಾಲನೆಯಾಗದಿದ್ದು ಮನವರಿಕೆಯಾದರೆ ಶುದ್ಧಿಯ ನಂತರ ಬರುವ ಶುಕ್ರವಾರ ಅಥವಾ ದ್ವಾದಶಿಯಂದು ಬಾಗಿಣವನ್ನು ನೀಡಿ ದೋಷಪರಿಹಾರವನ್ನು ಮಾಡಿಕೊಳ್ಳಬಹುದು.

* * * * *



# 16. ಸ್ತ್ರೀಯರ ಪಾಕ



- ***ಅಡಿಗೆಯಲ್ಲಿ ಸ್ತ್ರೀ ಪಾತ್ರ :***

ಗೃಹಿಣಿಯು ತನ್ನ ಪತಿಯು ಮಾಡುವ ದೇವರ ಪೂಜೆಗೆ ನೈವೇದ್ಯವನ್ನು ತಯಾರಿಸಿ ಕೊಡುವುದು ಕರ್ತವ್ಯ.

ಭಗವಂತನ ನಿವೇದನೆಗಾಗಿಯೇ ಅಡಿಗೆಯ ಉದ್ದೇಶವಿರಬೇಕು. ಹೊಟ್ಟೆ ತುಂಬಿಸಿಕೊಳ್ಳಲೆಂದು ಅಡಿಗೆ ಮಾಡಬಾರದು. ಪತಿಯು ಮಾಡಲಿರುವ ಅಗ್ನಿಹೋತ್ರದ ಅಂಗವಾಗಿ ಪಾಕ ತಯಾರಿಸುತ್ತಿರುವೆ ಎಂಬ ಭಾವನೆ ಇರಬೇಕು.

**ಯಜ್ಞಾರ್ಥಂ ತು ಪಚೇದನ್ನಂ ಆತ್ಮಾರ್ಥಂ ನ ಕದಾಚನ ।**
**ವಿಷ್ಣೋಃ ನಿವೇದನಾರ್ಥಾಯ ಪಾಚಯೇಚ್ಚ ವಿಶೇಷತಃ ॥**

- ***ಪಾಕ ಹೇಗೆ ಇರಬೇಕು :***

ಭಗವಂತನು ಸ್ವೀಕರಿಸಿದ ಪ್ರಸಾದ ಪತಿ ಪುತ್ರಾದಿಗಳು ಸ್ವೀಕರಿಸಿ ಅಂತಃಕರಣ ಶುದ್ಧಿ ಪಡೆಯಲಿ ಎಂದು ಪತಿಯಲ್ಲಿ ಅನುರಾಗ ಪೂರ್ವಕ ತಯಾರಿಸಬೇಕು.

ಈರುಳ್ಳಿ + ಬೆಳ್ಳುಳ್ಳಿ, ನುಗ್ಗೆ, ಗಜ್ಜರೀ, ಬದನೆ, – ಮೊದಲಾದ ನಿಷಿದ್ಧ ವಸ್ತುಗಳನ್ನು ಉಪಯೋಗಿಸದೆ ಸಾತ್ವಿಕ ವಸ್ತುಗಳಿಂದ ಸಾತ್ವಿಕಾಹಾರ ತಯಾರಿಸಬೇಕು. ಶುಚಿಯಾಗಿ ಮಾಡಿರಬೇಕು. ನಾಯಿ, ಬೆಕ್ಕು ಮೊದಲಾದವು

ಮುಟ್ಟದಂತೆ, ಕ್ರಿಮಿ, ಕೀಟ, ಕೇಶಾದಿಗಳು ಸೇರದಂತೆ ಎಚ್ಚರವಹಿಸಿ ತಯಾರಿಸಬೇಕು. ತಲೆಯನ್ನು ತುರಿಸಿಕೊಳ್ಳುತ್ತಾ, ಸ್ಪರ್ಶಿಸುತ್ತಾ, ಮೈಲಿಗೆ ವಸ್ತ್ರಧರಿಸಿ ಅಡಿಗೆ ಮಾಡಬಾರದು. ಆರೋಗ್ಯವನ್ನು ತಂದು ಕೊಡುವಂತಹ ಪಾಕವನ್ನು ಸತಿಯು ತಯಾರಿಸಬೇಕು.

- ***ಪಾಕವು ಏಳು ವಿಧ :***

ಹುರಿಯುವುದು, ಕರಿಯುವುದು, ಬೆಂಕಿಯಲ್ಲಿ ಸುಡುವುದು, ಬೇಯಿಸುವುದು, ಕುದಿಸುವುದು, ಹೆಂಚಿನ ಮೇಲೆ ಸುಡುವುದು.

**ಭರ್ಜನಂ ತಲಣ ಸ್ವೇದಹ ಪಚನಂ ಕ್ವಥನಂ ತಥಾ ।**
**ತಾಂದೂರಂ ಪುಟಪಾಕಶ್ಚ ಪಾಕೋ ಸಪ್ತವಿಧಃ ಸ್ಮೃತಿಃ ॥**

- ***ಒದ್ದೆ ಬಟ್ಟೆಯುಟ್ಟು ಪಾಕ ನಿಷಿದ್ಧವು :***

ಒದ್ದೆ ಸೀರೆವುಟ್ಟು ಪಾಕ ತಯಾರಿಸಿದರೆ ರಾಕ್ಷಸರ ಪಾಕವಾಗುತ್ತದೆ.

**ಯಾಽರ್ದ್ರವಸ್ತ್ರೇಣ ಕುರುತೇ ಪಾಕಂ ರಾಕ್ಷಸೈರ್ನೀಯತೇ ಹಿ ತತ್ ।**

- ***ಸ್ನಾನ ಮಾಡಿಯೇ ಪಾಕ ತಯಾರಿಸಬೇಕು :***

**ಗೃಹಿಣೀ ಚೈವ ಸುಸ್ನಾತಾ ಪಾಕಂ ಕುರ್ಯಾತ್ ಪ್ರಯತ್ನತಃ ।**

ರಜಸ್ವಲೆಯಾದ ನಾಲ್ಕನೇ ದಿನವು ಮಾಡಿದ ಪಾಕಾದಿಗಳು ನೈವೇದ್ಯಕ್ಕೆ ಬರುವುದಿಲ್ಲ. ಐದನೇ ದಿವಸದಿಂದ ನೈವೇದ್ಯಕ್ಕೆ ಏಳನೇ ದಿನದಿಂದ ಪಾಕಕ್ಕೆ ಯೋಗ್ಯಳಾಗುವಳು ಮೂರು ತಿಂಗಳ ಗರ್ಭಿಣೀ ಸ್ತ್ರೀಯು, ಮಾಡಿದ ಪಾಕ ನೈವೇದ್ಯಕ್ಕೆ ಬರುವುದಿಲ್ಲ.

**ವರ್ಜಯೇತ್ ಚತುರ್ಥಾಹಃ ಸ್ನಾತಾಮಪಿ ರಜಸ್ವಲಾಮ್ ।**

- ***ತೊಳೆದು ಶುದ್ಧ ಮಾಡಿದ ಪಾತ್ರೆಯಲ್ಲಿ ಪಾಕ :***

ಸ್ನಾನ ಮಾಡಿ ಶುಚಿಯಾದ ಪಾತ್ರೆಗಳಲ್ಲಿಯೇ ಪಾಕ ತಯಾರಿಸಬೇಕು.

ಸ್ಟೀಲ್ ಪಾತ್ರೆ –ಕಬ್ಬಿಣದ ಪಾತ್ರೆಗಳಲ್ಲಿ ಅನ್ನಾದಿಗಳನ್ನು ತಯಾರಿಸಿದರೆ ಪೂಜಾರ್ಹವಾಗುವುದಿಲ್ಲ. ತೂತಾದ – ಒಡೆದ ಪಾತ್ರೆಯಲ್ಲಿ ತಯಾರಾದ ಅನ್ನಾದಿಗಳು ನಿಷಿದ್ಧವೆ. ಶೂದ್ರಾದಿಗಳಿಂದ ಸ್ಪಷ್ಟವಾದ ಪಾತ್ರೆಯು ನಿಷಿದ್ಧ.

**ಪಚೇದನ್ನಾನಿ ಸುಸ್ನಾತಾ ಪಾತ್ರೇಷು ಶುಚಿಷು ಸ್ವಯಮ್ ।**
**ನಾಯಸೇಷು ನ ಭಿನ್ನೇಷು ಶೂದ್ರಾದಿ ದೂಷಿತೇಷು ಚ ॥**

ಶ್ರಾದ್ಧಕಾಲದಲ್ಲಂತೂ ಕಬ್ಬಿಣದ ಪಾತ್ರೆಯಲ್ಲಿ ತಯಾರಾದ ಅನ್ನಾದಿಗಳನ್ನು ನೋಡಿದ ಕೂಡಲೇ ಬಂದಿರುವ ಪಿತೃಗಳು ಹಿಂದಕ್ಕೆ ಹೊರಟು ಹೋಗುತ್ತಾರೆ.

- ***ಕಬ್ಬಿಣದ ಪಾತ್ರೆಯಲ್ಲಿ ನಿಷಿದ್ಧ :***

**ನ ಕದಾಚಿತ್ ಪಚೇದನ್ನಂ ಅಯಃ ಸ್ಥಾಲೀಷು ಪೈತೃಕಮ್ ।**
**ಅಯಸೋ ದರ್ಶನಾದೇವ ಪಿತರೋಽಪದ್ರವಂತಿ ಹಿ ॥**

ತಾಮ್ರ, ಕಂಚು, ಹಿತ್ತಾಳೆ ಪಾತ್ರೆಗಳು ಪಾಕ ಮಾಡಲು ಯೋಗ್ಯವಾಗಿರುತ್ತವೆ. ಶ್ರಾದ್ಧಕ್ಕೆ ನೂತನವಾದ ಪಾತ್ರೆಗಳನ್ನೇ ಉಪಯೋಗಿಸಬೇಕು. ಮನೆಯಲ್ಲಿ ಉಪಯೋಗಿಸಿದ್ದು ಆಗಿರಬಾರದು.

**ನವೇ ಶುಚೌ ಪ್ರಕುರ್ವೀತ ಪಾಕಂ ಪಿತ್ರ್ಯರ್ಥ ಮಾದರಾತ್ ।**
**ವಿವಾಹೇ ಪ್ರೇತಕಾರ್ಯೇ ಚ ಮಾತಾ – ಪಿತ್ರೋಃ ಕ್ಷಯೇಽಹನಿ ।**
**ನವಭಾಂಡಾನಿ ಕುರ್ವೀತ ಯಜ್ಞಕಾಲೇ – ವಿಶೇಷತಃ ॥** – *ಯಮಸ್ಮೃತಿ*

- ***ಈಶಾನ್ಯಾಭಿಮುಖವಾಗಿ ಪಾಕ ತಯಾರಿಸುವುದು ನಿಷಿದ್ಧ :***

ಪೂರ್ವಾಭಿಮುಖಳಾಗಿ ಉತ್ತರಾಭಿಮುಖವಾಗಿಯೇ ಅಡಿಗೆ ತಯಾರಿಸಬೇಕು. ಈಶಾನ್ಯ ದಿಕ್ಕಿಗೆ ಮುಖ ಮಾಡಿ ಅಡಿಗೆ ತಯಾರಿಸಿದ ಸ್ತ್ರೀ ಪುರುಷರು ದರಿದ್ರರಾಗುವರು.

**ಪೂರ್ವಾಭಿಮುಖಾ ಭೂತ್ವಾ ಉತ್ತರಾಭಿಮುಖಾಽಪಿ ವಾ ।**
**ಪಚೇದನ್ನಂ**
**ಐಶಾನ್ಯಾಭಿಮುಖಾ ಪಕ್ತ್ವಾ ದರಿದ್ರಾ ಜಾಯತೇ ಪುನಃ ॥**

- ***ವಿಧವೆಯು ಮಾಡಿದ್ದು ನಿವೇದಿಸಲಾಗದು :***

ವಿಧವೆ, ಪುತ್ರರಿಲ್ಲದ ಬಂಜೆಯರು ಮಾಡಿದ್ದನ್ನು ತಿನ್ನಬಾರದು. ತಿಂದರೆ ರಾತ್ರಿ ಉಪವಾಸ ಮಾಡಬೇಕು ಅಥವಾ ಕೃಚ್ಛ್ರಪ್ರಾಯಶ್ಚಿತ್ತ.

**ಗರ್ಹಿತಾನ್ನಂ ಅವೀರಾನ್ನಂ ಭುಕ್ತ್ವಾ ಕೃಚ್ಛ್ರಂ ಸಮಾಚಕೇತ್ ।**
**ಅಪ್ರಜಾ ಯಾ ತು ವನಿತಾ ನಾಶ್ನೀಯಾದೇವ ತದ್ಗೃಹೇ ॥**

- ***ನೈವೇದ್ಯದಲ್ಲಿ ಏನೇನಿರಬೇಕು?***

ಸಾಮಾನ್ಯವಾಗಿ ಅನ್ನ, ತೊವ್ವೆ, ಪಾಯಸ, ಘೃತ, ಮೊಸರು ಇವುಗಳು ನೈವೇದ್ಯಕ್ಕಿರಬೇಕು. ಬೇಳೆಯನ್ನು ಬೇಯಿಸಿ ಅದರಲ್ಲಿ ಸ್ವಲ್ಪ ಬೇಳೆ ತೆಗೆದು ಲವಣಾದಿಗಳಿಂದ ಸಂಸ್ಕರಿಸಿದರೆ ತೊವ್ವೆ, ಗರುಡನ ಆಗಮನವೆಂದು ತಿಳಿಯಬೇಕು.

ಅನ್ನವಂತು ಸರಸ್ವತೀದೇವಿ ತಯಾರಿಸುತ್ತಾಳೆ. ಪಾಯಸವನ್ನು ಭಾರತೀದೇವಿಯರು ತಯಾರಿಸುತ್ತಾರೆ. ಅನ್ನಕ್ಕೆ ಬೆಲ್ಲ, ಹಾಲು ಹಾಕಿದರೆ ಪಾಯಸ ಸಿದ್ಧವಾಗುತ್ತದೆ. ತುಪ್ಪವಿಲ್ಲದ ಭೋಜನವಿಲ್ಲ.

**ಘೃತಹೀನಂ ತು ಭೋಜನಂ ನಿಷ್ಫಲಮ್ ।**

ತುಪ್ಪವನ್ನು ಲಕ್ಷ್ಮೀದೇವಿಯೇ ತಯಾರಿಸುವಳು. ಮೊಸರಿಗೆ ವರುಣ ಅಭಿಮಾನಿಯು.

- ***ಪಾತ್ರೆಗಳ ಶುದ್ಧಿ :***

ಸ್ತ್ರೀಯು ತನ್ನ ಮನೆಯಲ್ಲಿರುವ ಪಾತ್ರೆಗಳು ಸ್ವಚ್ಛವಾಗಿ ತೊಳೆದು ಗೋಮಯ ನೀರಿನಿಂದ ಶುದ್ಧಿ ಮಾಡಿ, ನಂತರ ಹುಣಸೇ ಹಣ್ಣಿನ ನೀರಿನಿಂದ ಪ್ರೋಕ್ಷಿಸಿ ನಂತರ ನೀರನ್ನು ಹಾಕಿ ನೀರನ್ನು ಜಾಡಿಸಿ ಒಳಗೆ ತಂದಿಟ್ಟುಕೊಳ್ಳಬೇಕು.

- ***ಪಾತ್ರೆಗಳ ವಿಧಗಳು :***

ಪಾತ್ರೆಗಳಲ್ಲಿ ಅಡಿಗೆ ಮಾಡುವ ಪಾತ್ರೆಗಳು, ಸ್ನಾನ ಮೊದಲಾದವುಗಳಿಗೆ ಉಪಯೋಗಿಸುವ ಹೊರಗಿನ ಪಾತ್ರೆಗಳು.

ಜಲವನ್ನು ತರಲು ಉಪಯುಕ್ತವಾಗುವ ಕೊಡ-ತಂಬಿಗೆ ಮೊದಲಾದವುಗಳು ಅನ್ನಾದಿಗಳ ಮೇಲೆ ಮುಚ್ಚುವ ತಟ್ಟೆಗಳು.

**ಪಾಚಕಾನಿ ಬಹಿಷ್ಠಾನಿ ಜಲಸ್ಯಾನಯನಾನಿ ಚ ।**
**ಸ್ಥಾಪನಾದಿ ಪಿಧಾನಾರ್ಥಂ ಚತುರ್ವಿಧಮುದಾಹೃತಮ್ ॥**

- ***ಗೃಹಿಣಿಯೇ ಶುದ್ಧಿಕರಿಸಬೇಕು :***

ಈ ನಾಲ್ಕು ವಿಧ ಪಾತ್ರೆಗಳನ್ನು ಶೂದ್ರಾದಿ ಕೆಲಸಗಾರರು ತೊಳೆಯಬಾರದು. ಗೃಹಿಣಿಯೇ ತೊಳೆಯಬೇಕು. ಅನ್ನಾದಿ ಪಾತ್ರೆಗಳನ್ನು, ಜಲಹರಣಾದಿ ಪಾತ್ರೆಗಳನ್ನು ಸಂಕರ ಮಾಡಬಾರದು. ಆಯಾಯ ಪಾತ್ರೆಗಳಿಗೆ ಪ್ರತ್ಯೇಕ ಸ್ಥಾನ ಕಲ್ಪಿಸಬೇಕು. ಮುಚ್ಚುವ ತಟ್ಟೆಗಳನ್ನು ಊಟ ಮಾಡಲು ಉಪಯೋಗಿಸುವುದು ನಿಷಿದ್ಧವು. ಎಂಜಲ ತಟ್ಟೆಗಳನ್ನು ಅನ್ನಾದಿ ಪಾತ್ರೆಗಳ ಮೇಲೆ ಮುಚ್ಚಿಡುವುದು ನಿಷಿದ್ಧವು. ದೇವರ ಪಾತ್ರೆಯನ್ನು ಅಡಿಗೆಗೆ ಉಪಯೋಗಿಸುವುದು, ಅಡಿಗೆಯ ಪಾತ್ರೆಯನ್ನು ದೇವರ ಪಾತ್ರೆಯೊಂದಿಗೆ ಸೇರಿಸುವುದು ಮಾಡಬಾರದು. ಎಂಜಲ ಲೋಟಗಳು ದೇವರ ಮನೆ ಅಡಿಗೆ ಮನೆಗೆ ಬರಬಾರದು.

**ನಾನ್ಯೋನ್ಯ ಸಂಕರಂ ಕುರ್ಯಾತ್ ಭಾಂಡಾನಾಂ ಸರ್ವಕರ್ಮಸು ।**

ರಜಸ್ವಲೆಯು ಉಪಯೋಗಿಸುವ ಪಾತ್ರೆಗಳಂತು ಯಾವ ಪಾತ್ರೆಗಳೊಂದಿಗೂ ಸೇರಲೇಬಾರದು.

ಅಡಿಗೆ ಮಾಡಿದ ಪಾತ್ರೆಗಳಿಂದಲೇ ಬಡಿಸಬಾರದು.

ಅಡಿಗೆ ಪಾತ್ರೆಗಳನ್ನು ಭೋಜನಕ್ಕೆ ಕುಳಿತಿರುವ ಪತ್ಯಾದಿಗಳ ಸಮೀಪಕ್ಕೆ ತಂದು ಅದರಿಂದಲೇ ನೇರವಾಗಿ ಬಡಿಸಬಾರದು. ಬೇರೆ ಪಾತ್ರೆ ಅಥವಾ ಬೇರೆ ತಟ್ಟೆಯಲ್ಲಿ ಹಾಕಿಕೊಂಡು ಬಡಿಸಬೇಕು.

**ತಾಭಿರೇವ ನ ದದ್ಯಾತ್ತು ಭುಂಜತಾಂ ಹಿ ಕಥಂಚನ ।**
**ಕೃತ್ವಾ ಪಾತ್ರಾಂತರೇ ದದ್ಯಾತ್ ಕಾಂಸ್ಯೇ ವಾ ಪಿತ್ತಲೇಽಪಿ ವಾ ॥**

ಬೇರೆ ತಟ್ಟೆ, ಪಾತ್ರೆಗಳಿಂದ ಬಡಿಸುವಾಗಲೂ ಎಲೆಗೆ ನೇರವಾಗಿ ಸುರಿಯಬಾರದು. ಸೌಟಿನಿಂದ ಬಡಿಸಬೇಕು.

- ***ಹಿತ್ತಾಳೆ ಪಾತ್ರೆಯ ನಿಷೇಧ :***

ಹಿತ್ತಾಳೆ ಪಾತ್ರೆಯಲ್ಲಿ ಅನ್ನ ಬೇಯಿಸುವುದು ನಿಷಿದ್ಧವು. ಹಿತ್ತಾಳೆಯ ಕೊಡದಲ್ಲಿ ತುಂಬಿಟ್ಟಿರುವ ನೀರು ಸುರೆಗೆ ಸಮಾನವು. ಹಿತ್ತಾಳೆ ಪಾತ್ರೆಗೆ ಕಲಾಯಿ ಹಾಕಿಸಿದ್ದರೆ ದೋಷವಿಲ್ಲ.

**ಆರನಾಳಸ್ಯ ಯತ್ ಕುಂಭಂ ತ್ಯಜೇತ್ ಮದ್ಯಘಟಂ ಯಥಾ ।**

- ***ಕಂಚಿನ ಶ್ರೇಷ್ಠತೆ :***

ಭಗವಂತನ ನೈವೇದ್ಯಕ್ಕಾಗಿ ಕಂಚಿನ ಪಾತ್ರೆಗಳು ಅತ್ಯಂತ ಶ್ರೇಷ್ಠವಾಗಿರುತ್ತದೆ.

- ***ಪಾತ್ರೆಗಳು ಶುದ್ಧಿಯಾಗುವ ಕ್ರಮ :***

ಪಾತ್ರೆಗಳು ಬಳಪದ ಕಲ್ಲಿನ, ಮಣ್ಣಿನಿಂದ ತಯಾರಾದ ಪಾತ್ರೆಗಳಿರುತ್ತವೆ. ಇವುಗಳು ಒಂದು ತಿಂಗಳವರೆಗೆ ಬಳಿಸಿದ ನಂತರ ಅಶುದ್ಧವಾಗುತ್ತವೆ. ತಿಂಗಳ ನಂತರ ಬೇರೆ ಪಾತ್ರೆಗಳನ್ನು ತರಬೇಕು. ತಾಮ್ರ, ಕಂಚು, ಹಿತ್ತಾಳೆ ಮೊದಲಾದ ಲೋಹ ನಿರ್ಮಿತವಾದ ಪಾತ್ರೆಗಳನ್ನು ತೊಳೆದ ನಂತರ ಅಗ್ನಿಯಲ್ಲಿ ಕಾಯಿಸಿದರೆ ಶುದ್ಧವಾಗುತ್ತವೆ. ಮರದಿಂದ ನಿರ್ಮಿತ ಪಾತ್ರೆಗಳಾದರೆ ಬೂದಿಹಚ್ಚಿ ತೊಳೆದರೆ ಶುದ್ಧವಾಗುತ್ತವೆ.

- ***ಬಾಣಂತಿ ಮುಟ್ಟಿರುವ ಪಾತ್ರೆಗಳ ಶುದ್ಧಿ :***

ಬಾಣಂತಿಯು ಉಪಯೋಗಿಸಿದ ಪಾತ್ರೆಗಳನ್ನು ಇಪ್ಪತ್ತೊಂದು ಬಾರಿ ನೀರಿನಿಂದ ತೊಳೆದರೆ ಶುದ್ಧಿಯಾಗುತ್ತದೆ.

**ಸೂತಿಕೊಚ್ಛಿಷ್ಟ ಭಾಂಡನಾಂ ತ್ರಿಸ್ಸಪ್ತಮಾರ್ಜನಾಚ್ಛುಚಿಃ ।**

ಅಡಿಗೆ ಪಾತ್ರೆಗಳು ಅಶುದ್ಧ ಪದಾರ್ಥಗಳ ಸಂಪರ್ಕದಿಂದ ಅಶುದ್ಧವಾದಾಗ ಚೆನ್ನಾಗಿ ತೊಳೆದು ದರ್ಭೆ ಮೊದಲಾದವುಗಳ ಬೆಂಕಿಯಲ್ಲಿ ಹಾಕಿ ಸುಟ್ಟಾಗ ಶುದ್ಧಿಯು.

ಅಡಿಗೆ ಮನೆಯ ಪಾತ್ರೆಗಳು ಮನೆಯಿಂದ ಹೊರಗೆ ಹೋಗಬಾರದು, ಹೋದರೆ ಪುನಃ ಕೆಲಸಕ್ಕೆ ಬಾರವು.

**ಬಹಿರ್ನ ನಿಷ್ಕ್ರಮೀರಿಮೀತ ಪಾಚಕಾನಿ ಗೃಹಾಂತಿಕಾತ್ ।**

- ***ಅಡಿಗೆ ಮಾಡುವಾಗ ದೇವರ ಚಿಂತನೆ :***

ಅಡಿಗೆ ಮಾಡುವಾಗ ಲಕ್ಷ್ಮೀದೇವಿ ನೆನೆದು ಬೇಳೆಗೆ ಅರಿಷಿಣ ಪುಡಿಯನ್ನು ಹಾಕಬೇಕು. ಅಡಿಗೆ ಮಾಡುವಾಗಲೇ ಗುರುಮಂತ್ರ ಹಾಗೂ ಶ್ರೀಕೃಷ್ಣ ಮಂತ್ರವನ್ನು ಜಪಿಸುತ್ತಿರಬೇಕು. ಮಡಿಯಲ್ಲಿಯೂ ರುಚಿಯಾಗಿ ಮಾಡಬೇಕು.

**ಚಿಂತಯೇತ್ ಪರಮಾತ್ಮಾನಂ ಜಪೇನ್ ಮಂತ್ರದ್ವಯಮ ತಥಾ ।**
**ಶುದ್ಧಂ ಹೃದ್ಯಂ ತಥಾ ರಮ್ಯಂ ಪಚೇದ್ ರಮ್ಯತರಂ ಶುಭಮ್ ॥**

ಸ್ತ್ರೀಯು ಅಡುಗೆ ಮಾಡುವಾಗ ಹಾಗೂ ನಂತರವೂ ಮಿತಭಾಷಿಣಿ-ಯಾಗಿರಬೇಕು.

ಪಾತ್ರೆಗಳಿಗೂ ಗಂಧ – ಅರಿಷಿಣದಿಂದ ಸುದರ್ಶನ ಚಕ್ರ – ಶಂಖಚಿಹ್ನೆ ಬರೆಯಬೇಕು.

- ***ಅಡಿಗೆಯಲ್ಲಿ ನಿಷಿದ್ಧ ವಸ್ತುಗಳನ್ನು ಬಳಸಬಾರದು :***

ಸ್ತ್ರೀಯು ಈರುಳ್ಳಿ, ಬೆಳ್ಳುಳ್ಳಿ, ಮೂಲಂಗಿ, ನುಗ್ಗೇ, ನಾಯಿಕೊಡೆ, ಬದನೆಕಾಯಿಗಳು ಮೊದಲಾದ ನಿಷಿದ್ಧ ತರಕಾರಿಗಳನ್ನು ಎಂದೂ ಬಳಸಬಾರದು. ಇವುಗಳು ನಾಯಿಯ ಒಂದೊಂದು ಅವಯವಗಳಿಂದ ಜನಿಸಿದ್ದು ನಿಷಿದ್ಧವಾಗಿದೆ. ಇದನ್ನು ಮುಟ್ಟಿದರೆ ಸಚ್ಚೈಲ ಸ್ನಾನವೆಂದ ಮೇಲೆ ತಿನ್ನಬಾರದೆಂದು ಹೇಳಬೇಕಿಲ್ಲ.

**ಏತಾನ್ಯಕಾಮತಃ ಸ್ಪಷ್ಟ್ವಾ ಸವಾಸಾ ಜಲಮಾವಿಶೇತ್ ।**
**ನಿಷಿದ್ಧಾನಿ ಚ ಶಾಕಾದಿ ಭಾವದುಷ್ಟಂ ಚ ವರ್ಜಯೇತ್ ॥**

- ***ಬೀಸುವಾಗ – ಕುಟ್ಟುವಾಗ ಹರಿಧ್ಯಾನ :***

**ಅವಹನ್ಯಾತ್ ಶುಭತರಂ ಗಾಯಂತೀ ಮಧುಸೂದನಮ್ ।**

- ***ಗೋಪಿಯರ ಆದರ್ಶ :***

ಗೋಪಿಯರು ಹಾಲು ಕರೆಯುವಾಗ ಧಾನ್ಯವನ್ನು ಕುಟ್ಟುವಾಗ, ಮೊಸರು ಕಡೆಯುವಾಗ, ಅಂಗಳ ಸಾರಿಸುವಾಗ, ಮಕ್ಕಳನ್ನು ತೊಟ್ಟಿಲಲ್ಲಿ ತೂಗುವಾಗ, ಜೋಗುಳ ಕಾಲದಲ್ಲಿ, ಮನೆಗೆ ಗೋಮಯ ನೀರನ್ನು ಚಿಮುಕಿಸುವಾಗ ಕಸ ಗುಡಿಸುವಾಗ ಶ್ರೀಕೃಷ್ಣನನ್ನೇ ಧ್ಯಾನಿಸುತ್ತಾ ಆನಂದಭಾಷ್ಪ ಸುರಿಸುತ್ತಾ ಇದ್ದರು.

**ಯಾ ದೋಹನೇಽವಹನನೇ ಮಥನೋಪಲೇಪ**
**ಪ್ರೇಂಖೇಂಖನಾರ್ಭರುದಿತೇಕ್ಷಣ ಮಾರ್ಜನಾದೌ ।**

**ಗಾಯಂತಿ ಚೈನ ಮನುರಕ್ತ ಧಿಯೋಽಶ್ರುಕಂಠ್ಯಃ ।**
**ಧನ್ಯಾ ವ್ರಜಸ್ತ್ರಿಯಃ ಉರುಕ್ರಮಚಿತ್ತಯಾನಾಃ ॥** – *ಭಾಗ–10/44/15*

**ಗೃಹಿಣೀ ಪ್ರಮುಖಾಃ ಸರ್ವಾಃ ಗಾಯಂತ್ಯತಃ ಪುರುಷೋತ್ತಮಂ ।**
**ಬಾಲಕ್ರೀಡದಿ ಚರಿತ್ರೈಃ ಕರ್ಮ ಕುರ್ಯುರತಂದ್ರಿತಾಃ ॥** – *ಭಾಗ 10*

- ***ಅಡಿಗೆಯ ಸ್ಥಳ ಶುದ್ಧಿ :***

ಅಡಿಗೆ ಮಾಡುವ ಸ್ಥಳವನ್ನು ಗೋಮಯದಿಂದ ಶುದ್ಧಿ ಮಾಡಿರಬೇಕು. ಶುದ್ಧವಾದ ಅಕ್ಕಿ ಮೊದಲಾದ ಪದಾರ್ಥಗಳನ್ನು ನೀರಿನಿಂದ ಮೂರು ಬಾರಿ ಚೆನ್ನಾಗಿ ತೊಳೆಯಬೇಕು. ***(ಅದ್ಭಿಃ ಸುಕ್ಷಾಲಯೇತ್ ತ್ರಿಭಿಃ)*** ಬಟ್ಟೆಯಿಂದ ಶೋಧಿಸಿ ತೊಳೆದ ಅಕ್ಕಿಯಲ್ಲಿರುವ ನೀರನ್ನು ತೆಗೆಯಬೇಕು. ಅದರ ಮೇಲೆ ತಟ್ಟೆ ಮುಚ್ಚಿಡಬೇಕು.

- ***ಕುಳಿತೇ ಅಗ್ನಿಸ್ಥಾಪನಃ :***

ಸ್ತ್ರೀಯು ಅಗ್ಗಿಷ್ಟಿಕೆ, ಒಲೆಗಳನ್ನು ಕುಳಿತೇ ಅಗ್ನಿಯನ್ನು ಹಚ್ಚಬೇಕು. ಯಾಜ್ಞೀಯ ಕಟ್ಟಿಗೆಗಳನ್ನು ಪ್ರೋಕ್ಷಿಸಿ, ಒಲೆಗೆ ಹಾಕಿ ಬೀಸಬೇಕು. ಬಾಯಿಂದ ಊದಿ ಉಜ್ವಲಗೊಳಿಸಬಾರದು.

ಅಗ್ನಿಯನ್ನು ದೇವರ ದೀಪದಿಂದ ಹತ್ತಿಸಬಾರದು. ತನ್ನ ಮನೆಯಲ್ಲಿ ತಾನೇ ತಯಾರಿಸಿದ ಅಗ್ನಿಯಿಂದ ಅಡಿಗೆ ಮಾಡಬೇಕು. ಭಗದ್ಭಕ್ತನ ಶ್ರೋತ್ರೀಯನ ಮನೆಯಿಂದಲೂ ಅಗ್ನಿ ತರಬಹುದು.

**ಸ್ವಕೀಯಂ ನಿತ್ಯಪಾಕಾಯ ಪಾವಕಂ ಪರಿಕಲ್ಪಯೇತ್ ।**
**ಯದಿ ನ ಸ್ಯಾತ್ ಸ್ವಕೇ ಗೇಹೇ ದಯವಾದಗ್ನಿಸ್ತದಾ ಪುನಃ ।**
**ಶ್ರೋತರಿಯಾಗಾರತೋ ಗ್ರಾಹ್ಯಃ ।**

ಶೂದ್ರಾದಿಗಳ ಮನೆಯಿಂದ ತಂದ ಅಗ್ನಿಯಿಂದ ಪಾಕ ಮಾಡಬಾರದು. ಶ್ರೋತ್ರಿಯಾಗಾರದಿಂದ ಸಂಗ್ರಹಿಸಿದ ಅಗ್ನಿಯನ್ನು ತೃಣ–ಗೋಬೆರಣಿ–ಇದ್ದಿಲುಗಳಿಂದ ಅಭಿವೃದ್ಧಿಗೊಳಿಸಿ ಅದನ್ನು ಅಗ್ಗಿಷ್ಟಿಕೆ, ಒಲೆಗಳಲ್ಲಿ ಹಾಕಿ ***'ಸ್ವಧಾ – ಸ್ವಾಹಾ ಸಹಿತ ಅಗ್ನಯೇ ನಮಃ'*** ಎಂದು ಪ್ರತಿಷ್ಠಾಪಿಸಿ,

**ಚುಲ್ಲಿಕಾಯಾಂ ಪ್ರತಿಷ್ಠಾಪ್ಯ ತೇನ ಪಾಕಾದಿಕಕ್ರಿಯಾಮ್ ।**
**ಏಧಯೇದೇವ ವಿಧಿನಾ ಗೋಶಕೃತ್ ಯಾಜ್ಞಿಕೈಃ ತೃಣೈಃ ॥**

ತುಲಸೀಕಾಷ್ಠದಿಂದ, ತಯಾರಾದ ಅನ್ನಾದಿಗಳು ಭಗವಂತನಿಗೆ ಅತಿಪ್ರಿಯವಾಗುತ್ತವೆ. ಅಗ್ನಿಯನ್ನು ಬಾಯಿಂದ ಊದದೇ ಬೀಸಣಿಕೆಯಿಂದ ಬೀಸಿ ಉಜ್ವಲಗೊಳಿಸುವುದು.

**ನೈವೇದ್ಯಂ ಪಚತೇ ಯಾ ತು ತುಲಸೀ ಕಾಷ್ಠಕಾವಕೇ ।**
**ಮೇರುತುಲ್ಯಂ ಭವೇದನ್ನಂ ಪಿತೄಣಾಂ ದತ್ತಮಕ್ಷಯಮ್ ।**
**ಶುಷ್ಕಗವ್ಯಂ ಪುರೀಷಂ ಶುದ್ಧಮಗ್ನೌ ಪ್ರದೀಪಯೇತ್ ।**
**ವ್ಯಜನೇನ ಧಮೇದಗ್ನಿಮ ನ ಧಮೇನ್ಮುಖ ವಾಯುನಾ ॥**

- ***ಕುದಿಯುವ ನೀರಿಗೆ ಅಕ್ಕಿ ಹಾಕಬಾರದು :***

ಅಕ್ಕಿಯನ್ನು ಮೂರು ಬಾರಿ ತೊಳೆದು, ಅದರಲ್ಲಿನ ನೀರನ್ನು ಸಂಪೂರ್ಣ ಶೋಧಿಸಿ ತೆಗೆದು, ನಂತರ ಕುದಿಯುತ್ತಿರುವ ನೀರಿಗೆ ಅಕ್ಕಿಯನ್ನು ಹಾಕದೆ ಬೇರೆ ನೀರನ್ನು ಹಾಕಿ ಹಾಗೆಯೇ ಒಲೆಯ ಮೇಲಿಟ್ಟು ಅನ್ನ ತಯಾರಿಸುವುದು. ಬೇಳೆಗೆ ಈ ನಿಯಮವಿಲ್ಲ.

**ತಪ್ತೋದಕಸ್ಯ ತನ್ಮಧ್ಯೇ ತಂಡುಲಂ ಪಾಚಯೇದ್ಯದಿ ।**
**ತದನ್ನಂ ಮಾಂಸಸದೃಶಂ ತದ್ರಸಂ ಸುರಯಾ ಸಮಮ್ ॥** – ವಿಷ್ಣುಸ್ಮೃತಿ
**ಸೂಪಸ್ಯ ನಾಯಂ ನಿಯಮಃ ತಪ್ತೇಷ್ವೇವ ಜಲೇಷು ವೈ ॥**
– *ಲೌಗಾಕ್ಷಿ ಸ್ಮೃತಿ*

- ***ನೈವೇದ್ಯದಲ್ಲಿ ಏನೇನಿರಬೇಕು :***

ತರಕಾರಿಗಳನ್ನು ಗೆಣಸು ಮೊದಲಾದ ಗೆಡ್ಡೆಗಳನ್ನು, ಮೆಣಸು–ಎಣ್ಣೆ ಮಿಶ್ರ ಮಾಡಿ ಬೇಯಿಸಿದ್ದು, ಹಾಲು, ಮೊಸರು, ತುಪ್ಪ, ಅನ್ನ, ತೊವ್ವೆ, ನಾನಾ ವಿಧ ವ್ಯಂಜನಗಳು, ಪಾಯಸ, ಭಕ್ಷ್ಯ ಭೋಜ್ಯಗಳು, ಪಾನಕಾದಿಗಳನ್ನು ನೈವೇದ್ಯಕ್ಕೆ ತಯಾರಿಸಬೇಕು. ಬಾಳೆ – ಮಾವಿನ ರಸಾಯನ, ಚಕ್ಕುಲಿ, ವಡೆ, ಅಪೂಪಾದಿಗಳನ್ನು ತಯಾರಿಸಬೇಕು.

**ನೈವೇದ್ಯಂ ಹೃದ್ಯಮನ್ನಾದ್ಯಂ ಸಸೂಪಂ ವ್ಯಂಜನಾದಿಕಮ್ ।**
**ಪಾಯಸಂ ಭಕ್ಷ್ಯ ಭೋಜ್ಯಂ ಚ ಪಾನಕಂ ಚ ನಿವೇದಯೇತ್ ॥**

ತನ್ನ ಪತಿಗೆ ಏನೇನು ಇಷ್ಟವೋ ಅವೆಲ್ಲವನ್ನು ಪತ್ನಿಯು ತಯಾರಿಸಿ ದೇವರಿಗೆ ನಿವೇದಿಸುವಂತೆ ಪ್ರಾರ್ಥಿಸಬೇಕು.

- ***ನೈವೇದ್ಯ ಮಂಡಲ :***

ನೈವೇದ್ಯ ಸ್ಥಳವನ್ನು ಗೋಮಯ – ನೀರಿನಿಂದ ಸಾರಿಸಿ, ಮಂಡಲ ಮಾಡಿ ಶ್ರೀಕಾರವನ್ನು ಪತ್ನಿಯೇ ಬರೆಯಬೇಕು.

**ಏವಮನ್ನಾದಿಕಂ ಸರ್ವಂ ಪತ್ನ್ಯಾ ಸುಕೃತಮಂಜಸಾ ।**
**ಸ್ಥಲ ಶುದ್ಧಿಂ ತತಃ ಕೃತ್ವಾ ದೇವಸ್ಯಾಗ್ರೇ ಲಿಖೇಚ್ಛ್ರಿಯಃ ॥**

- ***ಮಂಡಲಕರಣದಿಂದ ನಿತ್ಯ ಸೌಮಾಂಗಲ್ಯ :***

**ಮಂಡಲಂ ಕುರುತೇ ನಿತ್ಯಂ ಯಾ ನಾರೀ ಕೇಶವಾಗ್ರತಃ ।**
**ಸಪ್ತ ಜನ್ಮನಿ ವೈಧವ್ಯಂ ನಾಪ್ನೋತ್ಯೇವ ನ ಸಂಶಯಃ ॥** – *ಸ್ಕಂಧ*

- ***ಪತಿಯ ಅಧೀನವಾಗಿಸುವಿಕೆ :***

ಸತಿಯು ತಾನು ಭಕ್ತಿಯಿಂದ ಭಗವಂತನ ಪ್ರೀತಿಗಾಗಿ ತಯಾರಿಸಿದ ಅನ್ನಾದಿ ಭಕ್ಷ್ಯಗಳನ್ನು ಪತಿಯು ದೇವರಿಗೆ ನಿವೇದಿಸಲು ಪ್ರಾರ್ಥಿಸಬೇಕು.

**ತತೋ ಅನ್ನ ಸಾಧಕಂ ಕೃತ್ವಾ ಪತಯೇ ವಿನಿವೇದ್ಯ ತತ್ ।**

- ***ನೈವೇದ್ಯ ಕಾಲದಲ್ಲಿ ಭೋಜನ ಸಂಧಿ :***

ಪತಿಯು ನಿವೇದಿಸುತ್ತಿರುವಾಗ ಹರಿಕಥಾಮೃತಸಾರದ ಭೋಜನ ಸಂಧಿಯನ್ನು ಪಠಿಸುತ್ತಿರಬೇಕು.

ನೈವೇದ್ಯ ವೈಶ್ವದೇವಾದಿಗಳು ಮುಗಿದ ಮೇಲೆ ಪತಿಯೇ ಮೊದಲಾದವರಿಗೆ ತಾನು ಬಡಿಸಬೇಕು. ಇದೊಂದು ಪತಿಸೇವೆಯೆಂದೆ ಭಾವಿಸಬೇಕು.

**ಕೃತಾನ್ನ ಸಾಧನ ಸಾಧ್ವೀ ಸುಭೃಶಂ ಭೋಜಯೇತ್ ಪತಿಮ್ ।**
**ಪತಿಸೇವಾಂ ಪುರಸ್ಕೃತ್ಯ ಗೃಹಕೃತ್ಯಂ ಸಮಾಶಚರೇತ್ ॥**

– *ಸೌ–ಕಲ್ಪದ್ರುಮ*

- ***ಪರಿವೇಷಣಕ್ರಮ – ಎಲೆ ಹಚ್ಚುವ ಕ್ರಮ :***

ಮೊದಲು ಮುತ್ತುಗ – ಬಾಳೆ – ಪದ್ಮಪತ್ರ – ಹಲಸಿನ ಎಲೆಗಳಿಂದ ಎಲೆಯನ್ನು ಹಚ್ಚಬೇಕು.

ಮೊದಲು ಮಧ್ಯದಲ್ಲಿ ದೊಡ್ಡದೊಂದು ಎಲೆ. ಇದರಲ್ಲಿ ಬ್ರಹ್ಮಾಂಡದಲ್ಲಿ ಅಭಿವ್ಯಕ್ತನಾದ ಪುರುಷನಾಮಕ ಭಗವಂತನ ಚಿಂತನೆ. ನಂತರ ಸುತ್ತಲೂ ಐದು ಎಲೆಗಳನ್ನು ಹಚ್ಚಬೇಕು. ಈ ರೂಪದಿಂದ ಅಭಿವ್ಯಕ್ತವಾದ ನಾರಾಯಣಾದಿ ಪಂಚರೂಪಗಳ ಚಿಂತನೆ. ನಂತರ ಚಿಕ್ಕ ಚಿಕ್ಕ ಹತ್ತು

ಎಲೆಗಳಿಂದ ಸುತ್ತಲೂ ಹೆಣೆಯುವುದು. ಭಗವಂತನ ದಶಾವತಾರ ವೈಭವದ ಚಿಂತನೆ ಮಾಡಬೇಕು. ಮತ್ಸ್ಯಾಯ ನಮಃ, ಕೂರ್ಮಾಯ ನಮಃ ಇತ್ಯಾದಿ. ಎಲೆಗಳು ಅಲಭ್ಯವಾದಾಗ ಸುವರ್ಣಮಿಶ್ರಿತ ಬೆಳ್ಳಿ ತಟ್ಟೆಯಲ್ಲಿಯೇ ಭುಂಜಿಸಬಹುದು. ಸ್ಟೀಲ್ ತಟ್ಟೆ, ಕಬ್ಬಿಣದ, ಅಲ್ಯೂಮಿನಿಯಂ ತಟ್ಟೆಗಳಲ್ಲಿ ಕಲಿಯು ವಾಸವಾಗಿದ್ದು ಅದರಲ್ಲಿರುವ ಅನ್ನವನ್ನು ದೂಷಿತಗೊಳಿಸುವನು.

**ಆಯಸೇನ ತು ಪಾತ್ರೇಣ ಯದನ್ನಮುಪದೀಯತೇ ।**
**ಭೋಕ್ತಾ ವಿಷ್ಟಾಸಮಂ ಭುಂಕ್ತೇ ದಾತಾ ಚ ನರಕಂ ವ್ರಜೇತ್ ॥**

- ***ದ್ವಾದಶಿ ಬಾಳೆ ಎಲೆ ನಿಷಿದ್ಧ :***

ದ್ವಾದಶಿಯಂದು ಬಾಳೆ ಎಲೆಯಲ್ಲಿ ಭೋಜನ ಮಾಡಬಾರದು. ಹಲಸಿನ ಎಲೆಯಲ್ಲಿಯೇ ಮಾಡಬೇಕು. ಅಲಭ್ಯವಾದಾಗ ಬಾಳೆ ಎಲೆಯನ್ನು ಹಸಿರು ಬಣ್ಣ ಹೋಗುವಂತೆ ಅಗ್ನಿಯಲ್ಲಿ ಕಾಸಿ ನಂತರ ಉಪಯೋಗಿಸಬಹುದು.

- ***ಪರಿವೇಷಣ ಕ್ರಮ :***

ಪಾತ್ರಾಭಿಘಾರ, ಲವಣ, ವ್ಯಂಜನ ಪದಾರ್ಥಗಳು, ತೊವ್ವೆ, ಪಾಯಸ, ಚಿತ್ರಾನ್ನ – ಭಕ್ಷಗಳು – ಮಧ್ಯೆ ಅನ್ನ – ತುಪ್ಪಾಭಿಘಾರ ಹೀಗೆ ಕ್ರಮವಾಗಿ ಬಡಿಸಬೇಕು. ಪತಿಗೆ ಬಡಿಸುವಾಗ ಆಯಾಯ ದೇವತೆಗಳ ಚಿಂತನೆ ಹಾಗೂ ಭಗವತ್ ಸೇವೆಗೆ ತಮ್ಮನ್ನು ಅರ್ಪಿಸಿಕೊಳ್ಳುತ್ತಿರುವರೆಂಬ ಭಾವನೆ ಇರಬೇಕು.

**ಅನ್ನಂ ಮಧ್ಯೇ ಪ್ರತಿಷ್ಠಾಪ್ಯಂ ದಕ್ಷಿಣೇ ಘೃತಪಾಯಸಮ್ ।**
**ಶಾಕಾದಿ ಪುರತಃ ಸ್ಥಾಪ್ಯಂ ಭಕ್ಷ್ಯಂ ಭೋಜ್ಯಂಚ ವಾಮತಃ ॥**

– *ವ್ಯಾಸಸ್ಮೃತಿ*

**ಅನ್ನಸ್ಯ ದಕ್ಷಿಣೇ ಭಾಗೇ ಸೂಪಸ್ಥಾನಂ ಪ್ರಚಕ್ಷತೇ ।**

ಅನ್ನಾದಿಗಳು ಪರಸ್ಪರ ಮುಟ್ಟುವಂತೆ ಬಡಿಸಬಾರದು.

ಪತ್ನಿಯು ಬಡಿಸುವಾಗ ಪಾಯಸ – ತೊವ್ವೆ, ಅನ್ನ – ಪಾಯಸ, ಉಪ್ಪು – ಚಟ್ನಿ, ಪಲ್ಯ – ಗೊಜ್ಜು, ಇವುಗಳು ಒಂದನ್ನೊಂದು ಸ್ಪರ್ಶಿಸದಂತೆ ಸ್ವಲ್ಪ ಸ್ವಲ್ಪವೇ ಬಡಿಸಬೇಕು.

**ಶಾಕಾನಾಮಪಿ ಸರ್ವೇಷಾಂ ಪಕ್ವಾನಾಂ ಪರಿವೇಷಣೇ ।**
**ಮಿಥೋ ಯೋಗೋ ಯಥಾ ನಸ್ಯಾತ್ ತಥಾ ಪಾತ್ರೆ ವಿಧೀಯತೇ ॥**
*–ಲೌಗಾಕ್ಷಿ*

- ***ಕೈಯ್ಯಲ್ಲಿ ಬಡಿಸಬಾರದ ವಸ್ತುಗಳು :***

ಉಪ್ಪು, ಪಾಯಸ, ತೊವ್ವೆ, ಅನ್ನ, ತುಪ್ಪ, ಎಣ್ಣೆ, ವ್ಯಂಜನ ಪದಾರ್ಥಗಳನ್ನು ಕೈಯಿಂದ ಬಡಿಸಬಾರದು. ಸೌಟಿನಿಂದ ಬಡಿಸಬೇಕು. ಹಾಗೆ ಬಡಿಸಿದ ಅನ್ನಾದಿಗಳು ಅನ್ನದಾನ ಮಾಡಿದಂತೆ ಆಗುವುದಿಲ್ಲ.

**ಹಸ್ತದತ್ತಾಸ್ತು ಯೇ ಸ್ನೇಹಾಲ್ಲವಣಂ ವ್ಯಂಜನಾದಿಕಮ್ ।**
**ದಾತಾರಂ ನೋಪತಿಷ್ಠಂತಿ ಭೋಕ್ತಾ ಭುಂಕ್ತೇ ಚ ಕಿಲ್ಬಿಷಮ್ ॥**
*– ಅತ್ರಿ –5/7–8*

**ಪಾನೀಯಂ ಪಾಯಸಂ ಸೂಪಂ ಘೃತಂ ಲವಣಮೇವ ಚ ।**
**ಹಸ್ತದತ್ತಂ ನ ಭುಂಜೀತ ಸಮಂ ಗೋಮಾಂಸಭಕ್ಷಣಮ್ ॥**

ರಾತ್ರಿಯಲ್ಲಿ ಮೊಸರು – ಹಾಲಿನೊಂದಿಗೆ ಮೊಸರು ಬಡಿಸಬಾರದು.

**ರಾತ್ರೌ ನ ದಧಿಭೋಕ್ತವ್ಯಂ ॥** – *ಸ್ಕಾಂದ–ಕಾಶೀ 40/11*

**ರಾತ್ರೌ ಚ ದಧಿಭಕ್ಷ್ಯಂ ಚ ಪ್ರಯತ್ನೇನ ವಿವರ್ಜಯೇತ್ ।** – *ಕೂರ್ಮ–17*

- ***ಮೊಸರಿಗೆ ಹಾಲು ಬಡಿಸಬಾರದು :***

ಮೊಸರು ಹುಳಿಯಾಗದಂತೆ ಸತಿಯು ನೋಡುವುದು ಅವಳ ಕರ್ತವ್ಯ. ಹುಳಿಯಾದರೆ ನೀರು, ಉಪ್ಪು, ಶುಂಠಿಗಳಿಂದ ಸಂಸ್ಕರಿಸಿದ ಮಜ್ಜಿಗೆಯನ್ನು ಬಡಿಸಬೇಕು. ಮೊಸರು ಹಾಕಿ ಅದರ ಮೇಲೆ ಹಾಲನ್ನು ಹಾಕಿದರೆ ಸುರೆಯೆನಿಸುತ್ತದೆ.

**ನಾಶ್ನೀಯಾತ್ ಪಯಸಾ ತಕ್ರಮ್ ॥** – *ಕೂರ್ಮ –17/25*

- ***ಶ್ರಾದ್ಧದಲ್ಲಿ ಕೈಯಿಂದ ಬಡಿಸಬಾರದೆಂಬ ನಿಯಮವಿಲ್ಲ:***

ಅನ್ನಾದಿಗಳನ್ನು ಶ್ರಾದ್ಧದಲ್ಲಿ ಬಡಿಸುವಾಗ ಕೈಯಿಂದ ಹಾಕಬಹುದು.

**ಹಸ್ತದತ್ತಾದಿ ನಿಯಮೋ ನಾಸ್ತಿ ಶ್ರಾದ್ಧಾದಿಕರ್ಮಸು ।**

ಆದಿ ಶಬ್ದದಿಂದ ಬಹಳ ಜನರಿಗೆ ಅನ್ನ ಸಂತರ್ಪಣೆಯಲ್ಲಿ ಈ ನಿಯಮ ಅನ್ವಯವಾಗುವುದಿಲ್ಲ.

- ***ಹಸಿವೆಗೊಂಡ ಪತಿಗೆ ಉಚಿತ ಸತ್ಕಾರ ಧರ್ಮ :***

**ಕ್ಷುಧಿತಂ ಭೋಜಯೇತ್ ಕಾಂತಂ ದದ್ಯಾತ್ ಪಾನಂ ಚ ಭೋಜನಮ್।**

ಪತಿ – ಅತ್ತೆ – ಮಾವಂದಿರ – ಅತಿಥಿಗಳ ನಂತರ ಭೋಜನ.

ಸತಿಯು ಅತ್ತೆ, ಮಾವಂದಿರು, ಪತಿಯ ಬಂಧು ಬಳಗದವರಿಗೆಲ್ಲ ಮೊದಲು ಭೋಜನ ಬಡಿಸಿ, ಪತಿಗೆ ಭೋಜನ ಹಾಕಿದ ನಂತರ ತಾನು ಭುಂಜಿಸಬೇಕು.

**ಗೃಹಕೃತ್ಯಂ ನಿನಿರ್ವರ್ತ್ಯ ಭೋಜಯಿತ್ವಾ ಪತಿಂ ಸತೀ ।**
**ಅತಿಥಿಂ ಪೂಜಯಿತ್ವಾ ಚ ಸ್ವಯಂ ಭುಂಕ್ತೇ ಸುಖಂ ಸತೀ ॥**

*– ಬ್ರಹ್ಮ–84/15–16*

ಪತಿಯು ಸೇವಿಸಿದ ಆಹಾರವನ್ನೇ ಭಕ್ಷಿಸಬೇಕು.

**ಯದ್ ಭಕ್ಷ್ಯಂ ಸ್ವಾಮಿನೋ ನಿತ್ಯಂ ತದೇವನ್ನಂ ಚ ಯೋಷಿತಾಂ ।**
**ಭಕ್ತಿಭಾವೇನ ಸತತಂ ಭೋಕ್ತವ್ಯಂ ತದನುಜ್ಞಯಾ ॥**

*–ಬ್ರ.ವೈ. 83/112*

***ಭರ್ತುರುಚ್ಛಿಷ್ಟ ಭೋಜನ :***

ಪತಿಯು ಭುಂಜಿಸಿದ ನಂತರ ಭಂಜಿಸುವುದು ಹೋಮಶೇಷವೆಂದು ಪ್ರಸಾದವೆಂದು ತಿಳಿದು ಪತ್ನಿಯು ಉಚ್ಛಿಷ್ಟವನ್ನು ಭುಂಜಿಸಬೇಕು. ಇದು ಎಂಜಲು ಎಂಬುವಳು ಎಂಜಲನ್ನವನ್ನೇ ಜನ್ಮಜನ್ಮಗಳಲ್ಲಿಯೂ ತಿನ್ನಬೇಕಾಗುತ್ತದೆ.

**ಭುಕ್ತೇ ಭುಂಕ್ತೇ ಪತೌ ಯಾ ತು ಜ್ಞೇಯಾ ಪತಿವ್ರತಾ ।**

ಗಂಡನು ತಿಂದು ಉಳಿಸಿರುವ ಅನ್ನಾದಿ ಆಹಾರ ಪದಾರ್ಥಗಳನ್ನು ಹಣ್ಣು, ಹಾಲು ಮೊದಲಾದವುಗಳನ್ನೂ, ಪತಿವ್ರತೆಯು ಭುಂಜಿಸಬೇಕು. ತಾಂಬೂಲಾದಿಗಳನ್ನು ಸಹ ಪತಿಗೆ ಮೊದಲು ನೀಡಿ, ನಂತರ ತಾನೂ ಮೆಲ್ಲಬೇಕು.

**ಭತ್ರುಚ್ಛಿಷ್ಟಂ ಸದಾ ಭೋಜ್ಯಮನ್ನಂ ತಾಂಬೂಲಮೇವ ಚ ।**

**ಶಾಕಾನಾಮಪಿ ಸರ್ವೇಷಾಂ ಪಕ್ವಾನಾಂ ಪರಿವೇಷಣೇ ।**
**ಮಿಥೋ ಯೋಗೋ ಯಥಾ ನಸ್ಯಾತ್ ತಥಾ ಪಾತ್ರೆ ವಿಧೀಯತೇ ॥**
*–ಲೌಗಾಕ್ಷಿ*

- ***ಕೈಯ್ಯಲ್ಲಿ ಬಡಿಸಬಾರದ ವಸ್ತುಗಳು :***

ಉಪ್ಪು, ಪಾಯಸ, ತೊವ್ವೆ, ಅನ್ನ, ತುಪ್ಪ, ಎಣ್ಣೆ, ವ್ಯಂಜನ ಪದಾರ್ಥಗಳನ್ನು ಕೈಯಿಂದ ಬಡಿಸಬಾರದು. ಸೌಟಿನಿಂದ ಬಡಿಸಬೇಕು. ಹಾಗೆ ಬಡಿಸಿದ ಅನ್ನಾದಿಗಳು ಅನ್ನದಾನ ಮಾಡಿದಂತೆ ಆಗುವುದಿಲ್ಲ.

**ಹಸ್ತದತ್ತಾಸ್ತು ಯೇ ಸ್ನೇಹಾಲ್ಲವಣಂ ವ್ಯಂಜನಾದಿಕಮ್ ।**
**ದಾತಾರಂ ನೋಪತಿಷ್ಠಂತಿ ಭೋಕ್ತಾ ಭುಂಕ್ತೇ ಚ ಕಿಲ್ಬಿಷಮ್ ॥**
*– ಅತ್ರಿ –5/7–8*

**ಪಾನೀಯಂ ಪಾಯಸಂ ಸೂಪಂ ಘೃತಂ ಲವಣಮೇವ ಚ ।**
**ಹಸ್ತದತ್ತಂ ನ ಭುಂಜೀತ ಸಮಂ ಗೋಮಾಂಸಭಕ್ಷಣಮ್ ॥**

ರಾತ್ರಿಯಲ್ಲಿ ಮೊಸರು – ಹಾಲಿನೊಂದಿಗೆ ಮೊಸರು ಬಡಿಸಬಾರದು.

**ರಾತ್ರೌ ನ ದಧಿಭೋಕ್ತವ್ಯಂ ॥** – *ಸ್ಕಾಂದ–ಕಾಶೀ 40/11*

**ರಾತ್ರೌ ಚ ದಧಿಭಕ್ಷ್ಯಂ ಚ ಪ್ರಯತ್ನೇನ ವಿವರ್ಜಯೇತ್ ।** – *ಕೂರ್ಮ–17*

- ***ಮೊಸರಿಗೆ ಹಾಲು ಬಡಿಸಬಾರದು :***

ಮೊಸರು ಹುಳಿಯಾಗದಂತೆ ಸತಿಯು ನೋಡುವುದು ಅವಳ ಕರ್ತವ್ಯ. ಹುಳಿಯಾದರೆ ನೀರು, ಉಪ್ಪು, ಶುಂಠಿಗಳಿಂದ ಸಂಸ್ಕರಿಸಿದ ಮಜ್ಜಿಗೆಯನ್ನು ಬಡಿಸಬೇಕು. ಮೊಸರು ಹಾಕಿ ಅದರ ಮೇಲೆ ಹಾಲನ್ನು ಹಾಕಿದರೆ ಸುರೆಯೆನಿಸುತ್ತದೆ.

**ನಾಶ್ನೀಯಾತ್ ಪಯಸಾ ತಕ್ರಮ್ ॥** – *ಕೂರ್ಮ –17/25*

- ***ಶ್ರಾದ್ಧದಲ್ಲಿ ಕೈಯಿಂದ ಬಡಿಸಬಾರದೆಂಬ ನಿಯಮವಿಲ್ಲ:***

ಅನ್ನಾದಿಗಳನ್ನು ಶ್ರಾದ್ಧದಲ್ಲಿ ಬಡಿಸುವಾಗ ಕೈಯಿಂದ ಹಾಕಬಹುದು.

**ಹಸ್ತದತ್ತಾದಿ ನಿಯಮೋ ನಾಸ್ತಿ ಶ್ರಾದ್ಧಾದಿಕರ್ಮಸು ।**

ಆದಿ ಶಬ್ದದಿಂದ ಬಹಳ ಜನರಿಗೆ ಅನ್ನ ಸಂತರ್ಪಣೆಯಲ್ಲಿ ಈ ನಿಯಮ ಅನ್ವಯವಾಗುವುದಿಲ್ಲ.

- ***ಹಸಿವೆಗೊಂಡ ಪತಿಗೆ ಉಚಿತ ಸತ್ಕಾರ ಧರ್ಮ :***

**ಕ್ಷುಧಿತಂ ಭೋಜಯೇತ್ ಕಾಂತಂ ದದ್ಯಾತ್ ಪಾನಂ ಚ ಭೋಜನಮ್।**

ಪತಿ – ಅತ್ತೆ – ಮಾವಂದಿರ – ಅತಿಥಿಗಳ ನಂತರ ಭೋಜನ.

ಸತಿಯು ಅತ್ತೆ, ಮಾವಂದಿರು, ಪತಿಯ ಬಂಧು ಬಳಗದವರಿಗೆಲ್ಲ ಮೊದಲು ಭೋಜನ ಬಡಿಸಿ, ಪತಿಗೆ ಭೋಜನ ಹಾಕಿದ ನಂತರ ತಾನು ಭುಂಜಿಸಬೇಕು.

**ಗೃಹಕೃತ್ಯಂ ನಿರ್ನಿರ್ವರ್ತ್ಯ ಭೋಜಯಿತ್ವಾ ಪತಿಂ ಸತೀ ।**
**ಅತಿಥಿಂ ಪೂಜಯಿತ್ವಾ ಚ ಸ್ವಯಂ ಭುಂಕ್ತೇ ಸುಖಂ ಸತೀ ॥**
*– ಬ್ರಹ್ಮ–84/15–16*

ಪತಿಯು ಸೇವಿಸಿದ ಆಹಾರವನ್ನೇ ಭಕ್ಷಿಸಬೇಕು.

**ಯದ್ ಭಕ್ಷ್ಯಂ ಸ್ವಾಮಿನೋ ನಿತ್ಯಂ ತದೇವನ್ನಂ ಚ ಯೋಷಿತಾಂ ।**
**ಭಕ್ತಿಭಾವೇನ ಸತತಂ ಭೋಕ್ತವ್ಯಂ ತದನುಜ್ಞಯಾ ॥**
*–ಬ್ರ.ವೈ. 83/112*

***ಭರ್ತುರುಚ್ಛಿಷ್ಟ ಭೋಜನ :***

ಪತಿಯು ಭುಂಜಿಸಿದ ನಂತರ ಭಂಜಿಸುವುದು ಹೋಮಶೇಷವೆಂದು ಪ್ರಸಾದವೆಂದು ತಿಳಿದು ಪತ್ನಿಯು ಉಚ್ಛಿಷ್ಟವನ್ನು ಭುಂಜಿಸಬೇಕು. ಇದು ಎಂಜಲು ಎಂಬುವಳು ಎಂಜಲನ್ನವನ್ನೇ ಜನ್ಮಜನ್ಮಗಳಲ್ಲಿಯೂ ತಿನ್ನಬೇಕಾಗುತ್ತದೆ.

**ಭುಕ್ತೇ ಭುಂಕ್ತೇ ಪತೌ ಯಾ ತು ಜ್ಞೇಯಾ ಪತಿವ್ರತಾ ।**

ಗಂಡನು ತಿಂದು ಉಳಿಸಿರುವ ಅನ್ನಾದಿ ಆಹಾರ ಪದಾರ್ಥಗಳನ್ನು ಹಣ್ಣು, ಹಾಲು ಮೊದಲಾದವುಗಳನ್ನೂ, ಪತಿವ್ರತೆಯು ಭುಂಜಿಸಬೇಕು. ತಾಂಬೂಲಾದಿಗಳನ್ನು ಸಹ ಪತಿಗೆ ಮೊದಲು ನೀಡಿ, ನಂತರ ತಾನೂ ಮೆಲ್ಲಬೇಕು.

**ಭತ್ರುಚ್ಛಿಷ್ಟಂ ಸದಾ ಭೋಜ್ಯಮನ್ನಂ ತಾಂಬೂಲಮೇವ ಚ ।**

ಪತ್ನಿಯ ಉಚ್ಛಿಷ್ಟವನ್ನು ಪತಿಯು ತಿನ್ನಬಾರದು.

ವಿವಾಹದಲ್ಲಿನ ಮೂರು ದಿವಸಗಳ ಹೊರತಾಗಿ ಉಳಿದ ದಿವಸಗಳಲ್ಲಿ ಪತ್ನಿಯ ಎಂಜಲನ್ನು ಪತಿಯು ತಿನ್ನಬಾರದು.

- ***ಐದು ಒದ್ದೆಯಾಗಬೇಕು :***

ಕೈಗಳೆರಡು – ಕಾಲುಗಳೆರಡು – ಬಾಯಿ ಹೀಗೆ ಪಂಚಾರ್ದ್ರವಾಗಿಯೇ ಭುಂಜಿಸಬೇಕು.

**ಪಂಚಾರ್ದ್ರಃ ಭೋಜನಂ ಕುರ್ಯಾತ್ ।** – ವ್ಯಾಸಸ್ಮೃತಿ

- ***ಪೂರ್ವಾಭಿಮುಖವಾಗಿಯೇ ಭೋಜನ :***

ಪತಿಯ ಎಲೆ, ಪಾತ್ರೆಗಳಲ್ಲಿ ಭುಂಜಿಸುವ ಸ್ತ್ರೀಯು ಪತಿಯನ್ನು ಪೂರ್ವಾಭಿಮುಖವಾಗಿ ಕೂಡಿಸಬೇಕು. ಇದರಿಂದ ಆಯುಸ್ಸಿನ ವೃದ್ಧಿಯು.

**ಪ್ರಾಚ್ಯಾ ನರೋ ಲಭೇದಾಯುಃ ಯಾಮ್ಯಾಂ ಪ್ರೇತತ್ವಮಶ್ನುತೇ ।**
**ವಾರುಣೇ ಚ ಭವೇದ್ ರೋಗೀ ಆಯುರ್ವಿತ್ತಂ ತಥೋತ್ತರೇ ॥**

*–ಪದ್ಮ ಸೃ. –51/128*

- ಸ್ನಾನ ಮಾಡದೆ ಭೋಜನ ಮಾಡಿದರೆ ಮಲವನ್ನು ತಿಂದಂತೆ,

**ಅಸ್ನಾತಾಶೀ ಮಲಂ ಭುಂಕ್ತೇ ।**

- ಸೂರ್ಯನಿರುವಾಗಲೇ ಎರಡು ಭೋಜನ ನಿಷಿದ್ಧ.

**ದ್ವಿರ್ಭೋಜನಂ ನ ಕರ್ತವ್ಯಂ ಸ್ಥಿತೇ ಸೂರ್ಯೇ ದ್ವಿಜಾತಿಭಿಃ ॥**

*– ಬ್ರಹ್ಮ –83/59*

- ಸಂಧ್ಯಾಕಾಲಗಳಲ್ಲಿ ಭೋಜನ ನಿಷಿದ್ಧವು.

**ನಾಶ್ನೀಯಾತ್ ಸಂಧ್ಯಯೋಃ ದ್ವಯೋಃ ।** *–ಪದ್ಮ–ಪಾತಾಲ–9/56*

ತೊಡೆಯ ಮೇಲೆ ಇಟ್ಟುಕೊಂಡು ತಿನ್ನಬಾರದು. ಎಡಗೈಯಿಂದ ತಿನ್ನಬಾರದು.

**ಭುಂಜನಾನಾ ತು ಸವ್ಯೇನ ಉತ್ಸಂಗೇ ಚಾಪಿ ಖಾದತಾಮ್ ।**

*– ಮಹಾ. ದ್ರೋ –73/38*

- **ಕೈ ತುತ್ತು ನಿಷಿದ್ಧ :**

**ಪಾಣೌ ನೈವ ಭುಂಜೀತ ।** – *ಬ್ರಹ್ಮ – 6/72*

ದೀಪ ಆರಿ ಹೋದಾಗ ಕತ್ತಲೆಯಲ್ಲಿ ಊಟ ಮಾಡುತ್ತಾ ಇರಬಾರದು. ದೀಪ ಬರುವವರೆಗೂ ಕಾಯಬೇಕು. ಕೈ ತುತ್ತು ಹಾಕಿಸಿಕೊಂಡು ತಿನ್ನುವುದನ್ನು ನಿಷೇಧಿಸಿದೆ.

**ನಾಂಧಕಾರೇ ನಾರ್ಧರಾತ್ರೆ ನಾಜೀರ್ಣೇ ಗ್ರಹಣೇ ತಥಾ ।**

ಓಡಾಡುತ್ತಾ ತಿನ್ನಬಾರದು. ಕುಳಿತುಕೊಂಡೇ ಭುಂಜಿಸಬೇಕು.

**ನಿಷಣ್ಣಶ್ಚಾಪಿ ಭುಂಜೀತ ನ ತು ಗಚ್ಛನ್ ಕದಾಚನ ।**

ಊಟ ಮಾಡುತ್ತಿರುವಾಗ ಮಧ್ಯೆ ಎದ್ದು ಪುನಃ ಊಟವನ್ನು ಮಾಡಬಾರದು. ಕಾಲಿನಿಂದ ತಗುಲಿದ, ದಾಟಿದ ಅನ್ನವು ರಾಕ್ಷಸರಿಗೆ ಸೇರಬೇಕಾದದ್ದು. ಆದ್ದರಿಂದ ಅದನ್ನು ತಿನ್ನಬಾರದು.

**ಉತ್ಥಾಯ ಪುನರ್ಭುಕ್ತಂ ಪಾದಸ್ಪೃಷ್ಟಂ ಚ ಲಂಘಿತಮ್ ।**
**ಅನ್ನಂ ತದ್ ರಾಕ್ಷಸಂ ವಿದ್ಯಾತ್ ॥**

ಪತ್ನಿಯು ಪತಿಯೊಂದಿಗೆ ತಿನ್ನುವುದು, ಪತಿಯು ಪತ್ನಿಯು ತಿಂದ ಎಂಜಲು ಪಾತ್ರೆಯಲ್ಲಿ, ಎಲೆಯಲ್ಲಾಗಲೀ ತಿನ್ನುವುದು, ಸ್ತ್ರೀಯ ಎಂಜಲನ್ನು ತಿನ್ನುವುದು ಮದ್ಯಾನ್ನಕ್ಕೆ ಸಮವು.

**ಸ್ತ್ರೀ ಪಾತ್ರ ಭುಜ್ನರಃ ಪಾಪಃ ಸ್ತ್ರೀಣಾಮುಚ್ಛಿಷ್ಟಭುಕ್ ತಥಾ ।**
**ತಯಾ ಸಹ ಚ ಯೋ ಭುಂಕ್ತೇ ಸ ಭುಂಕ್ತೇ ಮದ್ಯಮೇವ ಹಿ ॥**
– *ಅಶ್ವ –92*

ಒಂದೇ ತಟ್ಟೆಯಲ್ಲಾಗಲೀ, ಕಾಲು ಚಾಚಿಕೊಂಡಾಗಲೀ, ಅನ್ನವನ್ನು ಬಾಯಿಂದ ಊದುತ್ತ, ಎಡಬಲಗೈಗಳಿಂದ ತಿನ್ನುವುದು ನಿಷಿದ್ಧವು.

ಅನ್ನವನ್ನು ನಿಂದಿಸದೆ ಭಗವಂತನ ಪ್ರಸಾದವೆಂದೆ ತಿನ್ನಬೇಕು.

**ನ ನಿಂದ್ಯಾದನ್ನ ಭಕ್ಷ್ಯಾಂಶ್ಚ ಸ್ವಾದು ಅಸಾಧು ಚ ಭಕ್ಷಯೇತ್ ॥**

ಭಕ್ಷ್ಯ ಖಾದ್ಯಪೇಯಗಳನ್ನು ತಿನ್ನುವಾಗ ಕುಡಿಯುವಾಗ ಶಬ್ದ ಬಾರದಂತೆ ತಿನ್ನಬೇಕು, ಕುಡಿಯಬೇಕು.

**ಅಶಬ್ಧಂ ಸರ್ವತಃ ಕುರ್ವನ್ ತತ್ತತ್ ಕರ್ಮ ಸಮಾಚರೇತ್ ।**
**ಶಬ್ಧೇನಾಪೋಶನಂ ಪೀತ್ವಾ ಶಬ್ಧೇನ ಘೃತ ಪಾಯಸಮ್ ।**
**ಶಬ್ಧೇನಾಪಃ ಪಯಃ ಪೀತ್ವಾ ಸುರಾಪಾನಸಮಂ ಭವೇತ್ ॥**

*– ವ್ಯಾಘ್ರಪಾದ–239*

- ***ಆತ್ಮೋಚ್ಚಿಷ್ಟ ತಿನ್ನಬಾರದು :***

ಅರ್ಧ ತುತ್ತು, ತಿಂದು ಉಳಿದಿದ್ದು, ಹಣ್ಣು, ಚಕ್ಕುಲಿ, ಕೋಡುಬಳೆ, ಮೋದಕಗಳನ್ನು ಅರ್ಧ ಕಚ್ಚಿ ತಿನ್ನಬಾರದು. ಇದು ಆತ್ಮೋಚ್ಛಿಷ್ಟವೆನಿಸುತ್ತದೆ.

**ಖಾದಿತಾರ್ಧಂ ಪುನಃ ಖಾದೇತ್ ಮೋದಕಾಂಶ್ಚ ಫಲಾನಿ ಚ ।**
**ವಕ್ತ್ರಾಕ ತು ಯದ್ ಗ್ರಾಸಂ ಆತ್ಮೋಚ್ಛಿಷ್ಟಂ ತದುಚ್ಯತೇ ।**
**ದಷ್ಟಾವಶಿಷ್ಟಮನ್ನಂ ಚ ವಕ್ತ್ರಾನ್ ನಿಸ್ಸೃತಮೇವ ಚ ।**
**ಅಭೋಜ್ಯಂ ತದ್ ವಿಜಾನೀಯಾತ್...... ॥**

*– ವೃದ್ಧ ಗೌತಮ –13/13–15*

ಅನ್ನಾದಿಗಳನ್ನು ಸ್ವಲ್ಪವನ್ನೂ ಉಳಿಸದೆ ತಿನ್ನಬಾರದು. ತುಪ್ಪ–ಪಾಯಸಗಳನ್ನು ಬಿಟ್ಟು.

**ಸರ್ವಂ ಸಶೇಷಮಶ್ನೀಯಾತ್ ಘೃತ ಪಾಯಸವರ್ಜಿತಮ್ ।**

ಎಡಗೈಯಿಂದ ಬಡಿಸಿದ್ದು, ತಾನು ಬಡಿಸಿಕೊಂಡಿದ್ದು, ಮೂರು ಯಾಮ ಕಳೆದು ತಂಗಳಾದ ಅನ್ನಾದಿಗಳನ್ನು, ದುಷ್ಟರ ಅನ್ನವನ್ನು, ಶೂದ್ರಾನ್ನವನ್ನು, ನಾಯಿ, ರಜಸ್ವಲೆ, ಶೂದ್ರಾದಿಗಳು ನೋಡಿರುವ ಅನ್ನಾದಿಗಳನ್ನು, ಗೋವು ಮೂಸಿರುವ ಅನ್ನವನ್ನು ತಿನ್ನಬಾರದು. ಕಾಗೆ, ನಾಯಿ ಮುಟ್ಟಿದ್ದು, ನೋಡಿದ್ದು ಕೂದಲು ಇರುವ ಅನ್ನ, ಹುಳು ಬಿದ್ದಿರುವ ಅನ್ನ ತಿಂದರೆ ಮೂರು ದಿನ ಉಪವಾಸ.

**ವಾಮಹಸ್ತಾಹೃತಂ ಚಾನ್ನಂ ಭಕ್ತಂ ಪರ್ಯುಷಿತಂ ಚ ಯತ್ ।**
**ದುಷ್ಟಾನ್ನಂ ನೈವ ಭೋಕ್ತವ್ಯಂ ಶೂದ್ರಾನ್ನಂ ನೈವ ಕರ್ಹಿಚಿತ್ ॥**

*– ಮಹಾ.ಅನು–143/17*

**ಕೇಶ ಕೀಟೋಪಪನ್ನಂ ಚ ಮುಕ ಮಾರುತ ವೀಜತಮ್ ।**
**ಗವಾದ್ಯರವಘ್ರಾತಂ ಭುಕ್ತ್ವಾ ತ್ರ್ಯಹ ಮುಪವಸೇತ್ ॥**

*– ಅಗ್ನಿ –173–32*

- ***ಪರಾನ್ನದ ಬಗ್ಗೆ ಎಚ್ಚರವಿರಲಿ :***

ಏನೂ ಕಾರಣವಿಲ್ಲದೆ ಬೇರೊಬ್ಬರ ಮನೆಯಲ್ಲಿ ಭುಂಜಿಸಬಾರದು. ಬಲಾತ್ಕಾರವಾಗಿಯೋ, ಬೇಜಾರಾಗುತ್ತದೆ ಎಂದೋ, ಬೇಕಾಗಿಲ್ಲದಿದ್ದರೂ ಅನ್ನಾದಿಗಳನ್ನು ತಿಂದರೆ ಯಜಮಾನನ ಪಾಪ ಅವನ ಅನ್ನಾದಿಗಳಲ್ಲಿರುತ್ತದೆ. ಅವು ತಿಂದವನನ್ನು ಬಂದು ಸೇರುತ್ತದೆ.

- ***ಜಲಪಾನ ವಿಶೇಷ :***

ಪತಿಗೆ ಪತ್ನಿಯು ಭೋಜನ ಕಾಲದಲ್ಲಿ ಒಂದು ತಂಬಿಗೆ ಇನ್ನೊಂದು ಪಂಚಪತ್ರೆಯನ್ನಿಟ್ಟಿರಬೇಕು. ತಂಬಿಗೆಯಿಂದ ಪಂಚಪಾತ್ರೆಗೆ ಸ್ವಲ್ಪವೇ ನೀರನ್ನು ಹಾಕಿಕೊಂಡು ಎಡಗೈಯಲ್ಲಿ ಹಿಡಿದು ಬಲಗೈಯ ಮೊಣಗಂಟಿನ ಮೇಲಿಟ್ಟುಕೊಂಡು, ಬಾಯಿಂದ ಊಟದೆಲೆಗೆ ಬೀಳದಂತೆ ಕುಡಿಯಬೇಕು.

**ಜಲಪಾತ್ರಂ ತು ನಿಕ್ಷಿಪ್ಯ ಮಣಿಬಂಧೇ ಚ ದಕ್ಷಿಣೇ ।**
**ವಿಪ್ರೋ ಭೋಜನಕಾಲೇ ತು ಪಿಬೇದ್ ವಾಮೇನ ಪಾಣಿನಾ ॥**

ಕೈಯ ಬೊಗಸೆಯಿಂದಾಗಲೀ, ಎಡಗೈಯಿಂದಲೇ ನೇರವಾಗಿ ಕುಡಿಯುವು-ದಾಗಲೀ, ಬಾಯಿಂದಲೇ ನೇರವಾಗಿಯಾಗಲೀ ನಿಂತುಕೊಂಡಾಗಲೀ, ಕುಡಿದ ನೀರನ್ನೇ ಪುನಃ ಕುಡಿಯುವುದಾಗಲೀ ನಿಷಿದ್ಧವಾಗಿರುತ್ತದೆ. ಇದೆಲ್ಲ ಸುರಾಪಾನ ಸಮವೆ ಆಗಿರುತ್ತದೆ.

**ನ ವಾಮಹಸ್ತೇನೈಕೇನ ಪಿಬೇದ್ ವಕ್ತ್ರೇಣ ವಾ ಜಲಮ್ ।**
**ನ ಜಲಂ ಚೋತ್ಥಿತಂ ಪಿಬೇತ್ ನ ಚಾಪೋऽಂಜಲಿನಾ ಪಿಬೇತ್ ।**
**ಸುರಾಪಾನೇನ ತತ್ತುಲ್ಯಂ ಪೀತ್ವಾ ಚಾಂದ್ರಾಯಣಂ ಚರೇತ್ ॥**
*–ಬೃಹತ್ಪಾಂಶು 8/201*

- ***ಉಪಸಂಹಾರ :***

ಇಷ್ಟೆಲ್ಲ ನಿಯಮಗಳಿದ್ದು ಈ ರೀತಿಯಲ್ಲಿ ಅಭ್ಯಾಸ ಮಾಡಿಕೊಂಡು ಭೋಜನ ಮಾಡಿದರೆ ಅದೊಂದು ವೈಶ್ವಾನರ ಯಜ್ಞವಾಗುತ್ತದೆ. ಇದರಿಂದಾಗಿ ಅಗ್ನಿಹೋತ್ರ ಹೋಮಫಲವನ್ನು ಹೊಂದಬಹುದಾಗಿದೆ. ಇದೇನು ಕಷ್ಟಕರವಲ್ಲ. ಆಯುರಾರೋಗ್ಯವೂ ಲಭಿಸುತ್ತದೆ. ಇದೊಂದು ಶಿಸ್ತನ್ನು ಕಲಿಸುತ್ತದೆ. ಗೃಹಿಣಿಯು ಆಗಾಗ್ಗೆ ಪತಿಯು ನಿಂತುಕೊಂಡು ನೀರನ್ನೋ,

ಹಾಲನ್ನೋ ಕುಡಿಯುತ್ತಿರುವಾಗ ಕುಳಿತು ಕುಡಿಯುವಂತೆ ತಿಳಿಸಬೇಕು. ಗೃಹಿಣಿಯಿಂದಲೇ ಗೃಹವು ಬೆಳಗಬೇಕಷ್ಟೇ? ಮಕ್ಕಳಿಗೂ ಬಾಲ್ಯದಿಂದಲೂ ಇವುಗಳನ್ನು ಅಭ್ಯಾಸ ಮಾಡಿಸಬೇಕು. ಮುಂದೆ ಇದರ ಫಲವನ್ನು ನೋಡಬಹುದಾಗಿದೆ. *(ನ ದೇವತೋಷಣಂ ವೃಥಾ)* ಮನೆಗೆ ಬಂದ ಅತಿಥಿಗಳಿಗೆ ಪಾನೀಯವನ್ನು ನೀಡಿದಾಗಲೂ ಅವರು ನಿಂತಾಗಲಿ, ಎಡಗೈಯ್ಯಲ್ಲಾಗಲಿ ಕುಡಿಯಲಿರುವಾಗ ಅವರಿಗೆ ಸುರಾಪಾನಕ್ಕೆ ಸಮವೆಂದು ಹೇಳಿ ಕುಳಿತು ಬಲಗೈಯಿಂದ ಕುಡಿಯಲು ತಿಳಿಸಬೇಕು. ಇದರಿಂದ ಧರ್ಮವು ಅಭಿವೃದ್ಧಿಯಾಗುತ್ತದೆ. ಪುಣ್ಯವೂ ಲಭಿಸುತ್ತದೆ. ಅವರೇನು ಅಂದುಕೊಳ್ಳುವರೊ ಎಂದಾಗಲೀ ಸಂಕೋಚಾದಿಗಳನ್ನು ಧರ್ಮದ ವಿಷಯದಲ್ಲಿ ತೋರದೆ ನಿಃಸಂಕೋಚವಾಗಿ ಹೇಳಬೇಕು.

ಇದೆಲ್ಲ ಗೃಹಿಣಿಯಾದವಳ ಕರ್ತವ್ಯವು. ಮನೆಯಲ್ಲಿ ತಂದೆ–ತಾಯಿಗಳಿಬ್ಬರೂ ಧರ್ಮಕ್ಕೆ ಜೋತು ಬಿದ್ದರೆ ಮಕ್ಕಳು ಅದನ್ನು ಅನುಸರಿಸುತ್ತಾರೆ.

* * * * * *



# 17. ಪತಿವ್ರತೆಯರ ನಡೆ–ನುಡಿಗಳು

# ಪತಿವ್ರತೆಯರ ಕಥೆಗಳು



- *ಸ್ತ್ರೀಯರು ದಿನಚರಿ : ದ್ರೌಪದಿಯ ಪಾತಿವ್ರತ್ಯ :*

ದ್ರುಪದನ ಮಗಳಾಗಿ

ಪಾಂಡವರ ಪತ್ನೀಯಾಗಿ

ಕುಂತೀದೇವಿಯ ಸೊಸೆಯಾಗಿ

ಸುಭದ್ರೆಯ ಸವತಿಯಾಗಿ

ಸತ್ಯಭಾಮೆಗೆ ನಾದಿನಿಯಾಗಿ

ಉಪಪಾಂಡವರ ತಾಯಿಯಾಗಿ

ಪರೀಕ್ಷಿತನ ಅಜ್ಜಿಯಾಗಿ

ಶ್ರೀಕೃಷ್ಣ ಪರಮಾತ್ಮ ತಂಗಿಯಾಗಿ

ಅಷ್ಟಪಾತ್ರವಹಿಸಿ ಉಭಯ

ಕುಲ ಉದ್ಧರಿಸಲು ಅನುಗ್ರಹಿಸೆ

ಭಾರತೀದೇವಿ

ಹಾಲನ್ನೋ ಕುಡಿಯುತ್ತಿರುವಾಗ ಕುಳಿತು ಕುಡಿಯುವಂತೆ ತಿಳಿಸಬೇಕು. ಗೃಹಿಣಿಯಿಂದಲೇ ಗೃಹವು ಬೆಳಗಬೇಕಷ್ಟೇ? ಮಕ್ಕಳಿಗೂ ಬಾಲ್ಯದಿಂದಲೂ ಇವುಗಳನ್ನು ಅಭ್ಯಾಸ ಮಾಡಿಸಬೇಕು. ಮುಂದೆ ಇದರ ಫಲವನ್ನು ನೋಡಬಹುದಾಗಿದೆ. *(ನ ದೇವತೋಷಣಂ ವೃಥಾ)* ಮನೆಗೆ ಬಂದ ಅತಿಥಿಗಳಿಗೆ ಪಾನೀಯವನ್ನು ನೀಡಿದಾಗಲೂ ಅವರು ನಿಂತಾಗಲಿ, ಎಡಗೈಯ್ಯಲ್ಲಾಗಲಿ ಕುಡಿಯಲಿರುವಾಗ ಅವರಿಗೆ ಸುರಾಪಾನಕ್ಕೆ ಸಮವೆಂದು ಹೇಳಿ ಕುಳಿತು ಬಲಗೈಯಿಂದ ಕುಡಿಯಲು ತಿಳಿಸಬೇಕು. ಇದರಿಂದ ಧರ್ಮವು ಅಭಿವೃದ್ಧಿಯಾಗುತ್ತದೆ. ಪುಣ್ಯವೂ ಲಭಿಸುತ್ತದೆ. ಅವರೇನು ಅಂದುಕೊಳ್ಳುವರೊ ಎಂದಾಗಲೀ ಸಂಕೋಚಾದಿಗಳನ್ನು ಧರ್ಮದ ವಿಷಯದಲ್ಲಿ ತೋರದೆ ನಿಃಸಂಕೋಚವಾಗಿ ಹೇಳಬೇಕು.

ಇದೆಲ್ಲ ಗೃಹಿಣಿಯಾದವಳ ಕರ್ತವ್ಯವು. ಮನೆಯಲ್ಲಿ ತಂದೆ–ತಾಯಿಗಳಿಬ್ಬರೂ ಧರ್ಮಕ್ಕೆ ಜೋತು ಬಿದ್ದರೆ ಮಕ್ಕಳು ಅದನ್ನು ಅನುಸರಿಸುತ್ತಾರೆ.

* * * * * *



# 17. ಪತಿವ್ರತೆಯರ ನಡೆ–ನುಡಿಗಳು

# ಪತಿವ್ರತೆಯರ ಕಥೆಗಳು



- *ಸ್ತ್ರೀಯರು ದಿನಚರಿ : ದ್ರೌಪದಿಯ ಪಾತಿವ್ರತ್ಯ :*

ದ್ರುಪದನ ಮಗಳಾಗಿ

ಪಾಂಡವರ ಪತ್ನೀಯಾಗಿ

ಕುಂತೀದೇವಿಯ ಸೊಸೆಯಾಗಿ

ಸುಭದ್ರೆಯ ಸವತಿಯಾಗಿ

ಸತ್ಯಭಾಮೆಗೆ ನಾದಿನಿಯಾಗಿ

ಉಪಪಾಂಡವರ ತಾಯಿಯಾಗಿ

ಪರೀಕ್ಷಿತನ ಅಜ್ಜಿಯಾಗಿ

ಶ್ರೀಕೃಷ್ಣ ಪರಮಾತ್ಮ ತಂಗಿಯಾಗಿ

ಅಷ್ಟಪಾತ್ರವಹಿಸಿ ಉಭಯ

ಕುಲ ಉದ್ಧರಿಸಲು ಅನುಗ್ರಹಿಸೆ

ಭಾರತೀದೇವಿ

- ***ಪತಿವ್ರತೆಯರ ಕಥೆಗಳು :***

ಇರಬೇಕು ಇರಬೇಕು ಇರಬೇಕು ಹೀಗೀಗೆ
ಹರಿಕರುಣ ಪಡೆದಿರುವ ಪತಿವ್ರತೆಯರ್‍ಹಾಗೆ ।
ಪತಿಯೊಡನೆ ಇರಬೇಕು ವಸುಧೆಸುತೆಯಂತೆ ।
ಪತಿಯ ನೊಲಿಸಲಿಬೇಕು ಪಾಂಚಾಲಿಯಂತೆ ।
ಪತಿಯ ಸೇವಿಸಬೇಕು ಅನಸೂಯೆಯಂತೆ ।
ಪತಿಯ ಅರಸಲು ಬೇಕು ದಮಯಂತಿಯಂತೆ ।
ಪತಿಯ ವ್ರತವಿರಬೇಕು ಅರುಂಧತಿಯಂತೆ ।
ಪತಿಯ ಭಯ ಕಳೆಬೇಕು ಸಾವಿತ್ರಿಯಂತೆ ।
ಪತಿಗೆ ಹಿತಗೈಯಬೇಕು ಚ್ಯವನ ಸತಿಯಂತೆ ।
ಪತಿಯಲ್ಲಿ ಇರುವ ಹರಿ ರಕ್ಷಿಸುವನಂತೇ ।
ಪತಿವ್ರತೆಯರಾದಂತ ಸುದತಿಯರ ಕಥೆಯ ।
ಹಿತದಿಂದ ಕೇಳಿ ಪಡೆಯಲು ಬೇಕು ಧೃತಿಯ ।
ಮತಿವಂತರಾಗಿ ತಿದ್ದಲುಬೇಕು ಮತಿಯ ।
ಹಿತದಿ ನಾಗೇಶ ಶಯನನು ಕೊಡುವ ಗತಿಯ ॥

. . . .

- ***ಪತಿವ್ರತೆಯಲ್ಲಿ ಲಕ್ಷ್ಮೀ ಸನ್ನಿಧಾನ :***

ವಸಾಮಿ ನಾರೀಷು ಪತಿವ್ರತಾಸು
ಕಲ್ಯಾಣಶೀಲಾಸು ವಿಭೂಷಿತಾಸು
ಕ್ಷಾಂತಾಸು ದಾಂತಾಸು ತಥಾಬಲಾಸು
ಸತ್ಯಸ್ವಭಾವಾರ್ಜವ ಸಂಯುತಾಸು
ವಸಾಮಿ ದೇವದ್ವಿಜ ಪೂಜಿತಾಸು ॥

ಪತಿವ್ರತೆಯರು ಒಳ್ಳೆಯ ಸ್ವಭಾವದವರು, ಅಲಂಕೃತ ಸ್ತ್ರಿಯರು, ಕ್ಷಮಾಶೀಲರು, ಇಂದ್ರಿಯ ನಿಗ್ರಹವುಳ್ಳವರು, ಸತ್ಯ ಪ್ರಾಮಾಣಿಕರಾದ, ದೇವ–ದ್ವಿಜರನ್ನು ಗೌರವಿಸುವ ಸ್ತ್ರೀಯರಲ್ಲಿ ಲಕ್ಷ್ಮೀದೇವಿಯ ನಿತ್ಯ ಸನ್ನಿಧಾನ.

- ***ಲಕ್ಷ್ಮಿಯು ತಾನು ಎಂತಹ ಸ್ತ್ರೀಯರನ್ನು ತ್ಯಜಿಸುವಳೆಂದರೆ :***

"ಪಾತ್ರೆಗಳೇ ಮೊದಲಾದ ಮನೆಯ ವಸ್ತುಗಳನ್ನು ಒಪ್ಪವಾಗಿ ಇಡದ ಸ್ತ್ರೀಯರನ್ನು ತ್ಯಜಿಸುವಳು. ಯಾವಾಗಲೂ ಜಗಳ ಮಾಡುವವಳನ್ನು, ಯಾವತ್ತೂ ಪೂರ್ವಯೋಜನೆ ಇಲ್ಲದೆ ಕಾರ್ಯ ಮಾಡುವವಳು, ಪತಿಗೆ ಯಾವಾಗಲೂ ವಿರುದ್ಧವಾದುದನ್ನೇ ಹೇಳುವ, ನಾಚಿಕೆರಹಿತಳಾದವಳು, ಮತ್ತೊಬ್ಬರ ಮನೆಯ ವ್ಯವಹಾರದಲ್ಲಿ ತಲೆ ಹಾಕುವಳು, ಕಲಹಪ್ರಿಯಳು, ಹೆಚ್ಚು ನಿದ್ರೆ ಮಾಡುವವಳು ಇವಳನ್ನು ಬಿಡುವೆನು" ಎಂದಿರುವಳು.

**ಪ್ರಕೀರ್ಣಭಾಂಡಂ ಅನವೇಕ್ಷ್ಯ ಕಾರಿಣಿಂ**
**ಸದಾ ಚ ಭರ್ತುಃ ಪ್ರತಿಕೂಲವಾದಿನೀಂ ।**

**ಪರಸ್ಯ ವೇಶ್ಯಾಭಿರತಾಮಲಜ್ಜಾಂ**
**ಏವಂ ವಿಧಾಂ ತಾಂ ಪರಿವರ್ಜಯಾಮಿ ॥**

ಯಾವ ಮನೆಯಲ್ಲಿ ಹೋಮ-ಹವನಗಳು, ಬ್ರಾಹ್ಮಣರಾಧನೆ ನಡೆಯುವುದೋ ಮತ್ತು ಹಸುಗಳಿಗೆ, ಬ್ರಾಹ್ಮಣರಿಗೆ, ದೇವತೆಗಳಿಗೆ ಪೂಜಾದಿ ನಡೆಯುವುದೋ ಪುಷ್ಪಗಳ ಮೂಲಕ ಅಲಂಕಾರ ಪೂಜೆ ನಡೆಯುತ್ತದೋ, ಅಂತಹ ಮನೆಯಲ್ಲಿ ವಾಸಿಸುವೆ.

**"ಯಸ್ಮಿನ್ ಜನೋ ಹವ್ಯಭುಜಂ ಜುಹೋತಿ**
**ಗೋಬ್ರಾಹ್ಮಣಂ ಚಾರ್ಚತಿ ದೇವತಾಶ್ಚ ।**

**ಕಾಲೇ ಚ ಪುಷ್ಪೈಃ ಬಲಯಃ ಕ್ರಿಯಂತೇ**
**ತಸ್ಮಿನ್ ಗೃಹೇ ನಿತ್ಯಮುಪೈಮಿ ವಾಸಮ್ ॥"**

ಹೀಗೆ ಷಾಡ್ಗುಣ್ಯುಳ್ಳವಳು ಕುಲ ಧರ್ಮಪತ್ನಿಯೆಂದು ತಿಳಿಸಲಾಗಿದೆ.

ಪ್ರತಿದಿನವೂ ಪತಿಯ ಮೊದಲು ಎದ್ದು ಪತಿಗೆ ನಮಸ್ಕರಿಸಬೇಕು. ದೇವರ ಸ್ತೋತ್ರಗಳನ್ನು ಪಠಿಸುವುದು. ಉದಯರಾಗ, ಗಜೇಂದ್ರಮೋಕ್ಷಗಳನ್ನು (ದಾಸರು ರಚಿಸಿದ್ದು) ಪಠಿಸುವುದು.

ಅತ್ತೆ-ಮಾವಂದಿರಿಗೆ ನಮಸ್ಕರಿಸಿ, ಕೈ-ಕಾಲು, ಮುಖ ತೊಳೆದುಕೊಂಡು, ದೇವರನಂದಾದೀಪವನ್ನು ಹಚ್ಚಿ ಅಥವಾ ಕಪ್ಪನ್ನು ತೆಗೆದು ದೀಪವನ್ನು

ತುಲಸಿಯ ಕಾಷ್ಠದಿಂದ ಸರಿಪಡಿಸುವುದು. ನಂತರ ತುಲಸಿಗೆ ನೀರೆರೆದು ತುಲಸಿಯ ದರ್ಶನ ಪಡೆಯುವುದು. ನಂತರ ಗೋವನ್ನು ದರ್ಶನ ಮಾಡಿ ಅದರ ಮೇಲಿರುವ ಕ್ರಿಮಿಕೀಟಗಳನ್ನು ಓಡಿಸುವಂತೆ ಸವರುವುದು.

ನಂತರ ದೇವರ ಮನೆ, ಅಡಿಗೆ ಮನೆ, ತುಳಸಿಕಟ್ಟೆ ಮನೆಯ ಮುಂಭಾಗಗಳನ್ನು ಸ್ವಚ್ಛವಾಗಿ ಗುಡಿಸಿ ಗೋಮಯವನ್ನು ಸೇರಿಸಿ ಮನೆಯ ಮುಂದೆ ನೀರನ್ನು ಹಾಕಬೇಕು. ಹೊಸ್ತಿಲು, ತುಳಸಿಕಟ್ಟೆಯ ಸುತ್ತಲು ನೀರನ್ನು ಹಾಕಿ ಸ್ವಚ್ಛಗೊಳಿಸಿ ರಂಗೋಲೆಯನ್ನು ಹಾಕಬೇಕು. ಹೀಗೆ ಸ್ವಚ್ಛವಾಗಿರುವ ಮನೆಗಳಲ್ಲಿ ಗಂಗಾದಿ ನದ್ಯಾಭಿಮಾನಿಗಳು, ಲಕ್ಷ್ಮೀ, ಸರಸ್ವತೀ, ಪಾರ್ವತಿಯರು ಬಂದು ವಾಸಿಸುವರು. ಇದರಿಂದ ಮನೆಯಲ್ಲಿ ಶಾಂತಿ ಸುಭಿಕ್ಷೆ, ಸಂತಸ ತುಂಬಿರುತ್ತದೆ.

ಅನಂತರ ಸ್ನಾನಕ್ಕಾಗಿ ಸಿದ್ಧತೆ ಮಾಡಿಕೊಂಡು ಸ್ನಾನದ ವಸ್ತ್ರವನ್ನು ಧರಿಸಿಯೇ ಸ್ನಾನ ಮಾಡಬೇಕು.

ಸಂಕಲ್ಪ ಮಾಡಿ, ಸ್ನಾನ ಮಾಡಿ, ಅರಿಷಿಣ ಹಚ್ಚಿ ಸ್ನಾನ ಮಾಡಿ ಹಣೆಗೆ ತಿಲಕವಿಟ್ಟು, ಕುಂಕುಮಧರಿಸಿ, ಗುರುಮಂತ್ರ, ತುಲಸೀಪೂಜೆ, ಗೌರೀಪೂಜೆಯನ್ನು ಮಾಡಬೇಕು. ಈ ಮಧ್ಯದಲ್ಲಿ ಸಣ್ಣ ಸಣ್ಣ ಸ್ತೋತ್ರಗಳನ್ನು ಪಠಿಸುತ್ತಿರಬೇಕು. ಇದು ತವರು ಮನೆಯಲ್ಲಿ ನಡೆದ ತರಬೇತಿಯ ಫಲಸ್ತುತಿ ಎಂಬುದನ್ನು ಮರೆಯಬಾರದು. ಮನೆಯಲ್ಲಿರುವ ಸಣ್ಣ ಸಣ್ಣ ಮಕ್ಕಳಿಗೂ ಹೇಳಿಕೊಡುವುದು.

- ನಂತರ ಅಡಿಗೆಯನ್ನು ಮಾಡಲು ಅನುಮತಿಯನ್ನು ಬೇಡಿ, ಯಾವ ಪಾಕವನ್ನು ತಯಾರಿಸಬೇಕೆಂಬ ವಿಚಾರವನ್ನು ಗಂಡನನ್ನೇ ಕೇಳಿ ಅವನಿಗೆ ಇಷ್ಟವಾದ ಆಹಾರಗಳನ್ನು ತಯಾರಿಸಬೇಕು. ಅತ್ತೆ–ಮಾವಂದಿರು ಇವರ ಇಷ್ಟಾನಿಷ್ಟಗಳನ್ನು ಗಮನದಲ್ಲಿರಿಸಿಕೊಂಡಿರಬೇಕು. ಪತಿಯ ದೇಹಕ್ಕಾಗದ ಅಡುಗೆ ತನಗೆ ಇಷ್ಟ ಎಂದು ಮಾಡಬಾರದು.
- ಗಂಡನಿಗೆ ಮಾತ್ರವಲ್ಲದೆ ಅತ್ತೆ–ಮಾವಂದಿರಿಗೆ ಗೌರವ ನೀಡಬೇಕು. ತಂದೆ–ತಾಯಿಗಳಂತೆ ಕಾಣಬೇಕು ಹಾಗೆ ಸೇವೆಯನ್ನು ಶ್ರದ್ಧೆಯಿಂದ ಮಾಡಬೇಕು.
- ಮನೆಯಲ್ಲಿ ಅಹಾರ ತಯಾರಿಸಿ ಎಲ್ಲರಿಗೂ ನೀಡಿ ಕಡೆಯಲ್ಲಿ ತಾನು ಭುಂಜಿಸಬೇಕು. ಪಂಕ್ತಿಭೇದವನ್ನು ಎಂದೂ ಮಾಡಬಾರದು. ಪತಿಗೆ ಎದುರು ಮಾತನಾಡಬಾರದು. ಇದರಿಂದ ಮುಂದಿನ ಜನ್ಮಗಳಲ್ಲಿ ಮೂಕಳಾಗಿ

ಹುಟ್ಟುವಳು. ಬೇರೆ ಎಲೆಯಲ್ಲಾಗಲಿ, ತಟ್ಟೆಯಲ್ಲಾಗಲಿ ಸೇವಿಸಿದೆ, ಪತಿಯ ಎಲೆಯಲ್ಲಿಯೇ ಪತಿಯ ಮಹಾಪ್ರಸಾದವೆಂದೇ ಭುಂಜಿಸಬೇಕು.

- ಪಾತ್ರೆಯಲ್ಲಿಯೇ ತಿನ್ನಬಾರದು, ಇದರಿಂದ ತನ್ನ ಮರಿಯನ್ನೇ ತಿನ್ನುವ ಬೆಕ್ಕಾಗಿ ಹುಟ್ಟಬೇಕಾಗುತ್ತದೆ.
- ನೆರೆಹೊರೆಯವರಲ್ಲಿ ಪ್ರೀತಿ-ವಿಶ್ವಾಸಗಳಿಸಬೇಕು. ನೆರೆಹೊರೆಯವರಲ್ಲಿ ಜಗಳ ಆಡಬಾರದು. ಅವರನ್ನೂ ಭಗವಂತನ ಭಜನೆ ಮೊದಲಾದವುಗಳಲ್ಲಿ ಪಾಲ್ಗೊಳ್ಳುವಂತೆ ಮಾಡುವುದು.
- ಹಬ್ಬ ಹರಿದಿನಗಳಲ್ಲಿ ಸಂಪ್ರದಾಯದ ಹಾಡುಗಳನ್ನು ಹೇಳುತ್ತಾ, ಹೇಳಿಕೊಡುತ್ತಾ, ಇತರರಿಂದಲೂ ತಾನೂ ಕಲಿಯಬೇಕು. ಕುಲಧರ್ಮವನ್ನು ಬಿಡದೆ ಆಚರಿಸಬೇಕು. ಮನೆಯ ಹಿರಿಯರು ಹೇಳಿದ ಹಾಡುಗಳು ಪದ್ಧತಿಗಳನ್ನು ಅತ್ತೆ ಮಾವಂದಿರಿಂದ ತಿಳಿದು ಆದಷ್ಟು ಅವುಗಳನ್ನು ಉಳಿಸಿಕೊಂಡು ಹೋಗಬೇಕು.
- ಪ್ರತಿ ಶುಕ್ರವಾರ ಲಕ್ಷ್ಮೀಪೂಜೆ, ಶುಕ್ರವಾರದ ಹಾಡುಗಳು ಹೇಳಿಕೊಂಡು, ಪೂಜಿಸುತ್ತಾ ದೊಡ್ಡ ಮುತ್ತೈದೆಯರಿಗೆ ಬಾಗಿಣಾದಿಗಳನ್ನು ಕೊಡತಕ್ಕದ್ದು.
- ವೈಶಾಖ, ಕಾರ್ತೀಕ, ಮಾಘಗಳಲ್ಲಿ ಬೆಳಿಗ್ಗೆ ಬೇಗ ಎದ್ದು ಸಂಕಲ್ಪ ಸ್ನಾನವನ್ನು ಒಂದು ತಿಂಗಳ ಪರ್ಯಂತ ಮಾಡಬೇಕು. ಸಮೀಪದಲ್ಲಿರುವ ನದಿ, ಸರೋವರಾದಿಗಳಿಗೆ ಪತಿಯ ಜೊತೆಗೆ ಹೋಗಿ ಸ್ನಾನ ಮಾಡಬೇಕು. ಪತಿಯು ಮನೆಗೆ ಹಿಂತಿರುಗಿದಾಗ ಅವನಿಗೆ ಆಯಾಸ ಪರಿಹಾರವಾಗುವಂತೆ ನಲ್ಲೆಯ ಮಾತುಗಳಾಡಿ ಕೈಕಾಲು ತೊಳೆಯಲು ನೀರು ಕೊಟ್ಟು, ಅಸನಾದಿಗಳಿಂದ ಉಪಚರಿಸಬೇಕು. ಬಂದ ಕೂಡಲೇ ಜಗಳವಾಡಿ ನೋಯಿಸಬಾರದು.
- ನೂರಾರು ಸೇವಕರಿದ್ದರೂ ಪತಿ ಸೇವೆಯನ್ನು ತಾನೇ ಮಾಡಬೇಕು.
- ಗಂಡನ ಮಿತ್ರರಾಗಲಿ, ಅತಿಥಿಗಳಾಗಲೀ ಬಂದಾಗ ಬೇಜಾರು ಮಾಡಿಕೊಳ್ಳದೆ ತೃಪ್ತಿಯಾಗುವಂತೆ ಕೆಲಸ ಮಾಡಿ ಪತ್ಯಂತರ್ಗತ ಭಗವಂತನ ಸೇವೆ ಎಂದು ಮಾಡಬೇಕು.
- ಮನೆಯ ಹಾಗೂ ಪತಿಯ ವಸ್ತುಗಳನ್ನು ಜಾಗ್ರತೆವಹಿಸಿ ರಕ್ಷಿಸಬೇಕು. ಕಾಲಕಾಲಕ್ಕೆ ಅಯಾಯ ವಸ್ತುಗಳನ್ನು ಕೊಡುತ್ತಿರಬೇಕು.

- ಯಜ್ಞಯಾಗಾದಿಗಳಲ್ಲಿ ಪತಿಗೆ ಅನುಕೂಲಗಳಾಗುವಂತೆ ವರ್ತಿಸಬೇಕು. ಸಹಧರ್ಮಿಣಿ ಎನಿಸಬೇಕು.
- ಪತಿಯ ರುಚಿಯನ್ನನ್ನುನುಸರಿಸಿ ವಸ್ತ್ರ ಆಭರಣ ಪುಷ್ಪಾದಿಗಳನ್ನು ಧರಿಸಬೇಕು. ತನ್ನ ಅಲಂಕಾರವೆಲ್ಲವೂ ಪತ್ಯಂತರ್ಗತ ಪರಮಾತ್ಮನ ಸಂತೋಷಕ್ಕಾಗಿಯೇ ಎಂದು ತಿಳಿಯಬೇಕು. ಬೇರೆಯವರಿಗಾಗಿ ಎಂದೂ ಅಲಂಕರಿಸಿ-ಕೊಳ್ಳಬಾರದು.
- ಗಂಡನು ಊರಿನಲ್ಲಿ ಇಲ್ಲದಿರುವಾಗ ಹೆಚ್ಚು ಅಲಂಕರಿಸಿಕೊಳ್ಳದೆ, ಬೇರೆಯವರ ಮನೆಗೆ ಹೋಗದೆ ಮನೆಯಲ್ಲಿಯೇ ದೇವತಾ ಕಾರ್ಯಗಳಲ್ಲಿ ಮುಳುಗಿರಬೇಕು.
- ಪತಿಯು ಧನಧಾನ್ಯಾದಿಗಳನ್ನು ಸಂಗ್ರಹಿಸುವಾಗಲೂ ಅತಿಜಾಗ್ರತೆವಹಿಸಿ ಪತಿಗೆ ಸಹಾಯ ಮಾಡಬೇಕು.
- ಪತಿಯನ್ನು ಸಂತೋಷಪಡಿಸುವ ವಿಷಯದಲ್ಲಿ ಯಾವಾಗಲೂ ನಿರ್ಲಕ್ಷ್ಯಭಾವನೆ ತಾಳಬಾರದು.
- ಕ್ರೂರನುಡಿಗಳನ್ನು ಪತಿಯ ಬಗ್ಗೆ ಎಂದೂ ಆಡಬಾರದು. ಪತಿಯ ಮುಂದೆ ಮಾತ್ರವಲ್ಲ ಪತಿಯ ಹಿಂದಾಗಲೀ, ಇತರ ಹೆಂಗಸರೊಡನೆಯಾಗಲಿ ಅವಹೇಳನ ಮಾಡುವ ಮಾತುಗಳನ್ನು ಆಡಬಾರದು.
- ಪತಿಯು ಕೋಪಗೊಂಡರೂ ತಾನು ಸಮಾಧಾನಚಿತ್ತಳಾಗಿ ಘಟನೆಯನ್ನು ವಿವರಿಸಿ ಅವನ ಕೋಪ ಶಾಂತಪಡಿಸಬೇಕು.
- ಹಣವಿಲ್ಲೆಂದು ಟೀಕಿಸುವುದಾಗಲಿ, ನಿಮ್ಮನ್ನು ಮದುವೆಯಾಗಿ ನನಗೆ ಈ ದುರ್ಗತಿಯೆಂದಾಗಲೀ ಚುಚ್ಚಬಾರದು.
- ಪತಿಗೆ ಬೇಜಾರಾಗುತ್ತದೆ ಎಂದು ಹಿತವಾದ ಸಲಹೆ ಸೂಚನೆಗಳನ್ನು ಸೂಚಿಸಲು ಮರೆಯುಬಾರದು.
- ಮನೆಯ ಗುಟ್ಟನ್ನು ಎಂದೂ ರಟ್ಟು ಮಾಡಬಾರದು. ಅತ್ತೆ ಮಾವಂದಿರು ಮೊದಲಾದ ಬಂಧುಗಳ ಮೇಲೆ ಚಾಡಿ ಹೇಳುವುದು ಇಲ್ಲಸಲ್ಲದ ಆರೋಪ ಮಾಡುವುದು, ಹೊರಗಡೆ ನಿಂತು ಯಾವಾಗಲೂ ನೋಡುತ್ತಿರುವುದು, ಯಾವಾಗಲೂ ತಿನ್ನುತ್ತಿರುವುದು, ಕೇಕೇ ಹಾಕಿ ನಗುವುದು, ಹಗಲಲ್ಲಿಯೂ ನಿದ್ರಿಸುವುದು ಉಚಿತವಲ್ಲ.

- ಜೀವನದಲ್ಲಿ ತೃಪ್ತಿಯಿರಬೇಕು. ಪತಿಯು ತಂದು ಕೊಟ್ಟ ವಸ್ತುವಿನಿಂದಲೇ ಸಂತೋಷಿಸಬೇಕು ಹಾಗೂ ಆ ಧನಾದಿಗಳಿಂದಲೇ ಗೃಹಕೃತ್ಯವನ್ನು ನಡೆಸಬೇಕು. ಪರಪುರುಷನು ತಂದುಕೊಟ್ಟದನ್ನು ಎಷ್ಟೇ ಅಮೂಲ್ಯವಾಗಿದ್ದರೂ ಸ್ವೀಕರಿಸಬಾರದು.
- ಮಕ್ಕಳನ್ನು ಬೆಳೆಸಿ, ಒಳ್ಳೆಯ ಸಂಸ್ಕಾರಬೀಜವನ್ನು ಬಿತ್ತಬೇಕು. ಪತಿಯ ಪ್ರೀತಿ ಒಂದನ್ನು ಬಿಟ್ಟು ಭೋಗೈಶ್ವರ್ಯಾದಿಗಳಲ್ಲಿ ಆಸೆ ಇರುವುದಿಲ್ಲವೋ ಅವಳೇ "ಪತಿವ್ರತಾಶಿರೋಮಣಿ" ಎಂದು ಕರೆಯಲ್ಪಡುವಳು.

ಹೀಗೆ ತನ್ನ ಪತಿಯಾದ ಪರಮೇಶ್ವರನ ಮುಂದೆ ತಮಗೆ ಪ್ರೀತಿಯಾಗಲೆಂಬ ಉದ್ದೇಶದಿಂದ ಹಾಗೂ ಚಪಲದಿಂದ ಉತ್ತಮ ಪತಿವ್ರತಾ ಧರ್ಮಗಳನ್ನು ತಿಳಿಸಿದ್ದೇನೆ. ಈ ಚಪಲತೆಗಾಗಿ ತಾವು ಕ್ಷಮಿಸಬೇಕು ಎಂದು ವಿನಂತಿಸಿಕೊಂಡಳು.

ರುದ್ರದೇವನಾದರೂ - ಯಾವಾತನು ಪರಮಪವಿತ್ರವಾದ ನಮ್ಮೀರ್ವರ ಸಂವಾದವನ್ನು ಓದಿ, ಇತರರಿಗೆ ತಿಳಿಸುವನೋ ಆತನು ಸಕಲ ಪಾಪಮುಕ್ತನಾಗಿ ಸ್ವರ್ಗ ಸೇರುವನು ಎಂದು ಹೇಳಿದನು. ಈ ಕಥೆಯಂತೆಯೇ ಇರುವ ಸಂವಾದವು ಬೃಹಸ್ಪತಿ ಅಗಸ್ತ್ಯ ಸಂವಾದ ರೂಪದಲ್ಲಿ ಸ್ಕಾಂದ ಪುರಾಣದಲ್ಲಿದೆ.

ಇಷ್ಟು ವಿಚಾರವನ್ನು ಸ್ತ್ರೀಯರಿಗಾಗಿ ಪಾರ್ವತಿಯು ತಿಳಿಸಿದ್ದರೂ ಈಗಿನ ಕಾಲದಲ್ಲಿ ಇಷ್ಟನ್ನು ಮಾಡಲು ಸಾಧ್ಯವಾಗುತ್ತದೆಯೇ? ಎಂಬ ಪ್ರಶ್ನೆ ಎಲ್ಲರನ್ನೂ ಕಾಡುತ್ತಿರುತ್ತದೆ. ಆದರೆ ಸರ್ವವನ್ನು ಬಲಿಕೊಡುವ ಬದಲು ಸ್ವಲ್ಪವನ್ನಾದರೂ ಉಳಿಸಿಕೊಂಡರೇ ಮಹಾಫಲವಿದೆ. ಸ್ತ್ರೀಯರಲ್ಲಿ ಕಾಣಬರಬೇಕಾದ್ದು ಆದರ್ಶರೂಪವಾದ ದೈವಭಕ್ತಿ, ಕೋಮಲತೆ, ಲಜ್ಜಾಶೀಲತೆ, ವಿನಯ, ಪಾತಿವ್ರತೆ, ತಂದೆತಾಯಿ, ಗುರುಗಳಲ್ಲಿ ಭಕ್ತಿ, ಅತ್ತೆಮಾವಂದಿರ ಸೇವೆ, ಧರ್ಮರಕ್ಷಣೆ, ದೃಢಪ್ರತಿಜ್ಞೆ, ಬುದ್ಧಿಮತ್ತತೆ, ಕರ್ಮಕ್ಷಮತೆ, ಕರ್ತವ್ಯ ಪರಾಯಣತೆ, ಇವು ಶ್ರೇಷ್ಠವಾದವುಗಳು.

- ಗಂಡನು ಊಟ ಮಾಡಿದರೆ ತಾನೂ ಊಟ ಮಾಡಬೇಕು. ಇಲ್ಲವಾದರೆ ತಾನೂ ಸುಮ್ಮನಿರಬೇಕು.
- ಅವನು ಮಲಗಿದ ಮೇಲೆ ತಾನು ಮಲಗಬೇಕು ತಾನು ಅಲಂಕಾರ ಮಾಡಿಕೊಳ್ಳದೆ ಗಂಡನಿಗೆ ಕಾಣಿಸಿಕೊಳ್ಳಬಾರದು.

- ಗಂಡನು ಬೇರೆ ಕೆಲಸಕ್ಕಾಗಿ ಊರನ್ನು ಬಿಟ್ಟು ಹೋದರೆ ತಾನು ಅಲಂಕಾರ ಮಾಡಿಕೊಳ್ಳಬಾರದು.
- ಗಂಡನ ಆಯಸ್ಸು ಕ್ಷೀಣಿಸುತ್ತದೆಯಾಗಿ ಆತನ ಹೆಸರನ್ನು ಹೇಳುವಂತಿಲ್ಲ. ಗಂಡನ ಹೆಸರಿನವರು ಬೇರೆ ಯಾರೇ ಇದ್ದರೂ ಅವರನ್ನೂ ಕೂಡ ಆ ಹೆಸರಿನಿಂದ ಕೂಗುವಂತಿಲ್ಲ.
- ಗಂಡ ಕೋಪಿಸಿಕೊಂಡರೂ ತಾನು ಕೋಪಿಸಿಕೊಳ್ಳಬಾರದು. ಆತನು ಹೊಡೆದರೂ ಅವನೊಂದಿಗೆ ಸಂತೋಷವಾಗಿರುತ್ತಾಳೆ.
- ಈ ಕೆಲಸವನ್ನು ಮಾಡೆಂದರೆ ಸ್ವಾಮೀ ! ಆ ಕೆಲಸವು ಆಯಿತೆಂದು ತಿಳಿಯಿರಿ ಎಂದು ಹೇಳಿ ತೀವ್ರ ಆ ಕೆಲಸ ಮಾಡುವಳು.
- ಕರೆದರೆ ತಾನು ಮನೆಯ ಕೆಲಸವನ್ನು ಮಾಡುತ್ತಿದ್ದರೂ ಬಿಟ್ಟು ಬರುವಳು.
- ಮನೆಯ ಬಾಗಿಲಲ್ಲಿ ಬಹಳ ಹೊತ್ತು ನಿಲ್ಲುವುದಿಲ್ಲ.
- ಗಂಡನು ಮತ್ತೊಬ್ಬರಿಗೆಂದೂ ಕೊಡಿಸಿದ್ದ ವಸ್ತುವನ್ನು ತಾನು ಯಾವಾಗಲೂ ಇತರರಿಗೆ ಕೊಡುವುದಿಲ್ಲ.
- ಪೂಜೆಯ ಸಾಮಗ್ರಿಗಳನ್ನು ಹೇಳಿಸಿಕೊಳ್ಳದೆ ಅಣಿ ಮಾಡುವಳು. ಯಾವ ಕಾಲದಲ್ಲಿ ಏನುಬೇಕೋ ಅದನ್ನು ಬೇಸರಿಸಿಕೊಳ್ಳದೆ ಸಂತೋಷದಿಂದ ಕೈಗೆ ಕೊಡುವಳು.
- ತನಗೆ ಬೇಕಾದ ಹಣ್ಣು ಮುಂತಾದುವನ್ನು ಗಂಡನು ತಿಂದು ಉಳಿದುದನ್ನೇ ತಿನ್ನುವಳು. ತಾನು ತಿನ್ನತಕ್ಕದ್ದನ್ನು ದೇವರು, ದೊಡ್ಡವರು, ಅತಿಥಿಗಳು, ಪರಿಚಾರಕರು, ಗೋವು, ಭಿಕ್ಷಕರು ಇವರಿಗೆ ಭಾಗ ಕೊಟ್ಟು ತಾನು ತಿನ್ನುವಳು.
- ಖರ್ಚಿನ ಸಮಯದಲ್ಲಿ ಖರ್ಚಿನ ವಿಷಯವನ್ನು ಗಮನಿಸದೆ ಖರ್ಚು ಮಾಡುವಳು.
- ಗಂಡನ ಅನುಜ್ಞೆಯಿಲ್ಲದೆ ಉಪವಾಸ ವ್ರತಗಳನ್ನು ಮಾಡುವುದಿಲ್ಲ. ಸಭೆ, ಉತ್ಸವ ನೋಟಗಳನ್ನು ದೂರೀಕರಿಸುವಳು. ತೀರ್ಥಯಾತ್ರೆ, ವಿವಾಹ ನೋಡತಕ್ಕ ಸ್ಥಳಗಳಿಗೆ ಹೋಗುವುದಿಲ್ಲ.
- ಗಂಡ ಮಲಗಿರುವಾಗ ಸಂತೋಷದಿಂದ ಕುಳಿತಿರುವಳು.

- ರಜಸ್ವಲೆಯಾದಾಗ ಮೂರು ದಿನಗಳಲ್ಲೂ ಗಂಡನಿಗೆ ಮುಖ ತೋರಿಸುವುದಿಲ್ಲ ಹಾಗೂ ತನ್ನ ಧ್ವನಿಯನ್ನೂ ಕೇಳಗೊಡುವುದಿಲ್ಲ. ಸ್ನಾನ ಮಾಡಿದ ಒಡನೆಯೇ ಇನ್ನೊಬ್ಬರನ್ನೂ ನೋಡದೆ ಗಂಡನ ಮುಖವನ್ನು ನೋಡವಳು. ಗಂಡನು ಬಳಿಯಿಲ್ಲದಿದ್ದರೆ ಸೂರ್ಯನನ್ನು ಪತಿಭಾವನೆಯಿಂದ ನೋಡುವಳು. ಗಂಡನಿಗೆ ಶ್ರೇಯಸ್ಸುಂಟಾಗಲೆಂದು ಅರಿಷಿಣ, ಕುಂಕುಮ, ಚಂದ್ರ, ಕಾಡಿಗೆ, ತಾಳಿ, ತಾಂಬೂಲವೇ ಮುಂತಾದುವುಗಳನ್ನೂ, ತಲೆಬಾಚಿಕೊಳ್ಳುವುದು ಬಳೆ ಬಿಚ್ಚೋಲೆ ಇವುಗಳನ್ನೂ ಯಾವಾಗಲೂ ಧರಿಸುವಳು.
- ಪತಿವ್ರತೆಯು ಅಗಸಗಿತ್ತಿಯಲ್ಲೂ, ಒಳ್ಳೆ ಕೆಲಸಗಳಲ್ಲಿ ಸಂದೇಹವನ್ನುಂಟು ಮಾಡುವಳಲ್ಲಿಯೂ, ಸನ್ಯಾಸಿಯಲ್ಲೂ, ದಡ್ಡಳಲ್ಲೂ, ಸ್ನೇಹವನ್ನು ಮಾಡುವುದಿಲ್ಲ. ಗಂಡನನ್ನು ದ್ವೇಷಿಸುವವರನ್ನೂ ಈಕೆಯು ಮಾತಾಡಿಸುವುದಿಲ್ಲ.
- ಹೆಂಗಸು ಒಬ್ಬಂಟಿಗಳಾಗಿರಕೂಡದು, ಬೆತ್ತಲೆ ಸ್ನಾನ ಮಾಡಬಾರದು, ಒರಳುಕಲ್ಲಿನ ಮೇಲೂ ಒನಕೆಯ ಮೇಲೂ, ಕಸಪರಿಕೆಯ ಮೇಲೂ, ರಾಗಿಕಲ್ಲು(ಬೀಸುವಕಲ್ಲು)ನ ಮೇಲೂ, ಹೊಸಲಿನ ಮೇಲೂ ಕುಳಿತುಕೊಳ್ಳಬಾರದು. ತನ್ನ ಜಾಣತನವನ್ನು ಪತಿಯ ಸಂಗಮದಲ್ಲಿ ವಿನಹ ಬೇರೆ ಎಲ್ಲೂ ತೋರಿಸಕೂಡದು. ತನ್ನ ಗಂಡನಿಗೆ ಇಷ್ಟವಾದುದರಲ್ಲಿ ತಾನೂ ಇಷ್ಟವುಳ್ಳವಳಾಗಿರಬೇಕು. ಗಂಡನ ಮಾತನ್ನು ಮೀರಬಾರದು. ಗಂಡನು ಎಂಥವನೇ ಆದರೂ ಆತನನ್ನು ಅನುಸರಿಸಬೇಕೇ ಹೊರತು ತಿರಸ್ಕರಿಸಬಾರದು. ಅವನ ಸಂತೋಷವೇ ತನ್ನ ಸಂತೋಷವೆಂದೂ, ಅವನ ದುಃಖವೆ ತನ್ನ ದುಃಖವೆಂದೂ ಸಮಭಾಗಿಯಾಗಿರಬೇಕು. ಕಷ್ಟಸುಖಗಳಲ್ಲಿ ಒಂದೇ ರೀತಿಯಾಗಿ ವರ್ತಿಸಬೇಕು. ತುಪ್ಪ, ಉಪ್ಪು, ಎಣ್ಣೆ ಇಲ್ಲದಿದ್ದಾಗ ಇಲ್ಲವೆಂದು ಹೇಳದೆ ಬೇರೆ ರೀತಿಯಲ್ಲಿ ಹೇಳಿ ತರುವಂತೆ ಮಾಡಬೇಕು. ಗಂಡನಿಗೆ ಆಯಾಸ ಕೊಡಕೂಡದು. ತನಗೆ ತೀರ್ಥಸ್ನಾನ ಮಾಡಬೇಕೆಂದು ತೋರಿದರೆ ಪತಿಯ ಪಾದೋದಕವನ್ನು ಪಾನ ಮಾಡಬೇಕು. ಸ್ತ್ರೀಯು ದೇವರಿಗಿಂತಲೂ ಪತಿಯನ್ನೇ ಹೆಚ್ಚೆಂದು ಭಾವಿಸಬೇಕು. ಕುರ್ಚಿಯೇ ಮುಂತಾದ ಉಚ್ಚಾಸನದಲ್ಲಿ ಕೂಡಕೂಡದು. ದುಷ್ಟರಾದವರ ಮನೆಗೆ ಹೋಗಕೂಡದು. ಲಜ್ಜೆಯುಂಟಾಗುವ ಮಾತನ್ನು ಯಾವಾಗಲೂ ಆಡಕೂಡದು. ಇತರರಿಗೆ ಅಪವಾದವನ್ನು ಹೊರಿಸಬಾರದು.

ಜಗಳವನ್ನು ದೂರದಲ್ಲೇ ಬಿಡಬೇಕು. ಹಿರಿಯರೆದುರಿಗೆ ನಿಂತು ಗಟ್ಟಿಯಾಗಿಯೂ ಕ್ರೌರ್ಯವಾಗಿಯೂ ಮಾತನಾಡಕೂಡದು. ದೊಡ್ಡವರೆದಿರಿನಲ್ಲಿ ನಗಬಾರದು, ಯಾವಳು ಗಂಡನಿಗೆ ತಿಳಿಯದಂತೆ ಇತರರಿಂದ ಗುಟ್ಟಾಗಿ ತನ್ನ ಕಾಮಸುಖವನ್ನು ಹೊಂದುತ್ತಾಳೆ ಅವಳು ಗೂಬೆಯಾಗಿ ಹುಟ್ಟುವಳು. ತನ್ನ ಗಂಡನಿಗೆ ಕೊಡದೆ ರುಚಿಯಾದ ಪದಾರ್ಥವನ್ನು ತಿನ್ನ ತಕ್ಕವಳು ಹಂದಿಯಾಗಿ ಹುಟ್ಟುವಳು. "ನೀನು ತಾನು" ಎಂದು ಬೈಯ್ಯುವವಳು ಮೂಕಳಾಗಿ ಹುಟ್ಟುವಳು.

ಗೃಹಿಣಿಯಾದವಳು ಕಷ್ಟಪಟ್ಟು ಹೊರಗಿನಿಂದ ಬಂದ ಗಂಡನಿಗೆ ಗಾಳಿ ಬೀಸುವುದು. ಕಾಲ–ಕೈಗೆ ನೀರು ಕೊಟ್ಟು ಉಪಚರಿಸಿ ತಾಂಬೂಲ ಕೊಡುವುದು, ಕೈಕಾಲುಗಳನ್ನು ಅಮುಕುವುದು ಇವೇ ಮುಂತಾದವುಗಳಿಂದ ಉಪಚಾರ ಮಾಡಿದವಳು. ಮೂರು ಲೋಕದವರನ್ನು ಉಪಚರಿಸಿ–ದಂತಾಗುವುದು. ಪತಿಯೇ ದೇವರು, ಅವನೇ ತೀರ್ಥ, ಅವನೇ ಸರ್ವಸ್ವವು, ಆದುದರಿಂದ ಪತ್ನಿಯು ಗಂಡನೊಬ್ಬನನ್ನು ಸಂತೋಷಪಡಿಸಬೇಕು.

ಜೀವವಿಲ್ಲದ ದೇಹವು ಹ್ಯಾಗೆ ಕ್ಷಣ ಕಾಲದಲ್ಲಿ ಅಶುಚಿಯಾಗುವುದೋ ಹಾಗೆ ಗಂಡನಿಲ್ಲದವಳು ಕ್ಷಣಕಾಲದಲ್ಲಿ ಅಶುಚಿಯಾಗುವಳು.

ತಂದೆ, ತಾಯಿ, ಅಣ್ಣತಮ್ಮಂದಿರು, ಮಗ ಇವರುಗಳು ಹೆಂಗಸರಿಗೆ ಎಷ್ಟು ಬೇಕೋ ಅಷ್ಟನ್ನೇ ಮಾತ್ರ ಕೊಡುವರು. ಗಂಡನೊಬ್ಬನು ಮಾತ್ರ ಹೆಂಡತಿಗೆ ಬೇಕಾದ್ದನ್ನು ಬೇಕಾದಷ್ಟು ನೀಡುವವನು.

ವಿಧವೆಯು ಮಂಗಳ ಕಾರ್ಯಕ್ಕೆ ಬಾಹ್ಯಳು. ವಿಧವೆಯ ದರ್ಶನದಿಂದ ಕೆಲಸ ಸಿದ್ಧಿಯಾಗುವುದಿಲ್ಲ. ವಿಧವೆಯು ತಾಯಿಯಾದರೂ ಅವಳ ಆಶೀರ್ವಾದವನ್ನು ಪ್ರಾಜ್ಞರು ಸರ್ಪದ ವಿಷದಂತೆ ಬಿಟ್ಟು ಬಿಡುವರು. ಈ ಭಾಗವು ಲೋಕಾಚಾರಕ್ಕೆ ತೀರಾ ಭಿನ್ನವಾಗಿದೆ. ಯಾವಳು ಸ್ಮಶಾನಕ್ಕೆ ಬಿಟ್ಟು ಬಿಡುವರು. ಈ ಭಾಗವು ಹೋಗತಕ್ಕ ಗಂಡನ ಶವವನ್ನು ಸಹ ಗಮನಕ್ಕೆ ಅನುಸರಿಸುತ್ತಾಳೋ ಅವಳಿಗೆ ಹೆಜ್ಜೆ ಹೆಜ್ಜೆಗೆ ಅಶ್ವಮೇಧಫಲ ಬರುವುದು. ಪತಿಯು ಪಾಪಿಯಾದರೂ ಪತಿವ್ರತೆಯಿಂದ ಹಿಂಬಾಲಿಸಲ್ಪಟ್ಟರೆ, ಅವನನ್ನು ಯಮದೂತರು ದೂರದಲ್ಲೇ ಬಿಟ್ಟೋಡುವರು. ಪಾತಿವ್ರತ್ಯದ ತೇಜಸ್ಸನ್ನು ನೋಡಿ ಸೂರ್ಯನು ತಪಿಸುವನು. ಅಗ್ನಿಯೂ ಸುಟ್ಟು ಹೋಗುವನು ಎಲ್ಲಾ ತೇಜಸ್ಸುಗಳೂ ನಡುಗುವುವು.

ಪತಿವ್ರತೆಯು ತನ್ನ ಗಂಡನೊಡನೆ ಅನೇಕ ಕಾಲ ಸ್ವರ್ಗದಲ್ಲಿ ಸುಖಿಸುವಳು ಯಾವ ಮನೆಯಲ್ಲಿ ಪತಿವ್ರತೆ ಇರುವಳೋ ಆ ತಂದೆ ತಾಯಿಗಳು ಅವಳ ಗಂಡನೂ ಧನ್ಯರು ಅಂತಾ ಪತಿವ್ರತೆಯ ತಾಯಿತಂದೆಗಳು ಮತ್ತು ಗಂಡ ಈ ಮೂರು ವಂಶದವರು ಸ್ವರ್ಗವನ್ನು ಹೊಂದುವರು, ಸ್ತ್ರೀಯು ಕೆಟ್ಟರೆ ಈ ಮೂರು ವಂಶದವರೂ ನರಕಭಾಗಿಗಳಾಗುವರು, ಪತಿವ್ರತೆಯು ನಡೆದರೆ ಪಾದ ಸ್ಪರ್ಶವಾದ ಜಾಗಗಳು ಪವಿತ್ರವಾಗುತ್ತವೆ. ಸೂರ್ಯ, ಚಂದ್ರ, ಗಾಳಿಗಳು ಪತಿವ್ರತೆಯ ಸ್ಪರ್ಶವನ್ನು ಹೆದರಿಕೆಯಿಂದ ಮಾಡುತ್ತಾ ತಮ್ಮನ್ನು ಪವಿತ್ರವನ್ನಾಗಿ ತಿಳಿಯುತ್ತಾರೆ. ನದಿಗಳೂ ಕೂಡ ತಮ್ಮ ಪಾಪ ಕಳೆದುಕೊಳ್ಳಲು ಪತಿವ್ರತೆಯ ಸ್ಪರ್ಶವನ್ನು ಅಪೇಕ್ಷಿಸುತ್ತವೆ. ಮನೆಮನೆಯಲ್ಲೂ ಬೇಕಾದಷ್ಟು ಜನ ಹೆಂಗಸರಿದ್ದರೂ ಈ ಪಾತಿವ್ರತ್ಯವು ವಿಶ್ವೇಶ್ವರನ ಅನುಗ್ರಹದಿಂದ ಬರತಕ್ಕದ್ದು.

ಗೃಹಸ್ಥನಿಗೆ ಹೆಂಡತಿಯೇ ಮೂಲಾಧಾರವಾಗಿರುವಳು, ಸುಖಕ್ಕೆ ಅವಳೇ ಅಡಿಗಲ್ಲು, ಧರ್ಮವನ್ನು ಹೊಂದಲು ಅವಳೇ ಕಾರಣಳು. ಸಂತಾನಾಭಿವೃದ್ಧಿಗೆ ಅವಳೇ ಕ್ಷೇತ್ರವು. ಗಂಗೆಯ ಸ್ನಾನದಿಂದ ಜನರು ಹೇಗೆ ಪವಿತ್ರರಾಗುವರೋ ಪತಿವ್ರತೆಯ ದೃಷ್ಟಿಯಿಂದಲೂ ಹಾಗೆಯೇ ಪವಿತ್ರರಾಗುವರು. ಪತಿವ್ರತೆಯು ಗಂಡನೊಡನೆ ಒಂದು ವೇಳೆ ಸಹಗಮನ ಮಾಡದಿದ್ದರೂ ಶೀಲಭಂಗವನ್ನು ಮಾಡಿಕೊಳ್ಳಬಾರದು. ಯಾರು ವೈಧವ್ಯವನ್ನು ಕಾಪಾಡಿಕೊಳ್ಳುವಳೋ ಆಕೆ ಪುನಃ ಅದೇ ಗಂಡನನ್ನು ಹೊಂದುವಳು.

ವಿಧವೆಯು ತಲೇ ಕೂದಲನ್ನು ಗಂಟು ಹಾಕೊಂಡರೆ ಪತಿಗೆ ಬಂಧನವಾಗುತ್ತಾದುದರಿಂದ ಕೂದಲನ್ನು ಬೋಳಿಸಬೇಕು. ಒಂದೇ ಹೊತ್ತು ಊಟ ಮಾಡಬೇಕು. ಗಂಧ ಮೊದಲಾದ ಸುವಾಸನಾ ದ್ರವ್ಯಗಳನ್ನು ಹಚ್ಚಿಕೊಳ್ಳಬಾರದು ಪ್ರತಿದಿನವೂ ತನ್ನ ಗಂಡನಿಗೆ ತರ್ಪಣ ಮಾಡುತ್ತಿರಬೇಕು. ಗಂಡನೆಂಬ ಬುದ್ಧಿಯಿಂದ ಶ್ರೀವಿಷ್ಣುವಿನ ಪೂಜೆಯನ್ನು ಮಾಡಬೇಕು. ಶ್ರೀಹರಿಯನ್ನು ಪತಿಯೆಂಬ ಬುದ್ಧಿಯಿಂದ ಧ್ಯಾನ ಮಾಡಬೇಕು. ಗಂಡನ ತೃಪ್ತಿಗೋಸ್ಕರ ಆಯಾಯ ಮಾಸದಲ್ಲಿ ಉಕ್ತವಾಗಿರುವ ದಾನಗಳನ್ನು ವಿಧವೆಯು ಮಾಡಬೇಕು. ಪ್ರಾಣ ಹೋದರೂ ಬಸವನ ಮೇಲೆ ಕೂಡಬಾರದು. ವಿಧವೆಯು ರೌಕೆ (ಕುಪ್ಪಸ) ತೊಟ್ಟಿಕೊಳ್ಳಬಾರದು. ಚಿತ್ರವಿಚಿತ್ರವಾದ ಬಟ್ಟೆಗಳನ್ನುಡಬಾರದು. ಮಕ್ಕಳನ್ನು ಕೇಳದೆ ಯಾವುದನ್ನೂ

ಮಾಡಬಾರದು. ಹೀಗಿರುವ ವಿಧವೆಯು ಉತ್ತಮಳೇ, ಇವಳು ಪತಿವ್ರತೆಯೇ. ಈ ರೀತಿಯಾಗಿ ಗಂಡನಿದ್ದಾಗಲೂ, ಅವನು ಪರಂಧಾಮವನ್ನೈದಿದ ಮೇಲೂ ನಿಯಮಗಳನ್ನು ಹೇಳಿರುವರು. ಇದರಲ್ಲಿ ಕೆಲವು ಪಂಗಡದವರು ಕೆಲವು ಭಾಗಗಳನ್ನು ಹೆಚ್ಚಾಗಿಯೇ ಆಚರಿಸುತ್ತಿರುವವರು. ಇವೆಲ್ಲಕ್ಕೂ ಮನಸ್ಸು ಮೊದಲನೆಯ ಕಾರಣವೆಂದೆನಿಸಿ ಮನಃಪೂರ್ವಕವಾಗಿ ಮಾಡಬೇಕು. ಅಲ್ಲದಿದ್ದರೆ ಇವು ಅಷ್ಟು ಪರಿಣಾಮವನ್ನು ಹೊಂದಲಾರವು. ಹಾಗಿರುವವರು ಈಗಲೂ ಬಹುಮಂದಿ ಇಲ್ಲದಿಲ್ಲ. ತನಗೂ ತನ್ನ ಮಕ್ಕಳಿಗೂ ಅಹೋರಾತ್ರಿ ಕಷ್ಟಪಟ್ಟು ದುಡಿದು ತಂದು ಹಾಕುವಲ್ಲಿ ಮನೆಯಲ್ಲಿ ಕುಳಿತು ತಿಂದು ತೇಗುವವಳು ತೋರಿಸುವ ಕೃತಜ್ಞತೆಯೇ ಈ ನಿಯಮಗಳಲ್ಲಿ ಅನೇಕವಾಗಿರುವುವು ಎಂದ ಮೇಲೆ ಇವುಗಳನ್ನು ಸಂಪೂರ್ಣವಾಗಿ ಆಚರಿಸುವುದರಲ್ಲಿ ಅಭ್ಯಂತರವೇನೂ ಇರುವುದಿಲ್ಲ.

ಲೋಕ ನಿಯಮಗಳಿಗೆ ಸಿಲುಕದವನಾದರೂ ಏಕಪತ್ನೀವ್ರತನಾದ ಶ್ರೀರಾಮಚಂದ್ರನು ಭರತಖಂಡದ ತನ್ನ ಭಕ್ತರಿಗೆ ಈ ಅಮೋಘ ಗುಣಗಳನ್ನು ದಯಾಪಾಲಿಸಿ ತನ್ನನ್ನು ಭಜಿಸುವಂತೆ ಮಾಡಿ, ಕಾಪಾಡಲಿ. ಅಬಲೆಯರಾದ ಸ್ತ್ರೀಯರು ಪತಿವ್ರತೆಯಾಗಿರಬೇಕಾದರೆ ಪುರುಷರು ಸತೀತ್ವದಿಂದಿರುವುದು ಅತ್ಯಾವಶ್ಯಕ. ಧರ್ಮ ವಿಷಯ ಮತ್ತು ಅರ್ಥ ವಿಷಯದಲ್ಲಿ ಕಾಮ ವಿಷಯದಲ್ಲಿ ಅತಿಕ್ರಮಿಸಿ ನಡೆಯಕೂಡದೆಂದು ಪತ್ನಿಯು ಹೇಳುವಳು. ಪತಿಯು ಮೀರುವುದಿಲ್ಲವೆಂದೂ ವಿವಾಹ ಸಾಕ್ಷಿಗಳಾದ ಅಗ್ನಿ, ಪುರೋಹಿತ, ಸದಸ್ಯರ ಮುಂದೆ ಪ್ರತಿಜ್ಞೆ ಮಾಡುತ್ತಾನೆ. ಇದನ್ನು ಜ್ಞಾಪಕದಲ್ಲಿಟ್ಟುಕೊಂಡು ಪುರುಷನು ವಿವಾಹಿತನಲ್ಲದಿದ್ದರೆ ದಿವ್ಯತೇಜವ್ರತವಾದ ಬ್ರಹ್ಮಚರ್ಯಧಾರಣೆ ವ್ರತದಿಂದ ಹುಮ್ಮಸ್ಸಿನ ಕಾಲಯಾಪನೆ ಮಾಡಬೇಕು. ವಿವಾಹಿತನಾಗದಿದ್ದರೆ ಸ್ತ್ರೀಯರಂತೆ ಇವನಾದರೂ ಸತಿವೃತದಿಂದ ನಡೆಯಬೇಕು. ಆಗ ಮನೆಯು ಇಂದ್ರಭವನವೇ ಆಗುವುದು.

- ***ಸ್ತ್ರೀಯರ ವ್ಯವಹಾರ :***

ಸ್ತ್ರೀಯು ಪ್ರಕೃತಿಯ ಪ್ರತಿರೂಪಳಾಗಿದ್ದು ಸತ್ವ-ರಜಸ್ಸು-ತಮೋಗುಣಗಳ ಮಿಶ್ರಣವೆನಿಸುರುವಳು. ಪ್ರಕೃತಿ ಎಂದರೆ ಪ್ರ = ಸತ್ವ, ಕೃ = ರಜಸ್ಸು, ತಿ = ತಮೋಗುಣ ಇವುಗಳ ಮಿಶ್ರಣವೆಂಬಂತೆ, ಸ್ತ್ರೀಯೆಂದರೆ ಸ್ + ತ್ + ರ ಸತ್ವಾದಿಗುಣ ಮಿಶ್ರಳೆಂದೆ ಅರ್ಥ. ಹೀಗಿರುವಾಗ ವ್ಯವಹಾರ ಬದಲಾಗುವುದು

ಸಹಜವೇ. ಆದರೂ ಸ್ತ್ರೀಯು ಕೆಲವು ಚೌಕಟ್ಟಿನಲ್ಲಿದ್ದರೆ ಅವಳಿಗೇ ಪ್ರಯೋಜನವೆಂದು ಶಾಸ್ತ್ರಕಾರರು ಕೆಲವು ವಿಧಿ-ವಿಧಾನಗಳನ್ನು ವಿಧಿಸಿದ್ದಾರೆ.

ಸ್ತ್ರೀಯರು ತಮ್ಮ ಪ್ರತಿಯೊಂದು ಕಾರ್ಯ ಮಾಡುವಾಗಲೂ ಭಗವಂತನ ನಿರಂತರ ಚಿಂತನೆ ಮಾಡುತ್ತಿರಬೇಕು. ಭಾಗವತದಲ್ಲಿ ಗೋಪಿಕಾಸ್ತ್ರೀಯರು ಹಾಲು ಕರೆಯುವಾಗ, ಧಾನ್ಯ ತರುವಾಗ, ಮೊಸರು ಕಡೆಯುವಾಗ, ಸರಿಸುವಾಗ, ಮಕ್ಕಳನ್ನು ತೂಗುವಾಗ, ಕಸಗುಡಿಸುವಾಗ, ಶ್ರೀಕೃಷ್ಣನಲ್ಲಿಯೇ ಮನಸ್ಸನ್ನಿಟ್ಟು ಆನಂದಭಾಷ್ಪವನ್ನು ಸುರಿಸುತ್ತಾ ಇದ್ದರೆಂದು ವರ್ಣಿಸಲಾಗಿದೆ.

**ಯಾದೋಹನೇಽವಹನನೇ ಮಥನೋಪಲೇಪ-**
**ಪ್ರೇಂಖೇಂಖನಾರ್ಭ ರುದಿತೋಕ್ಷಣ ಮಾರ್ಜನಾದೌ ।**

**ಗಾಯಂತಿ ಚೈನಮನುರಕ್ತ ಧಿಯಾಶ್ರು ಕಂಠ್ಯಃ-**
**ಧನ್ಯಾ ರಜಸ್ತ್ರಿಯಃ ಉರುಕ್ರಮ ಚಿತ್ತರಾನಾಃ ॥** – *ಭಾಗ 10/44-45*

ಮನೆಯಲ್ಲಿ ತಮಗಿಂತ ದೊಡ್ಡವರಾದ ಸ್ತ್ರೀ-ಪುರುಷರಿದ್ದರೆ ಅವರ ಸೇವೆಯೇ ಭಗವಂತನ ಸೇವೆಯೆಂದು ಶ್ರದ್ಧೆಯಿಂದ ಸೇವಿಸಬೇಕು. ಅವರ ಚರಣಗಳಿಗೆ ನಮಿಸಬೇಕು. ಪತಿಯ ಚರಣಗಳನ್ನು ಮುಟ್ಟಿ ನಮಸ್ಕರಿಸಬೇಕು. ಪತಿಯ ಹೊರತು ಇತರರಿಗೆ ಕಾಲು ಮುಟ್ಟದೆ ದೂರದಿಂದಲೆ ಪ್ರಣಾಮ ಮಾಡಬೇಕು. ತನ್ನ ಸಮಾನರಿಗೆ ಆದರ ಸತ್ಕಾರಗಳಿಂದ ಸಂತೋಷಪಡಿಸಬೇಕು. ತಮಗಿಂತ ಚಿಕ್ಕವರಲ್ಲಿ ವಿಶೇಷ ವಾತ್ಸಲ್ಯ ತೋರಬೇಕು. ಬಾಲಕರ-ಬಾಲಕಿಯರ ಸ್ವಭಾವ-ಗುಣ-ಚಾರಿತ್ರ್ಯಗಳು ಚೆನ್ನಾಗಿರಬೇಕಾದರೇ ಸರಿಯಾಗಿ ಅವರಿಗೆ ತಿಳಿಸುವುದು, ತಮ್ಮ ಚಾರಿತ್ರ್ಯದಿಂದ ಅದೇ ರೀತಿಯ ಶಿಕ್ಷಣ ನೀಡುವುದು. ಮಕ್ಕಳಿಗೆ ತಾಯಿಯೇ ಮಕ್ಕಳಿಗೆ ಪ್ರಥಮಗುರುವೆನಿಸಿದ್ದಾಳೆ.

ಸ್ತ್ರೀಯರು ಭರತನನ್ನು ಹಡೆದ ಕೈಕೇಯಿಯಾಗಿರಬೇಕೆ ವಿನಹ, ರಾಮನನ್ನು ಕಾಡಿಗೆ ಅಟ್ಟಿದ ದಶರಥನ ಹೆಂಡತಿಯೆನಿಸಬಾರದು. ನಮ್ಮ ಮಹಿಳೆಯರು ಕೂಡ ಭರತನಂತಹ ಮಕ್ಕಳನ್ನು ಸಿದ್ಧಗೊಳಿಸಬೇಕು. ಭರತನಂತಹ ಮಗನನ್ನು ಪಡೆದದ್ದಕ್ಕಾಗಿಯೇ ಕೈಕೇಯಿಯು ನರಕಕ್ಕೆ ಹೋಗಲಿಲ್ಲ.

**ಸೂತ್ವಾ ತು ಭರತಂ ನೈಷಾ ಗಚ್ಚೇತ ನಿರಯಾನಿತಿ ॥** – *ತಾ.ನಿ.*

**ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ ।**
**ಅಯೋಧ್ಯಾಮಟವೀಂ ವಿದ್ಧಿ ಗಚ್ಚ ತಾತ ಯಥಾಸುಖಂ ॥**
*-2/40/9*

ಸುಮಿತ್ರೆಯಂತೆ ಕಾಲಕಾಲಕ್ಕೆ ಯೋಗ್ಯ ಉಪದೇಶಗಳನ್ನು ಧ್ರುವ-ಪ್ರಹ್ಲಾದ ಮೊದಲಾದ ಭಗವದ್ಭಕ್ತರ ಕಥೆಗಳನ್ನು ಹೇಳಿಕೊಡಬೇಕು. ಮಕ್ಕಳಿಗೆ ಕಥೆಯೆಂದರೆ ಪ್ರಾಣವಷ್ಟೇ. ಸುಮಿತ್ರೆಯು ಲಕ್ಷ್ಮಣನಿಗೆ ಉಪದೇಶಿಸಿದಂತೆ, ಶ್ರೀರಾಮನಿಗೆ ಭಕ್ತನಾಗಿರುವ ಮಕ್ಕಳನ್ನು ಹಡೆದ ಸ್ತ್ರೀಯು ಮಾತ್ರ ಪುತ್ರವತೀ ಎನಿಸುವಳೆ ಹೊರತು ಭಗವಂತನಲ್ಲಿ ಭಕ್ತಿಯಿರದ ಪುತ್ರರನ್ನು ಹಡೆದರೂ ಅವಳು ಬಂಜೆಯೇ ಸರಿ.

ಋತುಧ್ವಜನ ಧರ್ಮಪತ್ನಿ ಮದಾಲಸೆಯು ಶ್ರೇಷ್ಠಜ್ಞಾನಿಯಾಗಿದ್ದು ಬಾಲ್ಯದಲ್ಲಿಯೇ ತಮ್ಮ ಮಕ್ಕಳಿಗೆ ಒಳ್ಳೆಯ ಜ್ಞಾನ ನೀಡಿದ್ದಳು. ಮಗುವು ಅಳುತ್ತಿರುವಾಗ ಅವಳ ಭಾಷೆ ನೋಡಿ.

ಮಗುವೆ! ಈ ಪಂಚಭೂತ ಶರೀರ ನಿನ್ನದಲ್ಲ. ನಿನಗೆ ಹೆಸರೂ ಇಲ್ಲ, ನಾವಿಟ್ಟಿರುವ ಹೆಸರು ಕಲ್ಪಿತವಾದದ್ದು ನೀನೂ ಶುದ್ಧಾತ್ಮನು.

ಹೀಗಿರುವಾಗ ಏಕೆ ಅಳುತ್ತಿರುವೆ!

**ಶುದ್ಧೋऽಸಿ ರೇ ತಾತ ನ ತೇऽಸ್ತಿ ನಾಮ,**

**ಕೃತಂ ಹಿ ತೇ ಕಲ್ಪನಯಾಧುನೈವ ।**

**ಪಂಚಾತ್ಮಕಂ ದೇಹಮಿದಂ ನ ತೇऽಸ್ತಿ**

**ನೈವಾಸ್ಯ ತ್ವಂ ರೋದಿಷಿ ಕಸ್ಯ ಹೇತೋಃ ॥**

ಪರಪುರುಷನ ದರ್ಶನ ಮಾಡುವುದು, ದುಷ್ಟಸ್ತ್ರೀಯರ ಸಂಪರ್ಕ ಮಾಡುವುದು ನಿಷೇಧ. ಗಾಂಧಾರಿಯು ಪರಪುರುಷನನ್ನು ಎಂದೂ ನೋಡಿದ್ದಿಲ್ಲ ಮತ್ತು ಪರಮಪುರುಷನ ನಾಮ ಹೊರತು ಬೇರಾವ ಪುರುಷನ ಹೆಸರನ್ನೇ ಹೇಳಿದ್ದಿಲ್ಲ.

**ವಾಚಾಪಿ ಪುರುಷಾನನ್ಯಾನ್ ಸುವ್ರತಾ ನಾನ್ವಕೀರ್ತಯತ್ ।**

ಯಾವ ಸ್ತ್ರೀಯು ಸುಂದರ ವೇಷಧಾರಿಯಾದ ಪರಪುರುಷನನ್ನು ನೋಡಿ, ಅವನನ್ನು ತನ್ನ ತಮ್ಮನೆಂದೋ, ತಂದೆ ಅಥವಾ ಮಗನೆಂದೋ ಭಾವಿಸುವಳೋ ಅವಳೇ ನಿಜವಾದ ಸಾಧ್ವಿಯು.

**ಸುವೇಶಂ ಯಾ ನರಂ ದೃಷ್ಟ್ವಾ ಭ್ರಾತರಂ ಪಿತರಂ ಸುತಂ ।**

**ಮನ್ಯತೇ ಚ ಪರಂ ಸಾಧ್ವೀ ಸಾ ಚ ಭಾರ್ಯಾ ಪತಿವ್ರತಾ ॥**

– *ಪದ್ಮ-ಸೃಷ್ಟಿ 47/60*

ದ್ರೌಪದಿಯು ದೇವನಾಗಲೀ, ಮನುಷ್ಯ, ಗಂಧರ್ವನಾಗಲಿ, ಯುವಕನಾಗಲೀ, ಬೇಕಾದಷ್ಟು ಧನವಿರುವವನಾಗಲೀ ಅಷ್ಟೇಕೆ ಮನ್ಮಥನೆ ಬಂದರೂ ಕಣ್ಣೆತ್ತಿಯೂ ನೋಡುತ್ತಿರಲಿಲ್ಲ.

**ದ್ರವ್ಯವಾನ್ ಶುಭರೂಪೋ ವಾ ನ ಮೇಽನ್ಯಃ ಪುರುಷೋ ಮತಃ ।**
*– ಮ.ಭಾ.ವನ –233–23*

ರಾಮಾಯಣ–ಮಹಾಭಾರತಾದಿ ಗ್ರಂಥಗಳನ್ನು ಆಧ್ಯಾತ್ಮಿಕ ಗ್ರಂಥಗಳನ್ನು ತಾನು ಓದುವುದಲ್ಲದೆ ಬಾಲಕರಿಗೂ ಓದಿಸಬೇಕು. ಇದಲ್ಲದೆ ದೈಹಿಕವಾಗಿ ಮಾಡಬೇಕಾದ ಹಿಟ್ಟು ಬೀಸುವುದು, ಪಾತ್ರೆ ತೊಳೆಯುವುದು, ಇತ್ಯಾದಿ ಗೃಹಕರ್ತವ್ಯ ಪರಾಯಣೆಯಾಗಿರಬೇಕಾದ್ದು ಅವಶ್ಯಕ.

ಇದರ ಜೊತೆಗೆ ಆಲಸ್ಯ–ಪ್ರಮಾದ, ಅಶ್ಲೀಲತೆ, ಮದ್ಯಸೇವನೆ, ಸಿನಿಮಾ, ಕ್ಲಬ್, ಇಸ್ಪೇಟ್, ಪಗಡೆ, ಚದುರಂಗ, ಇವುಗಳಿಂದ ಸ್ತ್ರೀಯು ದೂರವಿರಬೇಕು.

ಯಂತ್ರ–ಮಂತ್ರ, ಮಾಟ, ಮದ್ದು ಇವುಗಳ ಬಲೆಗೆ ಬೀಳಬಾರದು.

ತ್ರಿಕರಣಗಳಿಂದಲೂ ಶ್ರೀವಿಷ್ಣುವನ್ನು ಆರಾಧಿಸಬೇಕು. ಭಗವಂತನೊಬ್ಬನೆ ಸರ್ವತಂತ್ರ ಸ್ವತಂತ್ರನೆಂದು ತಿಳಿದು, ಇಡೀ ಚರಾಚರಪ್ರಪಂಚವೆಲ್ಲವೂ ಅವನ ಅಧೀನವೆಂದು ನಿಶ್ಚಿತ ಜ್ಞಾನವಿರಬೇಕು.

ಸ್ತ್ರೀಯರಿಗೆ ಮುಖ್ಯಧರ್ಮವೆ ಪಾತಿವ್ರತ್ಯವು, ಪತಿಯಲ್ಲಿರುವ ಭಗವಂತನನ್ನು ಪತಿಯನ್ನು ದೇವರ ಪ್ರತಿಮೆಯಂತೆ ತಿಳಿದು ಆ ಮಾಧ್ಯಮದಲ್ಲಿ ಹರಿಯ ಪೂಜೆ ಮಾಡಬೇಕು.

- ***ಪತಿಗೆ ಮೊದಲು ಊಟ :***

ಸ್ತ್ರೀಯು, ಮೊದಲು ತನ್ನ ಪತಿ ಹಾಗೂ ಉಳಿದ ಹಿರಿಯರು ಮಕ್ಕಳು ಭೋಜನ ಮಾಡಿದ ನಂತರ ಭುಂಜಿಸಬೇಕು. ಪತಿಯು ಮಲಗುವ ಮೊದಲು ತಾನು ಮಲಗಬಾರದು.

ಪತಿಗೆ ಸರ್ವದ ಪ್ರಿಯಳಾಗಿದ್ದು ಅವನು ಸಂತೋಷದಿಂದ ಇದ್ದಾಗ, ತಾನು ಅಸಂತೋಷ ತೋರುವುದು, ಅವನು ದುಃಖದಲ್ಲಿರುವಾಗ ತಾನು ಸಂತೋಷದಿಂದಿರುವುದು ಸಲ್ಲದು.

**ಹೃಷ್ಟಾ ಹೃಷ್ಟೇ, ವಿಷಣ್ಣಾ ಸ್ಯಾದ್ ವಿಷಣ್ಣೇಽಸ್ಮಿನ್ ಪ್ರಿಯಾ ಸದಾ ।**

ದ್ರೌಪದಿದೇವಿಯು ಪಾಂಡವರು ಸಂತುಷ್ಟರಾಗಿದ್ದಾಗ, ಇವಳೂ ಸಂತುಷ್ಟಳಾಗಿಯೂ, ದುಃಖಿತನಾದಾಗ ತಾನು ದುಃಖಿತಳಾಗುತ್ತಿದ್ದಳು.

ಗಂಡನು ರೋಗಿಯಾಗಿರಲಿ, ಮುದುಕನಾಗಿರಲಿ, ನಿರ್ಧನನೇ ಆಗಿದ್ದರೂ ಅವನಲ್ಲಿ ಪರಮಾತ್ಮನನ್ನು ಪೂಜಿಸಬೇಕು.

**ಕ್ಲೀಬಂ ವಾ ದುರವಸ್ಥಂ ವಾ ವ್ಯಾಧಿತಂ ವೃದ್ಧಮೇವ ವಾ ।**

. . . .

## ಪಿಂಗಲೆಯ ಕಥೆ

ಪಿಂಗಲೆಯು ಪರಪುರುಷರಿಗೆ ತನ್ನ ದೇಹವನ್ನು ಮಾರುತ್ತಿದ್ದಳು. ಆದರೆ ತನ್ನ ಹತ್ತಿರ ಬಂದವರನ್ನು ತನ್ನ ಪತಿಯಂತೆ ಉಪಚರಿಸುವೆನೆಂದು ಭಾವಿಸಿದ್ದಳು. ಒಂದು ದಿನ ಯಾರು ತನ್ನ ಬಳಿ ಬಾರದಿರಲು ನಿರಾಶಳಾಗಿ ಮನೆಗೆ ಬಂದು, ಹೀಗೆ ಚಿಂತಿಸಿದಳು. ಪರಮಪುರುಷನಿಗಾಗಿ ಕಾದಿದ್ದರೆ ಒಳ್ಳೆಯದಾಗುತ್ತಿತ್ತು ಎನ್ನುತ್ತಿರುವಾಗಲೇ, ಭಗವಂತನು ಹಣ್ಣು ಹಣ್ಣು ವೃದ್ಧನ ವೇಷಧರಿಸಿ ಅವಳ ಬಳಿ ಬಂದನು. ಅವಳ ನಿಯಮದಂತೆ ಆ ವೃದ್ಧನನ್ನು ಕಂಡು ಬೇಸರಿಸದೆ ಅವನನ್ನು ಪತಿಯಂತೆ ಉಪಚರಿಸಿದಳು. ಇದರಿಂದ ಪ್ರೀತನಾದ ಭಗವಂತನು ಅವಳನ್ನು ಅನುಗ್ರಹಿಸಿದನು. ಮುಂದೆ ಇವಳೇ ಕಂಸನಿಗೆ ಗಂಧ ನೀಡುವ ಕುಬ್ಜೆಯಾಗಿ ಹುಟ್ಟಿದಳು. ದೇಹವನ್ನು ಮಾರಿಕೊಂಡ ಪಾಪಕ್ಕಾಗಿ ತ್ರಿವಕ್ರೆಯಾಗಿ ಹುಟ್ಟಿದಳು. ಭಗವಂತನಿಗಾಗಿ ದೇಹವನ್ನು ನೀಡಿ ಉಪಚರಿಸಿದ್ದರಿಂದ ಭಗವಂತನಿಂದ ಸುಂದರಿಯಾಗಿ, ಅವನ ಜೊತೆ ಒಂದು ದಿನ ಕೂಡಿದ್ದರಿಂದ ಭಗವಂತನಿಂದ ಒಂದು ದಿನ ಸುಖ ಹೊಂದಿ ಭೀಮನ ಸಾರಥಿಯಾದ ವಿಶೋಕನನ್ನು ಮಗನಾಗಿ ಪಡೆದಳು.

ಪಾತಿವ್ರತ್ಯ ಧರ್ಮದಿಂದ ಸ್ತ್ರೀಯಲ್ಲಿರುವ ರಾಗ ದ್ವೇಷಗಳು ಮಾಯವಾಗುತ್ತದೆ. ಯಾವುದಾದರೂ ಕಾರ್ಯವು ತನಗೆ ಪ್ರತಿಕೂಲವಾಗಿ, ತನ್ನ ಪತಿಗೆ ಅನುಕೂಲವಾದಾಗ ತನ್ನ ಅನುಕೂಲವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ತನ್ನ ಪತಿಗೆ ಅನುಕೂಲಳಾಗಿಯೇ ನಡೆಯುತ್ತಾಳೆ.

ಸ್ತ್ರೀಯು ತನ್ನ ಸೌಂದರ್ಯದಿಂದ ಪರಪುರುಷರು ಮೋಹಗೊಳ್ಳಲಿ ಎಂದು

ಅಲಂಕಾರವನ್ನು ಮಾಡಿಕೊಳ್ಳಬಾರದು, ತನ್ನ ಸೌಂದರ್ಯವು ಕೇವಲ ತನ್ನ ಪತಿಗೆ ಮೀಸಲೆಂದು ಅವನಿಗಾಗಿ ಅರ್ಪಣೆ ಮಾಡಬೇಕು.

ಗಂಡನು ಊರಿನಲ್ಲಿರದಿದ್ದಾಗ ಸರಳ ಅಲಂಕಾರ ಮಾತ್ರ ಧರಿಸಬೇಕು.

. . . .

## ಸುಕಲೆ ಕಥೆ

ಕೃಕಲನೆಂಬುವನ ಪತ್ನಿ ಸುಕಲೆ, ಇವಳು ಪತಿ ಪರಾಯಣೆಯಾಗಿದ್ದು ಮಹಾಸಾಧ್ವಿಯಾಗಿದ್ದಳು. ಕೃಕಲನೂ ಧರ್ಮಿಷ್ಠನಾಗಿದ್ದು ವ್ರತಾದಿಗಳಲ್ಲಿ, ಶ್ರವಣಾದಿಗಳಲ್ಲಿಯೂ ಆಸಕ್ತನಾಗಿದ್ದನು.

ಒಂದು ಬಾರಿ ಕೃಕಲನು ತೀರ್ಥಯಾತ್ರೆಯನ್ನು ಮಾಡಲು ನಿಶ್ಚಯಿಸಿ ತನ್ನ ಪತ್ನಿ ಸುಕಲೆಗೆ ತಿಳಿಸಿದನು. ಆಗ ಸುಕಲೆಯು "ನಾನು ತಮ್ಮ ಧರ್ಮಪತ್ನಿಯಾಗಿರುವೆ. ನಾನು ತೀರ್ಥಯಾತ್ರೆಗೆ ಬರುತ್ತೇನೆ. ಸ್ತ್ರೀಯರಿಗೆ ಪತಿಯನ್ನು ಬಿಟ್ಟು, ಇಹ-ಪರಗಳಲ್ಲಿ ಗತಿಯಿರುವುದಿಲ್ಲ. ತಮ್ಮ ಸೇವೆಯನ್ನು ಮಾಡುತ್ತ ತಮ್ಮ ಜೊತೆಯಲ್ಲಿಯೇ ನೆರಳಿನಂತೆ ಅನುಸರಿಸುತ್ತಾ ಬರುತ್ತೇನೆ" ಎಂದಳು.

ಕೃಕಲನು "ಹಾಗೇ ಆಗಲಿ" ಎಂದು ಮೇಲ್ನೋಟಕ್ಕೆ ಒಪ್ಪಿದರೂ, ದುರ್ಗಮ ಮಾರ್ಗದಲ್ಲಿ ನಡೆಯಲು ಇವಳಿಗೆ ಕಷ್ಟವಾಗಬಹುದೆಂದು ತಿಳಿದು, ರಾತ್ರಿಯಲ್ಲಿ ಅವಳು ಮಲಗಿರುವಾಗ ಅವಳನ್ನು ಬಿಟ್ಟು ಒಬ್ಬನೆ ತೀರ್ಥಯಾತ್ರೆಗೆಂದು ಹೊರಟು ಹೋದನು.

ಬೆಳಿಗ್ಗೆ ಸುಕಲೆಯು ಎದ್ದು ನೋಡಿದಾಗ ಪತಿಯು ಇರಲಿಲ್ಲ. ಪತಿಪರಾಯಣೆಯಾದ ಸುಕಲೆಯು ಹೀಗೆ ಮನಸ್ಸಿನಲ್ಲಿ ನಿಶ್ಚಯಿಸಿದಳು. ನನ್ನ ಪತಿಯು ಮರಳಿ ಬರುವವರೆಗೂ ನಾನು ನೆಲದ ಮೇಲೆ ಮಲಗುತ್ತೇನೆ. ಹಾಲು, ಮೊಸರು, ತುಪ್ಪ, ಉಪ್ಪು, ತಾಂಬೂಲಾದಿಗಳನ್ನು ಉಪಯೋಗಿಸುವುದಿಲ್ಲ. ಪತಿಯು ಹಿಂತಿರುಗುವವರೆಗೂ ಒಂದು ಹೊತ್ತು ಮಾತ್ರ ಭೋಜನ ಮಾಡುವೆನು ಅಥವಾ ಉಪವಾಸವನ್ನು ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿದಳು.

ಪತಿಯು ಇಲ್ಲದ್ದರಿಂದ ಜಡೆ ಹೆಣೆದುಕೊಳ್ಳಲಿಲ್ಲ. ಏಕವಸ್ತ್ರಧಾರಿಯಾಗಿ ಶರೀರವನ್ನು ಮುಚ್ಚಿದ್ದಳು. ಅತ್ಯಂತ ವೇದನೆಯಿಂದ ಕಾಲ ಕಳೆದಳು.

ಆ ಸಂದರ್ಭದಲ್ಲಿ ಅವಳ ಸಖಿಯರು – ಸಖಿಯೇ ಏಕೆ ವ್ಯರ್ಥವಾಗಿ ಶರೀರ ದಂಡಿಸುತ್ತಿರುವೆ. ಸಂತೋಷವಾಗಿ ಕುಡಿದು ತಿಂದು ಸುಖವಾಗಿರು. ಯಾರು ಯಾರಿಗೆ ಈ ಪ್ರಪಂಚದಲ್ಲಿ ಎಂದು ಉಪದೇಶಿಸಿದರು. ಆದರೆ ಸುಕಲೆಯು ಒಪ್ಪಲಿಲ್ಲ. ನೀವು ಹೇಳುವ ಮಾತು ವೇದಶಾಸ್ತ್ರಾದಿ ಸಮ್ಮತವಲ್ಲ. ಯಾರು ತನ್ನ ತನ್ನ ಸ್ವಾಮಿಯಿಂದ ಬೇರೆಯಾಗಿ ಒಂಟಿಯಾಗಿರುವ ಸ್ತ್ರೀಯು "ಪಾಪಿನೀ" ಎಂದು ಹೇಳಲಾಗಿದೆ. ನಾರಿಯರಿಗೆ ಪತಿಯೆ ತಂದೆ–ತಾಯಿಯು, ಯಾವ ಸ್ತ್ರೀಯು ತನ್ನ ಪತಿಸೇವೆಯನ್ನು ಬಿಟ್ಟು ಬೇರೆ ಧರ್ಮವನ್ನಾಚರಿಸುವಳೋ ಅವಳ ಯಾವ ಕಾರ್ಯವೂ ಸಫಲವಾಗದು.

ಪತಿಯ ಚರಣಸೇವೆ ಪತಿವ್ರತೆಗೆ ಅವಶ್ಯಕರ್ತವ್ಯವು. ಪತಿಯ ಬಲಗಾಲು ಪ್ರಯಾಗವು, ಎಡಗಾಲು ಪುಷ್ಕರವು, ಇದರಲ್ಲಿ ಸ್ನಾನ ಮಾಡಿದರೆ ಆಯಾಯ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವು.

ಪತಿಯು ಊರಿಗೆ ಹೋಗಿರುವಾಗ ಸ್ತ್ರೀಯರು ತನ್ನನ್ನು ಅಲಂಕರಿಸಿ ಅವಳ ರೂಪ, ವರ್ಣ ಎಲ್ಲವು ನಿರರ್ಥಕವಾಗುತ್ತದೆ. ಯಾವ ಸ್ತ್ರೀಯೇ ಆಗಲೀ ಸನಾತನ ಧರ್ಮವನ್ನು ಬಿಡಬಾರದು.

ಇಂದ್ರದೇವನಾದರೂ ಅವಳನ್ನು ಪರೀಕ್ಷಿಸಲೆಂದು ಆಲೋಚಿಸಿ, ಮನ್ಮಥನನ್ನು ಸ್ಮರಿಸಿದನು. ಅವನು ರತಿಯ ಜೊತೆ ಬಂದನು. ಅವನಿಗೆ ತನ್ನ ಮನದಾಸೆಯನ್ನು ಹೇಳಿ, ಸುಕಲೆಯ ಮನೆಗೆ ಬಂದನು. ಅನುಪಮವಾದ ಸೌಂದರ್ಯದಿಂದ ಪ್ರಕಟನಾದನು. ಇವನ ಸೌಂಧರ್ಯ ತೇಜಸ್ಸಿನ ಕಡೆಗಮನ ಕೊಡದೆ ಪತಿಯನ್ನೇ ಸ್ಮರಿಸುತ್ತಿದ್ದಳು. ಇಂದ್ರನಿಗೆ ಆಶ್ಚರ್ಯ–ವಾಯಿತು. ಇವಳು ಧರ್ಮವೆಂಬ ಕವಚ ತೊಟ್ಟಿದ್ದಾಳೆ. ಇವಳನ್ನು ಏನು ಮಾಡಲಾಗುವುದಿಲ್ಲವೆಂದು ಇಂದ್ರದೇವನು ಹೊರಟು ಹೋದನು. ಹೀಗೆ ಧರ್ಮವೇ ಅವಳನ್ನು ರಕ್ಷಿಸಿತು.

ಇತ್ತ ಕೃಕಲನು ಗಂಗಾದಿ ಸ್ನಾನ ಮಾಡಿ ಪಿತೃಗಳಿಗೆ ಶ್ರಾದ್ಧಾದಿಗಳನ್ನು ಮಾಡಿದರೂ, ಧರ್ಮಪತ್ನಿಯನ್ನು ಜೊತೆಗೆ ಕರೆದುಕೊಂಡು ಬರದೆ ತಾನೊಬ್ಬನೆ ಯಾತ್ರೆ ಮಾಡಿದ್ದರಿಂದ ಅವನ ಪೂರ್ವಜರೆಲ್ಲರೂ ನರಕದಲ್ಲಿ ಬಿದ್ದರು. ನಂತರ ಪುನಃ ಪತ್ನಿಯೊಂದಿಗೆ ತೀರ್ಥಯಾತ್ರೆ ಮಾಡಿ ಅವರನ್ನು ಉದ್ಧರಿಸಿದನು.

. . . .

# ಕನ್ಯೆಯ ಶಕ್ತಿ

ಕಣ್ವ ಋಷಿಯ ಮಗಳು ಬಾಲಾವತಿ. ಅವಳು ಮಹಾಭಗವದ್ಭಕ್ತಳಾಗಿದ್ದಳು. ತಂದೆಯು ಅವಳಿಗೆ ಯೋಗ್ಯ ವರನನ್ನು ನೋಡುತ್ತಿದ್ದರು. ಆದರೂ ಯಾರೂ ಸಿಗಲಿಲ್ಲ. ವರನನ್ನು ಶೋಧಿಸುವ ಕಾರ್ಯದಲ್ಲಿ ತತ್ಪರರಾದ ಕಣ್ವರಿಗೆ ತಪಸ್ಸು, ನಿತ್ಯಕರ್ಮಗಳಿಗೆ ತೊಂದರೆಯಾಗುತ್ತಿತ್ತು. ಮನಗಂಡ ಬಾಲಾವತಿಯು ನನಗೆ ಯೋಗ್ಯನಾದ ಪತಿಯು ಲಭಿಸಲೆಂದು ಸೂರ್ಯನನ್ನೇ ಕುರಿತು ತಪಸ್ಸನ್ನು ಮಾಡಿದಳು.

ಇವಳ ತಪಸ್ಸು ಉಗ್ರವಾಗಿತ್ತು. ಇದರಿಂದ ಸಂತುಷ್ಟನಾದ ಸೂರ್ಯದೇವನು ತಾನೇ ಅತಿಥಿ ವೇಷದಿಂದ ಬಾಲಾವತಿಯ ಮನೆಗೆ ಬಂದನು. ಕಣ್ವರು ವರ ಶೋಧನೆಗಾಗಿ ಪಕ್ಕದ ಗ್ರಾಮಕ್ಕೆ ಹೋಗಿದ್ದರು.

ಮನೆಗೆ ಬಂದ ಅತಿಥಿಯನ್ನು ಆದರದಿಂದ ಬರಮಾಡಿಕೊಂಡಳು. ಅರ್ಘ್ಯಪಾದ್ಯಾಸನ ನೀಡಿದಳು. ತಿನ್ನಲು ಕೊಡಲು ಅಂದು ಮನೆಯಲ್ಲಿ ಏನೂ ಇರಲಿಲ್ಲ. ಇದನ್ನರಿತ ಅತಿಥಿಯು ತನ್ನಲ್ಲಿದ್ದ ಬದರೀ ಫಲಗಳನ್ನು ನೀಡಿ ಇದನ್ನು ಬೇಯಿಸಿ ನನಗೆ ಆತಿಥ್ಯ ನೀಡು ಎಂದನು. ಬಾಲಾವತಿಯು ಒಲೆಯ ಮೇಲಿಟ್ಟು ಎಷ್ಟು ಬೇಯಿಸಿದರೂ ಬೇಯುತ್ತಿಲ್ಲ. ಕಟ್ಟಿಗೆ, ಇದ್ದಲು ಮುಗಿದಿದ್ದರೂ ಕಬ್ಬಿಣ ಕಡಲೆಯಂತೆ ಕೂತಿದ್ದವು. ಅತಿಥಿಯು ಹಸಿವೆಯಿಂದ ಹೊರಗೆ ಕುಳಿತಿದ್ದಾನೆ. ಕಡೆಗೆ ಅದನ್ನು ಬೇಯಿಸಲು ತನ್ನ ಕಾಲುಗಳನ್ನೇ ಒಲೆಯೊಳಗಿಟ್ಟಳು. ಈಗ ಬೋರೆ ಹಣ್ಣು ಬೇಯಲು ಪ್ರಾರಂಭಿಸಿದವು. ಕಾಲಿನ ಮಾಂಸ, ಚರ್ಮ ಸುಟ್ಟು ವಾಸನೆ ಬರಲು ಪ್ರಾರಂಭವಾಯಿತು. ಇದನ್ನು ಕಂಡ ಅತಿಥಿ ನೋಡಿದ, ಬಾಲಾವತಿಯ ಮೊಳಕಾಲುವರೆಗೂ ಸುಟ್ಟು ಹೋಗಿತ್ತು. ಆದರೂ ಅತಿಥಿಗೆ ಸಮಾಧಾನ ಹೇಳುತ್ತಾ – "ತಡವಾಯಿತು ಕ್ಷಮಿಸಿರಿ. ಇದೋ ಬಡಿಸುತ್ತೇನೆ" ಎಂದಳು. ಬೋರೆ ಫಲಗಳು ಬೆಂದವು. ಆದರೆ ತಂದು ಬಡಿಸಲು ಕಾಲುಗಳೇ ಇಲ್ಲ. ಏಳಲು ಪ್ರಯತ್ನಪಟ್ಟು ಬಿದ್ದುಬಿಟ್ಟಳು.

ಸೂರ್ಯನಾದರೂ ಅವಳ ಅತಿಥಿ ಸತ್ಕಾರವನ್ನು ಮೆಚ್ಚಿ ಪುನಃ ಕಾಲು ಬರುವಂತೆ ಮಾಡಿದನು. ತನ್ನ ರೂಪ ತೋರಿಸಿ – "ಬೇಕಾದ ವರ ಬೇಡು" ಎಂದನು. "ನನಗೆ ಜ್ಞಾನಿಯಾದ ಒಬ್ಬ ವರನನ್ನು ಕರುಣಿಸಿರಿ" ಎಂದು ಪ್ರಾರ್ಥಿಸಿದಳು. ಸೂರ್ಯನು "ಹಾಗೆಯೇ ಆಗಲಿ" ಎಂದು ವರವಿತ್ತನು.

ಇವನ ವರದಿಂದ ಬ್ರಹ್ಮಜ್ಞಾನಿಯಾದ "ಬ್ರಹ್ಮವೇದಿ" ಎಂಬ ವರ ದೊರೆತನು. ವಿವಾಹಾನಂತರ ಇಬ್ಬರೂ ಸೂರ್ಯಾಂತರ್ಯಾಮಿಯನ್ನು ಪೂಜಿಸಿ ತಮ್ಮ ಜನ್ಮ ಸಾರ್ಥಕಗೊಳಿಸಿಕೊಂಡರು. ಈ ಕಥೆಯು ಪದ್ಮಪುರಾಣದಲ್ಲಿದೆ.

ಈ ಕಥೆಯಿಂದ ತಿಳಿಯುವ ವಿಷಯವೆಂದರೆ ಕನ್ಯೆಯರು ಭಗವಂತನನ್ನು ಮೆಚ್ಚಿಸಿಕೊಳ್ಳದೆ, ಯೋಗ್ಯ ಪತಿಯು ದೊರೆಯಲಾರನು ಎಂದು ಪಾರ್ವತಿಯು ಪರಮೇಶ್ವರನಂತಹ ಪತಿಯನ್ನು ಪಡೆಯಲು ಉಗ್ರತಪಸ್ಸು ಮಾಡಿದ್ದಾಳೆ. ಯೋಗ್ಯ ಪತ್ನಿ ದೊರೆಯಲು ಸಹ ಪೂರ್ವಪುಣ್ಯವೆ ಬೇಕು. ಕರ್ದಮರು ಭಗವಂತನನ್ನು ಮೆಚ್ಚಿಸಿಯೇ ದೇವಹೂತಿಯಂತಹ ವಧುವನ್ನು ಪಡೆದರು.

ಅಂಗರಾಜನು ಮೃತ್ಯುವಿನ ಮಗಳಾದ ಸುನೀತಾಳನ್ನು ಬಾಹ್ಯ ಸೌಂದರ್ಯ ನೋಡಿ ವಿವಾಹವಾಗಿದ್ದನು. ಆದರೆ ಅವರ ವಂಶ ಮೃತ್ಯುವಿನದಾಗಿತ್ತು. ಸರಿಯಾಗಿ ವಂಶ ನೋಡದೆ ವಿವಾಹವಾದದ್ದರ ಫಲ ಮಾತಾಮಹ-ಮತಾಮಹಿಯರ ಗುಣಸಂಪರ್ಕ ಹೊಂದಿದ್ದ ವೇನನೆಂಬ ದುಷ್ಟ ಹುಟ್ಟಿದನು. ತಂದೆ-ತಾಯಿ ಒಳ್ಳೆಯವರಾದರೂ ಸಹ ಕುಲವು ಸರಿಯಿಲ್ಲದಿದ್ದರೆ ಆ ಕುಲದ ದುರ್ಗುಣ ಪುತ್ರ ಪೌತ್ರಾದಿಗಳಲ್ಲಿ ಕಂಡುಬರುತ್ತವೆ. ವಿವಾಹವೆಂದರೆ ಸಾವಿರ ವರ್ಷದ ಸಂಬಂಧ ತಾನೆ?

. . . .

## ಸತೀಗಾಲವಿ

ಮಹಾಪತಿವ್ರತೆಯರ ಸಾಲಿನಲ್ಲಿ ಕಾಣುವ ಸ್ತ್ರೀ ಕನ್ಯೆ ಗಾಲವಿಯು ಒಬ್ಬಳು. "ಕುಣಿಗರ್ಗ" ಋಷಿವರೇಣ್ಯನ ಪುತ್ರಿಯಾದ ಗಾಲವಿಯು ಭೂಮಿ, ಗೋ ಮೊದಲಾದ ಈ ಪೃಥ್ವೀಯಲ್ಲಿರುವ ಚರಾಚರ ವಸ್ತುವು ಭಗವಂತನ ತಪಸ್ಸಿನ ಮುಂದೆ ಲವವೆನಿಸಿದ್ದರಿಂದ "ಗಾಲವೀ" ಎನಿಸಿದಳು. ***[ಗವಾದಯಃ ಲವವತ್ ತೃಣವತ್ ಯಸ್ಯಾ ಸಾ]***

ಗೀತೆಯಲ್ಲಿ ಹೇಳಿರುವ ***"ಯಾ ನಿಶಾ ಸರ್ವಭೂತಾನಾಂ ತಸ್ಯಂ ಜಾಗರ್ತೀಸಂಯಮೀ"*** ಎಂಬ ಮಾತಿಗೆ ಸರಿಯಾದ ದೃಷ್ಟಾಂತವೆಂದರೆ ಗಾಲವೀ. ಕುಣಿಗರ್ಗ ತಪಸ್ಸಿನ ಫಲವೆಂಬಂತಿದ್ದ ಗಾಲವೀ ಮಹಾ-ಸುಂದರಿಯೂ ಆಗಿದ್ದಳು.

ವಿವಾಹ ಸಮಯ ಪ್ರಾಪ್ತಳಾದಾಗ ಸಾಂಸಾರಿಕ ನಶ್ವರತೆಯನ್ನು ಮನಗಂಡ

ಅವಳು ಯೋಗ್ಯವರನು ಸಿಕ್ಕಿದರೂ ತಿರಸ್ಕರಿಸಿ ಕನ್ಯೆಯಾಗಿಯೇ ಉಳಿದಳು. ತಂದೆಯು ಮೃತನಾದ ಮೇಲೆ ಗಾಲವಿಯು ಆಶ್ರಮವನ್ನು ಕಟ್ಟಿಕೊಂಡು ಒಬ್ಬಳೇ ತಪಸ್ಸು, ವ್ರತೋಪವಾಸಗಳಿಂದ ಪಿತೃದೇವತೆಗಳನ್ನು ಸಂತೋಷಪಡಿಸಿದಳು. ತಪಸ್ಸಿನಲ್ಲಿಯೇ ತನ್ನ ಯೌವ್ವನ ಪೂರ್ತಿ ಜಾರಿ ಹೋದದ್ದು ತಿಳಿಯಲೇ ಇಲ್ಲ. ತಪೋನಿಷ್ಠೆಯಿಂದ ದೇಹವನ್ನು ಸವೆಸಿದ ತೃಪ್ತಿಯು ಅವಳಿಗಿತ್ತು.

ಒಂದು ದಿನ ಮಹಾನುಭಾವರಾದ ನಾರದ ಮಹರ್ಷಿಗಳು ಅವಳ ಆಶ್ರಮಕ್ಕೆ ಆಗಮಿಸಿದರು. ಅವರನ್ನು ಸಂದರ್ಶಿಸಿ "ತಾನು ತಮ್ಮ ದರ್ಶನದಿಂದ ಪುನೀತನಾದೆನು. ನಾನು ದೇಹತ್ಯಾಗವನ್ನು ಮಾಡಿ ಉತ್ತಮ ಲೋಕಗಳನ್ನು ಸೇರುವೆನು" ಎಂದಳು.

ನಾರದರೆಂದರು – "ವಿವಾಹ ಸಂಸ್ಕಾರವಾಗದಿರುವ ಕನ್ಯೆಯು ಎಷ್ಟೇ ತಪಸ್ವಿಯಾದರೂ ಅವಳಿಗೆ ಉತ್ತಮ ಲೋಕಗಳು ದುರ್ಲಭವೇ ಸರಿ".

**ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಃ ತವಾನಘೇ ।**

ಆದ್ದರಿಂದ ತಪಸ್ಸನ್ನು ಮಾಡಿದ್ದರೂ ಉತ್ತಮೋತ್ತಮ ಲೋಕವನ್ನು ಹೊಂದಲು ವಿವಾಹ ಸಂಸ್ಕಾರದಿಂದ ಸಂಸ್ಕೃತಳಾಗು ಎಂದರು.

ಮಹರ್ಷಿಗಳ ಮಾತಿನಂತೆ ವಿವಾಹವಾಗಲು ತಯಾರಾದ ಗಾಲವಿಯನ್ನು ವಿವಾಹವಾಗಲು ಯಾರು ಮುಂದೆ ಬರಲಿಲ್ಲ. ಕಾರಣ ವೃದ್ಧಾಪ್ಯ ಅವಳನ್ನು ಆವರಿಸಿತ್ತು.

ಗಾಲವಿ ಎದೆಗುಂದದೆ ಹೀಗೆ ಘೋಷಿಸಿದಳು. "ಯಾರು ನನ್ನನ್ನು ವಿವಾಹವಾಗುತ್ತಾರೆಯೋ ಅವರಿಗೆ ನನ್ನ ಪುಣ್ಯದಲ್ಲಿ ಅರ್ಧ ಭಾಗ ನೀಡುವೆನು" ಎಂದು.

ಆದರೂ ಈ ವೃದ್ಧೆಯನ್ನು ಮದುವೆಯಾಗಲು ಯಾರು ಮುಂದೆ ಬರಲಿಲ್ಲ. ಆದರೆ ಗಾಲವನೆಂಬ ಋಷಿ ಕುಮಾರನಾದ ಶೃಂಗವಂತನು ಪುಣ್ಯದ ಲೋಭದಿಂದ ಈ ವಿವಾಹಕ್ಕೆ ಒಪ್ಪಿದನು. ಆದರೆ ಅವನೂ ಒಂದು ನಿಯಮವನ್ನು ಹಾಕಿದನು.

"ವಿವಾಹವಾದ ಮೇಲೆ ನೀನು ಒಂದು ದಿನ ಮಾತ್ರ ನನ್ನ ಜೊತೆಗಿರಲು ಅವಕಾಶ. ನಂತರ ನನ್ನ ದಾರಿ ನಾನು ಹಿಡಿಯುವೆ" ಎಂದನು.

ಇವನ ವರದಿಂದ ಬ್ರಹ್ಮಜ್ಞಾನಿಯಾದ "ಬ್ರಹ್ಮವೇದಿ" ಎಂಬ ವರ ದೊರೆತನು. ವಿವಾಹಾನಂತರ ಇಬ್ಬರೂ ಸೂರ್ಯಾಂತರ್ಯಾಮಿಯನ್ನು ಪೂಜಿಸಿ ತಮ್ಮ ಜನ್ಮ ಸಾರ್ಥಕಗೊಳಿಸಿಕೊಂಡರು. ಈ ಕಥೆಯು ಪದ್ಮಪುರಾಣದಲ್ಲಿದೆ.

ಈ ಕಥೆಯಿಂದ ತಿಳಿಯುವ ವಿಷಯವೆಂದರೆ ಕನ್ಯೆಯರು ಭಗವಂತನನ್ನು ಮೆಚ್ಚಿಸಿಕೊಳ್ಳದೆ, ಯೋಗ್ಯ ಪತಿಯು ದೊರೆಯಲಾರನು ಎಂದು ಪಾರ್ವತಿಯು ಪರಮೇಶ್ವರನಂತಹ ಪತಿಯನ್ನು ಪಡೆಯಲು ಉಗ್ರತಪಸ್ಸು ಮಾಡಿದ್ದಾಳೆ. ಯೋಗ್ಯ ಪತ್ನಿ ದೊರೆಯಲು ಸಹ ಪೂರ್ವಪುಣ್ಯವೆ ಬೇಕು. ಕರ್ದಮರು ಭಗವಂತನನ್ನು ಮೆಚ್ಚಿಸಿಯೇ ದೇವಹೂತಿಯಂತಹ ವಧುವನ್ನು ಪಡೆದರು.

ಅಂಗರಾಜನು ಮೃತ್ಯುವಿನ ಮಗಳಾದ ಸುನೀತಾಳನ್ನು ಬಾಹ್ಯ ಸೌಂದರ್ಯ ನೋಡಿ ವಿವಾಹವಾಗಿದ್ದನು. ಆದರೆ ಅವರ ವಂಶ ಮೃತ್ಯುವಿನದಾಗಿತ್ತು. ಸರಿಯಾಗಿ ವಂಶ ನೋಡದೆ ವಿವಾಹವಾದದ್ದರ ಫಲ ಮಾತಾಮಹ–ಮತಾಮಹಿಯರ ಗುಣಸಂಪರ್ಕ ಹೊಂದಿದ್ದ ವೇನನೆಂಬ ದುಷ್ಟ ಹುಟ್ಟಿದನು. ತಂದೆ–ತಾಯಿ ಒಳ್ಳೆಯವರಾದರೂ ಸಹ ಕುಲವು ಸರಿಯಿಲ್ಲದಿದ್ದರೆ ಆ ಕುಲದ ದುರ್ಗುಣ ಪುತ್ರ ಪೌತ್ರಾದಿಗಳಲ್ಲಿ ಕಂಡುಬರುತ್ತವೆ. ವಿವಾಹವೆಂದರೆ ಸಾವಿರ ವರ್ಷದ ಸಂಬಂಧ ತಾನೆ?

. . . .

## ಸತೀಗಾಲವಿ

ಮಹಾಪತಿವ್ರತೆಯರ ಸಾಲಿನಲ್ಲಿ ಕಾಣುವ ಸ್ತ್ರೀ ಕನ್ಯೆ ಗಾಲವಿಯು ಒಬ್ಬಳು. "ಕುಣಿಗರ್ಗ" ಋಷಿವರೇಣ್ಯನ ಪುತ್ರಿಯಾದ ಗಾಲವಿಯು ಭೂಮಿ, ಗೋ ಮೊದಲಾದ ಈ ಪೃಥ್ವೀಯಲ್ಲಿರುವ ಚರಾಚರ ವಸ್ತುವು ಭಗವಂತನ ತಪಸ್ಸಿನ ಮುಂದೆ ಲವವೆನಿಸಿದ್ದರಿಂದ "ಗಾಲವೀ" ಎನಿಸಿದಳು. ***[ಗವಾದಯಃ ಲವವತ್ ತೃಣವತ್ ಯಸ್ಯಾ ಸಾ]***

ಗೀತೆಯಲ್ಲಿ ಹೇಳಿರುವ ***"ಯಾ ನಿಶಾ ಸರ್ವಭೂತಾನಾಂ ತಸ್ಯಂ ಜಾಗರ್ತೀಸಂಯಮೀ"*** ಎಂಬ ಮಾತಿಗೆ ಸರಿಯಾದ ದೃಷ್ಟಾಂತವೆಂದರೆ ಗಾಲವೀ. ಕುಣಿಗರ್ಗ ತಪಸ್ಸಿನ ಫಲವೆಂಬಂತಿದ್ದ ಗಾಲವೀ ಮಹಾ–ಸುಂದರಿಯೂ ಆಗಿದ್ದಳು.

ವಿವಾಹ ಸಮಯ ಪ್ರಾಪ್ತಳಾದಾಗ ಸಾಂಸಾರಿಕ ನಶ್ವರತೆಯನ್ನು ಮನಗಂಡ

ಅವಳು ಯೋಗ್ಯವರನು ಸಿಕ್ಕಿದರೂ ತಿರಸ್ಕರಿಸಿ ಕನ್ಯೆಯಾಗಿಯೇ ಉಳಿದಳು. ತಂದೆಯು ಮೃತನಾದ ಮೇಲೆ ಗಾಲವಿಯು ಆಶ್ರಮವನ್ನು ಕಟ್ಟಿಕೊಂಡು ಒಬ್ಬಳೇ ತಪಸ್ಸು, ವ್ರತೋಪವಾಸಗಳಿಂದ ಪಿತೃದೇವತೆಗಳನ್ನು ಸಂತೋಷಪಡಿಸಿದಳು. ತಪಸ್ಸಿನಲ್ಲಿಯೇ ತನ್ನ ಯೌವ್ವನ ಪೂರ್ತಿ ಜಾರಿ ಹೋದದ್ದು ತಿಳಿಯಲೇ ಇಲ್ಲ. ತಪೋನಿಷ್ಠೆಯಿಂದ ದೇಹವನ್ನು ಸವೆಸಿದ ತೃಪ್ತಿಯು ಅವಳಿಗಿತ್ತು.

ಒಂದು ದಿನ ಮಹಾನುಭಾವರಾದ ನಾರದ ಮಹರ್ಷಿಗಳು ಅವಳ ಆಶ್ರಮಕ್ಕೆ ಆಗಮಿಸಿದರು. ಅವರನ್ನು ಸಂದರ್ಶಿಸಿ "ತಾನು ತಮ್ಮ ದರ್ಶನದಿಂದ ಪುನೀತನಾದೆನು. ನಾನು ದೇಹತ್ಯಾಗವನ್ನು ಮಾಡಿ ಉತ್ತಮ ಲೋಕಗಳನ್ನು ಸೇರುವೆನು" ಎಂದಳು.

ನಾರದರೆಂದರು – "ವಿವಾಹ ಸಂಸ್ಕಾರವಾಗದಿರುವ ಕನ್ಯೆಯು ಎಷ್ಟೇ ತಪಸ್ವಿಯಾದರೂ ಅವಳಿಗೆ ಉತ್ತಮ ಲೋಕಗಳು ದುರ್ಲಭವೇ ಸರಿ".

**ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಃ ತವಾನಘೇ ।**

ಆದ್ದರಿಂದ ತಪಸ್ಸನ್ನು ಮಾಡಿದ್ದರೂ ಉತ್ತಮೋತ್ತಮ ಲೋಕವನ್ನು ಹೊಂದಲು ವಿವಾಹ ಸಂಸ್ಕಾರದಿಂದ ಸಂಸ್ಕೃತಳಾಗು ಎಂದರು.

ಮಹರ್ಷಿಗಳ ಮಾತಿನಂತೆ ವಿವಾಹವಾಗಲು ತಯಾರಾದ ಗಾಲವಿಯನ್ನು ವಿವಾಹವಾಗಲು ಯಾರು ಮುಂದೆ ಬರಲಿಲ್ಲ. ಕಾರಣ ವೃದ್ಧಾಪ್ಯ ಅವಳನ್ನು ಆವರಿಸಿತ್ತು.

ಗಾಲವಿ ಎದೆಗುಂದದೆ ಹೀಗೆ ಘೋಷಿಸಿದಳು. "ಯಾರು ನನ್ನನ್ನು ವಿವಾಹವಾಗುತ್ತಾರೆಯೋ ಅವರಿಗೆ ನನ್ನ ಪುಣ್ಯದಲ್ಲಿ ಅರ್ಧ ಭಾಗ ನೀಡುವೆನು" ಎಂದು.

ಆದರೂ ಈ ವೃದ್ಧೆಯನ್ನು ಮದುವೆಯಾಗಲು ಯಾರು ಮುಂದೆ ಬರಲಿಲ್ಲ. ಆದರೆ ಗಾಲವನೆಂಬ ಋಷಿ ಕುಮಾರನಾದ ಶೃಂಗವಂತನು ಪುಣ್ಯದ ಲೋಭದಿಂದ ಈ ವಿವಾಹಕ್ಕೆ ಒಪ್ಪಿದನು. ಆದರೆ ಅವನೂ ಒಂದು ನಿಯಮವನ್ನು ಹಾಕಿದನು.

"ವಿವಾಹವಾದ ಮೇಲೆ ನೀನು ಒಂದು ದಿನ ಮಾತ್ರ ನನ್ನ ಜೊತೆಗಿರಲು ಅವಕಾಶ. ನಂತರ ನನ್ನ ದಾರಿ ನಾನು ಹಿಡಿಯುವೆ" ಎಂದನು.

**ಯದಿ ಏಕರಾತ್ರಂ ವಸ್ತವ್ಯಂ ತ್ವಯಾ ಸಹ ಮಯೇತ ಹ ॥**

ಈ ನಿಯಮವನ್ನು ಒಪ್ಪಿದ ಗಾಲವಿ ಹಾಗೂ ಗಾಲವ ಪುತ್ರ ಶೃಂಗವಂತ-ನಿಗೂ ವಿವಾಹ ನಡೆಯಿತು. ವಿವಾಹದ ರಾತ್ರಿ ತನ್ನ ತಪಶ್ಶಕ್ತಿಯಿಂದ ತರುಣಿಯಾದಳು. ದಿವ್ಯಾಭರಣಭೂಷಿತಳಾಗಿ ಪತಿಯ ಮುಂದೆ ನಿಂತಾ ಅವಳನ್ನು ನೋಡಿ ಶೃಂಗವಂತನಿಗೇ ಆಶ್ಚರ್ಯವಾಯಿತು.

ಅಂದು ರಾತ್ರಿ ಪತಿ ಸೇವೆಯನ್ನು ಚೆನ್ನಾಗಿ ಮಾಡಿ ಪತ್ಯಂತರ್ಯಾಮಿಯನ್ನು ಸಂತುಷ್ಟನಾಗುವಂತೆ ಮಾಡಿದಳು.

ಮರುದಿನ ಪ್ರಾತಃ ಕಾಲದಲ್ಲಿ ಪತಿಗಿಂತ ಮೊದಲೇ ಎದ್ದು ಪಾದಗಳಿಗೆ ಅಭಿವಂದಿಸಿ, "ಸ್ವಾಮಿ, ನನ್ನನ್ನು ವಿವಾಹವಾಗಿ ನನ್ನನ್ನು ಕೃತಾರ್ಥಳನ್ನಾಗಿ ಮಾಡಿರುವಿರಿ ನಿಮಗೆ ಮಂಗಳ ಉಂಟಾಗಲಿ. ನನಗೆ ಹೊರಡಲು ಅನುಮತಿಯನ್ನು ನೀಡಿ" ಎಂದು ಪ್ರಾರ್ಥಿಸಿ ಹೊರಟಳು.

ಈ ಗಾಲವಿಯ ಕಥೆಯಿಂದ ಸ್ತ್ರೀಯರು ತಿಳಿಯಬೇಕಾದ ವಿಷಯವೆಂದರೆ ಸ್ತ್ರೀಯರಿಗೆ ವಿವಾಹ ಸಂಸ್ಕಾರವಿಲ್ಲದಿದ್ದರೆ ಉತ್ತಮ ಗತಿಗಳಿಲ್ಲವಾದ್ದರಿಂದ ಬಂದಿರುವ ವರರನ್ನು ತಿರಸ್ಕರಿಸಿ ಹಾಗೆಯೇ ಉಳಿಯಬಾರದು. ಗುಣಶ್ರೇಷ್ಠನಾದ ವರನು ಲಭಿಸಿದಾಗ "ಪಾಲಿಗೆ ಬಂದಷ್ಟೇ ಪಂಚಾಮೃತ" ಎಂದು ವಿವಾಹವಾಗಿ ಪತಿಯ ಅಂತರ್ಯಾಮಿಯನ್ನು ಸಂತೋಷ-ಪಡಿಸಬೇಕು. ಬ್ರಾಹ್ಮಣನ ದೇಹ ಕ್ಷುದ್ರಕಾಮನೆಗಾಗಿ ಪಡೆದದ್ದಲ್ಲ. ತಪಸ್ಸು ಮಾಡಿ ಭಗವಂತನನ್ನು ಒಲಿಸಲೆಂದು.

**ಬ್ರಾಹ್ಮಣಸ್ಯ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।**
**ಕೃಚ್ಛ್ರಾಯ ತಪಸೇ ಚೇಹ ತದಾನಂತ್ಯಾಯ ಕಲ್ಪತೇ ॥**

ಆದ್ದರಿಂದ ಭಗವಂತನನ್ನು ಸಂತೋಷಪಡಿಸಲು ಪ್ರತೀಕಕ್ಕಾಗಿ ಮಾತ್ರ ವಿವಾಹ ಭೋಗಕ್ಕಾಗಿ ಅಲ್ಲ.

. . . .

## ಸತೀ ಅರುಂಧತೀ

ಬ್ರಹ್ಮದೇವರ ಪುತ್ರ ವಸಿಷ್ಠರ ಧರ್ಮಪತ್ನಿಯೇ ಅರುಂಧತೀ. ಪ್ರಾತಃಕಾಲದಲ್ಲಿ ಸ್ಮರಿಸಬೇಕಾದ ಪತಿವ್ರತಾ ಸ್ತ್ರೀಯರಲ್ಲಿ ಅಗ್ರಗಣ್ಯಳೂ, ಅಗ್ರಮಾನ್ಯಳೂ ಆದವಳು ಅರುಂಧತೀದೇವಿ.

ನೂತನವಾಗಿ ವಿವಾಹವಾದ ವಧೂವರರಿಗೆ ಅರುಂಧತೀ ದರ್ಶನ ಮಾಡಿಸುವ ಪದ್ಧತಿಯಿದೆ. ಇವರ ದರ್ಶನ ವಧೂವರರಿಗೆ ಸೌಭಾಗ್ಯ-ದಾಯಕವೆನಿಸಿದೆ.

ಅರುಂಧತಿಯ ಗುಣಗಳು ಲೋಕೋತ್ತರವಾಗಿದ್ದು ಪ್ರತಿಯೊಬ್ಬರೂ ಅವಳ ಗುಣಗಳನ್ನು ಅನುಕರಿಸಲು ಯೋಗ್ಯವಾಗಿರುವಂತಹದ್ದು. ವಸಿಷ್ಠ ಪತ್ನಿಯರಾದ ಅರುಂಧತಿಯ ಪಾತಿವ್ರತ್ಯವನ್ನು ಅನುಕರಿಸಲು ಯಾರಿಗೂ ಸಾಧ್ಯವಾಗುವುದಿಲ್ಲ. ಈ ಇದಕ್ಕೆ ಪೂರಕವಾಗಿ ಒಂದು ಆಖ್ಯಾಯಿಕೆ ಇದೆ.

ವಸಿಷ್ಠರೇ ಮೊದಲಾದ ಸಪ್ತ ಋಷಿಗಳು ಒಂದು ಮಹಾನ್ ಯಜ್ಞವನ್ನು ಪ್ರಾರಂಭಿಸಿದ್ದರು.

ಇಂದ್ರಾದಿ ದೇವತೆಗಳೇ ಮೂರ್ತಿಮತ್ತರಾಗಿ ಆಹುತಿ ಸ್ವೀಕಾರಕ್ಕೆ ಬಂದಿಳಿದ್ದರು ಎಂದ ಮೇಲೆ ಯಾಗದ ಮಹತ್ವ ಹೇಳಬೇಕಾಗಿಯೇ ಇಲ್ಲ.

ಮಂತ್ರ ಪೂತವಾದ ಆಹುತಿಗಳಿಂದ ಸಮೃದ್ಧನಾದ ಅಗ್ನಿಯು, ಯಜ್ಞಕುಂಡದ ಸುತ್ತಲೂ ಕುಳಿತಿರುವ ಸಪ್ತರ್ಷಿಗಳ ಪತ್ನಿಯರ ಮೇಲೆ ದೃಷ್ಟಿ ಹಾಯಿಸಿದನು. ಅವರ ಸೌಂದರ್ಯಕ್ಕೆ ಮಾರು ಹೋದ ಅಗ್ನಿಯು ವಿರಹವೇದನೆಯಿಂದ ಬಳಲಿ ಪ್ರಾಣತ್ಯಾಗಕ್ಕೂ ಸಿದ್ಧನಾದನು. ಇದನ್ನು ಗಮನಿಸಿದ ದಕ್ಷ ಪ್ರಜಾಪತಿಯ ಪುತ್ರಿ ಅಗ್ನಿಯ ಪತ್ನಿಯಾದ ಸ್ವಾಹಾ ದೇವಿಯು ತನ್ನ ಅಭಿಲಾಷೆಯನ್ನು ಪೂರ್ಣಗೊಳಿಸಲು ಕಾಮರೂಪಿಣಿಯಾಗಿ ಸಪ್ತರ್ಷಿಯರ ವೇಷಧರಿಸಿ ಅಗ್ನಿಯನ್ನು ಸಂತೋಷಪಡಿಸಿದಳು. ತಾನು ಸಂತಸ ಹೊಂದಿದಳು. ಅಗ್ನಿಯಾದರೂ ಋಷಿ ಪತ್ನಿಯರೆಂದೆ ತಿಳಿದು ರಮಿಸಿದನು.

ಆರು ಋಷಿ ಪತ್ನಿಯರ ವೇಷಧರಿಸಿ ಸುಖ ಹೊಂದಿದ ಸ್ವಾಹಾದೇವಿಯು ಏಳನೇ ದಿನ ಅರುಂಧತಿಯ ವೇಷವನ್ನು ಹೊಂದಲು ತನ್ನ ಕಾಮರೂಪ ವಿದ್ಯೆಯನ್ನು ಉಪಯೋಗಿಸಿದಳು. ಆದರೆ ಎಷ್ಟೇ ಪ್ರಯತ್ನಪಟ್ಟರೂ ಅರುಂಧತಿ ನೆರಳನ್ನು ಅನುಕರಿಸಲೂ ಸಾಧ್ಯವಾಗಲಿಲ್ಲ. ಇದಕ್ಕೆ ಕಾರಣ ಅರುಂಧತಿಯ ಉಚ್ಚಮಟ್ಟದ ಪಾತಿವ್ರತ್ಯ ಪ್ರಭಾವವೇ.

ಇದರ ಪರಿಣಾಮವಾಗಿ ಸಪ್ತರ್ಷಿಗಳಲ್ಲಿ ಆರು ಋಷಿಗಳು ಅರುಂಧತಿಯ ಪಾತಿವ್ರತ್ಯದ ಮಟ್ಟವನ್ನು ತಲುಪದಿರುವ ತಮ್ಮ ಪತ್ನಿಯರನ್ನು ತಮ್ಮ ಜೊತೆಗೆ ಇರಿಸಿಕೊಳ್ಳಲು ಇಷ್ಟಪಡಲಿಲ್ಲ. ವಸಿಷ್ಠರ ಜೊತೆಗೆ ಅರುಂಧತಿಯು

ಬಂದು ಸೇರಿದಳು. ಆದ್ದರಿಂದಲೇ ಸಪ್ತರ್ಷಿಮಂಡಲದಲ್ಲಿ ಸಪ್ತಋಷಿಗಳಲ್ಲಿ ವಸಿಷ್ಠರ ಪತ್ನಿ ಅರುಂಧತಿ ಹೊರತು ಬೇರಾವ ಋಷಿಪತ್ನಿಯರು ನೋಡಲು ಸಿಗುವುದಿಲ್ಲ. ಇಂತಹ ಪಾತಿವ್ರತ್ಯವು ಇತರ ಸ್ತ್ರೀಯರಿಗೂ ಬರುವಂತಾಗಲಿ ಎಂದೇ ಅರುಂಧತಿ ವಸಿಷ್ಠದರ್ಶನವು ವಿಹಿತವಾಗಿದೆ.

ಸಪ್ತರ್ಷಿ ಮಂಡಲದ ಬಾಲದಲ್ಲಿ ಎರಡನೇ ನಕ್ಷತ್ರವೇ ವಸಿಷ್ಠ. ವಸಿಷ್ಠ ಕೆಳಗೆ ಸಣ್ಣ ನಕ್ಷತ್ರವಾಗಿ ಅರುಂಧತಿಯು ಕಂಗೊಳಿಸುತ್ತಿದ್ದಾಳೆ.

ಇನ್ನೊಂದು ಬಾರಿ ಹನ್ನೆರಡು ವರ್ಷ ಬರಗಾಲವುಂಟಾಯಿತು. ಋಷಿಗಳೆಲ್ಲರೂ ಆಹಾರ ತರಲು ಕಾಡಿಗೆ ಹೋದರು. ಆದರೆ ಕಾಡಿನಲ್ಲೇ ಇದ್ದು ಬಿಟ್ಟರು.

ಇತ್ತ ವಸಿಷ್ಠರ ಆಶ್ರಮದಲ್ಲಿ ಅರುಂಧತಿ ಒಬ್ಬಳೇ ಇದ್ದಳು. ರುದ್ರದೇವನು ಭಿಕ್ಷೆಗಾಗಿ ಬಂದನು. ಆದರೆ ಆಶ್ರಮದಲ್ಲಿ ಏನೂ ಇರಲಿಲ್ಲ. ಆದರೂ ಬದರೀಫಲಗಳನ್ನೇ ಅತಿಥಿಗೆ ನೀಡಿದಳು ಅರುಂಧತಿ. ಅತಿಥಿಯಾದರೂ ಅದನ್ನೇ ಬೇಯಿಸಿ ಪಕ್ವ ಮಾಡಿಕೊಟ್ಟರೆ ಸಂತೋಷವಾಗುತ್ತದೆ ಎಂದನು. ಹಾಗೆ ಆಗಲಿ ಎಂದು ಬೇಯಿಸಲು ಪ್ರಾರಂಭಿಸಿದಳು. ಆದರೆ ಗಟ್ಟಿಯಾದ ಬೀಜವಿರುವ ಬದರೀಫಲ ಹಣ್ಣು ಬೇಯಲೇ ಇಲ್ಲ. ಅತಿಥಿಗಳು ಕೋಪಗೊಂಡರೆಂದು ಹೊರಬಂದು. "ಸ್ವಾಮಿ ಹಣ್ಣು ಬೇಯುವವರೆಗೂ ತಾವು ನನಗೆ ಹರಿಕಥಾ ಶ್ರವಣ ಮಾಡಿಸಿದರೆ ಕೃತಾರ್ಥಳಾಗುವೆ" ಎಂದಳು. ಅತಿಥಿಯಾದರೂ ಸಂತುಷ್ಟನಾಗಿ ವೇದವೇದಾಂತಗಳ ಪ್ರವಚನವನ್ನು ಮಾಡಿಸಿದನು. ಪ್ರವಚನ ನಿರಂತರವಾಗಿ ಹನ್ನೆರಡು ವರ್ಷ ನಡೆಯಿತು. ಇಷ್ಟರಲ್ಲಿ ಬರಗಾಲ ಹೋಗಿ ಸುವೃಷ್ಟಿಯಾಯಿತು.

ಆಗ ವಸಿಷ್ಠರೇ ಮೊದಲಾದ ಸಪ್ತರ್ಷಿಗಳು ಹಣ್ಣು ಹಂಪಲುಗಳನ್ನು ತಂದಿದ್ದರು. ಇವುಗಳನ್ನು ಅತಿಥಿಯ ಮುಂದಿಟ್ಟು – ಸ್ವಾಮಿ ತಮ್ಮನ್ನು ಬಹಳ ಕಾಲ ಕಾಯಿಸಿ ನೋಯಿಸಿದೆ. ನನ್ನನ್ನು ಕ್ಷಮಿಸಿ ಎಂದು ಬೇಡಿದಳು. ಹಾಗೂ ನಮಸ್ಕಾರ ಹಾಕಿದಳು. ನಮಸ್ಕರಿಸಿ ಎದ್ದಾಗ ಸಾಕ್ಷಾತ್ ತ್ರಿಶೂಲಧರನಾದ, ವಾಮದೇವ ಉಮಾಮನೋಹರನೇ ನಿಂತಿದ್ದನು. ಸಪ್ತಋಷಿಗಳು ರುದ್ರದೇವನಿಗೆ ನಮಸ್ಕರಿಸಿದರು. ರುದ್ರದೇವರು ಹೀಗೆಂದರು.

ನೀವು 12 ವರ್ಷ ತಪಸ್ಸು ಮಾಡಿದ್ದು, ಈ ಗುಡಿಸಲಲ್ಲಿ ಮಾಡಿದ

ಅರುಂಧತಿಯ ತಪಸ್ಸಿಗೆ ಸಮವಾಗಲಾರೆಂದರು. ಆದರೂ ಅರುಂಧತಿಯು, ಇವೆಲ್ಲವೂ ನನ್ನ ಪತಿಯ ಸೇವೆಯಿಂದ ಬಂದದ್ದು ಎಂದು ತಿಳಿದಿದ್ದಳು.

ಹೀಗೆ ಪಾತಿವ್ರತ್ಯ, ಅತಿಥಿಸೇವೆ, ಶ್ರವಣದಕ್ಷತೆ, ಶೀಲ ಸೌಜನ್ಯಗಳಿಂದ ಮೆರೆದ ಅರುಂಧತಿಯು ಸರ್ವರಿಂದಲು ಮಾನ್ಯಳಾಗಿದ್ದಾಳೆ.

ಅರುಂಧತಿಯ ಕಥೆಯಿಂದ ಸ್ತ್ರೀಯರು ತಿಳಿಯಬೇಕಾದದ್ದು.

ಬೇರೆ ಯಾವ ಸ್ತ್ರೀಯು ತನ್ನನ್ನು ಅನುಕರಿಸಲು ಸಾಧ್ಯವಾಗದಷ್ಟು ಪಾತಿವ್ರತ್ಯದಿಂದ ಮೆರೆಯಬೇಕು. ಏನೇ ಅವಕಾಶ ದೊರೆತಾಗಲೂ ಶಾಸ್ತ್ರ ಶ್ರವಣವನ್ನು ಬಿಡಬಾರದು. ಏನೇ ಗೌರವ, ಕೀರ್ತಿ ಲಭಿಸಿದರೂ ಪತಿಯ ಸೇವೆಯ ಅನುಗ್ರಹದ ಫಲವೆಂದೇ ತಿಳಿಯಬೇಕು. ಪತಿಗೆ ಅವಮಾನವಾಗುವ ಕಾರ್ಯವನ್ನು ಎಂದೂ ಮಾಡಬಾರದು.

. . . .

## ಸತೀ ಸುಕನ್ಯಾ

ಬ್ರಹ್ಮರ್ಷಿ ಭೃಗುವಿನಿಂದ ಪುಲೋಮಾ ಎಂಬ ಪತ್ನಿಯಲ್ಲಿ ಜನಿಸಿದ ಮಹಾತ್ಮರೇ ಚ್ಯವನ ಋಷಿ. ಗರ್ಭದಿಂದ ಜಾರಿ ಚ್ಯುತರಾಗಿ ಬಿದ್ದದ್ದರಿಂದ ಚ್ಯವನ ನಾಮಧೇಯರು.

ಇವರ ತಪಸ್ಸಿನಲ್ಲಿ ತೊಡಗಿರುವಾಗ ಹುತ್ತ ಬೆಳೆಯಿತು. ಆದರೆ ನೇತ್ರಗಳು ಮಾತ್ರ ದೇದೀಪ್ಯಮಾನವಾಗಿದ್ದವು.

ಶರ್ಯಾತಿರಾಜನ ಪುತ್ರಿಯು ಸುಕನ್ಯೇ. ಶರ್ಯಾತಿಯು ಪತ್ನಿಪುತ್ರ ಸಮೇತರಾಗಿ ವನವಿಹಾರಕ್ಕೆ ಹೊರಟನು. ಸುಕನ್ಯೆಯೂ ಇತರ ಕನ್ಯೆಯರಿಂದ ಪುಷ್ಪ ಸಂಚಯಕ್ಕೆ ತೊಡಗಿದ್ದಳು. ಚ್ಯವನ ಋಷಿಗಳಿರುವ ಹುತ್ತದ ಹತ್ತಿರ ಬಂದು ಚಪಲತೆಯಿಂದ ಆ ಪ್ರಕಾಶಮಾನವಾದ ಕಣ್ಣುಗಳನ್ನು ಮುಳ್ಳಿನಿಂದ ಚುಚ್ಚಿದಳು.

ಆ ಸ್ಥಳದಿಂದ ರಕ್ತವು ಸೊರತೊಡಗಿದ್ದನ್ನು ನೋಡಿ ಗಾಬರಿಯಾದಳು. ಚ್ಯವನರ ತಪಸ್ಸು ಭಂಗವಾಗಿ ರಾಜರ ಸೈನಿಕರಿಗೆ ಮಲಮೂತ್ರಗಳು ನಿಂತು ಹೋದವು. ಕಾರಣ ವಿಚಾರಿಸಿದಾಗ ಸುಕನ್ಯೆಯರು ತಾನು ಮಾಡಿದ ಕಾರ್ಯವನ್ನು ತಿಳಿಸಿ ಕ್ಷಮೆ ಕೇಳಿದಳು.

ಚ್ಯವನ ಋಷಿಗಳಾದರೂ ಸುಕನ್ಯೆಯನ್ನು ತನಗೆ ವಿವಾಹ ಮಾಡಿಕೊಡುವಿ–ರಾದರೆ ನನ್ನ ಈ ನೋವನ್ನು ಸಹಿಸಿ ಸೈನಿಕರು ಮೊದಲಿನಂತಾಗುವರೆಂದರು. ತಂದೆಯ ಮಾತಿನಂತೆ ಇನ್ನೊಂದು ಮಾತನ್ನಾಡದೆ ವೃದ್ಧರಾದ ಚ್ಯವನರನ್ನು ವಿವಾಹವಾಗಲು ಒಪ್ಪಿದಳು. ವಿವಾಹವಾದ ಮೇಲೆ ತ್ರಿಕರಣ ಶುದ್ಧಿಯಿಂದ ಪತಿಯನ್ನು ಉಪಚರಿಸಿದಳು.

ನಿರಂತರ ಸೇವನೆಯಿಂದ ದೇಹ ಸೊರಗಿದರೂ ಪತಿಯೇ ಪರದೈವವೆಂದು ಸೇವೆ ಮಾಡಿದಳು.

ಪತಿಯ ಸೇವೆ ಹಾಗೂ ಅತಿಥಿ ಅಭ್ಯಾಗತರ ಸೇವೆ ನಿರಂತರ ನಡೆಯುತ್ತಿತ್ತು. ಒಂದು ದಿನ ದೇವ ವೈದ್ಯರಾದ ಅಶ್ವಿನೀ ದೇವತೆಗಳು ಆಶ್ರಮಕ್ಕೆ ಬಂದರು. ಅವರನ್ನು ಶ್ರದ್ಧೋಪಚಾರಗಳಿಂದ ಪೂಜಿಸಿದಳು.

ಅವಳ ಆಂತರಿಕ ಭಾವವನ್ನು ಪರೀಕ್ಷಿಸಲು ಹೀಗೆಂದರು. "ಸುಕನ್ಯೆ ನಿನ್ನಂತಹ ಸುಂದರಿ, ವೃದ್ಧನಾದ ಶಕ್ತಿಗುಂದಿರುವ ಚ್ಯವನರನ್ನು ಮದುವೆಯಾಗಿರುವೆ. ಚ್ಯವನನು ಸದ್ಯದಲ್ಲೇ ಮರಣೋನ್ಮುಖನಾದರೆ ನಿನಗೆ ವೈಧವ್ಯ ಖಂಡಿತ. ಆದ್ದರಿಂದ ನಮ್ಮೀರ್ವರಲ್ಲಿ ಒಬ್ಬರನ್ನು ವರಿಸಿ ಸುಖದಿಂದಿರು" ಎಂದರು.

ಈ ಮಾತನ್ನು ಕೇಳಿದ ಸುಕನ್ಯೆಯು ಶಾಂತಂ ಪಾಪಂ ಎಂದು ಕಿವಿ ಮುಚ್ಚಿಕೊಂಡು ಹೀಗೆಂದಳು – ಪೂಜ್ಯರೇ, ನಮ್ಮಂತಹ ಪಾಮರರು ಹಾದಿತಪ್ಪಿದಾಗ ಸರಿಯಾದ ಮಾರ್ಗದರ್ಶನವನ್ನು ಮಾಡಬೇಕಾದ ತಾವೇ ಹೀಗೆ ಹಾದಿ ತಪ್ಪಿದರೆ ಹೇಗೆ? ಪತಿಯು ವೃದ್ಧನಾದರೂ ರೋಗಿಷ್ಠನಾದರೂ, ನಿರ್ಧನಿಕನಾದರೂ ಪತಿವ್ರತೆಯರಿಗೆ ಪೂಜ್ಯನಲ್ಲವೆ? ಭೋಗ ವಿಲಾಸದಿಂದ ಬರುವ ಸುಖಕ್ಕಿಂತ ಆಧ್ಯಾತ್ಮಿಕ ಸಾಧನೆಯಲ್ಲಿ ಲಭಿಸುವ ತೃಪ್ತಿಯೇ ಸಾಕು ಎಂದಳು. ಆಗ ಅಶ್ವಿನಿದೇವತೆಗಳು "ಅಮ್ಮ ಸುಕನ್ಯೆ, ನೀನು ಧನ್ಯಳಮ್ಮ. ನಿನ್ನ ಪತಿ ಸೇವೆ ಅಮೋಘವಾದದ್ದು, ನಿಷ್ಕಲ್ಮಶವಾದದ್ದು, ನಿನ್ನನ್ನು ನೋಡಿ ನಾವು ಧನ್ಯರಾದೆವಮ್ಮ" ಎಂದು ಪ್ರಶಂಸಿಸಿದರು.

ಈ ಮಧ್ಯದಲ್ಲಿ ಚ್ಯವನರು ಆಗಮಿಸಿದರು. ಸುಕನ್ಯೆಯು ಮಾಡಿದ ಅತಿಥಿ ಸೇವೆಯನ್ನು ಕೇಳಿ ಮುದಗೊಂಡರು. ಅತಿಥಿ ಸೇವೆಯಿಂದ ತುಷ್ಟರಾದ ಅಶ್ವಿನೀ ದೇವತೆಗಳು ದಂಪತಿಗಳಿಗೆ ವರವನ್ನು ಕೊಡಲು ಮುಂದಾದರು.

ಚ್ಯವನರು – ನನ್ನನ್ನು ತರುಣನ್ನಾಗಿ ಮಾಡಿ ಎಂದರು. ಬದಲಾಗಿ ನಿಮಗೆ ಯಜ್ಞಗಳಲ್ಲಿ ಆಹುತಿ ನೀಡುವಂತೆ ಮಾಡುವೆನು ಎಂದರು.

ಸಂತೋಷಗೊಂಡ ಅಶ್ವಿನೀ ದೇವತೆಗಳು ಚ್ಯವನರ ಕೈ ಹಿಡಿದು ಸಿದ್ಧ ರಸದ ಸರೋವರದಲ್ಲಿ ಮುಳುಗಿದರು. ಸುಕನ್ಯೆಯು ದಂಡೆಯಲ್ಲೇ ನಿಂತಿದ್ದಳು. ಸರೋವರಗಳಲ್ಲಿ ಮುಳುಗಿ ಎದ್ದಾಗ ಸ್ಫೂರದ್ರೂಪಿಗಳಾದ ಮೂವರು ಚ್ಯವನರು ನಿಂತಿದ್ದರು. ಸುಕನ್ಯೆಗೆ ತನ್ನ ಪತಿ ಯಾರೆಂದು ತಿಳಿಯಲು ಕಷ್ಟವಾಯಿತು. ಅಶ್ವಿನೀ ದೇವತೆಗಳನ್ನೇ ಶರಣು ಹೊಂದಿದಳು. ದೇವತೆಗಳೇ, ನನ್ನ ಪತಿಯನ್ನು ನನಗೆ ಕೊಡಿರಿ ಎಂದು ಪ್ರಾರ್ಥಿಸಿದಳು. ಅವಳ ಪಾತಿವ್ರತ್ಯದಿಂದ ಸಂತುಷ್ಟರಾಗಿ ಚ್ಯವನನನ್ನು ಕರುಣಿಸಿ ಹೊರಟು ಹೋದರು.

**ದರ್ಶಯಿತ್ವಾ ಪತಿಂ ತಸ್ಯೈ ಪಾತಿವ್ರತ್ಯೇನ ತೋಷಿತೌ ।**

*– ಭಾಗ. 9/4/17*

**ಸುಕನ್ಯಾ ಚ್ಯವನಂ ಪ್ರಾಪ್ಯಂ ಪತಿಂ ಪರಮಕೋಪನಂ ।**
**ಪ್ರೀಣಯಾಮಾಸ ಚಿತ್ತಜ್ಞಾ ಅಪ್ರಮತ್ತಾನುವೃತ್ತಿಭಿಃ ॥**

*– ಭಾಗ –9/4/10*

ತಂದೆಯು ಒಂದು ದಿನ ಚ್ಯವನನನ್ನು ನೋಡಲು ಬಂದಾಗ ತನ್ನ ಮಗಳು ಯುವಕನ ಜೊತೆಗೆ ಇರುವುದನ್ನು ನೋಡಿ ಸಿಟ್ಟಿಗೆದ್ದನು. ಆ ಮುದುಕ ಪತಿಯನ್ನು ಕೊಂದು ಹಾಕಿ, ಈ ಬೇರೆ ಯುವಕನ ಜೊತೆ ಸಂಸಾರ ಮಾಡುತ್ತಿರುವೆಯಾ? ಪತಿಯು ರೋಗಿ, ಜಡ, ವೃದ್ಧನಾದರೂ ಅವನನ್ನು ಬಿಡಬಾರದೆಂದು ತಿಳಿಯದೆ ನಿನಗೆ?

**ದುಃಶ್ಶೀಲೋ ದುರ್ಭಗೋ ವೃದ್ಧೋ ಜಡೋ ರೋಗ್ಯಧನೋಽಪಿ ವಾ ।**

**ಪತಿಃ ಸ್ತ್ರೀಭಿರ್ನ ಹಾತವ್ಯೋ ಲೋಕೇಪ್ಸುಭಿರಪಾತಕೀ ॥**

*– ಭಾಗ –10–29–25*

ಎಂದು ತಲೆಯನ್ನೇ ಖಡ್ಗದಿಂದ ಕತ್ತರಿಸಲು ಮುಂದಾದನು.

ಸುಕನ್ಯೆಯು ತಂದೆಯೇ, ನಿಮ್ಮ ಅಳಿಯಂದಿರೇ ಇವರು – ಅಶ್ವಿನಿಗಳ ಅನುಗ್ರಹದಿಂದ ಈ ರೀತಿ ಯುವಕರಾಗಿದ್ದಾರೆ ಎಂದಾಗ ಸಮೀಪದಿಂದ ನೋಡಿದಾಗ ಅದೇ ಮುಖ, ಅದೇ ಕಣ್ಣಿನ ಚುಚ್ಚಿದರ ಗಾಯ ನೋಡಿ ಸಂತುಷ್ಟನಾಗಿ ಇಬ್ಬರನ್ನು ಮನೆಗೆ ಕರೆಸಿ ಉಪಚರಿಸಿದನು.

ವಿವಾಹ ಕಾಲದಲ್ಲಿಯೂ ತನ್ನ ಪತಿಯು ವೃದ್ಧನಾಗಿ ಅನೇಕಾಭರಣ, ವಸ್ತ್ರಾದಿಗಳನ್ನು ಉಡುಗೊರೆಯಾಗಿ ತಂದೆ ನೀಡಿದಾಗ ಅದನ್ನು ಬೇಡವೆಂದು ತಿರಸ್ಕರಿಸಿದನು. ನನ್ನ ಪತಿಯು ನಾರು ಮಡಿ ಉಟ್ಟು, ಕಣ್ಣುಗಾಯ-ವಾಗಿರುವಾಗ ನಾನು ಯಾರಿಗೋಸ್ಕರ ಈ ವಸ್ತ್ರಗಳನ್ನು ಧರಿಸಲಿ.

**ಅಹಂ ಪತೀನ್ ನಾತಿಶಯೇ ನಾತ್ಸ್ಯೇ ನಾತಿ ವಿಭೂಷಯೇ ॥**

– ಮ.ಭಾ. ವನ *233/38*

ಪತಿಗಾಗಿ ಮಾತ್ರವೇ ಅಲಂಕಾರ, ಬೇರೆಯವರಿಗಾಗಿ ಅಲ್ಲ ಎಂದು ತಿಳಿದಿಲ್ಲವೇ ತಂದೆ ಎಂದು ಧರ್ಮವನ್ನು ಅರುಹಿ ನಿರಾಭರಣ ಸುಂದರಿಯಾಗಿಯೇ ಆಶ್ರಮ ಜೀವನ ನಡೆಸಿದ ಮಹಾನುಭಾವಳು.

ಹೀಗೆ ಪಾತಿವ್ರತ್ಯದಿಂದ ದೀರ್ಘ ಸೌಭಾಗ್ಯ ಪಡೆದು ಹುಟ್ಟಿದ ಹಾಗೂ ಮೆಟ್ಟದ ಉಭಯ ಕುಲವನ್ನು ಉದ್ಧರಿಸಿದ ಮಹಾನುಭಾವಳು ಸುಕನ್ಯೆ.

. . . .

## ಶತರೂಪಾದೇವಿ – ಸ್ತ್ರೀಯರಿಗೆ ಬ್ರಹ್ಮದೇವರ ವರ

ಸ್ವಾಯಂಭುವಮನವು ಹಾಗೂ ಶತರೂಪಾದೇವಿಯರು ಆದರ್ಶದಂಪತಿ-ಯರಾಗಿದ್ದರು. ಸೃಷ್ಟಿಯನ್ನು ಬೆಳೆಸಲೆಂದೆ ಬ್ರಹ್ಮನು ಇವರಿಬ್ಬರನ್ನು ಸೃಷ್ಟಿಸಿದ್ದನ್ನು. ಇದನ್ನರಿತ ಶತರೂಪಾದೇವಿ ಬ್ರಹ್ಮದೇವನನ್ನು ಕುರಿತು ಹೀಗೆಂದಳು.

ತಂದೆಯೇ, ನಾವು ಪರಾಧೀನರು, ಪರಾಧೀನತೆಗಿಂತ ದುಃಖ ಇನ್ನೊಂದಿಲ್ಲ. ನಾವು ಗರ್ಭಧರಿಸಬೇಕು, ಹಡೆಯಬೇಕು, ಸಾಕಿ ಬೆಳೆಸಬೇಕು, ಮಲ, ಮೂತ್ರ, ಕಫಗಳನ್ನು ಎತ್ತಬೇಕು. ಈ ಸಂಸಾರದ ಜಂಜಾಟದಲ್ಲಿ ಆತ್ಮೋದ್ಧಾರ ಹೇಗೆ ಸಾಧ್ಯ? ಸಾಧನಾ ಶೂನ್ಯವಾದ ಈ ಜೀವನದಲ್ಲಿ ಮನಶಾಂತಿಯೇ ಇರುವುದಿಲ್ಲ. ಭಗವಂತನ ಸ್ಮರಣೇ ಹೇಗೆ ಸಾಧ್ಯ? ಸ್ತ್ರೀಯರಿಗೆ ಇಂಥ ಕ್ಲೇಶವಿರುವಾಗ ಉದ್ಧಾರವಾಗುವುದು ಹೇಗೆ? ಎಂದು.

**ವಯಂ ನಾರ್ಯಃ ಅಬಲಾಃ ತಾತ ಸರ್ವದಾ ಪರತಂತ್ರಕಾಃ ।**
**ನ ಪಾರತಂತ್ರ್ಯಾತ್ ಸದೃಶಂ ದುಃಖಮನ್ಯದ್ಧಿ ವಿದ್ಯತೇ ॥**
**ಬಾಲಾನಾಂ ಧಾರಣಂ ಗರ್ಭೇ ವರ್ಧನಂ ಚ ದಿನೇ ದಿನೇ ।**
**ಶಕೃನ್ ಮೂತ್ರ ಮಲ ಶ್ಲೇಷ್ಮಶೋಧನಂ ರೋಧನಾದಿ ಚ ॥**

**ಸೋಢವ್ಯಂ ಕಥಮಸ್ಮಾಭಿಃ ಬಾಲಾನಾಂ ಸಂಭೃತೌ ಸದಾ ।**
**ಕದಾ ಸ್ವೋದ್ಧರಣೇ ಯತ್ನಪ್ರಮುಖಾನಿ ದಿನೇ ದಿನೇ ॥**
**ಸಕ್ತಾಃ ಚಿತ್ತಸಮಾಧಾನೇ ಕದಾ ವಿಷ್ಣುಂ ಸ್ಮರೇಮಹಿ ॥**

ಹೀಗೆ ಚಿಂತೆಗೊಂಡ ನಾರೀ ಶತರೂಪೆಯು ಇದಕ್ಕೊಂದು ಪರಿಹಾರಕ್ಕಾಗಿ ಅತ್ಯುಗ್ರ ತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಸಂತೋಷಪಡಿಸಿದಳು. ಬ್ರಹ್ಮದೇವನಾದರೂ ಸ್ತ್ರೀಯರ ಬಗ್ಗೆ ಅನುಕಂಪವಿರುವ ಶತರೂಪಾದೇವಿಗೆ ಎಲ್ಲಾ ಸ್ತ್ರೀಯರಿಗೂ ಅನ್ವಯವಾಗುವಂತೆ ವರವನ್ನಿತ್ತನು.

"ಇಂದಿನಿಂದ ಗೃಹಕರ್ಮಗಳಲ್ಲಿ ತೊಡಗಿರುವ ಸ್ತ್ರೀಯರಿಗೆ ಅಲ್ಪಶೌಚದಿಂದಲೇ ಶುದ್ಧಿಯಾಗಲಿ, ಪತಿಸೇವೆ, ಬಾಲಕರ ಪರಿಚರ್ಯೆ ಹಾಗೂ ಇತರ ಗೃಹಕರ್ಮಗಳನ್ನು ಮಾಡುತ್ತ ಇದೇ ವಿಷ್ಣುಪೂಜೆ ಎಂದು ಸಂಕಲ್ಪಿಸಿ ಭಗವಂತನನ್ನು ಸ್ಮರಿಸುತ್ತಾ ಗೃಹಕರ್ಮಗಳನ್ನು ಆಚರಿಸಿದರೆ ಬ್ರಾಹ್ಮಣರು ತಪಸ್ಸಿನಿಂದ ಸಿದ್ಧಿಯನ್ನು ಪಡೆಯುವಂತೆ ಸ್ತ್ರೀಯರೂ ಸಿದ್ಧಿ ಪಡೆಯುವಂತಾಗಲಿ."

**ಅದ್ಯಪ್ರಭೃತಿ ನಾರೀಣಾಂ ಸಕ್ತಾನಾಂ ಗೇಹಕರ್ಮಸು ।**
**ಶೌಚೇನಾಲ್ಪೇನ ಶುದ್ಧಿಃ ಸ್ಯಾತ್ ಪತಿಶುಶ್ರೂಷಣಂ ಹಿ ಯತ್ ॥**
**ಬಾಲಾದಿಪರಿಚರ್ಯಾ ಚ ಗೃಹಕರ್ಮ ತಥೇತರತ್ ।**
**ವಿಷ್ಣು ಪೂಜೇತಿ ಸಂಕಲ್ಪ್ಯ ಸ್ಮರಂತ್ಯಹ ಕೇಶವಂ ಯದಿ ॥**

ಸ್ತ್ರೀಯರು ಪಾರತಂತ್ರರೆಂದು ಚಿಂತಿಸಬೇಕಿಲ್ಲ. ಸ್ವತಂತ್ರರೆಂದು ತಿಳಿದ ಪುರುಷರೂ ಸ್ತ್ರೀಯರ ಮನಸ್ಸಿಗೆ ಅನುಗುಣವಾಗಿ ನಡೆಯುವುರು. ಸ್ತ್ರೀಯರ ಲಾವಣ್ಯಕ್ಕೆ ವಿದ್ವಾಂಸರು ಪಂಡಿತರು ಮುಗ್ಧರಾಗುವರು. ಈ ಅರ್ಥದಲ್ಲಿ ಸ್ತ್ರೀಯರೂ ಸ್ವತಂತ್ರರೇ. ಸ್ತ್ರೀಯರಿಗೆ ವಶವಾಗದಿರುವ ವ್ಯಕ್ತಿಗಳೇ ಇರುವುದಿಲ್ಲ. ಆದ್ದರಿಂದ ಶತರೂಪೆ ನೀನು ಮಾತ್ರವಲ್ಲ ನಿನ್ನಂತಹ ಸ್ತ್ರೀಯರೂ ಇನ್ನು ಮುಂದೆ ಅಬಲೆಯರಾದರೂ ಸಬಲೆಯರೆನಿಸಲಿ ಎಂದನು.

**ಪರತಂತ್ರಾಃ ಸ್ವತಂತ್ರಾಸ್ತಾಃ ಸಬಲಾಃ ಅಬಲಾ ಅಪಿ ।**
**ಯಾಸಾಂ ಮನೋಽನುವರ್ತೇರನ್ ಜ್ಞಾನಿನೋಽಪಿ ಮಹಾಬಲಾಃ॥**

**ನೈವ ವತ್ಸೇ ತ್ವಯಾ ಕಾರ್ಯಾ ಭಾವಿಯೋಷಿತ್ಸುಗೋಚರಾ ।**
**ಚಿಂತಾನುರಪಿ ಕಿಂ ಬ್ರೂಯಾಂ ತವ ಸ್ವಾತ್ಮವಿಮೋಕ್ಷಣೇ ॥**

## ಸ್ತ್ರೀಯರಿಗೆ ಬ್ರಹ್ಮದೇವರ –ಸರಸ್ವತಿಯರ ಉಪದೇಶ

ಲೋಪಾಮುದ್ರೆ : ಲೋಪಮುದ್ರೆಯು ಅಗಸ್ತ್ಯರ ಧರ್ಮಪತ್ನಿಯು. ಇವಳು ವಿದರ್ಭರಾಜನ ಪುತ್ರಿಯು ಸಂತಾನ ಪಡೆದು ಪಿತೃಗಳನ್ನುದ್ಧರಿಸಲು ಲೋಪಾಮುದ್ರೆಯನ್ನೇ ವಿವಾಹವಾದರು. ವಸ್ತುತಃ ಬ್ರಹ್ಮನ ಮಾನಸಪುತ್ರಿಯೆಂದು ಅವಳನ್ನು ಅಗಸ್ತ್ಯರಿಗೆ ಲಗ್ನ ಮಾಡಿದರು.

ಸರಸ್ವತಿದೇವಿಯರು ತಮ್ಮ ಮಗಳಿಗೆ ಮಾಡಿದ ಉಪದೇಶವು ಸಾರ್ವಕಾಲಿಕ ಹಾಗೂ ಸಾರ್ವದೇಶಿಕವಾಗಿದ್ದು ನಾರಿಯರ ಕುಲಕ್ಕೆ ನೀಡಿದ್ದ ಉಪದೇಶವಾಗಿದೆ.

1. ನಿನ್ನ ಪತ್ನಿಯು ಕೋಪಗೊಂಡರೂ ನೀನು ಕೋಪಗೊಳ್ಳದೆ ಶಾಂತಳಾಗಿರು.
2. ನಿನ್ನ ಪತಿಯ ಅಂತರ್ಗತನಾದ ಶ್ರೀನಾರಾಯಣನನ್ನು ಸದಾ ಸ್ಮರಿಸುತ್ತಿರು. ಪತಿನಿಂದೆಯನ್ನು ಮಾಡಬೇಡ.
3. ಸೂರ್ಯೋದಯಕ್ಕೆ ಮೊದಲೇ ಪತಿಗಿಂತ ಮೊದಲು ಏಳು, ಪತಿಯ ಪಾದಗಳಿಗೆ ಅಭಿವಂದಿಸು, ರಾತ್ರಿ ಮಲಗಿದ ನಂತರ ಮಲಗು.
4. ಬೆಳಿಗ್ಗೆ ಎದ್ದು ಮನೆಯನ್ನು ಗೋಮಯದಿಂದ ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸು. ಹೊಸ್ತಿಲನ್ನು ಎಂದೂ ಕಾಲಿನಿಂದ ತುಳಿಯಬೇಡ. ಮತ್ತೊಬ್ಬರು ತುಳಿಯದಂತೆ ಎಚ್ಚರವಹಿಸು. ಪೂಜೆಯಿಲ್ಲದೆ ಹೊಸ್ತಿಲನ್ನು ದಾಟುವುದು ದೇವತಾಪರಾಧ. ಇದರಿಂದ ವಂಶನಾಶವು.
5. ಸೂರ್ಯನು ಮನೆಗೆ ತನ್ನ ಕಿರಣ ಹಾಯಿಸುವುದರ ಮೊದಲೇ ಮನೆಯನ್ನು ಅಂಗಳವನ್ನು ಶುದ್ಧ ಮಾಡಿರುತ್ತಾನೆ. ಇದರಿಂದ ಲಕ್ಷ್ಮಿಯು ನೆಲೆಸುವಳು.
6. ಸಂಜೆಯಲ್ಲಿಯು ಸೂರ್ಯನು ಅಸ್ತಂಗತನಾಗುತ್ತಿರುವಂತೆಯೇ ಕಸ ಬಳಿದು ಶುದ್ಧ ಮಾಡು. ಇಲ್ಲದಿದ್ದರೆ ದರಿದ್ರಲಕ್ಷ್ಮಿಯು ಹೊಂಚು

ಹಾಕುತ್ತಾ ಪ್ರವೇಶಿಸುವಳು. ಇವಳ ಪ್ರವೇಶವೇ ಪತಿ-ಪತ್ನಿಯರ ವಿಯೋಗ, ಕಲಹ.

7. ಪೊರಕೆಯನ್ನು ಕಾಲಿನಿಂದ ತುಳಿಯಬೇಡ. ಅಲಕ್ಷ್ಮಿಯನ್ನು ಓಡಿಸುವ ಸಾಧನವನ್ನು ತಿರಸ್ಕರಿಸಬೇಡ.

8. ಸಂಧ್ಯಾಕಾಲ, ರಾತ್ರಿಯಲ್ಲಿ ಅಕ್ಕಿ ಕುಟ್ಟುವುದು, ಬೀಸುವುದು, ಕಡಿಯುವುದು ನಿಷಿದ್ಧವಮ್ಮ. ಇದರಿಂದ ವಂಶವು ಛೇದವಾಗುತ್ತದೆ. (ಬಂಜೆಯಾಗುವಳು).

**ನೋಲೋಖಲೇ ಚ ಮುಸಲೇ ನ ವರ್ಧನ್ಯಾಂ ದೃಷದ್ಯಪಿ ।**
**ನ ಯಂತ್ರಕೇ ನ ದೇಹಲ್ಯಾಂ ನ ಚೋಪವಿಶೇತ್ ಕ್ವಚಿತ್ ॥**

ಲಕ್ಷ್ಮಿಯ ಸನ್ನಿಧಾನವುಳ್ಳ ಪೊರಕೆ, ಒಲೆ, ಒರಳು, ಬೀಸುವ ಕಲ್ಲು, ಒನಕೆ, ಹಾರೆ ಇವುಗಳನ್ನು ಕಾಲಿನಿಂದ ಒದೆಯುವುದು ಹಾಗೂ ಅವುಗಳ ಮೇಲೆ ಕುಳಿತುಕೊಳ್ಳುವುದು ನಿಷಿದ್ಧ.

9. ಮಂಗಳ ವಸ್ತುಗಳಾದ ಕುಂಕುಮ, ಅರಿಷಿಣ, ಕಂಕಣ, ಕಾಡಿಗೆ, ಜಡೆ, ಹೂವು, ತುಳಸೀಪೂಜೆ ಇವುಗಳನ್ನು ಯಾವತ್ತೂ ತಿರಸ್ಕರಿಸಬಾರದು. ಅತ್ತೆ-ಮಾವಂದಿರ ಸೇವೆ ಮಾಡು.

10. ಪ್ರಾತಃ ಕಾಲಾದಾರಭ್ಯ - ಸಂಜೆ ದೀಪ ಹಚ್ಚುವ ಮೊದಲು ಹಾಗೂ ಅನಂತರ ಕಾಲಗಳಲ್ಲಿ ಭಗವಂತನ ಸರ್ವೋತ್ತಮತ್ವವನ್ನು ತಿಳಿದು ತಾರತಮ್ಯಾನುಸಾರ ಭಜಿಸು.

11. ಪತಿಯು ಇಲ್ಲದಿರುವಾಗ ಪರಪುರುಷರು ಹಾಗೂ ದುಷ್ಟ ಸ್ತ್ರೀಯರ ಬಗ್ಗೆ ಎಚ್ಚರದಿಂದಿರು.

. . . .

## ಪಾತಿವ್ರತ್ಯವು ದಯಾಗುಣವು

ಸ್ತ್ರೀಯರಿಗೆ ದಯಾಗುಣವು ಅವಶ್ಯಕವಾದದ್ದು. ಸ್ತ್ರೀಯರಲ್ಲೂ ಪತಿವ್ರತೆ-ಯರಿಗೂ ಇದು ಅವಶ್ಯವಾದದ್ದು. ಇದಕ್ಕೆ ದೃಷ್ಟಾಂತ ಪಾರ್ವತಿದೇವಿಯು.

ಸ್ತ್ರೀಯಾದವಳಿಗೆ ದಯಾಗುಣ ಎಷ್ಟು ಅಮೂಲ್ಯವಾದದ್ದು ಎಂದು ಈ ಬ್ರಹ್ಮಪುರಾಣದ ಕಥೆಯಿಂದ ತಿಳಿಯಬಹುದು.

ಪಾರ್ವತೀದೇವಿಯು ತಪಸ್ಸಿನಿಂದ ಶಿವನನ್ನು ಪತಿಯಾಗಿ ಪಡೆಯಲು ನಿಶ್ಚೈಯಿಸಿ ಉಗ್ರ ತಪಸ್ಸು ಮಾಡುತ್ತಿರುವಳು.

ಆಶ್ರಮದ ಪಕ್ಕದ ನದಿಯ ಕಡೆಯಿಂದ ಸಣ್ಣ ಬಾಲಕನ ಆರ್ತನಾದವನ್ನು ಪಾರ್ವತಿಯು ಕೇಳಿದಳು. ಪ್ರವಾಹದ ಕಡೆಗೆ ಓಡಿ ಹೋದ ಪಾರ್ವತಿಯು ನೋಡಿದ್ದಾದರೂ ಏನು? ಚಿಕ್ಕ ಬಾಲಕನನ್ನು ಮೊಸಳೆಯೊಂದು ಹಿಡಿದು ನುಂಗಲು ಪ್ರಾರಂಭಿಸಿದೆ. ದಯಾಮಯಿಯಾದ ಪಾರ್ವತಿಯು ನಡಗುತ್ತಿರುವ ಮಗುವಿನ ಮೇಲೆ ದಯೆ ಹೊಂದಿ ಮೊಸಳೆಯನ್ನು ಹೀಗೆ ಪ್ರಾರ್ಥಿಸಿಕೊಂಡಳು. ಮೊಸಳೆಯೆ, ಈ ಮಗುವನ್ನು ಬಿಟ್ಟು ಬಿಡು ನಿನ್ನ ಕಾಲಿಗೆ ಬಿದ್ದು ಬೇಡಿಕೊಳ್ಳುವೆ ಎಂದು.

ಮೊಸಳೆಯಾದರೂ "ಆರು ದಿವಸಗಳಿಗೊಮ್ಮೆ ನಿನಗೆ ನಿನ್ನ ಆಹಾರ ಲಭಿಸುತ್ತದೆ ಎಂದು ಬ್ರಹ್ಮನು ನನಗೆ ವರ ನೀಡಿದ್ದಾನೆ. ಈ ದಿನದ ಆಹಾರವನ್ನು ನಾನು ಬಿಡುವುದಿಲ್ಲ" ಎಂದಿತು.

ದಯಾಭಾವವು ತ್ಯಾಗವನ್ನು ಅಪೇಕ್ಷಿಸುತ್ತದೆ ಎಂದೇ ಪಾರ್ವತಿಯು ತಾನು ಶಿವನನ್ನು ಒಲಿಸಿಕೊಳ್ಳಲು ಎಸೆಗಿರುವ ತಪಸ್ಸಿನ ಅರ್ಧ ಪುಣ್ಯವನ್ನು ಮೊಸಳೆಗೆ ನೀಡಲು ಮುಂದಾದಳು.

ಆದರೆ ಮೊಸಳೆಯಾದರೂ "ನಿನ್ನ ತಪಸ್ಸಿನ ಪೂರ್ಣ ಪುಣ್ಯವನ್ನು ಕೊಡುವಿಯಾದರೆ ಮಗುವನ್ನು ಬಿಡುವೆನು" ಎಂದಿತು. ಕರುಣಾ-ಮೂರ್ತಿಯಾದ ಪಾರ್ವತಿಯು ಶಿವನನ್ನು ಹೊಂದಲು ಕಾದಿಟ್ಟಿದ್ದ ಸಮಸ್ತ ಪುಣ್ಯವನ್ನೂ ಮೊಸಳೆಗೆ ಧಾರೆಯೆರೆದಳು. ಮೊಸಳೆ ಮಗುವನ್ನು ಬಿಟ್ಟಿತು.

ಇದ್ದಕ್ಕಿದ್ದಂತೆ ಅದ್ಭುತ ಪ್ರಕಾಶ ಉದಯಿಸಿತು. ಮೊಸಳೆಯ ಹಸಿವೆಯು ಮಾಯವಾಯಿತು. ಮೊಸಳೆ ಹೇಳಿತು,

"ನಿನ್ನ ಮಾತೃ ಹೃದಯವನ್ನು ಕಂಡು ನನಗೆ ಬಹಳ ಸಂತೋಷವಾಗಿದೆ. ನಿನ್ನ ತಪಸ್ಸನ್ನು ಹಿಂದಕ್ಕೆ ಸ್ವೀಕರಿಸು" ಎಂದು.

ಪಾರ್ವತಿಯಾದರೂ ದತ್ತಾಪಹಾರ ದೋಷ ಬರುವುದರಿಂದ ಪುನಃ ಹಿಂತಿರುಗಿ ಪಡೆಯಲಾರೆ ಎಂದು ಹಠ ಹಿಡಿದು ಕುಳಿತಳು. ಮಗುವನ್ನು ಎದೆಗೆ ಅವುಚಿಕೊಂಡು ಸಂತಸದಿಂದ ಆಶ್ರಮಕ್ಕೆ ಬಂದು ಮಗುವನ್ನು

ತೊಡೆಯ ಮೇಲೆ ಹಾಕಿಕೊಂಡು ಮಲಗಿಸಿ ಹಾಗೆಯೇ ತಪಸ್ಸು ಮಾಡಲು ಪ್ರಾರಂಭಿಸಿದಳು. ಆಗ ಅಶರೀರವಾಣಿ ಹೀಗೆ ನುಡಿಯಿತು.

"ಗೌರಿಯೇ, ನೀನು ಮಾಡಿದ ತಪಸ್ಸು ಸಾಕು, ನಿನ್ನ ಮೇಲೆ ಒಲಿದು ನಾನು ಬಂದಿರುವೆ" ಎಂದು ಪಾರ್ವತಿಯು ಕಣ್ಣು ಬಿಡಿಸಿ ನೋಡಿದರೆ ಮಗುವು ಮಾಯವಾಗಿ ಮಗುವಿನ ಜಾಗದಲ್ಲಿ ಸಾಕ್ಷಾತ್ ಪರಮೇಶ್ವರನೇ ನಿಂತಿದ್ದನು.

ಹೀಗೆ ಪ್ರತಿಯೊಬ್ಬ ಸ್ತ್ರೀಯರು ತಮ್ಮ ಸಾಧನೆಯ ಪಥದಲ್ಲಿ ಸಿದ್ಧಿ ಹೊಂದಲು ಪಾರ್ವತಿಯಂತೆ ಪ್ರತಿ ಮಕ್ಕಳಲ್ಲೂ ದಯಾಭಾವ ತೋರಬೇಕು.

. . . .

## ಪಾತಿವ್ರತ ಪ್ರಭಾವ (ಶಾಂಡಿಲೀ ಸುಮನೆಯರ ವೃತ್ತಾಂತ)

ಸ್ತ್ರೀಯರಿಗೆ ಅಹಂಕಾರ ಖಂಡಿತಾ ಇರಬಾರದು. ಅಹಂಕಾರವು ನಮ್ಮನ್ನು ಅಧಃಪಾತಕ್ಕಿಳಿಸುತ್ತದೆ. ಈ ಸಂಸಾರದ ಗಂಟು ಬಿಗಿಯಾಗುವುದು ಅಹಂಕಾರದಿಂದಲೇ.

ಸ್ತ್ರೀಯರು ಸಾಮಾನ್ಯವಾಗಿ ಇಬ್ಬರು ಸೇರಿದಾಗ ಲೌಕಿಕ ಮಾತುಗಳಾಡುವುದು ಸಹಜವಾಗಿರುತ್ತದೆ.

ಆದರೆ ಭಗವದ್ವಿಷಯ ಬಿಟ್ಟು ಬೇರೇನೂ ಮಾತನಾಡಬಾರದು. ಮಾತಿನ ಭರದಲ್ಲಿ ಯಾವುದು ಅನ್ನಬಾರದು, ಯಾವುದು ಅನ್ನಬಹುದು ಎಂಬ ವಿವೇಕ ಹೋಗಿ ಪಾಪ ಸಂಘಟನೆಯಾಗುವ ಸಂದರ್ಭಗಳೇ ಹೆಚ್ಚು. ಇದಕ್ಕೆ ದೃಷ್ಟಾಂತ ಶಾಂಡಿಲೀ ಹಾಗೂ ಸುಮನೆಯರು.

ಶಾಂಡಿಲಿ ಹಾಗೂ ಸುಮನೆಯರು ತಮ್ಮ ಪಾತಿವ್ರತ್ಯ ಪ್ರಭಾವದಿಂದ ಸ್ವರ್ಗವನ್ನೇರುತ್ತಿರುವಾಗ ಒಬ್ಬರಿಗೊಬ್ಬರು ಸೇರಿ ಸಹಜವಾದ ಮಾತುಕತೆ ಪ್ರಾರಂಭವಾದವು.

ಶಾಂಡಿಲಿಯು ಸುಮನೆಯನ್ನು ವಿಚಾರಿಸಿದಳು. ಸುಮನೆಯು ತಾನು ದೊಡ್ಡ ಪತಿವ್ರತೆಯೆಂದೆ ಬಗೆದಿದ್ದಳು. ಆದರೆ ಶಾಂಡಿಲಿಯ ಕಾಂತಿ, ವರ್ಚಸ್ಸಿನ ಮುಂದೆ ಸುಮನೆ ವರ್ಚಸ್ಸು ಕಳಪೆಯದಾಗಿತ್ತು. ಅದಕ್ಕಾಗಿ ಸುಮನೆಯು ಶಾಂಡಿಲಿಯನ್ನು ನನಗಿಂತ ಹೆಚ್ಚು ವರ್ಚಸ್ಸಿರಲು ಏನು ಕಾರಣ? ತಿಳಿಸು ಎಂದಳು.

***ಶಾಂಡಿಲಿಯು ತನ್ನ ಪಾತಿವ್ರತ್ಯವನ್ನು ಹೀಗೆ ಹೇಳಿದಳು.***

1. ನಾನು ನನ್ನ ಪತಿಯ ವಿರುದ್ಧ ಎಂದು ಕಠೋರವಾಗಿ ಮಾತನಾಡಿಲ್ಲ. ಅಂತರಂಗದಲ್ಲಾಗಲೀ, ಬಹಿರಂಗದಲ್ಲಾಗಲೀ ಪತಿಗೆ ವಿರೋಧ ಮಾಡಿಲ್ಲ.
2. ದೇವ-ಬ್ರಾಹ್ಮಣ-ಪಿತೃಗಳ ಪೂಜೆಯಲ್ಲಿ ಯಾವಾಗಲೂ ಜಾಗರೂಕಳಾಗಿದ್ದೆ.
3. ಅತ್ತೆ-ಮಾವಂದಿರನ್ನು ತಂದೆ ತಾಯಿಯಂತೆ ಉಪಚರಿಸಿದೆ. ಪತಿಗೆ ಅಪ್ರಿಯವಾದ ಮಾತುಗಳನ್ನು ಎಂದೂ ಆಡಿಲ್ಲ.
4. ಯಾರಿಗೂ ಅಪಹಾಸ್ಯ ಅವಹೇಳನ ಮಾಡಿಲ್ಲ.
5. ಪತಿಗೆ ಇಷ್ಟವಾಗದ ಕೆಲಸಗಳನ್ನು ಮಾಡುತ್ತಿರಲಿಲ್ಲ ಹಾಗೂ ಇಷ್ಟವಾಗದ ಪದಾರ್ಥಗಳನ್ನು ಸ್ವೀಕರಿಸಲಿಲ್ಲ.

   ಗಂಡನು ಹೊರಗೆ ಹೋಗಿ ಬಂದ ಕೂಡಲೇ ನಗುಮುಖದಿಂದ ಸ್ವಾಗತಿಸುತ್ತಿದೆ. ಇದರಿಂದ ಹೊರಗಿನಿಂದ ಬಂದ ಶ್ರಮ ಕಳೆಯುತ್ತಿದ್ದೆ.
6. ಮನೆ ಕೆಲಸವನ್ನು ನಾನೇ ಮಾಡುತ್ತಿದ್ದೆ. ಇದರಲ್ಲಿ ಎಂದೂ ಬೇಸರಪಟ್ಟಿಲ್ಲ.
7. ಮನೆಯನ್ನು ಸ್ವಚ್ಛವಾಗಿಡುತ್ತಿದ್ದೆ. ಮಕ್ಕಳನ್ನು ಸರಿಯಾಗಿ ಬೆಳೆಸುತ್ತಿದ್ದೆ. ಮಕ್ಕಳಿಗೆ ಮನೆ ಕೆಲಸದಲ್ಲಿ ಸರಿಯಾಗಿ ತರಬೇತಿ ನೀಡುತ್ತಿದ್ದೆ. ಮಕ್ಕಳನ್ನು ನಿಂದಿಸುತ್ತಿರಲಿಲ್ಲ, ಹೊಡೆಯುತ್ತಿರಲಿಲ್ಲ.
8. ಧಾನ್ಯಗಳನ್ನಾಗಲಿ, ಅನ್ನವಾಗಲೀ ಸುಮ್ಮನೆ ಚೆಲ್ಲುತ್ತಿರಲಿಲ್ಲ. ತಂಗಳಾನ್ನ ತಿನ್ನುತ್ತಿರಲಿಲ್ಲ.
9. ಗೋ ಸೇವೆ ಮಾಡುತ್ತಿದ್ದೆ, ಅತಿಥಿ – ಅಭ್ಯಾಗತರ ಸೇವೆಯನ್ನು ಯಾವುದೇ ಲೋಪವಾಗದಂತೆ ಮಾಡುತ್ತಿದ್ದೆ. ನಮ್ಮ ಮನೆಗೆ ಬಂದ ಭಿಕ್ಷಕರೂ ರಿಕ್ತ ಹಸ್ತರಾಗಿ ಹೋಗುತ್ತಿದ್ದಿಲ್ಲ.
10. ಪತಿಯು ದುಃಖಪಟ್ಟರೆ ನಾನೂ ದುಃಖಪಡುತ್ತಿದ್ದೆ. ರೋಗಪೀಡಿತನಾದಾಗ ಬೇಸರಿಸದೆ ಪತಿಸೇವೆಯನ್ನು ಮಾಡುತ್ತಿದ್ದೆ. ಪತಿಯು ಪರ ಊರಿಗೆ ಹೋಗಿದ್ದಾಗ ಅಲಂಕಾರಗಳನ್ನು ಮಾಡಿಕೊಳ್ಳುತ್ತಿದ್ದಿಲ್ಲ.

    ಹೀಗೆ ನನಗೆ ತಿಳಿದಿದ್ದನ್ನು ಭಕ್ತಿಯಿಂದ ಆಚರಿಸುತ್ತಿದೆ ಎಂದಳು.

    ಶಾಂಡಿಲಿಯ ಮಾತಿನಲ್ಲಿ ವಿನೀತತೆ ಇತ್ತು ಅಹಂಕಾರವಿರಲಿಲ್ಲ.

ಅದೇ ಸಮಯದಲ್ಲಿ ಯಮದೂತರು ಪಾಪಿಗಳನ್ನು ನರಕಕ್ಕೆ ಒಯ್ಯುತ್ತಿದ್ದದ್ದನ್ನು ಸುಮನೆಯು ನೋಡಿದಳು. ಈ ದೃಶ್ಯದಿಂದ ವಿಚಲಿತಳಾದ ಶಾಂಡಿಲಿಯ ಕಣ್ಣಂಚಿನಲ್ಲಿ ಕಣ್ಣೀರು ಸುರಿಯಿತು. ಆದರೆ ಸುಮನೆಯು ಪಾಪಿಗಳನ್ನು ನೋಡಿ ತಾನೊಬ್ಬಳೆ ಪುಣ್ಯಕರ್ಮದಿಂದ ಸ್ವರ್ಗಕ್ಕೇರುತ್ತಿರುವಳು ಎಂಬ ಅಹಂಕಾರದಿಂದ ಈ ಪಾಪಿಗಳು ತನ್ನ ಪಾಪಫಲವನ್ನು ಅನುಭವಿಸುತ್ತಿದ್ದಾರೆ. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಇದೆ ಎಂದಳು.

ತಕ್ಷಣ ಮೇಲೇರುತ್ತಿದ್ದ ಸುಮನೆ ಭೂಮಿಗೆ ಬಿದ್ದಳು. ಶಾಂಡಿಲಿಯಾದರೂ ಅವಳ ಮೇಲಿನ ಕರುಣೆಯಿಂದ ಸುಮನೆಯನ್ನೇ ನೋಡುತ್ತಾ ಸ್ವರ್ಗ ಸೇರಿದಳು.

ಈ ದೃಷ್ಟಾಂತದಿಂದ ಸ್ತ್ರೀಯರು ಇತರರಲ್ಲಿ ದಯಾರ್ದ್ರಭಾವವನ್ನು ಹೊಂದಬೇಕು. ಕರುಣೆಯಿಂದ ಕರುಗುವ ಸ್ವಭಾವ ಹೊಂದಿರಬೇಕು.

ಶಾಂಡಿಲಿಯ ಗುಣಗಳನ್ನು ಪತಿವ್ರತೆಯರು ಅಳವಡಿಸಿಕೊಳ್ಳಬೇಕು ಎಂದು.

. . . .

## ಲಕ್ಷಬತ್ತಿ ವ್ರತ – ಪತಿವ್ರತೆ

ಪತಿವ್ರತೆಯರು ಲಕ್ಷ ಬತ್ತಿವ್ರತ, ಲಕ್ಷ್ಮಿ ವ್ರತ, ಗೌರೀ ವ್ರತ, ಋಷಿಪಂಚಮೀ, ಲಕ್ಷ ಪ್ರದಕ್ಷಿಣ, ಲಕ್ಷ ನಮಸ್ಕಾರ ಇವುಗಳನ್ನು ಆಚರಿಸುವುದರಿಂದ ಸೌಭಾಗ್ಯವು ವೃದ್ಧಿಯಾಗುವುವು.

ಈ ಸಂದರ್ಭಗಳಲ್ಲಿ ಮೊರದ ಬಾಗಿಣಗಳನ್ನು ಕೊಡುವುದರಿಂದ ರಜಸ್ವಲಾ ದೋಷವು ನಿವೃತ್ತಿಯಾಗುತ್ತದೆ.

ಇದಕ್ಕೆ ದುಷ್ಟಾಂತ ಸತ್ಯವ್ರತೆಯ ದೃಷ್ಟಾಂತ.

ವಾಯುಪುರಾಣದಲ್ಲಿ ಬರುವ ಈ ಸತ್ಯವ್ರತೆಯ ಕಥೆಯು ಪತಿವ್ರತಾ ಸ್ತ್ರೀಯರಿಗೆ ಮಾರ್ಗದರ್ಶನ ನೀಡುತ್ತದೆ.

ಸತ್ಯವ್ರತೆಯು ಕೌಶಿ ದೇಶದ ಪ್ರಜೆ. ಚಿತ್ರಕರ್ಮನು ಸತ್ಯವ್ರತೆಯ ಪತಿಯು,. ಸತ್ಯವ್ರತೆಯು ಅನನ್ಯವಾದ ಪತಿಭಕ್ತಿಯಿಂದ ಮೆರೆದವಳು. ಹಿಂದಿನ ಜನ್ಮದಲ್ಲಿ ಈ ದಂಪತಿಗಳೇ ಶುಚಿವ್ರತೆ ಮತ್ತು ವಿಠ್ಠಲ ಎಂಬ ಹೆಸರಿನಿಂದ ಹಿಂದಿನ ಜನ್ಮದಲ್ಲಿ ಹುಟ್ಟಿದ್ದರು.

ಹಿಂದಿನ ಜನ್ಮದಲ್ಲಿ ಮಾಡಿದ ಮಾಘಮಾಸ ಸ್ನಾನ, ಲಕ್ಷವರ್ತೀವ್ರತಾದಿಗಳಿಂದ "ಮಹಾಪತಿವ್ರತೆ" ಎಂಬ ಬಿರುದಿಗೆ ಪಾತ್ರಳಾದಳು.

ಈ ಪತಿವ್ರತೆಗೆ ತೀರ ವಿರುದ್ಧ ಕರ್ಮವುಳ್ಳವನು ಚಿತ್ರಕರ್ಮ. ಸತ್ಯವ್ರತೆ ಪತಿವ್ರತೆಯಾದರೆ ಚಿತ್ರಕರ್ಮವಾದರೂ ವೇಶ್ಯಾಸ್ತ್ರೀವ್ರತವುಳ್ಳವನು. ವೇಶ್ಯಾಸಕ್ತನಾದರೂ ಪತಿವ್ರತೆಯಾದ ಸತ್ಯವ್ರತೆಗೆ ಪತಿಯಲ್ಲಿ ಭಕ್ತಿ ಕಡಮೆಯಾಗಿರಲಿಲ್ಲ. ಆದರೂ ಗಂಡನ ಹಿತಾಸಕ್ತಿ ಬಯಸಿದವಳು.

ವೈಶ್ಯೆಯಲ್ಲಿ ಅತ್ಯಾಸಕ್ತಿಯಿಂದ ವ್ರಣಸಂಚಿಂತವಾಯಿತು. ಮೈಯೆಲ್ಲ ವ್ಯಾಧಿ. ನಡೆಯಲು ಅಸಾಧ್ಯವಾದಷ್ಟು ಉಲ್ಬಣಿಸಿತು. ವೈಶ್ಯೆಯ ಮನೆಗೂ ಹೋಗಲಾಗಲಿಲ್ಲ. ಚಿತ್ರಕರ್ಮನಿಗೆ ವೈಶ್ಯೆಯದೇ ಚಿಂತೆ. ಅನ್ನಾದಿಗಳನ್ನು ಬಿಟ್ಟು ಚಿಂತಾಕ್ರಾಂತನಾದನು. ಸತ್ಯವ್ರತೆಯಾದರೂ ಇಂತಹ ಕಠಿಣ ಸಂದರ್ಭದಲ್ಲೂ ಪತಿಯನ್ನು ನಿಂದಿಸದೆ ಗಂಡನ ಹಿತಾಸಕ್ತಿಯನ್ನು ಬಯಸಿದಳು.

ಸತ್ಯವ್ರತೆಯು ಚಿತ್ರಕರ್ಮನನ್ನುದ್ದೇಶಿಸಿ – "ಸ್ವಾಮಿ, ನಿಮಗೆ ನಾನಿರುವಾಗ ಏಕೆ ಈ ಚಿಂತೆ? ನಿಮಗೇನಾಗಬೇಕು ಎಂದು ತಿಳಿದರೆ ಅದನ್ನೇ ಮಾಡುವೆ" ಎಂದಳು.

"ನನಗೆ ಹಿತವನ್ನು ಬಯಸುವವಳಾದರೆ ನನ್ನನ್ನು ವೈಶ್ಯೆಯ ಸಮೀಪ ಈಗಲೇ ಕರೆದುಕೊಂಡು ಹೋಗು" ಚಿತ್ರಕರ್ಮನ ಮಾರ್ನುಡಿ.

ಗಂಡನ ಹಿತ ಬಯಸುವ ಸತ್ಯವ್ರತೆ ಆ ರಾತ್ರಿಯಲ್ಲಿಯೇ ಗಂಡನನ್ನು ಹೊತ್ತು ವೈಶ್ಯೆಯ ಮನೆಗೆ ಹೊರಟಳು.

ದಾರಿಯಲ್ಲಿ ಶೂಲಕ್ಕೇರಿರುವ ಆಣಿಮಾಂಡವ್ಯರು ತಪಸ್ಸು ಮಾಡುತ್ತಿದ್ದರು. ಮಳೆಯು ಧಾರಕಾರವಾಗಿ ಬೀಳುತ್ತಿದೆ. ಕತ್ತಲೆ, ಭಾರ, ಮಳೆ ಈ ತ್ರಿಪುಟಿಯಲ್ಲಿ ಸತ್ಯವ್ರತೆಗೆ ಮಾಂಡವ್ಯರಿದ್ದದ್ದು ಕಾಣಲಿಲ್ಲ. ಎಡವಿ ಬಿದ್ದಳು. ಮಾಂಡವ್ಯರಿಗೆ ಶೂಲದ ವೇದನೆಯ ಜೊತೆಗೆ ಪಾದಪ್ರಹಾರವು ಅತಿವೇದನೆಯನ್ನುಂಟು ಮಾಡಿತು.

ಕೋಪಗೊಂಡ ಮಾಂಡವ್ಯರು "ಯಾರು ನನ್ನನ್ನು ನೋಡದೆ ಎಡವಿದ್ದು?" ಎಂದು ಗರ್ಜಿಸಿದರು.

ಸತ್ಯವ್ರತೆಯು "ಮುನಿಗಳೇ, ನನ್ನ ಪತಿಯನ್ನು ಹೊತ್ತಿರುವ ನನಗೆ ತಾವಿದ್ದದ್ದು ತಿಳಿಯಲಾಗಲಿಲ್ಲ ಕ್ಷಮಿಸಿರಿ" ಎಂದಳು.

ಕೋಪಗೊಂಡ ಋಷಿಯು – "ನಾಳೇ, ಸೂರ್ಯೋದಯವಾಗುವ ಕಾಲಕ್ಕೆ ನಿನ್ನ ಪತಿ ಸಾಯುತ್ತಾನೆ" ಎಂದು ಶಪಿಸಿದನು. ಪತಿವ್ರತೆಯಾದ ಸತ್ಯವ್ರತೆಯು "ಸೂರ್ಯೋದಯವಾದರೇ ತಾನೇ ನನ್ನ ಪತಿ ಸಾಯುವುದು. ಸೂರ್ಯೋದಯವಾಗುವುದೇ ಬೇಡ" ಎಂದು ಹೇಳಿ ಸೂರ್ಯೋದಯ-ವನ್ನೇ ತಡೆದಳು. ಇದು ಅವಳ ಪಾತಿವ್ರತ್ಯದ ಪ್ರಭಾವ. ಲಕ್ಷಬತ್ತಿ ವ್ರತ ಮಾಡಿರುವ ಸತ್ಯವ್ರತೆಯನ್ನು ವಿಧವೆ ಮಾಡಲು ಬ್ರಹ್ಮನೂ ಬಿಡಲಿಲ್ಲ. ಸೂರ್ಯನು ಉದಯಿಸಲೇ ಇಲ್ಲ. ಸೂರ್ಯೋದಯವಿಲ್ಲದೆ ಧರ್ಮಾಚಾರಗಳೇ ಸ್ತಬ್ಧವಾದವು. ದೇವತೆಗಳು ಬ್ರಹ್ಮದೇವರ ಬಳಿಗೆ ಹೋದರು.

ಬ್ರಹ್ಮದೇವರು ಬಂದು ಸತ್ಯವ್ರತೆಯನ್ನು ಹೀಗೆ ಸಮಾಧಾನಿಸಿದರು.

ಸತ್ಯವ್ರತೆಯೆ, ನೀನು ಮಾಡಿರುವ ಲಕ್ಷಬತ್ತಿ ವ್ರತದ ಒಂದು ಕ್ಷಣದ ಪುಣ್ಯವನ್ನು ಮುನಿಗೆ ಕೊಡು. ಇದರಿಂದ ಅವನಿಗುಂಟಾದ ವೇದನೆಯು ಪರಿಹೃತವಾಗುತ್ತದೆ.

ಮುನಿಯಾದರೂ ಮಾಘ ಮಾಸದಲ್ಲಿ ಮಾಡಿದ ಮಾಘಸ್ನಾನದ ಫಲವನ್ನು ಗಂಡನಿಗೆ ನೀಡಲಿ ಎಂದರು. ಅದೇ ರೀತಿ ತನ್ನ ಲಕ್ಷಬತ್ತಿ ವ್ರತದ ಕ್ಷಣ ಪುಣ್ಯವನ್ನು ಮಾಂಡವ್ಯರಿಗೆ ನೀಡಿದಳು. ಮುನಿಯೂ ಮಾಘಸ್ನಾನ ಫಲ ನೀಡಿದರು. ಇದರಿಂದ ಚಿತ್ರಕರ್ಮನ ವ್ರಣಗಳೆಲ್ಲವೂ ಮಾಯವಾಗಿ ಮೊದಲಿನಂತಾದನು.

ಹೀಗೆ ಲಕ್ಷಬತ್ತಿ ವ್ರತ ಪುಣ್ಯವು ಸೂರ್ಯನನ್ನೇ ತಡೆಯಿತೆಂದರೆ ಲಕ್ಷಬತ್ತಿ ವ್ರತದ ಪ್ರಭಾವ ಹಾಗೂ ಪಾತಿವ್ರತ್ಯದ ಪ್ರಭಾವ ಏನೆಂದು ಈ ಕಥೆಯಿಂದ ತಿಳಿಯಬಹುದು.

. . . .

## ಪಾತಿವ್ರತ್ಯ ಪ್ರಭಾವ ಭವಿಷ್ಯದ್ ಜ್ಞಾನ

ಯಾಯಾವರ ವೃತ್ತಿಯಲ್ಲಿಯೇ ದೇಹ ಕಳೆದ ಯಜ್ಞಶರ್ಮನ ಹಾಗೂ ರೋಹಿಣಿಯರ ಪುತ್ರನೇ ದೇವಶರ್ಮಾ. ತಂದೆ ಯಜ್ಞಶರ್ಮನು

ದಿವಂಗತನಾದ ಮೇಲೆ ದೇವಶರ್ಮನು ತಪಸ್ಸನ್ನು ಮಾಡುತ್ತ ಭಿಕ್ಷಾಟನೆಯಿಂದ ಜೀವಿಸಲು ಪ್ರಾರಂಭಿಸಿದನು.

ಒಂದು ದಿನ ಸ್ನಾನ ಮಾಡಿ ಬಟ್ಟೆಯನ್ನು ಒಣಗಿ ಹಾಕಿದಾಗ ಎರಡು ಪಕ್ಷಿಗಳು ಬಟ್ಟೆಯನ್ನು ಅಪಹರಿಸಿದವು. ಇದರಿಂದ ದೇವಶರ್ಮಾ ಹಿಂದೆ ಓಡತೊಡಗಿದ. ನಂತರ ಬಟ್ಟೆಯಲ್ಲಿ ಮಲವಿಸರ್ಜಿಸಿ ಬಟ್ಟೆಯನ್ನು ಕೆಳಗೆ ಹಾಕಿದವು. ಇದರಿಂದ ಕೋಪಗೊಂಡ ದೇವಶರ್ಮನು ದುರುಗುಟ್ಟಿ ಪಕ್ಷಿಗಳನ್ನು ನೋಡಿದ ಕೂಡಲೇ ಪಕ್ಷಿಗಳೆರಡು ಭಸ್ಮವಾದವು.

ಈ ಘಟನೆಯಿಂದ ತನಗೆ ತಾನೆ ತನ್ನ ತಪಸ್ಸಿನ ಮಹಿಮೆ ಅರಿತು ಅಹಂಕಾರಗೊಂಡನು. ತಾನು ತಪಸ್ಸಿದ್ಧನೆಂದು ಬಗೆದನು.

ಬಿಕ್ಷೆ ಬೇಡುತ್ತಾ ಕಶ್ಯಪನೆಂಬ ಬ್ರಾಹ್ಮಣನ ಮನೆಯ ಮುಂದೆ ನಿಂತು "ಭವತಿ, ಭಿಕ್ಷಾಂ ದೇಹಿ" ಎಂದ. ಕಶ್ಯಪನ ಧರ್ಮಪತ್ನಿಯಾದ ಸಾವಿತ್ರಿಯು ಮಹಾಪತಿವ್ರತೆ. ಆಗ ತಾನೇ ದಣಿದು ಬಂದಿದ್ದ ಕಶ್ಯಪನ ಸೇವೆಯಲ್ಲಿ ತೊಡಗಿದ್ದಳು. ಇದರಿಂದ ತಡ ಮಾಡಿ ಭಿಕ್ಷೆಯನ್ನು ತಂದಳು. ಈಗಾಗಲೇ ತನ್ನ ತಪಸ್ಸಿನ ಸಿದ್ಧಿಯ ಬಗ್ಗೆ ಅಹಂಕಾರಿಯಾಗಿದ್ದ ದೇವಶರ್ಮನು ಕೋಪದಿಂದ ಕೆಂಡದಂತಾಗಿ ತನ್ನ ಬಿಸಿಗಣ್ಣನ್ನು ಸಾವಿತ್ರಿಯ ಮೇಲೆ ಹರಿಸಿದ. ಪತಿವ್ರತೆಯು ನಕ್ಕು "ನನ್ನನ್ನು ಸುಟ್ಟು ಬೂದಿ ಮಾಡಲು ನಾನೇನು ನದಿಯ ದಂಡೆಯಲ್ಲಿ ಬೂದಿಯಾದ ಪಕ್ಷಿಯಲ್ಲ" ಎಂದಳು.

ಈ ಮಾತಿನಿಂದ ದೇವಶರ್ಮನಿಗೆ ಆತ್ಯಾಶ್ಚರ್ಯವಾಯಿತು. ನದಿಯ ತೀರದಲ್ಲಿ ನಡೆದ ಘಟನೆ ಈಕೆಗೆ ತಿಳಿದದ್ದು ಹೇಗೆ? ತನ್ನಲ್ಲಿ ತಾನೇ ಪ್ರಶ್ನೆ ಮಾಡಿಕೊಂಡನು.

ತಾಯೆ, ನದಿಯ ದಂಡೆಯಲ್ಲಿ ನಡೆದ ಘಟನೆಯ ಕಾಲದಲ್ಲಿ ಯಾರೂ ಇರಲಿಲ್ಲ. ಹೀಗಿರುವಾಗ ಪಕ್ಷಿಗಳನ್ನು ಕೋಪದಿಂದ ಸುಟ್ಟು ಹಾಕಿದ ಘಟನೆ ನಿನಗೆ ಹೇಗೆ ತಿಳಿಯಿತು? ದೇವಶರ್ಮ ಕೇಳಿದನು.

ನನ್ನ ಪತಿಯ ಸೇವೆಯ ಬಲದಿಂದ ಎಲ್ಲಿ ಏನು ನಡೆದರೂ ನನಗೆ ಇದ್ದಲ್ಲಿಂದೆಯೇ ತಿಳಿದು ಬರುತ್ತದೆ. ಇದು ಪಾತಿವ್ರತ್ಯದ ಪ್ರಭಾವ ಎಂದು ಹೇಳಿದಳು.

ಸಾವಿತ್ರಿಯು ದೇವಶರ್ಮನಿಗೆ ಹೀಗೆ ಉಪದೇಶಿಸಿದಳು. ಮುನಿಯೇ,

ವೃದ್ಧನಾದ, ದೀನರಾದ, ಪುತ್ರರೇ ಊರುಗೋಲಾಗಿರುವ ತಂದೆ-ತಾಯಿಗಳನ್ನು ಕಡೆಗಾಲದಲ್ಲಿ ಸೇವಿಸದೆ ಎಷ್ಟೇ ತಪಸ್ಸು ಮಾಡಿದರೂ ಸಿದ್ಧಿಸುವುದಿಲ್ಲ. ಸ್ವಕರ್ತವ್ಯಪಾಲನೆಯಿಂದಲೇ ಸರ್ವಸಿದ್ಧಿಗಳು ಕೈವಶ-ವಾಗುವುವು. ಹೀಗಿರುವಾಗ ವೃದ್ಧಳಾಗಿ ಏಕಾಂಗಿಯಾಗಿ ದುಃಖ-ದಿಂದಿರುವಾಗ ನೀನು ಅವಳನ್ನು ಸಲಹದೆ ಕರ್ತವ್ಯ ಭ್ರಷ್ಟನಾಗಿರುವೆ. ಹತ್ತು ತಿಂಗಳು ನಿನ್ನನ್ನು ಹೊತ್ತು ಬೆಳೆಸಿರುವ ತಾಯಿಯನ್ನು ಅಸಹ್ಯ ಪಟ್ಟುಕೊಳ್ಳದೆ ರಕ್ಷಿಸು.

ಯಾವ ತಾಯಿಯು ದುಃಖಿತಳಾಗಿರುವಳೋ ಅಂತಹವನ ಜೀವನ ವ್ಯರ್ಥ. ಮಾತೃಪೋಷಕನ ಜೀವನವೇ ಸಾರ್ಥಕ. ಅವನು ಇಹಾ ಮಾತ್ರ ಸುಖಿಸುವನು.

**ಸ ಜೀವತಿ ವೃಥಾ ಬ್ರಹ್ಮನ್ ಯಸ್ಯ ಮಾತಾ ಸುದುಃಖಿತಾ ।**
**ಯೋ ರಕ್ಷೇತ್ ಸತತಂ ಭಕ್ತ್ಯಾ ಮಾತರಂ ಮಾತೃವತ್ಸಲಃ ॥**
**ತಸ್ಯೇಹಾನುಷ್ಠಿತಂ ಸರ್ವಂ ಫಲಂ ಚಾಮುತ್ರ ಚೇಹ ಹಿ ।**
**ಮಾತುಶ್ಚ ವಚನಂ ಬ್ರಹ್ಮನ್ ಪಾಲಿತಂ ಯೈಃ ನರೋತ್ತಮೈಃ ॥**

ಇಷ್ಟು ಹೇಳಿ ಮುಂದಿನ ಭವಿಷ್ಯವನ್ನು ತಿಳಿಸಿದಳು.

"ಮುನಿಯೇ ಪಕ್ಷಿಗಳನ್ನು ಸುಟ್ಟು ಹಾಕಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೋ, ಕೋಪವನ್ನು ಮೊದಲು ಸುಡು. ಮುಂದೆ ಯತಿಕರ್ಮನೆಂಬುವಳ ಮಗಳು ನಿನ್ನ ಪತ್ನಿಯಾಗುತ್ತಾಳೆ. ನಿನಗೆ ಒಬ್ಬ ಪುತ್ರ ಜನಿಸುವನು. ನಿನ್ನ ಪತ್ನಿಯು ಮುತ್ತೈದೆಯಾಗಿ ದಿವಂಗತಳಾದ ಮೇಲೆ ನೀನು ಯತ್ಯಾಶ್ರಮವನ್ನು ಸ್ವೀಕರಿಸಿ ಸಾಧಿಸಿ ವಿಷ್ಣುಲೋಕವನ್ನು ಸೇರುವೆ."

ಹೀಗೆ ಸಾವಿತ್ರಿಯು ಸ್ವಕರ್ತವ್ಯಪಾಲನೆ ಹಾಗೂ ಪತಿಯ ಶುಶ್ರೂಷೆಯಿಂದ ಅತೀತ ಮಾತ್ರವಲ್ಲದೆ ಅನಾಗತವಾದ ಘಟನೆ ತಿಳಿದಿರುವಳಾಗಿದ್ದಳು.

ಸಾವಿತ್ರಿಯ ಕಥೆಯಿಂದ ಸ್ತ್ರೀಯರು ಸ್ವಕರ್ತವ್ಯ ಪಾಲನೆ ಪತಿಶುಶ್ರೂಷೆಯಿಂದ ಭೂತ-ಭವಿಷ್ಯದ್ವಿಚಾರಗಳು ಕರಗತವಾಗುತ್ತದೆ ಎಂದು ತಿಳಿಯುತ್ತದೆ.

ಈ ಕಥೆಯನ್ನು ನೃಸಿಂಹ ಪುರಾಣದಲ್ಲಿ ವ್ಯಾಸರು ಬಿತ್ತರಿಸಿದ್ದಾರೆ.

. . . .

## ಸತಿ ಸಾವಿತ್ರೀ

ಸಾವಿತ್ರಿಯು ಪತಿವ್ರತಾ ಶಿರೋಮಣಿಯಾಗಿದ್ದು ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿ ಮಹಾಪತಿವ್ರತೆ ಎನಿಸಿಕೊಂಡವಳು. ಬೇರೆ ಪತಿವ್ರತಾ ಸ್ತ್ರೀಯರನ್ನು ಮೀರಿಸುವ ಪಾತಿವ್ರತ್ಯ ಸಾವಿತ್ರಿಯದು.

ಸಾವಿತ್ರಿಯ ಚರಿತ್ರೆಯಾದರೂ ಆದರ್ಶ ಚರಿತ್ರೆಯಾಗಿದೆ. ಸಾವಿತ್ರಿಯ ಕರ್ಮಶೀಲತೆ ಪ್ರಸಿದ್ಧವಾದದ್ದು.

ಶಕುಂತಲೆಯಾದರೂ ತನ್ನ ತಂದೆ ಕಣ್ವನ ಅನುಮತಿ ಇಲ್ಲದೆ ಪತಿಯನ್ನರಿಸಿದರೆ ಇವಳು ತಂದೆಯ ಅನುಮತಿಯಿಂದಲೇ ವಿವಾಹ-ವಾಗಿದ್ದಾಳೆ.

ಶೈಬ್ಯಳು ಕಷ್ಟ ಪರಂಪರೆಯನ್ನು ಎದುರಿಸಿದರೂ ಕಡೆಗೆ ನೇಣು ಹಾಕಿಕೊಂಡು ಸಾಯಲು ಸಿದ್ಧಳಾದಳು. ಸಾವಿತ್ರಿಯು ಇದಕ್ಕೆ ಹೊರತಾಗಿದ್ದಾಳೆ.

ದಮಯಂತಿಯಾದರೂ ಸಾವಿತ್ರಿಯಂತೆ ಕರ್ತವ್ಯ ಪರಾಯಣತೆಯಲ್ಲಿ ಮೆರೆದರೂ ಸಾವಿತ್ರಿಯಂತೆ ಮನೋಬಲವಿಲ್ಲದಾದಳು. ಸಾವಿತ್ರಿಯಂತೆ ಕಠೋರ ಸಾಧನೆಯಿಂದ ಗಂಡನನ್ನು ವಿಪನ್ಮುಕ್ತನನ್ನಾಗಿ ಮಾಡಲಿಲ್ಲ.

ಸಾವಿತ್ರಿಯು ಅಶ್ವಪತಿಯ ಮಗಳು ಗಾಯತ್ರಿಯ ಉಪಾಸನೆಯಿಂದ ಜನಿಸಿದ ಮಹಾನುಭಾವಳು. ವಿವಾಹದ ವಯಸ್ಸು ಬಂದಾಗ ತಂದೆಯ ಅಪ್ಪಣೆಯಂತೆ ಯೋಗ್ಯನಾದ ವರನನ್ನು ತಾನೇ ಅರಸಿಕೊಂಡಳು. ಅವನೇ ಸತ್ಯವಂತನು. ಸತ್ಯವಂತನು ಇನ್ನೂ ಒಂದೇ ವರ್ಷ ಆಯುಸ್ಸನ್ನು ಪಡೆದಿರುವನು ಎಂದು ನಾರದರೂ ಹೇಳಿದಾಗ ಅವಳು ಎದೆಗುಂದದೆ ಕನ್ಯಾದಾನವು ಒಂದೇ ಸಲ, ಆಸ್ತಿ ವಿಭಾಗವು ಒಂದೇ ಸಲ, ದಾನ ಮಾಡಿದೆಯೆಂಬುದು ಒಂದು ಸಲ.

**ಸಕೃದಂಶೋ ನಿಪತತಿ ಸಕೃತ್ ಕನ್ಯಾ ಪ್ರದೀಯತೇ ।**
**ಸಕೃದೇವ ದದಾನೀತಿ ತ್ರೀಣ್ಯೈತಾನಿ ಸತಾಂ ಸಕೃತ್ ॥**

ಸಾವಿತ್ರಿಯು ವಿವಾಹವಾದ ಮೇಲೆ ಮಾವನ ಮನೆಗೆ ಬಂದಳು. ರಾಜಕುಮಾರಿಯಾಗಿದ್ದರೂ ವನ್ಯವಸ್ತುಗಳನ್ನೇ ಧರಿಸಿದಳು. ಗಂಡನು, ಅತ್ತೆ-ಮಾವಂದಿರು ಸ್ವಲ್ಪ ಬೆಲೆ ಬಾಳುವ ಉಡುಪು ಧರಿಸಿದಾಗ ತಾನು ಮಾತ್ರ

ಅಮೂಲ್ಯವಾದುದನ್ನು ಧರಿಸುವುದು ಹೇಗೆಂದು ಅವಳೂ ನಾರುಮಡಿಯನ್ನೇ ಧರಿಸಿದ ಪತಿವ್ರತೆಯು.

ಗಂಡನ ಆಯುಸ್ಸು ಮುಗಿಯುತ್ತಿರುವಾಗ ಸಾವಿತ್ರಿಯು ಮಾನಸಿಕ ಬಲ ಹಾಗೂ ಶಾರೀರಿಕ ಬಲಗಳೆರಡನ್ನೂ ತೋರಿದಳು.

ತನ್ನ ಪತಿಯು ಆಯುಸ್ಸು ಮುಗಿಯುತ್ತಿದ್ದರೂ ತಪಸ್ಸು ಮಾಡುತ್ತಲೇ ಜತೆ ಜತೆಯಾಗಿ ಅತ್ತೆ ಮಾವಂದಿರ ಸೇವೆ ಪತಿಸೇವೆಯನ್ನು ಮಾಡುತ್ತಿದ್ದಳೂ. ನಂತರ ಮೂರು ದಿವಸ ಕಠೋರ ವ್ರತ ಹಾಗೂ ಉಪವಾಸ ಮಾಡಿದಳು. ಹೃದಯದಲ್ಲಿ ಬೆಂಕಿಯ ಜ್ವಾಲೆ ದಹಿಸುತ್ತಿದ್ದರೂ ಮುಖದಲ್ಲಿ ಪ್ರಫುಲ್ಲ ಭಾವವನ್ನು ಬೀರುತ್ತಾ ಗಂಡನೊಂದಿಗೆ ವ್ಯವಹರಿಸಿದಳು.

ಸತ್ಯವಂತನ ಕಾಲ ಬಂದಾಗ ಮೃತನಾದಾಗಲೂ, ಯಮಧರ್ಮನು ಅವನನ್ನು ಸೆಳೆಯಳು ಬಂದಾಗಲೂ, ಧೃತಿಗೆಡದೆ ಕರ್ತವ್ಯ ಹಾಗೂ ಸ್ಥಿರವಿವೇಚನೆಗಳಿಂದ ಮೆರೆದು ಯಮನ ಹಿಂದೆಯೆ ಹೊರಟಳು.

ಅತಿ ದುರ್ಗಮವಾದ ಕಾಡುದಾರಿಗಳಲ್ಲೂ ಯಮನ ಹಿಂದೆ ಹೊರಟು ಅಮೂಲ್ಯವಾದ ಪತಿವ್ರತೆಯ ಧರ್ಮಗಳನ್ನು ತಿಳಿಸಿ ಯಮನನ್ನು ಸಂತೋಷಪಡಿಸಿದಳು.

ಯಮನಿಂದ ಮಾವನಿಗೆ ಕಣ್ಣು, ತಂದೆಗೆ ನೂರು ಜನ ಗಂಡು ಮಕ್ಕಳು, ತನಗೆ ಸತ್ಯವಂತನಿಂದ ನೂರು ಮಕ್ಕಳು ಹೀಗೆ ವರವನ್ನು ಪಡೆದು ಉಭಯ ಕುಲಗಳನ್ನು ಉದ್ಧರಿಸಿದಳು.

ಯಮಧರ್ಮನೇ ಸಂತುಷ್ಟನಾಗಿ ಅವಳ ಪತಿಯನ್ನು ದೀರ್ಘಾಯುಷ್ಯಂತ–ನನ್ನಾಗಿಸಿ ಕಳುಹಿಸಿದನು. ಹೀಗೆ ತನ್ನ ಸಾಧನೆಯಿಂದ, ತನ್ನ ಕರ್ತವ್ಯ ಪ್ರಜ್ಞೆಯಿಂದ ಅದೃಷ್ಟದೊಂದಿಗೆ ಹೋರಾಡಿ ಸಾಧನೆಯಿಂದ ಏನನ್ನು ಸಾಧಿಸಬಹುದೆಂದು ಜಗತ್ತಿಗೆ ತೋರಿದ ಪತಿವ್ರತಾ ಶಿರೋಮಣಿಯೇ ಸಾವಿತ್ರೀ.

ಇಂತಹ ಅನನ್ಯ ಸಾಧಾರಣವಾದ ಗುಣಗಳು ಇದ್ದದ್ದರಿಂದಲೇ ಏತದ್ದೇಶೀಯರು ಜ್ಯೇಷ್ಠ ಮಾಸದಲ್ಲಿ ಸಾವಿತ್ರಿಯ ಪೂಜೆಯನ್ನು ಮಾಡುತ್ತಿರುವರು.

. . . .

## ಸುವರ್ಚಲೆ – ಕನ್ಯೆಯರು ಎಂಥವರನ್ನು ಆರಿಸಬೇಕು

ಮದುವೆಯಾಗುವ ಕನ್ಯೆಯರು ಕನ್ಯಾ ವರಯತೆ ರೂಪಂ ಎಂಬಂತೆ ಸುಂದರವಾದ ವರನನ್ನೇ ಆರಿಸುವರು. ವೈದಿಕರೆಂದರೆ ಶಿಖೆ ಇದ್ದರೆ ಖಂಡಿತಾ ವಿವಾಹವಾಗಲು ಇಚ್ಚಿಸುವುದಿಲ್ಲ. ಆದರೆ ಲೌಕಿಕ ಸುಖಕ್ಕೆ ಪ್ರಾಧಾನ್ಯ ನೀಡದೆ ಅಲೌಕಿಕಾನಂದಕ್ಕೆ ಪ್ರಾಧಾನ್ಯ ನೀಡಬೇಕೆಂಬ ಧರ್ಮವನ್ನು ಸುವರ್ಚಲೆಯಿಂದ ಕಲಿಯಬೇಕು.

ದೇವಲರ ಪುತ್ರಿ ಸುವರ್ಚಲೆ ಅತ್ಯಂತ ಚೆಲುವೆ. ಪ್ರೌಢಳಾಗಿರುವ ಪುತ್ರಿ ಸುವರ್ಚಲೆಯ ವಿವಾಹಕ್ಕೆ ದೇವಲರು ವರರನ್ನು ಅರಸುತ್ತಿದ್ದಾರೆ. ಆದರೆ ಸುವರ್ಚಲೆಯ ನಿರ್ಬಂಧವೊಂದಿದೆ.

ತಾನು ವಿವಾಹವಾಗುವ ವರನು ಕುರುಡನಾಗಿರಬೇಕು ಹಾಗೂ ಕುರುಡನಾಗಿರಬಾರದು.

ದೇವಲರಿಗೆ ಅರ್ಥವಾಗಲಿಲ್ಲ. ಏನಮ್ಮ ಇಂಥ ಕುರುಡನನ್ನು ವರಿಸುತ್ತಿರುವೆ? ಎಂದು ಕೇಳಿದರು.

ನೀವು ವರನನ್ನು ಕರೆಯಿರಿ ಅಂಧನಾದ ಅನಂಧನಾದ ವರರಿದ್ದರೆ ತಾನು ವಿವಾಹವಾಗುವೆ ಎಂದಳು.

ಸುವರ್ಚಲೆಯನ್ನು ವರಿಸಲು ನಾನಾ ಕಡೆಯಿಂದ ವರರು ತಂದೆ ತಾಯಿಗಳ ಜೊತೆಗೆ ಬಂದಿದ್ದಾರೆ. ಗೋತ್ರಶುದ್ಧಿ, ಚಾರಿತ್ರಶುದ್ಧಿ, ರೂಪಶುದ್ಧಿಗಳು, ಕೂಡಿದ್ದರೂ ಸುವರ್ಚಲೆ ಬಯಸಿದ ಅಂಧ–ಅನಂಧರಾದವರು ಬಂದಿರಲಿಲ್ಲ. ಎಲ್ಲರೂ ಅನಂಧರೇ ಬಂದಿದ್ದರು. ಸುವರ್ಚಲೆಯ ಕರಾರನ್ನು ಕೇಳಿದ ಉದ್ದಾಲಕರ ಸುಪುತ್ರ ಶ್ವೇತಕೇತುವು ಸುವರ್ಚಲೆಯನ್ನು ಕಂಡು ಹೀಗೆಂದರು.

ಲೇ ಸುರ್ವಚಲೆ, ನಾನು ನೀನು ಹೇಳಿದಂತೆ ಅಂಧ–ಅನಂಧನಾಗಿರುವೆನು ಎಂದು.

ಸುವರ್ಚಲೆ ಹೇಗೆ? ಎಂದು ಪ್ರಶ್ನಿಸಿದಳು.

ನಿನ್ನ ವಿಚಿತ್ರ ಬಯಕೆ ನನಗೆ ಅರ್ಥವಾಗಿದೆ.

ಭಗವಂತನ ಮಹಿಮೆಯನ್ನು ತಿಳಿದ ನಾನು ಭಗವಂತನೇ ಸಾರ,

ಸಂಸಾರವೆಲ್ಲ ಅಸಾರವೆಂದು ತಿಳಿದು ಪ್ರಪಂಚದಲ್ಲಿ ಅನಾಸಕ್ತಿಯನ್ನು ಹೊಂದಿದ್ದೇನೆ. ಈ ದೃಷ್ಟಿಯಿಂದ ನಾನು ಅಂಧನು.

ಯಾವುದನ್ನು ತಿಳಿಯುವುದರಿಂದ ಸಮಸ್ತವೂ ತಿಳಿದಂತೆ ಆಗುವುದೋ ಅಂತಹ ಪರಮವೇದ್ಯನಾದ ಭಗವಂತನನ್ನು ತಿಳಿದಿದ್ದೇನೆ. ಆದ್ದರಿಂದ ಅನಂಧನು ನಾನು ಎಂದಾಗ ಸುವರ್ಚಲೆಯು ಶ್ವೇತುಕೇತುವನ್ನು ವರಿಸಿ ವಿವಾಹವಾದಳು.

ಇಂದಿನ ಸ್ತ್ರೀಯರು ಸಹ ವೈರಾಗ್ಯವಿಲ್ಲದ, ನಾನಾ ಕಾಮನೆಯನ್ನಿರಿಸಿ–ಕೊಂಡಿರುವ ವರರನ್ನು ಕೇಳದೆ ಸುವರ್ಚಲೆ ಕೇಳಿದಂತೆ ವರನು ಭಗವದ್ಭಕ್ತನಾಗಿರುವನೆ, ತ್ರಿಕಾಲ ಸಂಧ್ಯಾವಂದನೆ ಮಾಡುತ್ತಿರುವನೆ ಎಂದು ಕೇಳಿ, ಅಂತಹವನನ್ನೇ ವಿವಾಹವಾಗಬೇಕು. ಅದು ಬಿಟ್ಟು ವೈದಿಕನಾಗಿರುವನು ಎಂದರೆ ತಿರಸ್ಕರಿಸುವ ಹೆಣ್ಣುಗಳು ಪುರಂದರದಾಸರ ಪದ್ಯಕ್ಕೆ ದೃಷ್ಟಾಂತ–ರಾಗಿರುವರು.

ಸೌಂದರ್ಯವು ಶಾಶ್ವತವಲ್ಲ –

ಇಂದು ಇದ್ದು ಹೋಗುವ ವಸ್ತು. ಶಾಶ್ವತ ಬಂಧುವಾದ ಭಗವಂತನ ಬಂಧುಗಳನ್ನು ಹೊಂದುವುದೇ ಜೀವನ ಮುಖ್ಯ ಗುರಿ ಎಂದು ಸುವರ್ಚಲೆಯ ಕಥೆಯಿಂದ ತಿಳಿಯುವುದು.

. . . .

## ಮೈತ್ರೇಯಿಯ ಅಧ್ಯಾತ್ಮ ನಿಷ್ಠೆ

ಯಾಜ್ಞವಲ್ಕ್ಯರಿಗೆ ಮೈತ್ರೇಯೀ ಹಾಗೂ ಕಾತ್ಯಾಯಿನೀ ಎಂಬ ಇಬ್ಬರು ಧರ್ಮಪತ್ನಿಯರು. ಅವರಲ್ಲಿ ಮೈತ್ರೇಯಿಯು ಬ್ರಹ್ಮವಾದಿನಿಯಾಗಿದ್ದಳು. ಕಾತ್ಯಾಯನೀ ಸಾಮಾನ್ಯ ಸ್ತ್ರೀಯ ಬುದ್ಧಿವುಳ್ಳವಳಾಗಿದ್ದಳು.

ಯಾಜ್ಞವಲ್ಕ್ಯರು ಒಂದು ಬಾರಿ ಸನ್ಯಾಸವನ್ನು ಸ್ವೀಕರಿಸಲು ನಿಶ್ಚೈಯಿಸಿದರು. ಆಗ ತನ್ನ ಇಬ್ಬರು ಪತ್ನಿಯರನ್ನು ಕರೆದು "ನಾನು ಸನ್ಯಾಸವನ್ನು ಸ್ವೀಕರಿಸಲು ಸಂಕಲ್ಪಿಸಿದ್ದೇನೆ. ಆದ್ದರಿಂದ ನನ್ನ ಆಸ್ತಿಯನ್ನು ನಿಮ್ಮಿಬ್ಬರಿಗೂ ವಿಭಾಗಿಸುತ್ತೇನೆ" ಎಂದರು.

ಮೈತ್ರೇಯಿಯು – ಸ್ವಾಮಿ, ಈ ಭೂಮಿಯು ಸರ್ವ ಐಶ್ವರ್ಯದಿಂದ ಪೂರ್ಣವಾಗಿ ನನ್ನ ವಶವಾದರೆ ನಾನು ಮೋಕ್ಷವನ್ನು ಹೊಂದಬಹುದೇ

ಎಂದು ಕೇಳಿದಳು. ಇದಕ್ಕೆ ಉತ್ತರವಾಗಿ – ಮನೆ, ಮಂಚ, ಹಾಸಿಗೆ ಇವುಗಳಿಂದ ಸುಖಜೀವನ ಲಭೀಸೀತು ಹೊರತು ಮೋಕ್ಷ ಖಂಡಿತಾ ಲಭಿಸುವುದಿಲ್ಲ ಎಂದರು. ಯಾಜ್ಞವಲ್ಕ್ಯರು – ಹಾಗಾದರೆ ಈ ಮೋಕ್ಷ ಕೊಡದ ಸಂಪತ್ತಿನಿಂದ ನನಗೇನು? ಎಂದು ಸಂಪತ್ತನ್ನು ತಿರಸ್ಕರಿಸಿದಳು. ಯಾವುದು ಮೋಕ್ಷ ಸಾಧನವೋ ಅದನ್ನೇ ಉಪದೇಶಿಸಿರಿ ಎಂದಳು.

***ಯಾಜ್ಞವಲ್ಕ್ಯರ ಉಪದೇಶ :***

ಮೈತ್ರೇಯಿ, ನಾನು ಇವಳಿಗೆ ಪ್ರಿಯನಾಗಬೇಕೆಂದು ಪತಿಯ ಇಚ್ಛೆಯಿಂದ ಪತಿಯು ಪತ್ನಿಗೆ ಪ್ರಿಯನಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಪತಿಯು ಪತ್ನಿಗೆ ಪ್ರಿಯನಾಗುತ್ತಾನೆ.

ಇದೇ ರೀತಿ, ಮಕ್ಕಳು ತಮ್ಮ ಇಚ್ಛೆಯಿಂದ ಪ್ರಿಯರಾಗುವುದಿಲ್ಲ. ಶ್ರೀಹರಿಚ್ಛೆಯಿಂದಲೇ ತಂದೆ ತಾಯಿಗಳಿಗೆ ಪ್ರಿಯರಾಗುವರು.

ಸಂಪತ್ತಿನ ದೇವತೆ ಕುಬೇರನ ಇಚ್ಛೆಯಂತೆ ಸಂಪತ್ತು ಪ್ರಿಯವಾಗುವುದಿಲ್ಲ. ಶ್ರೀಹರೀಚ್ಛೆಯಿಂದ ಪ್ರಿಯರಾಗುವರು.

ಗೋವು ಮೊದಲಾದ ಪಶುಗಳು ಪಶ್ವಭಿಮಾನಿಯ ಇಚ್ಛೆಯಿಂದ ಪ್ರಿಯವಾಗುವುದಿಲ್ಲ ಶ್ರೀಹರಿಚ್ಛೆಯಿಂದ ಪ್ರಿಯವಾಗುವುವು.

ಸರ್ವವಸ್ತು ಅಭಿಮಾನಿನಿಯಾದ ಲಕ್ಷ್ಮೀದೇವಿಯ ಇಚ್ಛೆಯಿಂದ ಸರ್ವವಸ್ತುಗಳು ಪ್ರಿಯವಾಗುವುದಿಲ್ಲ. ಕಿಂತು ಭಗವಂತನ ಇಚ್ಛೆಯಿಂದಲೇ ಸರ್ವವಸ್ತುಗಳೂ ಪ್ರಿಯವಾಗುವುವು.

ಇದರಿಂದ ಸ್ತ್ರೀಯರು ತಿಳಿಯಬೇಕಾದದ್ದು ತಾನು ಎಲ್ಲರಿಗೂ ಪ್ರಿಯವಾಗುವುದು, ತನಗೆ ಎಲ್ಲರೂ ಪ್ರಿಯರಾಗುವುದು ಅವರವರ ಇಚ್ಛೆಯಂತೆ ಅಲ್ಲ. ಭಗವಂತನ ಇಚ್ಛೆಯಿಂದಲೇ ಎಲ್ಲರೂ ಪ್ರಿಯರಾಗುವರು ಎಂಬ ಅನುಸಂಧಾನವನ್ನು ಸ್ತ್ರೀಯು ಬೆಳೆಸಿಕೊಂಡು ಸಮಸ್ತ ಕಾರ್ಯಗಳಲ್ಲಿಯೂ ಭಗವಂತನ ಇಚ್ಛೆಯನ್ನು ಅರಿತು ಸಂಸಾರ ನಿರ್ವಹಿಸಬೇಕು.

**ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ ।**
**ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ ॥**

*– ಬೃ.ಉ. 4–5 ಬ್ರಾಹ್ಮಣ*

**ಪತಿಃ ಜಾಯಾ ಪ್ರಿಯೋ ನೈವ ಸ್ವೇಚ್ಛಯಾ ತು ಭವಿಷ್ಯತಿ ವಿಷ್ಣೋರಿಚ್ಛಾಬಲೇನೈವ ॥**

. . . .

## ಸೀತಾ ಕೌಸಲ್ಯೆಯರ ಸಂವಾದ

ಕೌಸಲ್ಯೆಯು, ತನ್ನ ಮಗ ಶ್ರೀರಾಮಚಂದ್ರನು ತಂದೆಯ ಮಾತಿಗೆ ಬೆಲೆ ಕೊಟ್ಟು ವನವಾಸಕ್ಕೆ ಹೊರಟಾಗ ಸೀತೆಯೂ ಅರಣ್ಯಕ್ಕೆ ಹೋಗಲು ಸಿದ್ಧಳಾಗಿ, ತನ್ನ ಅತ್ತೆಯಾದ ಕೌಸಲ್ಯೆಯನ್ನು ನಮಸ್ಕರಿಸಲು ಬರುತ್ತಾಳೆ.

ಹುಟ್ಟಿದಾಗಿನಿಂದಲೂ ಅರಮನೆ – ಸಿರಿಮನೆಯಲ್ಲಿಯೇ ಬೆಳೆದ ಸೀತೆ ರಾಜ್ಯ ಕಳೆದುಕೊಂಡು ಅಷ್ಟ ದರಿದ್ರನಾಗಿ ಅಡವೀ ಪಾಲಾದ ನನ್ನ ಪುತ್ರ ರಾಮನನ್ನು ಸೀತೆಯು ಎಲ್ಲಿ ನಡು ಮಧ್ಯದಲ್ಲಿಯೇ ಬಿಟ್ಟು ಹೋಗುವಳೋ ಎಂದು ತನ್ನ ಸೊಸೆ ಸೀತೆಗೆ ಹೀಗೆ ಉಪದೇಶ ಮಾಡುವಳು.

ಸೀತೆ, ಸ್ತ್ರೀಯರು ತಮ್ಮ ಪತಿಗಳಿಂದ ನಿರಂತರವೂ ಸುಖ ಸಮಾಧಾನಗಳನ್ನು ಹೊಂದಿ, ಬೇಕಾದಂತೆ ಭೋಗಗಳನ್ನು ಅನುಭವಿಸಿ, ಸುಖಪಟ್ಟರೂ ಕೂಡ ತನ್ನ ಪತಿ ಎಂದಾದರೂ ಆಪತ್ಕಾಲಕ್ಕೆ ಸಿಲುಕಿದಾಗ ಅವನನ್ನು ಗೌರವಿಸುವುದಿಲ್ಲ. ಅಸಹ್ಯ ಪಟ್ಟುಕೊಳ್ಳುತ್ತಾರೆ. ಇದು ಸ್ತ್ರೀಯರ ಸ್ವಭಾವ.

**ಅಸತ್ಯಃ ಸರ್ವಲೋಕೇಽಸ್ಮಿನ್ ಸತತಂ ಸತ್ಕೃತಾ ಪ್ರಿಯೈಃ ।**
**ಭರ್ತಾರಂ ನಾನು ಮನ್ಯಂತೇ ವಿನಿಪಾತಗತಂ ಸ್ತ್ರಿಯಃ ॥**

**ಏಷ ಸ್ವಭಾವೋ ನಾರೀಣಾಂ ಅನುಭೂಯ ಪುರಾ ಸುಖಮ್ ।**
**ಅಲ್ಪಾಮಪಿ ಆಪದಂ ಪ್ರಾಪ್ಯ ದುಷ್ಯಂತಿ ಪ್ರಜಹತ್ಯಪಿ ॥**

ಜನ್ಮಾವಧಿ ಯಾವ ಪತಿಯಿಂದ ಸುಖ ಸಂಪದಗಳನ್ನು ಪಡೆಯುವರೋ ಅವನಿಂದ ಸ್ವಲ್ಪ ಆಪತ್ತು ಬಂದರೂ ಸರಿ ಒಮ್ಮೆಲೆ ಅವರ ದುಷ್ಟ ಸ್ವಭಾವ ಹೊರಗೆದ್ದು ಕಾಣುತ್ತದೆ. ಪತಿಯನ್ನೇ ಬಿಟ್ಟು ಹೋಗುತ್ತಾರೆ.

ಸತ್ಯಶೀಲಗಳನ್ನು ಗಾಳಿಗೆ ತೂರಿ, ಕಲುಷಿತ ಚಿತ್ತರಾದ ಸ್ತ್ರೀಯರ ಹೃದಯವೇನೆಂಬುದೆ ತಿಳಿಯುವುದಿಲ್ಲವಾದರೂ ದುರವಸ್ಥೆಯಲ್ಲಿದ್ದ ಪತಿಯನ್ನು ಕ್ಷಣ ಮಾತ್ರದಲ್ಲಿ ಅವನಿಂದ ದೂರ ಸರಿದು ನಿಲ್ಲುತ್ತಾರೆ.

ಗಂಡನ ಕುಲ, ಶೀಲ, ಉಪಕಾರ, ವಿದ್ಯೆ, ಧನ, ದಾನ ಇವಾವುದನ್ನು ಚಂಚಲಚಿತ್ತರಾದ ಸ್ತ್ರೀಯರು ನೆನೆಯುವುದಿಲ್ಲ.

**ನ ಕುಲಂ ನ ಕೃತಂ ವಿದ್ಯಾಂ ನ ದತ್ತಂ ನಾಪಿ ಸಂಗ್ರಹಂ ।**
**ಸ್ತ್ರೀಣಾಂ ಗೃಹ್ಣಾತಿ ಹೃದಯಂ ಅನಿತ್ಯ ಹೃದಯಾಹಿತಾಃ ॥**

ಇದೆಲ್ಲ ಹೇಳಿದ್ದು ಸಾಮಾನ್ಯ ಸ್ತ್ರೀಯರ ಬಗ್ಗೆ ನಿನ್ನಂತಹವಳಿಗಲ್ಲ. ನೀನಾದರೂ ಸಾಮಾನ್ಯ ಸ್ತ್ರೀಯಂತೆ ನನ್ನ ರಾಮನನ್ನು ಅವಮಾನಿಸಬೇಡ. ನಿನ್ನ ಪತಿಯಾದ ರಾಮನು ವನವಾಸದಲ್ಲಿದ್ದರೂ, ನಿರ್ಧನನಾದರೂ, ಸಧನನಾದರೂ ನಿನಗೆ ಖಂಡಿತಾ ಪತಿ ಎಂಬುದನ್ನು ಮರೆಯ ಬೇಡ.

**ಸ ತ್ವಯಾ ನಾವಮಂತವ್ಯಃ ಪುತ್ರಃ ಪ್ರವ್ರಾಜಿತೋ ಮಮ ।**
**ತವ ದೈವತಮಸ್ತ್ವೇಷಃ ನಿರ್ಧನಃ ಸಧನೋಽಪಿ ವಾ ॥**

ಕೌಸಲ್ಯೆಯ ಮಾತಿಗೆ ಸೀತಾದೇವಿಯು ಹೀಗೆ ಹೇಳುವಳು.

ತಾಯೇ, ನೀನು ಏನನ್ನು ಉಪದೇಶಿಸಿರುವಿಯೋ ಅದನ್ನೇ ನಾನು ಅನುಸರಿಸುತ್ತೇನೆ. ಗಂಡನನ್ನು ಹೇಗೆ ನೋಡಿಕೊಳ್ಳಬೇಕೆಂದು ನನಗೆ ತಿಳಿದಿದೆ. ಬೇರೆ ಸಾಮಾನ್ಯ ಸ್ತ್ರೀಯರಂತೆ ನನ್ನನ್ನು ತಿಳಿಯಬೇಡಮ್ಮಾ.

**ಅಭಿಜ್ಞಾಸ್ಮಿ ಯಥಾ ಭರ್ತುಃ ವರ್ತಿತವ್ಯಂ ಶ್ರುತಂ ಚ ಮೇ ।**
**ನ ಮಾಂ ಅಸಜ್ಜನೇನ ಆರ್ಯಾ ಸಮಾ ನೇತುಮರ್ಹತಿ ॥**

ತಂದೆಯು ಕೊಡುವುದು ಅಲ್ಪವೆ, ತಾಯಿಯು ಕೊಡುವುದು ಅಲ್ಪವೆ, ತಂದೆ ತಾಯಿಗಳು ಕೊಡುವುದಕ್ಕಿಂತಲೂ ಅಧಿಕವಾಗಿ ಕೊಡುವ ಪತಿಯನ್ನು ಯಾರು ತಾನೆ ಪೂಜಿಸುವುದಿಲ್ಲ?

**ಮಿತಂ ದದಾತಿ ಹಿ ಪಿತಾ ಮಿತಂ ಮಾತಾ ಮಿತಂ ಸುತಃ ।**
**ಅಮಿತಸ್ಯ ಹಿ ದಾತಾರಂ ಭರ್ತಾರಂ ಕಾ ನ ಪೂಜಯೇತ್ ॥**

ಸ್ತ್ರೀಯರಿಗೆ ಗಂಡನೆ ದೇವತೆಯಾಗಿರುವುದರಿಂದ ನಾನೇಕೆ ಅವಮಾನಿಸಲಿ? ಆದ್ದರಿಂದ ಚಿಂತೆ ಬೇಡ, ನಾನು ಚೆನ್ನಾಗಿ ನೋಡಿಕೊಳ್ಳುವೆ ಎಂದಳು.

ಈ ಸೀತಾ–ಕೌಸಲ್ಯೆಯರ ಸಂವಾದದಿಂದ ಸ್ತ್ರೀಯರು ತನ್ನ ಪತಿಯು ಧನಿಕನಾದರೂ ನಿರ್ಧನಿಕನಾದರೂ, ರೋಗಿಯಾದರೂ, ಇನ್ನಾವುದೇ

ಅವಸ್ಥೆಯಲ್ಲಿದ್ದರೂ ಅವನನ್ನು ಅವಮಾನಿಸದೆ ಚೆನ್ನಾಗಿ ನೋಡಿಕೊಳ್ಳಬೇಕು. ಸ್ತ್ರೀಯರಿಗೆ ಪತಿಯೇ ದೈವ ಎಂಬಂಶ ವ್ಯಕ್ತವಾಗುತ್ತದೆ.

. . . .

## ಪಾರ್ವತಿ–ಪರಮೇಶ್ವರರ ಸಂವಾದ

## ಸ್ತ್ರೀಯರ ಕರ್ತವ್ಯಗಳು – ಮಹಾಭಾರತ

### *ಸ್ತ್ರೀಯರು ಮಕ್ಕಳನ್ನು ಬೆಳೆಸುವುದು :*

- ಗಂಡು ಮಕ್ಕಳಿಗೆ ಸರಿಯಾದ ಕಾಲಕ್ಕೆ ಉಪನಯನ ಮಾಡುವುದು. ಹಾಗೂ ಮೂರು ಹೊತ್ತು ಸಂಧ್ಯಾವಂದನೆ, ಏಕಾದಶೀ ಉಪವಾಸ, ಸ್ನಾನಾನಂತರ ಗೋಪಿಚಂದನ ಧಾರಣೆ, ಮುದ್ರೆಗಳನ್ನು ಧರಿಸುವಂತೆ ಪ್ರೇರಿಸಬೇಕು.
- ಹೆಣ್ಣು ಮಕ್ಕಳು ಕನ್ಯೆಯಾಗಿರುವಾಗ ಶೂದ್ರಪ್ರಾಯರಾಗಿದ್ದರೂ ಈ ವಯಸ್ಸಿನಲ್ಲಿ ನೀಡಿದ ಸದ್ಭಾವನೆ ಸದಾಚಾರಗಳೇ ಮುಂದೆ ಫಲ ನೀಡುವುದರಿಂದ ಸ್ನಾನ, ತುಲಸೀಪೂಜೆ, ಕುಂಕುಮಧಾರಣೆ, ಕೈತುಂಬ ಬಳೆ, ದೇವರ ಹೂವು ಮುಡಿಯುವುದು ಇವುಗಳನ್ನು ಅಭ್ಯಾಸ ಮಾಡಿಸಬೇಕು.
- ಪ್ರಾತಃ ಕಾಲದಲ್ಲಿ ದೇವರ ಸ್ತೋತ್ರಗಳು, ಹಾಡುಗಳು, ಸಣ್ಣ ಸಣ್ಣ ಶ್ಲೋಕಗಳನ್ನು ಹೇಳಿಕೊಟ್ಟು ಪ್ರೋತ್ಸಾಹಿಸಬೇಕು. ನಂತರ ದೇವರಿಗೆ ನಮಸ್ಕರಾದಿಗಳನ್ನು ಮಾಡಿಸಬೇಕು.
- ಸೂರ್ಯೋದಯವಾದ ಮೇಲೂ ಮಲಗಿರುವ ಪದ್ಧತಿ ದುಷ್ಟಪದ್ಧತಿ, ಮನೆಗೆ ಅನಿಷ್ಟವಾದದ್ದು.
- ಹಾಸಿಗೆಯಿಂದ ಏಳುತ್ತಲೇ ತಲೆ ಕೂದಲುಗಳನ್ನು ಕೆದರಿಕೊಂಡು ಇರಬಾರದು ಹಾಗೂ ಎರಡು ಕೈಗಳಿಂದ ತಲೆ ತುರಿಸಿಕೊಳ್ಳುವುದು ಕಲಿ ಭಾರ್ಯಯ ಆಗಮನದ ಸೂಚಕವೆಂದು ತಿಳಿಸುವುದು.
- ಬೆಳಿಗ್ಗೆ ಮನೆಯ ಮುಂದೆ ನೀರು, ಗೋಮಯದಿಂದ ಸಾರಿಸಿ ರಂಗೋಲೆಯನ್ನು ಹಾಕಲು ಹೇಳಿಕೊಡುವುದು.
- ಹಿಂದಿನ ದಿನ ಊಟ ಮಾಡಿದ ಎಂಜಲೆಲೆಯನ್ನು ಬೆಳಿಗ್ಗೆಯವರೆಗೂ ಇಡಬಾರದು. ಹಿಂದಿನ ದಿನದ ಕಸವನ್ನು ಮೂಲೆಯಲ್ಲಿಡದಂತೆ ಪ್ರಚೋದಿಸುವುದು.

- ಬೆಳಿಗ್ಗೆ ಎದ್ದ ಕೂಡಲೇ ಅಣ್ಣ-ತಮ್ಮಂದಿರ ಜೊತೆಗೆ ಜಗಳವಾಡದಂತೆ ಎಚ್ಚರವಹಿಸಿ ಮಕ್ಕಳನ್ನು ಎಬ್ಬಿಸುವುದನ್ನು ಕಲಿಸುವುದು. "ಕೌಸಲ್ಯಾ-ಸುಪ್ರಜಾರಾಮ" ಎಂಬಂತೆ ಎಬ್ಬಿಸುವುದು.
- ಎದ್ದ ಕೂಡಲೇ ದೇವರದ ದರ್ಶನ, ಮುಖಪ್ರಕ್ಷಾಲನಾದಿಗಳನ್ನು ಮಾಡಿಸಿ ತುಲಸೀವಂದನೆಯನ್ನು ಮಾಡುವುದನ್ನು ಕಲಿಸುವುದು.
- ಬೆಳಗಿನ ನಿತ್ಯ ಕರ್ಮಾನುಷ್ಠಾನವಾದ ಮೇಲೆ ಪಾನೀಯ ತಿಂಡಿ ಮೊದಲಾದವುಗಳನ್ನು ತಿನ್ನುವ ಅಭ್ಯಾಸ ಮಾಡಬೇಕು.
- ಏಕಾದಶಿಯಂತೂ ನಿರ್ಜಲ ಉಪವಾಸವನ್ನು ಅಭ್ಯಾಸ ಮಾಡಿಸಬೇಕು. ಏಕಾದಶಿದಿನದಂದು ನಿರಂತರ ಭಗವಂತನ ಕೈಂಕರ್ಯದಲ್ಲೇ ತೊಡಗಿಸಬೇಕು.
- ಗೌರಿಪೂಜೆ, ಗೌರಿ, ಲಕ್ಷ್ಮೀ ಮೊದಲಾದ ದೇವರನ್ನು ಹೂವು, ಅಕ್ಷತೆಗಳಿಂದ ಪೂಜಿಸುವುದನ್ನು ಹೇಳಿಕೊಡಬೇಕು. ತುಲಸಿಗೆ ನೀರು ಹಾಕುವುದನ್ನು ಕಲಿಸಬೇಕೇ ವಿನಹ ತುಲಸಿಯನ್ನು ಕಿತ್ತುವುದನ್ನು ಹೇಳಿಕೊಡಬಾರದು.

ಇದರ ಜೊತೆಗೆ –

- ಧಾನ್ಯ, ಪಾತ್ರೆ, ಒರಳು, ಪೊರಕೆ, ಒನಕೆ ದೇವರ ಪಾತ್ರೆಗಳು ಇವುಗಳನ್ನು ಕಾಲಿನಿಂದ ತುಳಿಯದಂತೆ ಕಾಲಿನ ಸ್ಪರ್ಶವಾಗದಂತೆ ತಿಳಿ ಹೇಳುವುದು.
- ಪಾತ್ರೆಗಳನ್ನು ಶುದ್ಧೀಕರಿಸುವಾಗ ಗೋಮಯ, ಹುಣಸೇಹಣ್ಣು ಇವುಗಳಿಂದ ಚಿಮುಕಿಸಿ ನಂತರ ಪಾತ್ರೆಯನ್ನು ಒಳಗೆ ತರಬೇಕು.
- ಪೊರಕೆ, ಚಪ್ಪಲಿ ಇವುಗಳನ್ನು ಮನೆಯ ಎದುರಿಗೆ ಇಡದಂತೆ ತಿಳಿಸಿ ಅವುಗಳನ್ನು ಸ್ಪರ್ಶಿಸಿದಾಗ ನೀರಿನಿಂದ ಕೈ ತೊಳೆಯುವ ಅಭ್ಯಾಸ ಮಾಡಿಸುವುದು.
- ಮಲಮೂತ್ರ ವಿಸರ್ಜಿಸಿದಾಗ ಕೈಕಾಲುಗಳನ್ನು ಪೂರ್ಣವಾಗಿ ತೊಳೆಯುವಂತೆ ತಿಳಿಸುವುದು.
- ಮನೆಗೆ ದೊಡ್ಡವರು ಬಂದಾಗ ಅವರಿಗೆ ಮೊದಲು ನಮಸ್ಕರಿಸುವುದನ್ನು ಹಾಗೂ ಕುಶಲ ಪ್ರಶ್ನೆಗಳನ್ನು ಕೇಳುವ ಅಭ್ಯಾಸ ಮಾಡಿಸಬೇಕು.

- ಕೋಪತಾಪಗಳನ್ನು ಬಿಡಿಸಿ ತಾಳ್ಮೆ, ಸಹನೆ ಬೆಳೆಸಿಕೊಳ್ಳಲು ಪ್ರೇರೇಪಿಸಬೇಕು.
- ನಿತ್ಯಕಲಹ, ಇತರರನ್ನು ದ್ವೇಷಿಸುವುದು, ಈರುಳ್ಳಿ, ಬೆಳ್ಳುಳ್ಳಿ ಮೊದಲಾದ ತಾಮಸ ಪದಾರ್ಥಗಳು ಕಲಿಬಾರ್ಯೆಯ ಸ್ಥಾನವಾದ್ದರಿಂದ ಇವು ಹೊಟ್ಟೆ ಸೇರಿದಾಗ ತಾಮಸಬುದ್ಧಿಯೇ ಉಂಟಾಗುತ್ತದೆ ಎಂದು ತಿಳಿಸುವುದು.
- ಯಾವಾಗಲೂ ಕನ್ನಡಿ ಮುಂದೆ ನಿಂತು ಅಲಂಕರಿಸಿಕೊಳ್ಳುತ್ತಿರುವುದು, ಮೋಜಿನ ಜೀವನ ಇವುಗಳನ್ನು ನಡೆಸದೆ ತ್ಯಾಗ ಜೀವಕ್ಕೆ ಬುನಾದಿ ಹಾಕುವುದು.
- ಕದಿಯುವುದು, ಅಸೂಯೆ, ಅಸಹನೆ, ದ್ವೇಷ, ದೊಡ್ಡವರು ಬಂದಾಗ ಕುಳಿತೇ ಇರುವುದು, ಕಾಲು ಚಾಚಿಕೊಂಡು ಇರುವುದು, ಅವಹೇಳನ ಮಾಡುವುದು ನರಕಕ್ಕೆ ಹಾದಿ ಎಂದು ತಿಳಿಸಿ, ಹೇಳಿ, ಆ ದುರ್ಬುದ್ಧಿಯನ್ನು ಬಿಡಿಸುವುದು.
- **ಕುಕ್ಕುಟ ಶ್ವಾನ ಮಾರ್ಜಾರಾನ್ ಪೋಷಯಂತಿ ದಿನತ್ರಯಂ ।**
  **ಇಹ ಜನ್ಮನಿ ಶೂದ್ರತ್ವಂ ಮೃತಶ್ಚಶ್ವಾ ಶ್ವಾಚ ಜಾಯತೇ ॥**

  ನಾಯಿ, ಬೆಕ್ಕು ಇವುಗಳನ್ನು ಸಾಕದೆ, ಗೋವುಗಳನ್ನು ಸಾಕುವುದು, ಗೋಪೂಜೆ ಮಾಡಿಸುವುದು. ಕೂದಲನ್ನು ಕತ್ತರಿಸುವ ಪದ್ಧತಿ ಅತ್ಯಂತ ಹೇಯ. ಸ್ತ್ರೀಯರ ಜಡೆ ಹಾಗೂ ಜಡೆಗಳ ಮೂರು ಎಳೆಗಳಲ್ಲಿ ಶ್ರೀ-ಭೂ-ದುರ್ಗೆಯರು ಸನ್ನಿಹಿತರಾಗಿರುವುದರಿಂದ ಅವುಗಳನ್ನು ಕತ್ತರಿಸಿದರೆ ಅಲಕ್ಷ್ಮಿಯು ಸನ್ನಿಹಿತಳಾಗಿ ಜೀವನ ಪೂರ್ತಿ ಜಗಳ, ವೈಮನಸ್ಯದಲ್ಲೇ ಕಳೆಯಬೇಕಾಗುತ್ತದೆ ಎಂದು ತಿಳಿಸುವುದು.
- ಅಲಕ್ಷ್ಮಿಯ ಸನ್ನಿಧಾನ ಬಾಹುಳ್ಯವುಳ್ಳ, ಚಿತ್ರನಟಿಯರನ್ನು ಅನುಕರಿಸದಂತೆ ಜಾಗ್ರತೆ ವಹಿಸುವುದು.
- ಸೀರೆ ಉಡುವುದು ಹಾಗೂ ಕಚ್ಚೆ ಹಾಕಿ ಉಡುವುದನ್ನು ತಿಳಿಸಿ ಕೊಡಬೇಕು. ಹಬ್ಬದಿವಸಗಳಲ್ಲಿ ಕಚ್ಚೆ ಹಾಕಿ ಪೂಜಿಸುವಂತೆ ಪ್ರೇರೇಪಿಸುವುದು. ಕನ್ಯೆಯರಾಗಿದ್ದಾಗ ಕಚ್ಚೆ ವಿಹಿತವೆಂದು ಹೇಳಿದರೆ, ಭವಿಷ್ಯದ್ ದೃಷ್ಟಿಯಿಂದ ಅತ್ಯಂತ ಉಪಕಾರಿ.
- ಮನೆಯ ಕೆಲಸ, ಅಡಿಗೆ ಮಾಡುವುದು, ದೇವರ ಪಾತ್ರೆ ತೊಳೆಯುವುದು ಇವೇ ಮೊದಲಾದ ಮನೆಗೆಲಸದಲ್ಲಿ ಪರಿಣತರಾಗಲು ಅವಕಾಶ ನೀಡಿ

ಈ ಸಂದರ್ಭಗಳಲ್ಲೂ ದೇವರನಾಮ, ಸ್ಮರಣೆಯನ್ನು ಅಭ್ಯಾಸ ಮಾಡಿಸಬೇಕು.

- ಮಂಗಳಾರತಿ ಬತ್ತಿ ತಯಾರಿಸುವುದು, ಹೂವನ್ನು ಕಟ್ಟಲು ತರಬೇತಿ, ರಂಗೋಲೆ ಅಭ್ಯಾಸ, ಇತರ ಭಗವಂತನ ಕಾರ್ಯಗಳನ್ನು ಮಾಡಲು ಶಿಕ್ಷಣ ನೀಡುವುದು.
- ಸಾಯಂಕಾಲ ಹಾಗೂ ಇತರ ಸಮಯಗಳಲ್ಲಿ ಭಗವಂತನ ಕಥೆ ಕೇಳುವ ಹವ್ಯಾಸಕ್ಕಾಗಿ ತಮ್ಮ ಜೊತೆಗೆ ಪ್ರವಚನಕ್ಕೆ ಕರೆದುಕೊಂಡು ಹೋಗುವುದು. ಇದರಿಂದ ಶ್ರವಣದ ಫಲ ಲಭಿಸುತ್ತದೆ.
- ***ಕನ್ಯೆಯ ವಿವಾಹವಾದ ಮೇಲೆ ಇರಬೇಕಾದ ರೀತಿ :***

**"ಕಾರ್ಯೇಷು ದಾಸೀ, ಕರಣೇಷು ಮಂತ್ರೀ,**
**ಭೋಜ್ಯೇಷು ಮಾತಾ, ರೂಪೇಷು ಲಕ್ಷ್ಮೀಃ**
**ಶಯನೇಷು ಷಾಡ್ಗುಣ್ಯನಾರೀ ಕುಲಧರ್ಮ ಪತ್ನೀ"**

– ಎಂಬ ಪದ್ಮಪುರಾಣಗಳ ವಚನದಂತೆ ಪತಿಯ ಕಾರ್ಯಗಳಲ್ಲಿ ಹೇಗೆ ದಾಸಿಯು, ಹೇಳಿದ ಕೆಲಸವನ್ನು ವಿರೋಧವಿಲ್ಲದಂತೆ ಮಾಡುವಳೋ ಹಾಗೆ ಪತಿವ್ರತೆಯು ದಾಸಿಯಂತೆ ಕಾರ್ಯ ನಿರ್ವಹಿಸಬೇಕು.

ವ್ಯವಹಾರದಲ್ಲಿ ಚಾತುರ್ಯ, ಊಟೋಪಾಚಾರಗಳಲ್ಲಿ ಮಾತೃವಿನಂತೆ, ಕ್ಷಮೆಯಲ್ಲಿ ಭೂಮಾತೆಯಂತೆ, ಶಯನದಲ್ಲಿ ರಂಭೆಯಂತೆ ಚೆಲುವೆಯಾಗಿ ಹೋಗಿ ಪತಿಗೆ ತನ್ನನ್ನೇ ಅರ್ಪಿಸಿಕೊಂಡಿರಬೇಕು.

* * * * * *



# 18. ವಿಧವಾ ಧರ್ಮ

- ***ವಿಧವಾ ಎಂದರೆ ಯಾರು?***

ವಿ = ವಿಗತ = ಹೋಗಲ್ಪಟ್ಟ, ಧವ = ಗಂಡನುಳ್ಳವಳೇ ವಿಧವಾ.

ಅಥವ ಪತಿಯು ಮೃತನಾದ ಮೇಲೆ ಅವಳಿಗೆ ಪತ್ಯಂತರ್ಗತ ಭಗವಂತನೆ ರಕ್ಷಕ– ಸ್ವಾಮಿಯಾಗಿರುತ್ತಾನೆ. ಈ ಅರ್ಥದಲ್ಲಿಯೂ ವಿ = ಪರಮಾತ್ಮನು, ಅವನೇ ಧವ = ಸ್ವಾಮಿಯು ಯಾರಿಗೇ ಅವಳು ವಿಧವೆ.

- ***ವಿಧವಾ ಧರ್ಮಗಳು :***

ಪತಿಯು ಮೃತನಾದ ವಿಧವೆಯು ವಿಧವಾ ಧರ್ಮಗಳನ್ನು ಪಾಲಿಸಬೇಕು. ಇದರಿಂದಾಗಿ ಅವಳು ಪುನಃ ಪತಿಯನ್ನು ಹೊಂದಿ ಸ್ವರ್ಗದಲ್ಲಿ ಸಕಲಭೋಗಗಳನ್ನು ಅನುಭವಿಸುವಳು (ಸ್ಕಾಂದ).

- ***ಬ್ರಹ್ಮಚರ್ಯ ಪಾಲನೆ :***

ಯಾವ ವಿಧವೆಯು ಪತಿವ್ರತೆಯರ ಸರ್ವೋತ್ತಮ ಧರ್ಮವನ್ನು ಹೊಂದಬೇಕೆಂದು ಇಚ್ಛಿಸುವಳೋ ಅವಳು ಮರಣಪರ್ಯಂತ ಮನಸ್ಸು ಇಂದ್ರಿಯಗಳನ್ನು ನಿಗ್ರಹಿಸಿ ಬ್ರಹ್ಮಚಾರಿಣಿಯಾಗಿರಬೇಕು. (ಮನು – 5/158)

ಈ ರೀತಿ ನಿರಂತರ ಬ್ರಹ್ಮಚರ್ಯೆಯಲ್ಲಿರುವಳು ಪುತ್ರಹೀನಳಾದರೂ ಸ್ವರ್ಗಕ್ಕೆ ಹೋಗುವಳು.

**ಸ್ವರ್ಗಂ ಗಚ್ಛತ್ಯಪುತ್ರಾಪಿ ।** – *ಮನು–5/160*

ಆದರೆ ಪುತ್ರಲೋಭದಿಂದ ತನ್ನ ಪತಿಧರ್ಮವನ್ನು ತ್ಯಜಿಸಿ ಪರಪುರುಷನನ್ನು ಹೊಂದುವಳೋ ಅವಳು ಈ ಲೋಕದಲ್ಲಿ ನಿಂದನೆಗೆ ಒಳಗಾಗುವಳಲ್ಲದೆ ಪತಿಲೋಕದಲಿಂದಲೂ ವಂಚಿತಳಾಗುವಳು.

**ಸೇಹ ನಿಂದಮವಾಪ್ನೋತಿ ಪತಿಲೋಕಾಚ್ಚ ಹೀಯತೇ ।** – ಮನು

ವಿಧವೆಯರು ನಿತ್ಯವೂ ತಲೆಯ ಮೇಲೆ ಸ್ನಾನ ಮಾಡಬೇಕು. ಇತರ ಸುವಾಸಿನಿಯರಂತೆ ಕಂಠಸ್ನಾನ ಮಾತ್ರವಲ್ಲ.

**ವಿಧವಾಯಾಃ ಸರ್ವದೈವ ಶಿರಃ ಸ್ನಾನಮ್ ।** –*ಆಚಾರಭೂಷಣ*

ರೋಗಾದಿಗಳಿಂದ ತಲೆ ಸ್ನಾನ ಮಾಡದಿದ್ದಾಗ ಮಾತ್ರ ಕಂಠಸ್ನಾನವು ವಿಹಿತವಾಗಿದೆ. ಕಂಠಸ್ನಾನವು ಕೂಡ ಶಿರಸ್ನಾನದಂತೆಯೇ.

**ಅಶಿರಸ್ಕಂ ಭವೇತ್ ಸ್ನಾನಂ ಸ್ನಾನಾಶಕ್ತೌ ತು ಕರ್ಮಿಣಾಮ್ ।**
**ಕಂಠಸ್ನಾನಂ ಪ್ರಕುರ್ವೀತ ಶಿರಃ ಸ್ನಾನ ಸಮಂ ಹಿ ತತ್ ॥**

ಸ್ನಾನವು ರಾತ್ರಿ ಮಾಡಿದ ಪಾಪಗಳಿಗೆ ಪರಿಹಾರಕವೂ ಆಗಿರುತ್ತದೆ. ಇಂತಹ ಪಾಪವಿಟ್ಟುಕೊಂಡು ಆಚರಿಸಿದ ಜಪ ದಾನಾದಿಗಳು ವ್ಯರ್ಥವೆನಿಸುತ್ತವೆ.

**ಅಸ್ನಾತ್ವಾ ನಾಚರೇತ್ ಕರ್ಮ ಜಪದಾನಾದಿ ಕಿಂಚನ ।**
**ಅಜ್ಞಾನಾದ್ ಯದಿ ವಾ ಮೋಹಾದ್ ರಾತ್ರೌ ದುಶ್ಚರಿತಂ ಕೃತಮ್ ।**
**ಪ್ರಾತಃ ಸ್ನಾನೇನ ತತ್ಸರ್ವಂ ಶೋಧಯಂತಿ ನ ಸಂಶಯಃ ॥**
– *ಕೂರ್ಮ*

ಭೋಜನ ಮಾಡಿ ಸ್ನಾನ ಮಾಡಬಾರದು, ವಸ್ತ್ರವಿಲ್ಲದೆ ನಗ್ನಳಾಗಿ ಸ್ನಾನ ಮಾಡಬಾರದು, ರಾತ್ರಿಯಲ್ಲಿ ಸ್ನಾನ ಮಾಡಬಾರದು.

**ನ ಸ್ನಾನ ಮಾಚರೇದ್ ಭುಕ್ತ್ವಾ ನ ನಗ್ನಾ ನ ಮಹಾನಿಶಿ ।**

ಮಾಘ, ಕಾರ್ತೀಕ, ವೈಶಾಖಾದಿ ಮಾಸಗಳಲ್ಲಿ ತೀರ್ಥಗಳಿಗೆ ಹೋಗಿ ಸ್ನಾನ ಮಾಡಬೇಕು. ಮಾನವ ಜನ್ಮ ಮಾಘಾದಿ ಸ್ನಾನವಿಲ್ಲದಿದ್ದರೆ ವ್ಯರ್ಥವಾದಂತೆಯೇ ಸರಿ.

**ಮನುಷ್ಯಾಣಾಂ ತಥಾ ಜನ್ಮ ಮಾಘಸ್ನಾನಂ ವಿನಾ ಹತಮ್ ।** –*ಪದ್ಮ*

**ವೈಶಾಖೇ ಕಾರ್ತಿಕೇ ಮಾಘೇ ವಿಶೇಷ ನಿಯಮಂ ಚರೇತ್ ।**
**ಸ್ನಾನಂ ದಾನಂ ತೀರ್ಥಯಾತ್ರಂ ವಿಷ್ಣೋರ್ನಾಮಗ್ರಹಂ ಮುಹುಃ ॥**
*– ಸ್ಕಾಂದ*

ವೈಶಾಖದಲ್ಲಿ ಜಲಕುಂಭವನ್ನು, ಕಾರ್ತೀಕದಲ್ಲಿ ಘೃತ ದೀಪಗಳನ್ನು, ಮಾಘದಲ್ಲಿ ತಿಲ, ಧನಾದಿಗಳ ದಾನದಿಂದ ಸ್ವರ್ಗದಲ್ಲಿ ಸ್ಥಾನ ಲಭಿಸುತ್ತದೆ.

**ವೈಶಾಖೆ ಜಲ ಕುಂಭಾಶ್ಚ ಕಾರ್ತೀಕೇ ಘೃತದೀಪಕಾಃ ।**
**ಮಾಘೇ ತಿಲ–ಧನೋತ್ಸರ್ಗಾತ್ ಸ್ವರ್ಗೇ ಲೋಕೇ ಮಹೀಯತೇ ॥**
*– ಮದನ ಪಾರಿಜಾತ*

ವೈಶಾಖದಲ್ಲಿ ಅರವಟ್ಟಿಗೆ – ಸಾರ್ವಜನಿಕರಿಗೂ ಕುಡಿಯುವ ನೀರಿನ ವ್ಯವಸ್ಥೆ ಅಥವಾ ಅದಕ್ಕಾಗಿ ಧನದಾನ, ದೇವತಾ ಪೂಜೆಗೆ ಹೂವಿನ ಹಾರಗಳು ಅಥವಾ ಪುಷ್ಪ ಪೂಜೆಗಾಗಿ ಧನ ನೀಡುವುದು. ಬ್ರಾಹ್ಮಣನಿಗೆ ಚಪ್ಪಲಿದಾನ, ಬೀಸಣಿಕೆ, ಛತ್ರೀ, ಸೂಕ್ಷ್ಮದಾರದ ವಸ್ತ್ರಗಳು, ಗಂಧದ ಕೊರಡು, ಹಣ್ಣುಗಳು, ಮೊದಲಾದವುಗಳನ್ನು ಬ್ರಾಹ್ಮಣರ ಮುಂದಿಟ್ಟು 'ಸ್ವೀಕರಿಸಿ' ಎಂದು ಪ್ರಾರ್ಥಿಸಿ, ಈ ದಾನಗಳಿಂದ ನನ್ನ ಪತಿಯ ಅಂತರ್ಯಾಮಿ ಪ್ರೀತನಾಗಲಿ ಎಂದು ಪ್ರಾರ್ಥಿಸಬೇಕು.

- ***ವಿಧವೆಯರು ದಾನ ನೇರವಾಗಿ ನೀಡಬಹುದೇ ?***

ವಿಧವೆಯರು, ಪುತ್ರ ರಹಿತ ವಿಧವೆಯರು ಹಾಗೂ ಪುತ್ರ ಸಹಿತ ವಿಧವೆಯರು ಎಂದು ಎರಡು ರೀತಿಯಿರುವರು.

ಯಾವ ಸ್ತ್ರೀಯು ಪತಿ ಹಾಗೂ ಪುತ್ರ ರಹಿತಳಾಗಿರುವಳೋ ಅವಳು ಮಾತ್ರ ವಿಧವೆ ಎನಿಸುವಳು.

ಯಾವ ಸ್ತ್ರೀಯ ಪತಿವಿರಹಿತಳಾದರೂ ಪುತ್ರನಿದ್ದರೆ ಅವಳು ವಿಧವಾ ಎನಿಸಲಾರಳು.

**ಪತಿಪುತ್ರ ವಿಹೀನಾ ಯಾ ವಿಧವೇತ್ಯುಚ್ಯತೇ ಬುಧೈಃ ।**
**ಜೀವಪುತ್ರಾ ತು ಯಾ ನಾರೀ ವಿಧವೇತಿ ನ ಚೋಚ್ಯತೇ ॥**
*– ಕಪಿಲಸ್ಮೃತಿ 593*

ಪಾಂಡುರಾಜನು ಮೃತನಾಗಿದ್ದರೂ ಪಾಂಡವರನ್ನು ಪುತ್ರರನ್ನಾಗಿ

ಹೊಂದಿರುವ ಕುಂತಿದೇವಿಯನ್ನು ಮಹಾಭಾರತಾದಿ ಗ್ರಂಥಗಳು ಸಾಧ್ವಿ ಎಂದಿದೆ ಹೊರತು ವಿಧವೆಯೆಂದು ಹೇಳಿಲ್ಲ. ರಾಮನ ರಾಜ್ಯದಲ್ಲಿ ವಿಧವೆಯರೆ ಇದ್ದಿಲ್ಲವೆಂದಿರುವ ರಾಮಾಯಣವು ರಾಮನ ತಾಯಿಂದಿರಾದ ಕೌಸಲ್ಯ – ಸುಮಿತ್ರ–ಕೈಕೇಯಿಯರು ಪತಿಹೀನರೆಂದು ವಿಧವೆಯೆಂದು ಬಣ್ಣಿಸಿಲ್ಲ.

- ***ಪತಿಗೆ ತರ್ಪಣ :***

ಪುತ್ರಾದಿ ರಹಿತ ವಿಧವೆಯು ಪತಿಯ ಹೆಸರಿನಲ್ಲಿ ದರ್ಭೆ ಹಾಕಿದ ನೀರಿನಿಂದ ತರ್ಪಣ ನೀಡಬೇಕು. ಪತಿ, ಪತಿಯ ತಂದೆ, ಪತಿಯ ತಂದೆಯ ತಂದೆ ಇವರ ಹೆಸರು ಗೋತ್ರಗಳನ್ನು ಮೂರು ಬಾರಿ ಹೇಳುತ್ತಾ ನೀರು ಬಿಡಬೇಕು.

**ತರ್ಪಣಂ ಪ್ರತ್ಯಹಂ ಕಾರ್ಯಂ ಭರ್ತುಃ ತಿಲಕುಶೋದಕೈಃ ।**
**ತತ್ಪಿತುಶ್ಚಾಪಿ ಕರ್ತವ್ಯಂ ನಾಮ ಗೋತ್ರಾದಿ ಪೂರ್ವಕಮ್** ॥ – *ಸ್ಕಾಂದ*

- ***ಭೋಗಾದಿಗಳ ತ್ಯಾಗ :***

ವಿಧವಾ ಸ್ತ್ರೀಯರು ಶಾಸ್ತ್ರಗಳಲ್ಲಿ ಹೇಳಿರುವ ತಮ್ಮ ಕರ್ತವ್ಯವನ್ನು ತಪ್ಪದೆ ಆಚರಿಸಬೇಕು. ಭೋಗಗಳು, ವಿಲಾಸ, ರುಚಿ, ಮೈಯನ್ನು ಗಂಧಾದಿಗಳಿಂದ ಅಲಂಕರಿಸಿಕೊಳ್ಳುವುದು, ಶೃಂಗರಿಸುವುದು, ಕನ್ನಡಿಯ ಮುಂದೆ ನಿಂತಿರುವುದು, ವಿಲಾಸೀ ವಸ್ತುಗಳೆನಿಸಿದ ದೂರದರ್ಶನ ನೋಡುವುದು, ಸುಗಂಧ–ಪರಿಮಳ ವಸ್ತುಗಳನ್ನು ಉಪಯೋಗಿಸಬಾರದು.

**ನೈವ ಅಂಗೋದ್ವರ್ತನಂ ಕಾರ್ಯಂ ಸ್ತ್ರಿಯಾ ವಿಧವಯಾ ಕ್ವಚಿತ್ ।**
**ಗಂಧದ್ರವ್ಯಸ್ಯ ಸಂಯೋಗೋ ನೈವ ಕಾರ್ಯಃ ಸ್ವಯಂ ಪುನಃ ॥**

ಶಾರೀರಿಕ ಸುಖಭೋಗಗಳು ಕ್ಷಣಭಂಗುರವೆಂದು ತಿಳಿದು ಅವುಗಳನ್ನು ಸರ್ವಥಾ ತ್ಯಜಿಸಬೇಕು.

ಪತಿಯು ಮೃತನಾದ ಮೇಲೆ ಪುನಃ ಮತ್ತೊಂದು ವಿವಾಹವನ್ನಂತು ಮಾಡಿಕೊಳ್ಳಲೇಬಾರದು. ಕನ್ಯಾದಾನವು ಒಂದು ಬಾರಿ ಮಾತ್ರ ಶಾಸ್ತ್ರದಲ್ಲಿ ಹೇಳಿದೆ *(ಸಕೃತ್ ಕನ್ಯಾ ಪ್ರದೀಯತೇ).*

ಸಮಾಜದಲ್ಲಿ ಕನ್ಯಾಘಾತಕರು 'ನಾವು ನಿಮಗೆ ಜೀವನ ಕೊಡುತ್ತೇವೆ' ಎಂದು ಪುಸಲಾಯಿಸಿದರೂ ಅದು ಕೇವಲ ತಮ್ಮ ಪಿಪಾಸೆ ತೀರಿಸಿಕೊಳ್ಳುವ ಉಪಾಯವಷ್ಟೇ. ತಮ್ಮ ಕೆಲಸ ಮುಗಿದ ಮೇಲೆ ಬಿಟ್ಟು ಹೋಗುವರು.

ಏನೂ ತಿಳಿಯದ ಅಮಾಯಕರು ಇಂತಹವರ ಮಾತನ್ನು ಸತ್ಯವೆಂದು ನಂಬಿ ಇವರಿಗೆ ಬಲಿಯಾಗಿ ಇಹ-ಪರಗಳೆರಡರಿಂದಲೂ ವಂಚಿತ-ರಾಗುತ್ತಾರೆ. ಈ ಪುನರ್ವಿವಾಹದಿಂದ ದೂರವಿದ್ದು ಆಜೀವನ ಪರ್ಯಂತ ಬ್ರಹ್ಮಚರ್ಯ ಪಾಲನೆ ಮಾಡುತ್ತಾ ಇರಬೇಕು.

**ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ ।**
**ನ ವಿವಾಹವಿಧಾವುಕ್ತಂ ವಿಧವಾವೇಧನಂ ಪುನಃ ॥** – ಮನು–*9/65*

ಇದೊಂದು ಪಶುಧರ್ಮವಾಗಿದ್ದು ಪೂರ್ಣವಾಗಿ ನಿಂದಿತವಾಗಿದೆ.

- ***ಕುಂತಿಯ ಆದರ್ಶ ಪಾಲನೆ :***

ಪಾಂಡುರಾಜನ ಧರ್ಮಪತ್ನಿಯೆನಿಸಿದ ಕುಂತಿಯು ವಿಧವೆಯಾಗಿದ್ದರೂ ಶ್ರೀಕೃಷ್ಣನಲ್ಲಿ ಭಕ್ತಿ, ಮಕ್ಕಳು, ಸೊಸೆಯರಿಗೆ ಉಪದೇಶ, ವೃದ್ಧರಾದ ಅತ್ತೆ-ಮಾವಂದಿರ ಸೇವೆ, ತ್ಯಾಗಜೀವ, ಪರದುಃಖವನ್ನು ನೋಡಿ ಉಪಕಾರ ಮಾಡುವ ಬುದ್ಧಿ, ಸವತಿಯ ಮಕ್ಕಳಲ್ಲಿಯೂ ಪ್ರೀತ್ಯಾದರ, ಮೊದಲಾದ ಸದ್ಗುಣಗಳಿಂದಾಗಿ ಪತಿಯ ಲೋಕ ಸೇರಿದಳು.

ಶ್ರೀಕೃಷ್ಣನನ್ನು ನಿರಂತರ ಧ್ಯಾನ ಮಾಡುತ್ತಿದ್ದಳು. ಭಗವಂತನು ಮೆಚ್ಚಿ ನಿನಗೇನು ಬೇಕೋ ಕೇಳು ಎಂದಾಗಲೂ ***'ವಿಪದಃ ಸಂತು ನಃ ಶಶ್ವತ್'*** ಎಂದು ಆಪತ್ತುಗಳನ್ನೇ ಆರಿಸಿಕೊಂಡವಳು.

ಪುತ್ರರನ್ನು ಕಳೆದುಕೊಂಡು ದುಃಖಿತಳಾಗಿದ್ದ ಧೃತರಾಷ್ಟ್ರ ಗಾಂಧಾರಿಯರಿಗೆ ತಾನು ಅವರೊಂದಿಗೆ ತನ್ನ ಭುಜ ನೀಡಿ ದಾರಿದೀವಿಗೆಯಂತಾದ ತ್ಯಾಗಮಯಿಯು.

ತಪಸ್ಸಿಗಾಗಿ ಬಂದ ಅತ್ತೆ-ಮಾವಂದಿರಂತಿರುವ ಧೃತರಾಷ್ಟ್ರ-ಗಾಂಧಾರಿಯರನ್ನು ಸೇವಿಸುತ್ತಾ ಅವರ ತಪಸ್ಸಿಗೆ ಅನುವು ಮಾಡಿಕೊಟ್ಟಳು. ಗಾಂಧಾರಿಯು ಕೇವಲ ಜಲಪಾನ ಮಾತ್ರ ಮಾಡುತ್ತಿದ್ದಳು. ಕುಂತಿಯಾದರೂ ಒಂದು ತಿಂಗಳು ಉಪವಾಸ ಮಾಡುತ್ತಾ ಒಂದು ದಿನ ಆಹಾರ ಸ್ವೀಕರಿಸುತ್ತಾ ಆರು ತಿಂಗಳು ಕಠಿಣ ವ್ರತವನ್ನು ಮಾಡಿರುವಳು.

ತನ್ನ ಮಕ್ಕಳ ಕೈಯಲ್ಲಿಯೇ ರಾಜ್ಯಾಧಿಕಾರವಿದ್ದರೂ ಭೋಗವನ್ನು ಇಚ್ಛಿಸದೆ ತ್ಯಾಗವನ್ನೇ ಸ್ವೀಕರಿಸಿದಳು.

ಆದ್ದರಿಂದ ವಿಧವೆಯರು ತಮ್ಮ ಜೀವನವನ್ನು ಬಹಳ ಸರಳವಾಗಿ ಹಾಗೂ ತಪೋಮಯವಾಗಿ ರೂಪಿಸಿಕೊಳ್ಳಬೇಕು.

- ***ಒಪ್ಪತ್ತು ಮಾತ್ರ ಭೋಜನ :***

ವಿಧವಾ ಸ್ತ್ರೀಯರು ಒಂದು ಹೊತ್ತು ಮಾತ್ರ ಭೋಜನ ಮಾಡಬೇಕು. ಹಗಲು-ರಾತ್ರಿಗಳೆರಡರಲ್ಲೂ ಭುಂಜಿಸಬಾರದು.

**ಏಕಾಹಾರಃ ಸದಾ ಕಾರ್ಯೋ ನ ದ್ವಿತೀಯಃ ಕದಾಚನ ।**

ಒಂದು ಹೊತ್ತು ಭೋಜನವನ್ನು ಗೋಧಿಯ ಅನ್ನ, ಹಣ್ಣು-ಹಂಪಲು, ಶಾಕಾಹಾರ, ಹಾಲು-ತುಪ್ಪ ಮೊದಲಾದ ಹವಿಷ್ಯ ವಸ್ತುಗಳಿಂದಲೇ ನಿರ್ವಹಿಸಬೇಕು.

**ಯವಾನ್ನೈಃ ಫಲಾಹಾರೈಃ ಶಾಕಾಹಾರೈಃ ಪಯೋಘೃತೈಃ ।**
**ಪ್ರಾಣಯಾತ್ರಾಂ ಪ್ರಕುರ್ವೀತ -**

- ***ಮಂಚದ ಮೇಲೆ ಮಲಗಬಾರದು :***

ವಿಧವೆಯರು ಹಿಂದೆ ಮಾಡಿದ ಪಾಪದ ಫಲವಾಗಿ ತನಗೆ ಈ ಜನ್ಮದಲ್ಲಿ ವೈಧವ್ಯ ಪ್ರಾಪ್ತವಾಗಿದೆಯೆಂದು ತಿಳಿದು, ಆ ಪಾಪಗಳಿಗೆ ಪ್ರಾಯಶ್ಚಿತ್ತವೆಂಬಂತೆ ಸರ್ವವಸ್ತುಗಳಲ್ಲಿ, ತನ್ನ ದೇಹದಲ್ಲಿ ಅಭಿಮಾನ ತ್ಯಾಗ ಮಾಡಬೇಕು. ಮಲಗುವಾಗ ನೆಲದ ಮೇಲೆ ಚಾಪೆ ಹಾಸಿಕೊಂಡು ಮಲಗಬೇಕು. ಮಂಚ ಸುಪ್ಪತ್ತಿಗೆಗಳಲ್ಲಿ ಮಲಗಬಾರದು. ಇದರಿಂದಾಗಿ ಪತಿಯು ನರಕದಲ್ಲಿ ಬೀಳುವಂತಾಗುತ್ತದೆ. ಪತಿಗೆ ಪರಲೋಕದಲ್ಲಿ ಸುಖವನ್ನು ಬಯಸುವವಳಾದರೆ ಮಂಚದ ಮೇಲೆ ಮಲಗಬಾರದು.

**ಪರ್ಯಂಕಶಾಯಿನೀ ನಾರೀ ವಿಧವಾ ಪಾತಯೇತ್ ಪತಿಮ್ ।**
**ತಸ್ಮಾತ್ ಭೂಶಯನಂ ಕಾರ್ಯಂ ಪತಿಸೌಖ್ಯ ಸಮೀಹಯಾ ॥**

*- ಬೃಹನ್ನಾರದ*

- ***ಕೆಂಪು ಅಥವಾ ಬಿಳಿವಸ್ತ್ರವನ್ನೇ ಧರಿಸಬೇಕು :***

ವಿಧವೆಯರು ಮುಖಕ್ಕೆ ಹೊಡೆಯುವಂತೆ ಬಣ್ಣ ಬಣ್ಣದ ಸೀರೆಗಳನ್ನು ಧರಿಸುವುದು, ಕೇಶಧಾರಣ ಕೇಶಾಲಂಕಾರ, ಬಾಚುವುದು, ತುರುಬುಗಂಟು ಹಾಕಿಕೊಳ್ಳುವುದು, ಕಣ್ಣಿಗೆ ಕಾಡಿಗೆ, ಮೊದಲಾದವುಗಳು ನಿಷಿದ್ಧಗಳು.

ಜಿತೇಂದ್ರಿಯಳಾಗಿ ಜಿತಕ್ರೋಧಳಾಗಿ ನಿರಂತರವಾಗಿ ಪತಿಯಂತರ್ಗತನಾದ ವಿಷ್ಣುವನ್ನೇ ಧ್ಯಾನಿಸುತ್ತಿರಬೇಕು. ಸಾತ್ವಿಕ ಭಾವ ವ್ಯಕ್ತ ಮಾಡುವ ಬಿಳಿಯಾದ ವಸ್ತ್ರವನ್ನು ಮಾತ್ರವೇ ಧರಿಸಬೇಕು. ನೀಲಿ ವಸ್ತ್ರ ಧರಿಸಬಾರದು.

**ಸ್ನಾತ್ವಾ ಶುಕ್ಲಾಂಬರಧರಾ ಜಿತಕ್ರೋಧಾ ಜಿತೇಂದ್ರಿಯಾ ।**
**ಪತಿಮೇವ ಸದಾ ಧ್ಯಾಯೇದ್ ವಿಷ್ಣುರೂಪ ಧರಂ ಪರಮ್ ॥**

*– ಸ್ಕಾಂದ*

**ಮೃತೇ ಭರ್ತರಿ ಯಾ ನಾರೀ ನೀಲೀ ವಸ್ತ್ರಂ ಪ್ರಧಾರಯೇತ್ ।**
**ಭರ್ತಾ ತು ನರಕಂ ಯಾತಿ ಸಾ ನಾರೀ ತದನಂತರಮ್ ॥**

*– ಅಂಗೀರಸ್*

- ***ತೈಲಾಭ್ಯಂಗ ನಿಷೇಧ :***

ವಿಧವೆಯರು ತೈಲಾಭ್ಯಂಗವನ್ನು ಮಾಡಬಾರದು. ವಿಧವೆಯರು ಅಲಂಕಾರಕ್ಕಾಗಿ ತೈಲ್ಯಾಭ್ಯಂಗ ಮಾಡಬಾರದು. ದೀಪಾವಳಿ ಹೊರತು ತೈಲಾಭ್ಯಂಗ ನಿಷಿದ್ಧವು.

- ***ತಾಂಬೂಲ ಸೇವನೆ – ಮಾಂಸ ಸುರಾಪಾನಕ್ಕೆ ಸಮ :***

ವಿಧವೆಯು ತನ್ನ ಪತಿ ಹೋದ ಮೇಲೆ ಪತಿಯಿರುವಾಗ ಏನನ್ನು ಪತಿಗೆ ನೀಡಿ ತಾನೂ ಸ್ವೀಕರಿಸಿದ್ದಳೋ ಅವುಗಳನ್ನು ಅವನು ಹೋದ ಮೇಲೆ ಸ್ವೀಕರಿಸಬಾರದು. ಇದೊಂದು ವಿಧವೆಯರ 'ಮಹಾವ್ರತ'ವೆನಿಸಿದೆ.

ತಾಂಬೂಲವನ್ನು ಪ್ರತ್ಯೇಕವಾಗಿಯಾಗಲೀ, ಮೂರನ್ನು ಸೇರಿಸಿಯಾಗಲೀ ಸೇವಿಸಬಾರದು. ಪ್ರತ್ಯೇಕವಾಗಿಯಾದರೆ ಮಾಂಸಭಕ್ಷಣವೆನಿಸಿದರೆ, ಅವುಗಳನ್ನು ಒಟ್ಟಿಗೆ ಮೆದ್ದರೆ ಸುರಾಪಾನ ಸಮವೆನಿಸುತ್ತದೆ.

**ಯತಿಶ್ಚ ಬ್ರಹ್ಮಚಾರಿ ಚ ವಿಧವಾ ಚ ರಜಸ್ವಲಾ ।**
**ಪ್ರತ್ಯೇಕಂ ಮಾಂಸತುಲ್ಯಂ ಸ್ಯಾತ್ ಮೇಲನೇ ಸುರಯಾ ಸಮಮ್ ॥**

*– ತಾಂಬೂಲ ಕಲ್ಪ*

ವಿಧವೆಯರು ಕಾಮ ವಿಷಯಕವಾದ ಮಾತುಗಳನ್ನು ಕೇಳುವುದು, ಹೇಳುವುದು, ಅವುಗಳಲ್ಲಿ ಆಸಕ್ತಿ ತೋರುವುದು, ಅಷ್ಟಾಂಗ ಮೈಥುನ ಚಿಂತನೆ, ಪಶುಪಕ್ಷಿಗಳ ಮೈಥುನವನ್ನಾಗಲೀ ನೋಡಬಾರದು.

**ಕಾಮಸಂಬಂಧಿನೀಂ ವಾರ್ತಾಂ ನ ಶೃಣ್ವೀತ ನ ಕೀರ್ತಯೇತ್ ।**
**ನೇಕ್ಷೇತ ಮಿಥುನೀಭೂತಂ ಬುದ್ಧ್ಯಾ ಪಶ್ವ್ಯಾದಪಿ ಕ್ವಚಿತ್ ॥**

- ***ಹರಿನಿವೇದಿತಾ ಭೋಜನ :***

ಪತಿಹೀನಳಾದ ನಾರಿಯು ಯತಿಯಂತೆ ಜೀವನ ನಡೆಸಬೇಕು. ಯಾವುದೇ ವಸ್ತುಗಳನ್ನು ಇಚ್ಛಿಸಬಾರದು. ದಿನಕ್ಕೊಂದೇ ಬಾರಿ ಊಟ ಮಾಡುವುದು, ಆ ಭೋಜನವನ್ನು ಶ್ರೀಹರಿಗೆ ನಿವೇದಿತವಾಗಿರುವ ಅನ್ನವನ್ನೇ ಭುಂಜಿಸಬೇಕು. ಪುತ್ರಪೌತ್ರಾದಿ ರಹಿತರಾದ ವಿಧವೆಯಾದರೂ ತಾನೇ ಬೇಯಿಸಿಕೊಂಡು ತಿನ್ನಬಾರದು. ಯತಿಯಂತೆ ಯಾವುದಾದರೂ ದೇವಾಲಯಗಳಲ್ಲಿ ಮಠಗಳಲ್ಲಿ ಯಥಾಶಕ್ತಿ ಸೇವೆಯನ್ನು ಮಾಡಿ ದೇವರ ಪ್ರಸಾದವನ್ನು ಬ್ರಾಹ್ಮಣರು ಭೋಜನದ ನಂತರ ಪ್ರಸಾದವೆಂದು ಸ್ವೀಕರಿಸಬೇಕು.

ವಿಧವೆಯು ಬ್ರಾಹ್ಮಣರೊಂದಿಗೆ ಪಂಕ್ತಿಯಲ್ಲಿ ಎಂದೂ ಭುಂಜಿಸಬಾರದು. ವಿಧವೆಯು ನೋಡಿದ ಅನ್ನಾದಿಗಳು ಅಮಂಗಳವೆನಿಸುತ್ತವೆ.

**ಅಮಂಗಳೇಭ್ಯಃ ಸರ್ವೇಭ್ಯಃ ವಿಧವಾ ತ್ಯಕ್ತಮಂಗಳಾ ।**
**ವಿಧವಾ ದರ್ಶನಾತ್ ಸಿದ್ಧಿಃ ಕ್ವಾಪಿ ಜಾತು ನ ಜಾಯತೆ ॥**

*– ಸ್ಕಾ.ಕಾ. 4/50*

- ***ತನ್ನ ಪುತ್ರರಿಗೆ ವಿಧವೆಯು ಮಂಗಳಳು :***

ವಿಧವೆ ಇತರರಿಗೆ ಅಮಂಗಳೆನಿಸಿದರೂ ತನ್ನ ಪುತ್ರರಿಗೆ ಅವಳು ಮಂಗಳಕರಳೇ ಆಗಿರುವಳು. ಪುತ್ರರು ಎಂದೂ ತಾಯಿಯನ್ನು ಧಿಕ್ಕರಿಸಬಾರದು. ಇದರಿಂದಾಗಿ ಏಳು ಜನ್ಮ ತಾಯಿಯಿಲ್ಲದ ಅನಾಥ–ನಾಗುವರು.

**ಪತಿಹೀನಾಂ ತು ವಿಧವಾ ಯೋ ಧಿಕ್ಕೃತ್ಯ ಪ್ರವರ್ತಯೇತ್ ।**
**ಸಪ್ತಜನ್ಮ ಭವೇನ್ ಮೂಢೋ ಮಾತೃಹೀನೋ ಹ್ಯನಾಥಕಃ ॥**

- ***ಮಂಗಳಸೂತ್ರ ಧರಿಸಲೇಬಾರದು :***

ಮಂಗಳ ವಸ್ತುಗಳಾದ ಅರಿಷಿಣ–ಕುಂಕುಮ–ಗಂಧ ಮೊದಲಾದ ವಸ್ತುಗಳ ಧಾರಣೆ ನಿಷಿದ್ಧವಾಗಿರುತ್ತದೆ. ಹಾಗೆಯೇ ತನ್ನ ಪತಿಯು ಕಟ್ಟಿದ ತಾಳಿ

ಮಾಂಗಲ್ಯವನ್ನು ಪತಿಯು ಹೋದ ಮೇಲೆ ಹತ್ತು ದಿನಗಳವರೆಗೂ ಧರಿಸಲು ಶಾಸ್ತ್ರ ಸಮ್ಮತಿಸಿದೆ. ಅಲ್ಲಿಯವರೆಗೂ ಕುಪ್ಪಸವನ್ನೂ, ಕೇಶಪಾಶವನ್ನು, ಕಿವಿಯ ಆಭರಣಗಳನ್ನು ಹಿಂದೆ ಧರಿಸಿದ್ದನ್ನು ಧರಿಸಿರಬಹುದು. ನಂತರ ಅಧಿಕಾರವನ್ನು ಕಳೆದುಕೊಳ್ಳುವಳು. ಹತ್ತು ದಿನಗಳ ಕಾಲ ಮೃತನೇ ಪತ್ನಿಯಲ್ಲಿ ಒಂದು ರೂಪದಿಂದಿರುವನು. ನಂತರ ಯಾವುದೇ ಅಲಂಕಾರವನ್ನು ಮಾಡಿಕೊಳ್ಳಬಾರದು.

**ಕಂಚುಕೀ ಕಂಠಸೂತ್ರಾಭ್ಯಾಂ ಕಬರ್ಯಭ್ಯಂಗ ಭೂಷಣೈಃ ।**
**ಪರಿತ್ಯಕ್ತ್ವಾ ತು ವಿಧವಾ ನಿತ್ಯಂ ನಾರಾಯಣಂ ಸ್ಮರೇತ್ ॥** – ಬ್ರ.ವೈ.

- ***ಮುಂಡನ ವಿಹಿತವೇ ?***

ಸ್ತ್ರೀಯು ತನ್ನ ಪತಿಯಿರುವಾಗ ವಿವಿಧ ಅಲಂಕಾರಗಳನ್ನು ಮಾಡಿಕೊಂಡು ಪತಿಯನ್ನು ಸಂತೋಷಗೊಳಿಸುವುದು ಶಾಸ್ತ್ರದಲ್ಲಿ ಹೇಳಿದೆ. ಪತಿಯು ಮೃತನಾದ ಮೇಲೆ ಕೂದಲನ್ನು ತುರುಬು ಇತ್ಯಾದಿಗಳಿಂದ ಅಲಂಕರಿಸುವುದು ಗಂಡನನ್ನು ನರಕಕ್ಕೆ ತಳ್ಳುವ ಸಾಧನವಾಗುತ್ತದೆ. ಆದ್ದರಿಂದ ತನ್ನ ಸರ್ವಸ್ವವಾಗಿದ್ದ ಪತಿಯೇ ಹೋದ ಮೇಲೆ ಈ ಅಲಂಕಾರ ಯಾರಿಗಾಗಿ? ಎಂದು ತಿಳಿದು ಅದನ್ನು ತೆಗೆದು ಮಡಿಯಾಗುವುದು. ಪತಿಯು ಇರುವಾಗ ಯಾವ ಕೇಶಪಾಶದಲ್ಲಿ ಗಂಗಾ–ಯಮುನಾ–ಸರಸ್ವತಿಯರೆಂಬ 'ತ್ರಿವೇಣೀ ಸಂಗಮ' ಸನ್ನಿಹಿತವಾಗಿದ್ದವೋ ಅವುಗಳು ಪತಿ ಹೋದ ಮೇಲೆ ಅಲ್ಲಿಂದ ಹೊರಟು ಹೋಗುವುವು. ಇಂತಹ ಕೂದಲನ್ನು ಧರಿಸಿ ಮಾಘಸ್ನಾನಾದಿಗಳು, ಕಾರ್ತೀಕ ದೀಪದಾನಾದಿಗಳು, ವೈಶಾಖ ಸ್ನಾನದಾನಾದಿಗಳು ಮಾಡಿದರೂ ಪೂರ್ಣಫಲವನ್ನು ನೀಡುವುದರಲ್ಲಿ ಸಾಧನವಾಗಲಾರವು.

ಪತಿಯನ್ನೇ ನರಕಕ್ಕೆ ದಬ್ಬುವ ಇಂತಹ ಸಕೇಶೀ ವಿಧವೆಯನ್ನು ನೋಡಿದ ಕೂಡಲೇ ಪಾಪ ಪರಿಹಾರಕ್ಕಾಗಿ ಸಚೇಲ ಸ್ನಾನ ಮಾಡಬೇಕೆಂದು, ಇಂತಹವಳು ಬೇಯಿಸಿದ ಊಟ ಮಾಡುವವನು ಚಾಂದ್ರಾಯಣ ವ್ರತದಿಂದ ಶುದ್ಧನಾಗಬೇಕೆಂದು ತಿಳಿಸಿದೆ.

**ವಿಧವಾ ಕಬರೀಬಂಧಃ ಭರ್ತುರ್ಬಂಧಾಯ ಜಾಯತೇ ।**
**ಶಿರಸೋ ಮುಂಡನಂ ತಸ್ಮಾತ್ ಕಾರ್ಯಂ ವಿಧವಯಾ ತಥಾ ॥**

**ಸಕೇಶೀ ವಿಧವಾಂ ದೃಷ್ಟ್ವಾ ಸವಾಸಾಃ ಜಲಮಾವೀಶೇತ್ ।**
**ಸಕೇಶೀ ವಿಧವಾ ಪಕ್ವಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥**

- ***ಸ್ವರ್ಗಪ್ರಾಪ್ತಿ – ಭರ್ತೃಪ್ರಾಪ್ತಿ :***

ಶಾಸ್ತ್ರದಲ್ಲಿ ಹೇಳಿದಂತೆ ವೈಧವ್ಯ ಧರ್ಮವನ್ನು ಪಾಲಿಸಿದರೆ ಸ್ವರ್ಗದಲ್ಲಿ ಸುಖಪ್ರಾಪ್ತಿ. ಮುಂದಿನ ಜನ್ಮಗಳಲ್ಲಿ ಅಖಂಡ ಸೌಭಾಗ್ಯಪ್ರಾಪ್ತಿ.

ಕೂದಲನ್ನು ತೆಗೆಯದೆ ಕೇಶಧಾರಣ ಮಾಡಿ ಅವುಗಳನ್ನು ಅಲಂಕರಿಸುವುದರಿಂದ ಪತಿಯನ್ನು ನರಕದಲ್ಲಿ ಬಂಧಿತನನ್ನಾಗಿ ಮಾಡಿದಂತಾಗಿ ಮುಂದೆ ನರಕ ಪ್ರಾಪ್ತಿ ಹಾಗೂ ಮುಂದಿನ ಜನ್ಮದಲ್ಲಿ ಪುನಃ ವೈಧವ್ಯಾದಿಗಳುಂಟಾಗುತ್ತವೆ. ಆದ್ದರಿಂದ ಪತಿಯ ಲೋಕ – ಅಖಂಡ ಸೌಭಾಗ್ಯ ಲಭಿಸಬೇಕಾದರೆ ಪತಿಯೊಂದಿಗೆ ವಹ್ನಿ ಪ್ರವೇಶ ಅಥವಾ ಕೇಶವನ್ನು ವಪನ ಮಾಡಿಸಿ ತಪಸ್ಸಿನಿಂದ ದೇಹವನ್ನು ಶೋಷಿಸುವುದು ಎರಡೇ ಮಾರ್ಗ.

**ಮೃತಂ ಭರ್ತಾರ ಮಾದಾಯ ಬ್ರಾಹ್ಮಣೀ ವಹ್ನಿ ಮಾವಿಶೇತ್ ।**
**ಜೀವಂತೀ ಚೇತ್ ತ್ಯಕ್ತಕೇಶಾ ತಪಸಾ ಶೋಷಯೇತ್ ತನುಂ ॥**

- ***ಮುಂಡನವು ವೇದಪ್ರಾಪ್ತ :***

ಪರಮಪ್ರಮಾಣವಾದ ವೇದಗಳಲ್ಲಿಯೂ ಮುಂಡನವು ಹೇಳಲ್ಪಟ್ಟಿದೆ.

- ***ವಿವಾಹ ಮಂತ್ರದಲ್ಲಿ :***

***"ಮಾ ತ್ವಂ ವಿಕೇಶ್ಯುರ ಆವಧಿಷ್ಠಾಃ"*** ವಧುವೆ! ನೀನು ವಿಧವೆಯಾಗಿ ಕೂದಲನ್ನು ತೆಗೆದು ಎದೆಯನ್ನು ಹೊಡೆದುಕೊಳ್ಳುವ ಸ್ಥಿತಿ ನಿನಗೆ ಬಾರದಿರಲಿ! ಬದಲಾಗಿ –

**"ಜೀವಪತ್ನೀ ಪತಿಲೋಕೇ ವಿರಾಜ**
**ಪಶ್ಯಂತೀ ಪ್ರಜಾಂ ಸುಮನಸ್ಯಮಾನಾಂ"**

ಅತಿಸಂತುಷ್ಟಳಾಗಿ ಉತ್ತಮ ಮಕ್ಕಳನ್ನು ನೋಡುತ್ತ ಪತಿಲೋಕದಲ್ಲಿ ಸರ್ವಸುಖಗಳನ್ನು ಅನುಭವಿಸು ಎಂದರ್ಥ ಹೇಳಲಾಗಿದೆ.

ಹೀಗೆ ಯಾವುದು ವೇದ ವಿರುದ್ಧವೋ–ಪುರಾಣಾದಿ ವಿರುದ್ಧ ಕರ್ಮಗಳೋ

ಅವುಗಳನ್ನು ತ್ಯಜಿಸಲೇಬೇಕು. ಇದೊಂದು ಭಗವದಾಜ್ಞೆಯೆಂದು ತಿಳಿಯಬೇಕು. ವೇದ ವಿರುದ್ಧವಾಗಿದ್ದರೆ ಪುರಾಣದಲ್ಲಿ ಹೇಳಿದ್ದರೂ ಅನ್ಯಾರ್ಥ ಮಾಡಬೇಕು.

**ಯಶ್ಚ ವೇದವಿರುದ್ಧೋऽಂಶಃ ಪುರಾಣೇಷ್ವಖಿಲೇಷ್ವಪಿ ।**
**ತದಂಶಸ್ತು ಪರಿತ್ಯಾಜ್ಯಃ ಸರ್ವದಾ ಸಕಲೈರಪಿ ॥**

- ***ಮುಂಡನ ಐಚ್ಛಿಕವೇ ?***

ಕೆಲವು ಪುರಾಣ ಹಾಗೂ ಶಂಖ – ಶಾಂಡಿಲ್ಯ – ಗಾಲವ – ಗೌತಮಾದಿ ಧರ್ಮಶಾಸ್ತ್ರಗಳಲ್ಲಿ ಪತಿಯನ್ನು ಕಳೆದುಕೊಂಡ ಸ್ತ್ರೀಯು ಕೇಶವನ್ನು ವಪನ ಮಾಡಲೇಬಾರದು.

**ಮುಂಡನಂ ಮಧುಪರ್ಕಂ ಚ ತಾಂಬೂಲಂ ಕುಸುಮಾದಿಕಂ ।**
**ಭರ್ತೃಹೀನಾ ಚ ಯಾ ಸಾಧ್ವೀ ಆಪದ್ಯಪಿ ಚ ವರ್ಜಯೇತ್ ॥**
*– ಶಾಂಡಿಲ್ಯಸ್ಮೃತಿ*

**ಕನ್ಯಾ ವಾ ವಿಧವಾ ವಾಪಿ ವಪನಂ ಯಾ ಸಮಾಚರೇತ್ ।**
**ಕಲ್ಪ ಕೋಟೀ ಸಹಸ್ರಾಣಿ ರೌರವಂ ನರಕಂ ವ್ರಜೇತ್ ।**
**ಭರ್ತೃಹೀನಾ ಚ ಯಾ ನಾರೀ ಮುಂಡಯಿತ್ವಾ ಸಮಾಚರೇತ್ ।**
**ಶ್ರೌತ–ಸ್ಮಾರ್ತಾನಿ ಕರ್ಮಾಣಿ ಚಾಂಡಾಲೀಂ ಯೋನಿ ಮಾಶ್ರಯೇತ್॥**
*– ಶಂಖಸ್ಮೃತಿ*

**ವಿಧವಾ ಯೋಷಿತಾಂ ಕೇಶವಪನಂ ನೇತಿ ಗಾಲವಃ ।**
**ಅಭರ್ತೃಕಾಣಾಂ ವಿದ್ವದ್ಭಿಃ ನೇಷ್ಯತೇ ಕೇಶವಾಪನಮ್ ॥**

ಈ ಮೇಲಿನ ಪ್ರಮಾಣಗಳೆಲ್ಲ ಭರ್ತೃಹೀನಳಾದ ಸ್ತ್ರೀಯರು ಕೇಶ ವಪನವನ್ನು ಮಾಡಲೇಬಾರದು ಎಂದು ನಿಷೇಧಿಸಿದೆ.

***"ವಿಧವಾ ಕಬರೀಬಂಧೋ ಭರ್ತುರ್ಬಂಧಾಯ ಜಾಯತೇ"*** ಇತ್ಯಾದಿ ಪ್ರಮಾಣಗಳು ಕೇಶವನ್ನು ವಪನ ಮಾಡಬೇಕೆಂದು ತಿಳಿಸಿದೆ.

ಹೀಗೆ ಪರಸ್ಪರ ಸ್ಮೃತಿಕಾರರಲ್ಲಿಯೇ ವಿರೋಧ ಕಂಡು ಬಂದಾಗ ಕೇಶ ವಪನವು ಐಚ್ಛಿಕವೆಂದು ಹೇಳಲೇಬೇಕು. ಆದ್ದರಿಂದಲೇ ಅನಂತ ಸಂಹಿತೆಯು

ವಿದ್ವಾಂಸರಾದ ವಿಪ್ರ ಸ್ತ್ರೀಯರು, ರಾಜಮಾತೆಯರು – ರಾಜಸ್ತ್ರೀಯರೂ ಕೇಶವನ್ನು ತೆಗೆಸಬೇಕಿಲ್ಲ. ಪತಿ ಮೃತನಾದಾಗ ಇತರ ಸ್ತ್ರೀಯರು ಇಚ್ಛೆಯಿದ್ದಲ್ಲಿ ಕೇಶವನ್ನು ತೆಗೆಸಬಹುದು ಅಥವಾ ತೆಗೆಯದೆ ಇರಬಹುದು ಎಂದಿದೆ.

**ವಿದ್ವದ್ ವಿಪ್ರ – ನೃಪಸ್ತ್ರೀಣಾಂ ಕೇಶವಾಪೋ ನಿಷಿಧ್ಯತೇ ।**
**ಅನ್ಯಾಃ ಕುರ್ಯುಃ ನ ವಾ ಕುರ್ಯುಃ ಇತಿ ಶಾಸ್ತ್ರಾರ್ಥನಿರ್ಣಯಃ ॥**

ರಾಮಾನುಜರ ಸಂಪ್ರದಾಯದ ತೆಂಕಲೈ ಶ್ರೀವೈಷ್ಣವ ಪದ್ಧತಿಯಲ್ಲಿಯೂ ಕೂದಲನ್ನು ಮುಂಡನ ಮಾಡುವ ಪದ್ಧತಿಯಿರುವುದಿಲ್ಲ. ಅವರು ಈ ಪ್ರಮಾಣ ಹೇಳುವರು.

**ನ ಕಾರ್ಯಂ ಕೇಶವಪನಂ ವೈಷ್ಣವ್ಯಾ ಭರ್ತೃಹೀನಯಾ ।**
**ವಿಕೇಶೀಂ ವಿಧವಾಂ ವಿಷ್ಣುಭಕ್ತಾಂ ನೈವ ನಿರೀಕ್ಷಯೇತ್ ॥**

- ***ಮೃತದಶಾಹಾನಂತರ ಒಂದು ಬಾರಿ ಮುಂಡನ ಸಾಕೆ ?***

ಮತ್ತೆ ಕೆಲವರು –ಶಂಖ–ಶಾಂಡಿಲ್ಯಾದಿ ಪ್ರಮಾಣಗಳು ಕೂದಲನ್ನು ಮುಂಡನ ಮಾಡಬಾರದು ಎಂದು ಹೇಳುತ್ತಿವೆ.

ಪುರುಷರಿಗೆ ಕ್ಷೌರ ಮಾಡಲು ದಿನ – ತಿಥಿ– ನಕ್ಷತ್ರ – ವಾರಗಳಿರುವಂತೆ ವಿಧವಾ ಮಂಡನಕ್ಕೆ ತಿಥಿವಾರಾದಿಗಳನ್ನು ಹೇಳದಿರುವುದರಿಂದಲೂ

ಅನೇಕ ದೇಶಾಚಾರಗಳಲ್ಲಿ ಸಕೇಶಿಗಳಾಗಿಯೇ ಇರುವುದರಿಂದಲೂ

ಮೃತನಾದ ಹತ್ತು ದಿವಸಗಳಲ್ಲಿ ಕೂದಲನ್ನು ತೆಗೆಯದೆ ಇರುವುದರಿಂದಲೂ,

ಮೃತನಾದ ಹತ್ತು ದಿವಸದ ನಂತರ ಒಂದು ಬಾರಿ ಕೂದಲನ್ನು ತೆಗೆಯಲಿ, ಪದೇ ಪದೇ ಕೂದಲ ವಪನ ಬೇಕಾಗಿಲ್ಲ ಎಂದು.

ಈ ರೀತಿ "ಜೀವನದಲ್ಲಿ ಒಂದು ಬಾರಿ ಮಾತ್ರ ವಪನ ಮಾಡುವುದರಿಂದ ಪ್ರತಿತಿಂಗಳೂ ಕ್ಷೌರಿಕನ ಮುಂದೆ ತಲೆತಗ್ಗಿಸುವುದೂ ಹಾಗೂ ಪರಪುರುಷನು ತನ್ನ ತಲೆಯನ್ನು ಸ್ಪರ್ಶ ಮಾಡುವುದೂ ತಪ್ಪುತ್ತದೆ" ಎಂದು ಅಭಿಪ್ರಾಯ ಹೊಂದಿರುವುದು.

- ***ವೇಣೀದಾನದಂತೆ ಎರಡಂಗುಲ ಕತ್ತರಿಸಿದರೆ ಸಾಲದೆ ?***

ಮತ್ತೆ ಕೆಲವರು ಹಿಂದಿನ ಧರ್ಮಶಾಸ್ತ್ರಗಳ ವಿರೋಧ– ಪರಗಳ ಮಾತಿಗೆ

ಬೆಲೆಕೊಟ್ಟು, ಸ್ತ್ರೀಯರಿಗೆ ಮುಂಡನವೆಂದರೆ ಎಲ್ಲಾ ಕೇಶಗಳನ್ನು ಎತ್ತಿ ಎರಡಂಗುಲದಷ್ಟು ಮಾತ್ರ ಕತ್ತರಿಸಿದರೆ ಸಾಕು. ಇದೇ ಸ್ತ್ರೀಯರ ಮುಂಡನವೆಂದು ಹೇಳುವರು. ಈ ಪ್ರಮಾಣ ನೀಡುವರು.

**ಸರ್ವಾನ್ ಕೇಶಾನ್ ಸಮುದ್ಧೃತ್ಯ ಛೇದಯೆದಂಗುಲದ್ವಯಂ ।**
**ಏವಂ ನಾರೀ ಕುಮಾರೀಣಾಂ ಶಿರಸೋ ಮುಂಡನಂ ಸ್ಮೃತಮ್ ॥**

*– ಪರಾಶರರು*

***ಸಿದ್ಧಾಂತ :***

**ಸಕೇಶೀಂ ವಿಧವಾಂ ದೃಷ್ಟ್ವಾ ಸವಾಸಾಃ ಜಲಮಾವಿಶೇತ್ ।**
**ಸಕೇಶ ವಿಧವಾ ಪಕ್ವಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥**

**ವಿಧವಾ ಕಬರೀಬಂಧೋ ಭರ್ತೃ ಬಂಧಾಯ ಜಾಯತೇ ।**
**ಶಿರಸೋ ವಪನಂ ತಸ್ಮಾತ್ ಕಾರ್ಯಂ ವಿಧವಯಾ ತಥಾ ।**
**ಮೃತಂ ಭರ್ತಾರಮಾದಾಯ ಬ್ರಾಹ್ಮಣೀ ವಹ್ನಿಮಾವಿಶೇತ್ ।**
**ಜೀವಂತೀ ಚೇತ್ ತ್ಯಕ್ತಕೇಶಾ ತಪಸಾ ಶೋಷಯೇತ್ ತನುಂ ॥**

ಇತ್ಯಾದಿ ಅನೇಕ ಪ್ರಮಾಣಗಳು ನಿರವಕಾಶವಾಗಿದ್ದು ಪ್ರಬಲವಾಗಿದೆ. ಅಕ್ಷತೆ ಅಂಗಾರದಂತೆ ಪತಿಯು ಮೃತನಾದಾಗ ಹತ್ತನೆ ದಿನದಂದು ಕೇಶವನ್ನು ಮುಂಡಿಸುವ ಪದ್ಧತಿ ಅನೂಚಾನವಾಗಿ ಬಂದಿದೆ. ಹೀಗಿರುವಾಗ ಯಾವಳು ಶಾಸ್ತ್ರ ವಿಹಿತವಾದದ್ದನ್ನು ಅನುಷ್ಠಾನಕ್ಕೆ ತಾರದೇ, ನಿಂದಿತವಾದದ್ದನ್ನು ಸೇವಿಸುತ್ತಾಳೆಯೋ ಅಂತಹವಳು ಪತನ ಹೊಂದುವಳು.

**ವಿಹಿತಸ್ಯಾನನುಷ್ಠಾನಾತ್ ನಿಂದಿತಸ್ಯ ಚ ಸೇವನಾತ್ ।**
**ಅನಿಗ್ರಹಾಚ್ಚೇಂದ್ರಿಯಾಣಾಂ ನಾರೀ ಪತನ ಮೃಚ್ಛತಿ ॥**

ಇನ್ನು ನಾರಿಯು ಪರಪುರುಷನ ಸ್ಪರ್ಶವನ್ನು ಮಾಡಲೇಬಾರದು ಪ್ರಧಾನ ಧರ್ಮವಿರುವಾಗ ಪ್ರಾಣವಿರುವವರೆಗೂ ನಾಪಿತನ ಸ್ಪರ್ಶವನ್ನು ಶಾಸ್ತ್ರವು ಹೇಗೆ ವಿಧಿಸೀತು? ಎಂಬ ಪ್ರಶ್ನೆ ಉಳಿಯುತ್ತದೆ.

ಆದರೆ, ಈ ರೀತಿಯ ಸ್ಪರ್ಶದಿಂದ ಪಾತಿವ್ರತ್ಯ ಭಂಗವೇನು. ಪತಿವ್ರತಾ ಸ್ತ್ರೀಯರೂ ಸಹ ರೋಗ ಬಾಧಿಸುತ್ತಿರುವಾಗ ವೈದ್ಯನ ಕರಸ್ಪರ್ಶವನ್ನು

ಸಹಿಸುತ್ತಾರೆ. ಹಳ್ಳಿಗಳಲ್ಲಿ ಬಳೆಗಾರನಿಂದ ಬಳೆಯನ್ನು ಹಾಕಿಸಿಕೊಳ್ಳುವಾಗ ಅವನು ಸ್ಪರ್ಶ ಮಾತ್ರ ಮಾಡುವುದಲ್ಲ ಕೈಗಳನ್ನು ಒತ್ತುತ್ತಾನೆ.

ಇತ್ತೀಚಿನ ದಿನಗಳಲ್ಲಿ ಸಿನಿಮಾ – ರೈಲು-ಬಸ್ಸುಗಳಲ್ಲಿ ಪರಪುರುಷನ ಸ್ಪರ್ಶ ಆಗಿಯೇ ತೀರುತ್ತದೆ. ಹೀಗಿರುವಾಗ ಇನ್ನು ತಿಂಗಳಿಗೆ ಎರಡು ತಿಂಗಳಿಗೋ ನಾಪಿತನ ಸ್ಪರ್ಶದಿಂದ ಪಾಪವೇನೂ ಉಂಟಾಗುವುದಿಲ್ಲ.

ಮುತ್ತೈದೆ ಸ್ತ್ರೀಯರು ಪ್ರಯಾಗಕ್ಕೆ ಹೋದಾಗ ತನ್ನ ಪತಿಯು ಎರಡಂಗುಲ ಕೂದಲು ಕತ್ತರಿಸಬೇಕೆಂಬ ವಿಧಿಯಿದೆ. ಆದರೆ ಗಂಡನೆ ಮೃತನಾಗಿರುವ ವಿಧವೆಗೆ ಈ ನಿಯಮ ಅನ್ವಯಿಸುವುದಿಲ್ಲ.

*'ನಾರೀ ಕುಮಾರೀಣಾಂ'* ಎಂದು ಹೇಳಲಾಗಿದ್ದು ವಿಧವೆಯರಿಗೆ ಸಂಪೂರ್ಣ ಮುಂಡನವೇ ವಿಹಿತವು.

ಆದ್ದರಿಂದ ಈ ಮಾನವ ಶರೀರವು ಅನಿತ್ಯವಾಗಿದ್ದು ಮೃತ್ಯು ಯಾವಾಗಲಾದರೂ ಕೊಂಡೊಯ್ಯಬಹುದು. ಆದ್ದರಿಂದ ಯಾವುದರಿಂದ ಆತ್ಮೋದ್ಧಾರವಾಗುವುದೋ ಅವುಗಳನ್ನು ಮಾಡಬೇಕು. ಆದ್ದರಿಂದ ಪತಿಯ ಪ್ರೀತಿಗಾಗಿಯೂ ಬೇರೆಯವರ ದೃಷ್ಟಿ ನಮ್ಮ ಮೇಲೆ ಬೀಳದಿರಲೂ ಸಹ ಕೇಶವಪನವನ್ನು ಮಾಡಿಕೊಳ್ಳಬೇಕು. ಇದರಿಂದ ಕೇಶಗಳಲ್ಲಿರುವ ಪಾಪಗಳೆಲ್ಲವೂ ಪರಿಹೃತವಾಗಿ ಸ್ನಾನ–ದಾನಾದಿಗಳು ಸಫಲವಾಗುತ್ತವೆ. ಸಕೇಶಿಯಾದ ವಿಧವೆಯು ನೀಡಿದ ಯಾವುದೇ ರೀತಿಯ ದಾನಾದಿಗಳನ್ನು ತೆಗೆದುಕೊಂಡ ಬ್ರಾಹ್ಮಣನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೆ. ಸಕೇಶಿಯು ಬೇಯಿಸಿದ ಅನ್ನಾದಿಗಳಂತು ನೈವೇದ್ಯಕ್ಕೆ ಬರುವುದೇ ಇಲ್ಲ. ತಿಂದರೆ ಚಾಂದ್ರಾಯಣ ಮಾಡಬೇಕಾಗುತ್ತದೆ. ವಿಧವೆಯು ಕೂದಲನ್ನು ತೆಗೆದು ಮಡಿಯಾದರೆ ತಾನೇ ತನ್ನ ಕೈಯಿಂದ ಪತಿಗೆ ತರ್ಪಣಾದಿಗಳನ್ನು ದಾನಾದಿಗಳನ್ನು ಬ್ರಾಹ್ಮಣರಿಗೆ ಭೋಜನವನ್ನೂ ತಯಾರಿಸಿ ಬಡಿಸಬಹುದು. ಇಷ್ಟೆಲ್ಲ ತ್ಯಾಗ ಮಾಡಿ ಕೇವಲ ಕೂದಲಿನ ವಿಷಯದಲ್ಲಿ ಅಭಿಮಾನ ಸಲ್ಲದು.

- ***ವಿಧವಾ ಧರ್ಮ ಸಂಗ್ರಹ :***

ಪ್ರತಿನಿತ್ಯವೂ ತಲೆಯ ಮೇಲೆ ಸ್ನಾನ ಮಾಡುವುದು, ವೈಶಾಖ – ಮಾಘಾದಿ ಮಾಸಗಳಲ್ಲಿ ಸಮೀಪದಲ್ಲಿರುವ ನದ್ಯಾದಿ ತೀರ್ಥಗಳಲ್ಲಿ ಸ್ನಾನ ಮಾಡಬೇಕು.

ಇದರಲ್ಲಿ ಆಲಸ್ಯ ಮಾಡಲೇಬಾರದು. ಆಯಾಯ ಮಾಸಗಳಲ್ಲಿ ಪೂರ್ಣವಾಗಿ ಸ್ನಾನ ಮಾಡಲಾಗದಿದ್ದರೂ ಅಂತ್ಯ ಪುಷ್ಕರಿಣಿ ದಿನಗಳಾದರೂ ಮೂರು ದಿವಸ ಸ್ನಾನ ಮಾಡಬೇಕು.

ದೀಪಾವಳಿ– ಉಗಾದಿ ದಿನಗಳನ್ನು ಹೊರತು ಉಳಿದ ದಿವಸಗಳಲ್ಲಿ ಅಭ್ಯಂಜನವು ನಿಷಿದ್ಧವೆಂದು ತಿಳಿಯಬೇಕು.

- ***ಅವಗಾಹನ ಸ್ನಾನ :***

ವಿಧವಾ ಸ್ತ್ರೀಯರು ಯತಿಗಳಂತೆ ಮುಳುಗಿ ಅವಗಾಹನ ಸ್ನಾನ ಮಾಡುತ್ತಿರಬೇಕು. ಕಾರ್ತಿಕ, ವೈಶಾಖಾದಿ ಕಾಲಗಳಲ್ಲಿ ಮನೆಯಿಂದ ಹೊರಗೆ ನದ್ಯಭಿಮಾನಿ ದೇವತೆಗಳಿರುವರು. ಆದ್ದರಿಂದ ಮನೆಯಿಂದ ಹೊರಗೆ ನದ್ಯಾದಿಗಳಲ್ಲಿ ಸ್ನಾನ ಮಾಡಬೇಕು.

- ***ಮಾಘ ರಥಸಪ್ತಮೀ :***

ಮಾಘ ಮಾಸದ ರಥಸಪ್ತಮಿಯಂದು ನದ್ಯಾದಿಗಳಲ್ಲಿ ಸ್ನಾನ ಮಾಡಿದವರ ಪಾಪಗಳೆಲ್ಲ ಇಲ್ಲದಾಗುವುವು.

ಮಾಘ ಮಾಸದ ಸಪ್ತಮಿಯು ರಥಸಪ್ತಮಿಯೆನಿಸಿದ್ದು ಅಂದು ಸೂರ್ಯಗ್ರಹಣಕ್ಕೆ ಸಮಾನವಾಗಿರುತ್ತದೆ. ಅರುಣೋದಯದಲ್ಲಿ ಸ್ನಾನ ಮಾಡಿದರೆ ವಿಶೇಷ ಫಲ.

- ***ತುಲಾಮಕರ ಮೇಷ ಸ್ನಾನ :***

ತುಲಾ ಸಂಕ್ರಮಣದಲ್ಲಿ ತಿಂಗಳು ಪೂರ್ತಿ ಕಾವೇರಿ ಸ್ನಾನ, ಮಕರ – ಮೇಷ ಮಾಸಗಳಲ್ಲಿ ಬೆಳಿಗ್ಗೆ ಸ್ನಾನ ಮಾಡುವವರ ಪಾಪಗಳೆಲ್ಲ ಇಲ್ಲವಾಗುತ್ತವೆ.

- ***ಚಾತುರ್ಮಾಸ್ಯದಲ್ಲಿ ಪ್ರಾತಃ ಸ್ನಾನ :***

ಆಷಾಢ ಮಾಸದ ಪೂರ್ಣಿಮೆಯಿಂದ ಆರಂಭಿಸಿ ಕಾರ್ತೀಕ ಪೂರ್ಣಿಮೆಯವರೆಗೂ ನಾಲ್ಕು ತಿಂಗಳು ಪೂರ್ಣವಾಗಿ ನದ್ಯಾದಿಗಳಲ್ಲಿ ಅಥವಾ ಮನೆಯಲ್ಲಿಯೇ ಸಂಕಲ್ಪ ಪೂರ್ವಕ ಪ್ರಾತಃ ಸ್ನಾನ ಮಾಡಿದವರಿಗೆ ಸರ್ವ ಪಾಪಮುಕ್ತಿ. ಶಕ್ತಿಯಿದ್ದರೆ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

**ಆಷಾಢಾದಿ ಚಾತುರ್ಮಾಸಾನ್ ಪ್ರಾತಃ ಸ್ನಾಯೀ ಸದಾ ಭವೇತ್ ।**
**ವಿಪ್ರೇಭ್ಯೋ ಭೋಜನಂ ದತ್ವಾ ಕಾರ್ತಿಕ್ಯಾಂ ಗೋದಾನ ಮಾಚರೇತ್॥**

– ಮತ್ಸ್ಯ

- ***ಪುಷ್ಯ ಪೂರ್ಣಿಮೆ :***

ಫಾಲ್ಗುಣ ಪೂರ್ಣಿಮೆ ವಿಶೇಷ ಪ್ರಾತಃ ಸ್ನಾನ.

**ಪುಷ್ಯ – ಫಾಲ್ಗುಣಯೋಃ ಮಧ್ಯೇ ಪ್ರಾತಃ ಸ್ನಾಯೀ ಸದಾ ಭವೇತ್॥**

- ***ಮಾಘ ಸ್ನಾನ ವಿಶೇಷ :***

ಮಾಘಮಾಸ ಪೂರ್ತಿ ಚಳಿಯಿರುತ್ತದೆ. ನದ್ಯಾದಿಗಳಿಗೆ ಹೋಗಿ ಸ್ನಾನ ಮಾಡಿದರೆ ಮಹಾತಪಸ್ಸು ಎನಿಸುತ್ತದೆ. ಸ್ನಾನಾ ನಂತರ ಅಥವಾ ಮೊದಲು ಅಗ್ನಿಯಲ್ಲಿ ಮೈ ಕಾಯಿಸುವುದು ನಿಷಿದ್ಧವಾಗಿರುತ್ತದೆ.

**ಸ್ನಾತೋ ವಹ್ನಿಂ ನ ಸೇವೇತ ಹ್ಯಸ್ನಾತೋ ವಾ ಕಥಂಚನ ।**

- ***ಸ್ವಾಮಿಪುಷ್ಕರಿಣ್ಯಾದಿ ತೀರ್ಥ ಸ್ನಾನ :***

ಧನುರ್ಮಾಸದಲ್ಲಿ ಸ್ವಾಮಿಪುಷ್ಕರಿಣಿಯಲ್ಲಿ ಮುಕ್ಕೋಟಿ ತೀರ್ಥಗಳ ಸನ್ನಿಧಾನವಿರುತ್ತದೆ. ದ್ವಾದಶಿಯಲ್ಲಾದರೂ ಮುಕ್ಕೋಟಿ ತೀರ್ಥಗಳು ಅರುಣೋದಯ ಕಾಲದಿಂದ 6 ಗಳಿಗೆ ಸನ್ನಿಹಿತವಾಗಿರುತ್ತವೆ. ಅಲ್ಲಿ ಸ್ನಾನ ಮಾಡಿದ ವಿಧವೆಯು ತನ್ನ ಸಮಸ್ತ ಪಾಪಗಳನ್ನು ಕಳೆದುಕೊಂಡು ಶುದ್ಧಳಾಗುವಳು.

**ಧನುರ್ಮಾಸೇ ಸಿತೇ ಪಕ್ಷೇ ದ್ವಾದಶ್ಯಾಮರುಣೋದಯೇ ।**
**ಯಃ ಸ್ನಾತೀ ತತ್ರ ಪುಷ್ಕರಿಣ್ಯಾಂ ಸರ್ವೈಃ ಪಾಪೈಃ ವಿಮುಚ್ಯತೇ ॥**

- ***ಸಂಕಲ್ಪ ಗಂಗಾದಿ ನದಿ ಸ್ಮರಣೆ :***

ಮೊದಲು ಸಂಕಲ್ಪವನ್ನು ಮಾಡಿಕೊಂಡು ತಾನು ಸ್ನಾನ ಮಾಡುವ ನೀರಿನಲ್ಲಿ ಗಂಗಾದಿ ನದಿಗಳು ಸನ್ನಿಹಿತವಾಗುವಂತೆ ಪ್ರಾರ್ಥಿಸಿ ಸ್ನಾನ ಮಾಡಬೇಕು.

- ***ಬಾಹ್ಯಾಭ್ಯಂತರ ಶೌಚ :***

ಶೌಚವು ಬಾಹ್ಯ–ಅಭ್ಯಂತರ ಎಂದು ಎರಡು ವಿಧ. ಮೃತ್ತಿಕೆ–ಜಲಗಳಿಂದ ಮಾಡಿಕೊಳ್ಳುವ ಶೌಚ ಬಾಹ್ಯವಾದರೆ, ನಿರಂತರ ಮನಸ್ಸನ್ನು ಭಗವದ್ ಧ್ಯಾನದಿಂದ ಪವಿತ್ರಗೊಳಿಸುವುದು ಅಭ್ಯಂತರ ಶುದ್ಧಿ (ವಾಧೂಲ –19).

ಸ್ತ್ರೀಯರಿಗೆ ಪುರುಷರಿಗೆ ಹೇಳಿದ ಅರ್ಧದಷ್ಟು ಶೌಚವನ್ನು ಹೇಳಲಾಗಿದೆ. – ದಕ್ಷ –5/11–13

- ***ಕರ್ಮಕಾಲದಲ್ಲಿಯೂ ಭಗವತ್ಸ್ಮರಣೆ :***

ಸ್ನಾನಾದಿ ಯಾವುದೇ ಕರ್ಮ ಮಾಡುವಾಗಲೂ ಭಗವಂತನನ್ನು ನಿರಂತರ ಭಕ್ತಿಭಾವದಿಂದ ಧ್ಯಾನಿಸುತ್ತಿರಬೇಕು. ದೇವರನಾಮಗಳನ್ನು ಹೇಳುತ್ತಿರಬಹುದು. ಪಾಕ ತಯಾರಿ ಬ್ರಾಹ್ಮಣ ಭೋಜನಾದಿಗಳಲ್ಲಿಯೂ ಸ್ಮರಣೆ ನಿರಂತರ-ವಾಗಿರಬೇಕು.

**ಕರ್ಮ ಕಾಲೇಽಪಿ ಸರ್ವತ್ರ ಸ್ಮರೇದ್ ವಿಷ್ಣುಂ ಹವಿರ್ಭುಜಂ ।**
**ತೇನ ಸ್ಯಾತ್ ಕರ್ಮ ಸಂಪೂರ್ಣಂ ತಸ್ಮೈ ಸರ್ವಂ ನಿವೇದಯೇತ್॥**
*– ಆಶ್ವಲಾಯನ*

- ***ನಿದ್ರೆಯಿಂದ ಎದ್ದ ಕೂಡಲೇ ಭಗವದ್ ಧ್ಯಾನ :***

ವಿಧವೆಯು ಆದಷ್ಟು ಕಡಮೆ ನಿದ್ರೆಯನ್ನು ಮಾಡಬೇಕು. ಮೈಮರೆಯುವಷ್ಟು ನಿದ್ರಾದಿಗಳು ತಮೋಹಾನಿಕಾರಕಗಳು.

ಬ್ರಾಹ್ಮೀ ಮುಹೂರ್ತದಲ್ಲಿಯೇ ಎದ್ದು ಹರಿನಾಮ ಸ್ಮರಣಾದಿಗಳಿಂದ ದೇವರ ಮನೆ ಗುಡಿಸಿ – ಸಾರಿಸಿ – ಪಾತ್ರೆಗಳನ್ನು ಶುದ್ಧೀಕರಿಸಿ ಪುಷ್ಪಾದಿಗಳನ್ನು ಬಿಡಿಸಿ ತಂದಿಟ್ಟಿರಬೇಕು. ಪುತ್ರ–ಪೌತ್ರಾದಿಗಳು ಮಾಡುವ ಪೂಜೆಗೆ ಸಿದ್ಧತೆ ಮಾಡಿಕೊಟ್ಟರೆ ಪೂಜೆ ಮಾಡಿದ ಪುಣ್ಯ ಲಭಿಸುತ್ತದೆ. ರೋಗಾದಿ-ಗಳಿಲ್ಲದಿರುವಾಗ ಬ್ರಾಹ್ಮೀ ಮುಹೂರ್ತದಲ್ಲಿ ಯಾವಳು ನಿದ್ರಿಸುತ್ತಿರುವಳೋ ಅದು ಪುಣ್ಯ ಕ್ಷಯಕಾರಕಗಳು. ವಿಧವೆಯು ಅರುಣೋದಯ ಕಾಲಕ್ಕೆ ನಿದ್ರೆ ಮಾಡದೆ ಎದ್ದಿರುವಾಗ ಆ ಕಾಲದಲ್ಲಿ ಬಂದಿರುವ ನದ್ಯಭಿಮಾನಿಗಳ ಸನ್ನಿಧಾನ ಮನೆ–ಮನಗಳಲ್ಲಿ ಆಗುತ್ತದೆ. ವಿಧವೆಯು ಮಂಗಳ – ಪವಿತ್ರಳಾಗುವ ಮಾರ್ಗಗಳಲ್ಲಿ ಇದೂ ಒಂದಾಗಿದೆ.

**ಬ್ರಾಹ್ಮೇ ಮುಹೂರ್ತೇ ಯಾ ನಿದ್ರಾ ಸಾ ಪುಣ್ಯ ಕ್ಷಯಕಾರಿಣೀ ॥**
*– ಆಚಾರೇಂದು ಪು.–17*

- ***ಭೂಮಿ ವಂದನೆ :***

ಸಮುದ್ರವಸನೆ ದೇವಿ – ಇತ್ಯಾದಿ ಮಂತ್ರಗಳಿಂದ ಭೂಮಿ ಪ್ರಾರ್ಥನೆ. ಮಾಡಿ ನಂತರ ದೇವರ ಮನೆಯಲ್ಲಿರುವ ದೇವದೇವನ ದರ್ಶನ ಮಾಡಬೇಕು. ಮುತ್ತೈದೆಯಂತೆ ಕನ್ನಡಿ ದರ್ಶನವಿಲ್ಲ.

ಪತಿವ್ರತೆಯರಾದ ಸಾವಿತ್ರೀ – ಸುಕನ್ಯಾ – ಪ್ರಭಾವಳೀ – ದೇವಹೂತೀ – ಪ್ರಸೂತಿ – ದಾಕ್ಷಾಯಿಣೀ – ಕುಂತೀ – ಗಾಂಧಾರೀ – ಅಹಲ್ಯಾದಿ ಪತಿವ್ರತೆಯರನ್ನು ಮಾನಸಿಕವಾಗಿ ನಮಿಸಿ – ಅವರ ವಿಶಿಷ್ಟ ಗುಣ ಹಾಗೂ ಮುತ್ತೈದೆತನವನ್ನು ಮುಂದಿನ ಜನ್ಮಗಳಲ್ಲಿ ಬೇಡಬೇಕು.

- ***ದಂತಧಾವನ :***

ಬ್ರೇಷ್‌ಗಳಲ್ಲಿ ಹಲ್ಲುಜ್ಜುವುದು ನಿಷಿದ್ಧವು. ದಂತಮಂಜನ ಪುಡಿಯಿಂದಾಗಲೀ, ಸುಟ್ಟ ಗೋಮಯದಿಂದಾಗಲೀ ದಂತಧಾವನ ಮಾಡಬೇಕು. ದಶಮ್ಯಾದಿ ಹರಿದಿವಸಗಳಲ್ಲಿ ಕೇವಲ ಬೆರಳಿನಿಂದಲೇ ಉಜ್ಜಿ ಹದಿನಾರು ಬಾರಿ ಗಂಡೂಷ ಮಾಡಬೇಕು. ದಂತಕಾಷ್ಠದಲ್ಲಿ ಉಜ್ಜುವುದಾದರೆ ರಜಸ್ವಲೆಯರಾಗಿದ್ದಾಗ ಸೂತಕವಿರುವಾಗ ಕಾಷ್ಠದಿಂದ ಉಜ್ಜಬಾರದು. (ಸ್ಕಾಂಧ – ಪ್ರಭಾಸ ಖಂಡ).

- ***ವಿಧವೆಯರ ಕ್ಷೌರ ವಿಚಾರವು :***

ವಿಧವೆಯರು ಎರಡು ತಿಂಗಳಿಗೊಮ್ಮೆ ಮುಂಡನ ಮಾಡಿಸಿಕೊಳ್ಳಬಹುದು.

ವೇದಶಾಖೆ ಸ್ವೀಕಾರ – ಶಿಖಾ ವಿಷಯ – ಊರ್ಧ್ವಪುಂಡ್ರಾದಿ ಧಾರಣಗಳಲ್ಲಿ ಪೂರ್ವಜರನ್ನೇ ಅನುಸರಿಸಬೇಕು.

**ಶಾಖಾಂ ಶಿಖಾಂ ಚ ಪುಂಡ್ರಂ ಚ ಸಮಯಾಚಾರಮೇವ ಚ ।**
**ಪೂರ್ವೈರಾಚರಿತಂ ಕುರ್ಯಾತ್** ॥ – ವಿಷ್ಣುಪುರಾಣ

ಏಕಾದಶೀ, ಚತುರ್ದಶೀ, ಅಮಾವಾಸ್ಯೆ, ಪೌರ್ಣಿಮೆ, ಸಂಕ್ರಾಂತಿ, ವ್ಯತೀಪಾತ ಭದ್ರಾದಿ ತಿಥಿಗಳನ್ನು ಹೊರತುಪಡಿಸಿ, ಭಾನುವಾರ, – ಶನಿವಾರ ಮಂಗಳವಾರಗಳನ್ನು ಬಿಟ್ಟು ಉಳಿದ ಯೋಗ್ಯ ದಿವಸಗಳಲ್ಲಿ ಕ್ಷೌರಿಕನ್ನನೇ ಮನೆಗೆ ಬರಲು ತಿಳಿಸಿ ವಾಪನ ಮಾಡಿಸಿಕೊಳ್ಳಬೇಕು. ಹೀಗೆ ವಾಪನ ಮಾಡಿಸಿಕೊಂಡಾಗ ಆಯಾಯ ಮಾಸಗಳಲ್ಲಿ ಮಾಡಿದ್ದ ಪಾಪಗಳೆಲ್ಲ ಕೂದಲಿನಲ್ಲಿ ಸಂಗ್ರಹೀತವಾಗಿದ್ದು ವಾಪನದಿಂದ ದೂರ ಸರಿಯುತ್ತವೆ. ಕೂದಲನ್ನು ತೆಗೆದಿರುವ ವಿಧವೆಯು ಮಂಗಳವಸ್ತುಗಳಿಗಿಂತಲೂ ಮಂಗಳವೆನಿಸುವಳು. ಗಂಗಾ ಸಮವೆಂದೂ ಪುರಾಣ ತಿಳಿಸಿದೆ.

ಮುತ್ತೈದೆಯಾಗಿದ್ದಾಗ ಸ್ತ್ರೀಯು ತನ್ನ ಕೂದಲನ್ನು ಕತ್ತರಿಸಲೇಬಾರದು.

ಕತ್ತರಿಸಿದರೆ ಗಂಗಾ ಸನ್ನಿಧಾನ ತೊಲಗುತ್ತದೆ. ವಿಧವಾಸ್ತ್ರೀಯು ಕಾಲಕಾಲಕ್ಕೆ ತೆಗೆಯದಿದ್ದರೆ ಗಂಗಾದಿ ನದಿಗಳಲ್ಲಿ ಮಿಂದು ಸಂಪಾದಿಸಿರುವ ಪುಣ್ಯವು ನಷ್ಟವಾಗುತ್ತದೆ. ಬ್ರಾಹ್ಮಣ ಸ್ತ್ರೀಯರಂತೂ ಪತಿ ಮೃತನಾದ ನಂತರ ಕೇಶವನ್ನು ವಪನ ಮಾಡಿಕೊಳ್ಳಲೇಬೇಕು.

- ***ಸ್ನಾನದ ಅವಶ್ಯಕತೆ :***

ಯಾವುದೇ ದೇವತಾ ಕಾರ್ಯ ಮಾಡಲು ಸ್ನಾನವೇ ಮೂಲವಾಗಿದೆ. ಇದಲ್ಲದೆ ಆಯುರಾರೋಗ್ಯ–ದುಃಸ್ವಪ್ನಾದಿ ಫಲಗಳು ಸ್ನಾನದಿಂದ ಲಭಿಸುತ್ತವೆ. ಆದ್ದರಿಂದ ನವದ್ವಾರಗಳಿಂದ ಹೊರಸೂಸುವ ಈ ದೇಹವು ಪವಿತ್ರವಾಗಲೂ ಸ್ನಾನ ಅವಶ್ಯಕವಾಗಿದೆ. ಕೂದಲು ತೆಗೆದರೆ ಮಾತ್ರ ಈ ವಿಧಿವಿಧಾನಗಳು ಅರ್ಥವತ್ತಾಗುತ್ತವೆ.

- ***ಸ್ನಾನಾ ನಂತರ ತರ್ಪಣ :***

ಮೃತನಾದ ತನ್ನ ಪತಿಯಂತರ್ಗತ ಭಗವಂತನ ಪ್ರೀತಿಗಾಗಿ ದರ್ಭೆ ಮಿಶ್ರಿತವಾದ ಜಲದಿಂದ ತನ್ನ ಪತಿ–ಮಾವ – ಅವರ ತಂದೆ ಹೆಸರು ಗೋತ್ರ ಹೇಳಿ ಜಲತರ್ಪಣ ಬಿಡಬೇಕು. ಪುತ್ರ ಪೌತ್ರರಿದ್ದರೆ ವಿಶೇಷ ದಿವಸಗಳಲ್ಲಿ ಅವರಿಂದಲೇ ಬಿಡಿಸಬೇಕು. ತಾನು ಬಿಡಬಾರದು. ಮಕ್ಕಳ ಅನುಪಸ್ಥಿತಿಯಲ್ಲಿ – ತೀರ್ಥಯಾತ್ರಾದಿಗಳಲ್ಲಿ ತಾನೇ ಜಲತರ್ಪಣ ಬಿಡಬೇಕು. ತರ್ಪಣಾಂಗ ದಾನಾದಿಗಳನ್ನು ಮಾಡಬೇಕು.

**ತರ್ಪಣಂ ಪ್ರತ್ಯಹಂ ಕಾರ್ಯಂ ಭರ್ತುಃ ಕುಶತಿಲೋದಕೈಃ ।**
**ತತ್ಪಿತುಃ ತತ್ಪಿತುಶ್ಚಾಪಿ ನಾಮ ಗೋತ್ರಾದಿ ಪೂರ್ವಕಮ್ ॥**

*– ಸ್ಕಾಂ.ಕಾ. 80*

- ***ಗೋಪೀಚಂದನ ಧಾರಣೆ :***

ವಿಧವಾ ಸ್ತ್ರೀಯರೂ ಸಹ ಯತಿಗಳಂತೆ ದ್ವಾದಶ ಪುಂಡ್ರಗಳನ್ನು ಧರಿಸಬೇಕು. ಮುತ್ತೈದೆ ಸ್ತ್ರೀಯರು ಕೇವಲ ಹಣೆಯಲ್ಲಿ ಒಂದು ನಾಮ ಧರಿಸಿದರೆ ಸಾಕು. ವಿಧವಾ ಸ್ತ್ರೀಯರಿಗೆ ದ್ವಾದಶ ನಾಮಗಳು ವಿಹಿತವಾಗಿವೆ.

ಹಣೆಗೆ – ಮಧ್ಯ ಒಂದು, ಎದೆ–ಕುತ್ತಿಗೆ–ತಲೆ–ಎರಡು ಮೊಳಕೈಗಳು,

ಎರಡು ಭುಜಗಳು, ಬೆನ್ನಿನ ಹಿಂಭಾಗ, ಎರಡು ಪಕ್ಕೆಗಳು. ಹೀಗೆ ದ್ವಾದಶನಾಮ ಧರಿಸಬೇಕು.

- ***ಪಂಚಮುದ್ರೆಗಳು :***

ಈ ನಾಮಗಳು ಧರಿಸಿದ ಕಡೆಗಳೆಲ್ಲ ಬಲಭಾಗದಲ್ಲೆಲ್ಲ ಚಕ್ರ–ಎಡಭಾಗದಲ್ಲೆಲ್ಲ ಶಂಖ, ಬಲಭಾಗದಲ್ಲೆಲ್ಲ ಪದ್ಮ, ಎಡಭಾಗದಲ್ಲೆಲ್ಲ ಗದಾ, ನಾರಾಯಣ ಮುದ್ರೆ ಸರ್ವತ್ರ ಧರಿಸಬೇಕು.

- ***ತೀರ್ಥ ಪ್ರಾಶನ :***

ಸ್ನಾನಾನಂತರ ನಿರ್ಮಾಲ್ಯ ಮೂರು ಬಾರಿ, ಭೋಜನದ ಮೊದಲು ಮೂರು ಬಾರಿ, ಭೋಜನಾ ನಂತರ ಒಂದು ಬಾರಿ.

- ***ವಸ್ತ್ರಧಾರಣೆ :***

ವಿಧವೆಯರು ಕೇಶಾಲಂಕಾರ, ತಾಂಬೂಲ, ಗಂಧಲೇಪನ, ಪುಷ್ಪಾದಿಧಾರಣ, ವಿವಿಧ ಆಭರಣಗಳನ್ನು ಧರಿಸುವುದು, ಸ್ಟೀಲ್ ತಟ್ಟೆ, ಕಂಚಿನ ಪಾತ್ರೆಗಳಲ್ಲಿ ಊಟ ಹಾಗೂ ಪಾನಾದಿಗಳನ್ನು ಮಾಡಬಾರದು.

ವಸ್ತ್ರಗಳಲ್ಲಿ ಶ್ರೇಷ್ಠವಾದ ನಾರುಮಡಿಯನ್ನೇ ಉಟ್ಟಿರಬೇಕು. ಯಾವಾಗಲೂ ಹಾಸಿಗೆ ಮೊದಲಾದವುಗಳನ್ನು ಮುಟ್ಟಿಸಿಕೊಳ್ಳಬಾರದು. ದರ್ಭೆಯ ಚಾಪೆಯ ಮೇಲೆ ದೇವರ ಮನೆಯ ಬಳಿಯೇ ಕುಳಿತು ದೇವರ ಚಿಂತನೆ ಮಾಡುತ್ತಿರಬೇಕು.

ಬಣ್ಣಬಣ್ಣದ ವಸ್ತ್ರಗಳನ್ನು ಧರಿಸಬಾರದು. ರಜೋಗುಣವನ್ನು ಹತ್ತಿಕ್ಕುವ ಸೂಚನೆಯಾದ ಸ್ವಲ್ಪ ಕೆಂಪಾದ ವಸ್ತುವನ್ನು, ಸಾತ್ವಿಕ ಸೂಚಕವಾದ ಬಿಳಿಯಾದ ಸೀರೆಯನ್ನಾಗಲೀ ಕಚ್ಚೆ ಸಹಿತವಾಗಿ ಧರಿಸಬೇಕು.

ಬಣ್ಣಬಣ್ಣದ ವಸ್ತ್ರಧಾರಣೆಯಿಂದಾಗಿ ಹಾಗೂ ತಾಮಸ ರಾಜಸ ವಸ್ತುಗಳ ಸೇವನೆಯಿಂದಾಗಿ ಉತ್ತೇಜನವುಂಟಾಗಿ ಬ್ರಹ್ಮಚಾರೀವ್ರತ ಲೋಪವಾಗುತ್ತದೆ. ಇತರ ಸ್ತ್ರೀಯರೊಂದಿಗೆ ವ್ಯವಹಾರಿಸುವಾಗಲೂ ವಿಷಯ ವಸ್ತುಗಳ, ಸಿನೆಮಾ, ಕೆಟ್ಟ ಚಿತ್ರಗಳ ದರ್ಶನ– ಭಾಷಣಾದಿಗಳಿಂದ ದೂರವಿರಬೇಕು. ಇತರ

ಸ್ತ್ರೀಯರೊಂದಿಗೆ – ಸೊಸೆ– ಮಗು – ಮೊದಲಾದವರೊಂದಿಗೆ ವ್ಯವಹರಿಸುವಾಗಲೂ ಭಗವಂತನ ಮಹಿಮೆಗಳ ಬಗ್ಗೆ ಅವರಿಗೆ ತಿಳಿಸಿಕೊಡುತ್ತಾ ಅವರನ್ನು ಮನೆಯ ಸದ್ಗೃಹಿಣಿಯರನ್ನಾಗಿ ಮಾಡಬೇಕು.

**ಸ್ನಾತ್ವಾ ಶುಕ್ಲಾಂಬರಧರಾ ಜಿತಕ್ರೋಧಾ ಜಿತೇಂದ್ರಿಯಾ ।**
**ಅಲಾಭೇ ಧೌತವಸ್ತ್ರಸ್ಯ ಶಾಣಸೂತ್ರಾದಿ ನಿರ್ಮಿತಮ್ ॥**

- ***ತನ್ನ ವಸ್ತ್ರ ತಾನೇ ಒಗೆಯಬೇಕು :***

ಧರಿಸುವ ವಸ್ತ್ರವನ್ನು ತಾನೆ ಶುದ್ಧಿ ಮಾಡಬೇಕು. ಬಿಳಿಯಾಗಿರಬೇಕು, ಅಂಚಿರಬೇಕು, ಇತರರು ಧರಿಸಿರಬಾರದು.

- ***ಸ್ನಾನ ಕಾಲದಲ್ಲಿಯ ಸೀರೆ :***

ಸ್ನಾನಕ್ಕಾಗಿಯೇ ಒಂದು ಸೀರೆ ಕೋರಿಯನ್ನು ಒದ್ದೆ ಮಾಡಿಕೊಂಡು ಧರಿಸಿ, ಸ್ನಾನ ಮಾಡಬೇಕು. ನಗ್ನವಾಗಿ ಸ್ನಾನ ಮಾಡಬಾರದು. ಸ್ನಾನಾ ನಂತರ ನಾರು ಮಡಿ ಧರಿಸಬೇಕು. ಇದನ್ನು ಧರಿಸಿದಾಗ ಇತರ ವಸ್ತುಗಳ ಸ್ಪರ್ಶ ದೋಷ ತಗಲುವುದಿಲ್ಲ. ***(ಸ್ಪರ್ಶದೋಷೋ ನ ವಿದ್ಯ ತೇ).***

- ***ದೇವರ ಪೂಜೆ :***

ಸ್ತ್ರೀಯರಿಗೆ ಶೂದ್ರಾದಿಗಳಿಗೆ ಪ್ರತಿಮಾ ಜಪ ಮಾಡುವುದರಲ್ಲಿ ಅಧಿಕಾರವಿರುವುದಿಲ್ಲ. ಪೂಜೆಗೆ ಅಣಿ ಮಾಡಿಕೊಟ್ಟರೆ ಸಾಕು ಪೂಜಾಫಲ ಲಭಿಸುತ್ತದೆ.

ಶಾಲಿಗ್ರಾಮಾದಿ ಪೂಜೆಯಂತೂ ಸ್ತ್ರೀ ಸಾಮಾನ್ಯರಿಗೆ ನಿಷಿದ್ಧವಾಗಿರುತ್ತದೆ. ಯಾವುದೇ ಪ್ರತಿಮೆ, ಶಾಲಿಗ್ರಾಮ, ಚಕ್ರಾಣಿಕೆ ಮೊದಲಾದವುಗಳನ್ನು ನೇರವಾಗಿ ಮುಟ್ಟಬಾರದು. ಪೆಟ್ಟಿಗೆಗೆ ಪುಷ್ಪಾದಿಗಳನ್ನು ಏರಿಸಬಹುದು.

**ಶೂದ್ರೋ ವಾ ಸಚ್ಛೂದ್ರೋ ವಾ ಸಧವಾ ವಾ ವಿಧವಾಂಗನಾ ।**
**ದೂರಾದೇವಾಸ್ಪೃಶನ್ ಪೂಜಾಂ ಪ್ರಕುರ್ಯಾತ್ ಶಿವಕಷ್ಣಯೋಃ ॥**

- ***ಕೃಷ್ಣ ಮಂತ್ರ ಜಪ :***

**ಶ್ರೀಂ ಕ್ಲೀಂ ಕೃಷ್ಣಾಯ ನಮಃ** ಎಂದಾಗಲೀ **ಶ್ರೀಕೃಷ್ಣಾಯ ನಮಃ** ಎಂದಾಗಲಿ

ವಿಧವಾ ಸ್ತ್ರೀಯು ಜಪಿಸಬೇಕು. ಒಂದು ಲಕ್ಷ ಬಾರಿ ಜಪ ಮಾಡಿ ಭಗವಂತನಿಗೆ ಅರ್ಪಿಸಿ, ಪತಿಯ ಪ್ರೀತಿಗಾಗಿ ಬ್ರಾಹ್ಮಣನಿಗೆ ವಸ್ತ್ರಾದಿದಾನ ಸದಕ್ಷಿಣಾಕವಾಗಿ ಮಾಡಬೇಕು. ಹೀಗೆ ಹತ್ತು ಲಕ್ಷ ಜಪಿಸಿ ಯಥಾಶಕ್ತಿ ಪುತ್ರಾದಿಗಳು ಅಥವಾ ಬ್ರಾಹ್ಮಣರಿಂದಲೇ ಹೋಮ ಮಾಡಿಸಿ ಅನ್ನದಾನಾದಿಗಳಿಂದ ಭಗವಂತನನ್ನು ಅರ್ಚಿಸಬೇಕು.

**ಹೋಮಸ್ತು ಬ್ರಾಹ್ಮಣದ್ವಾರಾ ಸ್ತ್ರೀಶೂದ್ರಾಣಾಂ ನಿಗದ್ಯತೇ ।**

- ***ಶ್ರೀಕೃಷ್ಣಮಂತ್ರದಿಂದಲೇ ಸರ್ವಸಿದ್ಧಿ :***

ಸ್ತ್ರೀಯರಾಗಲೀ–ವಿಧವೆಯರಿಗಾಗಲೀ ಶ್ರೀಕೃಷ್ಣ ಮಂತ್ರವೊಂದರ ಜಪದಿಂದಲೇ ಕಲಿಯುಗದಲ್ಲಿ ಸರ್ವವೂ ಸಿದ್ಧಿಯಾಗುತ್ತದೆ.

ಹತ್ತು ಲಕ್ಷ ಕೃಷ್ಣಮಂತ್ರ ಮುಗಿದ ಮೇಲೆ ಶ್ರೀರಾಮ ಮಂತ್ರವನ್ನು ಆರು ಲಕ್ಷದಷ್ಟು ಮಾಡಬಹುದು. 'ಶ್ರೀಗೋಪಾಲಕೃಷ್ಣಾಯ ನಮಃ' ಎಂಬ ಮಂತ್ರವನ್ನು ಒಂಭತ್ತು ಲಕ್ಷ ಜಪವನ್ನು, ಶ್ರೀಹರಿಯೇ ನಮಃ ಎಂಬುದನ್ನು ಆರು ಲಕ್ಷ ಜಪವನ್ನು ಇದೇ ರೀತಿ ಅಚ್ಯುತಾಯ ನಮಃ, ಮತ್ಸ್ಯ–ಕೂರ್ಮ–ವಾಮನ ಮೊದಲಾದ ಮಂತ್ರಗಳನ್ನು ಜಪಿಸಿ, ಪುನಃ ಶ್ರೀಕೃಷ್ಣ ಮಂತ್ರವನ್ನು ಲಕ್ಷ ಬಾರಿ ಜಪಿಸಿ, ಹೋಮಾದಿಗಳನ್ನು ಮಾಡಬಹುದು.

ಈ ಮಂತ್ರಗಳನ್ನು ಜಪಿಸುವಾಗ ಸಂಕಲ್ಪ ಮಾಡಿ, ಬೀಜಾಕ್ಷರ ಓಂಕಾರಾದಿಗಳನ್ನು – ಅಂಗನ್ಯಾಸಾದಿಗಳನ್ನು ಹೇಳದೆ ನೇರವಾಗಿ ಕೆಲಸ ಮಾಡುವಾಗಲೆಲ್ಲ ಜಪಿಸುತ್ತಿರಬಹುದು.

ಮೊದಲು ಗುರುಮಂತ್ರವನ್ನು ಜಪಿಸಿ, ಭಗವಂತನಿಗೆ ಅರ್ಪಿಸಿ ನಂತರ ಅಂಗನ್ಯಾಸಾದಿಗಳಿಲ್ಲದೆ ಶ್ರೀಕೃಷ್ಣಾಯ ನಮಃ, ಶ್ರೀರಾಮಾಯ ನಮಃ ಇತ್ಯಾದಿಯಾಗಿ ಜಪಿಸುತ್ತಿರಬಹುದು.

- ***ತುಲಸೀ ಪೂಜೆ ಬೇಡ :***

ವಿಧವಾ ಸ್ತ್ರೀಯರು ಮನೆಯ ಮುಂದೆ ಗೋಮಯಾದಿಗಳಿಂದ ಸಾರಿಸಿ ನೀರನ್ನು ಹಾಕಿ ಶುದ್ಧಿಗೊಳಿಸಬಹುದು. ಬೃಂದಾವನದ ಸುತ್ತಲೂ ನೀರನ್ನು ಹಾಕಿ ಸ್ವಚ್ಛಗೊಳಿಸಬಹುದು. ಆದರೆ ರಂಗವಲ್ಲ್ಯಾದಿಗಳಿಂದ ಅಲಂಕರಿಸಬಾರದು. ಇದನ್ನೆಲ್ಲ ಸೊಸೆ ಮಗಳು ಮೊದಲಾದವರಿಂದ

ಮಾಡಿಸಬೇಕು. ತಾನು ಮಾರ್ಗದರ್ಶನ ನೀಡುತ್ತಾ ತರಬೇತಿಯನ್ನು ನೀಡಬಹುದು. ತುಲಸಿ ಗಿಡಗಳ ಪಾಲನೆ ಪೋಷಣೆಗಳನ್ನು ಮೇಲ್ವಿಚಾರಣೆ ಮಾಡುತ್ತಿರಬೇಕು.

- ***ಕಂಚುಕಧಾರಣೆ ನಿಷಿದ್ಧ :***

ವಿಧವಾ ಸ್ತ್ರೀಯರು ಲಕ್ಷ್ಮೀದೇವಿಯ ಸನ್ನಿಧಾನವಿರುವ ಕುಪ್ಪಸವನ್ನು ಧರಿಸಬಾರದು. ಕಂಚುಕದ ಎಡಬಲ ತೋಳುಗಳಲ್ಲಿ ಶ್ರೀ-ಭೂಮಿಯವರು – ಮಧ್ಯೆ ಉಪೇಂದ್ರನೂ, ಕುಪ್ಪಸದ ಗಂಟಿನಲ್ಲಿ ದುರ್ಗೆಯೂ ಸನ್ನಿಹಿತರಾಗಿ ಇದರಿಂದಾಗಿ ಗಂಗಾದಿ ಸನ್ನಿಧಾನವಿರುವ ಮುತ್ತೈದೆ ಸ್ತ್ರೀಯರು ಧರಿಸಿದಾಗ ಯಂತ್ರದಲ್ಲಿ ಹೊಲಿದಿದ್ದರೂ ದೋಷವಿರುವುದಿಲ್ಲ. ವಿಧವಾ ಸ್ತ್ರೀಯರು ಕಂಚುಕವನ್ನು ಧರಿಸಿದರೆ ಕಲಿಪತ್ನಿಯ ಸನ್ನಿಧಾನವೇರ್ಪಟ್ಟು ಮನೆಯಲ್ಲಿ ಕಲಹಾದಿಗಳಿಗೆ ಕಾರಣಳಾಗುತ್ತಾಳೆ.

ಇದನ್ನೇ **'ಶುಭಾಚಾರಾ ಸುನಿರ್ಮಲಾ ನಿತ್ಯಂ ಸಂಪೂಜಯೆದ್ ಹರಿಮ್'** ಎನ್ನಲಾಗಿದೆ.

**ಕಂಚುಕಂ ನ ಪರೀದಧ್ಯಾತ್ ವಾಸೋ ನ ವಿಕೃತಂ ವಸೇತ್ ।**
**ಏವಂ ಧರ್ಮಯುಕ್ತಾ ವಿಧವಾಪಿ ಪತಿವ್ರತಾ ॥** – *ಸ್ಕಾಂ–ಕಾ.*

- ***ವಿಧವೆಯೋ – ಗಂಗೆಯೋ?***

ಹೀಗೆ ಪ್ರತಿನಿತ್ಯ ಸ್ನಾನ– ವೈಶಾಖಾದಿ ವಿಶೇಷ ಸ್ನಾನ – ಶುಕ್ಲವಸ್ತ್ರಧಾರಣೆ – ಕಂಚುಕ ಧರಿಸದೆ ಇರುವುದು – ಪತ್ಯಂತರ್ಗತ ಭಗವಂತನ ಪೂಜೆ – ದೀಪ – ವ್ಯಜನ – ವಸ್ತ್ರ – ಚಪ್ಪಲಿ – ಛತ್ರೀ – ಉದಕುಂಭದಾನಾದಿಗಳು – ಗ್ರಹಣ ನಿಮಿತ್ತ ವಿಶೇಷ ಸ್ನಾನ ಮಂತ್ರಗಳ ಜಪ – ದಿನಕ್ಕೆ ಒಂದೇ ಬಾರಿ ಭೋಜನ – ಫಲಹಾರಾದಿಗಳಿಂದ ಭೋಜನ – ಏಕಾದಶೀ – ಜನ್ಮಾಷ್ಟಮೀ – ಚಾತುರ್ಮಾಸ್ಯಾದಿ ವ್ರತ – ಧಾರಣೆ – ಪಾರಣೆ – ಪಯೋವ್ರತ – ಚಾಂದ್ರಾಯಣ – ಲಕ್ಷಬತ್ತಿವ್ರತ – ಲಕ್ಷ ನಮಸ್ಕಾರ – ಪ್ರದಕ್ಷಿಣೆ – ಬದರೀಯಾತ್ರೆ – ಶನಿವಾರ – ಭಾನುವಾರ – ಮಂಗಳವಾರಾದಿಗಳ ರಾತ್ರಿಯಲ್ಲಿ ಫಲಾಹಾರವನ್ನೂ ತೆಗೆದುಕೊಳ್ಳದಿರುವುದು – ರಾತ್ರಿಯಲ್ಲಿ ಅರಳನ್ನು ತಿನ್ನದಿರುವುದು, ಬ್ರಹ್ಮಚರ್ಯ – ಪರಪುರುಷನ ನೋಡದಿರುವುದು – ಪರಪುರುಷರ

ಹೆಸರನ್ನೆ ಆಡದಿರುವುದು – ಹಣೆಯಲ್ಲಿ ಗೋಪೀಚಂದನ – ಅಂಗಾರದಿಂದ ಲಲಾಟ ಶೂನ್ಯತೆಯ ಪರಿಹಾರ – ಯಥಾಶಕ್ತಿ ಲವಣ – ಕ್ಷಾರವರ್ಜಿತಾನ್ನ ಭಕ್ಷಣ – ನೆಲದ ಮೇಲೆ ಶಯನ – ತಾಂಬೂಲಾದ್ಯಚರ್ವಣ – ಅಭ್ಯಂಗ ಮಾಡದಿರುವುದು – ಗಂಧ ಪುಷ್ಪಾದಿ ಮಾದಕ ವಸ್ತು ತ್ಯಾಗ – ಸುವರ್ಣದ ಆಭರಣಗಳನ್ನು ದೂರೀಕಿಸುವದು – ಪತಿಯ ಪ್ರೀತಿಗಾಗಿ ನಾನಾ ವಸ್ತುಗಳ ದಾನ – ತ್ರಿರಾತ್ರವ್ರತ – ಪಂಚರಾತ್ರವ್ರತ – ಮಾಸೋಪವಾಸಾದಿಗಳಿಂದ ದೇಹದ ಪಾಪಗಳನ್ನು ದೂರೀಕರಿಸುವುದು ಮೊದಲಾದ ವಿಧವಾ ಧರ್ಮಗಳನ್ನು ಆಚರಿಸುತ್ತಿರುವ ವಿಧವಾ ಸ್ತ್ರೀಗೂ – ಗಂಗಾ ನದಿಗೂ ಯಾವುದೇ ವ್ಯತ್ಯಾಸವಿರುವುದಿಲ್ಲ. ಪಾರ್ವತೀ – ಪರಮೇಶ್ವರರ ಸನ್ನಿಧಾನ ಪಾತ್ರಳಾದ ಇವಳು ಪರಮ ಮಂಗಳಳು.

**ಏವಂ ಧರ್ಮಸಮಾಯುಕ್ತ ವಿಧವಾಪಿ ಪತಿವ್ರತಾ ।**

***ನ ಗಂಗಯಾ ತಯಾ ಭೇದೋ ಯಾ ನಾರೀ ಪತಿದೇವತಾ ॥***

**ಉಮಾಶಿವ ಸಮಾ ಸಾಕ್ಷಾತ್ ತಸ್ಮತ್ತಾಂ ಪೂಜಯೇದ್ ಬುಧಃ ॥**

*– ಕಾಶೀ. 4*

- ***ಪ್ರಸ್ತುತ ಸ್ಥಿತಿ : ವಿಧವಾ ವಿವಾಹ :***

ಕೆಲವು ಧರ್ಮಗಳನ್ನು ಪೂರ್ಣವಾಗಿ ಆಚರಿಸಬಹುದಾಗಿದೆ. ಆದರೆ ಸಾಮಾಜಿಕವಾಗಿ ಕೆಲವನ್ನು ಮಾಡಲು ಕಷ್ಟಕರವಾಗಿರುತ್ತದೆ. ಯಾವುದೇ ಧರ್ಮವನ್ನು ಮಾಡುವಾಗಲೂ ಮೂಲಧರ್ಮಕ್ಕೆ ವಿರೋಧಬಾರದಂತೆ ಎಚ್ಚರವಹಿಸುವುದು.

ಉದಾ.: ವಿವಾಹದ ವಯಸ್ಸು. 8ನೇ ವಯಸ್ಸಿನಿಂದ 21ನೇ ವಯಸ್ಸಿಗೆ ಮುಂದೂಡಲಾಗಿದೆ. ಈ ನಿಯಮವನ್ನು ಉಲ್ಲಂಘಿಸಿದರೆ ಕಾನೂನು ಕ್ರಮ ತೆಗೆದುಕೊಳ್ಳಲಾಗುತ್ತದೆ. ಹೀಗೆ ಸಾಮಾಜಿಕ ಧರ್ಮವನ್ನು ಒಪ್ಪಿರುತ್ತೇವೆ. ಇದರಿಂದಾಗಿ ಮೂಲಧರ್ಮಕ್ಕೆ ಚ್ಯುತಿಯೇನು ಬಂದಂತಾಗಲಿಲ್ಲ. ಆದರೆ ಸಮಾಜ ಒಪ್ಪಿದೆಯೆಂದು ವಿಧವೆಯರ ಪುನರ್ವಿವಾಹ ಮೂಲಧರ್ಮ ವಿರುದ್ಧವಾದ್ದರಿಂದ ಒಪ್ಪಲಾಗುವುದಿಲ್ಲ.

ಕೆಲವು ಧರ್ಮಗಳು ಮೂಲಧರ್ಮ ವಿರುದ್ಧವಾಗಿದ್ದರೂ ಸಾಮಾಜಿಕ ಧರ್ಮದಡಿಯಲ್ಲಿ ಸರಿಪಡಿಸಿಕೊಳ್ಳಬೇಕಾತ್ತದೆ. ಇಂತಹವುಗಳನ್ನು

ಆಪತ್ಕಾಲೀನ ಧರ್ಮವೆಂದು, ತಿಳಿದು ಮೂಲಧರ್ಮಕ್ಕೆ ಚ್ಯುತಿಬಾರದಂತೆ ಪ್ರಾಮಾಣಿಕವಾಗಿ ಆಚರಿಸಬೇಕಾಗುತ್ತದೆ.

ವಸ್ತುತಃ ಈಗಿನ ಪರಿಸ್ಥಿತಿಯಲ್ಲಿ ಶಾಸ್ತ್ರದಲ್ಲಿ ಹೇಳಿರುವ ವಿಧವಾ ಧರ್ಮಪಾಲನೆ ಕಷ್ಟ ಸಾಧ್ಯವೇ ಸರಿ. ವಯಸ್ಸಾದ ಮೇಲೆ ಪತಿಯು ಮೃತನಾದರೆ ವಿಧವಾ ಧರ್ಮ ಪಾಲನೆ ರೂಢಿಸಿಕೊಳ್ಳಬಹುದು. ಚಿಕ್ಕ ವಯಸ್ಸಿನಲ್ಲಿಯೆ ಪತಿಯು ಕಳೆದುಕೊಂಡವರಿಗೆ ಶಾಸ್ತ್ರದಲ್ಲಿ ಹೇಳಿದ ಈ ನಿಯಮಗಳು ಕಷ್ಟಕರವೆಂದು ತಿಳಿಯಬಹುದು. ರಕ್ಷಿಸಲು ಹಿಂದೆ – ಮುಂದೆ ಯಾರು ಇಲ್ಲದಿದ್ದರಂತು ಅವಳ ಜೀವನ ದುರ್ಭರವೇ ಸರಿ. ಬದುಕಲು ಎಲ್ಲಾದರೂ ಕೆಲಸ ಹುಡುಕಬೇಕಾಗುತ್ತದೆ. ಇವಳು ವಿಧವೆಯೆಂದು ಗೊತ್ತಾದರೆ ಜನರ ಕುದೃಷ್ಟಿಯಿಂದ ತನ್ನನ್ನು ರಕ್ಷಿಸಿಕೊಳ್ಳುವುದು ಕಷ್ಟ ಸಾಧ್ಯವೇ ಸರಿ. ಅದಕ್ಕಾಗಿ ತಾಳಿಯಂತಿರುವ ಮತ್ತೊಂದು ಸರವನ್ನು ಧರಿಸಬೇಕಾಗುತ್ತದೆ. ಇದು ಯಾವುದೇ ಉತ್ತೇಜಕ – ವಸ್ತ್ರ – ಆಭರಣ – ಕುಪ್ಪಸ ಧರಿಸಲೇಬಾರದು ಎಂಬ ನಿಯಮಗಳಿಗೆ ವಿರುದ್ಧವಾಗುತ್ತದೆ. ಇಂತಹ ಆಪತ್ಕಾಲ ಧರ್ಮಗಳಲ್ಲಿ ಮೂಲಧರ್ಮಗಳಿಗೆ ಆದಷ್ಟು ಚ್ಯುತಿಬಾರದಂತೆ ಒಂದು ಹೊತ್ತು ಊಟ ಭೂ ಶಯನ – ದಾನಧರ್ಮಗಳು ಭಗವದ್ ಧ್ಯಾನ ಮೊದಲಾದವುಗಳನ್ನು ಪ್ರಾಮಾಣಿಕವಾಗಿ ಆಚರಿಸುತ್ತಾ, ತನ್ನನ್ನು ರಕ್ಷಿಸಿಕೊಳ್ಳಲು ಎಷ್ಟು ಬೇಕೋ ಅಷ್ಟನ್ನು ಮಾತ್ರ ಮಾಡುತ್ತಾ, ಅಲಂಕಾರಾದಿಗಳಿಂದ ಇತರರಿಗೆ ತನ್ನ ಬಗ್ಗೆ ಕುತೂಹಲ ಮೂಡದಂತೆ ಎಚ್ಚರಿಕೆ ವಹಿಸುತ್ತಾ ಬೂದಿಮುಚ್ಚಿದ ಕೆಂಡಂದತೆ ನಿರಂತರ ಬ್ರಹ್ಮಚರ್ಯಗಳಿಂದ ಭಗವಂತನನ್ನು ಮೆಚ್ಚಿಸಬೇಕು.

- ***ದೇವತಾ – ಬ್ರಾಹ್ಮಣ – ಗುರುಗಳ ಸೇವೆ :***

ದೇವತಾ – ಬ್ರಾಹ್ಮಣ – ಗುರು ಜನರನ್ನು ಗೌರವಿಸುವುದು – ಪೂಜಿಸುವುದು. ಪವಿತ್ರವಾಗಿರುವಿಕೆ – ಸರಳತೆ – ಬ್ರಹ್ಮಚರ್ಯ ಹಾಗೂ ಅಹಿಂಸೆ ಶಾರೀರಿಕ ತಪಸ್ಸನ್ನು, ತಪಸ್ಸೆನಿಸದಿರೆ, ಯಾರಿಗೂ ಉದ್ವೇಗ–ವಾಗುವಂತಹ ಮಾತನಾಡದಿರುವುದು – ಹಿತವಾಕ್ಯಗಳು – ಸತ್ಯವಾಗಿ ಮಾತನಾಡುವುದು – ತಾನು ಅರಿತಿರುವ ಭಗವಂತನ – ಭಗವದ್ಭಕ್ತರ ಕಥೆಗಳನ್ನು ಮಕ್ಕಳಿಗೆ – ಮೊಮ್ಮಕ್ಕಳಿಗೆ ಹೇಳುವುದು – ಇವೆಲ್ಲವೂ ವಾಙ್ಮಯ ತಪಸ್ಸೆನಿಸಿದೆ. ಪ್ರಸನ್ನತೆ, ಸೌಮ್ಯತೆ, ಭಗವಂತನ ನಿರಂತರ ಧ್ಯಾನ – ಮನೋ ನಿಗ್ರಹ ಮನೋನೈರ್ಮಲ್ಯ ಇವು ಮಾನಸಿಕ ತಪಸ್ಸೆನಿಸುತ್ತವೆ.

ಬ್ರಹ್ಮಚರ್ಯ ಪಾಲನೆ ಮಾಡುತ್ತಿರುವ ವಿಧವಾ ಸ್ತ್ರೀಯು ಪುತ್ರರಿಲ್ಲದಿದ್ದರೂ ಸ್ವರ್ಗಕ್ಕೆ ಹೋಗವಳು. (ಮನು 5–160)

ಯಾವ ಸ್ತ್ರೀಯು ಈ ರೀತಿ ಶಾಸ್ತ್ರೀಯ ಧರ್ಮಗಳನ್ನು ಪಾಲನೆ ಮಾಡದೆ ಕ್ಷಣಿಕ ವಿಷಯ ಸುಖದ ಲೋಭದಿಂದ ಇಂದ್ರಿಯಗಳ ದಾಸಿಯಾಗುವಳೋ ಇಂತಹವಳ ಭವಿಷ್ಯ ಭಯಂಕರ ಸ್ವರೂಪದ್ದಾಗಿರುತ್ತದೆ. ಮಹಾದುಃಖಕ್ಕೆ ಭಾಗಿಯಾಗುವಳು. ಇಂತಹವಳ ಜೀವನ ಇಹಲೋಕದಲ್ಲಿ ದುಃಖಮಯ–ವಾಗುವುದು ಮಾತ್ರವಲ್ಲ. ಪರಲೋಕದಲ್ಲಿ ಅನೇಕ ನರಕಗಳ ದುಃಖ ಅನುಭವಿಸಬೇಕಾಗುತ್ತದೆ.

ಸ್ತ್ರೀಯರು ಹಿಂದಿನ ಜನ್ಮಗಳಲ್ಲಿ ಮಾಡಿರುವ ಅಸಭ್ಯವರ್ತನೆ ಅಸದಾಚಾರಾದಿಗಳಿಂದ ಪುನಃ ಪುನಃ ವಿಧವೆಯಾಗುತ್ತಿರಬೇಕಾಗುತ್ತದೆ.

**ತೇನ ಕರ್ಮವಿಪಾಕೇನ ಸಾ ನಾರೀ ವಿಧವಾ ಭವೇತ್ ॥** – *ಸ್ಕಾಂದ*

ವಿಧವಾ ಜೀವನವೆಂದರೆ ಅದೊಂದು ದುಃಖಮಯ ಜೀವನವೆಂದು ಭಾವಿಸಬಾರದು. ಅದೊಂದು ಭೋಗಜೀವನ ಸಮಾಪ್ತವಾಗಿ ಅತ್ಯಂತಿಕ ಸುಖ ಹಾಗೂ ಪರಮಾನಂದ ಪ್ರಾಪ್ತಿಗಾಗಿ ಹೊರಡುತ್ತಿರುವ ಆಧ್ಯಾತ್ಮಿಕ ಜೀವನದ ಪ್ರಾರಂಭವೆಂದು ತಿಳಿಯಬೇಕು.

ಮನುಷ್ಯ ಜೀವನದ ಲಕ್ಷ್ಯ ಭಗವತ್ಪ್ರಾಪ್ತಿ. ವಿಷಯ ಸೇವನೆಯಿಂದ ವಿಷಯ ವಸ್ತುಗಳಲ್ಲಿ ಆಸಕ್ತಿ ಅಭಿವದ್ಧಿಯಾಗುತ್ತದೆ. ಹೊರತು ಕಡಮೆಯಾಗುವುದಿಲ್ಲ. ಇದು ಯಯಾತಿ ಮಹಾರಾಜನು ಅನುಭವಿಸಿ ಹೇಳಿರುವ ಮಾತು.

**ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।**

ಈ ಆಧ್ಯಾತ್ಮಿಕ ವಿಚಾರದಲ್ಲಿ ವಿಧವಾ ಸ್ತ್ರೀಯು ಭಾಗ್ಯವಂತಳೇ. ವಿಧವಾ ಧರ್ಮ ಪಾಲನೆಯಿಂದ ವಿಷಯ ವೈರಾಗ್ಯ – ಭೋಗ ಸಾಧನಗಳ ತ್ಯಾಗದಿಂದಾಗಿ ಸನ್ಯಾಸಿಯಂತೆ ಸಮಾಜದಲ್ಲಿ ಗೌರವಿತಳಾಗುವಳು.

ವಿಧವಾ ಸ್ತ್ರೀಯರು ತ್ಯಾಗಮಯ ಜೀವನವನ್ನು ರೂಢಿಸುವಲ್ಲಿ ಕುಂತಿಯ ಆದರ್ಶ ಅವರ ಮುಂದೆ ಇರಬೇಕು. ವಿಧವೆಯರ ಕರ್ತವ್ಯ ಅತ್ಯಂತ ಕಠಿಣಕರವಾಗಿದೆ ನಿಜ. ಆದರೆ ಇದರಿಂದ ಮುಂದೆ ಬಹಳ ಲಾಭವಿದೆ. ಭಗವಂತನು ಪ್ರಸನ್ನನಾಗುವನು.

ಮಾರಿಷಾ ಎಂಬ ರಾಜಕುಮಾರಿಯು ತನ್ನ ಚಿಕ್ಕ ವಯಸ್ಸಿನಲ್ಲಿಯೇ ಪತಿಯಿಂದ ವಿಯುಕ್ತಳಾದಳು. ಆದರೆ ಯಾವುದೇ ವಿಷಯ ಭೋಗಾದಿಗಳ ಕಡೆ ಗಮನ ಕೊಡದೆ ಮುಂದೆ ನನಗೆ ಹೀಗಾಗಬಾರದೆಂದು ನಿಶ್ಚಯಿಸಿ ಯಾವ ಋಷಿ ಮುನಿಗಳೂ ಮಾಡದ ತಪಸ್ಸನ್ನು – ಭಗವಂತನ ಕುರಿತು ಮಾಡಿದಳು. ಚಿಕ್ಕವಳಾದರೂ ವಿಧವೆಯ ಧರ್ಮವನ್ನು ಚಾಚೂ ತಪ್ಪದೆ ಮಾಡಿದಳು. ಭಗವಂತನು ಪ್ರಸನ್ನನಾಗಿ ಅವಳಿಗೆ ದರ್ಶನ ನೀಡಿ ವರವನ್ನು ನೀಡಿದ. ಮುಂದಿನ ಜನ್ಮದಲ್ಲಿ ಹತ್ತು ಜನ ಪ್ರಚೇತಸರು ಅವಳನ್ನು ಪಾಣಿಗ್ರಹಣ ಮಾಡಿದರು. ದೀರ್ಘಾಯುಷ್ಮಂತರು, ಭಗವದ್ಭಕ್ತರು – ಮಹಾಜ್ಞಾನಿಗಳಾದ ಅವರೊಂದಿಗೆ ಸಕಲ ಸುಖಭೋಗಗಳನ್ನು ಪಡೆದಳು.

ದ್ರೋಣಭಾರ್ಯೆಯಾದ ಕೃಪಿಯು ತನ್ನ ಪತಿ ಮೃತನಾದ ಮೇಲೆ ನಿರಂತರ ವಿಧವಾ ಧರ್ಮಗಳನ್ನಾಚರಿಸಿ ಪತಿಲೋಕವನ್ನೇ ಸೇರಿದಳು.

ವಿಧವಾ ಸ್ತ್ರೀಯರು ಯಾವುದೇ ದೇವತೆಗಳನ್ನು ಪ್ರಧಾನವಾಗಿ ಪೂಜಿಸದೆ ಪತಿಯಂತರ್ಗತನಾದ ಭಗವಂತನ ಪೂಜೆಯನ್ನೇ ಮುಖ್ಯ ಗುರಿಯನ್ನಾಗಿಸಿಕೊಳ್ಳಬೇಕು.

* * * * * *



# 19. ಸ್ವಪ್ನ ಫಲ

- ***ಸ್ವಪ್ನಗಳ ಫಲ :***

ಜಾಗ್ರತ್ – ಸುಷುಪ್ತ್ಯವಸ್ಥೆಗಳ ಸಂಧಿಯಲ್ಲಿ ಭಗವಂತನು ತನ್ನ ಅಚಿಂತ್ಯದ್ಭುತ ಶಕ್ತಿಯಿಂದ ನಾನಾ ವಿಧ ಸ್ವಪ್ನಗಳನ್ನು ತೋರಿಸುತ್ತಾನೆ.

ರಾತ್ರಿಯಲ್ಲಿ ಭೋಜನಾದಿಗಳ ನಂತರ ಯಾವುದೇ ಕಲ್ಪನೆಗಳಿಲ್ಲದೆ ಹರಿ ಗುರು ಸ್ಮರಣೆಗಳ ಪೂರ್ವಕವಾಗಿ ಮಲಗಿದಾಗ ಬೀಳುವ ಸ್ವಪ್ನಗಳಿಗೆ ಮಾತ್ರ ಫಲವಿರುತ್ತದೆ. ರೋಗಾದಿಗಳಿರುವಾಗ, ಧಾತುನಷ್ಟತ್ವ ವಿಕಾರ–ವಿರುವಾಗ, ಯಾವುದಾದರೂ ಆಲೋಚನೆ ಮಾಡುತ್ತ ಮಲಗಿದಾಗಲೂ, ಹಾಡುಹಗಲಲ್ಲಿ ಮಲಗಿದಾಗ ಬೀಳುವ ಸ್ವಪ್ನಗಳು ಯಾವುದೇ ಫಲವನ್ನು ನೀಡಲಾರವು.

- ***ಸ್ವಪ್ನ ಫಲದ ಅವಧಿ :***

ಸ್ವಪ್ನವು ಮೊದಲನೆಯ ಜಾವ ಬಿದ್ದರೆ 6 ತಿಂಗಳಲ್ಲಿ ಶುಭಾಶುಭ ಫಲವು. ಎರಡನೇ ಜಾವದಲ್ಲಿ ನಾಲ್ಕು ತಿಂಗಳಲ್ಲಿಯೂ, ಮೂರನೇ ಜಾವದಲ್ಲಿ ಬಿದ್ದ ಸ್ವಪ್ನವು ಮೂರನೇ ತಿಂಗಳಲ್ಲಿಯೂ, ನಾಲ್ಕರಲ್ಲಿ ಬಿದ್ದ ಸ್ವಪ್ನವೂ ಎರಡೇ ತಿಂಗಳಲ್ಲಿಯೂ, ಸೂರ್ಯೋದಯ ಕಾಲದಲ್ಲಿ ಬೀಳುವ ಸ್ವಪ್ನವು ಒಂದೆರಡು ವಾರದಲ್ಲಿಯೇ ಫಲ ನೀಡುತ್ತದೆ.

ಶುಭಸ್ವಪ್ನ ಬಿದ್ದಾಗ ಬೆಳಿಗ್ಗೆ ಎದ್ದು ದೇವರಿಗೆ – ಗುರು ಹಿರಿಯರಿಗೆ

ನಮಸ್ಕರಿಸಿ, ದೇವರ ಮುಂದೆ ದೀಪ ಬೆಳಗಿ ನಿತ್ಯಕರ್ಮವನ್ನು ಪೂರೈಸಬೇಕು. ಇದರಿಂದಾಗಿ ಸ್ವಪ್ನವು ಫಲ ನೀಡುತ್ತದೆ.

**ಅರುಣೋದಯವೇಳಾಯಾಂ ದಶಾಹೇನ ಫಲಂ ಭವೇತ್ ।**

ಪ್ರಥಮಾ ಯಾಮದಲ್ಲಿ ಒಂಭತ್ತರಿಂದ 12ರವರೆಗೆ ಬಿದ್ದ ಸ್ವಪ್ನವು ಒಂದು ವರ್ಷದಲ್ಲಿ ಕನಿಷ್ಠ ಫಲ ನೀಡುತ್ತದೆ.

**ಸ್ವಪ್ನಸ್ತು ಪ್ರಥಮೇ ಯಾಮೇ ಸಂವತ್ಸರ ವಿಪಾಕಿನಃ ।**

ದ್ವಿತೀಯ ಯಾಮದಲ್ಲಿ ಬಿದ್ದ ಕನಸು 6 ತಿಂಗಳಲ್ಲಿಯೂ, ಮೂರನೇ ಯಾಮದ ಕನಸು 3 ತಿಂಗಳಲ್ಲಿಯೂ, ಎರಡನೆ ಯಾಮದಲ್ಲಿ ಬಿದ್ದ ಕನಸು ಎರಡು ತಿಂಗಳಲ್ಲಿಯೂ ಫಲ ನೀಡುತ್ತದೆ.

ಕೆಟ್ಟ ಕನಸು ಎಂದು ನಿಶ್ಚಯವಾದಾಗ ಗಜೇಂದ್ರಮೋಕ್ಷ ಪಾರಾಯಣದಿಂದ ಪರಿಹಾರವಾಗುತ್ತದೆ.

**ಗಜೇಂದ್ರ ಮೋಕ್ಷ ಶ್ರವಣಂ ಜ್ಞೇಯಂ ದುಃಸ್ವಪ್ನನಾಶನಮ್ ।**

ಬ್ರಾಹ್ಮಣರ ಪೂಜೆ, ಎಳ್ಳಿನಿಂದ ಹೋಮ, ಸ್ನಾನ, ದೀಪದಾನ, ವಾಸುದೇವಾರ್ಚನ, ಹರಿನಾಮಸ್ಮರಣೆಗಳಿಂದ ದುಃಸ್ವಪ್ನವು ಶಾಂತವಾಗುತ್ತದೆ.

**ಕಲ್ಕಸ್ನಾನಂ ತಿಲೈರ್ಹೋರ್ಮೋ ಬ್ರಾಹ್ಮಣಾನಾಂ ಚ ಪೂಜನಮ್ ।**
**ಸ್ತುತಿಶ್ಚ ವಾಸುದೇವಸ್ಯ ತಥಾ ತಸ್ಮೈವ ಪೂಜನಮ್ ॥**

- ***ಸ್ತ್ರೀಯರ ಸ್ವಪ್ನಗಳು :***

ಪತಿಯು ಸುಖವಾಗಿರಲಿ ಎಂದು ಅನೇಕ ವ್ರತಾದಿಗಳನ್ನು ಮಾಡುತ್ತಿರುವ ಪತಿವ್ರತೆಗೆ ಅನೇಕ ಸ್ವಪ್ನ ಸೂಚನೆ ದೊರೆಯುತ್ತದೆ. ಉದಾ : ಪತಿಯು ಭಯಂಕರ ರೋಗದಿಂದ ಬಳಲುತ್ತಿದ್ದರೆ ಪತಿವ್ರತೆಯು ಮಾಡಿದ ವ್ರತದಿಂದ ಭಗವಂತನು ಸಂತುಷ್ಟನಾಗಿದ್ದರೆ ಅರುಣೋದಯ ಕಾಲದಲ್ಲಿ ತನ್ನ ಪತಿಯು ಜೇನಿನಿಂದ ಸುತ್ತುವರೆಯಲ್ಪಟ್ಟಿದ್ದು ಅವುಗಳಿಂದ ಕಚ್ಚಲ್ಪಡುತ್ತಿರುವ ಸ್ವಪ್ನವಾಗಲೀ, ಪತಿಯು ತನ್ನ ಮಲದಿಂದ ತನ್ನ ಶರೀರವನ್ನು ಲೇಪಿಸಿಕೊಂಡಂತೆಯೂ, ನಿಗಡದಿಂದ ಬಂಧಿಸಲ್ಪಟ್ಟಂತೆಯೂ ಕನಸನ್ನು ಕಾಣುವಳು. ಇದರಿಂದ ಪತಿಯು ರೋಗ ವಿಮುಕ್ತನಾಗುವನೆಂದು ತಿಳಿಯಬೇಕು.

**ನಿಗಡೈಃ ಬಂಧನಂ ಶಸ್ತಂ ತಥಾ ವಿಷ್ಠಾನುಲೇಪನಮ್ ।**
**ಸ್ವಪ್ನಾನಿ ವೈ ಧರ್ಮವತಾಂ ವರಿಷ್ಠ ।**
**ವ್ಯಾಧೇಃ ವಿಮೋಕ್ಷಂ ಚ ತಥಾಽತುರೋಽಪಿ ॥**

- ***ಶುಭಸ್ವಪ್ನಗಳು :***

* ರಾಜ, ಆನೆ, ಕುದುರೆ, ಸುವರ್ಣ, ಎತ್ತು, ಹಸು, ಇವುಗಳ ದರ್ಶನ ಮಂಗಳವುಂಟಾಗುವ ಸೂಚನೆ.

**ಯಸ್ತು ಪಶ್ಯತಿ ವೈ ಸ್ವಪ್ನೇ ರಾಜಾನಂ ಕುಂಜರಂ ಹಯಮ್ ।**
**ಸುವರ್ಣಂ ವೃಷಭಂ ಗಾಂ ವಾ ಕುಶಲಂ ಫಲಮಶ್ನುತೇ ॥**

* ಎತ್ತು, ಆನೆ, ಹಸು, ಮಹಡಿ, ಪರ್ವತ, ಗಿಡಮರಗಳನ್ನು ಹತ್ತುವುದು, ಮಲದಿಂದ ಲೇಪನ, ಅಳುತ್ತಿರುವ ಗಂಡನ ದರ್ಶನ, ಮೃತನಾದ ಪತಿಯ ದರ್ಶನವು ದೀರ್ಘಾಯುಷ್ಯ ಸೂಚಕವು. ಸ್ವಪ್ನದಲ್ಲಿ ಪರಪುರುಷನನ್ನು ಕೂಡುವುದು ತನ್ನ ಪತಿಯೊಂದಿಗೆ ನಿರಂತರ ಸುಖದ ಸೂಚನೆ.

**ಸ್ವಪ್ನೇಷು ಅಗಮ್ಯಾಗಮನಂ ಧನ್ಯಮ್ ।**

* ಹಾಲನ್ನು ಸುರಿಸುವ ಅತ್ತಿ, ಅಶ್ವತ್ಥ, ಎಕ್ಕ ಮೊದಲಾದ ಗಿಡಗಳ ದರ್ಶನ, ಫಲದಿಂದ ಜೋತಾಡುತ್ತಿರುವ ವೃಕ್ಷ ದರ್ಶನ ಮಾಡುತ್ತಾ ಎಚ್ಚರಿಕೆ ಆಯತೆಂದರೆ ಪತಿಗೆ ಧನಲಾಭವು.

**ಕ್ಷೀರಿಣಂ ಫಲಿನಂ ವೃಕ್ಷಮೇಕಾಕೀ ಯಃ ಪ್ರಯಚ್ಛತಿ ।**
**ತತ್ರಸ್ಥಃ ಸ ವಿಬುಧ್ಯೇತ ಧನಂ ಶೀಘ್ರಮವಾಪ್ನುಯತ್ ॥**

* ಯಾವುದೇ ಬಿಳಿಯಾದ ಪ್ರಾಣಿಯು ತನ್ನ ಬಲಗೈಯನ್ನು ನುಂಗಿದಂತೆ ಸ್ವಪ್ನ ಕಂಡರೆ, ಹತ್ತು ದಿವಸದೊಳಗೆ ಸಾವಿರಾರು ಪಟ್ಟು ಧನಲಾಭವಾಗುತ್ತದೆ.

**ಯಸ್ಯ ಶ್ವೇತೇ ಸರ್ವೇಷಾಂ ಗ್ರಸ್ಯತೇ ದಕ್ಷಿಣಃ ಕರಃ ।**
**ಸಹಸ್ರಲಾಭಸ್ತಸ್ಯ ಸ್ಯಾದಪೂರ್ಣೇ ದಶಮೇ ದಿನೇ ॥**

* ನಾಗರಹಾವು ತನ್ನ ಪತಿಯನ್ನು ಕಡಿದರೆ ದ್ರವ್ಯಲಾಭ.
* ಮಧ್ವರು, ಟೀಕಾರಾಯರು, ರಾಘವೇಂದ್ರರು, ವಾದಿರಾಜರು ಮೊದಲಾದ ಯತಿವರ್ಯರು ಸ್ವಪ್ನ ಕಾಣಿಸಿದರೆ ಶುಭದರ್ಶನವು.

* ನೀರಿನಿಂದ ತುಂಬಿ ಹೋಗಿರುವ ನದ್ಯಾದಿಗಳಲ್ಲಿ ತೇಲಿ ಹೋದಂತೆ ಸ್ವಪ್ನ ಬಿದ್ದರೆ ಸುಖಪರಂಪರೆಯ ಆಗಮನ ಸೂಚಕವು.

* ಸ್ವಪ್ನದಲ್ಲಿ ಯಾವ ಪತಿವ್ರತೆಯು ಸೂರ್ಯ-ಚಂದ್ರ ಮಂಡಲಗಳನ್ನು ನೋಡುವಳೋ ಅವಳ ಹಾಗೂ ಪತಿಯೂ ರೋಗಾದಿಗಳಿಂದ ಮುಕ್ತನಾಗುವುದರ ಸೂಚನೆ.

**ಆದಿತ್ಯಮಂಡಲಂ ಸ್ವಪ್ನೇ ಚಂದ್ರಂ ವಾ ಯದಿ ಪಶ್ಯತಿ ।**
**ವ್ಯಾಧಿತೋ ಮುಚ್ಯತೇ ನಾರೀ ಅರೋಗೀ ಶ್ರೇಯಸಮಾಪ್ನುಯಾತ್॥**

* ಬಿಳಿಯಾದ ವಸ್ತ್ರಾಲಂಕೃತಳಾದ ಸ್ತ್ರೀಯ ದರ್ಶನ, ಶುಕ್ಲಗಂಧ ಲೇಪಿತ ಸ್ತ್ರೀ ದರ್ಶನವಾಗಲೀ ಸಂಪತ್ತಿನ ಆಗಮನದ ಸೂಚಕ.

* ಮೊಸರನ್ನು ಯಾರಾದರೂ ನೀಡಿದಂತೆಯೂ, ತುಪ್ಪ ನೀಡಿದಂತೆಯೂ ಸ್ವಪ್ನ ಕಂಡರೆ ಹಾಗೂ ಮೊಸರನ್ನು ತಿಂದಂತೆಯೂ, ಸ್ವಪ್ನ ಬಿದ್ದರೆ ತನ್ನ ಕಾರ್ಯದಲ್ಲಿ ಯಶಸ್ಸನ್ನು ಹೊಂದುವನು.

* ಸ್ವಪ್ನದಲ್ಲಿ ತುಪ್ಪವನ್ನು ತಿಂದರೆ ಕ್ಲೇಶ, ಯಶಸ್ಸು ಬರುವುದರ ಸೂಚನೆ.

**ದಧಿಲಾಭೇ ಭವೇದರ್ಥಃ ಘೃತಲಾಭೇ ಭವೇದ್ ಯಶಃ ।**
**ಘೃತಾಶನೇ ಧ್ರುವಃ ಕ್ಲೇಶಃ ಯಶಸ್ಸು ದಧಿಭಕ್ಷಣೇ ॥**

* ಸಂಕೋಲೆಗಳಿಂದ ಬಂಧಿಸಲ್ಪಟ್ಟಂತೆಯೂ, ಬಾಹುಲತೆಯಿಂದ ಆಲಿಂಗಿತನಾದಂತೆಯೂ ಸ್ವಪ್ನ ಕಂಡರೆ ಪುತ್ರ ಹುಟ್ಟುವ ಸೂಚನೆಯು.

**ನಿಗಡೈಃ ಬಧ್ಯತೇ ಯಸ್ತು ಬಾಹುಪಾಶೇನ ವಾ ಪುನಃ ।**
**ಪುತ್ರೋವಾ ಜಾಯತೇ ತಸ್ಯ ಧನಂ ಶೀಘ್ರಮವಾಪ್ನುಯಾತ್ ॥**

* ಹೆಂಡವನ್ನಾಗಲೀ, ರಕ್ತವನ್ನಾಗಲೀ, ಬ್ರಾಹ್ಮಣನು ಕುಡಿದಂತೆ ಸ್ವಪ್ನ ಕಂಡರೆ ವಿದ್ಯೆಯನ್ನು ಹೊಂದುವ ಸೂಚನೆ. ಬ್ರಾಹ್ಮಣೇತರರಿಗೆ ಧನಲಾಭ ಸೂಚನೆ.

* ಸಾಮಾನ್ಯವಾಗಿ ಬಿಳಿಯಾಗಿರುವ ಪುಷ್ಪ, ಹಾಲು, ಮೊಸರು, ಬಿಳಿಸೀರೆ, ಬಿಳಿಮೋಡ, ನೀರು ಮೊದಲಾದ ವಸ್ತುಗಳು ಸ್ವಪ್ನದಲ್ಲಿ ನೋಡಿದರೆ ಶುಭಫಲವೇ ಲಭಿಸುತ್ತದೆ. ಆದರೆ ಬಿಳಿಯಾದ ಹತ್ತಿ, ಬೂದಿ, ಅನ್ನ, ಮಜ್ಜಿಗೆ ಇವುಗಳ ದರ್ಶನ ಅಶುಭ ಫಲ ನೀಡುತ್ತದೆ.

**ನಿಗಡೈಃ ಬಂಧನಂ ಶಸ್ತಂ ತಥಾ ವಿಷ್ಠಾನುಲೇಪನಮ್ ।**
**ಸ್ವಪ್ನಾನಿ ವೈ ಧರ್ಮವತಾಂ ವರಿಷ್ಠ ।**
**ವ್ಯಾಧೇಃ ವಿಮೋಕ್ಷಂ ಚ ತಥಾಽತುರೋಽಪಿ ॥**

- ***ಶುಭಸ್ವಪ್ನಗಳು :***

* ರಾಜ, ಆನೆ, ಕುದುರೆ, ಸುವರ್ಣ, ಎತ್ತು, ಹಸು, ಇವುಗಳ ದರ್ಶನ ಮಂಗಳವುಂಟಾಗುವ ಸೂಚನೆ.

**ಯಸ್ತು ಪಶ್ಯತಿ ವೈ ಸ್ವಪ್ನೇ ರಾಜಾನಂ ಕುಂಜರಂ ಹಯಮ್ ।**
**ಸುವರ್ಣಂ ವೃಷಭಂ ಗಾಂ ವಾ ಕುಶಲಂ ಫಲಮಶ್ನುತೇ ॥**

* ಎತ್ತು, ಆನೆ, ಹಸು, ಮಹಡಿ, ಪರ್ವತ, ಗಿಡಮರಗಳನ್ನು ಹತ್ತುವುದು, ಮಲದಿಂದ ಲೇಪನ, ಅಳುತ್ತಿರುವ ಗಂಡನ ದರ್ಶನ, ಮೃತನಾದ ಪತಿಯ ದರ್ಶನವು ದೀರ್ಘಾಯುಷ್ಯ ಸೂಚಕವು. ಸ್ವಪ್ನದಲ್ಲಿ ಪರಪುರುಷನನ್ನು ಕೂಡುವುದು ತನ್ನ ಪತಿಯೊಂದಿಗೆ ನಿರಂತರ ಸುಖದ ಸೂಚನೆ.

**ಸ್ವಪ್ನೇಷು ಅಗಮ್ಯಾಗಮನಂ ಧನ್ಯಮ್ ।**

* ಹಾಲನ್ನು ಸುರಿಸುವ ಅತ್ತಿ, ಅಶ್ವತ್ಥ, ಎಕ್ಕ ಮೊದಲಾದ ಗಿಡಗಳ ದರ್ಶನ, ಫಲದಿಂದ ಜೋತಾಡುತ್ತಿರುವ ವೃಕ್ಷ ದರ್ಶನ ಮಾಡುತ್ತಾ ಎಚ್ಚರಿಕೆ ಆಯತೆಂದರೆ ಪತಿಗೆ ಧನಲಾಭವು.

**ಕ್ಷೀರಿಣಂ ಫಲಿನಂ ವೃಕ್ಷಮೇಕಾಕೀ ಯಃ ಪ್ರಯಚ್ಛತಿ ।**
**ತತ್ರಸ್ಥಃ ಸ ವಿಬುಧ್ಯೇತ ಧನಂ ಶೀಘ್ರಮವಾಪ್ನುಯತ್ ॥**

* ಯಾವುದೇ ಬಿಳಿಯಾದ ಪ್ರಾಣಿಯು ತನ್ನ ಬಲಗೈಯನ್ನು ನುಂಗಿದಂತೆ ಸ್ವಪ್ನ ಕಂಡರೆ, ಹತ್ತು ದಿವಸದೊಳಗೆ ಸಾವಿರಾರು ಪಟ್ಟು ಧನಲಾಭವಾಗುತ್ತದೆ.

**ಯಸ್ಯ ಶ್ವೇತೇ ಸರ್ವೇಷಾಂ ಗ್ರಸ್ಯತೇ ದಕ್ಷಿಣಃ ಕರಃ ।**
**ಸಹಸ್ರಲಾಭಸ್ತಸ್ಯ ಸ್ಯಾದಪೂರ್ಣೇ ದಶಮೇ ದಿನೇ ॥**

* ನಾಗರಹಾವು ತನ್ನ ಪತಿಯನ್ನು ಕಡಿದರೆ ದ್ರವ್ಯಲಾಭ.

* ಮಧ್ವರು, ಟೀಕಾರಾಯರು, ರಾಘವೇಂದ್ರರು, ವಾದಿರಾಜರು ಮೊದಲಾದ ಯತಿವರ್ಯರು ಸ್ವಪ್ನ ಕಾಣಿಸಿದರೆ ಶುಭದರ್ಶನವು.

* ನೀರಿನಿಂದ ತುಂಬಿ ಹೋಗಿರುವ ನದ್ಯಾದಿಗಳಲ್ಲಿ ತೇಲಿ ಹೋದಂತೆ ಸ್ವಪ್ನ ಬಿದ್ದರೆ ಸುಖಪರಂಪರೆಯ ಆಗಮನ ಸೂಚಕವು.

* ಸ್ವಪ್ನದಲ್ಲಿ ಯಾವ ಪತಿವ್ರತೆಯು ಸೂರ್ಯ-ಚಂದ್ರ ಮಂಡಲಗಳನ್ನು ನೋಡುವಳೋ ಅವಳ ಹಾಗೂ ಪತಿಯೂ ರೋಗಾದಿಗಳಿಂದ ಮುಕ್ತನಾಗುವುದರ ಸೂಚನೆ.

**ಆದಿತ್ಯಮಂಡಲಂ ಸ್ವಪ್ನೇ ಚಂದ್ರಂ ವಾ ಯದಿ ಪಶ್ಯತಿ ।**
**ವ್ಯಾಧಿತೋ ಮುಚ್ಯತೇ ನಾರೀ ಅರೋಗೀ ಶ್ರೇಯಸಮಾಪ್ನುಯಾತ್॥**

* ಬಿಳಿಯಾದ ವಸ್ತ್ರಾಲಂಕೃತಳಾದ ಸ್ತ್ರೀಯ ದರ್ಶನ, ಶುಕ್ಲಗಂಧ ಲೇಪಿತ ಸ್ತ್ರೀ ದರ್ಶನವಾಗಲೀ ಸಂಪತ್ತಿನ ಆಗಮನದ ಸೂಚಕ.

* ಮೊಸರನ್ನು ಯಾರಾದರೂ ನೀಡಿದಂತೆಯೂ, ತುಪ್ಪ ನೀಡಿದಂತೆಯೂ ಸ್ವಪ್ನ ಕಂಡರೆ ಹಾಗೂ ಮೊಸರನ್ನು ತಿಂದಂತೆಯೂ, ಸ್ವಪ್ನ ಬಿದ್ದರೆ ತನ್ನ ಕಾರ್ಯದಲ್ಲಿ ಯಶಸ್ಸನ್ನು ಹೊಂದುವನು.

* ಸ್ವಪ್ನದಲ್ಲಿ ತುಪ್ಪವನ್ನು ತಿಂದರೆ ಕ್ಲೇಶ, ಯಶಸ್ಸು ಬರುವುದರ ಸೂಚನೆ.

**ದಧಿಲಾಭೇ ಭವೇದರ್ಥಃ ಘೃತಲಾಭೇ ಭವೇದ್ ಯಶಃ ।**
**ಘೃತಾಶನೇ ಧ್ರುವಃ ಕ್ಲೇಶಃ ಯಶಸ್ಸು ದಧಿಭಕ್ಷಣೇ ॥**

* ಸಂಕೋಲೆಗಳಿಂದ ಬಂಧಿಸಲ್ಪಟ್ಟಂತೆಯೂ, ಬಾಹುಲತೆಯಿಂದ ಆಲಿಂಗಿತನಾದಂತೆಯೂ ಸ್ವಪ್ನ ಕಂಡರೆ ಪುತ್ರ ಹುಟ್ಟುವ ಸೂಚನೆಯು.

**ನಿಗಡೈಃ ಬಧ್ಯತೇ ಯಸ್ತು ಬಾಹುಪಾಶೇನ ವಾ ಪುನಃ ।**
**ಪುತ್ರೋವಾ ಜಾಯತೇ ತಸ್ಯ ಧನಂ ಶೀಘ್ರಮವಾಪ್ನುಯಾತ್ ॥**

* ಹೆಂಡವನ್ನಾಗಲೀ, ರಕ್ತವನ್ನಾಗಲೀ, ಬ್ರಾಹ್ಮಣನು ಕುಡಿದಂತೆ ಸ್ವಪ್ನ ಕಂಡರೆ ವಿದ್ಯೆಯನ್ನು ಹೊಂದುವ ಸೂಚನೆ. ಬ್ರಾಹ್ಮಣೇತರರಿಗೆ ಧನಲಾಭ ಸೂಚನೆ.

* ಸಾಮಾನ್ಯವಾಗಿ ಬಿಳಿಯಾಗಿರುವ ಪುಷ್ಪ, ಹಾಲು, ಮೊಸರು, ಬಿಳಿಸೀರೆ, ಬಿಳಿಮೋಡ, ನೀರು ಮೊದಲಾದ ವಸ್ತುಗಳು ಸ್ವಪ್ನದಲ್ಲಿ ನೋಡಿದರೆ ಶುಭಫಲವೇ ಲಭಿಸುತ್ತದೆ. ಆದರೆ ಬಿಳಿಯಾದ ಹತ್ತಿ, ಬೂದಿ, ಅನ್ನ, ಮಜ್ಜಿಗೆ ಇವುಗಳ ದರ್ಶನ ಅಶುಭ ಫಲ ನೀಡುತ್ತದೆ.

**ಸರ್ವಾಣಿ ಶುಕ್ಲಾನ್ಯಪಿ ಶೋಭನಾನಿ ।**
**ಕಾರ್ಪಾಸ ಭಸ್ಮೌದನ ತಕ್ರ ವರ್ಜ್ಯಮ್ ॥**

* ಕಪ್ಪಾಗಿರುವ ವಸ್ತುಗಳಾದ ಹತ್ತಿ ಬೀಜ, ಕಪ್ಪುಮನುಷ್ಯ, ಕಾಡಿಗೆ, ಸುಟ್ಟ ಕಟ್ಟಿಗೆ, ಕರೀಬಟ್ಟೆ, ಮೊದಲಾದ ವಸ್ತುಗಳ ದರ್ಶನ ಮುಂದಾಗುವ ಅನರ್ಥ ಸೂಚಿಸುತ್ತದೆ. ಕಪ್ಪಾಗಿರುವ ವಸ್ತುಗಳಲ್ಲಿ ಕಪ್ಪಾದ ಹಸು, ಆನೆ, ಯಮದರ್ಶನ, ಶನಿ ಮೊದಲಾದ ದೇವತೆಗಳು, ಕಪ್ಪಾಗಿರುವ ಬ್ರಾಹ್ಮಣ, ಕುದುರೆ ಇವರ ದರ್ಶನದಿಂದ ಶುಭವೇ ಆಗುವುದು.

**ಸರ್ವಾಣಿ ಕೃಷ್ಣಾನ್ಯತಿ ನಿಂದಿತಾನಿ ಗೋ–ಹಸ್ತಿ–ದೇವ–ದ್ವಿಜ–ವಾಜಿ ವರ್ಜನಮ್ ॥**

* ಹಾಲನ್ನು ಕುಡಿದ ಸ್ವಪ್ನವು ಸೋಮಪಾನ ಮಾಡುವ ಸೂಚಕ, ಗೋಧಿಯ ದರ್ಶನ ಧನಾಗಮ ಸೂಚಕ.
* ಜವೆಗೋಧಿ, ತಾಮ್ರ, ಲೋಹ, ಸಾಸುವೆ, ವಿಳೆದೆಲೆ, ಕರ್ಪೂರ, ಅಗರು, ಗಂಧ, ಪುಷ್ಪಗಳು ಇವುಗಳ ದರ್ಶನವು ಎಲ್ಲೆಡೆಯಿಂದ ಸಂಪತ್ತು ಬರುವ ಸೂಚಕವಾಗಿರುತ್ತದೆ.
* ಕರು ಸಹಿತ ಗೋದರ್ಶನ ಶುಭಪ್ರದ, ಹಣ್ಣುಗಳಿಂದ ತುಂಬಿರುವ ಗಿಡವನ್ನೇರಿ ಹಣ್ಣು ಕಿತ್ತು ತಿಂದರೆ ಮಹಾಫಲ, ಸುಯೋಗ.
* ಮಹಡಿಯನ್ನೇರುವುದು ಮಾಳಿಗೆಯನ್ನು ಹತ್ತುವುದು, ಆನೆ, ಕುದುರೆ ಹತ್ತುವುದು, ಎತ್ತು, ಗೋವು, ಗಿಡ ಮರಗಳನ್ನೇರುವುದು, ಉದ್ಯೋಗದಲ್ಲಿ ಬಡ್ತಿಯನ್ನು ಸೂಚಿಸುತ್ತದೆ.
* ನೀರಿನ ಜಲಾಶಯ, ಸಮುದ್ರವನ್ನು ಕಂಡರೆ, ಅದನ್ನು ದಾಟಿ ಹೋದರೆ ಬರುವ ಆಪತ್ತಿನಿಂದ ಪಾರಾಗುವ ಸೂಚನೆ.
* ತನ್ನ ತಲೆಯನ್ನು ಯಾರಾದರೂ ಕತ್ತರಿಸಿ ಹಾಕಿದಂತೆಯೂ ಮೃತನಾದಂತೆಯೂ ಕಂಡರೆ ದೀರ್ಘಯುಷ್ಮಂತನೆಂಬ ಸೂಚನೆಯು.
* ಸ್ವಪ್ನದಲ್ಲಿ ನಾಗಸರ್ಪವನ್ನು ಕಂಡರೆ ಧನಾಗಮ ಸೂಚಕ, ನಾಗಸರ್ಪದಿಂದ ಕಚ್ಚಲ್ಪಟ್ಟರೆ ಸುಪುತ್ರನಾಗುವ ಸೂಚನೆ.
* ಸುಂದರಿಯಾದ ಸ್ತ್ರೀಯು ವಸ್ತ್ರಾಭರಣಭೂಷಿತಳಾಗಿ ತಾನೇ ಬಂದು ಆಲಿಂಗಿಸಿದರೆ ದಾರಿದ್ರ್ಯವೆಲ್ಲ ಹೋಗಿ ಸಂಪತ್ತಿನ ಆಗಮನ ಸೂಚಕವು.

* ಆಕಾಶಕಾಯಗಳನ್ನು ನಕ್ಷತ್ರ, ತಾರೆಗಳ ದರ್ಶನವು ನಿಂತು ಹೋಗಿರುವ ಕಾರ್ಯಗಳು ಮುಂದುವರೆಯುವ ಸೂಚನೆ.

* ತುಳಸಿ, ಬಿಲ್ವ ಗಿಡಗಳ ದರ್ಶನ, ಉರಿಯುತ್ತಿರುವ ದೀವಿಟಿಗೆ, ಪುಣ್ಯಕ್ಷೇತ್ರ ದರ್ಶನ, ಗಂಗಾನದ್ಯಾದಿ ಪುಣ್ಯತೀರ್ಥ ದರ್ಶನವಾದರೆ ಶುಭವು.

* ಪಾಯಸವನ್ನು ಭಕ್ಷಿಸುವುದು, ರಕ್ತವನ್ನು ನೋಡುವುದು, ಕುಡಿಯುವುದು, ಬಿಳಿಛತ್ರೀ, ಚಾಮರ ದರ್ಶನ, ಹೂವುಗಳಿರುವ ಬಳ್ಳಿಗಳು, ಕಂಡರೆ ಉದ್ಯೋಗದಲ್ಲಿ ಉನ್ನತಿ.

* ಶುಭ್ರವಾದ ವಸ್ತುಗಳು, ಹಾಸಿಗೆ ದಿಂಬು ಇವುಗಳ ದರ್ಶನವು ಹೊಸ ವಸ್ತ್ರಾಗಮನವನ್ನು ಸೂಚಿಸುತ್ತದೆ.

* ಸ್ವಪ್ನದಲ್ಲಿ ಹೊಗೆಯ ದರ್ಶನ, ನೊರೆ ಹಾಲು ಕುಡಿಯುವುದು, ಜೂಜಾಟದಲ್ಲಿ ಗೆಲ್ಲುವುದು, ಮದ್ಯಪಾನ, ಶಾಸ್ತ್ರಪುರಾಣಗಳ ದರ್ಶನ, ಪ್ರವಚನಾದಿಗಳು ಧನಾಗಮನ ಸೂಚಕವು.

* ತನ್ನನ್ನು ತಾನೇ ಬೆಂಕಿಯನ್ನು ಹಚ್ಚುವುದು ಆರೋಗ್ಯಾಯುಸ್ಸು ಲಾಭ ಸೂಚಕ.

* ಗಣಪತಿ, ಮೊದಲಾದ ದೇವತಾದರ್ಶನ ಶುಭದಾಯಕ.

* ಆಂಜನೇಯನ ದರ್ಶನ ಸಮಸ್ತ ರೋಗಗಳಿಂದ ಬಿಡುಗಡೆಯನ್ನು ಸೂಚಿಸುತ್ತದೆ.

* ಯಾವುದೇ ದೊಡ್ಡ ಸ್ವಾಮಿಗಳ ದರ್ಶನದಿಂದ ಬಂದಿರುವ ಸಮಸ್ತ ವಿಘ್ನಗಳ ಪರಿಹಾರವೆಂದು ತಿಳಿಯಬೇಕು.

* ಮಳೆಯು ಸುರಿಯುತ್ತಿದ್ದು, ಧಾರಾಕಾರ ಮಳೆಯಲ್ಲಿ ತಾನು ನೆನೆದಂತೆ ಬಿದ್ದ ಸ್ವಪ್ನವು ಇಷ್ಟಾರ್ಥ ನೆರವೇರುವುದರ ಸೂಚಕ.

* ನಾಗರಾಜದರ್ಶನ – ಅವನೊಂದಿಗೆ ಸಂಭಾಷಣೆ ದಾರಿದ್ರ್ಯ ತೊಲಗುವುದರ ಸಂಕೇತ.

* ಸ್ವಪ್ನದಲ್ಲಿ ಧನಧ್ಯಾನಾದಿಗಳ ದಾನ, ಸುವರ್ಣ ದಾನದಿಂದ ಧನಾಗಮ, ಅಮೇಧ್ಯ ದರ್ಶನದಿಂದ ಧನಾಗಮ, ದೇವರ ಪೂಜೆಯನ್ನು ಮಾಡುತ್ತಿರುವ ಸ್ವಪ್ನವು ತಾನು ಸಾಲದ ಹೊರೆಯಿಂದ ಮುಕ್ತನಾಗುವ ಸೂಚನೆ.

* ಮಾವಿನಹಣ್ಣು, ಬಾಳೇಹಣ್ಣು ನೋಡುವುದು, ಪಡೆಯುವುದು, ತಿನ್ನುವುದು ಇವು ಪುತ್ರಲಾಭ ಸೂಚಕ.
* ಹೊಲದಲ್ಲಿ ಚೆನ್ನಾಗಿ ಬೆಳೆದು ನಿಂತ ಪೈರುಗಳ ದರ್ಶನ ಧನಾಗಮ.
* ಧೂಮಕೇತು ದರ್ಶನವು ರೋಗಮುಕ್ತನನ್ನಾಗಿಸುವ ಸೂಚನೆ.
* ಆಕಾಶದಲ್ಲಿ ಸಂಚರಿಸುತ್ತಿರುವಂತೆ ಬಿದ್ದ ಸ್ವಪ್ನವು ಬೇರೆ ಸ್ಥಳಕ್ಕೆ ವರ್ಗಾವಣೆ ಸೂಚಿಸುತ್ತದೆ.
* ವೀಣೆ ಮೃದಂಗಾದಿ ಮಂಗಳ ವಾದ್ಯಗಳ ದರ್ಶನ, ನುಡಿಸುವುದು, ಗಾನ ಕೇಳುವುದು ಇವುಗಳೂ ಬಡತನ ನಿವೃತ್ತಿ.
* ಸ್ವಪ್ನದಲ್ಲಿ ಸೌತೆಕಾಯಿ, ಲಿಂಬೆಹಣ್ಣು ದರ್ಶನ ಪುತ್ರಲಾಭ ಸೂಚಕ, ಸಿಂಹದರ್ಶನ, ಗುರುಗಳಿಂದ ಮಂತ್ರಾಕ್ಷತೆ ದರ್ಶನವು ದಾರಿದ್ರ್ಯ ಪರಿಹಾರಕವು.
* ತೆಂಗಿನಕಾಯಿ ದರ್ಶನ ಹಾಗೂ ಹೊಂದುವುದು, ಸೇಬುಹಣ್ಣು ಇವುಗಳ ದರ್ಶನವು ಧನಾಗಮ ಸೂಚಕ.
* ಕನ್ನಡಿ ದರ್ಶನ ಉದ್ಯೋಗದಲ್ಲಿ ಲಾಭವು. ತೊಟ್ಟಿಲನ್ನು ನೋಡಿದರೆ ಮಕ್ಕಳಿಲ್ಲದವರಿಗೆ ವರ್ಷದೊಳಗೆ ಪುತ್ರ ಲಾಭವು.
* ಸ್ವಪ್ನದಲ್ಲಿ ದೇವಾಲಯಕ್ಕೆ ಹೋಗಿ ತೆಂಗಿನಕಾಯಿಯನ್ನು ಒಡೆದು ಅರ್ಪಿಸಿದಂತಾದರೆ ಸಪ್ತಾಹದಲ್ಲಿ ಧನ ಪ್ರಾಪ್ತಿಯು.

• **ದುಃಸ್ವಪ್ನಗಳು :**

ಆಕಾಶದಿಂದ ನಕ್ಷತ್ರಗಳು ಚಂದ್ರ–ಸೂರ್ಯಾದಿಗಳು ಉದುರುವುದು, ಕಪ್ಪಾದ ವಾಹನವನ್ನು ಏರಿ ಪ್ರಯಾಣ, ಕೆಂಪು ಕಣಿಗಿಲೆ ಹಾರ ಧಾರಣೆ, ಕನಸಿನಲ್ಲಿ – ಸತ್ತವರು ಎದ್ದು ಕುಳಿತಂತೆ ಕಂಡರೆ, ರಥವನ್ನು ನೋಡಿದರೆ, ದಕ್ಷಿಣ ದಿಕ್ಕಿಗೆ ಪ್ರಯಾಣ, ಕೆಂಪು ವಸ್ತ್ರ ಧರಿಸಿರುವ ಕೆಂಪು ಗಂಧ ಬಳಿದು–ಕೊಂಡಿರುವ ಕರಾಳ ಸ್ತ್ರೀಯು ಯಾರನ್ನು ಆಲಿಂಗಿಸುವಳೋ ಮೃತ್ಯು ದೇವತೆಗೆ ಸಿಕ್ಕಿರುವನೆಂದು ತಿಳಿಯಬೇಕು.

**ಆದಿತ್ಯಂ ವಾಥ ಚಂದ್ರಂ ವಾ ವಿಗತಚ್ಛಾವಿಕಂ ತಥಾ ।**
**ಪತಂತಂ ವಾಽಥ ನಕ್ಷತ್ರ ತಾರಕಾದೀಂಶ್ಚ ವಾ ಯದಿ ॥**

**ವೀಕ್ಷೇತ ಮಾನವಃ ಸ್ವಪ್ನೇ ಮರಣಂ ಶೋಕಮಾಪ್ನುಯಾತ್ ।**
**ರಕ್ತಮಾಬರಧರಾ ನಾರೀ ರಕ್ತ ಗಂಧಾನುಲೇಪನಾ ।**
**ಅವಗೂಹತಿ ಯಂ ನಾರೀ ಮೃತುಸ್ತಸ್ಯ ವಿನಿರ್ದಿಶೇತ್ ॥**

ತೈಲದಿಂದಾಗಲೀ, ಹಾಲು, ತುಪ್ಪ, ಎಣ್ಣೆಗಳಿಂದ ದೇಹವನ್ನು ಪೂಸಿ ಕೊಂಡ ಕನಸು ಮಹಾವ್ಯಾಧಿಯ ಸೂಚಕ.

ಕೋತಿ, ಒಂಟೆ, ನಾಯಿ, ಹಂದಿ ಮೊದಲಾದ ಪ್ರಾಣಿಗಳ ಮೇಲಾಗಲಿ ಅವುಗಳಿಂದ ಎಳೆಯಲ್ಪಡುವ ವಾಹನದಲ್ಲಾಗಲೀ ಕುಳಿತು ದಕ್ಷಿಣ ದಿಕ್ಕಿನ ಪ್ರಯಾಣವು ಆಸನ್ನ ಮೃತ್ಯುವನ್ನು ಸೂಚಿಸುತ್ತದೆ.

**ಪತನಂ ದಂತಕೇಶಾನಾಂ ಪಕ್ವಮಾಂಸಸ್ಯ ಭಕ್ಷಣಮ್ ।**
**ಖರೋಷ್ಟ್ರ ಮಾಹಿಷಂ ಯಾನಂ ತೈಲಾಭ್ಯಂಗಂ ಚ ಮೃತ್ಯವೇ ॥**

ವಿಧವಾಸ್ತ್ರೀ ದರ್ಶನ ಅಶುಭವು. ದೊಡ್ಡ ಹಳ್ಳದಲ್ಲಿ ಬಿದ್ದಂತಾದರೆ ದೊಡ್ಡ ಆಪತ್ತಿನಲ್ಲಿ ಸಿಕ್ಕಿ ಹಾಕಿಕೊಳ್ಳುವುದರ ಸೂಚಕ.

ತಲೆಯನ್ನು ಕೆರೆದುಕೊಳ್ಳುವುದು, ನಾಲಿಗೆ ಎರಡಾದಂತೆ ತೋರುವುದು ಮಾನಹಾನಿಯ ಸೂಚಕವು.

ಸ್ವಪ್ನದಲ್ಲಿ ರೋದನದ ಶಬ್ದ ಕೇಳಿದರೆ ಅಪಮೃತ್ಯು ಸೂಚಕವು. ಸ್ವಪ್ನದಲ್ಲಿ ನೀರು ಕುಡಿದಂತಾದರೆ ಅಪಮೃತ್ಯು ಸೂಚಕವು.

ನವಗ್ರಹಗಳ ದರ್ಶನ, ಕ್ಷೌರ ಮಾಡಿಸಿಕೊಳ್ಳುವುದು, ಮೃತ್ಯುವಿನ ಸೂಚಕ.

ಊಟ ಮಾಡುವಂತೆ ಬಿದ್ದ ಸ್ವಪ್ನವು ರೋಗ ಬರುವುದರ ಸೂಚಕ. ಗ್ರಹಣದರ್ಶನ ಮರಣವಾರ್ತೆಯ ಸೂಚಕ, ಸನ್ಯಾಸಿಯಾದರೆ ಮಹಾಹಾನಿಯ ಸೂಚಕ.

ಬೋಳುತಲೆ ಬೊಕ್ಕತಲೆಯವರ ದರ್ಶನ ದುಃಖ ಸೂಚಕ. ದೇವಾಲಯದ ಗೋಪುರ ಕಳಚಿ ಬಿದ್ದ ಸ್ವಪ್ನವು ಮೃತ್ಯು ಸೂಚಕ.

ಕಪ್ಪಾದ ಹಲ್ಲಿ, ಓತೀ, ಜೇನುಹುಳಗಳ ದರ್ಶನ ಅನಿಷ್ಟವಾಗುವುದರ ಸೂಚಕ.

ಆಡನ್ನು ಹೋತವನ್ನು ನೋಡಿದರೆ ಉದ್ಯೋಗದಲ್ಲಿ ಹಾನಿಯು, ಹೊತ್ತು ನಡೆಯುತ್ತಿದ್ದ ನೀರಿನ ಮಡಕೆಯು ಒಡೆದು ಹೋದರೆ ಧನಹಾನಿ ಸೂಚಕ.

ಹೀಗೆ ತನ್ನ ಪತಿಗೆ ಅಥವಾ ತನಗಾಗಲೀ ಅನಿಷ್ಟ ಸ್ವಪ್ನಗಳುಂಟಾದಾಗ ಕೈಕಾಲು ತೊಳೆದು ದೇವರಿಗೆ ದೀಪ ಬೆಳಗಿ ವಿಷ್ಣುಸಹಸ್ರನಾಮಾದಿಗಳನ್ನು ಹೇಳಬೇಕು.

ಪತಿಯು ಮೃತ್ಯು ಸೂಚಕ ಸ್ವಪ್ನವನ್ನು ವ್ರತೋಪಾಸನಗಳಿಂದ ದೂರ ಮಾಡಲು ಪ್ರಯತ್ನಿಸಬೇಕು. ಸರ್ವರೀತಿಯಿಂದಲೂ ಪತಿಯನ್ನು ಉಳಿಸಿಕೊಳ್ಳಲು ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಭಯಂಕರ ರೋಗ, ಅಪಮೃತ್ಯುಗಳಿಗೆ ಪ್ರತಿದಿವಸವು ತುಪ್ಪದ ದೀಪಗಳನ್ನು ಹಚ್ಚಿ – ಲಕ್ಷ್ಮೀ ಶೋಭನ ಪದವನ್ನು 49 ದಿವಸ ಪಠಿಸಬೇಕು. ಇದರಿಂದ ಅಪಮೃತ್ಯು ರೋಗಾದಿಗಳು ದೂರವಾಗುವುವು.

* * * * * *



# 20. ವಿಧಿ–ನಿಷೇಧ



- ***ಸ್ತ್ರೀಯರ ವಿಧಿ ನಿಷೇಧಗಳು :***

ಸ್ತ್ರೀಯರು ತಮಗೆ ಯೋಗ್ಯವಾದ ಧರ್ಮಗಳನ್ನೇ ಆಚರಿಸಬೇಕು. ಧರ್ಮವನ್ನು ಯಾರಿಗಾಗಿಯೂ, ಯಾರ ಒತ್ತಡಕ್ಕಾಗಿಯೂ ಮಾಡಬಾರದು. ಭಗವಂತನ ಪ್ರೀತ್ಯುದ್ದೇಶಕ್ಕಾಗಿ ಮಾಡಬೇಕು. ಇದರಿಂದ ಧರ್ಮವನ್ನು ರಕ್ಷಿಸಿದಂತಾಗಿ ಧರ್ಮವು ತನ್ನ ರಕ್ಷಕರನ್ನು ಮಹಾಪತ್ತುಗಳಿಂದ ರಕ್ಷಿಸುತ್ತದೆ.

**ರಕ್ಷಿತಃ ಧರ್ಮಃ ರಕ್ಷತಿ ।**

- ***ಪ್ರಾತಃ ಕಾಲ :***

ಪ್ರಾತಃಕಾಲದಲ್ಲಿ ದೇವತಾ ಸಂಬಂಧೀ ಪೂಜಾದಿಗಳನ್ನು ಪೂರ್ವಾಹ್ಣ–ದಲ್ಲಿಯೇ ಮಾಡಬೇಕು. ಕಾಲದಲ್ಲಿ ವ್ಯತ್ಯಾಸವಾದರೆ ರಾಕ್ಷಸರಿಗೆ ಹೋಗಿ ಸೇರುತ್ತದೆ.

**ಕಾಲಹೀನಂ ತು ಯದ್ ದಾನಾದಿ ತಂ ಭಾಗಂ ರಾಕ್ಷಸಾಂ ವಿದುಃ ।**
– ಮಹಾ. ಅನು.

ತಲೆಬಾಚಿಸಿಕೊಳ್ಳುವುದು, ದಂತಧಾವನ, ಅಭ್ಯಂಗ ಸ್ನಾನ, ದೇವತಾರಾಧನೆ ಮೊದಲಾದವುಗಳನ್ನು ಪೂರ್ವಾಹ್ಣದಲ್ಲಿಯೇ ಮಾಡಬೇಕು.

**ಪ್ರಸಧನಂ ಚ ಕೇಶನಾಂ ಅಂಜನಂ ದಂತಧಾವನಮ್ ।**
**ಪೂರ್ವಾಹ್ಣ ಏವ ಕಾರ್ಯಾಣಿ ದೇವತಾನಾಂ ಚ ಪೂಜನಮ್ ॥**

ಮನೆ ತೊಳೆಯುವುದು, ಕಸ ಹೊಡೆಯುವುದು, ಪಾತ್ರೆ ತೊಳೆಯುವುದು ಇತ್ಯಾದಿ ಮಧ್ಯಾಹ್ನದಲ್ಲಿ ನಿಷಿದ್ಧವಾಗಿರುತ್ತದೆ.

- ***ಸಂಧ್ಯಾಕಾಲದಲ್ಲಿ ಮಾಡಬಾರದ್ದು :***

ನಿದ್ರೆ, ಸ್ನಾನ, ಅಭ್ಯಂಜನ, ಭೋಜನ, ಯಾತ್ರೆ ಇವುಗಳನ್ನು ಸಂಧ್ಯಾಕಾಲಗಳಲ್ಲಿ ಮಾಡಬಾರದು.

**ಸ್ವಾಪ್ನಾಧ್ಯಯನ ಭೋಜ್ಞಾನಿ ಸಂಧ್ಯಯೋಃ ವಿವರ್ಜಯೇತ್ ॥**

*– ಮಾರ್ಕ. 37/73*

– ರಾತ್ರಿಯಲ್ಲಿ ಮೊಸರನ್ನ ತಿನ್ನುವುದು, ಸಂಧ್ಯೆಯಲ್ಲಿ ಮಲಗುವುದು, ರಜಸ್ವಲೆಯಾದಾಗ ಮೈಥುನ ಈ ಮೂರು ನರಕ ದ್ವಾರಗಳು. – ಬ್ರಹ್ಮ *27/40*

– ಸಂಧ್ಯಕಾಲದಲ್ಲಿ ತಿನ್ನುವುದರಿಂದ ರೋಗಗಳು, ಮೈಥುನದಿಂದ ದುಷ್ಟಮಕ್ಕಳು, ನಿದ್ರೆಯಿಂದ ಸಂಪತ್ತಿನ ನಾಶಗಳಾಗುತ್ತವೆ.

**ಆಹಾರಾಜ್ಞಾಯತೇ ವ್ಯಾಧಿಃ ಕ್ರೂರಗರ್ಭಶ್ಚ ಮೈಥುನೇ ।**
**ನಿದ್ರಾ ಶ್ರಿಯೋ ನಿವರ್ತಂತೇ ತಸ್ಮಾದೇವತತ್ರಯಂ ತ್ಯಜೇತ್ ॥**

*– ಯಮ. 76–7*

– ಸಂಧ್ಯಾಕಾಲ – ರಾತ್ರಿಯಲ್ಲಿ ಗಿಡಗಳ ಎಲೆ ಕೊಂಬೆಗಳನ್ನು, ಬಾಳೆ ಎಲೆ, ಕರಿಬೇವು, ಮಾವು ಯಾವುದೇ ಎಲೆಗಳನ್ನು ಕಿತ್ತಬಾರದು.

ರಾತ್ರಿಯಲ್ಲಿ ಗಿಡ, ಮರ, ಬಳ್ಳಿಗಳಲ್ಲಿ ಚಂದ್ರನಿರುವನು. ಒಂದು ಎಲೆ ಕಿತ್ತಿದರೂ ಬ್ರಹ್ಮಹತ್ಯೆಯನ್ನು ಹೊಂದುವರು.

**ಪತ್ರಂ ವಾ ಪಾತಯತ್ಯೇಕಂ ಬ್ರಹ್ಮಹತ್ಯಾಂ ಸ ವಿಂದತಿ ।**

- ***ಸ್ತ್ರೀಯರು ಗಿಡಗಳನ್ನು ಕತ್ತರಿಸಬಾರದು :***

ಸ್ತ್ರೀಯರು ಯಾವಾಗಲೂ ಯಾವುದೇ ಗಿಡಗಳನ್ನಾಗಲೀ, ಬಳ್ಳಿಯನ್ನಾಗಲೀ, ಕತ್ತರಿಸಬಾರದು. ಅಮಾವಾಸ್ಯೆಯಂದು ಸರ್ವರೂ ಯಾವುದೇ ಗಿಡಮರಗಳನ್ನು ಕತ್ತರಿಸಬಾರದು.

**ವನಸ್ಪತಿಂ ರಾಶಚಯೋ ಹನ್ಯಾದಮಾವಾಸ್ಯಾಮಬುದ್ಧಿಮಾನ್ ।**
**ಅಪ್ಯೇಕೇನ ಪತ್ರೇಣ ಆಪ್ಯತೇ ಬ್ರಹ್ಮಹತ್ಯಯಾ ॥**

- ***ಮಲಗುವ ದಿಕ್ಕು :***

ಪೂರ್ವ ಹಾಗೂ ದಕ್ಷಿಣದಿಕ್ಕಿಗೆ ತಲೆ ಹಾಕಿ ಮಲಗುವುದು ಉತ್ತಮ. ಪಶ್ಚಿಮ ಮಧ್ಯಮ, ಉತ್ತರಾಭಿಮುಖವಾಗಿ ಮಲಗುವುದು ರೋಗಗಳ ಆಹ್ವಾನವು.

**ಸದೈವ ವರ್ಜ್ಯಂ ಶಯನಂ ಉದಕ್ ಶಿರಾಸ್ತಥಾ ಪ್ರತೀಚ್ಯಾಂ ರಜನೀಚರೇಶ ॥** – ವಾಮನ *14/51*

- ***ನಗ್ನಳಾಗಿ ಮಲಗುವುದು ನಿಷೇಧ :***

ಸ್ತ್ರೀಯು ನಗ್ನಳಾಗಿ ಸ್ನಾನ ಮಾಡುವುದು, ಮಲಗುವುದು ನಿಷಿದ್ಧವಾಗಿರುತ್ತದೆ.

**ನಗ್ನಸ್ನಾನಂ ನ ಕುರ್ವೀತ ನ ಶಯೀತ ಕದಾಚನ ।**

–ವಾಮನ *14/417*

**ಅರ್ದ್ರಪಾದಃ ನೈವ ಸ್ವಪ್ಯಾದ್ ।**

ಮಲಗುವಾಗ ಬಾಯಿಯಲ್ಲಿರುವ ತಾಂಬೂಲ, ಮುಡಿದಿರುವ ಹೂವು ತೆಗೆದು ಮಲಗಬೇಕು. ಮುಸುಕು ಹಾಕಿಕೊಂಡು ಮಲಗಬಾರದು.

**ಅವಗುಂಠ್ಯ ಶಿರೋ ರಾತ್ರೌ ನ ಶಯೀತ ಕದಾಚನಃ ।**

- ***ಮಧ್ಯದ ಎರಡು ಯಾಮ ಮಾತ್ರ ನಿದ್ರಾಕಾಲ :***

ಸಂಜೆ ಆರರಿಂದ ಒಂಭತ್ತು ಹಾಗೂ ಬೆಳಿಗ್ಗೆ 3 ರಿಂದ ಆರು ಘಂಟೆಗಳಲ್ಲಿ ಮಲಗದೆ ಉಳಿದ 9–12, 12–3 ಇವುಗಳಲ್ಲಿ ಮಲಗಬಹುದು.

**ಹಿತ್ವಾ ಪ್ರಾಕ್ – ಪಶ್ಚಿಮೌ ಯಾಮೌ ನಿಶಿ ಸ್ವಾಪೋ ವರೋ ಮತಃ।**

ಹಗಲು ಮಲಗಬಾರದು – ರಾತ್ರಿ ಜಾಗರ ಮಾಡಬಾರದು.

**ನ ಜಾಗೃಯಾದ್ ರಾತ್ರೌ ದಿವಾಸ್ವಾಪಂ ಚ ವರ್ಜಯೇತ್ ॥**

ಮಲಗಿರುವಾಗಲೇ ಸೂರ್ಯೋದಯ ಹಾಗೂ ಸೂರ್ಯಾಸ್ತವಾಯಿತೆಂದರೆ ಸೂರ್ಯನ ಶಾಪದಿಂದಾಗಿ ಅನಾರೋಗ್ಯವು.

ಸೂರ್ಯಾಸ್ತ – ಸೂರ್ಯೋದಯದಲ್ಲಿ ಮಲಗಿದವರು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

**ಸೂರ್ಯೇಣ ಹ್ಯಭಿನಿರ್ಮುಕ್ತಃ ಶಯಾನೋಽಭ್ಯುದಿತಶ್ಚ ಯಃ ।**

- ***ಬ್ರಾಹ್ಮೀಮುಹೂರ್ತದಲ್ಲಿ ಎದ್ದಿರಬೇಕು :***

**ಬ್ರಾಹ್ಮೇ ಮುಹೂರ್ತೇ ಉತ್ಥಾಯ ಚಿಂತಯೇದ್ಧಿತಮಾತ್ಮನಃ ।**

- ***ಗಂಡನು ಮಲಗಿರುವಾಗ ಎಬ್ಬಿಸಬಾರದು :***

ಶ್ರಮ, ಆಯಾಸಾದಿಗಳಿಂದ ಮಲಗಿರುವವರನ್ನು ಎಬ್ಬಿಸಬಾರದು.

**ನ ಶಯಾನಂ ಪತಿಂ ಪ್ರಬೋಧಯೇತ್ –**
**ಪ್ರಾಯಶ್ಚಿತ್ತ ಮಕುರ್ವಾಣೋ ಯುಕ್ತಃ ಸ್ಯಾನ್ ಮಹತ್ಯೈನಸಾ ॥**
*– ಭವಿಷ್ಯ 4/90*

ಗ್ರೀಷ್ಮಾದಿ ಋತುಗಳಲ್ಲಿ ಬೇಸಿಗೆ ಇರುವುದರಿಂದ ಹಗಲು ಸ್ವಲ್ಪಕಾಲ ವಿಶ್ರಾಂತಿ ಮಾಡಿದರೆ ದೋಷವಿಲ್ಲ. ಬಾಲ–ವೃದ್ಧ ಸ್ತ್ರೀಯರು – ಗಾಯಗೊಂಡವರು – ನಿತ್ಯವೂ ಪ್ರಯಾಣ ಮಾಡುವವರು – ಬಹುದೂರ ನಡೆದು ಬಂದವರಿಗೆ ಹಗಲು ವಿಶ್ರಾಂತಿ ದೋಷಾದಾಯಕವಾಗುವುದಿಲ್ಲ. ರಾತ್ರಿಯೆಲ್ಲ ಜಾಗರಣೆ ಮಾಡಿರುವವರಿಗೆ ಜಾಗರಣೆ ಮಾಡಿದ ಅರ್ಧಕಾಲದಷ್ಟು ಹಗಲು ವಿಶ್ರಾಂತಿಗೆ ಅವಕಾಶವಿದೆ.

**ರಾತ್ರಾವಪಿ ಜಾಗರಿತವತಾಂ ಜಾಗರಿತಕಾಲಾದರ್ಧಮಿಷ್ಯತೇ ದಿವಾಸ್ವಪನಮ್ ॥** – *ಸುಶ್ರುವ ಶಾರೀರ –4/38*

- ***ಮಲ–ಮೂತ್ರ ನಿಯಮಗಳು :***

ಹಗಲು – ಉತ್ತರಾಭಿಮುಖವಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖ–ವಾಗಿಯೂ ಮಲಮೂತ್ರ ವಿಸರ್ಜನೆ ಆರೋಗ್ಯಕರ.

**ಉದಙ್ಮುಖಃ ದಿವಾ ಕುರ್ಯಾದ್ ರಾತ್ರೌಚೇದ್ ದಕ್ಷಿಣಾಮುಖಃ ।**
*– ದೇವೀಭಾ – 11/2/16*

***ಮಲವಿಸರ್ಜನೆ ಮೊದಲು ಮಾಡುವ ಸ್ತೋತ್ರ :***

**ಗಚ್ಛಂತು ಋಷಯೋದೇವಾಃ ಪಿಶಾಚಾ ಚ ಗುಹ್ಯಕಾಃ ।**
**ಪಿತೃಭೂತಗಣಾಃ ಸರ್ವೇ ಕರಿಷ್ಯೇ ಮಲಮೋಚನಮ್ ॥**

(ಈ ಸ್ಥಳದಲ್ಲಿ ಮಲ ವಿಸರ್ಜನೆ ಹೊರಟಿದ್ದೇನೆ. ಋಷಿ–ಪಿತೃ–ಭೂತ–ಗುಹ್ಯಕರೇ ಇಲ್ಲಿಂದ ದೂರ ಹೋಗಿರಿ.)

1) ಮಲಮೂತ್ರ ವಿಸರ್ಜನೆಯಲ್ಲಿ ಮಾತನಾಡಬಾರದು –

**ವಿಣ್ಮೂತ್ರೇ ವಿಸೃಜೇನ್ ಮೌನೀ ।** *–ಬ್ರಹ್ಮ. ಧರ್ಮಾ.–5/39*

ಮೂಗು–ಬಾಯಿಗೆ ವಸ್ತ್ರದಿಂದ ಸುತ್ತಿ ವಿಸರ್ಜಿಸಬೇಕು. ಗಂಧವನ್ನು ಅಘ್ರಾಣಿಸಬಾರದು.

**ಘ್ರಾಣಾಸ್ಯೇ ವಾಸಸಾಚ್ಛಾದ್ಯ ಮಲಮೂತ್ರಂ ತ್ಯಜೇದ್ ಬುಧಃ ।**

2) ಚಪ್ಪಲಿ ಧರಿಸಿ ವಿಸರ್ಜನೆ ನಿಷಿದ್ಧ –

**ನ ಸೋಪಾನ್ತ್ಕಃ ಮೂತ್ರ ಪುರೀಷಂ ಕುರ್ಯಾತ್ ।**

*–ಆಪಸ್ತಂಬ –1/11/30–48*

3) ನಿಂತು, ಓಡಾಡುತ್ತಾ ಮೂತ್ರ ವಿಸರ್ಜನೆ ನಿಷಿದ್ಧ –

**ನ ಗಚ್ಛನ್ನ ತಿಷ್ಠನ್ ವೈ ವಿಣ್ಮೂತ್ರೋತ್ಸರ್ಗಮಾಚರೇತ್ ।**

*– ಮಾರ್ಕ. 34/29*

4) ಜಲಾಶಯವಿರುವ ಸ್ಥಳದಿಂದ ಹನ್ನೆರಡು ಅಥವಾ ಹದಿನಾರು ಮೊಳದೂರ ಮಲ ಮೂತ್ರ ವಿಸರ್ಜನೆ ಮಾಡಬೇಕು. ನೀರಿನಲ್ಲಿ ಹಲ್ಲುಜ್ಜುವುದು, ಮಲ ಮೂತ್ರ ವಿಸರ್ಜನೆ ನಿಷಿದ್ಧವು. ನದಿಯಲ್ಲಿ ಎಂದೂ ಬಟ್ಟೆ ಒಗೆಯಬಾರದು.

**ನ ನದ್ಯಾಂ ವಸ್ತ್ರಾನ್ ಕ್ಷಾಲಯೇತ್ ।**
**ದಶಹಸ್ತಾನ್ ಪರಿತ್ಯಜ್ಯ ಮೂತ್ರಂ ಕುರ್ಯಾದ್ ಜಲಾಶಯೇ ॥**

5) ಬಿಸಿನೀರಿನಿಂದ ಮಲ ಮೂತ್ರ ಶುದ್ಧಿಯು ಅರ್ಶ ರೋಗವನ್ನುಂಟು ಮಾಡುತ್ತದೆ.

**ಉಷ್ಣಾಂಬುನಾ ಗುದಪ್ರಕಾಕ್ಷಲನಮ್ ಅರ್ಶಾದ್ಯಾಮಯಕರಮ್ ।**

6) ಕಾಲುಗಳನ್ನು ತೊಳೆಯುವಾಗ ಮಂಡಿಯವರೆಗೂ ತೊಳೆಯಬೇಕು. ಕೈ ತೊಳೆಯುವಾಗ ಮೊಣಕೈವರೆಗೂ ತೊಳೆಯಬೇಕು.

**ಪಾದಾವಾಜಾನುತಃ ಶೋಧ್ಯೌ ಕರೌ ತು ಆಮಣಿಬಂಧನಾತ್ ।**

7) ವಿಪ್ರರು, ಗೋವು, ಅಗ್ನಿ, ಆದಿತ್ಯರ ಎದುರಿಗೆ ಮಲಮೂತ್ರ ವಿಸರ್ಜನೆ ನಿಷಿದ್ಧವು.

**ಪ್ರತ್ಯಗ್ನಿಂ ಪ್ರತಿಸೂರ್ಯಂ ಚ ಪ್ರತಿಸೋಮೋದಕದ್ವಿಜಾನ್ ।**
**ಪ್ರತಿಗಾಂ ಪ್ರತಿವಾತಂ ಚ ಪ್ರಜ್ಞಾನಶ್ಯತಿ ಮೇಹತಃ ॥** –ಮನು. *4/52*

8) ಸ್ತ್ರೀಯರು ಸೂರ್ಯಾಭಿಮುಖವಾಗಿ ಮಲಮೂತ್ರ ವಿಸರ್ಜಿಸಿದರೇ ಗರ್ಭಪಾತವುಂಟಾಗುತ್ತದೆ.

**ಸ್ತ್ರೀಯಃ ಸರ್ವಾಶ್ಚ ದುರ್ವೃತ್ತಾಃ ಪ್ರತಿಮೋಹಂತಿ ಯಾ ರವಿಂ ।**
**ಅನಿಲದ್ವೇಷಿಣಃ ಶಕ್ರ ಗರ್ಭಸ್ತ ಥಾ ಚ್ಯವತೇ ಪ್ರಜಾ ॥**
*–ಅನು. 125–64*

### *9) ಮೃತ್ತಿಕಾ ಶೌಚ :*

ಇದು ಬಾಹ್ಯಶುದ್ಧಿಗೆ ಅವಶ್ಯಕವು. ಸೋಪು ತನ್ನ ಗಂಧದಿಂದ ದುರ್ಗಂಧವನ್ನು ಮುಚ್ಚಿಡುತ್ತದೆ. ಹೊರತು ದುರ್ಗಂಧ ನಾಶಕವಲ್ಲ. ಆದ್ದರಿಂದ ನುಣುಪಾದ ಕೆಮ್ಮಣ್ಣಿನಿಂದ ಮೃತ್ತಿಕಾ ಶೌಚವು ವಿಹಿತವಾಗಿದೆ.

ಕನ್ಯೆಯರಿಗೆ, ವಿವಾಹಿತ ಸ್ತ್ರೀಯರಿಗೆ ಶೌಚದಲ್ಲಿ ಸಂಖ್ಯ ನಿಯಮವಿಲ್ಲ. ದುರ್ಗಂಧ ಹೋಗುವವರೆಗೂ ಮೃತ್ತಿಕಶೌಚ ಮಾಡಿಕೊಳ್ಳಬೇಕು.

**ಗಂಧಲೇಪಕ್ಷಯಕರಂ ಸ್ತ್ರೀಣಾಂ ಶೌಚಂ ವಿಧಿಯತೇ ।**

### *10) ಬಾಯಿ ಮುಕ್ಕಳಿಸುವಿಕೆ :*

ಇದನ್ನು 'ಗಂಡೂಷ' ಎನ್ನಲಾಗಿದೆ. ಮೂತ್ರ ಕಾಲದಲ್ಲಿ ನಾಲ್ಕು ಬಾರಿ, ಮಲ ವಿಸರ್ಜನೆಯಲ್ಲಿ ಎಂಟು ಬಾರಿ, ಭೋಜನಾನಂತರ ಹನ್ನೆರಡು ಬಾರಿ ಗಂಡೂಷ ವಿಹಿತವಾಗಿದೆ.

**ಮೂತ್ರೋತ್ಸರ್ಗೇ ತು ಚತುರಃ ಪುರೀಷೇ ತ್ವಷ್ಟಸಂಖ್ಯಕಾನ್ ।**
**ಕುರ್ಯಾದ್ ದ್ವಾದಶ ಗಂಡೂಷಾನ್ ಭೋಜನೇ ದಂತಧಾವನೇ ॥**
*– ಆಹ್ನಿಕ. ಪ*

### *11) ಮಾವಿನೆಲೆ ಬಿದಿಗೆ–ತ್ರಯೋದಶೀ ನಿಷೇಧ :*

**ನಾದ್ಯಾದಾಮ್ರಂ ದ್ವಿತೀಯ ಚತುರ್ದಶೀಷು ಬುಧಃ ।**

12) ಕಡ್ಡಿಯನ್ನು ಕುಟ್ಟಿ ತೊಳೆದು ದಂತಧಾವನ ಮಾಡಿ ನಂತರ ತೊಳೆದು ವಿಸರ್ಜಿಸಬೇಕು. ಇದೊಂದು ಅಭಿಮಾನಿ ದೇವತೆಗಳಿಗೆ ತೋರುವ ಗೌರವ.

**ಪ್ರಕ್ಷಾಲ್ಯ ಭಕ್ಷಯೇತ್ ಕಾಷ್ಠಂ ಪ್ರಕ್ಷಾಲ್ಯೈವ ತು ಸಂತ್ಯಜೇತ್ ।**

*– ಅಂಗೀರಸ ಸ್ಮೃತಿ*

13) ಬಕುಲದ ತೊಗಟೆಯಿಂದ ತಯಾರಿಸಿದ ದಂತ ಚೂರ್ಣವು ವಜ್ರದಷ್ಟೇ ದೃಢವಾಗಿರುತ್ತದೆ.

**ಬಕುಲಸ್ತ್ವಗ್ ಭವಂ ಚೂರ್ಣಂ ಘರ್ಷಯೇದ್ ದಂತಪಂಕ್ತಿಷು ।**
**ವಜ್ರಾದಪಿ ದೃಢೀಭೂತಾ ದಂತಾಃ ಸ್ಯುಃ ಚಪಲಾ ಧ್ರುವಮ್ ॥**

*– ಶಾಂರ್ಗಧರ*

14) ಅಜೀರ್ಣ ಜ್ವರಾದಿಗಳಿರುವಾಗ ದಂತಕಾಷ್ಠ ಬೇಡ.

**ನಾದ್ಯಾದ್ ಅಜೀರ್ಣ ಮಮಥು ಶ್ವಾಸಕಾಸ ಜ್ವರಾರ್ದಿತಃ ।**

- ***ಸ್ನಾನದ ಮಹತ್ವ :***

ಆಷಾಢ, ಕಾರ್ತಿಕ, ಮಾಘ, ವೈಶಾಖಾದಿ ಮಾಸಗಳಲ್ಲಿ ಸಮೀಪದಲ್ಲಿರುವ ನದೀ, ತಟಾಕ, ತೀರ್ಥಗಳಲ್ಲಿ ಸ್ನಾನ ಮಾಡಬೇಕು.

ಬಿಸಿ ನೀರಿನಿಂದ ಸ್ನಾನ ಮಾಡದೆ ತಣ್ಣೀರಿನಿಂದ ಸ್ನಾನ ಮಾಡುವವನಿಗೆ ವಾರುಣಲೋಕದಲ್ಲಿ ಭೋಗಪ್ರಾಪ್ತಿ.

ಆಷಾಢದಲ್ಲಿ ಕಂಠಸ್ನಾನ ಮಾಡಿದರೂ ಅರ್ಧ ಫಲವು.

**ಸ್ನಾನಾರ್ಧ ಫಲದಂ ಕಂಠಸ್ನಾನಂ ಸದ್ಭಿಹ ನಿಗದ್ಯತೇ ।**

- ***ಕಾರ್ತಿಕ ತುಲಾ ಕಾವೇರಿ ಸ್ನಾನ :***

ಕಾರ್ತಿಕ ಮಾಸದಲ್ಲಿ ಗಂಗೆಯು ಕಾವೇರಿಯಲ್ಲಿ ಸ್ನಾನ ಮಾಡಲು ಆಗಮಿಸುವಳೂ. ತುಲಾಕಾವೇರಿ ಸ್ನಾನವು ಸರ್ವಪಾಪಹರವಾಗಿದೆ.

**ಕಾರ್ತಿಕೇ ಪ್ರತಿವರ್ಷಂ ತು ಗಂಗಾ ತ್ರೈಲೋಕ್ಯಪಾವನೀ ।**
**ಸ್ನಾತುಂ ಭಕ್ತ್ಯಾ ಸಮಾಯಾತಿ ಕಾವೇರಿಂ ಪುಣ್ಯಾದಾಂ ನದೀಂ ॥**

ಕಾರ್ತಿಕ ಮಾಸ ಪೂರ್ತಿ ತೈಲಾಭ್ಯಂಗ ಮಾಡಬಾರದು. ಇದರಿಂದ ಸುಂದರ ರೂಪ ಪ್ರಾಪ್ತಿಯು.

**ಕಾರ್ತಿಕೆ ವರ್ಜಯೇತ್ ತೈಲಂ ।**

**ಪ್ರತ್ಯಗ್ನಿಂ ಪ್ರತಿಸೂರ್ಯಂ ಚ ಪ್ರತಿಸೋಮೋದಕದ್ವಿಜಾನ್ ।**
**ಪ್ರತಿಗಾಂ ಪ್ರತಿವಾತಂ ಚ ಪ್ರಜ್ಞಾ ನಶ್ಯತಿ ಮೇಹತಃ ॥** –ಮನು. *4/52*

8) ಸ್ತ್ರೀಯರು ಸೂರ್ಯಾಭಿಮುಖವಾಗಿ ಮಲಮೂತ್ರ ವಿಸರ್ಜಿಸಿದರೇ ಗರ್ಭಪಾತವುಂಟಾಗುತ್ತದೆ.

**ಸ್ತ್ರೀಯಃ ಸರ್ವಾಶ್ಚ ದುರ್ವೃತ್ತಾಃ ಪ್ರತಿಮೋಹಂತಿ ಯಾ ರವಿಂ ।**
**ಅನಿಲದ್ವೇಷಿಣಃ ಶಕ್ರ ಗರ್ಭಸ್ತ ಥಾ ಚ್ಯವತೇ ಪ್ರಜಾ ॥**
*–ಅನು. 125–64*

***9) ಮೃತ್ತಿಕಾ ಶೌಚ :***

ಇದು ಬಾಹ್ಯಶುದ್ಧಿಗೆ ಅವಶ್ಯಕವು. ಸೋಪು ತನ್ನ ಗಂಧದಿಂದ ದುರ್ಗಂಧವನ್ನು ಮುಚ್ಚಿಡುತ್ತದೆ. ಹೊರತು ದುರ್ಗಂಧ ನಾಶಕವಲ್ಲ. ಆದ್ದರಿಂದ ನುಣುಪಾದ ಕೆಮ್ಮಣ್ಣಿನಿಂದ ಮೃತ್ತಿಕಾ ಶೌಚವು ವಿಹಿತವಾಗಿದೆ.

ಕನ್ಯೆಯರಿಗೆ, ವಿವಾಹಿತ ಸ್ತ್ರೀಯರಿಗೆ ಶೌಚದಲ್ಲಿ ಸಂಖ್ಯ ನಿಯಮವಿಲ್ಲ. ದುರ್ಗಂಧ ಹೋಗುವವರೆಗೂ ಮೃತ್ತಿಕಶೌಚ ಮಾಡಿಕೊಳ್ಳಬೇಕು.

**ಗಂಧಲೇಪಕ್ಷಯಕರಂ ಸ್ತ್ರೀಣಾಂ ಶೌಚಂ ವಿಧಿಯತೇ ।**

***10) ಬಾಯಿ ಮುಕ್ಕಳಿಸುವಿಕೆ :***

ಇದನ್ನು 'ಗಂಡೂಷ' ಎನ್ನಲಾಗಿದೆ. ಮೂತ್ರ ಕಾಲದಲ್ಲಿ ನಾಲ್ಕು ಬಾರಿ, ಮಲ ವಿಸರ್ಜನೆಯಲ್ಲಿ ಎಂಟು ಬಾರಿ, ಭೋಜನಾನಂತರ ಹನ್ನೆರಡು ಬಾರಿ ಗಂಡೂಷ ವಿಹಿತವಾಗಿದೆ.

**ಮೂತ್ರೋತ್ಸರ್ಗೇ ತು ಚತುರಃ ಪುರೀಷೇ ತ್ವಷ್ಟಸಂಖ್ಯಕಾನ್ ।**
**ಕುರ್ಯಾದ್ ದ್ವಾದಶ ಗಂಡೂಷಾನ್ ಭೋಜನೇ ದಂತಧಾವನೇ ॥**
*– ಆಹ್ನಿಕ. ಪ*

***11) ಮಾವಿನೆಲೆ ಬಿದಿಗೆ–ತ್ರಯೊದಶೀ ನಿಷೇಧ :***

**ನಾದ್ಯಾದಾಮ್ರಂ ದ್ವಿತೀಯ ಚತುರ್ದಶೀಷು ಬುಧಃ ।**

12) ಕಡ್ಡಿಯನ್ನು ಕುಟ್ಟಿ ತೊಳೆದು ದಂತಧಾವನ ಮಾಡಿ ನಂತರ ತೊಳೆದು ವಿಸರ್ಜಿಸಬೇಕು. ಇದೊಂದು ಅಭಿಮಾನಿ ದೇವತೆಗಳಿಗೆ ತೋರುವ ಗೌರವ.

**ಪ್ರಕ್ಷಾಲ್ಯ ಭಕ್ಷಯೇತ್ ಕಾಷ್ಠಂ ಪ್ರಕ್ಷಾಲ್ಯೈವ ತು ಸಂತ್ಯಜೇತ್ ।**

*– ಅಂಗೀರಸ ಸ್ಮೃತಿ*

13) ಬಕುಲದ ತೊಗಟೆಯಿಂದ ತಯಾರಿಸಿದ ದಂತ ಚೂರ್ಣವು ವಜ್ರದಷ್ಟೇ ದೃಢವಾಗಿರುತ್ತದೆ.

**ಬಕುಲಸ್ತ್ವಗ್ ಭವಂ ಚೂರ್ಣಂ ಘರ್ಷಯೇದ್ ದಂತಪಂಕ್ತಿಷು ।**
**ವಜ್ರಾದಪಿ ದೃಢೀಭೂತಾ ದಂತಾಃ ಸ್ಯುಃ ಚಪಲಾ ಧ್ರುವಮ್ ॥**

*– ಶಾಂರ್ಗಧರ*

14) ಅಜೀರ್ಣ ಜ್ವರಾದಿಗಳಿರುವಾಗ ದಂತಕಾಷ್ಠ ಬೇಡ.

**ನಾದ್ಯಾದ್ ಅಜೀರ್ಣ ಮಮಥು ಶ್ವಾಸಕಾಸ ಜ್ವರಾರ್ದಿತಃ ।**

- ***ಸ್ನಾನದ ಮಹತ್ವ :***

ಆಷಾಢ, ಕಾರ್ತಿಕ, ಮಾಘ, ವೈಶಾಖಾದಿ ಮಾಸಗಳಲ್ಲಿ ಸಮೀಪದಲ್ಲಿರುವ ನದೀ, ತಟಾಕ, ತೀರ್ಥಗಳಲ್ಲಿ ಸ್ನಾನ ಮಾಡಬೇಕು.

ಬಿಸಿ ನೀರಿನಿಂದ ಸ್ನಾನ ಮಾಡದೆ ತಣ್ಣೀರಿನಿಂದ ಸ್ನಾನ ಮಾಡುವವನಿಗೆ ವಾರುಣಲೋಕದಲ್ಲಿ ಭೋಗಪ್ರಾಪ್ತಿ.

ಆಷಾಢದಲ್ಲಿ ಕಂಠಸ್ನಾನ ಮಾಡಿದರೂ ಅರ್ಧ ಫಲವು.

**ಸ್ನಾನಾರ್ಧ ಫಲದಂ ಕಂಠಸ್ನಾನಂ ಸದ್ಭಿಹ ನಿಗದ್ಯತೇ ।**

- ***ಕಾರ್ತಿಕ ತುಲಾ ಕಾವೇರಿ ಸ್ನಾನ :***

ಕಾರ್ತಿಕ ಮಾಸದಲ್ಲಿ ಗಂಗೆಯು ಕಾವೇರಿಯಲ್ಲಿ ಸ್ನಾನ ಮಾಡಲು ಆಗಮಿಸುವಳೂ. ತುಲಾಕಾವೇರಿ ಸ್ನಾನವು ಸರ್ವಪಾಪಹರವಾಗಿದೆ.

**ಕಾರ್ತಿಕೇ ಪ್ರತಿವರ್ಷಂ ತು ಗಂಗಾ ತ್ರೈಲೋಕ್ಯಪಾವನೀ ।**
**ಸ್ನಾತುಂ ಭಕ್ತ್ಯಾ ಸಮಾಯಾತಿ ಕಾವೇರಿಂ ಪುಣ್ಯಾದಾಂ ನದೀಂ ॥**

ಕಾರ್ತಿಕ ಮಾಸ ಪೂರ್ತಿ ತೈಲಾಭ್ಯಂಗ ಮಾಡಬಾರದು. ಇದರಿಂದ ಸುಂದರ ರೂಪ ಪ್ರಾಪ್ತಿಯು.

**ಕಾರ್ತಿಕೆ ವರ್ಜಯೇತ್ ತೈಲಂ ।**

- ***ಮಾಘಸ್ನಾನದ ಶ್ರೇಷ್ಠತೆ :***

ಮಾಘಮಾಸದಲ್ಲಿ ನಕ್ಷತ್ರ ಕಾಣಿಸುತ್ತಿರುವಾಗಲೇ ಪ್ರಾತಃಕಾಲದ ಸ್ನಾನ ಅತ್ಯಂತ ಶ್ರೇಷ್ಠವಾಗಿರುತ್ತದೆ.

- ಮನೆಯಲ್ಲಿ ಬಿಸಿನೀರಿನ ಸ್ನಾನ ಆರು ವರ್ಷ ನದ್ಯಾದಿ ಸ್ನಾನ ಫಲ.
- ಮನೆಯಿಂದ ಹೊರಗೆ ಬಾವಿಯಲ್ಲಿ ಹನ್ನೆರಡು ವರ್ಷ ಫಲ.
- ಕೆರೆ, ತಟಾಕ, ಸರೋವರಾದಿಗಳಲ್ಲಿ ಸ್ನಾನ ಮಾಡಿದರೆ 24 ವರ್ಷ ಸ್ನಾನ ಫಲ.
- ನದಿಗಳಲ್ಲಿ ಮಾಡಿದರೆ 48 ವರ್ಷ ಸ್ನಾನ ಫಲ.
- ಮಾನಸಸರೋವರ, ಚಂದ್ರ-ಸ್ವಾಮಿಪುಷ್ಕರಿಣಿಯಲ್ಲಿ ಮಾಡಿದ ಸ್ನಾನ 120 ವರ್ಷ ಸ್ನಾನ ಮಾಡಿದ ಫಲ.

ಗಂಗೆ-ಯಮುನೆ-ಗೋದೆಯಲ್ಲಿ ಸ್ನಾನ ಮಾಡಿದರೆ 1200 ವರ್ಷ ಫಲ. ಸಂಗಮದಲ್ಲಿ ಮಾಡಿರೆ 4800 ವರ್ಷ ಸ್ನಾನ ಮಾಡಿದ ಫಲವು.

- ***ಮನೆಯಲ್ಲಿ ಕಂಠ ಸ್ನಾನ :***

ಸ್ತ್ರೀಯರು ದಿನನಿತ್ಯ ಸ್ನಾನ ಮಾಡುವಾಗ ಕಂಠಸ್ನಾನ ಮಾತ್ರ ಸಾಕು. ರಜಸ್ವಲೆ ನಾಲ್ಕನೆ ದಿವಸ, ಅಭ್ಯಂಜನ ದಿನಗಳು, ಶ್ರಾದ್ಧದಿನದಂದು, ಆಷಾಢಾದಿ ನಾಲ್ಕು ಮಾಸಗಳಲ್ಲಿ ನದ್ಯಾದಿ ಸ್ನಾನ ಮಾಡುವಾಗಲೂ ತಲೆಯ ಮೇಲೆ ಮಾಡಬೇಕು.

- ***ಅರಿಷಿಣ ಸ್ನಾನ :***

ಅರಿಷಿಣವು ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನವಿದ್ದು ದೈಹಿಕ ಕಾಂತಿ ಹೆಚ್ಚಿಸಲು ಹರಿದ್ರಾದಿಂದ ಸ್ನಾನ ಮಾಡಬೇಕು. ಹರಿದ್ರೆಯಿಲ್ಲದೆ ಸ್ನಾನದ ನೀರು ನಾಯಿಯ ಮೂತ್ರೋದಕವೆನಿಸುತ್ತದೆ.

**ಹರಿದ್ರಾರಹಿತಂ ಸ್ನಾನಂ ಶ್ವಾನಮೂತ್ರಸಮಂ ವಿದುಃ ।**

ಹರಿದ್ರೆಯನ್ನು ಎಂಟು ಭಾಗಗಳಿಗೆ ಹಚ್ಚಿಕೊಂಡು ಸ್ನಾನ ಮಾಡಬೇಕು. ಮುಖ, ಹೃದಯ, ಕುತ್ತಿಗೆ, ಕಿವಿಗಳು, ತೋಳುಗಳು, ತೊಡೆಗಳು, ಮೊಣಕಾಲು ಹಾಗೂ ಪಾದಗಳಿಗೆ ಹಚ್ಚಿಕೊಂಡು ಸ್ನಾನ ಮಾಡಬೇಕು.

- ***ಸ್ನಾನ ಸಂಕಲ್ಪ :***

ಸಂಕಲ್ಪವು ಸಕಲ ಕರ್ಮಗಳಿಗೂ ಮೂಲವೆನಿಸಿದ್ದು ಸಂಕಲ್ಪವನ್ನು ಮಾಡದೆ ಯಾವುದೇ ಸ್ನಾನದಾನಾದಿಗಳು ನಿಷಿದ್ಧವಾಗಿರುತ್ತದೆ. ಮಾಸ, ತಿಥಿ, ಪಕ್ಷ, ತಿಥಿ, ನಕ್ಷತ್ರಾದಿಗಳನ್ನು ಉಲ್ಲೇಖಿಸದೆ ಮಾಡಿದ ಕರ್ಮಗಳು ಪೂರ್ಣಫಲ ನೀಡಲಾರವು.

**ಮಾಸಪಕ್ಷ ತಿಥೀನಾಂ ಚ ನಿಮಿತ್ತಾನಾಂ ಚ ಸರ್ವತಃ ।**
**ಉಲ್ಲೇಖನಮಕುರ್ವಾಣೋ ನ ತಸ್ಯ ಫಲಭಾಗ್ ಭವೇತ್ ॥**

*–ಯಮಸ್ಮೃತಿ*

- ***ಆಮಲಕ ಸ್ನಾನ :***

ನೆಲ್ಲಿಯಿಂದ ಪ್ರತಿದಿವಸ ಸ್ನಾನ ಮಾಡುವವಳಿಗೆ ವಾತ–ಪಿತ್ತ–ಕಫಗಳನ್ನು ಗೆದ್ದು ನೂರು ವರ್ಷ ಜೀವಿಸುವಳು.

**ಯಃ ಸದಾಮಲಕೈಃ ಸ್ನಾನಂ ಕುರುತೇ ಖಲು ಪೂರುಷಃ ।**
**ವಾತ–ಪಿತ್ತ–ಕಫಾನ್ ಜಿತ್ವಾ ಜೀವೇದ್ ವರ್ಷಶತಂ ಸುಖೀ ॥**

- ***ಬಿಸಿನೀರು ನಿಷಿದ್ಧ ದಿವಸ :***

ಸಂಕ್ರಮಣ, ಗ್ರಹಣ, ಅಮಾವಾಸ್ಯೆ, ವ್ರತಗಳಲ್ಲಿ, ಷಷ್ಠಿಗಳಲ್ಲಿ ಬಿಸಿ ನೀರಿನ ಸ್ನಾನ ಅನಾರೋಗ್ಯಕರ, ಶ್ರಾದ್ಧ, ಜನ್ಮದಿನ, ಜಾತಾಶೌಚ– ಮೃತಾಶೌಚಾದಿ–ಗಳಲ್ಲಿಯೂ ತಣ್ಣೀರಿನಿಂದಲೇ ಸ್ನಾನ ಮಾಡಬೇಕು.

ಬಿಸಿನೀರು ನಾಭಿಯಿಂದ ಕೆಳಗೆ ಉಪಯೋಗಿಸಿದರೆ ಅವುಗಳಿಗೆ ಬಲವುಂಟಾಗುತ್ತದೆ. ತಲೆ, ಹೃದಯಾದಿಗಳಿಗೆ ಬಿಸಿನೀರಿನ ಸ್ನಾನವು ಬಲವನ್ನು ಕುಂದಿಸುತ್ತದೆ. ಕೂದಲು–ನೇತ್ರಗಳಿಗೆ ಹಾನಿವುಂಟು ಮಾಡುತ್ತದೆ. ಇದು ಅಭ್ಯಂಜನ ದಿವಸ ಹೊರತು ನಿಯಮವು.

**ಉಷ್ಣಾಮಬುನಾಧಃ ಕಾಯಸ್ಯ ಪರಿಷೇಕೋ ಬಲಾವಹಃ ।**
**ತೇನೈವ ತು ಉತ್ತಮಾಂಗಸ್ಯ ಬಲಹೃತ್ ಕೇಶನೇತ್ರಯೋಃ ॥**

- ***ಕಂಠಸ್ನಾನ :***

ರೋಗಾದಿಗಳಿಂದ ಯುಕ್ತನಾದಾಗ ಹಾಗೂ ಅಶಕ್ತನಾದಾಗ ತಲೆಯ ಮೇಲೆ

ಮಾಡದೆ ಕಂಠಸ್ನಾನವನ್ನು ಮಾಡಬಹುದು. ಅದೂ ಸಾಧ್ಯವಾಗದಿದ್ದಾಗ ಒದ್ದೆ ಬಟ್ಟೆಯಿಂದ ಮೈಯೆಲ್ಲ ಒರೆಸಿಕೊಂಡು **'ಅಪವಿತ್ರ ಪವಿತ್ರೋ ವಾ'** ಇತ್ಯಾದಿ ಮಾರ್ಜನ ಮಂತ್ರದಿಂದ ಪ್ರೋಕ್ಷಿಸಿಕೊಂಡರೆ ಶುದ್ಧಿಯು. ಸ್ತ್ರೀಯರಿಗೂ ಇದೇ ನಿಯಮ.

**ಅಶಿರಸ್ಯಂ ಭವೇತ್ ಸ್ನಾನಂ ಸ್ನಾನಾಶಕ್ತೌತು ಕರ್ಮಿಣಾಮ್ ।**
**ಆರ್ದ್ರೇಣ ವಾಸಸಾ ವಾಪಿ ಮಾರ್ಜನಂ ದೈಹಿಕಂ ವಿದುಃ ॥**

- ***ವಸ್ತ್ರಗಳ ಶುದ್ಧಿ :***

ಹತ್ತಿಯ ವಸ್ತ್ರವು ಒಂದು ಬಾರಿ ಧರಿಸಿದ ನಂತರ ಅಶುದ್ಧವೆನಿಸುತ್ತದೆ. ಪುನಃ ಒಗೆದು ಒಣಗಿಸಿದರೆ ಮಡಿ, ರೇಷ್ಮೆಯಾದರೂ ಒಮ್ಮೆ ಧರಿಸಿ ಪುನಃ ಬಿಚ್ಚಿಟ್ಟು, ಪುನಃ ಧರಿಸಿದರೂ ಮಡಿಯಾಗಿಯೇ ಇರುತ್ತದೆ. ಆದರೆ ರೇಷ್ಮೆ ವಸ್ತ್ರಧರಿಸಿ ಭೋಜನ ಮಾಡಿದರೆ ಪುನಃ ಒಗೆದರೆ ಶುದ್ಧಿ.

ಕಂಬಳಿಯಂತಹ ಧಾವಳಿ ವಸ್ತ್ರಗಳು ಭುಂಜಿಸಿದ ಮೇಲೆ ಒಂದು ಬಾರಿ ಗಾಳಿಗೆ ಝಾಡಿಸಿದರೆ ಶುದ್ಧಿಯು.

**ಕಾರ್ಪಾಸಂ ಕಟನಿಮುಕ್ತಂ ಕೌಶೇಯಂ ಭೋಜನಾವಧಿ ।**
**ಊರ್ಣವಸ್ತ್ರಂ ಸದಾ ಶುದ್ಧಂ ಊರ್ಣಾವಾತೇನ ಶುದ್ಧ್ಯತಿ ॥**

ಆದರೆ ಯಾವುದೇ ವಸ್ತ್ರವಾಗಲೀ ಮಲ-ಮೂತ್ರ ವಿಸರ್ಜನೆ ಮಾಡಿದಾಗ ಅಶುದ್ಧವಾಗುತ್ತದೆ. ಶವ-ಚಾಂಡಾಲ-ರಜಸ್ವಲೆಯ ಸ್ಪರ್ಶವಾದರೆ ಎಲ್ಲಾ ವಸ್ತ್ರಗಳೂ ಮೈಲಿಗೆಯೇ.

ಅಂಗಡಿಯಿಂದ ತಂದ ವಸ್ತ್ರವಾದರೂ ನೀರಿನಿಂದ ಪ್ರೋಕ್ಷಿಸಿದರೆ ಸಾಕು ಕರ್ಮಾರ್ಹವಾಗುತ್ತದೆ.

**ಯಂತ್ರ ನಿರ್ಮುಕ್ತ ವಸ್ತ್ರಾಣಾಮ ಜಲಪ್ರೋಕ್ಷಣೈನೈವ ಶುದ್ಧಿಃ ।**

- ***ಕಚ್ಚೆ ಹಾಕುವ ಕ್ರಮ :***

ಸ್ತ್ರೀಯರು ಹದಿನೆಂಟು ಮೊಳ ಸೀರೆಯನ್ನೇ ಧರಿಸಬೇಕು. ಮೊದಲು ಎಡ ಅಥವಾ ಬಲಭಾಗದಲ್ಲಿ ಮೂರು ಗಂಟುಗಳನ್ನು ಹಾಕಿ, ಶ್ರೀಭೂದುರ್ಗೆಯರ ಸ್ಮರಣೆ ಮಾಡಬೇಕು. ನಂತರ 20 ಅಥವಾ 27 ಮಡಿಕೆಗಳನ್ನು ಮಾಡಿ ಬಾಳೆಕಾಯಿಯಂತೆ ಮಾಡಿ ಸಿಕ್ಕಿಸಿಕೊಳ್ಳಬೇಕು. ನೆರಿಗೆ ಹಿಡಿದು ನಾಭಿಯ ಮೇಲೆ ಸಿಕ್ಕಿಸಿಕೊಳ್ಳುವುದು ಒಂದು ಕಚ್ಚೆ.

ನಂತರ ಬೆನ್ನ ಹಿಂದೆ ಒಂದು ಕಚ್ಚೆ. ಮುಂದೆ ಜೋತಾಡುತ್ತಿರುವ ಭಾಗವನ್ನು ಹೊಟ್ಟೆಯ ಎಡಭಾಗದಲ್ಲಿ ಸಿಕ್ಕಿಸಿಕೊಳ್ಳುವುದು.

ಹೊಟ್ಟೆಯ ಎಡ–ಬಲಭಾಗಗಳು, ಬೆನ್ನ ಹಿಂದೆ, ನಾಭಿಯ ಮೇಲೆ ಎರಡೂ ತುದಿಗಳನ್ನು ಸಿಕ್ಕಿಸಿಕೊಳ್ಳುವುದು. ಹೀಗೆ ಪಂಚಕಚ್ಚೆ.

- ***ಆರ್ದ್ರವಸ್ತ್ರ ಮಹಾನಿಷಿದ್ಧ :***

  ಒದ್ದೆ ಬಟ್ಟೆವುಟ್ಟು ಮಾಡಿದ ಪಾಕವನ್ನು ವಾತಾಪಿಯು ಅಪಹರಿಸುವನು.

  **ಯಾ ಆರ್ದ್ರವಸ್ತ್ರೇಣ ಕುರುತೇ ಪಚನಂ ದುರ್ಮತೀ ಸತೀ ।**
  **ತದನ್ನಂ ತಾಮಸಂ ಜ್ಞೇಯಂ ನೈರ್ಋತಂ ನ ತು ದೈವಿಕಮ್ ॥**

  *– ಲೌಗಾಕ್ಷಿ*

- ***ಗುರುಮಂತ್ರ ಜಪಾದಿಗಳನ್ನು ಒದ್ದೆ ಬಟ್ಟೆವುಟ್ಟು ನಡೆಸಬಾರದು :***

  ಒದ್ದೆ ಬಟ್ಟೆವುಟ್ಟು ಜಪಾದಿ ನಡೆಸುವವಳನ್ನು ನೋಡಿದವನು ಸಚೇಲ ಸ್ನಾನ ಮಾಡಬೇಕು. ಅವಳ ಜಪಾದಿಕರ್ಮ ರಾಕ್ಷಸರು ಒಯ್ಯುವರು.

  **ಆರ್ದ್ರವಾಸಾಸ್ತು ಯಃ ಕುರ್ಯಾದ್ ಜಪಮಂತ್ರಪ್ರಗಿರಹಾನ್ ।**
  **ಸರ್ವಂ ತದ್ ರಾಕ್ಷಸಂ ವಿದ್ಯಾತ್ ಕರ್ಮಜಾತಂ ಚ ಯತ್ಕೃತಮ್ ॥**

  *– ಆಪಸ್ತಂಬರು*

- ***ತಲೆಯ ಕೂದಲಿನಿಂದ ನೀರು ಸೋರುತ್ತಿರಬಾರದು :***

  ತಲೆಗೆ ಸ್ನಾನ ಮಾಡಿದ ಸ್ತ್ರೀಯು ತಲೆಯ ನೀರನ್ನು ಚೆನ್ನಾಗಿ ಒರೆಸಿಕೊಂಡು ತಲೆಯಿಂದ ನೀರು ಜೊಟ್ಟದಂತೆ ಒರೆಸಿಕೊಳ್ಳಬೇಕು.

- ***ಧೂಪದಿಂದ ಒಣಗಿಸುವುದು ವಿಹಿತವೆ :***

  ಸಾಂಬ್ರಾಣಿಯನ್ನು ಅಗ್ನಿಗೆ ಹಾಕಿ ತಲೆಯ ನೀರನ್ನು ಒಣಗಿಸಬಹುದು. ಆದರೆ ನೇರವಾಗಿ ಅಗ್ನಿಯಿಂದ ತಲೆ ಒಣಗಿಸಬಾರದು.

  **ಗುಗ್ಗುಲೈರಗ್ನಿಸಂಯುಕ್ತಯರಾಶರ್ದ್ರಭಾವಮಪೋಹಯೇತ್ ।**

- ***ಸಾಲಿಗ್ರಾಮಾದಿ ಪೂಜೆ ದರ್ಶನ :***

  ಪತಿಪುತ್ರ ಮೊದಲಾದವರು ಸಂಸ್ಥಾನಾಧಿಪತಿಗಳು ಮಾಡುವ ಪೂಜೆಯನ್ನು ನೋಡುವ ಅಧಿಕಾರವನ್ನು ನಿಷೇಧಿಸಿಲ್ಲ. ಪೂಜಾದರ್ಶನದಿಂದಲೇ ಸ್ತ್ರೀಯರಿಗೆ ಪೂಜಾಫಲ ಲಭಿಸುತ್ತದೆ.

**ಪೂಜಾದರ್ಶನ ಮಾತ್ರೇಣ ಸ್ತ್ರೀಣಾಂ ಪೂಜಾಫಲಂ ತ್ವಿತಿ ।**

ಪೂಜೆ ನಿಲ್ಲುವ ಸಂದರ್ಭದಲ್ಲಿ ಸ್ತ್ರೀಯರು ಬೇರೆಯವರಿಂದ ಪೂಜೆ ಮಾಡಿಸಬಹುದು. ಪೂಜೆಯವರು ಲಭಿಸದಿದ್ದಾಗ ತಾವೇ ದೇವರ ಪೆಟ್ಟಿಗೆಯ ಮೇಲೆ ಪುಷ್ಪಾದಿಗಳನ್ನು ಹಾಕಬಹುದು, ಸ್ಪರ್ಶಿಸಬಹುದು.

**ದೂರದೇವಾಸ್ಪೃಶನ್ ಪೂಜಾಂ ಪ್ರಕುರ್ಯಾತ್ ಶಿವಕೃಷ್ಣಯೋಃ ।**

- ***ಸ್ತ್ರೀಯರ ಅರ್ಚನ ವಿಧಿ :***

ಸ್ತ್ರೀಯರು ವೇದಮಂತ್ರಗಳನ್ನು ಓಂಕಾರವನ್ನೂ ಪಠಿಸಬಾರದು. ಮಂತ್ರಾಂಗವಾಗಿ ಓಂಕಾರವನ್ನುಚ್ಚರಿಸದೆ ಶ್ರೀಕಾರದಿಂದ ಮಂತ್ರಜಪ ವಿಹಿತವಾಗಿದೆ. ಪುರಾಣಗಳಲ್ಲಿ ಹೇಳಿರುವ ರೀತಿಯಿಂದ ಗೌರೀ, ಲಕ್ಷ್ಮೀ, ಸರಸ್ವತ್ಯಾದಿಗಳ ಪೂಜೆಯನ್ನು ಮಾಡಬೇಕು. ಪತಿಯೊಂದಿಗೆ ಹೋಮಾದಿಗಳನ್ನು ಮಾಡುವಾಗ ವೇದೋಕ್ತ ಕರ್ಮದಲ್ಲಿಯೂ ಅಧಿಕಾರವುಂಟು.

**ಪುರಾಣ ವಿಧಿನಾ ಸ್ತ್ರೀಣಾಂ ಕರ್ತವ್ಯಂ ದೇವತಾರ್ಚನಮ್ ।**
**ತಾಸಾಂ ತು ಪತಿದೇವಾನಾಮಧಿಕಾರಂ ತು ವೈದಿಕೇ ॥ – ಸ್ಮೃತಿ**

- ***ಸ್ತ್ರೀಯರು ಶಂಖ ಊದಬಾರದು :***

ದೇವರ ಪೂಜೆ ಶಂಖವು ಪ್ರಧಾನ ಪಾತ್ರವಹಿಸುತ್ತದೆ. ಶಂಖದಲ್ಲಿ ಬಲಮುರಿ– ಎಡಮುರಿ ಎಂದು ದ್ವಿವಿಧ. ಬಲಮುರಿ ಶಂಖವು ಸಾಲಿಗ್ರಾಮದಂತೆಯೇ ಭಗವಂತನ ಸನ್ನಿಧಾನವುಳ್ಳದಾಗಿದೆ. ಆದರೆ ಶಂಖವನ್ನು ಮುಟ್ಟಿದರೆ ದೋಷವಿಲ್ಲ. ಎಡಮುರಿ ಶಂಖವಾದರು ಲಕ್ಷ್ಮೀದೇವಿಯ ಸನ್ನಿಧಾನವಿದ್ದು ಅದರ ಪೂಜೆಯನ್ನು ಹೇಳಿಲ್ಲ. ಹಾಗೆಯೇ ಪೂಜಾಕಾಲದಲ್ಲಿ ಶಂಖವನ್ನು ಸ್ತ್ರೀಯರು ಊದುವುದೂ ನಿಷಿದ್ಧವಾಗಿದೆ. ಉಡುಪಿಯ ಸಂಪ್ರದಾಯದಲ್ಲಿ ಸ್ತ್ರೀಯರು ಶಂಖವನ್ನೂದುವರು. ಅದು ಆ ದೇಶದ ಆಚಾರದಲ್ಲಿದೆ.

- ***ವಿಷ್ಣು ಭಕ್ತರಲ್ಲದವರಿಂದ ಉಪದೇಶ ವ್ಯರ್ಥ :***

ವಿಷ್ಣುಭಕ್ತನಲ್ಲದವರಿಂದ ತೆಗೆದುಕೊಂಡ ಮಂತ್ರವು ಫಲ ನೀಡಲು ಅಸಮರ್ಥವಾಗಿರುತ್ತದೆ. ಈಗಾಗಲೇ ಅವೈಷ್ಣವನಿಂದ ಉಪದೇಶ ತೆಗೆದುಕೊಂಡಿದ್ದರೆ ಪುನಃ ವೈಷ್ಣವನಿಂದ ಪಡೆಯಬೇಕು.

**ಅವೈಷ್ಣವೋಪದಿಷ್ಟೇ ಮಂತ್ರೇಣ ನ ಪರಾ ಗತಿಃ ।**
**ಪುನಶ್ಚ ವಿಧಿನಾ ಸಮ್ಯಕ್ ವೈಷ್ಣವಾತ್ ಗ್ರಾಹಯೇತ್ ಮನುಮ್ ॥**
*– ಪದ್ಮ*

**ವಿಷ್ಣುಮಂತ್ರ ನಗೃಹ್ಣೀಯಾತ್ ವಿಷ್ಣುಭಕ್ತಿವಿಹೀನತಃ ॥**

- ***ಸ್ತ್ರೀಯರು ಯಾವ ಮಂತ್ರ ಜಪಿಸಬೇಕು :***

ಸಾಮಾನ್ಯವಾಗಿ ಶ್ರೀಕೃಷ್ಣಮಂತ್ರವನ್ನು ಜಪಿಸುವ ಪದ್ಧತಿಯಿದೆ. ಆದರೂ ರಾಮಮಂತ್ರ, ಗೋಪಾಲಮಂತ್ರ, ದಾಮೋದರ ಮಂತ್ರ ಮೊದಲಾದ ಸೌಮ್ಯಮೂರ್ತಿಗಳ ಮಂತ್ರಗಳನ್ನು ಸ್ತ್ರೀಯರು ಉಪದೇಶ ಪಡೆದು ಜಪಿಸಬಹುದು. ಈ ಮಂತ್ರಗಳನ್ನು ಜಪಿಸುವಾಗ ಮೂರು ಕ್ರಮಗಳಿವೆ.

**ಸೌಮ್ಯರೂಪಾಶ್ಚ ರಾಮಾದ್ಯಾಃ ಮನವಸ್ತೇ ಯಥಾರುಚಿ ।**

- ***ಜಪದಲ್ಲಿ ಮೂರು ವಿಧತೆ :***

1) ಶ್ರೀಕಾರ ಮೊದಲು ಕಡೆಯಲ್ಲಿ ನಮಃ ವಿರುವ ಹಾಗೆ ಜಪಿಸುವುದು. ಶ್ರೀಂ ಕೃಷ್ಣಾಯ ನಮಃ ಶ್ರೀಂ.

2) ಮಂತ್ರಗಳಿಗೆ ಕೇವಲ ಶ್ರೀಕಾರ ಸೇರಿಸಿ ಹೇಳುವುದು.

   ಶ್ರೀರಾಮ, ಶ್ರೀಕೃಷ್ಣ, ಶ್ರೀನಾರಾಯಣ ಇತ್ಯಾದಿ

3) ಶ್ರೀಕಾರವೂ ಇಲ್ಲದ, ನಮಃ ಶಬ್ದವೂ ಇಲ್ಲದೆ ಕೇವಲ ಗೋವಿಂದ, ನಾರಾಯಣ, ಮುಕುಂದ, ಅಚ್ಯುತ ಹೀಗೆ ಸಂಬುದ್ಧಿಯನ್ನಾಗಿ ಮಾಡಿ ಜಪಿಸುವುದು.

4) ಶ್ರೀಕಾರ ಮೊದಲು, ನಂತರ ಮಂತ್ರದ ಬೀಜಾಕ್ಷರ, ಮಂತ್ರ – ನಮಃ ಎಂದು ಕಡೆಯಲ್ಲಿ ಹೇಳಿ ಜಪಿಸುವುದು.

**ಶ್ರೀಂ – ಕ್ಲೀಂ – ಕೃಷ್ಣಾಯ – ನಮಃ ಶ್ರೀಂ** ಎಂದಾಗುತ್ತದೆ. ಪದ್ಧತಿಯಲ್ಲಿ ಇದೇ ಜಾರಿಯಲ್ಲಿದೆ.

- ***ಸ್ತ್ರೀಯರಿಗೆ ವಿಶೇಷ ರಿಯಾಯಿತಿ :***

ಸ್ತ್ರೀಯರು **ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ** ಎಂದು ಜಪ ಮಾಡುವಾಗ ಅಂಗನ್ಯಾಸ – ಕರನ್ಯಾಸ – ಧ್ಯಾನಾದಿಗಳನ್ನು ಮಾಡಿಕೊಂಡು ಜಪಿಸಬೇಕು. ಆಂತರಿಕ – ಬಾಹ್ಯ ಶುದ್ಧಿಯಿರಬೇಕು. ಅಡಿಗೆ ಮಾಡುತ್ತಿರುವಾಗ, ದೇವತಾ

ಕಾರ್ಯ ಮಾಡುತ್ತಿರುವಾಗ ಶ್ರೀಕಾರ ಮಾತ್ರ ಸೇರಿಸಿ ಜಪಿಸುತ್ತಿರಬಹುದು. ಶ್ರೀರಾಮ, ಶ್ರೀಕೃಷ್ಣ ಇತ್ಯಾದಿಯಾಗಿ.

ಪಾತ್ರೆ ತೊಳೆಯುವುದು – ನೆಲ ಒರಸುವುದು – ವಸ್ತ್ರಪ್ರಕ್ಷಾಲನೆ ಮೊದಲಾದ ಗೃಹಕೃತ್ಯ ನೆರವೇರಿಸುತ್ತಿರುವಾಗ ರಾಮ, ಕೃಷ್ಣ, ಗೋವಿಂದ, ಮುಕುಂದ ಇತ್ಯಾದಿಯಾಗಿ ಸಂಬೋಧನಾ ರೂಪವಾಗಿಯೂ ಜಪಿಸುತ್ತಿರಬಹುದು.

**ನಿರೋಂಕಾರಾಶ್ಚ ನಿರ್ಬೀಜಾ ನಮಃ ಪೂರ್ವಾ ನಮೋಂತಕಾಃ ।**
**ಶ್ರೀಶಬ್ದ ಪೂರ್ವಕಾ ವಾಽಪಿ ಸಂಧ್ಯಂತಾಶ್ಚಯೇ ಸ್ಮೃತಾಃ ॥**

– ವಿಷ್ಣು ರಹಸ್ಯ

- ***ಪ್ರಾತಃಕಾಲೀನ ಜಪ :***

1) ಪ್ರಾತಃ ಕಾಲದಲ್ಲಿ ಪಾತ್ರೆ ತೊಳೆಯುವುದು, ಗುಡಿಸುವುದು, ಒರಸುವುದು ಇತ್ಯಾದಿಯಾಗಿ ಸ್ನಾನ ಮಾಡದೆ ಮಾಡುವ ಕಾರ್ಯಗಳ ಮಧ್ಯದಲ್ಲಿ ರಾಮ, ಕೃಷ್ಣ, ಗೋವಿಂದ ಇತ್ಯಾದಿ ಕೇವಲ ಸಂಬುದ್ಧ್ಯಂತವಾಗಿ ಮಾತ್ರ ಹೇಳುತ್ತಿರಬೇಕು.

2) ಸ್ನಾನಾನಂತರ ಜಪ : ಸ್ನಾನವಾಗಿ ಶುದ್ಧಿಯಾದ ಮೇಲೆ ಆಸನ ಶುದ್ಧಿ ಮಾಡಿಕೊಂಡು ನಿಶ್ಚಲ ಮನಸ್ಸಿನಿಂದ 108ಕ್ಕೆ ಕಡಮೆಯಿಲ್ಲದಂತೆ ***ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ*** ಎಂದು ಶ್ರೀಕಾರ – ಬೀಜಾಕ್ಷರ ನಾಮೋಂತವಾಗಿ ಜಪಿಸಬೇಕು.

- ***ಮಲಗುವಾಗ ಪ್ರಾರ್ಥನೆ :***

ಶಯನ ಕಾಲದಲ್ಲಿ ಪತಿಯೊಂದಿಗೆ ಇರುವಾಗ ಶ್ರೀಕಾರ ಸಹಿತ ರಾಮಕೃಷ್ಣ ಮಂತ್ರಗಳನ್ನು ಪಠಿಸುತ್ತಿರಬೇಕು.

ಶ್ರೀರಾಮ, ಶ್ರೀಕೃಷ್ಣ ಇತ್ಯಾದಿ

ಕಥಾ ಶ್ರವಣ ಮಾಡುತ್ತಿರುವಾಗ ಬೀಜಾಕ್ಷರವಿಲ್ಲದೆ ಶ್ರೀಕಾರ ಪೂರ್ವಕವಾಗಿ ಮನಸ್ಸಿನಲ್ಲಿಯೇ ***ಶ್ರೀಂ ಕೃಷ್ಣಾಯ ನಮಃ ಶ್ರೀಂ*** ಎಂದು ಜಪಿಸುತ್ತಲೇ ಭಗವಂತನ ಕಥಾ ಶ್ರವಣ ಮಾಡಬೇಕು.

ಆರಿಹೋದ ದೀಪ ಬಂದಾಗ, ಕಳೆದ ವಸ್ತು ಸಿಕ್ಕಾಗ, ಶ್ರೀಪೂರ್ವಕ ರಾಮಾದಿ ನಾಮಗಳನ್ನು ಹೇಳಬೇಕು.

ಶ್ರೀರಾಮ – ದೀಪಬಂತು, ಶ್ರೀಕೃಷ್ಣ – ಸರ ಸಿಕ್ಕಿತು ಇತ್ಯಾದಿ.

- ***ಅನಾರೋಗ್ಯದಿಂದ ಬಳಲುತ್ತಿರುವಾಗ :***

**ನಮೋ ರಾಮಾಯ, ನಮೋ ಕೃಷ್ಣಾಯ, ನಮೋ ವಾಸುದೇವಾಯ** ಇತ್ಯಾದಿಯಾಗಿ 'ಈ ಶರೀರ ನನ್ನದಲ್ಲ ರಾಮನದು' ಎಂಬರ್ಥ ಬರುವಂತೆ ಪ್ರಾರ್ಥಿಸಬೇಕು. (ನಮ ಎಂಬುದು ನ + ಮಮ) ಎಂಬುದರ ಸಂಕ್ಷೇಪ.

- ***ದರ್ಪಣ ಉಪಯೋಗ :***

ಸ್ತ್ರೀಯರು ಗೋಪಿಚಂದನ ಕುಂಕುಮಾದಿಗಳ ಧಾರಣೆ ಕಾಲದಲ್ಲಿ ಕನ್ನಡಿಯನ್ನು ನೋಡಿ ಧರಿಸಬೇಕು. ದರ್ಪಣವು ಮಂಗಳವಸ್ತುವಾಗಿದ್ದು ಯತಿ, ಬ್ರಹ್ಮಚಾರಿ, ವಿಧವೆಯರಿಗೆ ಹೊರತು ಗೃಹಸ್ಥಾಶ್ರಮಿಗಳಿಗೆ ಪವಿತ್ರವಾಗಿದೆ.

**ವೀಕ್ಷ್ಯಾದರ್ಶೇ ಜಲೇ ವಾಥ ಪ್ರಯತ್ನೇನೈವ ಧಾರಯೇತ್ ।**

- ***ಕುಂಕುಮ ದೇವತೆಗಳು :***

ಲಕ್ಷ್ಮೀದೇವಿ, ಭಾರತೀ, ಸರಸ್ವತೀ, ಪಾರ್ವತೀ ಮತ್ತು ಅರುಂಧತೀದೇವಿಯರು ಅಭಿಮಾನಿ ದೇವತೆಗಳು. ಯಾವುದೇ ಸ್ತ್ರೀಯು ತನ್ನ ದೌರ್ಭಾಗ್ಯದಿಂದ ಪತಿಯನ್ನು ಕಳೆದುಕೊಂಡಾಗ ಇವರ ಮಟ್ಟಿಗೆ ಈ ಮುತ್ತೈದೆಯರು ಇವರು ಮುಟ್ಟುವ ಕುಂಕುಮದಿಂದ ಹೊರಬರುತ್ತಾರೆ. ಹೀಗಾಗಿ ಅವರ ಮಟ್ಟಿಗೆ ಹೊರ ಹೊರಡುವರು.

- ***ತಾಂಬೂಲ ದಾನ :***

ಮೊರಗಳ ಮೇಲೆ ವಸ್ತ್ರಗಳನಿಟ್ಟು ಸದಕ್ಷಿಣಾಕ ಬಾಗಿಣ ದಾನ ಮಾಡಬೇಕು.

- ***ದೀಪದಾನ :***

ಬಾಗಿಣದಾನ ಕಾಲದಲ್ಲಿ ಬೆಳ್ಳಿಯ ಎರಡು ದೀಪಗಳನ್ನೂ ಬೆಳಗಿನ ದಾನ ಮಾಡುವುದು ವಿಶೇಷ ಪುಣ್ಯದಾಯಕ ಇದರಿಂದ ಕುಲದೀಪಕ ಜನಿಸುವನು.

- ***ಬಾಗಿಣದಾನ ಪಡೆದದ್ದನ್ನೇ ದಾನ ಮಾಡಬಾರದು :***

ಒಬ್ಬರಿಂದ ದಾನ ಪಡೆದದ್ದನ್ನು ದಾನ ಪಡೆದವರೆ ಉಪಯೋಗಿಸಬೇಕು. ಸಶಕ್ತರು ಅದನ್ನೇ ಮತ್ತೊಬ್ಬರಿಗೆ ದಾನ ನೀಡಿದರೆ ಅರ್ಧ ಫಲ ಮಾತ್ರ ಲಭಿಸುತ್ತದೆ. ಮಾಂಗಲ್ಯವಸ್ತುಗಳಿಗೆ, ವಸ್ತ್ರಗಳಿಗೆ ಈ ನಿಯಮವಿರುವುದಿಲ್ಲ.

**ಅನ್ಯೇಷಾಂ ನಯವ ದಾತವ್ಯಂ ಸ್ವೀಕೃತಂ ವಾಯನಂ ತು ತತ್ ।**
**ಸರ್ವತ್ರ ನಿಯಮೋ ಹ್ಯೇವಂ ಪುರುಷಾಣಾಂತು ವೈಭವೇ ॥**

- ***ನ್ಯಾಯ ಸಂಪಾದಿತವಾಗಿರಬೇಕು :***

ಬಾಗಿಣವನ್ನು ಹದಿನಾರು ದಂಪತಿಗಳಿಂದಾರಂಭಿಸಿ ನೂರೆಂಟು ದಂಪತಿಗಳಿಗೆ ನೀಡಬಹುದು. ಆದರೆ ನ್ಯಾಯ ಮಾರ್ಗದಿಂದ ಸಂಪಾದಿತವಾದ ಧನದಿಂದ ದಾನ ಮಾಡಬೇಕು. ಹರಿಪ್ರೀತನಾಗಲಿ ಎಂಬ ಭಾವನೆಯಿಂದ ಮಾಡಬೇಕು.

**ನ್ಯಾಯೋಪಾರ್ಜಿತ ವಿತ್ತೇನ ದಾತವ್ಯಂ ಸರ್ವದೈವ ಹಿ ।**
**ಕರ್ತವ್ಯೋ ವಿನಿಯೋಗಶ್ಚ ಈಶ ಪ್ರೀತ್ಯರ್ಥ ಹೇತ ವೇ ॥**

*– ಸ್ಕಾಂ. 12/32*

- ***ದಾನದ ಉತ್ತಮಾಧಮತೆ :***

ಬಾಗಿಣವನ್ನು ನಾವೇ ಅವರಿರುವಲ್ಲಿಗೆ ಹೋಗಿ ನೀಡುವುದು ಉತ್ತಮ. ಮನೆಗೆ ಕರೆದು ಕೊಡುವುದು ಮಧ್ಯಮ, ಕೇಳಿದಾಗ ಮಾತ್ರ ಕೊಡುವುದು ಅಧಮ. ಅವರು ಮಾಡಿದ ಸೇವಾಶ್ರಮಗಳಿಗೆ ಬದಲಾಗಿ ನೀಡುವುದು ನಿಷ್ಫಲವೇ ಸರಿ.

**ಅಭಿಗಮ್ಯೋತ್ತಮಂ ದಾನಮಾಹೈಯ್ಯೆವ ತು ಮಧ್ಯಮಂ ।**
**ಅಧಮಂ ಯಾಚಮಾನಾಯ ಸೇವಾದಾನಂ ತು ನಿಷ್ಫಲಮ್ ॥**

*– ಮನು 11/10*

- ***ದಾನದ ದಿಕ್ಕು :***

ಪೂರ್ವಾಭಿಮುಖವಾಗಿ ದಾನ ಮಾಡಬೇಕು. ಉತ್ತರಾಭಿಮುಖವಾಗಿ ಸ್ವೀಕರಿಸಬೇಕು. ಇದರಿಂದ ಆಯುರಾರೋಗ್ಯಭಿವೃದ್ಧಿಯು.

**ದದ್ಯಾತ್ ಪೂರ್ವಾಭಿಮುಖೋ ದಾನಂ ಗೃಹ್ಣೀಯತ್ ಉತ್ತರಾಮುಖಃ।**
**ಆಯುರ್ವಿವರ್ಧತೆ ದಾತುಃ ಗೃಹೀತುಃ ಕ್ಷೀಯತೇ ನ ನತ್ ॥**

*– ಅಗ್ನಿ 209/21*

- ***ಶ್ರೀಕೃಷ್ಣಮಂತ್ರ ಅತ್ಯಂತ ಪ್ರಿಯ :***

ರಾಮ–ಕೃಷ್ಣ–ಮತ್ಸ್ಯಾದಿ, ಧನ್ವಂತರಿ ಮೊದಲಾದ ಮಂತ್ರ ಜಪಗಳನ್ನು ವಿಷ್ಣುರಹಸ್ಯ ತಿಳಿಸಿದ್ದರೂ, ಸ್ಕಂಧಪುರಾಣವು "ನನ್ನ ಕೋಟಿ ಕೋಟಿ ನಾಮವು ಕಲಿಯುಗದಲ್ಲಿ ಕೃಷ್ಣವೆಂಬ ನಾಮವು ನನಗೆ ಅತ್ಯಂತ ಪ್ರಿಯವಾಗಿದೆ. ಅದರ ಜಪದಿಂದ ಶೀಘ್ರವಾಗಿ ನನ್ನ ಪ್ರಸಾದವಾಗುತ್ತದೆ" ಎಂದು ಶ್ರೀಕೃಷ್ಣನು ತಿಳಿಸಿರುವನು.

**ಶ್ರೀಕೃಷ್ಣೇತಿ ಕೃತೋಚ್ಚಾರೇ ಪ್ರೀತಿರೇವಾಧಿಕಾ ಮಮ ॥**

ಆದ್ದರಿಂದ ಶ್ರೀಕೃಷ್ಣ ಮಂತ್ರವನ್ನು ಚೆನ್ನಾಗಿ ಜಪಿಸಿದರೆ ಅಷ್ಟೇ ಸಾಕು ಸ್ತ್ರೀಯರಿಗೆ ತಾರಕ ಮಂತ್ರವಾಗುತ್ತದೆ.

- ***ಶ್ರೀಕೃಷ್ಣಮಂತ್ರ ಜಪವೆಷ್ಟು?***

ಸ್ತ್ರೀಯರು ಕೃಷ್ಣ ಮಂತ್ರದಲ್ಲಿ ಆರು ಅಕ್ಷರಗಳಿದ್ದು 6 ಲಕ್ಷ ಜಪಿಸಬೇಕು. ಜಪಾ ನಂತರ 60 ಸಾವಿರ ಬಾರಿ ಹಾಲಿನಿಂದ ತರ್ಪಣ ಬಿಡಬೇಕು. ಆರು ಸಾವಿರ ಹೋಮ ಮಾಡಬೇಕು. (ಇದನ್ನು ಪತಿಯೇ ಮಾಡುವುದು). ಆರುನೂರು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ 60 ರೂ.ಗಳಿಗೆ ಕಡಿಮೆ ಇಲ್ಲದಂತೆ ದಕ್ಷಿಣೆ ನೀಡಿ ಕೃಷ್ಣಾರ್ಪಣ ಮಾಡಬೇಕು. ಜೀವನದಲ್ಲಿ ಎಷ್ಟು ಬಾರಿಯಾದರು ಹೀಗೆ ಜಪ ತರ್ಪಣ ಹೋಮ – ಭೋಜನ ದಕ್ಷಿಣೆಗಳನ್ನು ಆಚರಿಸಬಹುದಾಗಿದೆ. ಶಕ್ತಿಗೆ ತಕ್ಕಂತೆ ಮಾಡಲೂಬಹುದು.

- ***ರಾಮಮಂತ್ರ ಜಪ :***

ಶ್ರೀಕೃಷ್ಣ ಮಂತ್ರದಂತೆ ರಾಮಮಂತ್ರದಲ್ಲಿ ಸ್ತ್ರೀಯರಿಗೆ ಅಧಿಕಾರವಿರುತ್ತದೆ. ರುದ್ರದೇವರು – ಪಾರ್ವತಿಯರು ನಿತ್ಯವೂ ಜಪಿಸುವ ಮಂತ್ರವಿದು. ಇದರ ಜಪದಿಂದ ವಿಷ್ಣು ಸಹಸ್ರನಾಮ ಫಲವುಂಟಾಗುತ್ತದೆ.

ಇದನ್ನು ಸ್ತ್ರೀಯರು – ಪತಿವ್ರತೆಯರು – ಪ್ರತಿಲೋಮ – ಅನುಲೋಮ ಜಾತಿಯವರು ಅಷ್ಟೇಕೆ? ಚಂಡಾಲರೂ ಸಹ ಜಪಿಸಬಹುದಾದ ರಾಮಮಂತ್ರ.

**ಸ್ತ್ರಿಯಃ ಪತಿವ್ರತಾಶ್ಚಾನ್ಯೇ ಪ್ರತಿಲೋಮಾನುಲೋಮಜಾಃ ।**
**ಲೋಕಾಃ ಚಂಡಾಲ ಪರ್ಯಂತಂ ಸರ್ವೇಪ್ಯತ್ರಾದಿಕಾರಿಣಃ ॥**

– *ಅಗಸ್ತ್ಯಸಂಹಿತಿ*

(ಅತ್ರ = ರಾಮಮಂತ್ರೇ = ವ್ಯಾಖ್ಯಾನ)

ಸ್ತ್ರೀ ಶೂದ್ರಾದಿಗಳು ಸಹಸ್ರನಾಮವನ್ನು ಪಠಿಸದೆ ಪಾರಾಯಣ ಮಾಡುವುದನ್ನು ಕೇಳಿದರೆ ಪಠಿಸಿದ ಫಲ ಲಭಿಸುತ್ತದೆ.

**ಶ್ರವಣ ಮಾತ್ರಾಧಿಕಾರೇಣ ಪಾಠಾಪ್ರಸಕ್ತೇಃ ।**
**ಶ್ರೋತವ್ಯಮೇವ ಶೂದ್ರೇಣ ನಾಧ್ಯೇತವ್ಯಂ ಕದಾಚನ ॥**

ಕಾಯಾ – ಮನಸಾ – ವಾಚಾ ತ್ರಿಕರಣ ಶುದ್ಧವಿರುವ ಬ್ರಾಹ್ಮಣ ನಾರಿಯರಿಗೆ ವಿಷ್ಣುಸಹಸ್ರನಾಮ ಪಠಿಸಲು ಅಧಿಕಾರವನ್ನು ವಾಯುಪುರಾಣ ತಿಳಿಸಿದೆ.

**ಯಾ ಬ್ರಾಹ್ಮಣೀ ನಾರೀ ತಸ್ಯಾಃ ಗ್ರಂಥ ಪುರಸ್ಸರ ಮಪಿ ।**

*– ವಾಯು –17ಅ.*

- ***ಲಕ್ಷ್ಮೀದೇವಿ, ಗೌರೀಪೂಜೆ :***

ಮುತ್ತೈದೆಯರು ಲಕ್ಷ್ಮೀದೇವಿ, ದುರ್ಗೆ, ಗೌರೀ ಮೊದಲಾದ ಸಣ್ಣ ಪ್ರತಿಮೆಗಳನ್ನು ಪೂಜಿಸಿದರೆ ದೋಷವಿಲ್ಲ.

- ***ತುಳಸೀ ಪೂಜೆ :***

ದಂತಧಾವನ ಮಾಡಿದ ನಂತರ ಜಡೆಯನ್ನು ಹೆಣೆದುಕೊಂಡು ಸ್ನಾನ ಮಾಡಬೇಕು. ಮಡಿ ವಸ್ತ್ರಧರಿಸಿ ಕುಂಕುಮಾಂಕೃತಳಾಗಿ, ತುಲಸಿಗೆ ನೀರೆರೆದು, ಅರಿಷಿಣ–ಕುಂಕುಮ–ಪುಷ್ಪಗಳನ್ನು ಅರ್ಪಿಸಿ, ***ತುಲಸ್ಯೈ ನಮಃ, ಹರಿಪ್ರಿಯಾಯೈ ನಮಃ*** ಎಂದು ತುಳಸೀ ಪೂಜೆ ಮಾಡಬೇಕು. ನೈವೇದ್ಯಕ್ಕಾಗಿ ಕಲ್ಲು ಸಕ್ಕರೆ, ಒಣದ್ರಾಕ್ಷಿ, ಖರ್ಜೂರಾದಿಗಳನ್ನಾಗಲಿ ಹಣ್ಣುಗಳನ್ನಾಗಲೀ ಅರ್ಪಿಸಬೇಕು.

- ***ನೂರೆಂಟು ಪ್ರದಕ್ಷಿಣೆ :***

ಶುಕ್ರವಾರದಂದು ತುಳಸಿಗೆ ಸ್ತ್ರೀಯರು ನೂರೆಂಟು ಪ್ರದಕ್ಷಿಣೆ ಹಾಕಬೇಕು. ಇದರಿಂದ ದೀರ್ಘ ಸೌಮಾಂಗಲ್ಯ ಪ್ರಾಪ್ತಿಯೂ.

**ಅಷ್ಟೋತ್ತರ ಶತಃ ಕಾರ್ಯಂ ಸ್ತ್ರೀಭಿರ್ಭಕ್ತ್ಯಾ ಪ್ರದಕ್ಷಿಣಮ್ ।**
**ಸೌಮಾಂಗಲ್ಯಾಭಿವೃದ್ಧ್ಯರ್ಥಂ ಭೃಗುವಾರೇ ವಿಶೇಷತಃ ॥**

- ***ಬೃಂದಾವನ – ತುಳಸಿ :***

ಬೃಂದೆಯು ಬೇರೆ, ತುಳಸೀ ಬೇರೆ. ಬೃಂದಾವನದಲ್ಲಿ ತುಳಸಿಯಿಂದ

ಕೂಡಿದ ಭಗವಂತನ ಸನ್ನಿಧಾನವಿರುತ್ತದೆ. ಅಂತಹ ತುಳಸೀ ವೃಂದಾವನದ ಸುತ್ತಲೂ ಗೋಮಯದಿಂದ ಸಹಿತವಾದ ನೀರನ್ನು ಹಾಕಿ ಸ್ವಚ್ಛಗೊಳಿಸಿ, ರಂಗೋಲಿ–ಕೆಮ್ಮಣ್ಣು ಹಾಕಬೇಕು. ಇದರಿಂದ ಶ್ರೀಭೂದುರ್ಗೆಯರ ಸನ್ನಿಧಾನವುಂಟಾಗುತ್ತದೆ.

- ***ಶುಕ್ರವಾರದಂದು ಆರತಿ :***

ಶುಕ್ರವಾರದಂದು (ಏಕಾದಶಿ ಬಿಟ್ಟು) ಸಂಜೆ ದೇವರ ನಾಮಗಳನ್ನು, ಲಕ್ಷ್ಮೀಶೋಭನ ಪದ, ಮಧ್ವನಾಮಾದಿಗಳನ್ನು ಹೇಳಿಕೊಂಡು, ಕದಲಾರತಿಯನ್ನು ದೇವರಿಗೆ ಎತ್ತಿ, ತುಳಸಿಗೂ ಆರತಿ ಎತ್ತಬೇಕು.

- ***ದೀಪದಾನ :***

ಸೂರ್ಯ ಮುಳುಗುತ್ತಿದ್ದಂತೆ ತುಳಸಿಯ ವೃಂದಾವನದಲ್ಲಿ ಯಾರು ದೀಪವನ್ನು ಬೆಳಗುವರೋ ಅವರಿಗೆ ಸತ್ಸಂತಾನ – ಸೌಭಾಗ್ಯಾದಿಗಳನ್ನು ತುಳಸಿಯು ನೀಡುವಳು.

- ***ಪ್ರಯಾಣ ಮೊದಲು ತುಳಸಿ ನಮನ :***

ಮನೆಯ ಯಜಮಾನ ಗೃಹಿಣೀ ಮಕ್ಕಳು ತಮ್ಮ ಮನೆಯಿಂದ ಹೊರಗೆ ಹೋಗುವಾಗ ಶ್ರೀರಾಮ–ಸೀತೆ–ಲಕ್ಷ್ಮಣರ ಸ್ಮರಿಸುತ್ತಾ ತುಳಸಿಗೆ ಪ್ರದಕ್ಷಿಣೆ ಹಾಕಿ ಹೋದದ್ದಾದರೆ ಹೋಗುವ ಕಾರ್ಯ ನೆರವೇರುತ್ತದೆ.

**ಯಃ ಸ್ಮರೇತ್ ತುಲಸೀಂ ಸೀತಾಂ ರಾಮಂ ಸೌಮಿತ್ರೀಣಾ ಸಹ ।**
**ವಿನಿರ್ಜಿತ್ಯ ರಿಪೂನ್ ಸರ್ವಾನ್ ಪುನರಾಯಾತಿ ಕಾರ್ಯಕೃತ್ ॥**

- ***ಜಪದಲ್ಲಿ ಸ್ತ್ರೀಯರಿಗೆ ನ್ಯಾಸಾದಿಗಳು ಐಚ್ಛಿಕ :***

ಪತಿವ್ರತೆಯು ಪತಿ ಹಾಗೂ ಅವನ ತಂದೆ ತಾಯಿ ಮೊದಲಾದ ಬಂಧುಭಾಂಧವರ ಸೇವೆಯಲ್ಲಿ ತೊಡಗಿರಬೇಕು. ಆದರೆ ಸ್ತ್ರೀಗೆ ಪತಿಸೇವೆಯೊಂದೆ ಅಲ್ಲದೆ ತನ್ನದೆ ಆದ ಸಾಧನೆಯನ್ನೂ ಮಾಡುವುದಿದೆ ಎಂದು ದೇವಹೂತಿ – ಕಪಿಲ ಸಂವಾದದಲ್ಲಿ ತಿಳಿಸಲಾಗಿದೆ.

ಪತಿಸೇವೆಯು ಪ್ರಧಾನವಾದರೂ ಕೃಷ್ಣಾದಿ ಮಂತ್ರ ಜಪ – ತುಳಸೀ, ಗೌರಿ ಪೂಜೆ ಇತ್ಯಾದಿಗಳು ವಿಹಿತವಾಗಿವೆ. ಆದರೆ ಪತ್ಯಾದಿ ಸೇವೆಗಳನ್ನು ತೊರೆದು ಜಪಾದಿಗಳು ಯುಕ್ತವಲ್ಲ. ಈ ನಿಟ್ಟಿನಲ್ಲಿ ಸಂಕಲ್ಪ ಮಾಡಿ. ತನ್ನ

ದೈನಂದಿನ ಗೃಹಕೃತ್ಯ ಮಾಡುತ್ತಿರುವಾಗಲೇ ಮಂತ್ರಗಳ ಜಪಾದಿಗಳನ್ನು ನಡೆಸಬಹುದೆಂದು ಸಂಹಿತೆಗಳಲ್ಲಿ ಉಕ್ತವಾಗಿವೆ.

**ನ ನ್ಯಾಸೋ ಯೋಷಿತಾಂ ಚಾತ್ರ ನಧ್ಯಾನಂ ನ ಚ ಪೂಜನಮ್ ।**
**ಕೇವಲಂ ಜಪಮಾತ್ರೇಣ ಮಂತ್ರಾಃ ಸಿದ್ಧ್ಯಂತಿ ಯೋಷಿತಾಮ್ ॥**

**ಹು ಫಡಾದಿವಷಟ್ ಸ್ವಾಹಾ ವರ್ಜಿತಮ್ ಕೇಶವಾದಿಕಮ್ ।**
**ನ ಸ್ವರಃ ಪ್ರಣವೋಽಂಗಾನಿ ನಾಪ್ಯನ್ಯವಿಧಯಃ ಸ್ಮೃತಾಃ ।**
**ಸ್ತ್ರೀಣಾಂ ಚ ಶೂದ್ರಜಾತೀನಾಂ ಮಂತ್ರ ಮಾತ್ರೋಕ್ತಿರಿಷ್ಯತೇ ॥**

ಈ ಅಂಶವನ್ನು ಹೇಳಿದ್ದು ಬ್ರಾಹ್ಮಣ ಸ್ತ್ರೀಯನ್ನು ಹೊರತು ಇತರ ಸ್ತ್ರೀಶೂದ್ರಾದಿಗಳು ನ್ಯಾಸಾದಿಗಳನ್ನು ಮಾಡಬೇಕಿಲ್ಲ. ಕೇವಲ ರಾಮ–ಕೃಷ್ಣ ಮಂತ್ರ ಜಪಿಸಿದರೆ ಸಾಕು. ಆದರೆ ಬ್ರಾಹ್ಮಣ ಸುವಾಸಿನಿಯು ಓಂಕಾರ ಹೊರತು ಪಡಿಸಿ ಉಳಿದವುಗಳನ್ನು ಜಪಿಸಬೇಕು.

- ***ಜಪಸಿದ್ಧಿಯಾಗಬೇಕಾದರೆ ತ್ರಿಕರಣ ಶುದ್ಧಿ ಬೇಕು :***

ಮತ್ತೊಬ್ಬರು ಕೊಡದೆ ಇದ್ದರೂ ಸ್ವೀಕರಿಸುವುದು, ಮತ್ತೊಬ್ಬರಿಗೆ ಕಾರಣವಿಲ್ಲದೆ ತೊಂದರೆ ನೀಡುವುದು, ಪರಪುರುಷ ಸೇವೆ ಈ ಮೂರು 'ದೈಹಿಕ' ತ್ರಿವಿಧ ದೋಷಗಳು.

ಕಠಿಣವಾದ ಮಾತು, ಸುಳ್ಳು ಹೇಳುವುದು, ಲೋಭತನ, ಅರ್ಥವಿಲ್ಲದೆ ಮಾತನಾಡುವುದು, ಈ ನಾಲ್ಕು 'ವಾಙ್ಮಯ' ದೋಷಗಳು.

ಪರದ್ರವ್ಯಾಭಿಲಾಷೆ, ಮನಸ್ಸಿನಲ್ಲಿ ಕೆಟ್ಟ ಆಲೋಚನೆ, ತಾನು ಹೇಳಿದ್ದೆ ಸರಿ ಎಂಬ ದುರಾಭಿಮಾನ, ಇವು 'ಮಾನಸಿಕಾಪರಾಧಗಳು'.

ಇವುಗಳನ್ನು ಮಾಡದಿದ್ದರೆ ಸ್ತ್ರೀಯರಿಗೆ ಇದೊಂದೇ ದೊಡ್ಡ ತಪಸ್ಸು.

- ***ಭಗವದ್ಭಕ್ತರ ಅವಮಾನ :***

ಭಗವಂತನನ್ನು ಪೂಜಿಸಿದರೂ ಸಹ ಭಗವಂತನ ಭಕ್ತರನ್ನು ಪೂಜಿಸದಿರುವವರು ಡಾಂಭಿಕರು, ಭಗವಂತನ ಭಕ್ತರ ಕಾಲು ತೊಳೆದ ಸ್ಥಳವೇ 'ಮಹಾತೀರ್ಥ'ವೆನಿಸುವುದು.

**ಅರ್ಚಯಿತ್ವಾ ತು ಗೋವಿಂದಂ ತದೀಯಾನ್ ನಾರ್ಚಯೇತ್ತು ಯಃ।**
**ನ ಸ ಭಾಗವತೋ ಜ್ಞೇಯಃ ಕೇವಲಂ ದಾಂಭಿಕಃ ಸ್ಮೃತಃ ॥**

– *ಬೃಹನ್ನಾರದ*

- ***ಮನಸ್ಸೇ ಸರ್ವಕಾರಣ :***

ಬಂಧ–ಮೋಕ್ಷಗಳಿಗೆ ಮನಸ್ಸೇ ಕಾರಣವಾಗಿದ್ದು ಶುಭಾಶುಭಗಳಿಗೆ ಮನಸ್ಸೆ ಮೂಲವೆನಿಸಿದೆ. ಆ ಮನಸ್ಸನ್ನು ಕೆಟ್ಟದ್ದರಿಂದ ತೆಗೆದು ಶುಭ ಕಾರ್ಯದಲ್ಲಿ ಹಾಕಬೇಕು.

- ***ಪ್ರಾತಃ ಸ್ತೋತ್ರ :***

ರಾತ್ರಿಯ ಕಡೆಯ ಯಾಮದ ಮೂರನೇ ಮುಹೂರ್ತವೇ ಬ್ರಹ್ಮೀ ಮುಹೂರ್ತ. ಏಳಬೇಕಾದದ್ದು ಈ ಸಮಯದಲ್ಲಿಯೇ. ಬ್ರಹ್ಮದೇವನೆ ಅಭಿಮಾನಿಯು.

**ರಾತ್ರೇಃ ಪಶ್ಚಿಂಯಾಮಸ್ಯ ಮುಹೂರ್ತೋ ಯಃ ತೃತೀಯಕಃ ।**
**ಬ್ರಾಹ್ಮ ಸ ಇತಿ ವಿಜ್ಞೇಯಃ ವಿಹಿತೋ ಹಿ ಪ್ರಬೋಧನೆ ॥** –ವಿ.ಪ್ರ.

ಬ್ರಾಹ್ಮೀ ಮುಹೂರ್ತದಲ್ಲಿ ಮಾಡುವ ನಿದ್ರೆ ಪುಣ್ಯವನ್ನು ನಾಶ ಮಾಡುತ್ತದೆ. ಅನಾಸಕ್ತಿನಲ್ಲಿ ಮಲಗಿರುವವರು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

**ಬ್ರಾಹ್ಮೇ ಮುಹೂರ್ತೇ ಯಾ ನಿದ್ರಾ ಸಾ ಪುಣ್ಯಕ್ಷಯಕಾರಿಣೀ ।**
–ಸ್ಮೃ. ರತ್ನ

ಪ್ರಾತಃಕಾಲದಲ್ಲಿ ಎದ್ದು ***'ಕರಾಗ್ರೇ ವಸತೇ ಲಕ್ಷ್ಮೀಃ'***ಇತ್ಯಾದಿ ಹೇಳಿಕೊಂಡು, ಅದೇ ಕೈಯಿಂದ ತಲೆ, ಮುಖವನ್ನು ಸವರಿಸಿಕೊಂಡು, ತನ್ನ ಕೈಯಲ್ಲಿರುವ ಲಕ್ಷ್ಮ್ಯಾದಿಗಳನ್ನು ಸ್ಮರಿಸಬೇಕು.

- ***ಪ್ರಾತಃಕಾಲೀನ ಸ್ತೋತ್ರ :***

ಪ್ರಾತಃಕಾಲದಲ್ಲಿ ಪಠಿಸಬಹುದಾದ ***ಕರಾಗ್ರೇವಸತೇ, ಗಜೇಂದ್ರಮೋಕ್ಷ, ಸಮುದ್ರವಸನೇ ದೇವಿ. ಮಂಗಳಾಷ್ಟಕ*** ಇತ್ಯಾದಿ ಸ್ತೋತ್ರವನ್ನು ಮಾಡಿ ನಂತರ ಶೌಚ ಮಾಡಬೇಕು.

**ಬ್ರಾಹ್ಮೇ ಕಾಲೇ ಸಮುತ್ಥಾಯ ವಿಷ್ಣ್ವಾದೀನ್ ಸಂಸ್ಮರೇತ್ ತತಃ ।**
**ಪ್ರಾತಃ ಸ್ತೋತ್ರಂ ಮಂಗಲಾದಿ ಪಠಿತ್ವಾ ಶೌಚಮಾಚರೇತ್ ॥**
– ಅಂಗಿರಾ

- ***ಪ್ರಾತಃಕಾಲೀನ ವಸ್ತುಗಳ ದರ್ಶನ :***

**ಶ್ರೋತ್ರಿಯಂ ಸುಭಗಾಂ ಗಾಂಚ ಅಗ್ನಿಮಗ್ನಿಚಿತಂ ತಥಾ ।**
**ಪ್ರಾತರುತ್ಥಾಯ ಯಃ ಪಶ್ಯೇತ್ ಆಪದ್ಭ್ಯೋ ಸ ಪ್ರಮುಚ್ಯತೇ ॥**

ಈ ರೀತಿ ಪ್ರಾತಃಕಾಲದಿಂದ ಮಲಗುವವರೆಗೂ ಯಾವ ಪತಿವ್ರತೆಯು ಗೃಹ, ಪತಿ, ಗುರು-ಹಿರಿಯರು ಇವರ ಸೇವೆಯಲ್ಲಿಯೇ ತನ್ನನ್ನು ತೊಡಗಿಸಿಕೊಳ್ಳುವಳೋ ಅವಳಿಗೆ ಸಮಸ್ತ ದೇವತೆಗಳ ರಕ್ಷಾಕವಚವಿರುತ್ತದೆ. ದೇವತೆಗಳು ಸಂತುಷ್ಟರಾಗುವರು. ಸಕಲೇಷ್ಟಗಳನ್ನು ಕೇಳಿದ ಮಾತ್ರಕ್ಕೆ ನೀಡುವರು. ಆದ್ದರಿಂದ ಸಕಲ ಸ್ತ್ರೀಯರು ಅವರವರಿಗೆ ಹೇಳಿದ ಧರ್ಮಗಳನ್ನು ಭಕ್ತಿಯಿಂದ ಭಗವಂತನ ಆರಾಧನೆಯೆಂದು ಮಾಡಿದಾಗ ಇಹ ಹಾಗೂ ಪರದಲ್ಲಿ ಸುಖವುಂಟಾಗುತ್ತದೆ.

- ***ಬ್ರಾಹ್ಮಣ ಸ್ತ್ರೀಯೂ ಸಾಲಿಗ್ರಾಮ ಮುಟ್ಟಬಾರದು :***

**ಬ್ರಾಹ್ಮಣ್ಯಪಿ ಹರಂ ವಿಷ್ಣುಂ ನ ಸ್ಪೃಶೇತ್ ಶ್ರೇಯ ಇಚ್ಛತೀ ।**
**ಯಾ ತು ಪೂಜಯೇತೇ ಲಿಂಗ ।**
**ಶಾಲಿಗ್ರಾಮಂ ನ ಸ್ಪೃಶೇತ್ತು ಹೀನವರ್ಣೈಃ ವಸುಂಧರೇ ।**
**ಸ್ತ್ರೀಶುದ್ರಕರಸಂಸ್ಪರ್ಶಃ ವಜ್ರ ಸ್ಪರ್ಶಾಧಿಕೋಮತಃ ವಾರಾಹ ॥**
**ಮೋಹಾದ್ಯಃ ಸಂಸ್ಪೃಶೇತ್ ಶೂದ್ರಃ ಯೋಷಿದ್ವಾಪಿ ಕದಾಚನ ।**
**ಸ ಪತೇನ್ನನ ಕೇ ಘೋರೇ ಯಾವದಾಭೂತಸಂಪ್ಲವಂ ॥**
**ಯದಿ ಭಕ್ತಿಃ ಭವೇತ್ತಾಸಾಂ ಸ್ತ್ರೀಣಾಂ ವಾಸಿ ವಸುಂಧರೆ ।**
**ದೂರದೇವಾಽಸ್ಪೃಶನ್ ಪೂಜಾಂಕಾರಯೇ ಸು ಸಮಾಹಿತಃ ॥**

- ***ಪ್ರತಿಮೆ ಇಟ್ಟು ಪೂಜೆ ಸ್ತ್ರೀಯರಿಗೆ ವಿಹಿತ :***

**ಸರ್ವವರ್ಣೈರ್ಸ್ತು ಸಂಪೂಜ್ಯಾಃ ಪ್ರತಿಮಾಃ ಸರ್ವದೇವತಾಃ ।**

ಪಾದರಕ್ಷೆ ಧರಿಸಿದವರಿಗೆ ಉತ್ತಮ ದೇವತೆಗಳ ರಕ್ಷಣೆ ಇರುವುದಿಲ್ಲ.

ಅಗ್ನಿಶಾಲೆ, ಗೋಶಾಲೆ, ದೇವಾಲಯ, ಅಡಿಗೆಮನೆ, ಬ್ರಾಹ್ಮಣರ ಸಮೀಪ ಹೋಗುವಾಗ ಪಾದರಕ್ಷೆ ತೆಗೆದೆ ಹೋಗಬೇಕು.

ಹಲ್ಲಿನಿಂದ ಉಗುರು ಕೂದಲನ್ನು ಕಡಿಯಬಾರದು.

**ನೋತ್ಪಾಟಯೇತ್ ಲೋನಖಂ ದಶನೇನ ಕದಾಚನ ।**

ಕಾಲು ಕೈ ಬಾಯಿ ತೊಳೆದ ಭೋಜನದಿಂದ ಆಯುವೃದ್ಧಿ.

**ಆರ್ದ್ರಪಾದಕರಾಸ್ಯೋಽಶ್ನನ್ ದೀರ್ಘಕಾಲಂಚ ಜೀವತಿ ।**

ಒದ್ದೆ ಕಾಲಿನಲ್ಲಿ ಒರಸಿಕೊಳ್ಳದೆ ಮಲಗಬಾರದು.

**ಸಂವೀಶೇತ್ ನಾರ್ದ್ರ ಚರನೋ ನೋಚ್ಛಿಷ್ಟಃ ಕದಾಚನ್ ।**

ಮಲಗಿ ತಿನ್ನಬಾರದು.

**ಶಯನಸ್ಥೋನ ಚಾಶ್ನೀಯಾತ್,**

ನಿಂತು ಧಾರಾಕಾರವಾಗಿ ನೀರನ್ನು ಕುಡಿಯಬಾರದು.

**ನ ತಿಷ್ಠನ್ ಧಾರಯಾ ಪಿಬೇತ್ ।**

ವಿವಾಹವಾದರೂ ಮಂತ್ರ ಪೂರ್ವಕವಾಗಿಯೇ

**ಸಮೈತಾಃ ಕರ್ಣವೇಧಾಂತಾಃ ಮಂತ್ರವರ್ಜಾ ಕ್ರಿಯಾಃ ಸ್ತ್ರೀಯಃ ।**
**ವಿವಾಹೋ ಮಂತ್ರ ತಸ್ಯಾ ಶೂದ್ರಸ್ಯಾಮಂತ್ರತೋ ದಶ ಯಮಸ್ಮೃತಿ ॥**

ಸ್ತ್ರೀ ಶೂದ್ರಾದಿಗಳಿಗೆ ಅರ್ಧ ಮಾತ್ರ ಶೌಚ.

**ಸ್ತ್ರೀಶೂದ್ರಯೋಃ ಅರ್ಧಮಾನಂ ಶೌಚಂ ಪ್ರೋಕ್ತಂ ಮನಿಷಿಭಿ ।**

ವಿವಾಹವಾಗದ ಸ್ತ್ರೀಯರಿಗೆ ಗಂಧಲೇಪಕ್ಷಯ ಪರ್ಯಂತ ಶೌಚವು.

**ನ ಯಾವ ದುಪನೀಯೇತ ವಿಪ್ರ ಶೂದ್ರ ಸ್ತಥಾಂಗನಾ ।**
**ಗಂಧಲೇಪಕ್ಷಯಕರಂ ಶೌಚಂ ತೇಷಾಮ ವಿಧೀಯತೇ ॥** – ಬ್ರಹ್ಮ

ಹಲ್ಲುಜ್ಜಿದ ನಂತರ ಜಡೆ ಹಾಕಿಕೊಂಡು ನಂತರ ಸ್ನಾನ ಮಾಡಬೇಕು.

**ತತಃ ಕೇಶಪ್ರಸಾಧನಂ ಕೃತ್ವಾ ಸ್ನಾಯಾತ್ ।**

ನಗ್ನಳಾಗಿ ಸ್ನಾನ ಮಾಡಬಾರದು.

**ನೈಕಾಕಿನೀ ಕ್ವಚಿದ್ ಭೂಯಾತ್ ನ ನಗ್ನಾ ಸ್ನಾತಿ ವೈ ಕ್ವಚಿತ್ ।**

ಒರಳು, ಹಾರೆ, ಒನಕೆ, ಬೀಸೇಕಲ್ಲು, ಹೊಸ್ತಿಲು ಇವುಗಳ ಮೇಲೆ ಕೂಡಬಾರದು.

**ನೋಲೂಖಲೇ ನ ಮುಸಲೇ ವರ್ಧಿನ್ಯಾಂ ದೃಷದ್ಯಪಿ ।**
**ನ ಯಂತ್ರ ಕೇ ನದೇಹಲ್ಯಾಂ ಮಥ್ನಿ ನೋಪವಿಶೇತ್ ಕ್ವಚಿತ್ ॥**

ಗಂಡಟಿ ಮಾತಿಗೆ ಎದುರುತ್ತರ ನೀಡಿದರೆ ನಾಯಿ ಜನ್ಮ, ನರಿ ಜನ್ಮ ಪ್ರಾಪ್ತಿಯಾಗುವುದು.

**ಉತ್ತಾಪ್ರತ್ಯುತ್ತರಂ ದದ್ಯಾದ್ಯಾನಾರೀ ಕ್ರೋಧತತ್ಪರಾ ।**
**ಸಾ ಶುನೀ ಜಾಯತೇ ಗ್ರಾಮೇ ಶೃಗಾಲೀ ನಿರ್ಜನೇವನೇ ॥**

ಗಂಡನು ಹೊಡೆದಾಗ ಹೊಡೆಯಲು ಇಚ್ಛಿಸಿದವಳು ಹುಲಿಯಾಗುವಳು.

**ತಾಡಿತಾ ತಾಡಿತುಂ ಯಾ ಇಚ್ಛೇತ್ ಸಾ ವ್ಯಾಘ್ರೀ ದ್ವೀಪದಂಶಿಕಾ ।**

ಗಂಡನನ್ನು ಬಿಟ್ಟು ರುಚಿ ರುಚಿ ತಿನ್ನುವವಳಿಗೆ ಮಲ ತಿನ್ನುವ ಹಂದಿಯಾಗಿಯೂ, ಕತ್ತೆಯಾಗಿಯೂ ಜನಿಸುವಳು.

**ಭರ್ತಾರಂ ಯಾ ಸಮುತ್ಸೃಜ್ಯ ಮಿಷ್ಟಮಶ್ನಾತಿ ಕೇವಲಂ ಗ್ರಾಸು ಸಾ ಸೂಕರೀ ವಾಸ್ಯಾದ್ ಗರ್ದಭಿ ವಾ ಶ್ವವಿಟ್ ಭುಜಾ ।**

ಗಂಡನಿಗೆ ಜೋರಾಗಿ ಮಾತಾಡಬಾರದು.

**ಗುರೂಣಾಂ ಸನ್ನಿಧೌ ಚಪಿ ನೋಚ್ಚೈಃ ಹಸೇತ್ ।**

ಗಂಡನಿಗೆ ಅಪ್ರಿಯವಾದ ನುಡಿ ನುಡಿಯುವವಳನ್ನು ಕೂಡಲೇ ತ್ಯಜಿಸಬೇಕು.

**ಸದ್ಯಃ ತ್ವಪ್ರಿಯವಾದಿನೀಂ ।**

ಹಣ ಧನ ಧಾನ್ಯ ಪೋಲು ಮಾಡುವ ದುಂದುಗಾರ್ತಿಯನ್ನೂ ಬಿಡಬಹುದು.

**ಧನಧಾನ್ಯಕ್ಷಯ ಕರೀಂ ಸ್ತ್ರೀಯಮ ಸದ್ಯೋ ವಿವರ್ಜಯೇತ್ ।**

ಗಂಡನಿಗೆ ಹೇಳದೆ ಮನೆಯಿಂದ ಹೊರಗೆ ಹೋಗಬಾರದು, ಮೇಲುಡುಪಿಲ್ಲದೆಯೋ ಹೊರಗೆ ಹೋಗಬಾರದು.

**ನಾನುಕ್ತಾ ಗೃಹಾನ್ ನಿರ್ಗಚ್ಛೇತ್ ನಾನುತ್ತರೀಯಾ ।**

ಪರಪುರುಷನೊಂದಿಗೆ ಸಂಭಾಷಣೆ ಕೂಡದು.

**ನ ಪರಪುರುಷಂ ಸಂಭಾಷೇತ ।**

ಹೊಕ್ಕಳನ್ನು ಇತರರಿಗೆ ತೋರಿಸಬಾರದು.

**ನ ನಾಭಿಂ ಸಂದರ್ಶಯೇತ್ ।**

ಅಹುತ ಹುತ ಪ್ರಹುತ ಪ್ರಾಶಿತ ಬ್ರಹ್ಮಹುತ ಐದರಲ್ಲೂ ಪತ್ನಿಯ ಜವಾಬ್ದಾರಿಯಿರುತ್ತದೆ.

ಜಪಾದಿಗಳು ಅಹುತಯಜ್ಞ, ಹೋಮಾದಿಗಳು ಹುತಯಜ್ಞ, ಬಲಿಹರಣ ಪ್ರಹುತ, ಪಿತೃಶ್ರಾದ್ಧ ಪ್ರಾಶಿತ, ಬ್ರಾಹ್ಮಣಾರಾಧನೆ ಬ್ರಹ್ಮಹುತ. ಈ ಐದೂ ಪತ್ನಿಯಿಂದ ನಡೆಯಬೇಕಾಗಿದ್ದು ಇದಕ್ಕೆ ಅನುಕೂಲ ಮಾಡಿಕೊಡದ ಸ್ತ್ರೀಗೆ ಪಂಚಸೂನ ದೋಷವುಂಟಾಗುತ್ತದೆ.

ವೇಣೀದಾನ ಹೊರತು ವಪನವಿಲ್ಲ.

ಪತಿಯಾದವನು ಪ್ರಯಾಗದಲ್ಲಿ ಎಲ್ಲಾ ಕೇಶಗಳನ್ನು ಮುಷ್ಟಿಯಲ್ಲಿ ಹಿಡಿದು ಎರಡು ಅಂಗುಲ ಮಾತ್ರ ಪತ್ನಿಯ ಕೂದಲನ್ನೂ ಕತ್ತರಿಸಬೇಕು. ಇದರಿಂದಲೇ ಮುಂಡನದ ಫಲ ಲಭಿಸುತ್ತದೆ.

**ಸರ್ವಾನ್ ಕೇಶಾನ್ ಸಮುದ್ಧೃತ್ಯ ಛೇದಯೇತ್ ಅಂಗುಲದ್ವಯಂ ।**
**ಏವಮೇವ ತು ನಾರೀಣಾಂ ಶಿರಸೋ ಮುಂಡನಂ ಭವೇತ್ ।**
**ನ ಸ್ತ್ರೀಣಾಂ ವಪನಾ ಕಾರ್ಯಂ ।** *–ಸ್ಕಾಂ. ಶಾಶೀ 40*

ಸ್ತ್ರೀಯರಿಗೆ ಮಾಸಿಕ ರಜೋಧರ್ಮದಿಂದ ಶುದ್ಧಿಯಾಗುತ್ತಾರೆ. ಇಚ್ಛೆಯಿಲ್ಲದೆ ಭೋಗಿಸಲ್ಪಟ್ಟ ಸ್ತ್ರೀಯರ ದೋಷ ರಜಸ್ಸಿನಿಂದಲೇ ಹೋಗುತ್ತದೆ.

**ಮಾಸಿ ಮಾಸಿ ರಜೋಸ್ತ್ರೀಣಾಂ ತತ್ಪಾಪಂ ದ್ರಾವಯತ್ಯಹೋ ।**

ಯಾವ ವನಿತೆಯು ಮನಸ್ಸಿನಲ್ಲಿಯೂ ಕೂಡ ಪತಿಯ ಹೊರತು ಪರ ಪುರುಷನನ್ನು ಚಿಂತಿಸುವುದಿಲ್ಲವೋ ಅವಳು ಶಿವಲೋಕದಲ್ಲಿ ಶಿವೆಯಂತೆ ನಿರಂತರ ಸುಖ ಹೊಂದುವಳು.

**ಮನಸಾಽಪಿ ಯಾ ನೇಹ ಚಿಂತಯೇತ್ ಪುರುಷಾಂತರಂ ।**
**ಸೋಮಯಾ ಸಹ ಸೌಖ್ಯಾನಿ ಭುಂಕ್ತೇ ಚಾತ್ರಾಪಿ ಕೀರ್ತಿಭಾಕ್ ॥**
*– ಸ್ಕಾಂದ. ಕಾಶೀ. 22*

- ***ಜಿಪುಣತನ ಸ್ತ್ರೀಯರಿಗೆ ಕೂಡದು :***

ದೇವರು ಸಂಪತ್ತು ನೀಡಿರುವಾಗ ಅದನ್ನು ದಾನಾದಿಗಳಿಗೆ ವಿನಿಯೋಗಿಸಬೇಕು. ಪ್ರಸಾದ ರೂಪವಾಗಿ ತಾನೂ ಭುಂಜಿಸಬೇಕು. ದೇವರು ಸಂಪತ್ತನ್ನು ನೀಡಿದ್ದರೂ ನಮಗೇನಿದೆ? ಏನು ಇಲ್ಲ ಎಂದು ಉದ್ಗಾರ ತೆಗೆಯುತ್ತಾ ತಾನೂ ತಿನ್ನದೆ, ದಾನಾದಿಗಳನ್ನು ಮಾಡದೆ ಇರುವ ಸ್ತ್ರೀಯನ್ನು 'ಇಲಿ' ಎಂದು ಕರೆಯಲಾಗಿದೆ. ಇಂತಹವಳು ತಯಾರಿಸಿದ ಅನ್ನವನ್ನು ತಿಂದ ಪುರುಷನು 'ಕೃಚ್ಛ್ರ' ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

**ವಿಭವೇ ಸತಿ ನೈವಾತ್ತಿ ದದಾತಿ ಚ ಜಹೋತಿ ಚ ।**
**ತಾಮಾಹುರಾಖುಂ ತಸ್ಯಃ ಅನ್ನಂ ಭುಕ್ತ್ವಾ ಕೃಚ್ಛ್ರೇಣ ಶುಧ್ಯತಿ ॥**

ಸ್ವಧರ್ಮ ಪರಿತ್ಯಜಿಸಿ ಪರಧರ್ಮವನ್ನು ಸ್ವೀಕರಿಸುವವಳು 'ಪತಿತಳು' ಎನಿಸುವಳು. ಆಪತ್ಕಾಲ ಹೊರತು ಧನಾದಿ ಲೋಭದಿಂದ ಇತರ ಬೌದ್ಧ, ಜೈನ, ಕ್ರಿಶ್ಚಿಯನ್, ಮುಸ್ಲಿಂ ಧರ್ಮವನ್ನು ಸುತರಾಂ ಸ್ವೀಕರಿಸಬಾರದು.

**ಸ್ವಧರ್ಮಂ ಯಾ ಪರಿತ್ಯಜ್ಯ ಪರಧರ್ಮಂ ಸಮಾಚರೇತ್ ।**
**ಅನಾಪದಿ ಚ ವಿದ್ವದ್ಭಿಃ ಪತಿತಾ ಪರಿಕೀರ್ತಿತಾ ॥** – *ವಾಮನ 14*

- ***ಭಿಕ್ಷೆಗೆ ಬಂದವನನ್ನು ನಿಂದಿಸಬಾರದು :***

ಭಿಕ್ಷೆಗೆ ಬೇಡಲು ಬಂದವರಿಗೆ ಏನನ್ನೂ ಕೊಡದೆ ಕಳಿಸಬಾರದು ಅಥವಾ ಒಳ್ಳೆ ಮಾತನ್ನಾಡಿ ಮುಂದೆ ಕಳಿಸಬೇಕು. ಶಿವನೋ ವಾಸುದೇವನೋ ಆ ರೂಪದಲ್ಲಿ ಬಂದಿರಬಹುದು.

**ಭಿಕ್ಷಾರ್ಥಮಾಗತಾನ್ ಪುಂಸಃ ನ ನಿರಾಕರಣ ಮಾಚರೇತ್ ।**
**ಶಿವೋ ವಾ ವಾಸುದೇವೋವಾ ಆಗತೋ ಸ್ಯಾತ್ ಗೃಹಂ ಪ್ರತಿ ॥**

- ***ಪತಿ ಪತ್ನಿಯರ ಅನ್ಯೋನ್ಯತೆಯ ಫಲ :***

ಯಾವ ಮನೆಯಲ್ಲಿ ಪತಿ-ಪತ್ನಿಯರು ಅನ್ಯೋನ್ಯವಾಗಿ ಸಂತುಷ್ಟ-ರಾಗಿರುವರೋ ಆ ಮನೆಯಲ್ಲಿ ಹೆಜ್ಜೆ ಹೆಜ್ಜೆಗೂ ಕಲ್ಯಾಣವು.

**ಯತ್ರ ತುಷ್ಯತಿ ಭರ್ತ್ರಾ ಸ್ತ್ರೀ ಸ್ತ್ರೀಯಾ ಭರ್ಕಾಚ ತುಷ್ಯತಿ ।**
**ತತ್ರ ವೇಶ್ಮನಿ ಕಲ್ಯಾಣಂ ಸಂಪದ್ಯೇತ ಪದೇ ಪದೇ ॥** – *ಕಾಶೀ. 22*

ಒಂದೇ ಪಂಕ್ತಿಯಲ್ಲಿರುವಾಗ ಪಂಕ್ತಿಭೇದ ಮಹಾಪಾಪ.

**ಏಕಪಂಕ್ತ್ಯುಪ ವಿಷ್ಟಾನಾಂ ವಿಷಮಂ ಭೋಜಯಂತಿ ಯೇ ।**

ದೊಡ್ಡವರನ್ನು ಕಾಲಿನಿಂದ ಒದ್ದರೆ ದೋಷ.

**ಗೋಬ್ರಾಹ್ಮಣಾಗ್ನಯಃ ಸ**
**ಜಾಮಯೋ ಗುರುವೋ ವೃದ್ಧಾಯೈಃ ಸಂಸ್ಪೃಷ್ಟಾಃ ಪದಾ ನೃಭಿಃ ।**
**ಬಧ್ವಾಂಘ್ರಯಸ್ತೇ ನಿಗಡೈಃ ಲೋಹೈಃ ವಹ್ನಿ ಪ್ರತಾಪಿತೈಃ ॥**

*– ವಾಮನ 12*

- ***ಪ್ರತಿಮೆಗಳನ್ನು ಮುಟ್ಟಬಾರದು :***

**ಕೇಶವಂ ವ ಶಿವಂ ವಾ ಸ್ಪೃಷ್ಟ್ವಾ ನರಕಮಶ್ನುತೇ ।** *– ಬೃಹನ್ನಾರದೀಯ*

- ***ಪೂಜೆ ಮಾಡುವ ಅಧಿಕಾರವಿದೆ :***

**ಸ್ತ್ರೀಣಾಂ ಚೈವಾಧಿಕಾರೋಽಸ್ತಿ ಪೂಜಾದಿಷು ನ ಸಂಶಯಃ ।**
**ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಸ್ತ್ರೀಯಃ ಶೂದ್ರಾಂತ್ಯಜಾತಯಃ ।**
**ಸಂಪೂಜ್ಯ ತು ಸುರಶ್ರೇಷ್ಠಂ ನರಸಿಂಹವಪುರ್ಧರಂ ॥** – *ನೃ.ಪು.*

ಪುರಾಣ ಶ್ರವಣ ಹಾಗೂ ನೃಸಿಂಹ ಪೂಜಾಧಿಕಾರವಿದೆ.

**ಪುರಾಣಂ ಶೃಣುಯಾದ್ ವಿಪ್ರಾದ್ ನರಸಿಂಹಸ್ಯ ಪೂಜನಂ ।**

- ***ಗೌರೀಪೂಜೆ :***

**ಏವಂ ದಿನೇ ದಿನೇ ದೇವಂ ಪೂಜಯೇದ್ ಅಂಬಿಕಾಪತಿಂ ।**
**ನಮೋಂತೇನ ಶಿವೇನೈವ ಸ್ತ್ರೀಣಾಂ ಪೂಜ ವಿಧೀಯತೇ ॥**
**ಕೇವಲ ಶಿವಾಯ ನಮಃ, ಶಿವಾಯೈ ನಮಃ ।**
**ಏವಂ ಪೂಜಾ ಕೃತಾ ಯಾಭಿಃ ಸಫಲಂ ತಸ್ಯ ಜೀವಿತಂ ॥**

*– ಸೂತಸಂಹಿತೆ*

- ***ರಾತ್ರಿ ನೀರು ಹಾಕಬಹುದೇ?***

ಕೆಲವು ಸ್ತ್ರೀಯರು ರಾತ್ರಿಯೇ ಬೆಳಿಗ್ಗೆ ಹಾಕಬೇಕಾದ ನೀರನ್ನು ಹಾಕಿ ಸಾರಿಸಿ ರಂಗೋಲೆ ಹಾಕುತ್ತಾರೆ. ಇದು ಸಾಧನ ದ್ವಾದಶಿಯಿರುವ

ಏಕಾದಶಿಯಂದು ರಾತ್ರಿ ಮಲಗುವ ಮುಂದೆ ನೀರನ್ನು ಹಾಕಬಹುದೇ ವಿನಹ ಪ್ರತಿದಿನವೂ ಹಾಗೆಯೇ ಹಾಕಬಾರದು. ಕೆಲವು ಬಾರಿ ಅಪತ್ಕಾಲದಲ್ಲಿ ಹೀಗೆ ಮಾಡಬಹುದಾದರೂ, ದಿನಂಪ್ರತಿ ಹೀಗೆ ಮಾಡಲು ಶಾಸ್ತ್ರ ವಿಧಿಯಿಲ್ಲ. ಹೀಗೆ ರಾತ್ರಿ ಸಾರಿಸಿದ ಮೇಲೆ ಬೀಳುವ ಕಸ ಹಾಗೇ ಉಳಿದು ಸೂರ್ಯನ ಕಿರಣಗಳ ಮೇಲೆ ಬಿದ್ದು ಹಿಂದೆ ಹೇಳಿದ ದೋಷವುಂಟಾಗುತ್ತದೆ.

- ***ಸ್ತ್ರೀಯರಿಗೆ ಶಿಕ್ಷಣ :***
  - ಭಾಗವತದಲ್ಲಿ ನಿರೂಪಿಸಿದಂತೆ ಬ್ರಹ್ಮದೇವನ ದೇಹವು ಎರಡು ವಿಭಾಗವಾಗಿ ಸ್ತ್ರೀ-ಪುರುಷರಾದರು ಎಂದು ಯಾವುದೇ ಒಂದು ಹಣ್ಣು ಮೊದಲಾದವು ಎರಡು ಹೋಳು ಮಾಡಿದಾಗ ಸಮಾನ ಧರ್ಮವಿರುವುದು ಕಂಡಿದೆಯಾಗಿ ಸ್ತ್ರೀಪುರುಷರಿಗೆ ಸಮಾನಾಧಿಕಾರ-ವಿರಲೇಬೇಕು.
  - ಸ್ತ್ರೀಯರು ಎರಡು ವಿಧವಿದ್ದಾರೆ : ಬ್ರಹ್ಮವಾದಿನೀಯರು ಹಾಗೂ ಸದ್ಯೋವಧುಗಳೆಂದು. ಇವರಲ್ಲಿ ಬ್ರಹವಾದಿನಿಯರಿಗೆ ಉಪನಯನ. ಅಗ್ನಿಕಾರ್ಯಾದಿಗಳು ವೇದಾಧ್ಯಯನಾದಿಗಳಿವೆ. ಸದ್ಯೋವಧುವಿಗೆ ಉಪನಯನ ಮಾಡಿ ನಂತರ ವಿವಾಹ ಮಾಡುವುದು ಇದು ಹಿಂದಿನ ಕಲ್ಪಗಳಲ್ಲಿ ಮಾಡುತ್ತಿದ್ದರು.

**ಪುರಾಕಲ್ಪೇತು ನಾರೀಣಾಂ ಮೌಂಜೀಬಂಧನಮಿಷ್ಯತೇ ।**
**ಅಧ್ಯಾಪನಂ ಚ ವೇದಾನಾಮ ಸಾವಿತ್ರೀವಚನಂ ತಥಾ ॥** – *ಯಮಸ್ಮೃತಿ*

ಹಿಂದೆ ವೇದಾಧ್ಯಯನ ಮಾಡುತ್ತಿದ್ದ ವಿಚಾರ ವೇದದಲ್ಲಿಯೇ ಬಂದಿದೆ.

**ಸಪತ್ನೀಂ ಮೇ ಪರಾಧಮ,**
**ಇಯಂ ನಾರ್ಯುಪಬ್ರೂತೇ,**
**ವೇದಂ ಪತ್ನೈ ಪ್ರದಾಯ ವಾಚಯೇತ್ ॥**

ಹೀಗೆ ಸ್ತ್ರೀಯರಿಗೆ ವೇದವಿದ್ಯಾಧಿಕಾರ ಈ ಕಾಲದಲ್ಲಿ ಪ್ರಶಸ್ತವಲ್ಲವಾದ್ದರಿಂದಲೇ ಭಾರತ ಹಾಗೂ ಭಾಗವತವನ್ನು ರಚಿಸಿದ್ದು.

**ಸ್ತ್ರೀ ಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।**
**ಇತಿ ಭಾರತಮಾಖ್ಯಾನಂ ಕೃಪಯ ಮುನಿನಾ ಕೃತಂ ॥**

ಸ್ತ್ರೀ ಶೂದ್ರರಿಗೆ ಭಾರತ ಮೊದಲಾದ ಇತಿಹಾಸ ಪುರಾಣಗಳಿಂದ ಧರ್ಮಜ್ಞಾನವುಂಟಾಗುತ್ತದೆ.

ಉತ್ತಮರಾದ ಸ್ತ್ರೀಯರಿಗೆ ವೈದಿಕ ಗ್ರಂಥದಲ್ಲಿ ಅಧಿಕಾರವಿದ್ದು ಕಂಡಿದೆ. ಯಮೀ, ಊರ್ವಶೀ, ಶಚೀ ಮೊದಲಾದ ಸ್ತ್ರೀಯರಿಗೆ, ನರರಲ್ಲಿ ಅವತರಿಸಿರುವ ದೇವತಾ ಸ್ತ್ರೀಯರು, ಮುನಿಪತ್ನಿಗಳಿಗೆ ಅಧಿಕಾರವಿದೆ.

ಪತಿಯಿಂದ ಜೊತೆಗೆ ವೈದಿಕಾಧಿಕಾರವಿದೆ ಹೊರತು ಪ್ರತ್ಯೇಕವಾಗಿಲ್ಲ ಎಂದು ಹೇಳುವ ***'ನಾಸ್ತಿಸ್ತ್ರೀಣಾಂ ಪೃಥಗ್ ಯಜ್ಞೋ'*** *[ಮನು 4–155]* ಎಂಬ ಶ್ಲೋಕತಾತ್ಪರ್ಯವೂ ಸಹ ಶ್ರೇಷ್ಠರಾದವರು ನರರಲ್ಲಿ ಹುಟ್ಟಿದವರಿಗೆ ಮಾತ್ರ. ಋಗ್ವೇದದಲ್ಲಿ (ಋಗ್ವೇದ 4/17ನೇ ಸೂಕ್ತ) ತಾಯಿಯೇ ಮಕ್ಕಳಿಗೆ ಮೊದಲಿನ ವಿದ್ಯೋಪದೇಶ ಮಾಡುವ ಶಿಕ್ಷಯಿತ್ರೀ ಎನ್ನಲಾಗಿದೆ.

ಹಾಗೆಯೇ "ಮಮತಾ" ಸ್ತ್ರೀಯು ವೇದೋಚ್ಚಾರಣೆಯಲ್ಲಿ ಅತಿಕುಶಲ–ಗಳಾಗಿದ್ದಳೆಂದು ಹೇಳಲಾಗಿದೆ. (ಋಗ್ವೇದ 6/10ನೇ ಸೂಕ್ತ).

ಪಂಚಮ ಮಂಡಲದಲ್ಲಿ ಬರುವ 'ವಿಶ್ವವಾರಾ' ಎಂಬುವಳು ತಾನೆ ಯಜ್ಞವನ್ನು ಮಾಡುತ್ತಾ ಆಹುತಿಗಳನ್ನು ನೀಡುತ್ತಿದ್ದಳು. ಘೋಷಾ, ಅಪಾಲಾ, ಘೃತಾಚೀ ಮೊದಲಾದ ಋಷಿಪತ್ನಿಯರು ಸ್ವತಂತ್ರವಾಗಿ ಯಜ್ಞ ನಡೆಸುತ್ತಿದ್ದ ಉಲ್ಲೇಖವಿದೆ. ಇದನ್ನೇ ಶ್ರೀಮದಾಚಾರ್ಯರು ***"ಮುನಿಸ್ತ್ರಿಯಃ"*** ಎಂದು ಸಂಗ್ರಹಿಸಿದ್ದಾರೆ.

ಇವರಲ್ಲದೆ ಅಗಸ್ತ್ಯರ ತಂಗಿ, ಸೂರ್ಯಾ, ದಕ್ಷಿಣಾ, ಸರಮಾ ಎಂಬ ನಾಯಿ, ಜರಿತಾ ಮೊದಲಾದ ಪ್ರಾಣಿಪಕ್ಷಿಗಳು ವೇದದ್ರುಷ್ಟಗಳಾಗಿದ್ದಾರೆ.

ಸ್ತ್ರೀಯರೂ ಸಹ ವಿವಾಹವಾದ ಮೇಲೆ ಮಹಾಭಾರತಾದಿಗಳ ಅಧ್ಯಯನ, ಶ್ರವಣಗಳಿಂದ ತತ್ವಜ್ಞಾನ ಸಂಪಾದಿಸಬೇಕು. ಮಹಾಭಾರತಾದಿಗಳು ಸ್ತ್ರೀ ಶೂದ್ರಾದಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂದೇ ರಚಿತವಾದವುಗಳು. ಸ್ತ್ರೀಯರ ವೇದವೆಂದರೆ ಮಹಾಭಾರತವೇ ಆಗಿದೆ. ಇದು ತ್ರಿವಣಶ್ವ ಸ್ತ್ರೀಯರಿಗೂ ಸಮಾನವೇ. ಪತಿ ಸೇವೆಯಿಂದ ಸ್ವರ್ಗಾದಿಗಳು ಲಭಿಸಬಹುದಾದರೂ ಮೋಕ್ಷಕ್ಕಾಗಿ ತತ್ವಜ್ಞಾನವನ್ನು ಪಡೆಯಲೇಬೇಕು.

ಸ್ತ್ರೀಯರಿಗೆ ವೇದವಿದ್ಯಾಧಿಕಾರ ನೀಡದೆ ಅನ್ಯಾಯ ಮಾಡಿದ್ದಾರೆ ಎಂಬ

ಏಕಾದಶಿಯಂದು ರಾತ್ರಿ ಮಲಗುವ ಮುಂದೆ ನೀರನ್ನು ಹಾಕಬಹುದೇ ವಿನಹ ಪ್ರತಿದಿನವೂ ಹಾಗೆಯೇ ಹಾಕಬಾರದು. ಕೆಲವು ಬಾರಿ ಅಪತ್ಕಾಲದಲ್ಲಿ ಹೀಗೆ ಮಾಡಬಹುದಾದರೂ, ದಿನಂಪ್ರತಿ ಹೀಗೆ ಮಾಡಲು ಶಾಸ್ತ್ರ ವಿಧಿಯಿಲ್ಲ. ಹೀಗೆ ರಾತ್ರಿ ಸಾರಿಸಿದ ಮೇಲೆ ಬೀಳುವ ಕಸ ಹಾಗೇ ಉಳಿದು ಸೂರ್ಯನ ಕಿರಣಗಳ ಮೇಲೆ ಬಿದ್ದು ಹಿಂದೆ ಹೇಳಿದ ದೋಷವುಂಟಾಗುತ್ತದೆ.

- ***ಸ್ತ್ರೀಯರಿಗೆ ಶಿಕ್ಷಣ :***
  - ಭಾಗವತದಲ್ಲಿ ನಿರೂಪಿಸಿದಂತೆ ಬ್ರಹ್ಮದೇವನ ದೇಹವು ಎರಡು ವಿಭಾಗವಾಗಿ ಸ್ತ್ರೀ–ಪುರುಷರಾದರು ಎಂದು ಯಾವುದೇ ಒಂದು ಹಣ್ಣು ಮೊದಲಾದವು ಎರಡು ಹೋಳು ಮಾಡಿದಾಗ ಸಮಾನ ಧರ್ಮವಿರುವುದು ಕಂಡಿದೆಯಾಗಿ ಸ್ತ್ರೀಪುರುಷರಿಗೆ ಸಮಾನಾಧಿಕಾರ–ವಿರಲೇಬೇಕು.
  - ಸ್ತ್ರೀಯರು ಎರಡು ವಿಧವಿದ್ದಾರೆ : ಬ್ರಹ್ಮವಾದಿನೀಯರು ಹಾಗೂ ಸದ್ಯೋವಧುಗಳೆಂದು. ಇವರಲ್ಲಿ ಬ್ರಹವಾದಿನಿಯರಿಗೆ ಉಪನಯನ. ಅಗ್ನಿಕಾರ್ಯಾದಿಗಳು ವೇದಾಧ್ಯಯನಾದಿಗಳಿವೆ. ಸದ್ಯೋವಧುವಿಗೆ ಉಪನಯನ ಮಾಡಿ ನಂತರ ವಿವಾಹ ಮಾಡುವುದು ಇದು ಹಿಂದಿನ ಕಲ್ಪಗಳಲ್ಲಿ ಮಾಡುತ್ತಿದ್ದರು.

**ಪುರಾಕಲ್ಪೇತು ನಾರೀಣಾಂ ಮೌಂಜೀಬಂಧನಮಿಷ್ಯತೇ ।**
**ಅಧ್ಯಾಪನಂ ಚ ವೇದಾನಾಮ ಸಾವಿತ್ರೀವಚನಂ ತಥಾ ॥** – ಯಮಸ್ಮೃತಿ

ಹಿಂದೆ ವೇದಾಧ್ಯಯನ ಮಾಡುತ್ತಿದ್ದ ವಿಚಾರ ವೇದದಲ್ಲಿಯೇ ಬಂದಿದೆ.

**ಸಪತ್ನೀಂ ಮೇ ಪರಾಧಮ,**
**ಇಯಂ ನಾರ್ಯುಪಬ್ರೂತೇ,**
**ವೇದಂ ಪತ್ನ್ಯೈಪ್ರದಾಯ ವಾಚಯೇತ್ ॥**

ಹೀಗೆ ಸ್ತ್ರೀಯರಿಗೆ ವೇದವಿದ್ಯಾಧಿಕಾರ ಈ ಕಾಲದಲ್ಲಿ ಪ್ರಶಸ್ತವಲ್ಲವಾದ್ದರಿಂದಲೇ ಭಾರತ ಹಾಗೂ ಭಾಗವತವನ್ನು ರಚಿಸಿದ್ದು.

**ಸ್ತ್ರೀ ಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।**
**ಇತಿ ಭಾರತಮಾಖ್ಯಾನಂ ಕೃಪಯ ಮುನಿನಾ ಕೃತಂ ॥**

ಸ್ತ್ರೀ ಶೂದ್ರರಿಗೆ ಭಾರತ ಮೊದಲಾದ ಇತಿಹಾಸ ಪುರಾಣಗಳಿಂದ ಧರ್ಮಜ್ಞಾನವುಂಟಾಗುತ್ತದೆ.

ಉತ್ತಮರಾದ ಸ್ತ್ರೀಯರಿಗೆ ವೈದಿಕ ಗ್ರಂಥದಲ್ಲಿ ಅಧಿಕಾರವಿದ್ದು ಕಂಡಿದೆ. ಯಮೀ, ಊರ್ವಶೀ, ಶಚೀ ಮೊದಲಾದ ಸ್ತ್ರೀಯರಿಗೆ, ನರರಲ್ಲಿ ಅವತರಿಸಿರುವ ದೇವತಾ ಸ್ತ್ರೀಯರು, ಮುನಿಪತ್ನಿಗಳಿಗೆ ಅಧಿಕಾರವಿದೆ.

ಪತಿಯಿಂದ ಜೊತೆಗೆ ವೈದಿಕಾಧಿಕಾರವಿದೆ ಹೊರತು ಪ್ರತ್ಯೇಕವಾಗಿಲ್ಲ ಎಂದು ಹೇಳುವ ***'ನಾಸ್ತಿಸ್ತ್ರೀಣಾಂ ಪೃಥಗ್ ಯಜ್ಞೋ'*** *[ಮನು 4–155]* ಎಂಬ ಶ್ಲೋಕತಾತ್ಪರ್ಯವೂ ಸಹ ಶ್ರೇಷ್ಠರಾದವರು ನರರಲ್ಲಿ ಹುಟ್ಟಿದವರಿಗೆ ಮಾತ್ರ. ಋಗ್ವೇದದಲ್ಲಿ (ಋಗ್ವೇದ 4/17ನೇ ಸೂಕ್ತ) ತಾಯಿಯೇ ಮಕ್ಕಳಿಗೆ ಮೊದಲಿನ ವಿದ್ಯೋಪದೇಶ ಮಾಡುವ ಶಿಕ್ಷಯತ್ರೀ ಎನ್ನಲಾಗಿದೆ.

ಹಾಗೆಯೇ "ಮಮತಾ" ಸ್ತ್ರೀಯು ವೇದೋಚ್ಚಾರಣೆಯಲ್ಲಿ ಅತಿಕುಶಲ–ಗಳಾಗಿದ್ದಳೆಂದು ಹೇಳಲಾಗಿದೆ. (ಋಗ್ವೇದ 6/10ನೇ ಸೂಕ್ತ).

ಪಂಚಮ ಮಂಡಲದಲ್ಲಿ ಬರುವ 'ವಿಶ್ವವಾರಾ' ಎಂಬುವಳು ತಾನೆ ಯಜ್ಞವನ್ನು ಮಾಡುತ್ತಾ ಆಹುತಿಗಳನ್ನು ನೀಡುತ್ತಿದ್ದಳು. ಘೋಷಾ, ಅಪಾಲಾ, ಘೃತಾಚೀ ಮೊದಲಾದ ಋಷಿಪತ್ನಿಯರು ಸ್ವತಂತ್ರವಾಗಿ ಯಜ್ಞ ನಡೆಸುತ್ತಿದ್ದ ಉಲ್ಲೇಖವಿದೆ. ಇದನ್ನೇ ಶ್ರೀಮದಾಚಾರ್ಯರು **"ಮುನಿಸ್ತ್ರಿಯಃ"** ಎಂದು ಸಂಗ್ರಹಿಸಿದ್ದಾರೆ.

ಇವರಲ್ಲದೆ ಅಗಸ್ತ್ಯರ ತಂಗಿ, ಸೂರ್ಯಾ, ದಕ್ಷಿಣಾ, ಸರಮಾ ಎಂಬ ನಾಯಿ, ಜರಿತಾ ಮೊದಲಾದ ಪ್ರಾಣಿಪಕ್ಷಿಗಳು ವೇದದ್ರುಷ್ಟಗಳಾಗಿದ್ದಾರೆ.

ಸ್ತ್ರೀಯರೂ ಸಹ ವಿವಾಹವಾದ ಮೇಲೆ ಮಹಾಭಾರತಾದಿಗಳ ಅಧ್ಯಯನ, ಶ್ರವಣಗಳಿಂದ ತತ್ವಜ್ಞಾನ ಸಂಪಾದಿಸಬೇಕು. ಮಹಾಭಾರತಾದಿಗಳು ಸ್ತ್ರೀ ಶೂದ್ರಾದಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂದೇ ರಚಿತವಾದವುಗಳು. ಸ್ತ್ರೀಯರ ವೇದವೆಂದರೆ ಮಹಾಭಾರತವೇ ಆಗಿದೆ. ಇದು ತ್ರಿವಣಶ್ವ ಸ್ತ್ರೀಯರಿಗೂ ಸಮಾನವೇ. ಪತಿ ಸೇವೆಯಿಂದ ಸ್ವರ್ಗಾದಿಗಳು ಲಭಿಸಬಹುದಾದರೂ ಮೋಕ್ಷಕ್ಕಾಗಿ ತತ್ವಜ್ಞಾನವನ್ನು ಪಡೆಯಲೇಬೇಕು.

ಸ್ತ್ರೀಯರಿಗೆ ವೇದವಿದ್ಯಾಧಿಕಾರ ನೀಡದೆ ಅನ್ಯಾಯ ಮಾಡಿದ್ದಾರೆ ಎಂಬ

ಕೂಗು ಸಮಾಜದಲ್ಲಿದೆ. ಆದರೆ ವೇದಾಧ್ಯಯನ ಮಾಡಬಹುದಾದ ಪುರುಷರು ವೇದಾಧ್ಯಯನದಿಂದ ಯಾವ ಫಲವನ್ನು ಪಡೆಯಬಹುದೋ ಅದು ವೇದಾಧ್ಯಯನವಿಲ್ಲದೆಯೇ ಮಹಾಭಾರತಾದಿಗಳಿಂದ ಬಂದಾಗ ಅವರು ಫಲವನ್ನು ಪಡೆಯುವರು. ಅಡಿಗೆ ಮಾಡಲು ಅಧಿಕಾರವಿಲ್ಲದ ಸಣ್ಣಮಕ್ಕಳಿಗೆ ಅಡುಗೆ ತಯಾರಿಸಲು ನಿಷೇಧ ಮಾಡಿದರೂ, ಬೇರೆಯವರು ತಯಾರಿಸಿದ ಭೋಜನವನ್ನು ತಿನ್ನಲು ನಿಷೇಧ ಮಾಡಿರುವುದಿಲ್ಲ. ಅವರು ಭೋಜನದ ಸುಖವನ್ನು ಪಡೆಯುವಂತೆ ವೇದದ ಫಲ ಮಹಾಭಾರತಾದಿ–ಗಳಿಂದಲೇ ಲಭಿಸುವುದರಿಂದ ಈ ಕೂಗು ಅರ್ಥಹೀನವೆಂದು ತಿಳಿಯಬೇಕು.

- ***ಸ್ತ್ರೀಗೆ ಸ್ವಾತಂತ್ರ್ಯವಿಲ್ಲ – ಇದರರ್ಥ :***

**ನ ಸ್ತ್ರಿ ಸ್ವಾತಂತ್ರ್ಯ ಮರ್ಹತಿ ।**

ಮನುಸ್ಮೃತಿಯಲ್ಲಿ ಸ್ತ್ರೀಗೆ ಸ್ವಾತಂತ್ರವಿರುವುದಿಲ್ಲವೆಂದು ತಿಳಿಸಲಾಗಿದೆ. ಇದರ ಮೇಲೆ ಅನೇಕ ಆಕ್ಷೇಪಗಳು ಎದ್ದಿವೆ. ಆದರೆ ಮನುಸ್ಮೃತಿಕಾರನ ಅಭಿಪ್ರಾಯ–ವಾದರೂ ಏನು? ಎಂದು ತಿಳಿಯಬೇಕು.

***ಮನುಸ್ಮೃತಿಯಲ್ಲಿ (9–3)***

**ಪಿತಾರಕ್ಷತಿ ಕೌಮಾರೇ ಭರ್ತಾರಕ್ಷತಿ ಯೌವನೇ ।**
**ರಕ್ಷಂತಿ ಸ್ಥವಿರೇ ಪುತ್ರಾಃ ನ ಸ್ತ್ರಿ ಸ್ವಾತಂತ್ರ್ಯ ಮರ್ಹತಿ ॥**

ಸ್ತ್ರೀಯರು ಪ್ರಾಕೃತಿಕವಾಗಿ ಕೆಲವು ಶಾರೀರಿಕ ಅನಾನುಕೂಲತೆಗಳಿಂದ ಕೂಡಿದ್ದಾರೆ. ಇದರಿಂದಾಗಿ ಸ್ತ್ರೀಯರಲ್ಲಿ ಸ್ವಾಭಾವಿಕವಾಗಿ ಮೃದುತನ ಹೊಂದಿರುವರು. ದುಷ್ಟ ಕಾಮುಕರು ಇದರ ದುರ್ಲಾಭವನ್ನು ಪಡೆಯಲು ಹೊಂಚು ಹಾಕುತ್ತಿರುತ್ತಾರೆ.

ಆದ್ದರಿಂದ ಸ್ತ್ರೀಯರ ಶರೀರ ರಕ್ಷಣೆಗಾಗಿ ಬಾಲ್ಯದಲ್ಲಿ ತಂದೆಯು, ಯೌವನದಲ್ಲಿ ಪತಿಯು, ವೃದ್ಧಾಪ್ಯದಲ್ಲಿ ಪುತ್ರರು ಇವಳನ್ನು ನೋಡಿಕೊಳ್ಳುತ್ತಾ ರಕ್ಷಿಸಬೇಕು ಎಂದು ಮನುವಿನ ಅಭಿಪ್ರಾಯ ಹೊರತು ಯಾವುದೇ ಕಾರ್ಯದಲ್ಲಿ ಸ್ವಾತಂತ್ರ್ಯವೇ ಇಲ್ಲವೆಂದರೆ ಅನುಭವ ವಿರುದ್ಧವಾದೀತು.

ಸುಂದರವಾದ ಗುಲಾಬಿ ಹೂವುಗಳನ್ನು ಮುಳ್ಳುಗಳಿಂದ ರಕ್ಷಿಸುವಂತೆ, ತಾವರೆಯನ್ನು ಆಳವಾದ ನೀರು, ಬಳ್ಳಿಗಳಿಂದ ರಕ್ಷಿಸುವಂತೆ ಸ್ತ್ರೀಯನ್ನು

ರಕ್ಷಿಸಿ ಮನೆಯ ಮಕ್ಕಳ ಪೋಷಣೆಯ ಜವಾಬ್ದಾರಿಯನ್ನು ನಿಶ್ಚಿಂತಳಾಗಿ ಮುಂದುವರೆಸಲಿ ಎಂದೇ ಈ ರಕ್ಷಣೆ ಹೊರತು ಅನ್ಯಥಾ ತಿಳಿಯಬಾರದು.

ಸ್ತ್ರೀ ಧರ್ಮದಲ್ಲಿ ಬರುವ ಪಾತಿವ್ರತ್ಯ, ಪತಿಸೇವೆ. ಇವುಗಳು ಸಮಾಜಸೇವೆ, ಅನಾಥರ ಸೇವೆ, ರೋಗಿಗಳ ಸೇವೆ ಇವುಗಳು ಹೇಗೆ ಆದರ ಸೂಚಕಗಳೋ ಹಾಗೇ ಆದರ ಸೂಚಕ ಮಾತ್ರ.

ಒಳ್ಳೆಯ ಸ್ತ್ರೀಯನ್ನು ಕುಟುಂಬದ ಎಲ್ಲಾ ಸದಸ್ಯರೂ ಚೆನ್ನಾಗಿ ನೋಡಿಕೊಳ್ಳಬೇಕೆಂದು ಮನುವೇ ತಿಳಿಸಿದ್ದಾನೆ. ಸ್ತ್ರೀಯ ಮನಸ್ಸು ಪ್ರಫುಲ್ಲವಾಗಿರುವಂತೆ ನೋಡಿಕೊಳ್ಳಬೇಕು ಎಂದು 3/55ನೇ ಪದ್ಯದಲ್ಲಿ ತಿಳಿಸಿದ್ದಾನೆ.

**ಪಿತೃಭಿಃ ಭ್ರಾತೃಭಿಶ್ಚೈತಾಃ ಪತಿಭಿಃ ದೇವರೈಸ್ತಥಾ ।**
**ಪೂಜ್ಯಾ ಭೂಷಯಿತವ್ಯಾಶ್ಚ ಬಹು ಕಲ್ಯಾಣಮೀಪ್ಸುಭಿಃ ॥**

ಯಾವ ಮನೆಯಲ್ಲಿ ಸ್ತ್ರೀಯರಿಗೆ ಗೌರವಾದರಗಳಿವೆಯೋ ಆ ಮನೆಯ ಬಗ್ಗೆ ದೇವತೆಗಳು ವಾಸಿಸಲು ಇಷ್ಟಪಡುವರು. ಸ್ತ್ರೀಯರಿಗೆ ಆದರ ಮನ್ನಣೆ ಇರದ ಮನೆಯಲ್ಲಿ ದೇವತೆಗಳು ವಾಸಿಸಲು ಇಷ್ಟಪಡದೆ ಸಕಲ ಕಾರ್ಯಗಳೂ ವ್ಯರ್ಥವಾಗುವುವು.

**ಯತ್ರ ನಾರ್ಯಾಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।**
**ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಃ ತತ್ರಫಲಾ ಮತಾಃ ॥**

ಎಲ್ಲಿ ಸ್ತ್ರೀಯರು ಪುರುಷರಿಂದ ಪೀಡಿತರಾಗಿ ಶೋಕತಪ್ತರಾಗುವುದಿಲ್ಲವೋ ಈ ಕುಲವು ಶುಕ್ಲಪಕ್ಷದ ಚಂದ್ರನು ವೃದ್ಧಿಸುವಂತೆ ಅಭಿವೃದ್ಧಿಯನ್ನು ಹೊಂದುವುದು. ಅನ್ಯಾ ಕುಲವೇ ಶೀಘ್ರವಾಗಿ ನಾಶ ಹೊಂದುವುದು.

**ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಂ ।**
**ನ ಶೋಚಂತಿ ತು ಯತ್ರೈತಾಃ ವರ್ಧತೇ ತದ್ಧಿ ಸರ್ವದಾ ॥**

*– ಮನು3–57*

* * * * * *



# 21. ರಂಗೋಲೆ





- ***ರಂಗೋಲೆ :***

ರಂಗೋಲೆ ಎಂಬ ಪದವು ಮನೆಯ ಹಾಗೂ ಹೊಸ್ತಿಲಿನ ಮುಂದೆ ಬರೆಯುವ ಹಸೆಯನ್ನು ತಿಳಿಸುತ್ತದೆ.

ರಂಗೋಲೆಯು, ರಂಗಾವಲ್ಲಿ ರಂಗವಲ್ಲಿ, ರಂಗ + ಬಲಿ ಇತ್ಯಾದಿ ಪದಗಳಿಂದ ಕರೆಯಲ್ಪಡುತ್ತದೆ..

ಸ್ತ್ರೀಯರು ತಮ್ಮ ಮನೆಯನ್ನು ಗೋಮಯದಿಂದ ಸಾರಿಸಿ ರಂಗವಲ್ಲಿಯಿಂದ ಅಲಂಕಾರವನ್ನು ಮಾಡುವುದು ಭಾರತೀಯರ ಸಂಪ್ರದಾಯ.

**ಮಾರ್ಜಯಿತ್ವಾ ಗೃಹಂ ಪಶ್ಚಾತ್ ಗೋಮಯೇನಾನುಲಿಪ್ಯ ಚ ।**
**ರಂಗವಲ್ಯಾ ದಿಭಿಃ ಪಶ್ಚಾದ್ ಅಲಂಕೃತ್ಯ ಸಮಂತತಃ ॥**

"ರಂಗೋಲಿ" ಎಂದರೆ ಯಾವುದರಿಂದ ಶ್ರೀರಂಗನು ಬೇಗನೆ ಒಲಿದು ಅವರ ಮನೆಯಲ್ಲಿ ಲಕ್ಷ್ಮೀ ಸಹಿತ ವಾಸಿಸುವನೋ ಅದೇ ರಂಗೋಲಿ. ರಂಗನನ್ನು ಒಲಿಸಿಕೊಳ್ಳುವ ಮಾರ್ಗವೇ ರಂಗೋಲಿ. ಇದಕ್ಕೆ "ರಂಗಾವಲ್ಲಿ" ಎಂದೂ ಹೆಸರಿದೆ. ಇದೇ ರಂಗೋಲೆಗಳಿಂದ ಹಸೆ ಬರೆದು ಅದಕ್ಕೆ ಹಸಿರು, ಕೆಂಪು, ನೀಲಿ ಮೊದಲಾದ ರಂಗಿನ ಪುಡಿ (ಬಣ್ಣದ ರಂಗೋಲೆ)ಯನ್ನು ಸೇರಿಸಿ ಚಿತ್ರ ಬಿಡಿಸಿದರೆ ಇದರಿಂದ ಆಯಾಯ ಬಣ್ಣಗಳಿಗೆ ಪ್ರಿಯರಾದ ನವಗ್ರಹಾದಿ ದೇವತೆಗಳನ್ನು ಒಲಿಸಬಹುದು.

ರಂಗೋಲೆಯನ್ನು ಉಪಯೋಗಿಸದೆ ಯಾವುದೇ ಶುಭಕಾರ್ಯಗಳಿಲ್ಲ. ಭಿಕ್ಷುಕರು ರಂಗೋಲೆ ಹಾಕದ ಮನೆಗೆ ಭಿಕ್ಷೆಗೆ ಹೋಗುತ್ತಿರಲಿಲ್ಲ. ಶ್ರಾದ್ಧದ ದಿವಸವೆಂದು ತಿಳಿಯುತ್ತಿದ್ದರು. ರಂಗೋಲೆಯನ್ನು ಹಾಕಿರುವ ಮನೆಯಲ್ಲಿರುವ ವಿಷ ವಾತಾವರಣವನ್ನು ಹೋಗಲಾಡಿಸಿ ವಿಷವನ್ನೇ ತಲೆಕೆಳಗಾಗಿ ಮಾಡಿರುವುದು ರಂಗೋಲೆ. (ರಂಗ =ಗರಂ) ಗರಂ ಎಂದರೆ ಸಂಸಾರಕ್ಕೆ ವಿಷಪ್ರಾಯವಾದದ್ದು ಅಜ್ಞಾನ. ಅದನ್ನು ಪರಿಹರಿಸುವುದು ರಂಗೋಲೆ.



ಬಿಳಿ ರಂಗೋಲೆಯಲ್ಲಿ ಶ್ರೀಲಕ್ಷ್ಮೀದೇವಿಯು ಸನ್ನಿಹಿತಳಾಗಿರುವಳು. ಗೃಹಿಣಿ ಎನಿಸಲು ತನ್ನ ಗೃಹವನ್ನು ರಂಗವಲ್ಯಾದಿಗಳಿಂದ ಅಲಂಕರಿಸಿದರೆ "ಸದ್ಗೃಹಿಣೀ" ಎಂದು ಕರೆಯುವಷ್ಟು ಪಾತ್ರವನ್ನು ರಂಗೋಲೆ ಹೊಂದಿದೆ.

ನಾಮಕರಣ, ಉಪನಯನ, ವಿವಾಹ, ದೇವತಾ ಪೂಜೆ ಮೊದಲಾದ ಮಂಗಳ ಕಾರ್ಯಗಳಲ್ಲಿ ಸ್ಥಳವು ಪವಿತ್ರವಾಗಿರಬೇಕು. ಅದಕ್ಕಾಗಿ ಶುದ್ಧಿ ಮಾಡಿ ಹಾಗೆ ಬಿಡದೆ ಹಸೆಯನ್ನು ಹಾಕುತ್ತಿದ್ದರು. ಹಸೆ ಬರೆದು ಅದರ ಮೇಲೆ ಪೀಠವನ್ನಿರಿಸಿ, ವಧೂವರರನ್ನು ಕೂಡಿಸಿ ವಿವಾಹಾದಿ ಕಾರ್ಯಗಳನ್ನು ಮಾಡುತ್ತಾರೆ.





ಭಗವಂತನಿಗೆ ನೈವೇದ್ಯ ಮಾಡಲು ಮಂಡಲ ಬರೆದು ರಂಗೋಲಿಯನ್ನು ಹಾಕಿ ಅದರ ಮೇಲೆ ನೈವೇದ್ಯ ವಸ್ತುಗಳನ್ನಿಡುತ್ತಾರೆ. ರಂಗೋಲೆಯ ಮೇಲೆ ಹಣ್ಣು, ದೀಪ, ಅಕ್ಷತೆ ಗಂಧಾದಿಗಳನ್ನಿಟ್ಟಾಗ ಮಾತ್ರ ಅವುಗಳು ಪಾವಿತ್ರ್ಯ ಹೊಂದುತ್ತವೆ.

ರಂಗೋಲೆಯಲ್ಲಿ ನೇರವಾಗಿರುವ ಗೆರೆಯನ್ನು, ಅಡ್ಡವಾಗಿ ಹಾಕಿರುವ ಗೆರೆಯನ್ನು, ಓರೆಗೆರೆಗಳನ್ನು ನೋಡಬಹುದು.

ಅಡ್ಡಗೆರೆ ಎಳೆದಾಗ ಶಾಂತಿಗುಣವನ್ನು, ನೇರ ಎಳೆದಾಗ ಸ್ಥಿರವಾಗಿರು–ವಿಕೆಯನ್ನು, ಓರೆಗೆರೆಗಳು ಚಂಚಲತೆಯನ್ನು, ಅಡ್ಡಾದಿಡ್ಡಿ ಗೆರೆಗಳು ಅವ್ಯವಸ್ಥೆಯನ್ನು ತಿಳಿಸುತ್ತವೆ.

ಊಟಕ್ಕೆ ಕೂತಾಗ ಹಾಕಿರುವ ಅಡ್ಡಗೆರೆಯು ಶಾಂತರಾಗಿ ಎಂದರೆ ಭಗವಂತನಲ್ಲಿ ಮನಸ್ಸನ್ನಿಟ್ಟು ಹರಟದೆ ಭೋಜನ ಮಾಡಿರಿ ಎಂದು, ತಿಳಿಸುತ್ತಾ ಗೀತೆಯ ***"ತದ್ಗತಾ ತನ್ಮನಸ್ಕಾಃ"*** ಎಂಬ ಮಾತನ್ನು ಸ್ಮರಣೆಗೆ ತರುತ್ತದೆ.

ನೇರ ಗೆರೆಯನ್ನು ಎಳೆದಾಗ ಜೀವನದಲ್ಲಿ ಬರುವ ದುಃಖಾದಿಗಳನ್ನು ಸಹಿಸುವ ಗಟ್ಟಿತನವನ್ನು ಕೊಡಲಿ ಎಂದು, ಓರೆ ಗೆರೆಗಳನ್ನು ಬರೆದು ಅದನ್ನು ಕತ್ತರಿಸಿದರೆ ಚಾಂಚಲ್ಯವನ್ನು ಪರಿಹರಿಸಿದಂತೆ ಸೂಚಿಸುವುದು. ಓರೆಗೆರೆಗಳನ್ನು ಕತ್ತರಿಸಿದಾಗ ಚಂಚಲತೆಯನ್ನು ಪರಿಹರಿಸಿಕೊಂಡು ಜೀವನದಲ್ಲಿ ಪತಿಯೊಡನೆ ಸುಖದಿಂದಿರು ಎಂಬ ಆಶೀರ್ವಾದವನ್ನು ಸೂಚಿಸುತ್ತದೆ.

ಅಡ್ಡಾದಿಡ್ಡಿ ಗೆರೆಗಳನ್ನು ಬರೆದು ಅದನ್ನು ಕತ್ತರಿಸಿದಾಗ ಜೀವನದಲ್ಲಿ ಬರುವ ಅವ್ಯವಸ್ಥೆಯನ್ನು ಪರಿಹರಿಸಿಕೊಂಡು ಸುಖದಿಂದ ಇರು ಎಂದು ಸೂಚಿಸುತ್ತದೆ.

ರೇಖೆಗಳನ್ನು ಎಡದಿಂದ ಬಲಕ್ಕೆ ಬರೆಯುವುದು ಪದ್ಧತಿ ಇದರರ್ಥ ಎಡ ಎಂದರೆ ದುಃಖ, ದುಃಖದಿಂದ ಸುಖದ ಕಡೆಗೆ ಸಂಸಾರವನ್ನು ಒಯ್ಯು ಎಂಬ ಶುಭಾಕಾಂಕ್ಷೆ ಇದೆ.

ರಂಗೋಲಿಯಿಂದ ಇಂತಹ ಸಾತ್ವಿಕ ಭಾವನೆಗಳನ್ನು ಬೆಳೆಸಲು ಸಾಧ್ಯವಿರುವುದರಿಂದಲೇ ಸಮಯ ವ್ಯರ್ಥವಾಯಿತು ಎಂದು ಎಲ್ಲೂ ಯಾರೂ ಆಕ್ಷೇಪಿಸಿಲ್ಲ. ಸ್ತ್ರೀಯರು ತಮ್ಮ ಮನಸ್ಸನ್ನು ಒಂದೇ ಕಡೆ ಕೇಂದ್ರೀಕರಿಸಲೂ ರಂಗೋಲಿಯು ಉಪಯುಕ್ತವಾಗಿದೆ.

ಈ ಕೆಳಗಿನ ಎರಡು ರಂಗೋಲಿಗಳನ್ನು ವಧೂವರರ ವಿವಾಹ ಕಾಲದಲ್ಲಿ ಬರೆದು ಪೀಠವನ್ನಿಟ್ಟು ಅದರ ಮೇಲೆ ಕುಳ್ಳಿರಿಸುವರು. ಇದು ವಧೂವರರು ಪರಸ್ಪರ ಅನ್ಯೋನ್ಯತೆಯಿಂದ ಜೀವನ ಸಾಗಲೂ ಸೂಚಿಸುತ್ತದೆ.



ರಂಗೋಲೆಯಲ್ಲಿ ಸ್ವಸ್ತಿಕ್ ಚಿಹ್ನೆ, ಭದ್ರಕ ವಿಷ್ಣುಪಾದ ಹಾಗೂ ಲಕ್ಷ್ಮೀಪಾದ, ತುಳಸಿ ವೃಂದಾವನ, ಸರ್ಪಚಿಹ್ನೆ ಮೊದಲಾದ ಚಿಹ್ನೆಗಳನ್ನು ತಿಥಿ, ವಾರ, ನಕ್ಷತ್ರಕ್ಕೆ ತಕ್ಕಂತೆ ಅಂದಂದು ಬರೆಯುವ ಪದ್ಧತಿಯಿತ್ತು.



***ಸ್ವಸ್ತಿಕ್ :*** ಈ ಚಿತ್ರವು ಧರ್ಮ ಅರ್ಥ, ಕಾಮ, ಮೋಕ್ಷಗಳ ಸಂಕೇತವಾಗಿದ್ದು. ಮನೆಗೆ ನಾಲ್ಕು ದಿಕ್ಕು, ನಾಲ್ಕು ವಿದಿಕ್ಕುಗಳಿಂದ ಶುಭ ಬರಲಿ ಎಂದು

ಸಂಕೇತಿಸುತ್ತದೆ. ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಯನ್ನು ಕೊಡಲಿ ಎಂದು ತಿಳಿಸುತ್ತದೆ. ಧರ್ಮ, ಅರ್ಥ, ಕಾಮ-ಮೋಕ್ಷಗಳು ಪರಸ್ಪರ ಸಂಬಂಧವನ್ನು ಹೊಂದಿವೆ ಎಂದೂ ಸ್ವಸ್ತಿಕ್ ಚಿಹ್ನೆಯು ತಿಳಿಸುತ್ತದೆ. ಆದ್ದರಿಂದಲೇ ಗೃಹಪ್ರವೇಶ ಕಾಲದಲ್ಲಿ ಈ ಚಿಹ್ನೆ ಹೆಚ್ಚು ಉಪಯೋಗಿಸುತ್ತಾರೆ.

- ***ಲಕ್ಷ್ಮೀ ಪಾದ – ನಾರಾಯಣ ಪಾದ :***

ಲಕ್ಷ್ಮೀನಾರಾಯಣ ಪಾದಗಳನ್ನು ಬರೆಯುವುದು ವಾಡಿಕೆಯಲ್ಲಿದ್ದು, ಶುಕ್ರವಾರದಂದು ಸಂಜೆ ಲಕ್ಷ್ಮೀ ನಮ್ಮ ಮನೆಗೆ ಬರಲೆಂದು ಲಕ್ಷ್ಮೀದೇವಿಯು ಪಾದಗಳನ್ನು ಮನೆಯ ಹೊರಗಿನಿಂದ ಒಳಗಿನವರೆಗೂ ರಂಗೋಲೆಯಲ್ಲಿ ಬರೆಯುವರು. ಲಕ್ಷ್ಮೀಪಾದ ಮಾತ್ರವಲ್ಲದೆ ನಾರಾಯಣನ ಪಾದಗಳನ್ನು ಬರೆಯಬೇಕು. ಪಾದಗಳನ್ನು ಬರೆಯುವಾಗ ಪುರುಷ ರೇಖೆ, ಸ್ತ್ರೀರೇಖೆಗಳನ್ನು ಸರಿಯಾಗಿ ತಿಳಿಯಬೇಕು. ಪರಾಕ್ರಮ, ಪೌರುಷ, ಸ್ಥಿರಚಿತ್ತತೆ ಮೊದಲಾದ ಗುಣಗಳು ಪುರುಷ ಪ್ರಧಾನವಾಗಿದ್ದು, ಸೌಮ್ಯತೆ, ವಿನಯತೆ, ತಾಳ್ಮೆ ಮೊದಲಾದ ಗುಣಗಳು ಸ್ತ್ರೀಪ್ರಧಾನವಾದದ್ದೆಂದು ಪ್ರಸಿದ್ಧವಾಗಿದೆ.



ರೇಖೆಗಳಲ್ಲಿಯೂ ಕೂಡ ನೇರವಾದ, ದಪ್ಪವಾದ ಕಠಿಣ ರೇಖೆಗಳು ಪುರುಷ ರೇಖೆಯಂತಲೂ, ಲಲಿತವಾದ, ಬಾಗಿರುವ, ಕೋಮಲ ರೇಖೆಗಳು ಸ್ತ್ರೀರೇಖೆಗಳೆಂದೂ ಪ್ರಸಿದ್ಧವಾಗಿವೆ. ಸ್ತ್ರೀದೇವತಾ ಪೂಜೆಯಲ್ಲಿ ಸ್ತ್ರೀ ರೇಖೆಗಳನ್ನು, ಪುರುಷ ದೇವತಾರಾಧನೆಯಲ್ಲಿ ಪುರುಷರೇಖೆಗಳನ್ನು ಬಳಸಬೇಕು.

ಊಟದಲ್ಲಿ ಕುಳಿತಿರುವಾಗಲೂ ಸ್ತ್ರೀಯರ ಎಲೆಯಲ್ಲಿ ಬಾಗಿರದ ರೇಖೆಯನ್ನು ಪುರುಷರ ಎಲೆಯ ಮುಂದೆ ನೇರವಾದ ದಪ್ಪವಾದ ಪುರುಷ ರೇಖೆಗಳನ್ನು ಹಾಕಬೇಕು.

ಈ ರಂಗೋಲೆಯು ಮುಖ್ಯವಾಗಿ ಸಂಕ್ಷೇಪವಾಗಿ ತತ್ವಗಳನ್ನೂ, ಉಪದೇಶಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತದೆ.

***ರಥ :*** **ರಥಸ್ಥಂ ಕೇಶವಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ ।** ಎಂಬಂತೆ ರಥಸ್ಥನಾದ ಭಗವಂತನನ್ನು ನೋಡಿದ ಮಾತ್ರಕ್ಕೆ ಪಾಪಪರಿಹಾರವಾಗುತ್ತದೆ. ಈ ಕಾರಣದಿಂದಲೇ ರಂಗೋಲೆಯಲ್ಲಿ ರಥದ ಚಿತ್ರವನ್ನು ಬರೆದು ಭಗವಂತನನ್ನು ಚಿತ್ರಿಸಿ ದರ್ಶನವಾಗಲೆಂದು ಸಪ್ತಮೀ ತಿಥಿ, ಭಾನುವಾರ, ಸೂರ್ಯಾಭಿಮಾನಿಕವಾದ ನಕ್ಷತ್ರವಿರುವ ದಿನಗಳಲ್ಲಿ ಮನೆಯ ಮುಂದೆ, ತುಳಸೀ ಮುಂದೆ, ದೇವರ ಮುಂದೆ ರಥದ ಚಿತ್ರವನ್ನು ಬರೆದು ಕೇಶವನನ್ನು ನೋಡುವ ಪದ್ಧತಿಯಿತ್ತು. ಈ ರಥದ ಚಿತ್ರವನ್ನು ನೋಡಿಯೇ ಇಂದು ಯಾವ ವಾರ, ತಿಥಿ, ಯಾವ ನಕ್ಷತ್ರಗಳೆಂದು ತಿಳಿಯುವಷ್ಟು ಪ್ರಭಾವ ಬೀರಿತ್ತು ಈ ರಂಗೋಲೆ.




***ನಾಗಮಂಡಲ :*** ಪಂಚಮಿಯಂದು ನಾಗಾರಾಧನೆ ಮುಖ್ಯವಾಗಿದ್ದು, ನಾಗಾಂತರ್ಯಾಮಿ ಶ್ರೀ ಸಂಕರ್ಷಣನ ಪ್ರೀತಿಗಾಗಿ ನಾಗಪೂಜೆಯು ವಿಹಿತವಾಗಿದೆ. ಪ್ರತಿ ತಿಂಗಳ ಶುಕ್ಲ ಹಾಗೂ ಕೃಷ್ಣ ಪಕ್ಷಗಳ ಪಂಚಮಿಯಂದು ನಾಗಗಳ ಪ್ರೀತಿಗಾಗಿ ಸರ್ಪಗಳ ಚಿತ್ರವನ್ನು ರಂಗೋಲೆಯಲ್ಲಿ ಮನೆಯ ಅಂಗಳದಲ್ಲಿ ಬರೆಯುವುದು ವಾಡಿಕೆಯಲ್ಲಿದೆ.

ನಾಗಪಂಚಮಿಯಂದು (ಶ್ರಾವಣ ಪಂಚಮಿ) ಕೆಮ್ಮಣ್ಣಿನಿಂದ ಸರ್ಪಗಳ ಹಸೆ ಬರೆದು ಕೆಮ್ಮಣ್ಣಿನಿಂದ ಅಲಂಕರಿಸುವುದೂ ಪದ್ಧತಿಯಿದೆ. ನಾಗಗಳನ್ನು ರಂಗೋಲೆಯಿಂದ ಬಿಡಿಸಿ ಪೂಜಿಸಿದರೆ ನಾಗಗಳ ಭಯವಿರುವುದಿಲ್ಲ. ಚರ್ಮ ರೋಗಬರುವುದಿಲ್ಲ. ಬದಲಾಗಿ ದೇಹಕಾಂತಿ ಮೊದಲಾದ ಗುಣಗಳನ್ನು ಕಾಣಬಹುದು.



ಪಂಚಮಿ ಹಾಗೂ ನಾಗಪಂಚಮಿ ದಿವಸದಂದು ಹೊಸ್ತಿಲಲ್ಲಿಯೂ ಎರಡು ಪಂಚಫಣನಾಗಗಳನ್ನು ಬರೆಯುವುದು ಪದ್ಧತಿ ಇದೆ.

***ರಂಗೋಲಿಯ ಫಲ :*** ದೇವರ ಮುಂದೆ ರಂಗೋಲೆಯನ್ನು ಹಾಕಿ ಮಂಡಲವನ್ನು ಬರೆದಿರುವ ಸ್ತ್ರೀಯು ಏಳು ಜನ್ಮಗಳಲ್ಲಿ ವೈಧವ್ಯವನ್ನು ಪಡೆಯುವುದಿಲ್ಲ.

**ಮಂಡಲಂ ನಾರೀ ಕೇಶವಾಗ್ರತಃ ।**

**ಸಪ್ತಜನ್ಮಸು ವೈಧವ್ಯಂ ಸಾ ನಾಪ್ನೋತಿ ಕದಾಚನ ॥**

***ರಂಗೋಲೆ ಹಾಕುವ ಕ್ರಮ :*** ರಂಗೋಲೆಯನ್ನು ಹಾಕುವ ಮೊದಲು ಗೋಮಯ(ಸಗಣಿ) ಕೆಂಪು ಮಣ್ಣು (ಕೆಮ್ಮಣ್ಣು)ಗಳನ್ನು ಉಪಯೋಗಿಸಬೇಕು.

ಗೋಮಯದಲ್ಲಿ ದುರ್ಗಾದೇವಿಯ ಸನ್ನಿಧಾನವಿರುತ್ತದೆ. ಕೆಮ್ಮಣ್ಣಿನಲ್ಲಿ ಭೂದೇವಿಯ ಸನ್ನಿಧಾನವಿರುತ್ತದೆ. ರಂಗೋಲೆಯಲ್ಲಿ ಶ್ರೀದೇವಿಯ ಸನ್ನಿಧಾನವಿರುತ್ತದೆ.

ದುರ್ಗಾದೇವಿಯನ್ನು ಈ ಮೂರರಲ್ಲಿ ಅನುಸಂಧಾನ ಮಾಡಿ ನಂತರ ಹೊಸ್ತಿಲು ಅಥವಾ ತುಲಸೀ ವೃಂದಾವನ, ದೇವರ ಮುಂದಿನ ಸ್ಥಳಗಳನ್ನು

ನೀರಿನಿಂದ ತೊಳೆಯಬೇಕು. ನಂತರ ಗೋಮಯದಿಂದ ಸಾರಿಸುವುದು. ಗೋಮಯಲೇಪನಾ ನಂತರದಲ್ಲಿ (ಗೋಮಯಲೇಪನದ ಮೇಲೆ) ಕೆಮ್ಮಣ್ಣಿನ ಲೇಪನ ನಂತರ ಮುಂದೆ ಹೇಳುವ ಕ್ರಮದಿಂದ ರಂಗೋಲೆಯನ್ನು ಹಾಕುವುದು ಈ ಕ್ರಮವನ್ನು ಅನುಸರಿಸುವುದರಿಂದ ದುರ್ಗಾ – ಭೂ–ಶ್ರೀದೇವಿಯರ ಸನ್ನಿಧಾನವುಂಟಾಗಿ ಭಗವಂತನು ಅಲ್ಲಿ ವಾಸಿಸುವನು. ಲಕ್ಷ್ಮೀದೇವಿಯು ಇರದ ಜಾಗದಲ್ಲಿ ಭಗವಂತನು ಇರುವುದಿಲ್ಲ. ಲಕ್ಷ್ಮೀಯು ಸಂಪರ್ಕವಿರದ ವಸ್ತುವನ್ನು ಸ್ಪರ್ಶಿಸುವುದೂ ಇಲ್ಲ. ಆದ್ದರಿಂದ ಲಕ್ಷ್ಮೀ ಸನ್ನಿಧಾನವಿರುವ ಸಗಣಿ, ಕೆಮ್ಮಣ್ಣು, ರಂಗೋಲೆಯನ್ನು ಉಪಯೋಗಿಸಿದರೆ ಭಗವಂತನು ಅಲ್ಲಿ ಸನ್ನಿಹಿತನಾಗುವನು. ಪ್ರತಿದಿನವೂ ಈ ಕೆಳಗಿನ ಕ್ರಮದಿಂದ ತುಲಸಿ, ಹೊಸ್ತಿಲು ದೇವರ ಮುಂದೆ ಹಸೆಯನ್ನು ಬರೆಯಬೇಕು.

ಸಾಮಾನ್ಯ ದಿನಗಳಲ್ಲಿ ಈ ರೀತಿ ರಂಗೋಲೆಯನ್ನು ಬರೆಯಬೇಕು



ಉತ್ಥಾನ ದ್ವಾದಶೀ



ದ್ವಾದಶೀ, ಏಕದಶೀ, ಮಹಾಲಕ್ಷ್ಮೀವ್ರತ, ಜ್ಯೇಷ್ಠಾಲಕ್ಷ್ಮೀವ್ರತ, ಮೊದಲಾದ ವ್ರತಗಳ ಕಾಲದಲ್ಲಿ ಈ ರಂಗೋಲೆ ಬರೆಯಬೇಕು



ಇಲ್ಲಿ ಇಪ್ಪತ್ತೈದು ಗೆರೆಗಳಿದ್ದು 25 ತತ್ವಗಳನ್ನು ಸೂಚಿಸುತ್ತದೆ. 5 ಜ್ಞಾನೇಂದ್ರಿಯ 5 ಕರ್ಮೇಂದ್ರಿಯ 5 ಭೂತಗಳು, 5 ತನ್ಮಾತ್ರೆಗಳು, ಮನಸ್ತತ್ವ, ಅಹಂಕಾರತತ್ವ, ಮಹತತ್ವ–ಜೀವ–ಪ್ರಕೃತಿ– ಈ ತತ್ವಗಳೆಲ್ಲವೂ ಪರಮಪುರಷನ ಅಧೀನವಾಗಿವೆ ಎಂದು ಚಿಂತಿಸುವುದು. ಹೊಸ್ತಿಲಿನಲ್ಲಿ ಅರಷಿಣ–ಕುಂಕುಮ

ಮಂತ್ರಾಕ್ಷತೆಯನ್ನು ಹಾಕಿ ಲಕ್ಷ್ಮೀನಾರಾಯಣರು ನಮ್ಮ ಮನೆಯಲ್ಲಿದ್ದು ನಮಗೆ ಎಂಟು ಮೂಲೆಗಳಿಂದ ಸ್ವಸ್ತಿಯನ್ನುಂಟು ಮಾಡಲಿ ಎಂದು ಮಧ್ಯದಲ್ಲಿ ಸ್ವಸ್ತಿಕ್ ಚಿಹ್ನೆಯನ್ನು ಬರೆಯುವುದು. ಈ ಲಕ್ಷ್ಮೀ ನಾರಾಯಣರು ಶತ್ರುಗಳನ್ನು ನಾಶ ಮಾಡುವ ಸಾಮರ್ಥ್ಯ ಪಡೆದಿರುವ ಶಂಖ ಹಾಗೂ ಚಕ್ರಗಳನ್ನು ಧರಿಸಿರುವರು ಎಂದು ಚಕ್ರ ಶಂಖಗಳು ಸೂಚಿಸುತ್ತವೆ. ಇದರಿಂದ ಅನಿಷ್ಟ ಪರಿಹಾರ ಹಾಗೂ ಇಷ್ಟಪ್ರಾಪ್ತಿ.

ಲಕ್ಷ್ಮೀನಾರಾಯಣರು ನಮ್ಮ ಮನೆಗೆ ಎಷ್ಟು ಕಾಲದವರೆಗೂ ಮಂಗಳವನ್ನುಂಟು ಮಾಡಬೇಕು? ಎಂದರೆ ಸೂರ್ಯ, ಚಂದ್ರರಿರುವಷ್ಟು ಕಾಲದವರೆಗೂ ಸ್ವಸ್ತಿಯುಂಟು ಮಾಡಬೇಕು ಎಂಬರ್ಥವು ಸೂರ್ಯಚಂದ್ರರ ಚಿತ್ರದಿಂದ ವ್ಯಕ್ತವಾಗುತ್ತದೆ.

ಶುಕ್ರವಾರದಂದು ಲಕ್ಷ್ಮಿಯು ಸಮುದ್ರದಿಂದ ಭೂಮಿಗೆ ಬಂದು ಶ್ರೀಮನ್ನಾರಾಯಣನನ್ನು ವರಿಸಿದ ದಿವಸವಾಗಿದೆ. ಆದ್ದರಿಂದ ಅಂದು ಹೊಸ್ತಿಲಲ್ಲಿ ಮೊದಲು ಎರಡು ಲಕ್ಷ್ಮೀಪಾದ ಕಡೆಯಲ್ಲಿ ನಾರಾಯಣನ ಪಾದಗಳ ಚಿತ್ರಗಳನ್ನು ಬರೆಯಬೇಕು. ಲಕ್ಷ್ಮೀನಾರಾಯಣರು ತಮ್ಮ ಪಾದವನ್ನು ನಮ್ಮ ಮನೆ ಕಡೆಗೆ ಹಾಕಲಿ ಎಂಬ ಆಶ್ವಾಸನೆ ಇದರರ್ಥ.

ಲಕ್ಷ್ಮೀದೇವಿಯು ಸಮುದ್ರದಿಂದ ಬರುವಾಗ ಕಮಲವನ್ನು ಹಿಡಿದು ಬಂದದ್ದರಿಂದ ಮಧ್ಯದಲ್ಲಿ ಸ್ವಸ್ತಿಕ ಚಿಹ್ನೆಗೆ ಬದಲಾಗಿ ಅಷ್ಟದಳವುಳ್ಳ ಕಮಲವನ್ನು ಬರೆಯಬೇಕು.

**ಶುಕ್ರವಾರದಂದು ಲಕ್ಷ್ಮೀನಾರಾಯಣರ ಪಾದ ನಮ್ಮ ಮನೆಗೆ ಬರಲಿ ಎಂದು ಹೀಗೆ ಬರೆಯಬೇಕು.**



ಸಾಮಾನ್ಯವಾಗಿ ಪಂಚಮಿಯಂದು ಸರ್ಪಗಳ ತಿಥಿಯಾಗಿದ್ದು ಅಂದು ವಿಷ ಹಾಗೂ ಸರ್ಪ ಭಯ ಪರಿಹಾರಕ್ಕಾಗಿ ಸರ್ಪಾಂತರ್ಗತ ಸಂಕರ್ಷಣನನ್ನು ಪೂಜಿಸಬೇಕು.

ಪಂಚಮೀ ತಿಥಿಯಂದು, ಆಶ್ಲೇಷಾ ನಕ್ಷತ್ರವಿರುವ ದಿನದಂದು, ಷಷ್ಠಿ ತಿಥಿಯಂದು, ನಾಗಪಂಚಮೀಯಂದು, ಸುಬ್ರಹ್ಮಣ್ಯ ಷಷ್ಠಿಯಂದು, ಈ ನಾಗಗಳಿರುವ ಪಂಚಫಣ ಸರ್ಪಾಂತರ್ಗತನಾದ ಜಯಾಪತಿ ಸಂಕರ್ಷಣನನ್ನು ಆವಾಹಿಸಿ, ಅರ್ಚಿಸಿದರೆ ಮನೆಗೆ ಸರ್ಪಭಯವಾಗಲಿ ರಾಹುವಿನ ಭಯವಾಗಲಿ, ಇರುವುದಿಲ್ಲ. ಚರ್ಮರೋಗಗಳೂ ಪರಿಹೃತವಾಗುವುವು. ನಾಗಪ್ರತಿಷ್ಠೆಯನ್ನು ಮಾಡಿದವರಂತು ಪಂಚಮೀ–ಯಂದು (ಶುಕ್ಲ–ಕೃಷ್ಣ) ನಾಗಗಳ ರಂಗೋಲೆ ಬರೆಯಬೇಕು. ಈ ರೀತಿ ನಾಗಗಳ ಅಂತರ್ಯಾಮಿಯ ಪೂಜೆಯಿಂದ ವಿವಾಹ ನಿಧಾನವಾಗುವುದು, ಸಂತಾನರಾಹಿತ್ಯ ಮೊದಲಾದ ದೋಷಗಳೂ ಪರಿಹಾರವಾಗುವುವು.

**ಪಂಚಮೀ, ನಾಗಪಂಚಮೀ, ಸ್ಕಂಧಷಷ್ಠಿ ಇಂತಹ ನಾಗಾನುಗ್ರಹಕ್ಕಾಗಿ ಪಂಚಫಣ ನಾಗಗಳನ್ನು ಬರೆಯಬೇಕು**



ಏಕಾದಶಿ ಹಾಗೂ ದ್ವಾದಶೀಯಂದು ಅದರಲ್ಲೂ ಕಾರ್ತಿಕ ಮಾಸದ ಏಕಾದಶೀ ದ್ವಾದಶಿಯಂದು (ಉತ್ಥಾನದ್ವಾದಶಿ) ಮಧ್ಯದಲ್ಲಿ ಸ್ವಸ್ತಿಕ ಚಿಹ್ನೆಗೆ ಬದಲಾಗಿ ತುಲಸೀ ವೃಂದಾನವನ್ನು ಬರೆದು ಕಾರ್ತಿಕ ದಾಮೋದರನನ್ನು ಆವಾಹಿಸಿ ಹೊಸ್ತಿಲಲ್ಲಿ ಪೂಜಿಸುವುದು.

ಕಾರ್ತಿಕ ಪೂರ್ಣಿಮಾ ದಿನದಂದು ಹೊಸ್ತಿಲಿನ ಮೇಲೆ ಹೊಸ್ತಿಲಿನ ಆದಿ, ಮಧ್ಯ, ಅಂತ್ಯಗಳಲ್ಲಿ ದೀಪಗಳನ್ನು ಬರೆದು, ಹೊಸ್ತಿಲಿನ ಮುಂದೆ ಹಾಗೂ ಮನೆಯ ಮುಂದೆಯೂ ದೀಪಗಳ ರಂಗೋಲೆಯನ್ನೇ ಹಾಕಬೇಕು.

- ***ಚಕ್ರಾಬ್ಜ ಮಂಡಲ :***

**"ಪೂಜ್ಯಶ್ಚ ಭಗವಾನ್ ನಿತ್ಯಂ ಚಕ್ರಾಬ್ಜಾದಿಕಮಂಡಲೇ ।"**

ಎಂದು ಶ್ರೀಮದಾಚಾರ್ಯರು ತಂತ್ರಸಾರ ಸಂಗ್ರಹದಲ್ಲಿ ಚಕ್ರಾಬ್ಜ–ಮಂಡಲವನ್ನು ಬರೆದು ಅಲ್ಲಿ ಭಗವಂತನನ್ನು ಆವಾಹಿಸಿ ಪೂಜಿಸಬೇಕೆಂದು ಆದೇಶಿಸಿರುವರು.





ಅದರಂತೆ ಹೋಮ-ಹವನಾದಿಗಳಲ್ಲಿ ಚಕ್ರಾಬ್ಜಮಂಡಲವನ್ನು ಬರೆದು ಅಲ್ಲಿ ಕಲಶ ಸ್ಥಾಪನ ಮಾಡಿ ಪೂಜಿಸಿದರೆ ಭಗವಂತನು ಹೆಚ್ಚು ಪ್ರಸನ್ನನಾಗುವನು.

ಇದೇ ರೀತಿ ಹಬ್ಬಗಳಲ್ಲಿಯೂ ಹಸೆ ಹಾಕುವುದಿದೆ. ಯುಗಾದಿಯಂದು ಬೇವು-ಬೆಲ್ಲದ ಚಿತ್ರ, ಕೃಷ್ಣಾಷ್ಟಮಿಯಂದು ತೊಟ್ಟಿನಲ್ಲಿರುವ ಶ್ರೀಕೃಷ್ಣನ ಮುದ್ದು ಚಿತ್ರ.

ದೀಪಾವಳಿಯಂದು ಕತ್ತಲೆ ಹೋಗಲಾಡಿಸುವ ದೀಪದ ಚಿತ್ರ, ಮಕರ ಸಂಕ್ರಾಂತಿ ಹಾಗೂ ರಥ ಸಪ್ತಮಿ ದಿನದಂದು ರಥದ ಚಿತ್ರ ದೀಪಾವಳಿಯಂದು ಮನೆಯ ಮೂಲೆ ಮೂಲೆಗಳಲ್ಲಿ ದೀಪಗಳ ರಂಗೋಲೆ ಬರೆದು ಆ ದೀಪಗಳ ಚಿತ್ರದ ಮೇಲೆ ದೀಪಗಳನ್ನು ಇಟ್ಟು ಲಕ್ಷ್ಮಿಯ ಆಗಮನವನ್ನು ಸೂಚಿಸುವರು.



ಹಿಂದಿನ ಕಾಲದಲ್ಲಿ ಮನೆಯ ಮುಂದೆ ಬರೆದಿರುವ ಹಾಗೂ ಹೊಸ್ತಿಲ ಮೇಲೆ ಬರೆದಿರುವ ರಂಗೋಲೆಯನ್ನು ನೋಡಿ ವಾರ ಮಾಸಗಳನ್ನು ತಿಳಿಯುತ್ತಿದ್ದರು.

1. ಭಾನುವಾರ - ಸೂರ್ಯನ ಚಿತ್ರ
2. ಸೋಮವಾರ - ರುದ್ರಲಿಂಗ, ಶಿವಪೀಠ

3. ಮಂಗಳವಾರ – ಕಾಳಿಪೀಠ (ಕೆಂಪು ಬಣ್ಣದಿಂದ)
4. ಬುಧವಾರ – ಸ್ವಸ್ತಿಕ್ ಚಿಹ್ನೆ
5. ಗುರುವಾರ – ನಕ್ಷತ್ರಗಳು – ಷಟ್ಕೋಣ ಚಿತ್ರ
6. ಶುಕ್ರವಾರ – ಲಕ್ಷ್ಮೀವಾಸಸ್ಥಾನ ಪದ್ಮ



- ***ದೀಪಾವಳೀ ರಂಗೋಲಿ :***

ದೀಪಾವಳಿಯು ಎಂದರೆ ಮೂರು ದಿವಸ ಆಚರಿಸುವ ವಿಶಿಷ್ಟ ಹಬ್ಬವಾಗಿದೆ. ಇದೊಂದು ಅಜ್ಞಾನದಿಂದ ಬೆಳಕಿನ ಕಡೆಗೆ ನಡೆಯುವ ಸೂಚಕ.

ತಮಸೋ ಮಾ ಜ್ಯೋತಿರ್ಗಮಯ ಎಂದಂತೆ ಕಾರ್ತಿಕ ಮಾಸವು ಪೂರ್ಣವಾಗಿ ದೀಪಗಳನ್ನು ಹಚ್ಚುವ ಮಾಸವಾದರೆ ದೀಪಾವಳಿಯು ಜ್ಞಾನಜ್ಯೋತಿಯ ಸಂಕೇತವಾಗಿದೆ.

ನರಕಾಸುರನು ಭೂ ವರಾಹನ ಮಗನಾದರೂ ತಾಮಸ ಸ್ವಭಾವದಿಂದ ಲೋಕಕಂಟಕನಾಗಿದ್ದನು. ಇಡೀ ಲೋಕವನ್ನೇ ತಮಸ್ಸಿನಲ್ಲಿ ಕೆಡಹಿದನು. ಈ ತಮಸ್ಸಿನಿಂದ ಜ್ಯೋತಿಯ ಕಡೆಗೆ ಹೋಗಲು ಶ್ರೀಕೃಷ್ಣನು ಚತುರ್ದಶಿಯಂದು ಸಂಹರಿಸಿದನು. ಇದನ್ನೇ "ನರಕ ಚತುರ್ದಶಿ" ಎಂದು ಕರೆಯಲಾಗಿದೆ.

ಇಂದು ಮನೆಯ ಮುಂದೆ ದೀಪಗಳ ಆವಲಿಗಳನ್ನು ಬೆಳಗಬೇಕು.

ಆನಾನೂಕೂಲವಿದ್ದವರು ಈ ದೀಪಾವಳಿಯ ರಂಗೋಲೆಯನ್ನು ಬರೆದೂ ಫಲವನ್ನು ಪಡೆಯಬಹುದು.

ದೀಪಾವಳಿಯಂದು ಬಲಿಯು ಪಾತಾಳದಿಂದ ಭೂಮಿಗೆ ಬರುವನು. ಇದರಿಂದ ದೀಪವನ್ನು ಅವನನ್ನು ಸ್ವಾಗತಿಸುವುದು. ಬಲಿಯು ಬಂದನೆಂದರೆ ವಾಮನನೂ ಬರುವನು ವಾಮನ ಬಂದರೆ ಶ್ರೀ ಲಕ್ಷ್ಮೀಯೂ ಬರುವಳು. ಇಷ್ಟಾರ್ಥಗಳನ್ನು ಕೊಡುವ ದೇವತೆಗಳನ್ನು ಭಕ್ತ್ಯಾದರಗಳಿಂದ ಆಹ್ವಾನಿಸುವ ಸಂಕೇತಗಳೇ ದೀಪಗಳ ರಂಗೋಲಿಗಳು.







# 22. ದಾಸರ ಪದಗಳು





- *ದಾಸರ ಪದಗಳು :*

ಪ್ರಾತಃ ಕಾಲದಿ ನಿದ್ರೆ ಪರಿಹರಿಸಿ
ಹರಿಯ ಆರ್ತಿಯಿಂದಲಿ ಸ್ಮರಿಸಿ
ನಾಥ ಗೋವಿಂದಗೆ ಪ್ರದಕ್ಷಿಣೆ ಮಾಡಿ
ಪ್ರೀತಿಯೊಳತಿಥಿ ಪೂಜೆಗೈದು
ಪುರಾಣಶಾಸ್ತ್ರವ ಕೇಳಿ
ನಾಥ ಪುರಂದರ ವಿಠಲಗೆ ನಮೋ ಎನ್ನು ।
ಏಳುತ್ತಾ ಗೋವಿಂದಗೆ ಕೈಯ ಮುಗಿಯುವೆ
ಕಣ್ಣಿವೆ ತೆಗೆದು ನೋಡಿವೆ ಶ್ರೀಹರಿಯ
ನಾಲಿಗೆ ತೆಗೆದು ನಾರಾಯಣ ನರಹರಿ
ಸೇಳ ಸಾಸಿರ ಗೋಪಿಯರಸ
ಎನ್ನಾಳುವ ದೊರೆಯೇ ಶ್ರೀಪುರಂದರವಿಠಲ ॥

. . . .

## ಉದಯರಾಗ

ಭೂಪಾಳಿ ಝಂಪೆತಾಳ

ಏಳಯ್ಯಾ ಬೆಳಗಾಯಿತು ॥ ಪ ॥

ಏಳು ನಾರಾಯಣನೇ ಏಳು ಲಕ್ಷ್ಮೀರಮಣ
ಏಳು ಶ್ರೀಗಿರಿವಾಸ ಶ್ರೀವೆಂಕಟೇಶ ॥ ಅನು ॥

ದಾಸರೆಲ್ಲರೂ ಬಂದು ಧೂಳಿದರ್ಶನಗೊಂಡು
ಲೇಸಾಗಿ ತಾಳದಂಡಿಗೆಯ ಪಿಡಿದು
ಕೇಶವನೆ ನಿಮ್ಮ ಸಿರಿನಾಮವನೆ ಸ್ಮರಿಸುತಲಿ
ವಾಸುದೇವನೇ ಉದಯದಲಿ ಪಾಡುತಿಹರು ॥ 1 ॥

ಕಾಸಿದ್ದ ಹಾಲುಗಳ ಕಾವಡಿಯ ತುಂಬಿಟ್ಟು
ಲೇಸಾಗಿ ಕೆನೆಮೊಸರು ಬೆಣ್ಣೆಯನು ಮಿದ್ದು
ಶೇಷಶಯನನೇ ಏಳು ಸಮುದ್ರಮಥನವ ಮಾಡು
ದೇಶ ಕೆಂಪಾಯಿತೇಳಯ್ಯ ಹರಿಯೇ ॥ 2 ॥

ಅರಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ
ಸುರರು ತಂದಿಹರಯ್ಯ ಸುಜನರೊಡೆಯ
ಅರವಿಂದಲೋಚನನೇ ಕೋಳಿ ಕೂಗಿತು ಕೇಳು
ಪುರಂದರವಿಠ್ಠಲನೇ ಬೆಳಗಾಯಿತು ॥ 3 ॥

. . . .

## ಗಜೇಂದ್ರ ಮೋಕ್ಷ

ಪ್ರಾತಃ ಕಾಲದಲ್ಲಿ ಸ್ತ್ರೀಯರು ಪುರಂದರದಾಸರ ಈ ಗಜೇಂದ್ರಮೋಕ್ಷವನ್ನು ಪಠಿಸಬೇಕು

ನಾರಾಯಣಾಯ ನಮೋ ನಾಗೇಂದ್ರಶಯನಾಯ
ನಾರದಾದ್ಯಖಿಲ ಮುನಿನಮಿತ ಚರಣಾಂಭೋಜ
ಸಾರಿದರೆ ಪೊರೆವ ಕಂಸಾರಿ ರಕ್ಷಿಪುದಿಂದು ಕಾರುಣ್ಯದಿಂದ ಒಲಿದು ।

ಪಾಂಡ್ಯ ದೇಶದೊಳು ಇಂದ್ರದ್ಯುಮ್ನನೆಂಬ ಭೂ
ಮಂಡಾಧಿಪನು ವೈರಾಗ್ಯದಲಿ ಹರಿಪಾದ
ಪುಂಡರೀಕದ ಧ್ಯಾನದಿಂ ಮಹಾತಪದೊಳಿರೆ ಚಂಡತಾಪಸ ಅಗಸ್ತ್ಯ
ಹಿಂಡು ಶಿಷ್ಯರವೆರಸಿ ಬರಲು ಸತ್ಕರಿಸಿದರೆ
ಕಂಡು ಗಜಯೋನಿಯಲಿ ಜನಿಸು ಹೋಗೆನುತ ಉ
ದ್ದಂಡ ಶಾಪವನ್ನಿತ್ತು ಮುನಿ ಪೋದನಾಕ್ಷದಿ ಶುಂಡಾಲನಾದನರಸ ॥

ಕ್ಷೀರ ಸಾಗರತಡಿಯ ಐದು ಯೋಜನದ ವಿ–
ಸ್ತಾರದಲ್ಲಿ ವರತ್ರಿಕೂಟಾದ್ರಿ ಶೃಂಗತ್ರಯದ
ರಾರಾಜಿಸುತ್ತಲಿಪ್ಪ ರಜತ ತಾಮ್ರಧ್ವಜದ ಮೇರುಸಮ ಗಾಂಭೀರ್ಯದಿ
ಪಾರಿಜಾತಾಂಭೋಜ ತುಲಸೀ ಮಲ್ಲಿಗೆ ಜಾಜಿ
ಸೌರಭದೊಳಶ್ವತ್ಥಪೂಗ ಪುನ್ನಾಗ ಜಂ–
ಬೀರಾದಿ ತರೂಗಲ್ಮ ಖಗ ಮೃಗಗಳೆಸೆವಲ್ಲಿ ವಾರಣೇಂದ್ರನು ಮೆರೆದನು ॥

ಆನೆ, ಹೆಣ್ಣಾನೆ, ಮರಿಯಾನೆಗಳ ಸಹಿತ ಆ
ಕಾನನದಿ ನಲಿಯುತ್ತ ಬೇಸಿಗೆಯ ಬಿಸಿಲಿನಲಿ
ತಾ ನೀರಡಿಸಿ ಬಂದದೊಂದು ಸರಸಿಗೆ ಸಲಿಲಪಾನಾಭಿಲಾಷೆಯಿಂದ
ನಾನಾ ಪ್ರಕಾರಾದಲ್ಲಿ ಜಲಕ್ರಿಡೆಯಾಡುತಿರೆ
ಏನಿದೆತ್ತಣ ರಭಸನೆಂದುಗ್ರ ಕೋಪದಿಂ
ದಾನೆಗಳ ಬಾಯ್ತೆರೆದು ನುಂಗಿಕೊಂಡಂಘ್ರಿಯನು ಏನೆಂಬೆನಾ ಕ್ಷಣದೊಳು ॥

ಒತ್ತಿ ಹಿಡಿದೆಳೆಯುತಿರೆ ಎತ್ತಣದಿದೇನೆನುತ
ಮತ್ತ ಗಜರಾಜ ಅವುಡೊತ್ತಿ ಘೀಳಿಡುತ್ತಲೆಳ–
ದೊತ್ತಿ ತಂದುದು ದಡಕೆ ಮತ್ತೆ ನಡುಮಡವಿನೊಳಗೆತ್ತೆಲೆದುದಾನೆಗಳವು
ಇತ್ತಮಡವಿತ್ತು ಕಾದಿತ್ತು ಸಾವಿರವರುಷ
ವಿಸ್ತರಿಸಿತೇನೆಂಬೆ ಮತ್ತ ಗಜೇಂದ್ರಂಗೆ
ಸತ್ವ ತಗ್ಗಿತು ತನ್ನ ಚಿತ್ತದೊಳು ಧ್ಯಾನಿಸುತ್ತ ಮತ್ತಾರು ಗತಿಯೆನುತಲಿ ॥

ಬಂದುದಾ ಸಮಯದಲ್ಲಿ ಹಿಂದೆ ಮಾಡಿದ ಸುಕೃತ
ದಿಂದ ದಿವ್ಯಜ್ಞಾನ ಕಣ್ದೆರೆದು ಕೈಮುಗಿದು
ವಂದಿಸಿದ ಮನದೊಳರವಿಂದನಾಭಾಚ್ಯುತ ಮುಕುಂದ ಮುನಿವೃಂದವಂದ್ಯ ।

ಇಂದಿರಾರಮಣ ಗೋವಿಂದ ಕೇಶವ ಭಕ್ತ
ಬಂದು ಕರುಣಾಸಿಂಧು ತಂದೇ ನೀ ಸಲಹೆನ್ನ
ಬಂದು ಸಿಲುಕಿದೆನು ಬಲು ದುಂದುಗದಮಾಯಾ ಪ್ರಬಂಧದಿಂ ನೆಗಳಿನಿಂದ ॥

ಪರಮಾತ್ಮ ಪರಿಪೂರ್ಣ ಪರಮೇಶ ಪರತತ್ತ್ವ
ಪರತರ ಪರಂಜ್ಯೋತಿ ಪರಮಪಾವನ ಮೂರ್ತಿ
ಉರುತರಾ ಪರಬ್ರಹ್ಮ ಆನಂದ ಪರಮೇಷ್ಠಿ ಪರಾತ್ಪರ ಪರಮಪುರುಷ ।
ನಿರುಪಮ ನಿಜಾನಂದ ನಿರ್ಭಯ ನಿರಾವರಣ
ನಿರವಧಿಕ ನಿರ್ಗುಣ ನಿರಂಜನ ನಿರಾಧಾರ
ನಿರವದ್ಯ ನಿಸ್ಸಂಗ ನಿಶ್ಚಿಂತ್ಯ ನಿತ್ಯನೇ ನೋಯಿಸದೆ ಸಲಹೆನ್ನನು ॥

ಇಂತೆನುತ ಮೂರ್ಛೆಯಲಿ ಗುಪಿತ ಕಂಠಧ್ವನಿಯೊ
ಳಂತರಾತ್ಮಕನ ನೆನೆಯುತ್ತಳುತ್ತಿರಲಿತ್ತ
ನಂತ ಮಹಿಮನು ಕೇಳಿ ಕರುಣದಿಂದಾಕ್ಷಣಾನಂತಶಯನದಲೆದ್ದನು ।
ಸಂತಪಿಸಿ ಸಿರಿಮುಡಿಯು ಗರುಡವಾಹನನಾಗಿ
ಚಿಂತೆ ಬೇಡೇಳೆನುತ ಅಭಯಹಸ್ತವನ್ನಿತ್ತೇ
ಕಾಂತ ಭಕ್ತನ ಬಳಿಗೆ ಬಂದೆರಡು ಕೈಯಿಂದ ದಂತಿವರನನು ನೆಗಹಿದ ॥

ನೆಗಳ ಬಾಯನು ಚಕ್ರದಲಿ ಸೀಳಿ ಕರಿವರನ
ಉಗುವ ಕರುಣದಲಿ ಮಯದಡದಲ್ಲೆ ಗಜ ಜನ್ಮ
ತೆಗೆದುದಾಕ್ಷಣದಿ ಮಣಿಮಕರಕುಂಡಲದಿಂದ ಮಿಗೆ ಶೋಭಿಸುತ್ತಲೆಸೆದನು ।
ವಿಗಡೆ ದೇವಲ ಋಷಿಯ ಶಾಪದಲಿ ಬಿದ್ದಿಳೆಗೆ
ಮಿಗೆ ನಕ್ರನಾಗಿ ಹೂಹೂ ಎಂಬ ಗಂಧರ್ವ
ಅಘಹರನ ಕಂಡು ನಿಜಗತಿಗೈದುದಮರರೋಳ್ ಮಿಗೆ ಮೆರೆದುದೋಲಯಸುತ॥

ಮಣಿಮಯ ಕಿರೀಟಕುಂಡಲ ಹಾರಾಕೌಸ್ತುಭದ
ಮಿನುಗುತಿಹ ವೈಜಯಂತಿಯ ಭೂಷಣಾಂಗದ
ಫಣೆಯ ಕಸ್ತೂರಿ ತಿಲಕ ನಾಮದಿಂದೆಸವುತಿಹ ವರ ಶಂಖ ಚಕ್ರದಿಂದ ।
ಝಣಿಝಣಿತ ನೂಪುರದ ದಂತ ಪಂಕ್ತಿಯ ಕೃಪೇ
ಕ್ಷಣದ ಸಿರಿಮೊಗದ ಪೀತಾಂಬರಾಲಂಕೃತದ
ಮಣಿದಾ ಜಯ ಜಯವೆಂಬ ಸುರಸಿದ್ಧ ಸಾಧ್ಯ ಸಂದಣಿಯೊಳಗೆ ಹರಿ ಮೆರೆದನು॥

ಹರಿಸ್ತುತಿಯ ಗೈದಂಘ್ರಿಗೆರಗಲಾ ಭೂಷಣಾ
ದರದಿಂದ ಸತ್ಕರಿಸಿ ಶರಧೀಶ್ವೇತದ್ವೀಪ
ಗಿರಿಶೃಂಗ ವಾರಾಶಿ ತರುಶೇಷ ವಾಲ್ಮೀಕಿ ಮುನಿ ಧರಣಿ ಧ್ರುವಲಕ್ಷ್ಮಿಯು ।
ಹರ–ಗಿರಿಜೆ–ವಿಧಿ–ವಾಣಿ–ನಾರದ ಪ್ರಹಲ್ಲಾದ
ಗರುಡ–ಗೋ–ವಿಪ್ರ–ಋಷಿ–ಗಂಗಾರ್ಕ–ಚಂದ್ರಾಗ್ನಿ
ಸಿರಿವತ್ಸಶಂಖ ಚಕ್ರಾದಿಯವತಾರಗಳ ಸ್ಮರಿಸುವರ ಕಾಯ್ವೆನೆಂದ ॥

ಆವನಿದನು ಉದಯ ಕಾಲದೊಳೆದ್ದು ನಿಜಭಕ್ತಿ
ಭಾವಶುದ್ಧಗಳಿಂದ ಪೇಳಿ ಕೇಳುವ ಜನರ–
ಘವಳಿಯ ಪರಿಹರಿಸಿ ಸುಜ್ಞಾನ ಪದವಿತ್ತು ದೇಹಾವಸಾನದೊಳಗೆ ।
ಶ್ರೀವಾಸುದೇವನಾಜ್ಞಾಪಿಸಿ ಗಜೇಂದ್ರ ಸಹಿ
ತಾ ವಿಹಂಗಾಧೀಪನನೇರಿ ವೈಕುಂಠಕ್ಕೆ
ದೇವ ಬೀಜಯಂಗೈದ ಶ್ರೀಹರಿ ಪುರಂದರವಿಠಲನು ॥

ಉಗಾಭೋಗ

ಆನೆಯನು ಕಾಯ್ದಾಗ ಜ್ಞಾನವಿದ್ದುದು ಏನೂ
ನಾನು ವದರಲು ಈಗ ಕೇಳದಿದ್ದುದೇನು
ದಾನವಾಂತಕ ಹರಿ ದೀನರಕ್ಷಕನೆಂಬೊ
ಮಾನ ಉಳಿಸಿಕೊಳ್ಳೊ ಪುರಂದರವಿಠಲ ।

. . . .

## ತುಳಸಿ ಸ್ತೋತ್ರ – 1 : ಉದಯರಾಗ

ಶ್ರೀತುಳಸಿಯಾ ಸೇವಿಸಿ
ಶ್ರೀತುಳಸಿಯಾ ಸೇವೆ ಪ್ರೀತಿಯಿಂದಲಿ ಮಾಡೆ
ಗಾತರದ ಮಲವಳಿದು ಮಾತೆಯೆಂಬನಿತರೊಳು
ಪಾತಕ ಪರಿಹರಿಸಿ ಪುನೀತರನು ಮಾಡುವಳು ಯಾತಕನುಮಾನವಯ್ಯಾ ।
ಸುಧೆಗಡಲ ಮಥಿಸುವ ಸಮಯದಲಿ ವೈದ್ಯನಾಗಿ
ಪದಮನಾಭನು ತಾನು ಉದಭವಿಸಿ ಬರಲಂದು
ಉದರಿದವು ಕಣ್ಣಿಂದ ಉದಕವುತ್ಸಹದಿಂದಲೆ ತುಳಸಿನಾಮವಾಗೆ ।

ತ್ರಿದಶರೊಂದಿಸುತ ಮೋದದಿಂದ ಕೊಂಡಾಡಿದರು
ಒದಗಿ ಸುಜನರು ತಮ್ಮ ಸದನದಲಿ ನಿತ್ಯ ಸ–
ತ್ಪದನಿಗೆ ಸಿದ್ಧವೆಂದು ಮುದದಿಂದ ತಿಳಿದು ವೃಂದಾವನ ರಚಿಸಿದರಯ್ಯ ॥
ಮೂಲದಲಿ ಸರ್ವತೀರ್ಥಗಳುಂಟು ತನ್ಮಧ್ಯೆ
ಕಾಲಮೀರದೆ ಸರ್ವನದನದಿಗಳಮರಗಣ
ಮೇಲೆ ದಳ ಒಂದರಲಿ ಒಂದೊಂದು ಮೂರುತಿಯು ವಾಲಯವಾಗಿಪ್ಪುದು ।
ಮೂರ್ಲೋಕಗಳ ಧರ್ಮ ವ್ರತಕೆ ಮಿಗಿಲೆಸುವುದು
ನೀಲಮೇಘಶ್ಯಾಮಗರ್ಪಿಸಿ ತುಲಸಿ ನಿ–
ರ್ಮಾಲ್ಯವನು ಸತತ ಕರ್ಣದಲಿ ಧರಿಸಿದ ಮನುಜ ಕಾಲನಾಳಿಗೆ ಶೂಲನು ॥
ಉದಯದೊಳಗೆದ್ದು ನೀರೆರೆಯೆ ಮಜ್ಜನಗೈದು
ತುದಿ ಬೆರಳಿನಿಂದ ಮೃತ್ತಿಕೆಯ ಫಣೆಯೊಳಗಿಟ್ಟು
ಮುದದಿಂದಲೊಂದು ಪ್ರದಕ್ಷಿಣೆ ನಮಸ್ಕಾರ ತದ ನಂತರದಲ್ಲಿ ಭಜನೆ ।
ವದನದೊಳು ಗೈಯೆ ಧರೆಯೊಳಗಿದ್ದ ಸರ್ವನದ
ನದಿಗಳಿಗೆ ನೂರ್ಮಡಿಯಾತ್ರೆ ಮಾಡಿದ ಫಲ
ಒದಗುವುದು ಹಿಂದಣಾನಂತ ಜನ್ಮಗಳಘವ ತುದಿಮೊದಲು ದಹಿಪುದಯ್ಯ ॥
ಆವವನ ಮನೆಯಲ್ಲಿ ತುಳಸಿ ಸಾಲಿಗ್ರಾಮ
ಆವವನ ಮನೆಯಲ್ಲಿ ಹರಿದಾಸರಾಕೂಟ
ಆವವನ ಭುಜದಲ್ಲಿ ತಪ್ತಮುದ್ರಾಂಕಿತವು ಪಾವಮಾನಿಯ ಮತದೊಳು ।
ಆವವನ ಕಾಲತ್ರಯವ ಕಳೆವನಾನಲ್ಲಿ ಶ್ರೀವಾಸುದೇವ ಮುನಿದೇವಾದಿ ಗಣಸಹಿತ
ಕಾವುತ್ತಲಿಪ್ಪ ಬಲಿಗೊಲಿದಂತೆ ತೊಲಗದಲೆ ಭಾವಿಸಿರಿ ಭಾವಜ್ಞರು ॥
ಕಂಡರೆ ದುರಿತಕ್ಕೆ ಕೆಂಡವನು ಬೀರುವುದು
ಕೊಂಡಾಡಿದರೆ ಪುಣ್ಯಪರಿಮಿತಿವುಂಟು ಮೈ–
ದಿಂಡುಗೆಡಹಿದರೆ ಪುನರಪಿ ಜನನವಿಲ್ಲ ಸಲೆ ದಂಡವಿಟ್ಟವ ಮುಕ್ತನೊ ।

ಚಂಡಾಲ ಕೇರಿಯೊಳು ಇರಲು ಹೀನಯವಲ್ಲ
ಪಾಂಡುರಂಗನಕ್ಷೇತ್ರ ಸರಿಮಿಗಿಲು ಎನಿಸುವುದು
ತಂಡತಂಡದ ಕುಲಕೆ ಅವರವರ ಯೋಗ್ಯ ಫಲ ಕಂಡವರಿಗುಂಟೆ ಅಯ್ಯ ॥

ಚಿತ್ತಶುದ್ಧನು ಆಗಿ ಮುಂಝಾನೆಯೊಳು ತುಳಸಿ
ಸ್ತೋತ್ರವನೆ ಮಾಡುತ್ತ ದಿವ್ಯವಾಗಿಹ ತ್ರಿದಳ
ಪ್ರತ್ಯೇಕ ಪಾತ್ರೆಯಲಿ ತೆಗೆದು ಶೋಧಿಸಿ ತುಂಬಿ ವಿತ್ತಾಂದಿಯಲಿ ತಾರದೆ ।
ಮತ್ತೆ ವಸ್ತ್ರದಿ ಹಸ್ತ ಶಿಲೆಯರ್ಕ ಏರಂಡ
ಪತ್ರದಲಿ ತಾರದಲೆ ಭೂಮಿಯೊಳಗಿಡದೆ ಪೂ–
ರ್ವೋತ್ತರಭಿಮುಖವಾಗಿ ಭಕ್ತಿಯಿ ತರಬೇಕು ಹೊತ್ತು ಮೀರಿಸಲಾಗದೋ ॥

ಕವಿ ಮಂಗಳವಾರ ವೈಧೃತಿ ವ್ಯತಿಪಾತ
ರವಿಶಶಿಯ ಸಂಗಮ ಪರ್ವದಿ ಪುಣ್ಯಕಾಲ
ದಿವಸ ದ್ವಾದಶಿ ಶ್ರೇಷ್ಠ ಉಪರಾಗ ಪಿತೃಶ್ರಾದ್ಧ ಇವುಗಳಲಿ ತೆಗೆಯದಿರಿ ।
ನವ ವಸನ ಪೊದ್ದು ಊಟವ ಮಾಡಿ ತಾಂಬೂಲ
ಸವಿಯುತ್ತ ಮುಟ್ಟದಿರಿ ಯುವತಿ ಶೂದ್ರರಿಂ ತರಿಸುವುದುಚಿತವಲ್ಲೆಂದು
ತಿಳಿದು ಕೊಂಡಾಡುತಿರಿ ದಿವಸ ದಿವಸಗಳೊಳಯ್ಯ ॥

ದಳವಿದ್ದರೇ ಒಳಿತು ಇಲ್ಲದಿದ್ದರೆ ಕಾಷ್ಠ
ಎಲೆ ಮೃತ್ತಿಕೆಗಳಿಂದ ಪೂಜೆ ಮಾಡಲಿಹುದು
ತುಳಸಿ ನಿರ್ಮಾಲ್ಯವಾದರು ತ್ರಿವಾರಲಿ ತೊಳೆತೊಳೆದು ಏರಿಸಲಿಬಹುದು ।
ತುಳಸಿ ಒಣಗಿದ್ದರೂ ಲೇಶದೋಷಗಳಿಲ್ಲ
ತುಳಸಿ ವಿರಹಿತವಾದ ಪೂಜೆಯದು ಸಲ್ಲದು
ತುಳಸಿ ತುಳಸಿ ಎಂದು ಸ್ಮರಣೆಯಾದರು ಮಾಡಿ ಜಲಜಾಕ್ಷನರ್ಚಿಸಿರೈಯ್ಯ ॥

ತುಳಸಿ ಇಲ್ಲದ ಸದನ ಹೊಲೆ ಮಾದಿಗರ ಸದನ
ತುಳಸಿ ಇಲ್ಲದ ಬೀದಿ ನರಕ ಕೈಳಸುವ ಹಾದಿ
ತುಳಸಿ ಇಲ್ಲದ ತೀರ್ಥವೆಂದಿಗಿದ್ದರು ವ್ಯರ್ಥ ತುಳಸಿ ಬಲು ಪ್ರಧಾನ್ಯವೋ ।

ತುಳಸಿ ಮಿಶ್ರಿತವಾದ ನೈವೇದ್ಯ ಗತಿಸಾಧ್ಯ
ತುಳಸಿ ಧರಿಸಿದ ದೇಹ ಪರಮ ಸಾರ್ಥಕವಯ್ಯ
ತುಳಸಿ ದಳ ಹರಿಗೆ ಅರ್ಪಿಸಿದವನ ಪುಣ್ಯಕ್ಕೆ ನೆಲೆಯ ನಾ ಕಾಣೆನಯ್ಯ ॥

ಶಿವನಸತಿ ಪ್ರಹ್ಲಾದ ನಾರದ ವಿಭಿಷಣನು
ಧ್ರುವ ಅಂಬರಿಷ ಶಶಿಬಿಂದು ರುಕ್ಮಾಂಗದನು
ಇವರೆ ಮೊದಲಾದವರು ಭಕ್ತಿ ಪೂರ್ವಕದಲಿ ವಿವರವನು ತಿಳಿದರ್ಚಿಸಿ ।
ತವಕದಿಂದ ತಂತಮ್ಮ ಘನಪದವನೈದಿದಿರು
ಭುವನದಿಳೆಯೊಳು ನಿರ್ಮಲ ಜನರು ಭಜಿಸಿದರು
ಜವಭಾವರ ನೋಡಿಸಿ ಜನದೇಹವನು ನೀಗಿ ಭವದೂರರಾದರೈಯ್ಯ ॥

ಉದಯಕಾಲದೊಳೆದ್ದು ಆವನಾದರು ತನ್ನ
ಹೃದಯ ನಿರ್ಮಲನಾಗಿ ಭಕ್ತಿಪೂರ್ವಕದಿಂದ
ಸದಮಲಾ ತುಳಸಿಯನು ಸ್ತೋತ್ರ ಮಾಡಿದ ಕ್ಷಣಕೆ ಮದಗರ್ವ ಪರಿಹಾರವೂ ।
ಇದೆ ತುಳಸಿ ಸೇವಿಸಿ ಪೂರ್ವದಲಿ ಕಾವೇರಿ ನದಿಯ
ತೀರದಲೊಬ್ಬ ಭೂಸುರ ಪದಕೆ ಪೋದ
ಪದಪದೆಗೆ ಸಿರಿವಿಜಯ ವಿಠ್ಠಲಗೆ ಪ್ರಿಯಳಾದ ಮದನತೇಜನು ಭಜಿಸಿರೈಯ ॥

. . . .

## ಬೃಂದಾವನ ಸ್ತೋತ್ರ

ರಾಗ : ಆದಿತಾಳ

ಬೃಂದಾವನಿ ಜನನಿ ವಂದಿಸುವೆ ಸತತ ಜ–
ಲಂಧರನ ರಾಣಿ ಕಲ್ಯಾಣಿ । ಕಲ್ಯಾಣಿ ತುಳಸಿ ನಿಜ
ಮಂದಿರೆ ಎನಗೆ ದಯವಾಗೆ ॥

### ತುಳಸಿ ಸ್ತೋತ್ರ

ಜಲಜಾಕ್ಷನ ಮಲಕಜ್ಜಲ ಬಿಂದು ಪೀಯೂಷ
ಕಲಶದಲಿ ಬೀಳೆ ಜನಿಸಿದೆ । ಜನಿಸಿ ಹರಿಯಿಂದ ಶ್ರೀ
ತುಲಸಿ ನೀನೆಂದು ಕರೆಸಿದೆ ॥

ಶ್ರೀತರುಣಿವಲ್ಲಭನ ಪ್ರೀತಿವಿಷಯಳೇ ನಿನ್ನ
ನಾ ತುತಿಸಿ ಕೈಯ ಮುಗಿವೆನು । ಮುಗಿವೆ ಎನ್ನಯ ಮಹಾ
ಪಾತಕವ ಕಳೆದು ಪೊರೆಯಮ್ಮ ॥

ತುಲಸಿ ನಿನ್ನಡಿಗೆ ನಾ ತಲೆಬಾಗಿ ಬಿನ್ನೈಪೆ
ಕಲುಷಕರ್ಮಗಳ ಎಣಿಸದೆ । ಎಣಿಸದೆ ಸಂಸಾರ
ಜಲಧಿಯಿಂದೆಮ್ಮ ಕಡೆ ಹಾಯ್ಸು ॥

ನೋಡಿದವ ದುರಿತ ಈಡ್ಯಾಡಿದವ, ನಿನ್ನ ಕೊಂ-
ಡಾಡಿದವ ನಿನ್ನ ಹರಿಪಾದ । ಹರಿಪಾದಕಮಲಗಳ
ಕೂಡಿದವ ಸತ್ಯ ಎಂದೆಂದು ॥

ನಿಂದಿಸಿದವರೆಲ್ಲ ನಿಂದ್ಯರಾಗುವರು ಅಭಿ-
ವಂದಿಸಿದ ಜನರು ಸುರರಿಂದ । ಸುರರಿಂದ ನರರಿಂದ
ವಂದ್ಯರಾಗುವರು ಜಗದೊಳು ॥

ಕಲುಷವರ್ಜಿತೆ ನಿನ್ನ ದಳಗಳಿಂದಲಿ ಲಕ್ಷ್ಮೀ-
ನಿಲಯನಂಘ್ರಿಗಳ ಪೂಜಿಪ । ಪೂಜಿಪರಿಗೆ ಪರಮಮಂ-
ಗಳದ ಪದವಿತ್ತು ಸಲಹುವಿ ॥

ಶ್ರೀತುಲಸೀದೇವಿ ಮನಾತ್ಮ ಲಾಲಿಸು ಜಗ-
ನಾಥ ವಿಠಲನ ಚರಣಾಬ್ಜ । ಚರಣಾಬ್ಜ ಎನ್ನ ಹೃತ್ಪದ್ಮದಲಿ
ನೀ ತೋರೆ ಕೃಪೆಯಿಂದ ॥

– ಜಗನ್ನಾಥದಾಸರು

. . . .

## ತುಳಸೀ ಸ್ತೋತ್ರ – 2

– ಪುರಂದರದಾಸರು

ಬೃಂದಾವನವೆ ಮಂದಿರವಾಗಿಹ ಇಂದಿರೆ ಶ್ರೀ ತುಲಸಿ ।
ನಂದನಂದನ ಮುಕುಂದಗೆ ಪ್ರಿಯಳಾದ ಇಂದಿರೆ ಶ್ರೀ ತುಲಸೀ ।

ತುಳಸಿಯ ವನದಲಿ ಹರಿ ಇಹನೆಂಬುದು ಶ್ರುತಿ ಸಾರುತಿವೆ ಕೇಳಿ ।
ತುಳಸಿದರುಷನದಿಂದ ದುರಿತಗಳೆಲ್ಲವೂ ದೂರವಾಗುವುದು ಕೇಳಿ ।
ತುಳಸಿ ಸ್ವರುಷದಿಂದ ದೇಹ ಪಾವನವೆಂದು ತಿಳಿದುದಿಲ್ಲವೆ ಪೇಳಿ ।
ತುಳಸಿ ಸ್ಮರಣೆ ಸಕಲೇಷ್ಟವ ಪಡೆದು ಸುಖದಲಿ ನೀವು ಬಾಳಿ ॥

## ನಾಂದೀ

ಸತತ ಗಣನಾತ ಸಿದ್ಧಿಯನೀವ ಕಾರ್ಯದಲಿ
ಮತಿ ಪ್ರೇರಿಸುವಳು ಪಾರ್ವತೀದೇವಿ । ಮು–
ಕುತಪದಕೆ ಮನವೀವ ಮನ ಮಹರುದ್ರದೇವರು । ಭ–
ಕುತಿದಾಯಕಳು ಸಿರಿಭಾರತಿದೇವಿ । ಯು–
ಕುತಿ ಶಾಸ್ತ್ರಗಳಲ್ಲಿ ವನಜಸಂಭವನರಸಿ
ಸತ್ಕರ್ಮಗಳ ನಡೆಸಿ ಸುಜ್ಞಾಮತಿಯಿತ್ತು ಪರಿಪಾಲಿಸುವ ನಮ್ಮ ಪವಮಾನನು
ಚಿತ್ತದಲಿ ಆನಂದಸುಖವನೀವಳು ರಮಾ । ಭ–
ಕುತಜನರೊಡೆಯ ನಮ್ಮ ಪುರಂದರವಿಠ್ಠಲನು
ಸತತ ಇವರಲಿ ನಿಂತು ಕೃತಿಯ ನಡೆಸುವನು ॥

. . . .

## ತಾರತಮ್ಯ

ವಿಷ್ಣು ಸರ್ವೋತ್ತಮ ಜೀವಜಡಾತ್ಮಕಜಗದತ್ಯಂತಭಿನ್ನ
ಸಚ್ಚಿದಾನಂದಸ್ವರೂಪ ಮುಕ್ತಾಮುಕ್ತಸುರಗಣಸೇವಿತನಾದ
ಲಕ್ಷ್ಮೀನಾರಾಯಣಗೆ ಅನಂತಾನಂತ ನಮಸ್ಕಾರಾ ॥
ಆತನ ಪತ್ನಿ ಜ್ಞಾನಾನಂದಸ್ವರೂಪಳಾದ ಅನಂತಾನಂತಗುಣದಿಂದ
ನೀಚಳಾದ ಮಹಾಲಕ್ಷ್ಮೀದೇವಿಯರಿಗೆ ನಮಸ್ಕಾರಾ ॥
ಮಹಾಲಕ್ಷ್ಮೀಪುತ್ರರಾದ ಜಗದ್ಗುರುಗಳಾದ
ಬ್ರಹ್ಮವಾಯುಗಳಿಗೆ ಅನಂತಾನಂತ ನಮಸ್ಕಾರಾ ॥
ವೇದಾಭಿಮಾನಿಗಳಾದ ಬ್ರಹ್ಮವಾಯುಗಳಿಗೆ ಸ್ತ್ರೀಯರಾದ
ಸರಸ್ವತಿ ಭಾರತೀರಿಗೆ ಅನಂತಾನಂತ ನಮಸ್ಕಾರಾ ॥

ಶ್ರೀಕೃಷ್ಣಪತ್ನೇರಾದ ಜಾಂಬವತೀ ಕಾಳಿಂದೀ ಭದ್ರ ನೀಲಾ
ಮಿತ್ರವಿಂದಾ ಲಕ್ಷಣಾ ಈ ಆರು ಮಂದಿಗೆ ಅನಂತಾನಂತ ನಮಸ್ಕಾರಾ ॥

ಗರುಡಶೇಷರುದ್ರರಿಗೆ ಹೆಂಡರಾದ ಸೌಪರ್ಣೀ ವಾರುಣಿ
ಪಾರ್ವತೇರಿಗೆ ಅನಂತಾನಂತ ನಮಸ್ಕಾರಾ ॥

ಸ್ವರ್ಗಾಧಿಪತಿಯಾದಂಥ ದೇವೇಂದ್ರಗೆ ಕಾಮರಿಗೆ ಅನಂತಾನಂತ ನಮಸ್ಕಾರಾ ॥

ಅಹಂಕಾರಿಕ ಪ್ರಾಣದೇವರಿಗೆ ಅನಂತಾನಂತ ನಮಸ್ಕಾರಾ ॥

ಇಂದ್ರಪತ್ನೀ ಶಚೀದೇವಿಗೆ ಕಾಮಪತ್ನೀ ರತೀದೇವಿಗೆ
ಸ್ವಾಯಂಭುವ ಮನುವಿಗೆ ಬೃಹಸ್ಪತ್ಯಾಚಾರ್ಯರಿಗೆ ಕಾಮಪುತ್ರ
ಅನಿರುದ್ಧನಿಗೆ ದಕ್ಷಪ್ರಜೇಶ್ವರಗೆ ಈ ಆರು ಮಂದಿಗೆ ಅನಂತಾನಂತ ನಮಸ್ಕಾರಾ ॥

ಕೋಣಾಧಿಪತಿಯಾದ ಪ್ರವಹವಾಯುದೇವರಿಗೆ ಅನಂತಾನಂತ ನಮಸ್ಕಾರಾ ॥

ದೇವರ ಕಣ್ಣುಗಳಿಂದ ಹುಟ್ಟಿದಂಥಾ ಸೂರ್ಯದೇವರಿಗೆ ಮನಸ್ಸಿನಿಂದ
ಹುಟ್ಟಿದಂಥ ಚಂದ್ರದೇವರಿಗೆ ಸ್ತನಗಳಿಂದ ಹುಟ್ಟಿದಂಥಾ ಧರ್ಮರಾಯಗೆ
ಸ್ವಾಯಂಭುವಪತ್ನಿ ಶತರೂಪಾದೇವಿಗೆ ಅನಂತಾನಂತ ನಮಸ್ಕಾರಾ ॥

ದೇವರ ಕುಕ್ಷಿಯಿಂದ ಹುಟ್ಟಿದಂಥಾ ಉದಕಾಭಿಮಾನಿಯಾದ
ಸಮುದ್ರನಾಥಗೆ ಅನಂತಾನಂತ ನಮಸ್ಕಾರಾ ॥

ಬ್ರಹ್ಮದೇವರ ಅಂಕೋದ್ಭವರಾದ ದೇವಋಷ್ಯುತ್ತಮರಾದ
ನಾರದರಿಗೆ ಅನಂತಾನಂತ ನಮಸ್ಕಾರಾ ॥

ಹರಿಸರ್ವೋತ್ತಮತ್ವ ಸ್ಥಾಪಿಸಿದಂಥಾ ಭೃಗುಮುನಿಗೆ ದೇವಮುಖನಾದ
ಅಗ್ನಿದೇವರಿಗೆ ದಕ್ಷಪತ್ನಿ ಪ್ರಸೂತಿದೇವಿಗೆ ಅನಂತಾನಂತ ನಮಸ್ಕಾರಾ ॥

ಗಾಧಿಯ ಮಗನಾದ ವಿಶ್ವಾಮಿತ್ರಗೆ ಬ್ರಹ್ಮಪುತ್ರರಾದ ಮರೀಚಿ ಅತ್ರಿ
ಅಂಗಿರಸ ಪುಲಸ್ತ್ಯ ಪುಲಹ ಕ್ರತು ವಸಿಷ್ಠ ಋಷಿಗಳಿಗೆ
ವೈವಸ್ವತಮನುವಿಗೆ ಅನಂತಾನಂತ ನಮಸ್ಕಾರಾ ॥

ಮಿತ್ರನಾಮಕಸೂರ್ಯಗೆ ಗುರುಪತ್ನಿತಾರಾದೇವಿಗೆ ಕೋಣಾಧಿಪತಿ
ನಿಋಋತಿಗೆ ಪ್ರವಹಪತ್ನಿ ಪ್ರಾವಹೀದೇವಿಗೆ ಅನಂತಾನಂತ ನಮಸ್ಕಾರಾ ॥

ದೇವತಾಸೇನಾಧಿಪತಿ ವಿಷ್ವಕ್ಸೇನಗೆ ಅಶ್ವಿನೀದೇವತೆಗಳಿಗೆ ಗಣಪ
ಧನೇಶ್ವರನಾದ ಕುಬೇರಗೆ ಅನಂತಾನಂತ ನಮಸ್ಕಾರಾ ॥

ಶೇಷಶತಸ್ಥರಾದ ಏಕಾದಶಮನುಗಳಿಗೆ ಚ್ಯವನಪುತ್ರಗೆ
ಉಚಥ್ಯಋಷಿಗಳಿಗೆ ಶುಕ್ರಾಚಾರ್ಯರಿಗೆ ಅನಂತಾನಂತ ನಮಸ್ಕಾರಾ ॥

ಕಾರ್ತವೀರ್ಯ ಶಶಬಿಂದು ಮಾಂಧಾತ ಪ್ರಿಯವ್ರತ ಪರೀಕ್ಷಿತ
ಅಂಬರೀಷಾದಿ ಕರ್ಮಜದೇವತೆಗಳಿಗೆ ಅನಂತಾನಂತ ನಮಸ್ಕಾರಾ ॥

ಭಾಗೀರಥಿಗೆ ಮೇಘಾಭಿಮಾನಪರ್ಜನ್ಯಗೆ ಸೂರ್ಯಪತ್ನಿ ಸಂಜ್ಞಾದೇವಿಗೆ
ಶಶಿಪತ್ನಿ ರೋಹಿಣಿಗೆ ಯಮಪತ್ನಿ ಶ್ಯಾಮಲಾ ಅನಿರುದ್ಧ ಪತ್ನಿ
ವಿರಾಟದೇವಿಗೆ ಅನಂತಾನಂತ ನಮಸ್ಕಾರಾ ॥

ತರುವಾಯ ಅನಾಖ್ಯಾ ದೇವತೆಗಳಿಗೆ ಅನಂತಾನಂತ ನಮಸ್ಕಾರಾ ॥

ಶತೋನಶತಕೋಟಿ ಋಷಿಗಳಿಗೆ ತಥಾ
ಅಗ್ನಿಜಾಯಾ ಸ್ವಾಹಾದೇವಿಗೆ ಅನಂತಾನಂತ ನಮಸ್ಕಾರಾ ॥

ಜಲಾವಾಂತರಾಭಿಮಾನಿ ಬುಧಗೆ ಅನಂತಾನಂತ ನಮಸ್ಕಾರಾ ॥

ನಾಮಾಭಿಮಾನಿ ಉಷಾದೇವಿಗೆ ಅನಂತಾನಂತ ನಮಸ್ಕಾರಾ ॥

ಭೂಮ್ಯಭಿಮಾನಿ ಶನೈಶ್ವರಗೆ ಅನಂತಾನಂತ ನಮಸ್ಕಾರಾ ॥

ಕರ್ಮಾಭಿಮಾನಿ ಪುಷ್ಕರಗೆ ಅನಂತಾನಂತ ನಮಸ್ಕಾರಾ ॥

(ಇಲ್ಲಿ ಪರ್ಯಾಂತ ತತ್ವಾಭಿಮಾನಿಗಳು)
ತರುವಾತಯ ತಥಾ ॥
ಆಜಾನಜದೇವತೆಗಳಿಗೆ ತುಂಬರು ಮೊದಲಾದ ನೂರು ಗಂಧರ್ವರಿಗೆ
ಊರ್ವಶೀ ಮೊದಲಾದ ನೂರು ಅಪ್ಸರಃಸ್ತ್ರೀಯರಿಗೆ ಎಂಭತ್ತು ಋಷಿಗಳಿಗೆ
ನಲ್ವತ್ತೇಳು ಅಗ್ನಿಪುತ್ರರಿಗೆ – ಹದಿನಾರು ಸಹಸ್ರ ಕೃಷ್ಣಪತ್ನೇರಿಗೆ
ಕೃಷ್ಣಾಂಗಸಂಗಿಗಳಾದ ಗೋಪಿಕಾಸ್ತ್ರೀಯರಿಗೆ ತಥಾ ಚಿರಪಿತೃಗಳಿಗೆ
ತಥಾ ದೇವಗಂಧರ್ವರಿಗೆ ತರುವಾಯ ಮನುಷ್ಯಗಂಧರ್ವರಿಗೆ
ತರುವಾಯ ಕ್ಷಿತಿಪರಿಗೆ ತರುವಾಯ ಮನುಷ್ಯೋತ್ತಮರಿಗೆ

ತರುವಾಯ ಮನುಷ್ಯೋತ್ತಮರಲ್ಲಿ ಮಧ್ಯಮರಿಗೆ ಮನುಷ್ಯೋತ್ತಮರಲ್ಲಿ ಅಧಮರಿಗೆ ತಥಾಮನುಷ್ಯಮಧ್ಯಮೊತ್ತಮರಿಗೆ

ಅಸ್ಮದ್ಗುರಂತರ್ಯಾಮಿ ಪರಮಗುರುಗಳಂತರ್ಯಾಮಿ ತತ್ವ ದೇವತೆಗಳಂತ – ರ್ಯಾಮಿ ಉಮಾಮಹೇಶ್ವರಾಂತರ್ಯಾಮಿ ಶ್ರೀಮದ್ಧನುಮದ್ಭೀಮಮಧ್ವಾತ್ಮಕ ಭಾರತೀರಮಣ ಮುಖ್ಯಪ್ರಾಣಾಂತರ್ಯಾಮಿ ಶ್ರೀಭೂದುರ್ಗಾರಮಣ ರಾಮ ಕೃಷ್ಣವೇದವ್ಯಾಸಾದಿ ಅನಂತರೂಪಾತ್ಮಕ ಸಚ್ಚಿದಾನಂದಾತ್ಮಕ ಜಗನ್ನಾಥವಿಠಲಾತ್ಮಕ ಶ್ರೀನರಸಿಂಹ ಪ್ರೀತೋ ಭವತು ॥

. . . .

ನಾರಾಯಣವರ್ಮವು ಭಾಗವತದಲ್ಲಿ
6ನೇ ಸ್ಕಂಧದಲ್ಲಿ ಹೇಳಲ್ಪಟ್ಟಿದೆ. ಇದು ಸಮಸ್ತ

## ಶ್ರೀನಾರಾಯಣವರ್ಮ – 1

ಸರ್ವದೇಶದಲ್ಲೇ ಶ್ರೀಹರಿ ನಮ್ಮನ್ನು ರಕ್ಷಿಸೋ । ಜಲದಲ್ಲಿ ಮತ್ಸ್ಯಾವತಾರನಾಗಿ । ಸ್ಥಳದಲ್ಲಿ ವಾಮನನಾಗಿರಕ್ಷಿಸೊ ನಿನ್ನ ಭಕ್ತರನ್ನು । ಆಕಾಶದಲ್ಲೀ ತ್ರಿವಿಕ್ರಮನಾಗಿ ರಕ್ಷಿಸೋ । ನಿನ್ನ ಭಕ್ತರನ್ನು । ಪರ್ವತಾಗ್ರದಲ್ಲೇ ಪರಶುರಾಮನಾಗಿ ರಕ್ಷಿಸೋ । ವನವಾಸದಲ್ಲಿ ರಾಮಚಂದ್ರನಾಗಿ । ಕರ್ಮ ಬಂಧಂಗಳ ಕಳೆದು ರಕ್ಷಿಸೋ । ನಮ್ಮ ಕಪಿಲಮೂರ್ತಿ ಕಾವೇಶದಲ್ಲಿ ಸನತುಕುಮಾರನಾಗಿ ರಕ್ಷಿಸೋ । ದುರ್ಮಾರ್ಗದಲ್ಲಿ ಹಯಗ್ರೀವನಾಗಿ ಅನ್ನದೇವತೆ ಪೂಜಾ ಅಲ್ಲೇ ರಕ್ಷಿಸೋ ನಮ್ಮ ಮಹಿದಾಸ । ಪಾಷಂಡ ಮತದಲ್ಲಿ ಬೌದ್ಧನಾಗಿ ರಕ್ಷಿಸೋ । ಅನ್ನ ದೂತಣೆ ಅವತರಿಸಿ ನಮ್ಮ ದುಂದುಭಿಯಾದಿಂದಲ್ಲಿ ರಕ್ಷಿಸೋ । ನಮ್ಮ ಶ್ರೀವಿಶ್ವಮೂರ್ತಿ । ನರಕಗಳಿಂದ ಕೂರ್ಮನಾಗಿ ರಕ್ಷಿಸೋ । ಆಪತ್ತುಗಳಿಗೆ ಧನ್ವಂತ್ರಿಯಾಗಿ । ಕಲಿಯುಗ ಕಲ್ಮಶ ರಕ್ಷಿಸೋ ನಮ್ಮ ಕಲ್ಕಿ ಮೂರ್ತಿ । ಪ್ರಾತಃ ಕಾಲದಲ್ಲಿ ಕೇಶವ ನಮ್ಮನ್ನು ರಕ್ಷಿಸೋ। ಸಂಧ್ಯಾಕಾಲದಲ್ಲಿ ಗೋವಿಂದನಾಗಿ । ಅಪರಾಹ್ನ ಕಾಲದಲ್ಲಿ ರಕ್ಷಿಸೋ । ಸಂಗಮದಲಿ ಗೋವಿಂದನಾಗಿ ಸಾಯಂಕಾಲದಲ್ಲಿ ರಕ್ಷಿಸೋ । ನಮ್ಮ ಶ್ರೀಧರನಾಗಿ ಪೂರ್ವಕಾಲದಲ್ಲಿ ಹೃಷಿಕೇಶ ನಮ್ಮನ್ನು ರಕ್ಷಿಸೋ । ನಿಶಾಕಾಲದಲ್ಲಿ ಪದ್ಮನಾಭನಾಗಿ। ಅಪರಾತ್ರಿ ಕಾಲದಲ್ಲಿ ರಕ್ಷಿಸೊ ನಮ್ಮ ಶ್ರೀವಿಶ್ವಮೂರ್ತಿ । ಉಷಃ ಕಾಲದಲ್ಲಿ ಜನಾರ್ಧನನಾಗಿ ರಕ್ಷಿಸೋ ಸಕಲಕಾಲವು ಸಂಧಿಸಿ ಶ್ರೀಹರಿ ನಿಮ್ಮ ಚಕ್ರವು ಅತಿ

ಕಾಲ ಪ್ರಭೆಯಂತೆ ಪ್ರಳಯಕಾಲದ ಅಗ್ನಿಯಂತೆ ಈ 3 ಷಡವೈದು ಸೈನ್ಯಗಳ ಅಗ್ನಿ ವಾಯು ಒಡಗೂಡಿ ತೃಣವ ಸುಡುವಂತೆ ಭೂತಗದರ್ವರ ಪೂಷಾಂಡವ ಕಡಿಸಿ ನಮ್ಮ ಸಲಹುದೆನುತ ವಿಷ್ಣು ಶಂಖವೇ ನಮ್ಮ ಧ್ವನಿ ಕೇಳಿ ರಾಕ್ಷಸರು ಭಯ ಬಿಡಿಸ ಎದೆಯೊಡಿಸಿ ಲಯವನ್ನೆ ಮಾಡಿ ವಿಷ್ಣು ಗಜೇಂದ್ರ ರಾಕ್ಷಸರು ಕಡೆದು ಚೂರ್ಣವ ಮಾಡಿ ಕಿಡಿಗಳಂತುದುರಿಸಿ ಭೂಮಿಯಲ್ಲೇ ಅವತರಿಸಿ ವೈಷ್ಣವಸುಜನರನು ಸಲಹೆಂದು ನಿಮ್ಮ ಪ್ರಾರ್ಥನೆಯ ನಾ ಮಾಡಿದೆ । ಸಾಮ ವೇದಕೆ ಭೀಮನಾದ ಗಡುಗೆ ಸಲಹುವನು ನಮ್ಮ ಪ್ರಾಣಾಂಗ ಭೂಮಿ ದಿಕ್ಕು ದಿಕ್ಕಿಗೆ ನಾಶ ಸಿಂಹ ಮೂರುತಿಯಾಗಿ ತಾ ಒಳ ಹೊರಗೆ ವ್ಯಾಪಕನು ಆಗಿ ಶ್ರೀಹರಿ ಇದ್ದು ರಕ್ಷಿಸಲಿ ಘೋರ ದುರಿತಗಳೆಲ್ಲ ಓಡುತ್ತಿರಲಿ । ಅಂದಾಪರಿಯಲಿ ಸರ್ವ ವ್ಯಾಪಕನು ಆಗಿ ರಕ್ಷಿಸೋ ಎಲ್ಲಾ ಪರಿಯಿಂದ। ಭಕ್ತರನ ನೆನೆಯೇ ಮಧ್ವಗುರು ಅಂತರ್ಯಾಮಿ ನಮ್ಮ ಶ್ರೀಮದಾನಂದತೀರ್ಥರನು ಸುವ್ವಿ ಸರ್ವೋತ್ತಮನೆ । ಸುವ್ವಿ ವಿಶ್ವರೂಪನೆ । ಸುವ್ವಿ ನಮ್ಮ ಶ್ರೀಮದಾನಂತಾ–ವತಾರಗಳಿಗೆ ಸುವ್ವಿ ಎಂದು ಪಾಡಿ ಸುಖಿಯಾದ । ಜಮದಗ್ನಿ, ವತ್ಸಲ, ಭೃಗುರಾಮ, ಭೂಮಿ ಜಯದಲ ಜಯ ಶ್ರೀರಾಮ ಜಾನಕಿ ವಲ್ಲಭ ದಶರಥ ರಾಮ ರಾಮ ನಾಮಕ್ಕಿಂತ ಇನ್ನಾವೂ ಸರಿಯಿಲ್ಲವೆಂದು ಮೊರೆ ಹೊಕ್ಕೆನು ಶ್ರೀಹರಿಯೆ ಮುಕ್ತಿ ಬಲವಂತ ಮುಕ್ತಿ ಗೋವಿಂದ ಕಾಮಧೇನು ಕಲ್ಪತರು ಗೋವಿಂದ ನಾಮೋಚ್ಚಾರಣ ಪರಮಾತ್ಮ ಗೋವಿಂದ ಸ್ಮೃತಿ ತತಿಗಳ ಕೊಂಡಾಡುವೆ ಹರೆ ನಾರಾಯಣ ಪುರಾಣ ಪುರುಷೋತ್ತಮ ಆದಿ ನಾರಾಯಣ । ಯಶೋದೆ ಮೊಲೆಯುಂಡು ಉದ್ಭವಿಸಿದೆಯೋ ನಾರಾಯಣ ಜಗಕ್ಕೆಲ್ಲ ನರಸಿಂಹ ಮಂತ್ರವೊಂದೆ ಅಂಬರೀಷನ ಮರಿಕಾಯ್ದಿತ್ತು ಈ ಮಂತ್ರ ತುಂಬುದು ನಾರದರಿಗೆ ಶ್ರೀಕೃಷ್ಣ ಮಂತ್ರ ಶಂಭು ನಾರಿ ಪಿತನ ಸಲಹಿತು ಈ ಮಂತ್ರ ಮುಕ್ತಿ ಬಯಸುವರಿಗೆ ಶ್ರೀಕೃಷ್ಣ ಮಂತ್ರ ॥

. . . .

## ನಾರಾಯಣ ವರ್ಮ – 2

(ಇದನ್ನು ಮೊದಲು ಹೇಳಿ, ಆಮೇಲೆ ಲಕ್ಷ್ಮೀ–ಹೃದಯ ಹೇಳಿಕೊಂಡು ಮತ್ತು ನಾರಾಯಣವರ್ಮ ಹೇಳಿದರೆ ವಿಶೇಷ ಫಲ)

ಸಕಲ ಋಷಿಗಳಲ್ಲಿ ಹರಿ ನಮ್ಮ ಸ್ವಾಮಿಯಾಗಿ ರಕ್ಷಿಸು । ಜಲದಲಿ ಮತ್ಸ್ಯಾವತಾರನಾಗಿ

ಸ್ಥಳದಲ್ಲಿ ವಾಮನನಾಗಿ ರಕ್ಷಿಸು ನಿಮ್ಮ ನೆನೆವರಾ । ಆಕಾಶದಲ್ಲಿ ತ್ರಿವಿಕ್ರಮನಾಗಿ ರಕ್ಷಿಸು । ಭಯಗಳಲ್ಲಿ ನಾರಸಿಂಹನಾಗಿ ಮಾರ್ಗದಲ್ಲಿ ವರಾಹನಾಗಿ ರಕ್ಷಿಸು ನಿಮ್ಮ ನೆನೆವರಾ । ಪರ್ವತಾಗ್ರಹದಲ್ಲಿ ಪರಶುರಾಮನಾಗಿ ರಕ್ಷಿಸು । ಪರದೇಶದಲ್ಲಿ ರಾಮಚಂದ್ರನಾಗಿ ರಕ್ಷಿಸು ನಿನ್ನ ನೆನೆವರಾ । ಆಶ್ರಯದಲ್ಲಿ ನರನಾರಾಯಣನಾಗಿ ರಕ್ಷಿಸು । ಅಯೋಗ್ಯರಲ್ಲಿ ದತ್ತಾತ್ರೇಯನಾಗಿ ರಕ್ಷಿಸು । ಕರ್ಮಬಂಧಗಳೆಲ್ಲ ಕಳೆದು ರಕ್ಷಿಸು ಕಪಿಲಮೂರ್ತಿಯಾಗಿ । ಪ್ರಾತಃಕಾಲದಲಿ ಕೇಶವ ನಮ್ಮ ರಕ್ಷಿಸು । ಸಾಯಂಕಾಲದಲಿ ಗೋವಿಂದ ನಮ್ಮ ರಕ್ಷಿಸು । ಅಪರಾಹ್ಣ ಕಾಲಗಳೆಲ್ಲ ಕಳೆದು ರಕ್ಷಿಸು । ನಮ್ಮ ಸಕಲ ಕಾಲಗಳಲ್ಲಿ ನರಕದಿಂದ ಕೂರ್ಮನಾಗಿ ರಕ್ಷಿಸು । ವಿಪತ್ತಿನಿಂದ ಧನ್ವಂತರಿ ರಕ್ಷಿಸು । ಅನ್ಯ ದೇವತೆ ಭಜನೆ ಕಳೆದು ರಕ್ಷಿಸಯ್ಯ ಶ್ರೀಕೃಷ್ಣಾ ಮೂರುತಿಯಾಗಿ ಅಜ್ಞಾನ ವಿಷಯಗಳ ಕಳೆದು ರಕ್ಷಿಸು ವೇದವ್ಯಾಸ ಮೂರ್ತಿಯಾಗಿ । ಕೃಷ್ಣನ ಶಂಖವೆ ನಿಮ್ಮ ಧನಿದುರಿ ರಾಕ್ಷಸರ ಎದೆ ಒಡೆಸಿ, ಭಯಬಿಡಿಸಿ ಲಯವನೆ ಮಾಡಿಸಿ ಪೂತಗಂಧರ್ವರು ಕೂಶ್ಮಾಂಡ ತೋರಿಸಲು ವಿಷ್ಣುಗದೆ ರಾಕ್ಷಸರು ಒಡೆದು ಚೂರ್ಣವ ಮಾಡಿ । ಕಿಡಿಗಳಂತೆ ಭೂಮಿ ಮೇಲೆ ಆಧರಿಸಿ ॥ ಶತಚಂದ್ರಪ್ರಭೆಯಂತೆ ಹೊಳೆವ ಹರಿಯು । ನಮ್ಮ ಮತಿವಂತರು ವೈರಿಗಳ ಕಣ್ಣಿಗೆ ಕಾಣಬಾರದು ಮಾಡಿ । ತೋರಿಸಿ ನಮ್ಮ ದಿವ್ಯತೇಜಗಳ । ಧರ್ಮ ವಿಷಯದಲಿ ಹಯಗ್ರೀವನಾಗಿ ರಕ್ಷಿಸು । ಮಧ್ಯಾಹ್ನ ಕಾಲದಲ್ಲಿ ಮಧುಸೂದನನಾಗಿ । ಸಾಯಂಕಾಲದಲ್ಲಿ । ಶ್ರೀವತ್ಸಮೂರ್ತಿಯಾಗಿ । ಉಷಃ ಕಾಲದಲಿ ಜನಾರ್ದನನಾಗಿ ರಕ್ಷಿಸು । ತ್ರಿಸಂಧ್ಯಾಕಾಲದಲಿ ದಾಮೋದರನಾಗಿ ವಿಶ್ವಮೂರ್ತಿಯಾಗಿ ರಕ್ಷಿಸು । ಅರ್ಧರಾತ್ರಿಯಲಿ ಹೃಷಿಕೇಶನಾಗಿ । ಅಪರಾತ್ರಿಯಲಿ ರಕ್ಷಿಸಯ್ಯ ಶ್ರೀವತ್ಸ ಮೂರ್ತಿಯಾಗಿ। ಸಾಮವೇದಕೆ ಅಭಿಮಾನಿಯಾದ ಗರುಡವಾಹನನೆ ಸಲಹೆನ್ನ ವಿಷಯದ ಭಯಗಳ ಬಿಡಿಸಿ । ಕೃಷ್ಣ–ಮುಕುಟಾಧರನೆ ರಕ್ಷಿಸೊ ನಮ್ಮನ್ನ ಪ್ರಾಣೇಂದ್ರಿಯದಿಂದ । ಬುದ್ಧಿಯಿಂದ ದಿಕ್ಕುದಿಕ್ಕುಗಳಲ್ಲ ನಾರಸಿಂಹಮೂರ್ತಿಯಾಗಿ। ನಾರಸಿಂಹ ನಾದಗಳಿಂದ ಎಲ್ಲ ಪರಿಯಿಂದ ಭಕ್ತರನೆಲ್ಲ ನರಹರಿ ಇದ್ದು ರಕ್ಷಿಸೊ । ಗುರುಮಧ್ವರಾಯರ ಗುರು ವಿಶ್ವವ್ಯಾಪಕರ ಸುವಿಷ್ಣು ವೈಷ್ಣವರ ಮಗನಂತೆ ನಿಮ್ಮ ಸುನಾಮ ಎಂದು ಪಾಡಿ ಸುಖಿಯಾಗಿ ಜಮದಗ್ನಿವರದ, ಪ್ರಲ್ಹಾದವರದ, ಅಸುರರ ಗೆಲಿದ ಬಲರಾಮ ಜಾನಕಿವಲ್ಲಭ ಜಯ ಜಯರಾಮ ನಿತ್ಯ ವೈಕುಂಠ ನಿಜ ಗೋವಿಂದ, ಅಂಬರಿಷರಾಯಗೆ ವರಗಳ ಕೊಟ್ಟ ನಂಬಿದ ಭಕ್ತರಿಗೆ ಅಭಯ ಕೊಟ್ಟ ಯಶೋದೆಯ ಮನ ಉದ್ಧರಿಸಿದ ಹಯವದನ ರಕ್ಷಿಸು ।

. . . .

## ಲಕ್ಷ್ಮೀ ಹೃದಯ

ಶ್ರೀದೇವಿ ತಾನೂ ಶ್ರೀದಮನ್ನ ಮನೆಯಲ್ಲಿ ಆದಿ ಅಂತ್ಯಗಳಿಲ್ಲದಿರಲು, ಚೌದ್ಯ ಸುಖ ರೂಪದಿಂದ ಅವಳಿಗೆ ವೇವಾಲಿಗಳ ಓದುತಿರಲು ಅವಳಿಂದ ಹರಿಯು ಮೂರು ಮನೆಗಳಿಪ್ಪಾಲಯಕೆತನ ಭಯವಿಲ್ಲ ಮೊದಲೆ ಉದಕವಿಲ್ಲ ಆದ ಕಾರಣೆಂದ ಉದಕ ತಾನಾದಳು ಅಚ್ಯುತಗೆ ಅಂಬುಧಿಯಾದಳು, ಆಗ ಮಹಾ ಲಕುಮಿ ಅಂಬರದ ಆಭರಣವಾದಳು, ಪೊಂಬಣ್ಣದ ಆಲದೆಲೆಯಾದಳೂ ಏನೆಂಬೆ ಇವಳ ಸಾಹಸಕೆ. ಶ್ರೀಭೂ-ದುರ್ಗೆಯರ ಆಲಿಸಿದನು ಹರಿಯು ತಾ ಆಲದೆಲೆಯ ಮೇಲೆ ಮಲಗಿದನು. ಅಚ್ಯುತನ ಹೃದಯದಲೆ ಲಿಂಗವಿಶಿಷ್ಟರಾದ ಇನಿತು ಜೀವರ ಹಿಡಿ ತುಂಬಾಕೊಂಡು ತನಯನ ನೂರು ವರ್ಷ ಪರಿಯಂತದಿ ವನಜಾಕ್ಷ ವಟಪತ್ರಶಯನನಾಗಿ ಜನರೆಲ್ಲ ತಮ್ಮ ಗತಿಗೆ ತಕ್ಕ ಸಾಧನವ ಸಾಧಿಸಿಕೊಳ್ಳಲೆಂದು ಕರುಣೆ ಪುನರಪಿ ಸೃಷ್ಟಿಯ ಮಾಡುವೆನೆಂದು ಲಾಲನೆಗೆ ಪ್ರಕೃತಿಯ ಮಮತೆ ಇತ್ತು ಗುಣತ್ರಯಾತ್ಮಕ ಸೂಕ್ಷ್ಮ ತತ್ವ ರಾಶಿಯ ಜೀವರನು ಸೃಜಿಸಿದ ಹಯವದನನು ॥

. . . .

## ಫಲವಿದು ಬಾಳ್ದುದಕೆ

ರಾಗ : ಪಂತುವರಾವಳಿ ಏಕತಾಳ

ಫಲವಿದು ಬಾಳ್ದುದಕೆ ಸಿರಿ- ।
ನಿಲಯನ ಗುಣಗಳ ತಿಳಿದು ಭಜಿಸುವದೆ ॥ ಪ ॥

ಸ್ವೋಚಿತ ಕರ್ಮಗಳಾಚರಿಸುತ ಬಲು ।
ನೀಚರಲ್ಲಿಗೆ ಪೋಗ್ಯಾಚಿಸದೆ ॥
ಖೇಚರವಾಹ ಚರಾಚರಬಂಧಕ ।
ಮೋಚಕನಹುದೆಂದ್ಯೋಚಿಸುತಿಪ್ಪೊದೆ ॥ 1 ॥
ನಿಚ್ಚ ಸಭಕುತಿಯೊಳಚ್ಯುತನಂಘ್ರಿಗ- ।
ಳರ್ಚಿಸಿ ಮೆಚಿಸುತೆಚ್ಚರದಿ ॥
ತುಚ್ಛ ವಿಷಯಗಳನಿಚ್ಛಿಸದಲೆ ಯ- ।
ದೃಚ್ಛಾಲಾಭದಿಂ ಪ್ರೋಚ್ಚನಾಗುವದೆ ॥ 2 ॥

ಮನೋವಾಕ್ಕಾಯದೊಳನುಭವಿಸುವ ।
ದಿನದಿನದ ವಿಷಯ ಸಾಧನಗಳನು ॥
ಅನಿಲಾಂತರ್ಗತವನರುಹದಳಲೊ- ।
ಚನಗರ್ಪಿಸಿ ದಾಸನು ನಾನೆಂಬೋದೆ ॥ 3 ॥

ವಾಸವಮುಖವಿಬುಧಾಸುರನಿಚಯಕೆ ।
ವಾಸುದೇವನೆ ಶುಭಾಶುಭದಾ ॥
ಈ ಸಮಸ್ತ ಜಗಕೀಶ ಕೇಶವಾ- ।
ನೀಶ ಜೀವರೆಂಬೀ ಸುಜ್ಞಾನವೆ ॥ 4 ॥

ಪಂಚಭೇದಯುತ ಪ್ರಪಂಚ ಸುಸತ್ಯ ವಿ- ।
ರಿಂಚಿಮುಖರು ಬಲಿವಂಚಕಗೆ ।
ಸಂಚಲ ಪ್ರತಿಮೆಯಚಂಚಲ ಪ್ರಕೃತಿಯು ।
ಸಂಚಿಂತಿಸಿ ಮುಲ್ಲಾಂಚನನಾಹುದೆ ॥ 5 ॥

ಪಂಚಭುತಗಳಲಿ ಪಂಚಾಗ್ನಿಗಳಲಿ ।
ಪಂಚಪಂಚರೂಪವ ತಿಳಿದು ॥
ಪಂಚಸುಸಂಸ್ಕಾರಾಂಚಿತನಾಗಿ ದ್ವಿ- ।
ಪಂಚಕರಣದಲಿ ಪ್ರಪಂಚವನರಿವುದೆ ॥ 6 ॥

ಪಾತ್ರರ ಸಂಗಡ ಯಾತ್ರೆಯ ಚರಿಸಿ ವಿ - ।
ಧಾತೃಪಿತನ ಗುಣಸ್ತೋತ್ರಗಳ ॥
ಶ್ರೋತ್ರದಿ ಸವಿದು ವಿಚಿತ್ರಾನಂದದಿ ।
ಗಾತ್ರವ ಮರೆದು ಪಾರತ್ರಿಕ ಪಡೆವುದೆ ॥ 7 ॥

ಹೃದಯದಿ ರೂಪವು ವದನದಿ ನಾಮವು ।
ಉದರದಿ ನೈವೇದ್ಯವು ಶಿರದಿ ॥
ಪದಜಲ ನಿರ್ಮಾಲ್ಯವನೆ ಧರಿಸಿ ಕೋ- ।
ವಿದರ ಸದನ ಹೆಗ್ಗದವ ಕಾಯುವದೆ ॥ 8 ॥

ಹಂಸಮೊದಲು ಹದಿನೆಂಟು ರೂಪಗಳ ।
ಸಂಸ್ಥಾನವ ತಿಳಿದನುದಿನದಿ ॥
ಸಂಸೇವಿಸುವ ಮಹಾಪುರುಷರ ಪದ– ।
ಪಾಂಸುವ ಧರಿಸಿ ಅಸಂಶಯನಪ್ಪುದೆ ॥ 9 ॥

ವರಗಾಯತ್ರೀನಾಮಕ ಹರಿಗೀ– ।
ರೆರಡಂಘ್ರಿಗ ವಿವರವ ತಿಳಿದು ।
ತರುವಾಯದಿ ಷಡ್ವಿಧರೂಪವ ಸಾ– ।
ದರದಲಿ ಧೇನಿಸಿ ನಿರುತ ಜಪಿಸುವದೆ ॥ 10 ॥

ಬಿಗಿದ ಕಂಠದಿಂದ ದೃಗ್ಭಾಷ್ಪಗಳಿಂ ।
ನಗೆಮೊಗದಿಂ ರೋಮಗಳೊಗೆದು ॥
ಮಿಗೆ ಸಂತೋಷದಿ ನೆಗೆದಾಡುತ ನಾ– ।
ಲ್ಮೊಗನಯ್ಯನ ಗುಣ ಪೊಗಳಿ ಹಿಗ್ಗುವುದೆ ॥ 11 ॥

ಗೃಹಕರ್ಮವ ಬ್ಯಾಸರದಲೆ ಪರಮೋ– ।
ತ್ಸಹದಲಿ ಮಾಡುತ ಮೂಜಗದ ॥
ಮಹಿತನ ಸೇವೆಯಿದೆನುತಲಿ ಮೋದದಿ– ।
ಅಹರಹರ್ಮನದಿ ಸಮರ್ಪಿಸುತಿಪ್ಪುದೆ ॥ 12 ॥

ಕ್ಲೇಶಾನಂದಗಳೀಶಾಧೀನ ಸ– ।
ಮಾಸಮ ಬ್ರಹ್ಮ ಸದಾಶಿವನು ॥
ಈಶಿತವ್ಯರು ಪರೇಶನಲ್ಲದೆ ।
ಶ್ವಾಸಬಿಡುವ ಶಕ್ತಿ ಲೇಶವಿಲ್ಲೆಂಬೋದೆ ॥ 13 ॥

ಆ ಪರಮಾತ್ಮಗೆ ರೂಪದ್ವಯವು ಪ– ।
ರಾಪರ ತತ್ವಗಳಿದರೊಳಗೆ ॥
ಸ್ತ್ರೀ ಪುಂ ಭೇದದಿ ಈ ಪದ್ಮಾಂಡವ ।
ವ್ಯಾಪಿಸಿ ಇಹನೆಂದೀಪರಿ ತಿಳಿವುದೆ ॥ 14 ॥

ಏಕೋತ್ತರ ಪಂಚಾಶತ್ ವರ್ಣಗ- ।
ಳೇಕಾತ್ಮನ ನಾಮಂಗಳವು ॥
ಮಾಕಮಲಾಸನ ಮೊದಲಾದಮರರು ।
ಸಾಕಲ್ಯದಿ ಇದನರಿಯರೆಂತೆಂಬುದೆ ॥ 15 ॥

ಒಂದು ರೂಪದೊಳಗನಂತ ರೂಪಗಳ್ ।
ಪೊಂದಿಪ್ಪವು ಗುಣಗಣಸಹಿತ ॥
ಹಿಂದೆ ಮುಂದೆ ಎಂದೆಂದಿಗೂ ಶ್ರೀಗೋ- ।
ವಿಂದಗೆ ಸರಿಮಿಗಿಲಿಲ್ಲೆಂತೆಂಬುದೆ ॥ 16 ॥

ಮೇದಿನಿಪರಮಾಣ್ವಂಬುಕಣಂಗಳ ।
ನೈದಬಹುದು ಪರಿಗಣನೆಯನು ॥
ಮಾಧವನಾನಂದಾದಿ ಗುಣಂಗಳ - ।
ನಾದಿಕಾಲರೆಂದಗಣಿತವೆಂಬುದೆ ॥ 17 ॥

ಮೂಜಗದೊಳಗಿಹ ಭೂಜಲ ಖೇಚರ ।
ಈ ಜೀವರೊಳು ಮಹವಜಸನ ॥
ಸೋಜಿಗ ಬಹು ವಿಧ ನೈಜವಿಭೂತಿಯ ।
ಪೂಜಿಸುತನುದಿನ ರಾಜಿಸುತಿಪ್ಪುದೆ ॥ 18 ॥

ಹರಿಕಥೆ ಪರಮಾದರದಲಿ ಕೇಳುತ ।
ಮರೆದು ತನುವ ಸುಖಸುರಿಸತಲಿ ॥
ಉರುಗಾಯನಸಂದರುಶನ ಹಾರೈ- ।
ಸಿರಳು ಹಗಲು ಜರಿಜರಿದು ಬಳಲುವದೆ ॥ 19 ॥

ವಿಷಯೇಂದ್ರಿಗಳಲಿ ತದಭಿಮಾನಿ ಸುಮ- ।
ನಸರಲಿ ನಿಂದು ನಿಯಮಿಸುವ ॥
ಶ್ವಸನಾಂತರ್ಗತ ವಾಸುದೇವ ತ ।
ವಿಷಯಗಳನು ಭೋಗಿಸುವೆನಂದರಿವುದದೆ ॥ 20 ॥

ಗುಣಕಾಲಾಹ್ವಯ ಆಗಮಾರ್ಣವ ಕುಂ– ।
ಭಿಣಿಪರಮಾಣ್ವಂಬುಧಿಗಳಲಿ ॥
ವನಗಿರಿನದಿಮೊದಲಾದರೊಳಗಿಂ– ।
ಧನಗತಪಾವಕನಂತಿಹನೆಂಬುದೆ ॥ 21 ॥

ಅನಲಂಗಾರದೊಳಿಪ್ಪೋಪಾದಿಲಿ ।
ಅನಿರುದ್ಧನು ಚೇತನರೊಳಗೆ ॥
ಕ್ಷಣ ಬಿಟ್ಟಗಲದೆ ಏಕೋ ನಾರಾ– ।
ಯಣ ಶ್ರುತಿಪ್ರತಿಪಾದ್ಯ ಇಹನೆಂಬುದೆ ॥ 22 ॥

ಪಕ್ಷ್ಮಗಳಕ್ಷಿಗಳಗಲದಲಿಪ್ಪಂ ।
ತಕ್ಷರಪುರುಷನಪೇಕ್ಷೆಯಲಿ ॥
ಕುಕ್ಷಿಯೊಳಬ್ಜಜತ್ರ್ಯಕ್ಷಾದ್ಯಮರರ ।
ಈಕ್ಷಿಸಿ ಕರುಣದಿ ರಕ್ಷಿಪನೆಂಬುದೆ ॥ 23 ॥

ಕಾರಣ ಕಾರ್ಯಾಂತರ್ಗತ ಅಂಶವ– ।
ತಾರಾವೇಶಾಹಿತ ಸಹಜಾ ॥
ಪ್ರೇರಕ ಪ್ರೇರ್ಯಾಹ್ವಯ ಸರ್ವತ್ರ ವಿ– ।
ಕಾರವಿಲ್ಲದಲೆ ತೋರುವನೆಂಬುದೆ ॥ 24 ॥

ಪ್ರತಿದಿವಸ ಶ್ರುತಿಸ್ಮೃತಿಗಳಿಂದ ಸಂ– ।
ಸ್ತುತಿಸುತ ಲಕ್ಷ್ಮೀಪತಿಗುನವ ॥
ಕೃತಿಪತಿ ಸೃಷ್ಟಿಸ್ಥಿತಿಲಯ ಕಾರಣ ।
ಇತರ ಸರ್ವ ದೇವತೆಗಳಿಲ್ಲಲ್ಲೆಂಬುದೆ ॥ 25 ॥

ಪವನಮತಾನುಗವರನಾನೆಂತೆಂ– ।
ದವನಿಯೊಳಗೆ ಸತ್‌ಕವಿಜನರ ॥
ಭವನಗಳಲಿ ಪ್ರತಿ ದಿವಸದಿ ಸುಕಥಾ – ।
ಶ್ರವಣ ಮಾಡುತಲಿ ಪ್ರವರನಾಗುವದೆ ॥ 26 ॥

ಪನ್ನಗಾಚಲ ಸನ್ನಿವಸ ಪಾ– ।
ವನ್ನಚರಿತ ಸದ್‌ಗುಣ ಭರಿತ ॥
ಜನ್ಯಜನಕ–ಲಾವಣ್ಯಗುಣನಿಧಿ ಜ– ।
ಗನ್ನಾಥ ವಿಠಲನನ್ಯಪನೆಂಬೊದೆ ॥ 27 ॥

. . . .

## ಮಂಗಳಮ್

ಜಯ ಜಯ ಮಂಗಳಂ । ನಿತ್ಯ ಶುಭ ಮಂಗಳಂ
ಚಿತ್ತ ಶುದ್ಧಿಯ ಮಾಡಿ । ರತ್ನ ಪೀಠದಲಿರುವೆ ।
ಅಚ್ಯುತಾನಂತನಿಗೆ । ವರಲಕ್ಷ್ಮಿಗೆ ॥
ರತ್ನಮಯ ತಟ್ಟೆಯಲಿ । ಮುತ್ತು ಮಾಣಿಕ ತುಂಬಿ ।
ಮಿತ್ರೆಯರು ಕನಕ । ದಾರತಿ ಎತ್ತಿರೆ ॥
ಆದಿಪುರುಷನ ಭಕ್ತಿ । ಎಂಬ ಅರಶಿನ ಹಚ್ಚಿ ।
ವೇದ ಪ್ರಿಯನೆಂಬ । ಕುಂಕುಮ ವಿಟ್ಟು ॥
ಮೋದತೀರ್ಥರ ಶಾಸ್ತ್ರ । ಶ್ರವಣ ಗಂಧವನ ಹಚ್ಚಿ ।
ಸಾಧು ವಂದಿತಗೆ । ಆರತಿ ಎತ್ತಿರೆ ॥
ಪದ್ಮನಾಭನ ಕರುಣವೆಂಬ । ಪದ್ಮವ ಮುಡಿದು ।
ಶುದ್ಧ ಪತಿವ್ರತವೆಂಬ । ಮಡಿಯನುಟ್ಟು ॥
ಸದ್‌ಗೃಹಿಣಿ ಧರ್ಮವೆಂ । ಬಾಭರಣಗಳ ತೊಟ್ಟು ।
ಮದ್ವೇಶ ರಾಮಗಾರುತಿ ಎತ್ತಿರೆ ॥
ಪತಿಸೇವೆ ಎಂತೆಂಬ । ವ್ರತದ ವಾಲೆಯವಿಟ್ಟು ।
ಸುತರ ಪಾಲನೆ ಎಂಬ । ಮುಖುರವಿಟ್ಟು ।
ಅತಿಥಿ ಸತ್ಕಾರಕ್ಕೆ । ಹಿತದಿ ಕಂಕಣ ಕಟ್ಟಿ ।
ಮಿಥಿಲೆ ಸುತೆ ಸೀತೆ । ಗಾರುತಿ ಎತ್ತಿರೆ ॥
ಯೋಗ ಭೋಗವ ನಿವ । ನಾಗೇಶಶಯನನಿಗೆ ।
ಯೋಗೀಶ ಕೃಷ್ಣನಿಗೆ । ಶ್ರೀಭೈಷ್ಮಿಗೆ ।

ನಾಗವೇಣಿಯರೆಲ್ಲ । ನಾಗಸಂಪಿಗೆ ಮುಡಿದು ।
ಬಾಗಿ ವಂದಿಸುತ । ಆರುತಿ ಎತ್ತಿರೆ ॥
॥ ಜಯ ಮಂಗಳಂ ನಿತ್ಯ ಶುಭಮಂಗಳಂ ॥
॥ ಶ್ರೀಕೃಷ್ಣಾರ್ಪಣಮಸ್ತು ॥

. . . .

## ಗಂಗಾನದಿಯ ಸ್ತೋತ್ರ

**– ವಿಜಯದಾಸರು**

ಜಯಜಯತು ಜಹ್ನವಿಯೆ ಭಕ್ತ ಸಂಜೀವಿ ।
ಜಯ ಮಂಗಳವ ನೀನೀಯೆ ಜಯ ನಮ್ಮ ಕಾಯೇ ॥

ಕಮಲಜನ ಪಾತ್ರೆಯೊಳು ಧರಿಸಲಾ ಹರಿಪಾದ
ಕಮಲಜನು ತೊಳೆಯಲಾ ವೇಗದಿಂದ
ವಿಮಲ ಸಂಗತಿಯಿಂದ ಮಂದಾಕಿನಿಯೆನಿಸಿ
ಸುಮನಸಾವಳಿಯಲಿ ಮೇರೆದೆ ಸುರನದಿಯೇ ॥ 1 ॥

** ಧ್ರುವಲೋಕಕಿಳಿದು ಅಮರಾವತಿಯ ಸಾರಿದೆ
ರವಿಯಂತೆ ಪೊಳೆಯುತ ಆ ಜನ ಮಧ್ಯದಿಂ ।
ಭುವನದೊಳಗೀರೈದು ನೂರು ಯೋಜನದಗಲ ॥
ತವಕದಿಂದಲಿ ಧುಮುಕಿ ಚತುರ ಭಾಗವಾದೆ ॥

** ತತೋ ಅನೇಕಕೋಟಿ ಸಂಕುಲಯಾನೇನ ಅವತರಂತೀಂದು ಮಂಡಲಮಾಪ್ಲಾವ್ಯ ಬ್ರಹ್ಮಸದನೇ ನಿಪತತಿ । ತತ್ರ ಚತುರ್ಧಾ ಭಿದ್ಯಮಾನಾ ಚತುರ್ದಿಶಮಭಿಸ್ಯಂದಂತೀ ನದನದೀಪತಿ ಮೇವಾಭಿನಿಮಿಶತಿ ॥ ಸೀತಾ ಅಲಕನಂದಾ ಚಕ್ಷುರ್ಭದ್ರೇತಿ ॥ – *ಭಾಗವತ–5 ಸ್ಕಂಧ*

. . . .

## ಸ್ತ್ರೀಧರ್ಮ ಕೋಲು ಪದ್ಯ

ಕೋಲು ಕೋಲೆನ್ನ ಕೋಲೆ ಕೋಲು ಕೋಲೆನ್ನ ಕೋಲೆ
ಕೋಲು ಶ್ರೀಹರಿಯ ಬಲಗೊಂಬೆ ಕೋಲೆ ॥

ಕೋಲು ಶ್ರೀಹರಿಯ ಬಲಗೊಂಡು ಬೇಡುವೆ ।
ಶೀಲಮತಿಯನಿತ್ತು ಸಲಹೆಂಬೆ ಕೋಲೆ ॥ ಪ ॥

ಹರಿಯ ಚರಣಕ್ಕೆರಗಿ ಸಿರಿದೇವಿ ಪಾದಕೆರಗಿ ।
ಸರಸೀಜ ಭವ ಮರುತಗೆ ನಮಿಸುವೆ ಕೋಲೆ ॥
ಸರಸ್ವತಿ ಭಾರತಿಗೆ ಗರುಡ ಶೇಷರುದ್ರ ।
ಅವರವರ ಪತ್ನಿಯರಿಗೆ ನಮಿಸುವೆ ಕೋಲೆ ॥ 1 ॥

ಹರನ ಕುಮಾರನೇ । ವರಗೌರಿ ತನುಜನೆ ।
ಬರುವ ವಿಘ್ನವ ಪರಿ । ಹರಿಸೆಂಬೆ ಕೋಲೆ ॥
ಹಿರಿದಾದ ಸುಜ್ಞಾನ । ಭಕ್ತಿ ವೈರಾಗ್ಯವಿತ್ತು ।
ಹರಿಗುರುಗಳನುಗ್ರಹ । ಒದಗಿಸು ಕೋಲೆ ॥ 2 ॥

ದ್ವಾಪರಯುಗದಲ್ಲಿ । ವಿಪ್ರನ ಶಾಪದಲ್ಲಿ ।
ಅಪಾರ ಅಜ್ಞಾನ । ಮುಸುಕಿತು ಕೋಲೆ ।
ಅಪಾರ ಅಜ್ಞಾನ । ಮುಸುಕೆ ಭೂಸುರರೆಲ್ಲ ।
ಶ್ರೀಮತಿ ಹರಿಗೆ ಮೊರೆ । ಇಟ್ಟರು ಕೋಲೆ ॥ 3 ॥

ಲಕ್ಷ್ಮೀನಾರಾಯಣ । ಅತ್ಯಂತ ಕರುಣದಿ ।
ಮತ್ತೆ ಪರಾಶರನಿ । ಮಿತ್ತದಿ ಕೋಲೆ ।
ಮತ್ತೆ ಪರಾಶರ । ನಿಮಿತ್ತ ಮಾಡಿಕೊಂಡು
ಸತ್ಯವತಿಗೆ ಪುತ್ರ । ನಾದನು ಕೋಲೆ ॥ 4 ॥

ಅಷ್ಟು ಬರೆದರು ಮನ । ತುಷ್ಟಿಯಾಗದಿರಲು ।
ದಿಟ್ಟ ನಾರದರಲ್ಲಿ ಸುಳಿದರು ಕೋಲೆ ॥
ದಿಟ್ಟ ನಾರದರಲ್ಲಿ । ಬಂದು ವಿಜ್ಞಾಪಿಸಲು ।
ಶ್ರೇಷ್ಠ ಭಾಗವತ । ರಚಿಸಿದರು ಕೋಲೆ ॥ 5 ॥

ನಿಗಮೋಪನಿಷತ್ತುಗಳು । ಮಿಗಿಲಾದ ವಿದ್ಯೆಯು ।
ಸುಗುಣ ಪುರುಷರಿಗೆ । ಅಧಿಕಾರ ಕೋಲೆ ॥
ಪ್ರಣವಮಂತ್ರದಿ ಕೂಡ । ನಿಗಮೋಪನಿಷತ್ತುಗಳೂ ।
ಪ್ರಮದೆಯರಿಗೆ ಅದು । ವಿಧಿಯಲ್ಲ ಕೋಲೆ ॥ 6 ॥

ಹೀಗೆಂದು ನಿಶ್ಚಯಿಸಿ । ಯೋಗಿ ವೇದವ್ಯಾಸ ।
ಭಾಗವತ ಭಾರತ । ರಚಿಸಿದರು ಕೋಲೆ ॥
ಭಾಗವತ ಭಾರತ । ರಚಿಸಿ ಅನುಕಂಪದಿ ।
ನಾಗವೇಣಿಯರಿಗೆ । ಒಲಿದಿತ್ತ ಕೋಲೆ ॥ 7 ॥

ಸ್ತ್ರೀ ಶೂದ್ರ ಬ್ರಹ್ಮ ಬಂಧು । ಗಳಿಗೆ ವೇದಗಳಲ್ಲಿ ।
ಲೇಶ ಅಧಿಕಾರವು । ಇಲ್ಲೆಂದ ಕೋಲೆ ॥
ಲೇಶ ಅದಿಕಾರವು । ಇಲ್ಲೆಂದು ಕರುಣದಿ ।
ಈ ಸುಭಾರತ ಗ್ರಂಥ । ರಚಿಸಿದರು ಕೋಲೆ ॥ 8 ॥

ಭಾರತ ಭಾಗವತ । ಬಹು ಪುಣ್ಯ ಕಥೆಗಳು ।
ವೀರ ಶ್ರೀಕೃಷ್ಣನ । ಮಹಿಮೆಗಳು ಕೋಲೆ ।
ಕ್ರೂರ ದೈತ್ಯರ ಅಸುವ ಹೀರಿ । ಜಗದಿ ಧರ್ಮ ।
ತೋರಿ ಭಕ್ತರ ಪೊರೆದ । ಕಾರ್ಯವು ಕೋಲೆ ॥ 9 ॥

ಭಾರತ ಗ್ರಂಥವು । ಬಹು ತತ್ವಸಾರವು ।
ಭಾರತಿ ಭರತರ । ಕಥೆ ಇದು ಕೋಲೆ ।
ಭಾರಭಹಳೆಂದರು । ಸುರರೆಲ್ಲ ಇದು ಸಂ ।
ಸಾರ ಸಮುದ್ರಕೆ । ಹರಿಗೋಲು ಕೋಲೆ ॥ 10 ॥

ಭಾಗವತವುವರ । ಯೋಗಿ ಶ್ರೀಕೃಷ್ಣನ ।
ರಾಗದಲೀಲೆಯ । ಮಧುರಸ ಕೋಲೆ ।
ಭಾಗವತರ ದಿವ್ಯಮಂಗಳ ಕಥೆಗಳು ।
ಯೋಗಿವ್ಯಾಸರು ಪೇಳ್ದಾ ತತ್ವಗಳು ಕೋಲೆ ॥ 11 ॥

ಬಾದರಾಯಣ ಮುನಿ । ಮೋದದಿ ಪೇಳಿದ ।
ಸಾಧು ಸಮ್ಮತ ಮಾರ್ಗ । ಆಧಾರ ಕೋಲೆ ।
ಆದಿಪುರುಷನ ಪಾದ । ಆದರದಿ ನಂಬಿ – ಅ ।
ನಾದಿ ದುಷ್ಕರ್ಮಗಳ । ಕಳೆದುಕೊ ಕೋಲೆ ॥ 12 ॥

ಧರಣಿಯ ಮೇಲುಳ್ಳ । ಹಲವಾರು ಧರ್ಮದ ।
ಮರ್ಮವ ತಿಳಿದು ನಡೆಬೇಕು ಕೋಲೆ ॥
ಕರ್ಮವ ಮಾಡುತ । ಸರ್ವಾಧಿಷ್ಠಾನದಲ್ಲಿ ।
ಶರ್ವವಂದ್ಯನ ರೂಪ । ತಿಳಿಬೇಕು ಕೋಲೆ ॥ 13 ॥

ಹುಟ್ಟಿದ ಮನೆಗೆ । ಮೆಟ್ಟಿದ ಸ್ಥಳಕೆ ।
ಘಟ್ಯಾಗಿ ಗೌರವ । ತುರುಕಂಡ್ಯ ಕೋಲೆ ॥
ಘಟ್ಯಾಗಿ ಗೌರವ । ತಂದದ್ದುಂಟಾದರೆ ।
ವಿಠ್ಠಲ ನಿನ್ನನ್ನು । ಸಲುಹುವ ಕೋಲೆ ॥ 14 ॥

ಅರುಣೋದಯದಲೆದ್ದು । ಹರಿಗೆ ನಮಸ್ಕರಿಸಿ ।
ಸರ್ವಸುರರಿಗೆ ಅಭಿ । ನಮಿಸಮ್ಮ ಕೋಲೆ ॥
ಪರಮಾಪ್ತ ಪತಿಗೆ । ಗುರುಹಿರಿಯರಂಘ್ರಿಗೆ ।
ನಿರ್ವ್ಯಾಜ ಭಕ್ತಿಲಿ । ಎರಗಮ್ಮ ಕೋಲೆ ॥ 15 ॥

ಮುಂಝಾವದಲಿ ಎದ್ದು । ಮಂಜುಳ ಶ್ರೀ ತುಲಸಿ ।
ಕಂಜ ಪಾದಗಳಿಗೆ ಜಲವೆರೆದು ಕೋಲೆ ॥
ಎರಗಿ ಪೂಜಿಸಲು । ಕುಂಜರ ವರದನು ।
ಸಲಹುವ ಕೋಲೆ ॥ 16 ॥

ಆಕಳ ಪೂಜಿಸಿ । ಆಲಯ ಸಾರಿಸಿ ।
ಅಂಗಳದಲ್ಲಿ ರಂಗ । ವಲ್ಲಿಯು ಕೋಲೆ ॥
ಅಂಗಳದಲ್ಲಿ ಅಲಂ । ಕರಿಸಿ ಪೂಜೆಯ ಮಾಡೆ ।
ಮಂಗಳ ಕೊಡುವ ಶ್ರೀ । ರಂಗನು ಕೋಲೆ ॥ 17 ॥

ಗಂಗಾದಿ ತೀರ್ಥಗಳ । ಹಿಂಗದೆ ನೆನೆಯುತ ।
ಮಂಗಳ ಸ್ನಾನವ । ಮಾಡಮ್ಮ ಕೋಲೆ ॥
ಮಂಗಳ ಸ್ನಾನವ । ಮಾಡಿ ಶ್ರೀರಂಗನ ।
ಮಂಗಳ ಗದಪದ್ಮ । ಧರಿಸಮ್ಮ ಕೋಲೆ ॥ 18 ॥

ಲಕ್ಷ್ಮೀ ನಾರಾಯಣರ । ಲಕ್ಷ್ಯದಿ ಧ್ಯಾನಿಸುತ ।
ಅಕ್ಷಯ ಕುಂಕುಮ । ತಿಲಕವ ಕೋಲೆ ॥
ಅಕ್ಷಯ ಕುಂಕುಮ । ತಿಲುಕವನ್ಹಚ್ಚುತ ।
ಅಕ್ಷಯ ತಾನಂತರ । ನೆನೆಕಂಡ್ಯ ಕೋಲೆ ॥ 19 ॥

ಹರಿಯೇ ಸರ್ವೋತ್ತಮ । ಸಿರಿದೇವಿ ಜಗದಮ್ಮ ।
ವರಮುಖ್ಯ ಪ್ರಾಣ । ರೆ ಗುರುವೆನ್ನು ಕೋಲೆ ॥
ತರತಮ ಭಾವದಿಸುರ । ರನ್ನು ಸ್ಮರಿಸುತ ।
ವರಮಧ್ವ ಶಾಸ್ತ್ರವ । ಅರಿಯಮ್ಮ ಕೋಲೆ ॥ 20 ॥

ಭಾರತ ಭಾಗವತ । ಪುರಾಣ ಶಾಸ್ತ್ರಗಳ ।
ಸಾಗರಗಳನ್ನು ನೀ । ತಿಳಿದುಕೋ ಕೋಲೆ ॥
ಸಾರಗಳನ್ನು ತಿಳಿದು । ನುಡಿಯಲು ನಿತ್ಯದಿ ।
ಭೂರಿ ಜ್ಞಾನಗಳ । ಪಡೆಯುವಿ ಕೋಲೆ ॥ 21 ॥

ವಾಸವಾಗಿರುವಂಥ । ನಿವಾಸವೆಲ್ಲವು ।
ವಾಸುದೇವನು । ವಾಸವು ಕೋಲೆ ॥
ಕೋಶ ಭಂಡಾರವು । ಪೋಷಾಕು ಒಡವೆಯು ।
ಹಾಸಿಗೆ ಮಂಚವು । ಹಿರಿಗೆನ್ನ ಕೋಲೆ ॥ 22 ॥

ಆಳುವ ಗಂಡನು । ಬಾಳುವ ಮಕ್ಕಳು ।
ಪೇಳುವೆ ಹಿರಿಯರು । ಬೇಕನ್ನು ಕೋಲೆ ॥
ಪೇಳುವ ಹಿರಿಯರು । ನಾಲಿಸಿ ಕೇಳುತ ।
ನಾಳಿನಗತಿಯ ನೀ । ನೋಡಿಕೋ ಕೋಲೆ ॥ 23 ॥

ಮದುವ್ಯಾದ ಗಂಡನ । ಮುದದಿಂದ ಸೇವಿಸಿ ।
ಮೃದುವಾದ ಮಾತಗಳಾಡಮ್ಮ ಕೋಲೆ ॥
ಮೃದುವಾದ ನುಡಿಗಳ । ನುಡಿಯುತ್ತಲನು ದಿನ ।
ಮಧುಸೂದನನ ಪಾದ । ನೆನೆಯಮ್ಮ ಕೋಲೆ ॥ 24 ॥

ತೈಲ ಸ್ನಾನಾದಿಗಳು । ಮೇಲಾದ ವಸ್ತ್ರ ಪುಷ್ಪಮಾಲೆ ।
ಭಾಳ ಪರಿಮಳದ । ಶ್ರೀಗಂಧ ಕೋಲೆ ॥
ಮಾಲೆ ಬಾಳ ಪರಿಮಳದ । ಶ್ರೀಗಂಧ ಲೇಪಿಸಿ ।
ಬಾಲೆ ನಿನ್ನೆಯ ಪತಿಯ । ನೋಲೈಸು ಕೋಲೆ ॥ 25 ॥

ದೇತಾರ್ಚನೆಯ । ಭಾಂದಿ ಮಾಡಲು ।
ಸಾವಾಧಾನದಿ ನೀ । ನುಪಕರಿಸು ಕೋಲೆ ॥
ಸಾವಾಧಾನದಿ ನೀ ನುಪಕರಿಸಿ ನೈವೇದ್ಯ ।
ನೇಮದಿಂದಲಿ ಬಡಿಸಿ । ಉಣಿಸಮ್ಮ ಕೋಲೆ ॥ 26 ॥

ದೇವತಾರ್ಚನೆ । ವೈಶ್ವದೇವ ಬಲಿಹರಣವ ।
ಭಾವದಿ ಮಾಡುವ । ರಿರದಿರಲು ಕೋಲೆ ॥
ಭಾವದಿಂದಲಿ । ಮಾಡುವರಿರದಿರಲು ಭಕ್ತಿಲಿ ।
ಕಾವಯ ನಯ್ಯಗೆ । ಕೃಷ್ಣಾರ್ಪಣೆಯನ್ನು ಕೋಲೆ ॥ 27 ॥

ಹವ್ಯವಾಹನಿಗೆ । ಭವ್ಯ ಕರಗಳಿಂದ ।
ದಿವ್ಯವಾದುದೊಂದು । ಆಹುತಿ ಕೋಲೆ ॥
ದಿವ್ಯವಾದುದೊಂದು । ಆಹುತಿ ಅರ್ಪಿಸೆ ।
ಸವ್ಯ ಸಚಿವ । ಸಖನೊಪ್ಪವ ಕೋಲೆ ॥ 28 ॥

ಏಕಮೇವನಿಗೆ । ಏಕ ಆಹುತಿಯನ್ನು ।
ಏಕ ಭಕ್ತಿಲಿನೀ । ಕೊಡು ಕಂಡ್ಯ ಕೋಲೆ ॥
ಏಕ ಭಕ್ತಿಲಿನೀ । ಕೊಟ್ಟುದ್ದುಂಟಾದರೇ ।
ಸಾಕುವ ನಿಮ್ಮಯ । ವಂಶವ ಕೋಲೆ ॥ 29 ॥

ಕೃಷ್ಣಮಂತ್ರವ ಜಪಿಸಿ । ಕಷ್ಟಗಳ ದೂರಿರಿಸಿ ।
ಇಷ್ಟ ಸೌಭಾಗ್ಯವ । ಪಡೆಯಮ್ಮ ಕೋಲೆ ॥
ವೃಷ್ಟಿ ಕುಲದರಸನ್ನ । ಜಪಿಸುದ್ದುಂಟಾದರೆ ।
ವಿಷ್ಣುಲೋಕಕ್ಕೆ । ನೀನು ಸಲ್ಲುವೆ ಕೋಲೆ ॥ 30 ॥

. . . .

## ಕೇಶವಾದಿ ನಾಮಗಳು

ಈಶ ನಿನ್ನ ಚರಣ ಭಜನೆ ಆಶೆಯಿಂದ ಮಾಡುವೆನು ।
ದೋಷ ರಾಶಿ ನಾಶ ಮಾಡು ಶ್ರೀಶ ಕೇಶವ ॥ ಪ ॥

ಶರಣು ಹೊಕ್ಕೆನಯ್ಯ ಎನ್ನ ಮರಣ ಸಮಯದಲ್ಲಿ ನಿನ್ನ
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣಾ ॥ 1 ॥

ಶೋಧಿಸೆನ್ನ ಭವದ ಕಲುಷ ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವ ಯಮನ ಬಾಧೆ ಬಿಡಿಸು ಮಾಧವಾ ॥ 2 ॥

ಹಿಂದನೇಕ ಯೋನಿಗಳಲಿ ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸು ತಂದೆ ಗೋವಿಂದಾ ॥ 3 ॥

ಭ್ರಷ್ಟನೆನಿಸಬೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಡನೆ ಇಟ್ಟು ಕಷ್ಟ ಬಿಡಿಸು ವಿಷ್ಣುವೇ ॥ 4 ॥

ಮದನನಯ್ಯ ನಿನ್ನ ಮಹಿಮೆ ವದನದಿಂದ ನುಡಿಯುವಂತೆ
ಹೃದಯದಲ್ಲಿ ಹುದುಗಿಸಯ್ಯ ಮಧುಸೂದನ ॥ 5 ॥

ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾಡಿ
ಜವನ ಬಾಧೆಯನ್ನು ಬಿಡಿಸೋ ಶ್ರೀ ತ್ರಿವಿಕ್ರಮ ॥ 6 ॥

ಕಾಮಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ ॥ 7 ॥

ಮೊದಲ ನಿನ್ನ ಪಾದಪೂಜೆ ಒದಗುವಂತೆ ಮಾಡೋ ಎನ್ನ
ಹೃದಯದೊಳಗೆ ಸದನ ಮಾಡು ಮುದದಿ ಶ್ರೀಧರ ॥ 8 ॥

ಕಾಮಕ್ರೋಧ ಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸು
ಶ್ರೀಮಹಾನುಭಾವನಾದ ದಾಮೋದರ ॥ 9 ॥

ಹುಸಿಯನಾಡಿ ಹೊಟ್ಟೆಹೊರೆವ ವಿಷಯದಲ್ಲಿ ರಸಿಕನೆಂದು
ಹುಸಿಗೆ ಹಾಕದಿರು ಎನ್ನ ಹೃಷಿಕೇಶನೇ ॥ 10 ॥

ಬಿದ್ದು ಭವವದನೇಕ ಜನುಮ ಬದ್ಧನಾಗಿ ಕಲುಷದಿಂದ
ಗೆದ್ದು ಪೋಪ ಬುದ್ಧಿ ತೋರು ಪದ್ಮನಾಭನೇ ॥ 11 ॥

ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿಯನ್ನು ಬಿಡಿಸಿ
ಕಿಂಕರನ್ನ ಮಾಡಿಕೊಳ್ಳೊ ಸಂಕರ್ಷಣ ॥ 12 ॥

ಏಸು ಜನ್ಮ ಬಂದರೇನು ದಾಸನಲ್ಲವೇನು ನಾನು
ಘಾಸಿ ಮಾಡದಿರು ಇನ್ನು ವಾಸುದೇವನೆ ॥ 13 ॥

ಬುದ್ಧಿಶೂನ್ಯನಾಗಿ ಎನ್ನ ಬದ್ಧಕಾಯ ಕುಹಕ ಮನವ
ತಿದ್ದಿ ಹೃದಯ ಶುದ್ಧ ಮಾಡೋ ಪ್ರದ್ಯುಮ್ನನೇ ॥ 14 ॥

ಜನನಿ ಜನಕ ನೀನೆಯೆಂದು ನೆನೆವೆನಯ್ಯ ದೀನಬಂಧು
ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೇ ॥ 15 ॥

ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ಪ್ರೇಮ
ಇರಿಸು ನಿನ್ನ ಚರಣದಲಿ ಪುರುಷೋತ್ತಮ ॥ 16 ॥

ಸಾಧುಸಂಗ ಕೊಟ್ಟು ನಿನ್ನ ಪಾದಭಜನೆ ಇತ್ತು ಎನ್ನ
ಭೇದಮಾಡಿ ನೋಡದಿರು ಹೇ ಅಧೋಕ್ಷಜ ॥ 17 ॥

ಚಾರುಚರಣ ತೋರಿ ಎನಗೆ ಪಾರುಗಾಣಿಸಯ್ಯ ಕೊನೆಗೆ
ಭಾರ ಹಾಕಿರುವೆ ನಿನಗೆ ನಾರಸಿಂಹನೆ ॥ 18 ॥

ಸಂಚಿತಾದಿ ಪಾಪಗಳು ಕಿಂಚಿತಾದಿಪೀಡೆಗಳು
ಮುಂಚಿತಾಗೆ ಕಳೆಯಬೇಕು ಸ್ವಾಮಿ ಅಚ್ಯುತ ॥ 19 ॥

ಜ್ಞಾನಭಕುತಿ ಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು ಎನ್ನ
ಹೀನ ಬುದ್ಧಿ ಬಿಡಿಸೊ ಮುನ್ನ ಶ್ರೀ ಜನಾರ್ಧನ ॥ 20 ॥

ಜಪತಪಾನುಷ್ಠಾನವಿರದೆ ಕುಪಿಥಗಾಮಿಯಾದ ಎನ್ನ
ಕೃಪೆಯ ಮಾಡಿ ಕ್ಷಮಿಸಬೇಕು ಹೇ ಉಪೇಂದ್ರನೇ ॥ 21 ॥

ಮೊರೆಯ ಇಡುವೆನಯ್ಯ ನಿನಗೆ ಸೆರೆಯ ಬಿಡಿಸು ಭವದ ಎನಗೆ
ಇರಿಸು ಭಕ್ತರೊಳು ಪರಮಪುರುಷ ಶ್ರೀಹರೇ ॥ 22 ॥

ಪುಟ್ಟಿಸಲೇ ಬೇಡ ಇನ್ನು ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟು ಮಾತ್ರ ಬೇಡಿಕೊಂಬೆ ಶ್ರೀಕೃಷ್ಣನೇ ॥ 23 ॥

ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವನಿಗೆ
ಅರ್ಥಿಯಿಂದ ಸಲುಹುವನು ಕರ್ತೃ ಕೇಶವ ॥ 24 ॥

ಮರೆಯದಲೆ ಹರಿಯ ನಾಮ ಬರೆದು ಓದು ಕೇಳಿದವರಿಗೆ
ಕರೆದು ಮುಕ್ತಿ ಕೊಡುವ ನೆಲೆಯಾದಿಕೇಶವ ॥ 25 ॥

॥ ಶ್ರೀಕೃಷ್ಣಾರ್ಪಣಮಸ್ತು ॥







# 23. ಚಾತುರ್ಮಾಸ್ಯ ಆಚರಣೆ



- ***ಚಾತುರ್ಮಾಸ್ಯದಲ್ಲಿ ಆಚರಿಸುವ ನಿಯಮಗಳು ಹಾಗೂ ದಾನಗಳು***
- ***ಚಾತುರ್ಮಾಸ್ಯ ವ್ರತಾರಂಭ – ಅದರ ಶ್ರೇಷ್ಠತೆ :***

ಭಗವಾನ್ ವರಾಹನು ದೇವತೆಗಳಿಂದ ಕೂಡಿ ಮೇರು ಪರ್ವತದಲ್ಲಿದ್ದನು. ದಕ್ಷಿಣಾಯನ ಕಾಲವಾಗಿತ್ತು. ದೇವತೆಗಳೆಲ್ಲರೂ ಹೀಗೆ ಭಿನ್ನವಿಸಿಕೊಂಡರು. "ಭಗವಂತನೇ, ನಮಗೆ ರಾತ್ರಿಕಾಲವಾದ ದಕ್ಷಿಣಾಯನವು ಪ್ರಾಪ್ತವಾಗಿದೆ. ನಾವೆಲ್ಲರೂ ನಮ್ಮ ಸ್ವಸ್ಥಾನಕ್ಕೆ ಹೋಗುವೆವು ಅನುಜ್ಞೆ ನೀಡು" ಎಂದು. ಅದೇ ಸಮಯದಲ್ಲಿ ದಕ್ಷಿಣಾಯನಕ್ಕೆ ಅಭಿಮಾನಿ ದೇವತೆಯು ಹೀಗೆಂದಳು.

"ಈ ದಕ್ಷಿಣಾಯನವು ರಾತ್ರಿ ಕಾಲವಾದ್ದರಿಂದ ಯಾರು ಉಪನಯನಾದಿ ಕರ್ಮಗಳನ್ನು ಮಾಡಲಾರರು. ಆದ್ದರಿಂದ ಯಾವ ಕಾರ್ಯಕ್ಕೂ ಉಪಯೋಗವಿಲ್ಲದ ದಕ್ಷಿಣಾಯನವನ್ನು ಸರ್ವರೂ ತಿರಸ್ಕರಿಸುವರು ಹಾಗೂ ನಿಂದಿಸುವರು. ಸರ್ವರಿಂದ ನಿಂದಿತಳಾದ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ. ಈ ಜನ್ಮವನ್ನು ವ್ಯರ್ಥವಾಗದಂತೆ ಅನುಗ್ರಹಿಸಿದರೆ ಮಾತ್ರ ಬದುಕಿರುವೆ ಇಲ್ಲದಿದ್ದರೆ ನನ್ನ ಜೀವನವನ್ನು ಅಂತ್ಯಗಾಣಿಸುತ್ತೇನೆ" ಎಂದಳು.

**ವ್ಯಥಾ ಮೇ ಜೀವನಂ ಸ್ವಾಮಿನ್ ಯತ್ ಸರ್ವೈಃ ಗರ್ಹಿತಾಸ್ಮ್ಯಹಮ್।**
**ಯದಿ ತ್ವಮನುಗೃಹ್ಣಾಸಿ ತರ್ಹಿ ಜೀವಾಮಿ ನಾನ್ಯಥಾ ॥**

ದೇವತೆಗಳೂ ಭಗವಂತನನ್ನು ಪ್ರಾರ್ಥಿಸಿದರು. ಭಗವಂತನಾದರೂ

ಪುಟ್ಟಿಸಲೇ ಬೇಡ ಇನ್ನು ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟು ಮಾತ್ರ ಬೇಡಿಕೊಂಬೆ ಶ್ರೀಕೃಷ್ಣನೇ ॥ 23 ॥

ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವನಿಗೆ
ಅರ್ಥಿಯಿಂದ ಸಲುಹುವನು ಕರ್ತೃ ಕೇಶವ ॥ 24 ॥

ಮರೆಯದಲೆ ಹರಿಯ ನಾಮ ಬರೆದು ಓದು ಕೇಳಿದವರಿಗೆ
ಕರೆದು ಮುಕ್ತಿ ಕೊಡುವ ನೆಲೆಯಾದಿಕೇಶವ ॥ 25 ॥

॥ ಶ್ರೀಕೃಷ್ಣಾರ್ಪಣಮಸ್ತು ॥







# 23. ಚಾತುರ್ಮಾಸ್ಯ ಆಚರಣೆ



- ***ಚಾತುರ್ಮಾಸ್ಯದಲ್ಲಿ ಆಚರಿಸುವ ನಿಯಮಗಳು ಹಾಗೂ ದಾನಗಳು***
- ***ಚಾತುರ್ಮಾಸ್ಯ ವ್ರತಾರಂಭ – ಅದರ ಶ್ರೇಷ್ಠತೆ :***

ಭಗವಾನ್ ವರಾಹನು ದೇವತೆಗಳಿಂದ ಕೂಡಿ ಮೇರು ಪರ್ವತದಲ್ಲಿದ್ದನು. ದಕ್ಷಿಣಾಯನ ಕಾಲವಾಗಿತ್ತು. ದೇವತೆಗಳೆಲ್ಲರೂ ಹೀಗೆ ಭಿನ್ನವಿಸಿಕೊಂಡರು. "ಭಗವಂತನೇ, ನಮಗೆ ರಾತ್ರಿಕಾಲವಾದ ದಕ್ಷಿಣಾಯನವು ಪ್ರಾಪ್ತವಾಗಿದೆ. ನಾವೆಲ್ಲರೂ ನಮ್ಮ ಸ್ವಸ್ಥಾನಕ್ಕೆ ಹೋಗುವೆವು ಅನುಜ್ಞೆ ನೀಡು" ಎಂದು. ಅದೇ ಸಮಯದಲ್ಲಿ ದಕ್ಷಿಣಾಯನಕ್ಕೆ ಅಭಿಮಾನಿ ದೇವತೆಯು ಹೀಗೆಂದಳು.

"ಈ ದಕ್ಷಿಣಾಯನವು ರಾತ್ರಿ ಕಾಲವಾದ್ದರಿಂದ ಯಾರು ಉಪನಯನಾದಿ ಕರ್ಮಗಳನ್ನು ಮಾಡಲಾರರು. ಆದ್ದರಿಂದ ಯಾವ ಕಾರ್ಯಕ್ಕೂ ಉಪಯೋಗವಿಲ್ಲದ ದಕ್ಷಿಣಾಯನವನ್ನು ಸರ್ವರೂ ತಿರಸ್ಕರಿಸುವರು ಹಾಗೂ ನಿಂದಿಸುವರು. ಸರ್ವರಿಂದ ನಿಂದಿತಳಾದ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ. ಈ ಜನ್ಮವನ್ನು ವ್ಯರ್ಥವಾಗದಂತೆ ಅನುಗ್ರಹಿಸಿದರೆ ಮಾತ್ರ ಬದುಕಿರುವೆ ಇಲ್ಲದಿದ್ದರೆ ನನ್ನ ಜೀವನವನ್ನು ಅಂತ್ಯಗಾಣಿಸುತ್ತೇನೆ" ಎಂದಳು.

**ವ್ಯಥಾ ಮೇ ಜೀವನಂ ಸ್ವಾಮಿನ್ ಯತ್ ಸರ್ವೈಃ ಗರ್ಹಿತಾಸ್ಮ್ಯಹಮ್।**
**ಯದಿ ತ್ವಮನುಗೃಹ್ಣಾಸಿ ತರ್ಹಿ ಜೀವಾಮಿ ನಾನ್ಯಥಾ ॥**

ದೇವತೆಗಳೂ ಭಗವಂತನನ್ನು ಪ್ರಾರ್ಥಿಸಿದರು. ಭಗವಂತನಾದರೂ

ದಕ್ಷಿಣಾಭಿಮಾನಿ ದೇವತೆಗಳಿಗೆ ಹೀಗೆ ವರವನ್ನಿತ್ತನು. "ನನಗೆ ದಕ್ಷಿಣಾಯನದಲ್ಲಿ ರಾತ್ರಿಯಲ್ಲಿರುವ ನಾಲ್ಕು ಯಾಮಗಳಲ್ಲಿ (6 ತಿಂಗಳಲ್ಲಿ) ಮೂರು ಯಾಮಗಳು ನನಗೆ ಅತ್ಯಂತ ಪ್ರಿಯವಾಗಿವೆ. ಈ ಮೂರು ಯಾಮಗಳಲ್ಲಿಯೂ ಮೊದಲನೆಯ ಎರಡು ಯಾಮಗಳು ಎಂದರೆ ನಾಲ್ಕು ತಿಂಗಳುಗಳು (ಇದೇ ಚಾತುರ್ಮಾಸ್ಯ) ಅವಧಿ) ಅತ್ಯಂತ ಪ್ರೀತಿಕರವಾಗಿವೆ.

**ಪ್ರಿಯಾ ಮೇ ತೇ ತ್ರಯೋ ಯಾಮಾಃ ತತ್ರಾದ್ಯೌ ದ್ವೌ ಮಹಾಪ್ರಿಯೌ।**

ಈ ನಾಲ್ಕು ತಿಂಗಳ ಅವಧಿಯಲ್ಲಿ ಮಾಡಿದ ಸ್ನಾನ, ದಾನ, ಜಪ, ವ್ರತಾದಿಗಳಿಗೆ ಬೇರೆ ಎಂಟು ತಿಂಗಳಲ್ಲಿ ಮಾಡಿದ ಕರ್ಮಗಳ ಫಲಕ್ಕಿಂತ ಅನಂತಪಟ್ಟು ಫಲಾಧಿಕ್ಯವಿದೆ.

**ಅನಂತಗುಣಮೇವ ಸ್ಯಾತ್ ಅಷ್ಟಮಾಸಕೃತಾದಪಿ ।**

- ***ಚಾತುರ್ಮಾಸ್ಯ – ದೇವತೆಗಳು :***

ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ ಈ ನಾಲ್ಕು ಮಾಸಗಳು ಚಾತುರ್ಮಾಸ್ಯದ ಮಾಸಗಳಾಗಿವೆ. ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ ರೂಪಗಳು ನಿಯಮಾಕವಾಗಿವೆ.

**ಆದ್ಯಃ ಸ್ಯಾತ್ ಶ್ರಾವಣೋ ಮಾಸಃ, ನಭೋಸ್ಯೋಽಥ ದ್ವಿತೀಯಕಃ ।**
**ತೃತೀಯಶ್ಚಾಶ್ವಿನೋ ಮಾಸಃ ಚಾತುರ್ಥಃ ಕಾರ್ತಿಕಃ ಸ್ಮೃತಃ ॥**
**ಶ್ರೀಧರಶ್ಚ ಹೃಷಿಕೇಶಃ ಪದ್ಮನಾಭಸ್ತೃತೀಯಕಃ ।**
**ದಾಮೋದರಃ ಕಾರ್ತಿಕಸ್ಯ ಚಾತುರ್ಮಾಸ್ಯೇ ತು ದೇವತಾಃ ॥**

ಈ ಚಾತುರ್ಮಾಸ್ಯದಲ್ಲಿಯೂ ಮುಂದು ಮುಂದಿನ ಮಾಸಗಳು ಫಲಾಧಿಕ್ಯವನ್ನು ಕೊಡುವುವು. ಈ ಪುಣ್ಯದ ವೃದ್ಧಿಯನ್ನು ಮಾಡುವುದರಲ್ಲಿ ಕಾರ್ತಿಕಮಾಸಕ್ಕೆ ಸಮಾನವಾದದ್ದೆ ಇರುವುದಿಲ್ಲ. ಭಗವಂತನು ಹೀಗೆ ಹೇಳಿದ್ದರಿಂದ ದಕ್ಷಿಣಾಯನಕ್ಕೆ ಅಭಿಮಾನಿಯಾದ ರಾತ್ರೀದೇವಿಯು ಸಂತುಷ್ಟಳಾಗಿ ನಮಸ್ಕರಿಸಿದಳು. ಅಂದಿನಿಂದ ಚಾತುರ್ಮಾಸ್ಯವು ಭಗವಂತನಿಗೆ ಪ್ರಿಯವಾಗಿದ್ದು ದಿನ ದಿನಕ್ಕೂ ಬರುವ ಫಲವು ಅನಂತಪಟ್ಟು ಫಲವನ್ನು ಭಗವಂತನು ನೀಡುವನು.

- ***ಚಾತುರ್ಮಾಸ್ಯ ಸ್ವರೂಪ :***

ಆಷಾಢದಿಂದಾರಂಭಿಸಿ ಆರು ತಿಂಗಳು ಕಾಲ ದಕ್ಷಿಣಾಯನವೆಂದು ಪುಷ್ಯದಿಂದಾರಂಭಿಸಿ ಜ್ಯೇಷ್ಠಮಾಸದವರೆಗೂ ಉತ್ತರಾಯಣವೆಂದು ಕರೆಯುವರು.

**ಆಷಾಢಾದ್ಯಸ್ತು ಷಣ್ಮಾಸಾ ದಕ್ಷಿಣಾಯನಮೀರಿತಮ್ ॥**
**ಪೌಷಾದ್ಯಾ ದೇವಿ ಷಣ್ಮಾಸಾ ಉತ್ತರಾಯಣಮೀರಿತಮ್ ॥**

ಚಾಂದ್ರಮಾಸವಾದರೂ ಅಮಾವಾಸ್ಯೆಯಿಂದ ಅಮಾವಾಸ್ಯೆಯವರೆಗೂ ಒಂದು ಚಾಂದ್ರ ಮಾಸವೆಂದು, ಎಂದರೆ, ಶುಕ್ಲ ಪಾಡ್ಯದಿಂದ ಅಮಾವಾಸ್ಯೆ ಒಂದು ತಿಂಗಳು ಚಾಂದ್ರಮಾಸವೆಂತಲೂ, ಕೃಷ್ಣಪಕ್ಷ ಪಾಡ್ಯದಿಂದರಂಭಿಸಿ ಹುಣ್ಣಿಮೆವರೆಗಿನ ದಿನಗಳು ಚಾಂದ್ರಮಾಸವೆಂದು, ಎರಡು ವಿಧಗಳಿವೆ. ಇದನ್ನು ಪೌರ್ಣಿಮಾಂತ ಚಾಂದ್ರಮಾಸವೆಂದು ತಿಳಿಯಬೇಕು. ವ್ರತಗಳನ್ನು ಮಾಡುವಾಗ ಪೂರ್ಣಿಮೆಯಿಂದ ಪೂರ್ಣಿಮಾವರೆಗೂ ಇರುವ ಪೌರ್ಣಿಮಾಂತ ಚಾಂದ್ರಮಾನವನ್ನು ಸ್ವೀಕರಿಸಬೇಕು. ಚಾತುರ್ಮಾಸ್ಯದಲ್ಲಾದರೂ ಆಷಾಢ ಶುಕ್ಲ ದಶಮಿಯಿಂದ ಹಿಡಿದು ಕಾರ್ತಿಕ ಶುಕ್ಲ ಪೂರ್ಣಿಮೆಯವರೆಗೂ ಆಚರಿಸಬೇಕು.

**ಆಷಾಢೇ ದಶಮೀಂ ಶುಕ್ಲಾಂ ಆರಭ್ಯ ಸ್ಯಾತ್ತು ಕಾರ್ತಿಕೀ ।**
**ಪೌರ್ಣಮಾಸೀ ತಾವದಿದಂ ಚಾತುರ್ಮಾಸ್ಯ ವ್ರತಾದಿಕಮ್ ॥**

- ***ಚಾತುರ್ಮಾಸ್ಯವು ಕಡ್ಡಾಯ :***

ಚಾತುರ್ಮಾಸ್ಯ ವ್ರತವನ್ನು ಸರ್ವರೂ ಕಡ್ಡಾಯವಾಗಿ ಆಚರಿಸಲೇಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ವಿಧವೆ, ರಜಸ್ವಲೆ, ಮುತ್ತೈದೆ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಇವರೆ ಮೊದಲಾದವರಿಗೆ ಚಾತುರ್ಮಾಸ್ಯವು ಅವಶ್ಯವಾಗಿ ಕರ್ತವ್ಯವಾಗಿದೆ.

**ನಿತ್ಯಂ ಕಾರ್ಯಂ ಚ ಸರ್ವೇಷಾಂ ಏತದ್ವ್ರತ ಚತುಷ್ಟಯಂ ।**
**ನಾರೀಭಿಶ್ಚ ನರೈರ್ವಾಪಿ ಚತುರಾಶ್ರಮವರ್ತಿಭಿಃ ॥**

**ಬ್ರಾಹ್ಮಣಃ ಕ್ಷತ್ರಿಯಂ ವೈಶ್ಯಃ ಸ್ತ್ರೀಯಃ ಶೂದ್ರೋ ವ್ರತೀ ಯಥಾ ।**
**ಗೃಹೀ ವನಸ್ಥಃ ಕುಟಚೋ ಬಹೂದಃ ಪರಮಹಂಸಕಃ ॥**

**ನರಕಾನ್ನ ನಿರ್ವರ್ತಂತೆ ತ್ಯಕ್ತ್ವಾ ವ್ರತಚತುಷ್ಟಯಮ್ ।**

- ***ವ್ರತಬಿಟ್ಟರೆ ಮಹಾದೋಷ :***

ಅವ್ರತೇನ ನಯೇದ್ ಯಸ್ತು ಚಾತುರ್ಮಾಸ್ಯಮನುತ್ತಮಂ ।
ಸ ಪಾಪೀ ನರಕಂ ಯಾತಿ ಯಾವದಾಭೂತಸಂಪ್ಲವಮ್ ॥

- ***ವ್ರತ ಮಾಡಿದರೆ ಮಹಾಪುಣ್ಯ :***

ಇದಂ ವ್ರತಂ ಮಹಾಪುಣ್ಯಂ ಸರ್ವಪಾಪಹರಂ ಶುಭಂ ।
ಸರ್ವಾಪರಾಧಶಮನಂ ಸರ್ವೋಪದ್ರವನಾಶನಮ್ ॥

- ***ಚಾತುರ್ಮಾಸ್ಯದಲ್ಲಿ ಹತ್ತು ಕರ್ತವ್ಯಗಳು :***

ಸತ್ಸಂಗಃ ದ್ವಿಜಭಕ್ತಿಶ್ಚ, ಗುರುದೇವಾಗ್ನಿತರ್ಪಣಂ ।
ಗೋಪ್ರದಾನಂ, ವೇದಪಾಠಃ ಸತ್ಕ್ರಿಯಾ, ಸತ್ಯಭಾಷಣಂ ॥
ಗೋಭಕ್ತಿಃ ದಾನಭಕ್ತಿಶ್ಚ ಸದಾ ಧರ್ಮಸ್ಯ ಸಾಧನಮ್ ।

- ***ಅನ್ನದಾನ ಪ್ರಶಂಸೆ :***

ಅನ್ನ ಬ್ರಹ್ಮ ಇತಿ ಪ್ರೋಕ್ತಂ ಅನ್ನೇ ಪ್ರಾಣಾಃ ಪ್ರತಿಷ್ಠಿತಾಃ ।
ತಸ್ಮಾದ್ ಅನ್ನಪ್ರದೋ ನಿತ್ಯಂ ವಾರಿದಶ್ಚ ಭವೇನ್ನರಃ ॥
ಮಣಿರತ್ನಂ ಪ್ರವಾಲಾನಂ ರೂಪ್ಯ ಹಾಟಕವಾಸಸಾಂ ।
ಅನ್ಯೇಷಾಮಪಿ ದಾನಾನಾಂ ಅನ್ನದಾನಂ ವಿಶಿಷ್ಯತೇ ॥

ಬಂಗಾರ, ಮಣಿರತ್ನಗಳನ್ನು ಎಷ್ಟು ಕೊಟ್ಟರೂ "ಸಾಕು" ಎನ್ನುವುದಿಲ್ಲ. ಅನ್ನ, ನೀರುಗಳನ್ನು ಹೊಟ್ಟೆ ತುಂಬ ನೀಡಿದರೆ ಎಂಥವರಾದರೂ "ಸಾಕು ಸಾಕು" ಎನ್ನುವರು. ತೃಪ್ತಿಪಡಿಸುವ ದಾನವೆಂದರೆ ಅನ್ನ-ನೀರುಗಳ ದಾನವೇ ಆಗಿದೆ. ***ಆಸೆಯನ್ನು ಬಿಡುವುದು ಮುಖ್ಯಧರ್ಮ :*** ಮನುಷ್ಯನಿಗೆ ಆಸೆಯೇ ಬಹಳವಾಗಿ ಸಂಸಾರದಲ್ಲಿ ಬಂಧಿಸುವ ವಸ್ತುವಾಗಿದೆ. ಈ ಆಶಾಪಾಶಕ್ಕೆ ಸಿಗದೆ ತನಗೆ ಅತ್ಯಂತ ಇಷ್ಟವಾದ ಪ್ರೀತಿಯ ಪದಾರ್ಥಗಳ ಮೇಲಿನ ಆಸೆಯನ್ನು ನಿಯಮ ಪಾಲನೆಯ ದೃಷ್ಟಿಯಿಂದ ತೊರೆದು ಸಂಪೂರ್ಣವಾಗಿ ಆಸೆಯನ್ನು ತ್ಯಜಿಸಲು ಪೀಠಿಕೆಯಾಗಿರಬೇಕು.

ಮನುಷ್ಯನಿಗೆ ಅನೇಕ ಪದಾರ್ಥಗಳ ಮೇಲೆ ನಾನಾ ವಿಧವಾದ ಭಕ್ಷ್ಯಗಳನ್ನು ಮೃಷ್ಟಾನ್ನವನ್ನು ತಿನ್ನಲು ಬಲವತ್ತರವಾದ ಆಸೆ, ಅಪೇಕ್ಷೆ ಇರುತ್ತದೆ.

ಇವೆಲ್ಲವನ್ನು ಚಾತುರ್ಮಾಸ್ಯದಲ್ಲಿ ಬಿಡಲು ಪ್ರಯತ್ನಿಸಬೇಕು. ಚಾತುರ್ಮಾಸ್ಯವನ್ನು ಮಾಡದೆ ತೀರ್ಥಯಾತ್ರೆ, ದಾನ, ಮೊದಲಾದ ಪುಣ್ಯ ಕರ್ಮಗಳು ವ್ಯರ್ಥವಾಗುತ್ತದೆ.

**ಸಂಪ್ರಾಪ್ಯ ಮಾನುಷ್ಯಂ ಜನ್ಮ ಚಾತುರ್ಮಾಸ್ಯ ಪರಾಙ್ಮುಖಃ ।**
**ತಸ್ಯ ಪಾಪಶತಾನ್ಯಾಹುಃ ದೇಹಸ್ಥಾನಿ ನ ಸಂಶಯಃ ॥**

ಭಗವಂತನು ನಮಗೆ ಬೇಕಾಗುವ ಇಷ್ಟ ವಸ್ತುಗಳನ್ನು ಕೊಡುವವನಾಗಿರುವನು. ಇಷ್ಟ ವಸ್ತುವಾದರೂ ನಮಗೆ ಪ್ರಿಯವಾದದ್ದು. ವರ್ಷದಲ್ಲಿ ನಾಲ್ಕು ತಿಂಗಳಲ್ಲಾದರೂ ಇಷ್ಟು ವಸ್ತುಪ್ರದವಾದ ಭಗವಂತನು ನಿದ್ರೆಯಲ್ಲಿರುವಾಗ ಇಷ್ಟವಸ್ತುಗಳನ್ನು ಬಿಟ್ಟರೆ ಇನ್ನೂ ಹೆಚ್ಚು ಇಷ್ಟ ವಸ್ತುಗಳನ್ನು ಕರುಣಿಸುವನು.

**ಇಷ್ಟವಸ್ತುಪ್ರದೋ ವಿಷ್ಣುಃ ಲೋಕಶ್ಚ ಇಷ್ಟರುಚಿಃ ಸದಾ ।**
**ತಸ್ಮಾತ್ ಸರ್ವಪ್ರಯತ್ನೇನ ಚಾತುರ್ಮಾಸ್ಯೇ ತ್ಯಜೇಚ್ಚ ತತ್ ॥**

ಭಗವಂತನು ಮಲಗಿರುವಾಗ ಅವನಿಗೆ ನಿವೇದಿಸದೆ ತಿಂದವು, ಗಂಡನು ಮಲಗಿದ ಮೇಲೆ ನಾನಾ ವಿಧ ಭಕ್ಷ್ಯಗಳನ್ನು ಮಾಡಿ ತಿನ್ನುವ ಪತಿವ್ರತೆಗೆ (?) ಸಮನೆನಿಸುವರು.

- ***ಚಾತುರ್ಮಾಸ್ಯದ ಆಚರಣೆ :***

ಆಷಾಢ ಶುಕ್ಲ ಏಕಾದಶಿಯ ದಿನ ಚಾತುರ್ಮಾಸ್ಯವನ್ನು ಪ್ರಾರಂಭಿಸಬೇಕು. ಕಾರ್ತಿಕ ಪೂರ್ಣಿಮೆಯಂದು ಸಮಾಪ್ತಿಗೊಳಿಸಬೇಕು. ಚಾತುರ್ಮಾಸ್ಯ ಅವಧಿಯಲ್ಲಿ ಬರುವ ಬೇರೆ ಉಪವಾಸಗಳನ್ನು ಪ್ರಭೋಧಿನೀ ಏಕಾದಶಿಯಂದು ಭಗವಂತನಿಗೆ ಅರ್ಪಿಸಿ ಸಮಾಪ್ತಿಗೊಳಿಸಬೇಕು. ದ್ವಾದಶಿಯ ದಿವಸ ಈ ವ್ರತೋಪವಾಸಗಳ ಸಮಾಪ್ತಿ ಪ್ರಯುಕ್ತವಾಗಿ ಹೋಮ, ಪಾರಾಯಣ, ಬ್ರಾಹ್ಮಣ ಭೋಜನ ಇವುಗಳನ್ನು ಆಚರಿಸಬೇಕು.

ಆಷಾಢ ಮಾಸದಲ್ಲಿ ಸೂರ್ಯನು ಕಟಕರಾಶಿಯಲ್ಲಿರುವನು ಇದು ದೇವತೆಗಳಿಗೆ ರಾತ್ರಿ ಕಾಲವು. ಈ ಕಾಲದಲ್ಲಿ ಸಮಸ್ತ ಮಂಗಳಗಲಿಗೂ ಮಂಗಳ ಪ್ರದನಾದ ಜನಾರ್ಧನನು ಯೋಗನಿದ್ರೆಯನ್ನು ಸ್ವೀಕರಿಸಿ ಶಯನಾವಸ್ಥೆಯನ್ನು ತೋರಿಸುವನು.

- ***ವಿವಾಹಾದಿಗಳಿಗೆ ವರ್ಜ್ಯ :***

ಈ ಕಾಲವು ಭಗವಂತನ ನಿದ್ರೆ ಕಾಲವಾದ್ದರಿಂದ ಭಗವಂತನು ಕಣ್ಣು ಮುಚ್ಚಿರುವನು. ಭಗವಂತನ ದೃಷ್ಟಿ ಇಲ್ಲದಿರುವ ಈ ನಾಲ್ಕು ತಿಂಗಳಲ್ಲಿ ವಿವಾಹ ಚೌಲ, ಉಪನಯನ ಮೊದಲಾದ ಷೋಡಶ ಕರ್ಮಗಳನ್ನು ಮಾಡಬಾರದು.

**ತಸ್ಮಿಂಸ್ತು ಶಯನೇ ಯಾತೇ ನೋದ್ವಾಹಾದಿಕ್ರಿಯಾ ಭವೇತ್ ।**
**ಚೌಲೋಪನಯನೇ ಚೈವ ವಿವಾಹಾದ್ಯಂ ತ್ಯಜೇದ್ ಬುಧಃ ॥**

ಅಜ್ಞಾನದಿಂದಾಗಲೀ ಉದ್ಧಟತನದಿಂದಾಗಲೀ ವಿವಾಹಾದಿಗಳನ್ನು ಮಾಡಿದರೆ ವಧೂವರರಿಗೆ ಭಗವಂತನ ಮಂಗಳ ದೃಷ್ಟಿ ಇಲ್ಲದಿರುವುದರಿಂದ ಮರಣವೇ ದಿಟ.

**ಅಜ್ಞಾನಾದ್ ಯದಿ ಕುರ್ವಂತಿ ಮೃತಿಸ್ತೇಷಾಂ ನ ಸಂಶಯಃ ।**
**ಕಲ್ಯಾಣದೇವತಾದೃಷ್ಟಿಹೀನಾಂ ತು ಕುತಸ್ಸುಖಮ್ ॥**

- ***ಗೋಮಯದಿಂದ ಶುದ್ಧಿ :***

ಆಷಾಢ ಶುಕ್ಲ ದಶಮಿಯಂದು ಗೋಮಯದಿಂದ ಮನೆ, ದೇವರ ಮನೆಯನ್ನು ಸಾರಿಸಿ ತೊಳೆದು ಶುದ್ಧ ಮಾಡಬೇಕು. ದೇವರ ವಸ್ತ್ರಗಳನ್ನು ಒಗೆದು ಶುದ್ಧಿಗೊಳಿಸಬೇಕು. ಮೊರ, ಜರಡಿ, ಅನ್ನದ ಪಾತ್ರೆಗಳು ಇವುಗಳನ್ನು ಶುದ್ಧಿಗೊಳಿಸಬೇಕು. ಉಡುವ ಹಾಗೂ ಹೊದೆಯವ ವಸ್ತ್ರಗಳನ್ನು ಬಟ್ಟೆಗಳು, ಕಂಬಳಿಗಳು ಚಾಪೆ, ಹಾಸಿಗೆ ದಿಂಬು ಇವುಗಳನ್ನು ಶುದ್ಧ ಮಾಡಿ ತಾನೂ ಸಚೇಲಸ್ನಾನವನ್ನು ಮಾಡಬೇಕು. ಇವುಗಳನ್ನು ನವಮಿಯಂದೇ ಪೂರೈಸಿ ದಶಮಿದಿನದಂದು ಸ್ನಾನ, ನಿತ್ಯಾಹ್ನಿಕವನ್ನು ಮಾಡಿ ದೇವರಿಗೆ ಉದ್ವರ್ತನ ಸೇವೆಯನ್ನು ಮಾಡಬೇಕು. ಉದ್ವರ್ತನವೆಂದರೆ ಕಡಳೆಹಿಟ್ಟು ಹಾಗೂ ಸುಗಂಧ ದ್ರವ್ಯಗಳಿಂದ ಉಜ್ಜಿ ತಿಕ್ಕುವುದು. ಪ್ರತಿಮೆಗಳನ್ನೆಲ್ಲವನ್ನು ಹೀಗೆ ಹಿಟ್ಟಿನಿಂದ ತೊಳೆದು ಅಭಿಷೇಕವನ್ನು ಮಾಡಬೇಕು. ಪಂಚಗವ್ಯ ಮೇಲನವನ್ನು ವಿಧಿವತ್ತಾಗಿ ಮಾಡಿ ತಾನೂ ದೇಹಶುದ್ಧಿಗಾಗಿ ಪ್ರಾಶನ ಮಾಡಬೇಕು. ನಂತರ ವಿಧಿವತ್ತಾಗಿ ನೈವೇದ್ಯಗಳಿಂದ ಭಗವಂತನನ್ನು ಪೂಜಿಸಬೇಕು.

* ***ಶಯನ್ಯೇಕಾದಶೀ ವ್ರತಸಂಕಲ್ಪ :***

ಆಷಾಢ ಶುಕ್ಲ ಏಕಾದಶಿಯಂದು ತಪ್ತ ಮುದ್ರಾಧಾರಣವನ್ನು ಮಾಡಿಸಿಕೊಂಡು ಚಾತುರ್ಮಾಸ್ಯ ವ್ರತದ ಸಂಕಲ್ಪವನ್ನು ಹೀಗೆ ಮಾಡಬೇಕು.

**ವ್ರತಾನಾಂ ವಕ್ಷ್ಯಮಾಣಾನಾಂ ಸಂಕಲ್ಪಂ ವಿಧಿವತ್ ಚರೇತ್ ।**
**ನೈಮಿತ್ತಿಕಾನಾಂ ಕಾಮ್ಯಾನಾಂ ನಿತ್ಯಾನಾಂ ಚ ತಥೈವ ಚ ॥**

ಪ್ರಥಮ ಮಾಸದಲ್ಲಿ ಶಾಕವ್ರತವನ್ನು, ದ್ವಿತೀಯದಲ್ಲಿ ದಧಿವ್ರತವನ್ನು, ತೃತೀಯದಲ್ಲಿ ಕ್ಷೀರವ್ರತವನ್ನು, ಚತುರ್ಥದಲ್ಲಿ ದ್ವಿದಲ ಹಾಗೂ ಬಹುಬೀಜವ್ರತವನ್ನು ಆಚರಿಸಬೇಕು.

**ಪ್ರಥಮೇ ಮಾಸಿ ಕರ್ತವ್ಯಂ ನಿತ್ಯಂ ಶಾಕವ್ರತಂ ಶುಭಂ ।**
**ದ್ವಿತೀಯೇ ಮಾಸಿ ಕರ್ತವ್ಯಂ ದಧೀವ್ರತಮನುತ್ತಮಮ್ ॥**
**ಪಯೋವ್ರತಂ ತೃತೀಯೇ ತು ಚತುರ್ಥೇ ತು ನಿಶಾಮಯ ।**
**ದ್ವಿದಲಂ ಬಹುಬೀಜಂ ಚ ವರ್ಜಯೇತ್ ಶುದ್ಧಿಮಿಚ್ಛತಾ ॥** – *ಸ್ಮೃತಿ*

* ***ಸಂಕಲ್ಪ : ಆಚಮ್ಯ : ಪ್ರಾಣಾನಾಯಮ್ಯ–ಶುಭತಿಥೌ,***

**ಅಮುಕಸಂವತ್ಸರೇ ದಕ್ಷಿಣಾಯನೇ–ಆಷಾಢಮಾಸೇ**
**ಶುಕ್ಲಪಕ್ಷೇ–ಏಕಾದಶ್ಯಾಂ ವಾಸರೇ ಶ್ರೀ ಚಾತುರ್ಮಾಸ್ಯ**
**ದೇವತಾಭಿಮಾನಿ ಶ್ರೀಧರ, ಹೃಷಿಕೇಶ, ಪದ್ಮನಾಭ,**
**ದಾಮೋದರರೂಪಾಣಾಂ ಪ್ರೀತಿಂ ಕಾಮಯಮಾನಃ ಚಾತುರ್ಮಾಸ್ಯ**
**ವ್ರತಾಂಗ ಶಾಕವ್ರತ, ದಧಿವ್ರತ, ಕ್ಷೀರವ್ರತ, ದ್ವಿದಳವ್ರತಾಖ್ಯ**
**ಚತುರ್ವಿಧ ವ್ರತಂ ಸ್ವೀಕರಿಷ್ಯೇ ।**
**ಸುಪ್ತೇ ತ್ವಯಿ ಜಗನ್ನಾಥ ಜಗತ್ ಸುಪ್ತಂ ಭವೇದಿದಂ ।**
**ವಿಬುದ್ಧೇ ಚ ವಿಬುದ್ಧ್ಯೇತ ಪ್ರಸನ್ನೋ ಭವ ಮೇಽಚ್ಯುತ ॥**
**ಚತುರೋ ವಾರ್ಷಿಕಾನ್ ಮಾಸಾನ್ ದೇವ ದೇವ ಜಗತ್ಪತೇ ।**
**ನಿರ್ವಿಘ್ನಂ ಸಿದ್ಧಿಮಾಯಾತು ಪ್ರಸಾದಾತ್ ತವ ಕೇಶವ ॥**

ಗೃಹೀತೇऽಸ್ಮಿನ್ ವ್ರತೇ ದೇವ ಪಂಚತ್ವಂ ಯದಿ ಮೇ ಭವೇತ್ ।
ತದಾ ಭವೇತ್ ಸುಸಂಪೂರ್ಣಂ ಪ್ರಸಾದಾತ್ತೇ ಜನಾರ್ದನ ॥

ಹೀಗೆ ಸಂಕಲ್ಪ ಮಾಡಿ ಪ್ರಾರ್ಥಿಸಬೇಕು.

- ***ಶಾಕ ವ್ರತ ಸಂಕಲ್ಪ (ಆಷಾಢ–ಶುಕ್ಲ–ದ್ವಾದಶೀ) :***

ಶಾಕವ್ರತ ಮಯಾದೇವ ಗೃಹೀತಂ ಪುರತಸ್ತವ ।
ನಿರ್ವಿಘ್ನಂ ಸಿದ್ಧಿಮಾಯಾತು ಪ್ರಸಾದಾತ್ ತೇ ರಮಾಪತೇ ॥

***ಶಾಕ ಸಮರ್ಪಣ ಮಂತ್ರ :***

ಉಪಾಯಮಿದಂ ದೇವ ವ್ರತಸಂಪೂರ್ತಿ ಹೇತವೇ ।
ಶಾಕಂ ತು ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಂ ॥

- ***ದಧಿ ವ್ರತ ಸಂಕಲ್ಪ (ಶ್ರಾವಣ – ಶುಕ್ಲ – ದ್ವಾದಶೀ) :***

ದಧಿ ಭಾದ್ರಪದೇ ಮಾಸಿ ವರ್ಜಯಿಷ್ಯೇ ಸದಾ ಹರೇ ।
ಇಮಂ ಕರಿಷ್ಯೇ ನಿಯಮಂ ನಿರ್ವಿಘ್ನಂ ಕುರು ಕೇಶವ ॥

***ದಧಿವ್ರತಸಮರ್ಪಣ :***

ಉಪಾಯನಮಿದಂ ದೇವ ವ್ರತಸಂಪೂರ್ತಿಹೇತವೇ ।
ದ್ವಿಜಯವರ್ಯಾಯ ದಾಸ್ಯೇऽಹಂ ಸಹಿರಣ್ಯಂ ಘನಂ ದಧಿ ॥

- ***ಕ್ಷೀರ ವ್ರತ ಸಂಕಲ್ಪ (ಭಾದ್ರಪದ–ಶುಕ್ಲ–ದ್ವಾದಶಿ) :***

ಕ್ಷೀರವ್ರತಮಿದಂ ದೇವ ಗೃಹೀತಂ ಪುರತ್ಸವ ।
ನಿರ್ವಿಘ್ನಂ ಸಿದ್ಧಿಮಾಯತು ಪ್ರಸಾದತ್ತೇ ರಮಾಪತೇ ॥

***ಕ್ಷೀರ ವ್ರತ ಸಮರ್ಪಣ ಮಂತ್ರ :***

ಉಪಾಯನಮಿದಂ ದೇವ ವ್ರತಸಂಪೂರ್ತಿಹೇತವೇ ।
ಕ್ಷೀರಂ ತು ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಮ್॥

- ***ದ್ವಿದಳ ವ್ರತ ಸಂಕಲ್ಪ (ಆಶ್ವಯುಜ–ಶುಕ್ಲ–ದ್ವಾದಶಿ) :***

ಕಾರ್ತಿಕೇ ದ್ವಿದಲಂ ಧಾನ್ಯಂ ವರ್ಜಯಿಷ್ಯೇ ಸದಾ ಹರೇ ।
ಇಮಂ ಕರಿಷ್ಯೇ ನಿಯಮಂ ನಿರ್ವಿಘ್ನಂ ಕುರು ಕೇಶವ ॥

***ದ್ವಿದಳ ಸಮರ್ಪಣ ಮಂತ್ರ :***

**ಉಪಾಯನಮಿದಂ ದೇವ ವ್ರತಸಂಪೂರ್ತಿ ಹೇತವೇ ।**

**ದ್ವಿದಲಂ ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಮ್ ॥**

- ***ಚಾತುರ್ಮಾಸ್ಯ ವ್ರತ ಸಮರ್ಪಣ ಮಂತ್ರಃ (ಕಾರ್ತಿಕ-ಶುದ್ಧ-ದ್ವಾದಶಿ) :***

**ಇದಂ ವ್ರತಂ ಮಯಾ ದೇವ ಕೃತಂ ಪ್ರೀತ್ಯೈ ತವ ಪ್ರಭೋ ।**

**ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾತ್ ಜನಾರ್ಧನ ॥**

- ***ಇತರ ವ್ರತಗಳು :***

ಶಾಕ್ರತಾದಿಗಳಲ್ಲದೆ ಇತರ ವ್ರತಗಳಾದ ಪರಾಕವ್ರತ, ಪಷ್ಟಕಾಲವ್ರತ, ಧಾರಣ ಪಾರಣವ್ರತ, ಲಕ್ಷಬತ್ತಿವ್ರತ, ಭೀಷ್ಮಪಂಚಕ, ಲಕ್ಷನಮಸ್ಕಾರ, ಲಕ್ಷಪ್ರದಕ್ಷಿಣ, ತುಲಸೀ ಗೋಪ್ರದಕ್ಷಿಣೆ, ಗೋದಾನ ಇತ್ಯಾದಿ ಬೇರೆ ವ್ರತಗಳೂ ಇವೆ.

**ಪರಾಕಂ ಷಷ್ಟಕಾಲಂ ಚ ತಥಾ ಧಾರಣಪಾರಣಂ ।**

**ಲಕ್ಷವರ್ತಿವ್ರತಂ ಚೈವ ಭೀಷ್ಮಪಂಚಕಮೇವ ಚ ॥**

**ತಥಾ ಲಕ್ಷನಮಸ್ಕಾರವ್ರತಂ ಲಕ್ಷಪ್ರದಕ್ಷಿಣಂ ।**

**ಚಾತುರ್ಮಾಸ್ಯೆ ವ್ರತಾನ್ಯಾಹುಃ ಏತತ್ಕಾಮ್ಯಮಿತೀರಿತಮ್ ॥**

- ***ಧಾರಣ-ಪಾರಣ ವ್ರತ :***

ಚಾತುರ್ಮಾಸ್ಯದಲ್ಲಿ ಅಚರಿಸುವ ಇತರ ವ್ರತಗಳಲ್ಲಿ ಧಾರಣ – ಪಾರಣವ್ರತವೂ ಪ್ರಸಿದ್ಧವಾಗಿದೆ. ಧಾರಣ-ಪಾರಣವೆಂದರೆ ಒಂದು ದಿನ ಉಪವಾಸ ಮಾರನೇ ದಿನ ಭೋಜನವು. ಈ ವ್ರತವನ್ನು ನಾಲ್ಕು ತಿಂಗಳಲ್ಲೂ ಸಾಧ್ಯವಿದ್ದರೆ ಮಾಡಬಹುದು. ಅಶಕ್ಯವಾದಾಗ ಮೊದಲನೆಯ ತಿಂಗಳಿನಲ್ಲಿ ಅಥವಾ ಕಡೆಯ ತಿಂಗಳಲ್ಲಾದರೂ ಒಂದು ತಿಂಗಳು ಧಾರಣ-ಪಾರಣವನ್ನು ಮಾಡಬಹುದು.

**ಏಕಸ್ಮಿನ್ ಧಾರಣಂ ಕಾರ್ಯಂ ಪಾರಣಂ ಚ ತಥಾಽಪರೇ ।**

**ಉಪವಾಸೋ ಧಾರಣಂ ಸ್ಯಾತ್ ಪಾರಣಂ ಭೋಜನಂ ಭವೇತ್ ॥**

**ಆದೌ ಮಾಸಿ ತಥಾಚಾಂತೇ ಚಾತುರ್ಮಾಸ್ಯಮಥಾಪಿ ವಾ ।**

**ಕಾರ್ಯ :** ಉಪವಾಸದಿನದಂದು ಪುಣ್ಯಾಹವಾಚನವನ್ನು ಅವಶ್ಯ ಮಾಡಲೇಬೇಕು. ಅನಂತರ ಸಂಕಲ್ಪ ಮಾಡಿ ವ್ರತವನ್ನು ಪ್ರಾರಂಭಿಸಬೇಕು. ಪಾರಣೆದಿನ ನೂರೆಂಟು ಬಾರಿ ಮೂಲಮಂತ್ರದಿಂದ ನಾರಾಯಣನಿಗೆ ಆರ್ಘ್ಯವನ್ನು ಬಿಟ್ಟು ನಂತರ ಭೋಜನ ಮಾಡಬೇಕು.

**ಪಾರಣೇ ತು ದಿನೇಪ್ರಾಪ್ತೇ ಅರ್ಘ್ಯಂ ಪೂರ್ವಂ ನಿವೇದಯೇತ್ ।**
**ಪಾರಣಂ ತು ತತಃ ಕಾರ್ಯಂ ಮಂತ್ರಮಷ್ಟಾಕ್ಷರಂ ಜಪನ್ ॥**

ಈ ವ್ರತವನ್ನು ಮುಗಿಸಿದ ಮೇಲೆ ಉದ್ಯಾಪನವನ್ನು ಮಾಡಬೇಕು. ಲಕ್ಷ್ಮೀನಾರಾಯಣನ ಪ್ರತಿಮೆಯನ್ನು ತಂದು ಪಂಚಾಮೃತಗಳಿಂದ ಅರ್ಚಿಸಿ, ರಾತ್ರಿಯಲ್ಲಿ ಪುರಾಣ ಶ್ರವಣ ಮಾಡುತ್ತಾ ಜಾಗರಣವನ್ನು ಮಾಡಬೇಕು. ಮಾರನೇ ದಿನ ಬ್ರಾಹ್ಮಣರನ್ನು ಭೋಜನಕ್ಕೆ ಅಮಂತ್ರಿಸಬೇಕು. ಒಂದು ತಿಂಗಳು ಉಪವಾಸವಾದರೆ ಹದಿನೈದು ಜನರಿಗೆ ಭೋಜನವಾಗಬೇಕು. ಎರಡು ತಿಂಗಳಾದರೆ ಮುವ್ವತ್ತು ಬ್ರಾಹ್ಮಣರಿಗೆ, ನಾಲ್ಕು ತಿಂಗಳು ಧಾರಣ ಪಾರಣವ್ರತವನ್ನು ಮಾಡಿದರೆ ಇಪ್ಪತ್ತು ಬ್ರಾಹ್ಮಣರಿಗೆ ಕಡಮೆ ಇಲ್ಲದಂತೆ ಎಷ್ಟು ಜನ ಬ್ರಾಹ್ಮಣರಿಗೂ ಭೋಜನ ಮಾಡಿಸಬಹುದು.

**ಮಾಸೇ ವಿಪ್ರಾಃ ಪಂಚದಶ ದ್ವಿಮಾಸೇ ದ್ವಿಗುಣಂ ಭವೇತ್ ।**

**ಹೋಮ :** "ನಿಷು ಸೀದ ಗಣಪತೇ" ಎಂಬ ಮಂತ್ರಾವೃತ್ತಿಯಿಂದ ಎಳ್ಳು ಅನ್ನದಿಂದ ಹೋಮಿಸಬೇಕು. "ಅರಾಯಿ ಕಾಣೆ ವಿಕಟೇ" ಎಂಬ ಮಂತ್ರದಿಂದ ತುಪ್ಪಮಿಶ್ರಿತ ಚರುವನ್ನು ಹೋಮಿಸಬೇಕು. ಹೋಮ-ಪೂರ್ಣಾಹುತಿ ಬ್ರಾಹ್ಮಣ ಭೋಜನ ಇವುಗಳಿಂದ ಭಗವಂತನನ್ನು ಮೆಚ್ಚಿಸಬೇಕು.

**ಸುಗ್ರೀವನಿಂದ ಅನುಷ್ಠಾನ :** ಸುಗ್ರೀವನು ವಾಲಿಯನ್ನು ಕೊಂದ ಪಾಪ ಪರಿಹಾರಕ್ಕಾಗಿ ಶ್ರೀರಾಮನನ್ನು ಪ್ರಾರ್ಥಿಸಿದಾಗ, ಶ್ರೀರಾಮನು ಬಂಧು ಜನರನ್ನು ಕೊಂದು ಬಂದ ಪಾಪವನ್ನು, ಧಾರಣ-ಪಾರಣ ವ್ರತವನ್ನು ಮಾಡಿ ಪರಿಹರಿಸಿಕೊಳ್ಳಲು ತಿಳಿಸಿದನು.

**ಸುಗ್ರೀವಸ್ತು ಪುರಾ ಬ್ರಹ್ಮನ್ ಹತ್ವಾ ವಾಲಿನಮಾಹವೇ ।**
**ರಾಮಾದಿಷ್ಟಂ ತತೋ ಕೃತ್ವಾ ಧಾರಣಪಾರಣವ್ರತಮ್ ॥**

ಬ್ರಹ್ಮಹತ್ಯಾ ಪರಿಹಾರದಂತೆ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು

ಈ ವ್ರತವು ಸಹಾಯಕ. ಈ ವ್ರತವು ಹಿಂದಿನ ಜನ್ಮದಲ್ಲಿ ನಾರದರು ಈ ವ್ರತವನ್ನು ಮಾಡಿದ್ದರಿಂದ ಜಿತೇಂದ್ರಿಯರಾಗಿರುವರು. ಆದ್ದರಿಂದ ಈ ಧಾರಣ–ಪಾರಣವ್ರತವನ್ನು ಸರ್ವರೂ ಮಾಡಬೇಕು.

**ಇಂದ್ರಿಯಾಣಾಂ ವಶಾರ್ಥಾಯ ಸರ್ವಪಾಪಾಪನುತ್ತಯೇ ।**
**ಕುರ್ಯಾತ್ ಸರ್ವಪ್ರಯತ್ನೇನ ಧಾರಣಂ ಪಾರಣಂ ವ್ರತಮ್ ॥**

ಶ್ರೀ ಕೃಷ್ಣನ ಆದೇಶದಂತೆ ಬಂಧು–ಬಾಂಧವರ ವಧನಿಮಿತ್ತವಾಗಿ ದುಃಖಿಗೊಂಡಿದ್ದ ಧರ್ಮರಾಜನು ಈ ಧಾರಣ–ಪಾರಣವನ್ನು ಮಾಡಿ ಸರ್ವಪಾಪದಿಂದ ಮುಕ್ತನಾಗಿ ವಂಶವೃದ್ಧಿಯನ್ನೂ ಪಡೆದನು.

**ಯುಧಿಷ್ಠಿರೋऽಪಿ ರಾಜರ್ಷಿಃ ಚಕಾರೇದಂ ಮಹಾವ್ರತಮ್ ।**
**ವಿಮುಕ್ತಃ ಸರ್ವಪಾಪೇಭ್ಯಃ ವಂಶವೃದ್ಧಸತೋऽಭವತ್ ॥**

- ***ಲಕ್ಷ ಪ್ರದಕ್ಷಿಣ ವ್ರತ :***

ಚಾತುರ್ಮಾಸ್ಯ ಅವಧಿಯಲ್ಲಿ ಆಷಾಢ –ಶುಕ್ಲ–ಏಕಾದಶಿಯಿಂದಾರಂಭಿಸಿ ಕಾರ್ತಿಕ ಪೂರ್ಣಿಮಾ ಪರ್ಯಂತವಾಗಿ ಒಂದು ಲಕ್ಷ ಪ್ರದಕ್ಷಿಣೆ ಹಾಗೂ ಲಕ್ಷ ನಮಸ್ಕಾರಗಳನ್ನು ಪೂರೈಸಬೇಕು.

***ಲಕ್ಷ ಪ್ರದಕ್ಷಿಣ ವ್ರತ–ಸಂಕಲ್ಪ–***

**ಆಚಮ್ಯ–ಪ್ರಾಣಾನಾಯಮ್ಯ– ಶುಭತಿಥೌ– ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ ಪ್ರೀತಿಂ ಕಾಮಯಮಾನಃ ತತ್ಪ್ರೀತ್ಯರ್ಥಂ, ಸ್ವಕೃತ ಪಾಪ ಕೋಟಿ ನಿವೃತ್ತ್ಯರ್ಥಂ.**

**ಆಷಾಢ ಪೂರ್ಣಿಮಾಮಾರಭ್ಯ ಕಾರ್ತಿಕ ಪೂರ್ಣಿಮಾ ಪರ್ಯಂತಂ**

**ಲಕ್ಷ ಪ್ರದಕ್ಷಿಣಂ ಲಕ್ಷನಮಸ್ಕಾರಮಪಿ ಕರಿಷ್ಯೇ ।**
**ಮಮ ಲಕ್ಷನಮಸ್ಕಾರ ವ್ರತಸ್ಯ ಪುರುಷೋತ್ತಮ ॥**
**ನಿರ್ವಿಘ್ನ ತದ್ವ್ರತಂ ಸಾಂಗಂ ಕುರು ತ್ವಂ ಕೃಪಯಾ ಹರೇ ॥**
**ಪಾಪಪಂಕನಿಮಗ್ನಂ ಮಾ ಪಾಪವೈಶಸ್ಯಭಾಜನಂ ।**
**ವ್ರತೇನಾನೇನ ಸುಪ್ರೀತಃ ಸಮುದ್ಧರ ಜಗತ್ಪತೇ ॥**

- ***ಧಾರಣ–ಪಾರಣ ವ್ರತ (ಕಾಮನಾಸತ್ವೇ)*** :

ಬಾಂಧವಾದಿಹನನ ದೋಷಪರಿಹಾರಾರ್ಥಂ, ಕುಲವೃದ್ಧ್ಯರ್ಥಂ, ಸರ್ವೇಂದ್ರಿಯ ನಿಯಮನಾರ್ತಂ ಚ ಧಾರಣ–ಪಾರಣ ವ್ರತಮಹಂ ಕರಿಷ್ಯೇ.

ಇದಂ ವ್ರತಂ ಮಯಾದೇವ ಪುರತೋ ಸ್ವೀಕೃತೋ ತವ ।
ನಿರ್ವಿಘ್ನಂ ತದ್ವ್ರತಂ ಸಾಂಗಂ ಕುರು ತ್ವಂ ಕೃಪಯಾ ಹರೇ ॥

- ***ಪರಾಕವ್ರತ–ಷಷ್ಠಕಾಲ ವ್ರತ*** :

ಮಮ ಸಂಸಾರನಿವೃತ್ತಿದ್ವಾರಾ ಭಗವತಃ ಶ್ರೀಧರಾದಿ ಚತುರ್ಮೂರ್ತೇ ಪ್ರೀತಿಂ ಕಾಮಯಮಾನಃ ಚಾತುರ್ಮಾಸ್ಯೆ ದ್ವಾದಶದಿನೋಪವಾಸಾತ್ಮಕಂ ಪರಾಕವ್ರತಂ, ಷಷ್ಠ ದಿನೋಪವಾಸಾತ್ಮಕಂ ಷಷ್ಠಕಾಲವ್ರತಂ ಚ ಕರಿಷ್ಯೇ ಎಂದು ಸಂಕಲ್ಪ.

- ***ಲಕ್ಷವರ್ತಿ ವ್ರತಂ*** :

ಲಕ್ಷವರ್ತಿವ್ರತಂ ದೇವ ಸ್ವೀಕೃತಂ ಪುರತೋ ತವ ।
ನಿರ್ವಿಘ್ನಂ ಸಿದ್ಧಿಮಾಯಾತು ಸಾಂಗಂ ಕುರು ದಯಾನಿಧೇ ॥

ಶುಭತಿಥೌ–ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಲಕ್ಷ್ಮೀ ನಾರಾಯಣ ಪ್ರೇರಣಯಾ ಶ್ರೀನಾರಾಯಣ ಪ್ರೀತ್ಯರ್ಥಂ ರಜಃ ಸಂಪರ್ಕಾದಿ ವಿವಿಧ ಪಾತಕಕ್ಷಯ, ಅಗಮ್ಯಾಗಮನಕೋಟಿನಾಶ ವಿವಿಧೈಹಿಕ ಪುತ್ರ ಪೌತ್ರಾದಿ ಸುಖಪ್ರಾಪ್ತಿ ಪೂರ್ವಕ ಶ್ರೀ ಚಾತುರ್ಮಾಸ್ಯ ನಿಯಾಮಕ ಶ್ರೀ ಚತುರ್ಮೂರ್ತಿ ಶ್ರೀಧರ, ಹೃಷಿಕೇಶ–ಪದ್ಮನಾಭ–ದಾಮೋದರ ಪ್ರೀತಿಂ ಕಾಮಯಮಾನಃ ಲಕ್ಷವರ್ತಿವ್ರತಂ ಕರಿಷ್ಯೇ – ಎಂದು ಸಂಕಲ್ಪಿಸಬೇಕು. ಈ ವ್ರತವನ್ನು ವಿಷ್ಣುವೇ ನಿರ್ಮಿಸಿರುವನು. ಸಮಸ್ತಪಾಪಗಳಿಗೂ ಪರಿಹಾರಕವಾದದ್ದು.

ಲಕ್ಷ ಪ್ರದಕ್ಷಿಣಾಂ ಕಾರ್ಯಾ ಸರ್ವ ಪಾಪಾನುತ್ತಯೇ ।
ಸರ್ವೇಷಾಮಪಿ ಪಾಪಾನಾಂ ನಾಶಕಂ ಪರಮಂ ಶುಭಂ ॥

ಆಷಾಢ್ಯಾಂ ತು ಸಮಾರಭ್ಯ ಕಾರ್ತಿಕ್ಯಾಂ ತು ಸಮಾಪಯೇತ್ ।

ಚಾತುರ್ಮಾಸ್ಯ ಕಾಲದಲ್ಲಿ ಪಂಚಗವ್ಯವನ್ನು ಕುಡಿದು ತಾನು ಮಾಡಿರುವ ಸಕಲ ಪಾಪಗಳನ್ನು ಉಚ್ಚರಿಸಿ ಪಶ್ಚಾತಾಪ ಪುರಸ್ಸರನಾಗಿ ಈ ವ್ರತವನ್ನು

ಮಾಡಬೇಕು. ಲಕ್ಷ ನಮಸ್ಕಾರವಾದ ಮೇಲೆ ಉದ್ಯಾಪನವನ್ನು ಮಾಡಬೇಕು. ವಿಷ್ಣು ಗಾಯತ್ರಿಯಿಂದ ನೂರೆಂಟು ಬಾರಿ ತುಪ್ಪದಿಂದ ಆಹುತಿಯನ್ನು ನೀಡಬೇಕು.

**"ನತಮಂಹೋ"** ಎಂಬ ಮಂತ್ರದಿಂದ ಪಾಯಸಾಹುತಿಯನ್ನು ಸಾವಿರ ಬಾರಿ ಹಾಕುವುದೂ ಪದ್ಧತಿಯಿದೆ. ಈ ವ್ರತವನ್ನು ಮಾಡಿದವನು ಹಿಂದಿನ ಜನ್ಮಗಳಲ್ಲಿನ ಪಾಪಗಳು, ಈ ಜನ್ಮದಲ್ಲಿ ಮಾಡಿದ ಪಾಪಗಳು, ಮುಂದಿನ ಜನ್ಮ ಬಂದಾಗ ಆಚರಿಸುವ ಪಾಪಗಳು ಪೂರ್ಣವಾಗಿ ನಾಶವಾಗುವುವು.

**ಪೂರ್ವಜನ್ಮಾರ್ಜಿತೈಃ ಪಾಪೈರಿಹ ಜನ್ಮಾರ್ಜಿತೈರಪಿ ।**
**ಆಗಾಮಿಜನ್ಮಭಿಶ್ಚೈವ ಮುಚ್ಯತೇ ನಾತ್ರ ಸಂಶಯಃ ॥** –*ಭವಿಷ್ಯತ್ ಪುರಾಣ*

- ***ಲಕ್ಷ ನಮಸ್ಕಾರ :***

ಲಕ್ಷ ಪ್ರದಕ್ಷಿಣೆಯಂತೆ ಲಕ್ಷ ನಮಸ್ಕಾರವು ವಿಹಿತವಾಗಿದೆ. ಪ್ರಾತಃ ಕಾಲದಲ್ಲಿ ಸ್ನಾನಾದಿಗಳನ್ನು ಮುಗಿಸಿ ಏನನ್ನೂ ತಿನ್ನದೆ ಮಧ್ಯಾಹ್ನದವರೆಗೂ ದೇವರಿಗೆ ನಮಸ್ಕಾರವನ್ನು ಹಾಕುತ್ತಿರಬೇಕು. ನಮಸ್ಕಾರ ಕಾಲದಲ್ಲಿ ಏನನ್ನೂ ಮಾತನಾಡಬಾರದು, ತಿನ್ನುತ್ತಾ, ಬೈಯ್ಯುತ್ತಾ ನಮಸ್ಕರಿಸಬಾರದು. ಸುಳ್ಳನ್ನು ಹೇಳಬಾರದು. ಬೇರೆ ಯಾರನ್ನೂ ಧ್ಯಾನಿಸಬಾರದು. ಅತಿಥಿ ಪೂಜೆ, ಬ್ರಾಹ್ಮಣ, ಗೋವು ಇವುಗಳನ್ನು ಗೌರವಿಸಬೇಕು. ಮಧ್ಯಾಹ್ನದಲ್ಲೂ ಲಘು ಭೋಜನವನ್ನು ಮಾಡಬೇಕು. ಯದ್ವಾ ತದ್ವಾ ಮಾಡಬಾರದು.

**ಯದ್ವಾ ತದ್ವಾ ನ ಭುಂಜೀತ ಕೃತ್ವಾ ತು ಲಘುಭೋಜನಂ ।**
**ಪ್ರಾತಃ ಸ್ನಾತ್ವಾ ವ್ರತಂ ಕುರ್ಯಾತ್ ಆಮಧ್ಯಾಹ್ನಂ ಸದಾ ಶುಚಿಃ ॥**

ಲಕ್ಷ ನಮಸ್ಕಾರವು ಮುಗಿದ ಮೇಲೆ ಉದ್ಯಾಪನವನ್ನು ಮಾಡಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. **"ಅತೋದೇವ"** ಎಂಬ ವಿಷ್ಣುಸೂಕ್ತದಿಂದ ವಿಷ್ಣುವನ್ನು ಕಲಶದಲ್ಲಿ ಆವಾಹಿಸಿ, ಪುರುಷ ಸೂಕ್ತದಿಂದ ಏಳು ಬಾರಿ ಹೋಮಿಸಬೇಕು. ಸಮಿತ್ತು ಚರು, ಆಜ್ಯ ಇವುಗಳಿಂದ ಹೋಮವಾಗಬೇಕು.

**ಪೌರುಷೇಣಾಪಿ ಸೂಕ್ತೇನ ಸಪ್ತಾವೃತ್ಯಾ ಚ ವೈ ಹುನೇತ್ ।**

ನಂತರ ವಿಷ್ಣುವಿಗೆ ಗೋಧಿ, ಅಕ್ಕಿ, ಫಲ, ಹಿರಣ್ಯ ಸಹಿತವಾಗಿ ಅರ್ಘ್ಯವನ್ನು ಬಿಡಬೇಕು.

**ದೇವ ದೇವ ಜಗನ್ನಾಥ ಸರ್ವವ್ರತ ಫಲ ಪ್ರದ ।**
**ವ್ರತೇನಾನೇನ ಸುಪ್ರೀತೋ ಗೃಹಾಣಾರ್ಘ್ಯಂ ಮಯಾರ್ಪಿತಂ ॥**

ನೂರು, ಇಪ್ಪತ್ತೈದು, ಐದು ಬ್ರಾಹ್ಮಣರಿಗಾದರೂ ಸರಿ ಭೋಜನ ಮಾಡಿಸಬೇಕು. ಈ ವ್ರತವನ್ನು ಮಾಡಲು ಎಲ್ಲಾ ಜಾತಿಯವರು, ವಿಧವೆಯರು, ಸುಮಂಗಲಿಯರು, ಸನ್ಯಾಸಿಗಳು, ಗೃಹಸ್ಥಾದಿಗಳೂ ಆಚರಿಸಬಹುದು.

**ಸರ್ವೇಷಾಮಾಶ್ರಮಾಣಾಂ ಚ ವಿಹಿತಂ ಶೃತಿಚೋದಿತಂ ।**
**ನಾರೀಣಾಂ ಸಧವಾನಾಂ ಚ ವಿಧವಾನಾಂ ವಿಶೇಷತಃ ।**
**ಸರ್ವೇಷಾಮೇವ ಪಾಪಾನಾಂ ಪ್ರಾಯಶ್ಚಿತ್ತ ವ್ರತಂ ಭವೇತ್ ॥**

- ***ಲಕ್ಷ ಬತ್ತಿ ವ್ರತ :***

ಲಕ್ಷ ಬತ್ತಿ ವ್ರತಗಳನ್ನು ಕಾರ್ತಿಕ, ವೈಶಾಖ, ಮಾಘ ಈ ಮಾಸತ್ರಯಗಳಲ್ಲಿ ವಿಧಿಸಿರುವರು. ಈ ವ್ರತಕಾಲದಲ್ಲಿ ಅಥವಾ ಚಾತುರ್ಮಾಸ್ಯ ಕಾಲದಲ್ಲಿ ಒಂದು ಲಕ್ಷ ಬತ್ತಿಯನ್ನು ತಾನೇ ಮಾಡಿ ದೀಪವನ್ನು ಬೆಳಗುವುದು. ಈ ವ್ರತವನ್ನು ಮೇಲೆ ಹೇಳಿದ ಯಾವ ತಿಂಗಳಿನಲ್ಲಿ ಪೂರ್ತಿಯಾಗುವುದೋ ಆ ತಿಂಗಳಿನ ಹಿಂದಿನ ಮೂರು ತಿಂಗಳಿನಲ್ಲಿಯೇ ಪ್ರಾರಂಭಿಸಬೇಕು.

**ಏತಸ್ಮಿನ್ ಮಾಸತ್ರಿತಯೇ ಯಸ್ಮಿನ್ ಮಾಸೇ ಸಮಾಪ್ಯತೇ ।**
**ತಸ್ಮಾತ್ ಮಾಸತ್ರಯಾತ್ ಪೂರ್ವಸಮಾರಬ್ಧವ್ಯಮಿದಂ ವ್ರತಮ್ ॥**

ಪ್ರತಿದಿವಸವು ಸಾವಿರ ಬತ್ತಿಗಳಿಂದ ದೀಪಗಳನ್ನು ದೇವರ ಮುಂದೆ ಹಚ್ಚಬೇಕು. ತುಪ್ಪ ಅಥವಾ ಎಳ್ಳೆಣ್ಣೆಯಿಂದಾಗಲಿ ದೀಪವನ್ನು ಬೆಳಗಬೇಕು. ಯಾವ ತಿಂಗಳಲ್ಲಿ ಲಕ್ಷ ಬತ್ತಿಯು ಮುಗಿಯುವುದೋ ಆ ತಿಂಗಳಿನ ಪೂರ್ಣಿಮೆಯಲ್ಲಿ ಉದ್ಯಾಪನೆಯನ್ನು ಮಾಡಬೇಕು.

**ಸಹಸ್ರವರ್ತಿಭಿಃ ಕುರ್ಯಾದಾರಾರ್ತಿಂ ವಿಷ್ಣವೇಽನ್ವಹಂ ।**
**ಗೋಘೃತೇನಾಥ ತೈಲೇನ ಸಮ್ಯಗಕ್ತೈಃ ಮನೋಹರೈಃ ॥**
**ಯಸ್ಮಿನ್ ಮಾಸೇ ಸಮಾಪ್ತಃ ಸ್ಯಾತ್ ಪೌರ್ಣಮಾಸ್ಯಾಂ ತು ಕಾರಯೇತ್**
**ಉದ್ಯಾಪನಂ ವಿಧಾನೇನ ವ್ರತಸಂಪೂರ್ತಿಕಾರಣಮ್ ॥**

ಲಕ್ಷ ಬತ್ತಿಯನ್ನು ಬೆಳಗಿಸಿದ್ದರೆ ಅದರ ದಶಾಂಶ ತರ್ಪಣವನ್ನು ಬಿಡಬೇಕು. (10,000) ತರ್ಪಣದ ದಶಾಂಶವನ್ನು ಹೋಮಿಸಬೇಕು(1000+8) ಹವಿಸ್ಸಿಗಾಗಿ ಪಾಯಸ ಹಾಗೂ ತುಪ್ಪವನ್ನು ಬಳಸಬೇಕು. ಮುತ್ತುಗದ ಸಮಿತ್ತು ಶ್ರೇಷ್ಠವಾಗಿದೆ. **"ತದ್ವಿಷ್ಣೋ ಪರಮಂ ಪದಂ"** ಎಂಬ ಮಂತ್ರ ರತ್ನದಿಂದ ಹೋಮವು. ನೂರು ಜನ ಬ್ರಾಹ್ಮಣರಿಗೆ ಊಟವಾಗಬೇಕು. ಹತ್ತು ರೂ.ಗಳಿಗೆ ಕಡಮೆಯಿಲ್ಲದಂತೆ ಬ್ರಾಹ್ಮಣರಿಗೆ ದಕ್ಷಿಣೆಯನ್ನು ನೀಡಬೇಕು.

- ***ಪರಾಕ ವ್ರತ :***

ಸರ್ವಪಾಪ ಪ್ರಾಯಾಶ್ಚಿತ ರೂಪವಾದ ಪರಾಕ ವ್ರತವನ್ನು ಹನ್ನೆರಡು ದಿವಸಗಳ ಕಾಲ ಉಪವಾಸವಿದ್ದು ಮಾಡುವುದು.

**ಯತಾತ್ಮನೋಽಪ್ರಮತ್ತಸ್ಯ ದ್ವಾದಶಾಹಮ ಭೋಜನಂ ।**
**ಪರಾಕೋ ನಾಮ ಕೃಚ್ಛ್ರೋಯಂ ಸರ್ವಪಾಪಾಪನೋದನಃ ॥**

ಜಪ ಹೋಮರತನಾದ ವ್ಯಕ್ತಿಯು ಹನ್ನೆರಡು ದಿವಸ ಉಪವಾಸವನ್ನು ಮಾಡಿದರೆ ಸರ್ವಪಾಪಗಳು ನಾಶವಾಗುವುವು. ಇದೇ ಪರಾಕವೆಂದು ಬೃಹಸ್ಪತಿಗಳು ಹೇಳಿದ್ದಾರೆ.

**ಜಪಹೋಮರತಃ ಕುರ್ಯಾದ್ ದ್ವಾದಶಾಹಮಭೋಜನಂ ।**
**ಪರಾಕ ಇತಿ ವಿಖ್ಯಾತಃ ಸರ್ವಪಾಪಪ್ರಣಾಶನಃ ॥**

ಪರಾಕ ವ್ರತವನ್ನು ಮೂರು ವರ್ಷಗಳಲ್ಲಿ ಆಚರಿಸಬೇಕು. ಮೂರು ವರ್ಷಗಳಲ್ಲಿ 36 ದಿವಸಗಳು ಉಪವಾಸ ಮಾಡಿದಂತಾಗಿ ಬ್ರಹತ್ಯಾದಿ ಸಮಸ್ತ ಪಾಪಗಳು ಪರಿಹೃತವಾಗುವುವು.

- ***ಲಕ್ಷ ತುಲಸೀ ಪ್ರದಕ್ಷಿಣ :***

ಚಾತುರ್ಮಾಸ್ಯದಲ್ಲಿ ತುಲಸೀ ದೇವಿಗೆ ಲಕ್ಷ ಪ್ರದಕ್ಷಿಣೆಯನ್ನು ಹಾಕುವ ವ್ರತವಿದೆ. ವೈಶಾಖ, ಕಾರ್ತಿಕ ಮಾಘ, ಚಾತುರ್ಮಾಸ್ಯ ಇವುಗಳಲ್ಲಿ ಲಕ್ಷ ಪ್ರದಕ್ಷಿಣೆಯನ್ನು ಮಾಡಿದರೆ ಬೇಡಿದ ಇಷ್ಟಾರ್ಥಗಳು ಸಿದ್ಧಿಸುವುವು.

**ವೈಶಾಖೇ ಕಾರ್ತಿಕೇಮಾಘೇ ಚಾತುರ್ಮಾಸ್ಯೇ ವಿಶೇಷತಃ ।**
**ಲಕ್ಷ ಸಂಖ್ಯಾಶ್ಚ ಕರ್ತವ್ಯಾಃ ತುಲಸ್ಯಾಶ್ಚ ಪ್ರದಕ್ಷಿಣಾಃ ॥**

ತುಲಸೀ ಲಕ್ಷ ಪ್ರದಕ್ಷಿಣೆಯನ್ನು ಪ್ರಾತಃಕಾಲ ಹಾಗೂ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಮಾಡಬಹುದು. ಲಕ್ಷ ಪ್ರದಕ್ಷಿಣೆಯಾದ ಮೇಲೆ ಉದ್ಯಾಪನೆಯನ್ನು ಮಾಡಿ, ನೂರಾರು ಬ್ರಾಹ್ಮಣರಿಗೆ ಕಡೆ ಪಕ್ಷ 28 ಬ್ರಾಹ್ಮಣರನ್ನಾದರೂ ಭೋಜನಾದಿಗಳಿಂದ ತೃಪ್ತಿಪಡಿಸಬೇಕು.

- ***ಷಷ್ಠಿಕಾಲ ವ್ರತ :***

ಚಾತುರ್ಮಾಸ್ಯದಲ್ಲಿ ವ್ರತಗಳಲ್ಲಿ ಆರು ದಿವಸಕ್ಕೆ ಒಂದು ಬಾರಿ ಊಟ ಮಾಡುವ ವ್ರತವೇ ಷಷ್ಠಿಕಾಲ ವ್ರತವು ಇದನ್ನು ಚಾತುರ್ಮಾಸ್ಯ ಪೂರ್ತಿ ಐದು ಉಪವಾಸ ಆರನೇ ಹೊತ್ತು ಪಾರಣೆ ಹೀಗೆ ನಾಲ್ಕು ತಿಂಗಳೂ ಉಪವಾಸ ಮಾಡಬಹುದು. ಇದು ಸಾಧ್ಯವಿಲ್ಲದಿದ್ದರೆ ಕಾರ್ತಿಕ ಮಾಸದಲ್ಲಿ ಮಾತ್ರ ಆಚರಿಸಬಹುದು.

**ಅಹಸ್ತ್ರಯಂ ದ್ವಿರಾತ್ರೇ ಚ ಕುರ್ಯಾದ್ವಾ ಚಾಪ್ಯುಪೋಷಣಂ ।**

ಕಾರ್ತಿಕ ಮಾಸದಲ್ಲಿ ಪಾಡ್ಯದಿಂದ ಪ್ರಾರಂಭಿಸಿದರೆ ಪಾಡ್ಯದಂದು ಹಗಲು-ರಾತ್ರಿ ಉಪವಾಸಗಳು ದ್ವಿತೀಯಾ ದಿನದಂದು ಹಗಲು-ರಾತ್ರಿ ತೃತೀಯಾ ದಿನದಲ್ಲಿ ಹಗಲು ಉಪವಾಸವನ್ನು ಮಾಡಿ ರಾತ್ರಿ ನಕ್ಷತ್ರ ಮಂಡಲದರ್ಶನವಾದ ಮೇಲೆ ಪಾರಣೆ ಮಾಡುವುದು. ಹೀಗೆ ಆರು ಹೊತ್ತುಗಳಲ್ಲಿ ಒಂದು ಹೊತ್ತು ಮಾತ್ರ ಪಾರಣೆ.

**ತ್ರಿರಾತ್ರ್ಯಾಂ ಪಾರಣಂ ಕುರ್ಯಾದ್ ದೃಷ್ಟ್ವಾ ನಕ್ಷತ್ರಮಂಡಲಂ ।**

- ***ಶಾಕ ವ್ರತ-ಶಾಖವೆಂದರೇನು?***

ಶಾಕ ವ್ರತದಲ್ಲಿ ಸಕಲ ತರಕಾರಿಗಳನ್ನು ತ್ಯಜಿಸಬೇಕು.

***ದಶ ವಿಧ ಶಾಕಗಳು :*** ಶಾಕವೆಂದರೆ ಕೇವಲ ತರಕಾರಿ ಮಾತ್ರವಲ್ಲ. ಗಿಡಕ್ಕೆ ಸಂಬಂಧಿಸಿರುವ ಮೂಲ, ಪತ್ರ, ಕರೀರ – ಮೊಳಕೆ ಗಿಡದ ಅಗ್ರಭಾಗ, ಹಣ್ಣುಗಳು, ಕಾಂಡ-ಬೇರು. ಹಣ್ಣು, ದಂಟು, ತೊಗಟೆ, ಹೂವು, ಸಿಪ್ಪೆ ಮೊಗ್ಗು, ಚಿಗುರು, ಅಳಿಬೆ, ಮಾಷ, ಎಲೆ-ಸೊಪ್ಪುಗಳು, ಕೀರೆಸೊಪ್ಪು, ಮೆಂತ್ಯ ಸೊಪ್ಪು, ದೊಡ್ಡಪತ್ರೆ, ದಂಟಿನ ಸೊಪ್ಪು, ಪಾಲಾಕಸೊಪ್ಪು, ಹೊನೆಗೊನೆ, ವಂದೆಲಗ (ಬ್ರಾಹ್ಮೀ), ಕರಿಬೇವು, ಕೊತ್ತಂಬರೀ ಇವೆ ಮೊದಲಾದ ಸೊಪ್ಪುಗಳು ಎಲೆಗಳಲ್ಲಿ ಸೇರಿದ್ದು ಇವುಗಳಲ್ಲಿ ಶಾಕ ವ್ರತದಲ್ಲಿ ತಿನ್ನಬಾರದು.

**ಮೂಲ–ಪತ್ರ–ಕರೀರಾಗ್ರ–ಫಲ–ಕಾಂಡಾಧಿರೂಢಕಾಃ ।**
**ತ್ವಕ್– ಪುಷ್ಪಂ–ಕವಚಂ ಚೇತಿ ಶಾಕಂ ದಶವಿಧಂ ಸ್ಮೃತಮ್ ॥**

***ಅಪವಾದ :*** ಈ ಸೊಪ್ಪುಗಳಲ್ಲಿ ವೈದ್ಯ ಸೊಪ್ಪುಗಳಾದ ಬ್ರಾಹ್ಮೀಯನ್ನು ಕೆಲವರು ಸ್ವೀಕರಿಸುವರು. ದಕ್ಷಿಣ ಕನ್ನಡ ಜಿಲ್ಲೆಯವರಲ್ಲಿ "ತಿಮಿರೆ" ಎನ್ನುವ ಇದನ್ನು ಉಪಯೋಗಿಸುವರು, ಇದು ಅವರ ಪದ್ಧತಿ. ಅತಸೀ–ಅಗಸೇ ಸೊಪ್ಪು ಇದನ್ನು ಶಾಕ ವ್ರತದಲ್ಲಿ ಸ್ವೀಕರಿಸಲು ಪ್ರಮಾಣವಿರುವುದರಿಂದ ಸ್ವೀಕರಿಸಬಹುದು. ತುಲಸೀ ಪತ್ರವು ಸರ್ವದಾ ಸ್ವೀಕರಿಸಬಹುದು. ಇದರ ಜೊತೆಗೆ ಒಣಗಿದ ನೆಲ್ಲಿಕಾಯಿ, ಮಾವಿನಹಣ್ಣು, ಮಾವಿನ ಬಾಳಕ ಇವುಗಳಿಗೆ ಶಾಕ ವ್ರತದಲ್ಲಿ ದೋಷವಿರುವುದಿಲ್ಲ.

**ಅತಸೀ ತುಲಸೀ ಚೈವ ಧಾತ್ರೀ ಚೂತಫಲಂ ತಥಾ ।**
**ಗ್ರಾಹ್ಯಾಣ್ಯೇತಾನಿ ಚತ್ವಾರಿ ವಿಷ್ಣುನೋಕ್ತಂ ಯತಃ ಪುರಾ ॥** –ಸ್ಮೃತಿಕೌಸ್ತುಭ

***ಪುಷ್ಪಂ :*** ಕೇಸರೀ, ಕುಂಬಳಪುಷ್ಪ, ಇತ್ಯಾದಿ ಉಪಯೋಗಿಸಬಾರದು. ದೇವ ಪೂಜೆಯ ಪುಷ್ಪಗಳನ್ನು ಭಗವಂತನಿಗೆ ಏರಿಸಬಹುದು.

***ಫಲಂ :*** ಬಾಳೆಹಣ್ಣು, ಸೇಬು, ಕಿತ್ತಲೇ, ಹಲಸಿನಹಣ್ಣು ಬೀಜಪೂರ, ಇತ್ಯಾದಿ ಸಮಸ್ತ ಹಣ್ಣುಗಳು ನಿಷಿದ್ಧವಾಗಿವೆ. ಮಾವಿನ ಹಣ್ಣು ಮಾತ್ರ ಸ್ವೀಕರಿಸಬಹುದು. ನಾಲ = ಕಾಂಡ, ದಪ್ಪ ದಂಟಿನ ಕಾಂಡಗಳು, ಮೂಲ – ಗೆಡ್ಡೆ, ಆಲೂಗೆಡ್ಡೆ, ಸುವರ್ಣ ಗೆಡ್ಡೆ, ಗೆಣಸು, ಹಸೀಶುಂಠಿ, ಸಾಮೇಗೆಡ್ಡೆ ಇತ್ಯಾದಿಗಳು

ಕುಡ್ಮಲ = ಮೊಗ್ಗು, ಲವಂಗ, ಏಲಕ್ಕಿ, ಜಾಕಾಯಿ, ಜಾಪತ್ರೆ, ಇತ್ಯಾದಿ ಸುವಾಸನೆಯಿಂದ ಕೂಡಿದ್ದು ಪಲ್ಲವ = ಚಿಗುರು, ಕೊತ್ತಂಬರಿ, ಕರಿಬೇವು ಇತ್ಯಾದಿಗಳು ಹಣ್ಣು–ನಿಂಬೆಹಣ್ಣು, ಹೇರಳೇ, ಇವೇ ಮೊದಲಾದವು.

- ***ಶಾಕ ವ್ರತದಲ್ಲಿ ಸ್ವೀಕಾರಾರ್ಹಗಳು :***

ಬೇಳೆಗಳು, ತುಲಸೀ, ಅತಸೀ, ಬ್ರಾಹ್ಮೀ, ಮೆಣಸು, ಜೀರಿಗೆ, ಒಣಶುಂಠಿ, ಮಾವಿನಹಣ್ಣು, ಹಾಲು, ಮೊಸರು, ತುಪ್ಪ ಜೇನು, ಇಂಗು, ಒಣನೆಲ್ಲಿ, ತಾಂಬೂಲ, ಸಾಸಿವೆ (ರಾಯರ ಮಠದಲ್ಲಿ ಸಂಪ್ರದಾಯ) ಕಡಲೆಬೇಳೆ ಟೀಕಾ ಪಂಚಮಿಯವರಿಗೆ ಕೆಲವರು ಉಪಯೋಗಿಸುವುದಿಲ್ಲ. ನಂತರ ಉಪಯೋಗಿಸುವರು. ಇದು ಸಂಪ್ರದಾಯ ಮಾತ್ರ.

***ತೆಂಗಿನಕಾಯಿ–ಖರ್ಜೂರ :*** ಕೆಲವರು ತೆಂಗಿನಕಾಯಿ, ಖರ್ಜೂರಗಳನ್ನು ಸ್ವೀಕರಿಸುವರು. ನಾರಿಕೇಳವು ಶಾಕವೆಂದು ಪ್ರಸಿದ್ಧಿ ಇರುವುದಿಲ್ಲ. ಶಾಕವೆಂದರೆ ***"ಶಕ್ಯಂತೇ ಅನ್ನಾದಿಕಂ ಭೋಕ್ತುಂ"*** ಎಂಬಂತ ಅನ್ನ ಸಾಧನವಾದದ್ದು ಶಾಕ ಪದದ ಅರ್ಥ. ತೆಂಗಿನಕಾಯಿಯು ಅನ್ನ ಸಾಧನವಾಗುವುದಿಲ್ಲ– ವಾದ್ದರಿಂದ ಶಾಕದಲ್ಲಿ ಸೇರುವುದಿಲ್ಲ.

**ನಾರಿಕೇಲ ಖರ್ಜೂರಾದಿಷು ಯತ್ರ ಅನ್ನ ಸಾಧನಾಭಾವಃ ಶಾಕತ್ವೇನ ಪ್ರಸಿದ್ಧ್ಯಭಾವಃ ವಾ ।**
**ತೇಷಾಂ ಶಾಕವ್ರತೇ ಭಕ್ಷಣ ನಿಷೇಧೋ ನಾಸ್ತೀತಿ ಜ್ಞೇಯಮ್ ॥**
*– ಸ್ಮೃತ್ಯರ್ಥಸಾಗರ*

ಶಾಕ ವ್ರತದಲ್ಲಿ ಹಸಿ ಕೊಬ್ಬರಿ, ಒಣಗಿದ ಕೊಬ್ಬರಿ ಸ್ವೀಕರಿಸುವುದಿಲ್ಲ.

***ಒಣಶುಂಠಿ ಮೆಣಸು :*** ಹಸೀಶುಂಠಿಯು ಲವಣ ಶಾಕವೆಂದು ಪ್ರಸಿದ್ಧಿ ಇರುವುದರಿಂದ ಅನ್ನ ಸಾಧನವೆನಿಸಿದೆ. ಆದ್ದರಿಂದ ಶಾಕವೆಂದು ಪರಿಗಣಿತವಾಗಿದ್ದು ನಿಷೇಧವಿದೆ. ಒಣಗಿದ ಶುಂಠಿ ಮೆಣಸುಗಳಿಗೂ ಶಾಕತ್ವೇನ ಪ್ರಸಿದ್ಧಿಯಿರುವುದಿಲ್ಲವಾದ್ದರಿಂದ ಶಾಕ ವ್ರತದಲ್ಲಿ ಸ್ವೀಕರಿಸಬಹುದು.

- ***ಸರ್ವಥಾ ನಿಷಿದ್ಧವಾದದ್ದು :***

**ವೃಂತಾಕಂ ಚ ಕಲಿಂಗಂ ಚ ಬಿಲ್ವೋಂದುಂಬರ–ಭಿಃಸ್ಸಟಾಃ ।**
**ಉದರೇ ಯಸ್ಯ ಜೀರ್ಯಂತೇ ತಸ್ಯ ದೂರತರೋ ಹರಿಃ ॥**

ಬದನೆಕಾಯಿ, ಕಲ್ಲಿಂಗಡಿ, ಬಿಲ್ವ ಫಲ, ಅತ್ತಿಹಣ್ಣು, ಸೀದು ಹೋದ ಅನ್ನ ಇವುಗಳನ್ನು ತಿಂದು ಜೀರ್ಣಿಸಿಕೊಂಡರೆ ಭಗವಂತನು ಅವನನ್ನು ಬಿಟ್ಟು ದೂರ ಹೋಗುವನು. ನಾರಿಕೇಲ ಫಲ, ಬಾಳೇ, ಲವಲೀ, ಆಮ್ರ, ಹಸೀ ಆಮಲಕ (ನೆಲ್ಲಿ), ಹಲಸು, ಹರೀತಕೀ (ಅಳಲೆಕಾಯಿ) ಇವುಗಳು ಚಾತುರ್ಮಾಸ್ಯ ಹೊರತು ಇತರ ವ್ರತಗಳಲ್ಲಿ ಪ್ರಶಸ್ತವಾಗಿದ್ದು ಚಾತುರ್ಮಾಸ್ಯದಲ್ಲಿ ಸ್ವೀಕರಿಸಬಾರದು. ನಿತ್ಯ ವ್ರತವಾದ ಶಾಕಾದಿ ವ್ರತಗಳಲ್ಲಿ ಶಾಕಗಳನ್ನು ಆ ತರಕಾರಿಯು ಭಗವಂತನಿಗೆ ಶಲ್ಯಪ್ರಾಯವಾಗುವುದು. ಶಲ್ಯದಿಂದ ಹೊಡೆದ ಪಾಪಕ್ಕೆ ಗುರಿಯಾಗುವುದು ಎಂದರ್ಥ.

**ತೇನಾರ್ಪಿತಃ ಹರೇಃ ಶಲ್ಯಂ ಹೃದಿ ನಾತ್ರ ವಿಚಾರಣಾ ।**

- ***ಚಾತುರ್ಮಾಸ್ಯದಲ್ಲಿ ತಿನ್ನಬಾರದ್ದು :***

ಜಂಬೀರಂ = ಹೇರಳೇ ಹಣ್ಣು, ರಾಜಮಾಷ = ಅವರೇ, ತುವರಿ = ತೊಗರಿ, ರಾಜಮುದ್ಗ = ಅಲಸಂದೆ, ಪ್ರಾಣಿಯ ಅಂಗದಿಂದಾದ ಸುಣ್ಣ, ಚರ್ಮದ ಚೀಲದಲ್ಲಿರುವ ನೀರು, ಬೀಜಪೂರಕ ಚೇಪೆಕಾಯಿ, ಹೊತ್ತು ಹೋಗಿರುವ ಅನ್ನ, ಮಸೂರ = ಕಾಡುಕಡಲೆ, ಮಾಂಸ = ವೈಶ್ವದೇವವಾಗದ ಅನ್ನ, ಭಗವಂತನಿಗೆ ನಿವೇದಿತವಾಗದೇ ಇದ್ದ ಅನ್ನಾದಿಗಳು, ಇವುಗಳನ್ನು ಚಾತುರ್ಮಾಸ್ಯದಲ್ಲಿ ತಿನ್ನಲೇಬಾರದು. ಇವುಗಳಲ್ಲಿ ಜಂಬೀರವನ್ನು ಶಾಖ ವ್ರತ, ದ್ವಿದಳ ವ್ರತಗಳಲ್ಲೂ ತೊಗರಿ, ರಾಜಮಾಷ, ರಾಜಮುದ್ಗ ಇವುಗಳನ್ನು ದ್ವಿದಳ ವ್ರತದಲ್ಲಿಯೂ ತಿನ್ನಬಾರದು. ಕೆಂಪು ಮೂಲಂಗಿ, ಕುಂಬಳಕಾಯಿ, ಸೋರೆಕಾಯಿ, ಕಬ್ಬು ಇವು ನಿಷಿದ್ಧವಾಗಿವೆ. ಬೀಜಪೂರ, ಇವುಗಳನ್ನು ಶಾಕ ಹಾಗೂ ದ್ವಿದಳಗಳಲ್ಲಿ ತಿನ್ನಬಾರದು. ಅವರೆಯನ್ನು ಮಾತ್ರ ನಾಲ್ಕು ತಿಂಗಳಲ್ಲಿಯೂ ಭಕ್ಷಿಸಬಾರದು ಮಸೂರ, ವೃಂತಾಕ = ಬದನೆ, ಕಲಿಂಗ = ಕಲ್ಲಂಗಡಿಹಣ್ಣು, ಇವುಗಳನ್ನು ಸರ್ವಥಾ ತಿನ್ನಬಾರದು.

**ನಿಷ್ಪವಾನ್ ರಾಜಮಾಷಾಂಶ್ಚ ಮಸೂರಂ ಸಂಧಿತಾನಿ ಚ ।**
**ವೃಂತಾಕಂ ಚ ಕಲಿಂಗಂ ಚ ಸುಪ್ತೇ ದೇವೇ ವಿವರ್ಜಯೇತ್ ॥**

- ***ಹವಿಷ್ಯಗಳಿಗೆ ದೋಷವಿಲ್ಲ :***

ಚಾತುರ್ಮಾಸ್ಯದಲ್ಲಿ ಹವಿಷ್ಯ ವಸ್ತುಗಳನ್ನು ಯೋಗ್ಯವಾದ ಕಾಲದಲ್ಲಿ ಸ್ವೀಕರಿಸಬಹುದು. ಅವುಗಳಲ್ಲಿ ಮುಗ್ಧ, ಯವ (ಜವೇಗೋಧಿ) ಎಳ್ಳು, ಕಂಗು = ನವಣೆ, ನೀವಾರ = ಸಾಮೆಧಾನ್ಯ, ತೃಣಬೀಜ, ವಾಸ್ತುಕ = ಚಕ್ಕೋತ ಸೊಪ್ಪು, ಕಾಲಶಾಕ = ಕರಿಬೇವಿನ ಸೊಪ್ಪು, ಅರವತ್ತು ದಿವಸಗಳಲ್ಲಿ ಬೆಳೆಯವ ಶಾಕೆಗಳು. ಕುಲಿತ್ಥ = ಹುರುಳಿ, ಕೆಮುಕ – ಕೆಸವುಗಡ್ಡೆ, ಮೂಲಕ = ಗೆಣಸು, ಕಂದ = ಸೂರಣಗೆಡ್ಡೆ, ನಾಗರ = ಶುಂಟಿ, ಲವಲೀ = ಲವಲೀಲತೆ, ಇವುಗಳು ಹವಿಷ್ಯಗಳು, ಹವಿಷ್ಯ ವಸ್ತುಗಳನ್ನು ಅಶಕ್ತರು, ರೋಗಿಗಳು, ವೃದ್ಧರು ಚಾತುರ್ಮಾಸ್ಯದಲ್ಲಿ ತಿಂದರೆ ದೋಷವಿರುವುದಿಲ್ಲ. ಸಶಕ್ತರು ತಿನ್ನಬಾರದು. ವರ್ಜ್ಯವಲ್ಲದ್ದನ್ನು ಸಶಕ್ತರೂ ಸ್ವೀಕರಿಸಬಹುದು. ಬೇರೆ ವ್ರತಗಳಲ್ಲಿ ಇವುಗಳನ್ನು ಸ್ವೀಕರಿಸಬಹುದು ಎಂದು ತಾತ್ಪರ್ಯ.

**ಹೈಮಂತಿಕ ಸ್ವಿತಾಸ್ವಿನ್ನಂ ಧಾನ್ಯಂ ಮುದ್ಗಾಯವಾಸ್ತಿಲಾಃ ।**
**ಷಷ್ಟಿಕಾ ಕಾಲಶಾಕಂ ಚ ಮೂಲಕಂ ಕೇಮುಕೇತರತ್ ॥**
**ಕಂದಃ ಸೈಂಧವ ಸಾಮುದ್ರೇ ಗವ್ಯೇ ಚ ದಧಿಸರ್ಪಿಷೀ ।**
**ಪಯೋಽನುದ್ಧೃತಸಾರಂ ಚ ಪನಸಾಮ್ರಹರೀತಕೀ ॥**
**ಪಿಪ್ಪಲೀ ಜೀರಕಂ – ಚೈವ ನಾಗರಂಗಂ ಚ ತಿಂತ್ರಿಣೀ ।**
**ಕದಲೀ–ಲವಲೀ–ಧಾತ್ರೀ ಫಲಾನ್ಯಗುಡಮೈಕ್ಷವಂ ॥**
**ಅತೈಲಪಕ್ವಂ ಮುನಯೋ ಹವಿಷ್ಯಾಣಿ ಪ್ರಚಕ್ಷತೇ ।**
**ನಾರಿಕೇಲಫಲಂ ಚೈವ ಕದಲೀ ಲವಲೀ ತಥಾ ॥**
**ಆಮ್ರಮಾಮಲಕಂ ಚೈವ ಪನಸಂ ಚ ಹರೀತಕೀ ।**
**ವ್ರತಂತರ ಪ್ರಶಸ್ತಂ ಚ ಹಿವಿಷ್ಯಂ ಮನ್ವತೇ ಬುಧಾಃ ॥**
**ಚತುರ್ಷ್ವಪಿ ಹಿ ಮಾಸೇಷು ಹವಿಷ್ಯಾಶೀ ನ ದೋಷಭಾಕ್ ॥**

- ***ಚಾತುರ್ಮಾಸ್ಯದಲ್ಲಿ ಶ್ರಾದ್ಧ :***

ಚಾತುರ್ಮಾಸ್ಯ ಅವಧಿಯಲ್ಲಿ ಮೃತರಾದವರ ಮೃತಾಹ ದಿನದಲ್ಲಿ ಶ್ರಾದ್ಧವನ್ನು ಮಾಡುವವರು ಆಷಾಢ ಹಾಗೂ ಕಾರ್ತಿಕದಲ್ಲಿ ಯಾವುದಾದರೂ ತಿಥಿಯು ಮೃತತಿಥಿಯಾದರೆ ಅಂದು ಶ್ರಾದ್ಧವನ್ನು ಆಚರಿಸಬೇಕು. ಆದರೆ ಶ್ರಾದ್ಧದಲ್ಲಿ ಶಾಕ ವ್ರತದಲ್ಲಿ ಶಾಕವನ್ನು ಬಳಸಬಾರದು. ಕಾರ್ತಿಕದಲ್ಲಿ ದ್ವಿದಳ ಧಾನ್ಯಗಳನ್ನು ಉಪಯೋಗಿಸಬಾರದು. ಶ್ರಾದ್ಧದಲ್ಲಿ ತರಕಾರಿಗಳನ್ನು ಉಪಯೋಗಿಸಿದರೆ ಆ ತರಕಾರಿಯು ಅಥವಾ ದ್ವಿದಳವು "ಸುರೆ"ಗೆ ಸಮವಾಗುತ್ತದೆ. ಸುರಪಾನ ಮಾಡಿಸಿದ ಪಾಪಕ್ಕೆ ಭಾಗಿಯಾಗಬೇಕಾಗುತ್ತದೆ.

**ಶುಚ್ಯೋರ್ಜಯೋಶ್ಚ ಶಾಕಾದೀನ್ ನ ದದ್ಯಾತ್ ಶ್ರಾದ್ಧಕರ್ಮಸು ।**
**ದೀಯಮಾನಂ ತು ತಚ್ಛಾಕಂ ಸುರಯಾ ಸಮಮುಚ್ಯತೇ ॥**

ಆಯಾ ಮಾಸಗಳಲ್ಲಿ ನಿಷಿದ್ಧವಾದ ತರಕಾರಿ, ದ್ವಿದಳ, ಮೊಸರು, ಹಾಲು ಇವುಗಳನ್ನು ನಿವೇದಿಸಿ ಶ್ರಾದ್ಧದಲ್ಲಿ ಉಪಯೋಗಿಸಿದರೆ ಪಿತೃಗಳು ಅದರ ಗಂಧವನ್ನು ಆಘ್ರಾಣಿಸಿ ಅದನ್ನು ಸ್ವೀಕರಿಸದೆ ಅಂತಹ ನಿಷಿದ್ಧಪಾಕವನ್ನು ತಯಾರಿಸಿದವರು ಪಾಪವನ್ನು ಹೊಂದಲಿ ಎಂದು ಶಪಿಸುವರು.

**ಮಾಸಾವಿಹಿತಶಾಕಾದೀನ್ ಆಘ್ರಾಯ ಪಿತರಃ ಸ್ಥಿತಾಃ ।**
**ಶಾಪಂ ಯಚ್ಛಂತಿ ಗಚ್ಛಂತಿ ನಾಶ್ನಂತೋ ದೋಷಶಂಕಿತಾಃ ॥**
**ಆಷಾಢೇ ಮಾಸಿ ಸಂಪ್ರಾಪ್ತೇ ಕ್ಷಯಾಹಃ ಸಂಭವೇದ್ ಯದಿ ।**
**ಶಾಕಾದಿಕಂ ನ ಕರ್ತವ್ಯಂ ಅನ್ಯಥಾ ನರಕಂ ವ್ರಜೇತ್ ॥**

- ***ದಧಿ ವ್ರತ :***

ಶ್ರಾವಣ–ಶುಕ್ಲ–ದ್ವಾದಶಿಯಿಂದ – ಭಾದ್ರಪದ–ಶುಕ್ಲ–ದಶಮಿಯವರೆಗೂ ದಧಿವ್ರತವನ್ನು ಆಚರಿಸಬೇಕು. ದಧಿಯನ್ನು ಭಗವಂತನಿಗೆ ನಿವೇದಿಸುವುದು, ಪಂಚಾಮೃತಕ್ಕಾಗಿ ಅಭಿಷೇಕಿಸುವುದು, ತಾನು ಭಕ್ಷಿಸುವುದು ಇವು ನಿಷಿದ್ಧ ಬೇರೆಯವರಿಗೂ ಬಡಿಸಲೂ ಬಾರದು ಮೊಸರು ಉಷ್ಣಗುಣವುಳ್ಳದ್ದು ದೇಹದಲ್ಲಿ ಕೊಬ್ಬನ್ನು ವೃದ್ಧಿ ಮಾಡುತ್ತದೆ.

ಈಗಾಗಲೇ ದೇಹವು ಉತ್ತರಾಯಣದಲ್ಲಿ ಉಷ್ಣವಾಗಿದ್ದು ಈ ಮೊಸರನ್ನು ಬಳಸಿದರೆ ಅಧಿಕ ಉಷ್ಣದಿಂದಾಗಿ ಆರೋಗ್ಯವು ಕೆಡುತ್ತದೆ. ಈ ಕಾರಣದಿಂದ ದಧಿವ್ರತವನ್ನಾಚರಿಸಬೇಕು. ಶಾಸ್ತ್ರೀಯ ರೀತ್ಯಾ ಭಗವಂತನ ಪ್ರೀತಿಯಾಗಲೀ ಎಂದು ತ್ಯಜಿಸುವುದು. ಇದಲ್ಲದೆ ಮೊಸರು ದಧಿವ್ರತದಲ್ಲಿ ಮಾತ್ರವಲ್ಲದೆ ಬೇರೆ ದಿವಸಗಳಲ್ಲಿಯೂ ಉಷ್ಣವರ್ಧಕವಾಗಿದೆ. ಇತರ ದಿವಸಗಳಲ್ಲಿಯೂ ಮೊಸರನ್ನು ತಿನ್ನಲು ಶಾಸ್ತ್ರವು ಹೇಳಿಲ್ಲ – ರಾತ್ರಿಯಂತೂ ಮೊಸರನ್ನು ತಿಂದರೆ ಆಯಸ್ಸು ಕ್ಷೀಣವಾಗುತ್ತದೆ ಎಂದು ಎಚ್ಚರಿಸಿದೆ. ಅಕ್ರೂರನು ರಾತ್ರಿ ಕೃಷ್ಣನ ಮನೆಯಲ್ಲಿ ಹಾಲಿನಿಂದ ಊಟವನ್ನು ಮಾಡಿದನೆಂದು ಭಾಗವತ ತಿಳಿಸಿದೆ. ಪ್ರತಿದಿವಸವೂ ಮೊಸರನ್ನು ಕಡೆದು ನೀರನ್ನು ಹಾಕಿ, ಶುಂಠಿ, ಕರಿಬೇವು, ಉಪ್ಪು ಸೇರಿಸಿಯೇ ಉಪಯೋಗಿಸಬೇಕು. ಇದು ಬಹಳ ತಂಪು ಆರೋಗ್ಯಕರವೂ ಆಗಿದೆ. ಜೀರ್ಣಕಾರಿಯು ಹೌದು. ಆದ್ದರಿಂದಲೇ **"ತ್ರಕಂ ಶಕ್ರಸ್ಯ ದುರ್ಲಭಂ"** ಎಂಬ ಮಾತು ಪ್ರಚಲಿತವಿದೆ.

***ಗೋಮಾಂಸ ಸಮಾನ :*** ದಧಿವ್ರತದಂದು ಮೊಸರನ್ನು ತಿಂದರೆ ಗೋಮಾಂಸನ್ನು ಭಕ್ಷಿಸಿದ ಪಾಪಕ್ಕೆ ಗುರಿಯಾಗಬೇಕಾಗುತ್ತದೆ. ದಧಿಕಾಲ ವ್ರತಕಾಲದಲ್ಲಿ ಜಗತ್ತಿನ ಸಮಸ್ತಪಾಪಗಳೂ ಮೊಸರಿನಲ್ಲಿರುತ್ತವೆ. ಮೊಸರನ್ನು ತಿಂದವನು ಪಾಪಗಳನ್ನೇ ತಿಂದಂತೆ.

**ಸುಪ್ತೇ ದೇವೇ ದ್ವಿತೀಯೇ ತು ಮಾಸ್ಯೇನಾಂಸಿ ಸಮಸ್ತಶಃ ।**
**ದಧ್ಯಾಶ್ರಿತಾನಿ ತಿಷ್ಠಂತಿ ತದ್ಭುಕ್ತ್ವಾ ಪಾಪಭುಗ್ ಭವೇತ್ ॥**
**ದ್ವಿತೀಯೇ ಭಕ್ಷಿತೇ ದಧ್ನಿ ಗೋಮಾಂಸಂ ತೇನ ಭಕ್ಷಿತಂ ॥**

***ದಧಿವ್ರತ ಸಮರ್ಪಣೆ :*** ದಧಿ ವ್ರತವನ್ನು ಭಾದ್ರಪದ ಶುಕ್ಲ ದಶಮಿಯವರೆಗೂ ಆಚರಿಸಿ ಭಾದ್ರಪದ ಶುಕ್ಲ ದ್ವಾದಶಿಯಂದು ಶ್ರೋತ್ರಿಯ ಬ್ರಾಹ್ಮಣನಿಗೆ ಮೊಸರನ್ನು ದಾನ ಮಾಡಿ ಭಗವಂತನಿಗೆ ಅರ್ಪಿಸಬೇಕು.

- ***ಕ್ಷೀರ ವ್ರತ :***

ಭಾದ್ರಪದ-ಶುಕ್ಲ-ದ್ವಾದಶಿಯಿಂದ – ಆಶ್ವಯುಜ-ಶುಕ್ಲ-ದಶಮಿಯವರೆಗೂ ಒಂದು ತಿಂಗಳು ಕ್ಷೀರವ್ರತವನ್ನು ಭಗವಂತನ ಪ್ರೀತಿಗಾಗಿ ಕ್ಷೀರವನ್ನು ತ್ಯಜಿಸಬೇಕು. ಈ ಕಾಲದಲ್ಲಿ ಹಾಲನ್ನು ಭಗವಂತನಿಗೆ ನಿವೇದಿಸಬಾರದು, ತಾನೂ ಕುಡಿಯಬಾರದು, ಗೋವಿನ ಹಾಲಿನಲ್ಲಿ ಈ ತಿಂಗಳು ಪೂರ್ತಿ ಮನುಷ್ಯರ ಆರೋಗ್ಯವನ್ನು ಹಾಳು ಮಾಡುವ ವಸ್ತುವಿರುತ್ತದೆ. ಹಾಲು ಶ್ರೇಷ್ಠ ಹಾಗೂ ಪುಷ್ಟಿಕರವಾದರೂ ಕೆಲವು ಕಾಲಗಳಲ್ಲಿ ಹಾಲೂ ದೋಷಪೂರಿತವಾಗಿರುತ್ತದೆ.

**ನಿಷಿದ್ಧ ಹಾಲುಗಳು :** ಕರು ಹಾಕಿದ ಹತ್ತು ದಿವಸದವರೆಗೂ ಹಸುವಿನ ಹಾಲು ಕರುವಿಗೆ ಮಾತ್ರ ಔಷಧಿಯಾದರೆ ಮನುಷ್ಯರಿಗೆ ರೋಗಜನಕವಾಗಿರುತ್ತದೆ. ಆದ್ದರಿಂದ ಕುಡಿಯಬಾರದು. ಹಾಗೆಯೇ ಹಸುವಿನ ಮಧ್ಯದ ಹಾಲು ಮಾತ್ರ ಮನುಷ್ಯರಿಗೆ ಆರೋಗ್ಯಕರವಾಗಿರುತ್ತದೆ. ಮೊದಲ ಹಾಗೂ ಕಡೆಯ ಕರೆದ ಹಾಲು ಕರುವಿಗೆ ಆರೋಗ್ಯದಾಯಕವಾಗಿರುತ್ತದೆ. ಆದ್ದರಿಂದಲೇ ಹಸುವಿನ ಹಾಲನ್ನು ಮೊದಲಿಗೆ ಕರುವು ಕುಡಿಯಬೇಕು. ನಂತರ ನಮಗಾಗಿ, ಪುನಃ ಕಡೆಯಲ್ಲಿ ಕರುವೇ ಕುಡಿಯಬೇಕು, ನಾವು ಕುಡಿಯಬಾರದು.

ಈ ಕಾರಣದಿಂದಲೇ ಕರುವು ಸತ್ತು ಹೋಗಿರುವ ಹಸುವಿನ ಹಾಲು ಉಪಯೋಗಿಸಬಾರದೆಂದು ನಿಷೇಧಿಸಲಾಗಿದೆ. ಹೀಗೆ ಕ್ಷೀರವ್ರತ ಕಾಲದಲ್ಲಿಯೂ ಹಾಲಿನಲ್ಲಿ ದೋಷವಿರುವುದರಿಂದ ಅ ಕಾಲದಲ್ಲಿ ಅತ್ಯುಚಿಷ್ಣ ಗುಣವಿರುವುದರಿಂದಲೂ ಸೇವಿಸಬಾರದೆಂದು ನಿಷೇಧಿಸಲಾಗಿದೆ. ಹಸುವಿನ ಹಾಲು ಮಾತ್ರವಲ್ಲ, ಆಡು, ಕುರಿ, ಎಮ್ಮೆ ಇವೆ ಮೊದಲಾದ ಪ್ರಾಣಿಗಳ

ಹಾಲನ್ನೂ ಬಳಸಬಾರದು. ಈ ತಿಂಗಳಲ್ಲಿ ಸೇವಿಸಿದರೆ ಸುರೆಯನ್ನು ಕುಡಿದ ಪಾಪಕ್ಕೆ ಭಾಗಿಯಾಗುವನು.

**ಕ್ಷೀರೇ ಪೀತೇ ತೃತೀಯೇ ತು ಸುರಾ ಪೀತಾ ನ ಸಂಶಯಃ ।**
**ಗವ್ಯಾಜ್ಯಮಾಹಿಷಾದೀನಾಂ ಕ್ಷೀರಾಣಾಂ ಸೇವನಾತ್ ಪುಮಾನ್ ॥**
**ಸುರಾಪಲೋಕಮಾಪ್ನೋತಿ ಯಾವದಾಭೂತಸಂಪ್ಲಲಮ್ ॥**

ಮಹಿಷೀ ಕ್ಷೀರವಾದರೂ ಯಾವಾಗಲೂ ನಿಷಿದ್ಧವೆ ಆಗಿರುತ್ತದೆ. ಚಾತುರ್ಮಾಸ್ಯದಲ್ಲಂತೂ ಸರ್ವಥಾ ನಿಷಿದ್ಧವಾಗಿದೆ.

**ಅಚ್ಯುತೇ ಶಯನಂ ಯಾತೇ ಸಂಪ್ರಾಪ್ತೇ ತು ಕ್ಷಯಾಹನಿ ।**
**ಚಣಕಾಂಶ್ಚ ಮಸೂರಾಂಶ್ಚ ಮಹಿಷೀಕ್ಷೀರಮೇವ ಚ ॥**

***ತೆಂಗಿನಕಾಯಿ ಹಾಲು :*** ಪಾಯಸಾದಿಗಳಿಗೆ ಹಾಲನ್ನು ಉಪಯೋಗಿಸ-ಬೇಕಾದಲ್ಲಿ ತೆಂಗಿನಕಾಯಿಯ ಹಾಲನ್ನು ಉಪಯೋಗಿಸಬಹುದು.

***ವ್ರತ ಸಮರ್ಪಣೆ :*** ಆಶ್ವಯುಜ ಶುಕ್ಲ ದಶಮಿಯಂದು ಕ್ಷೀರ ವ್ರತವನ್ನು ಮಾಡಿ ದ್ವಾದಶಿಯಂದು ಹಾಲನ್ನು ಶ್ರೋತ್ರೀಯ ಬ್ರಾಹ್ಮಣನಿಗೆ ದಾನ ಮಾಡಿ, ವ್ರತವನ್ನು ಭಗವಂತನಿಗೆ ಅರ್ಪಿಸಬೇಕು.

- ***ದ್ವಿದಲ ವ್ರತ – ದ್ವಿದಲ ಲಕ್ಷಣ*** :

ಅಂಕುರವು ಬಂದಾಗ ಗಿಡದಲ್ಲಿ ಎರಡು ಬೀಜಗಳು ಕಾಣಿಸಿದರೆ (ಉದಾ: ಹುರುಳಿಯ ಬೀಜ) ಬೀಜವನ್ನು ಹುರಿದಾಗ ಎರಡು ದಳಗಳು ಯಾವ ಧಾನ್ಯದಲ್ಲಿ ಕಾಣಿಸುವುದೋ (ಉದಾ: ಕಳ್ಳೆಕಾಯಿಬೀಜ) ಅವು ದ್ವಿದಲಗಳು.

**ಅಂಕುರಾದ್ಭರ್ಜನಾದ್ ವಾಪಿ ದ್ವಿದಲಂ ಯತ್ರ ದೃಶ್ಯತೇ ।**
**ದ್ವಿದಲಂ ತದಿತಿ ಪ್ರಾಹುಃ ವ್ರತಕರ್ಮಸು ಕರ್ಶಿತಾಃ ॥**

***ಬಹುಬೀಜ ಲಕ್ಷಣ :*** ಯಾವ ಕಾಯಿಯಲ್ಲಾಗಲೀ ಹಣ್ಣುಗಳಲ್ಲಾಗಲೀ ಶಾಕದಲ್ಲಿಯಾಗಲೀ ಬಹಳ ಬೀಜಗಳು ಒಳಗೆ ಇದ್ದು ಹೊರಗೆ ಒಂದೆ ಸಿಪ್ಪೇ ಇರುವುದೋ ಅಂತಹ ದಪ್ಪ ತೊಗಟೆ, ತೆಳು ಸಿಪ್ಪೆಗಳಿಂದ ಆವೃತವಾಗಿರುವ ಹಣ್ಣು (ಸೀತಾಫಲ, ರಾಮಫಲ, ಚೇಪೇ, ಹಲಸು, ಸಪೋಟ, ಮೂಸಂಬಿ, ಕಿತ್ತಲೆ, ಇವೆ ಮೊದಲಾದವು) ಬಹುಬೀಜಗಳೆನಿಸುವ ಹಣ್ಣುಗಳು, ಕಾಯಿಗಳು, ತರಕಾರಿಗಳು ಬಹುಬೀಜವೆನಿಸಿವೆ.

ಕಾಯಿಗಳು, ತರಕಾರಿಯಲ್ಲಿ, ಸೌತೆಕಾಯಿ, ಪಡವಲಕಾಯಿ, ಹಾಗಲಕಾಯಿ, ತೊಂಡೆಕಾಯಿ, ಬೆಂಡೇಕಾಯಿ, ಮೆಣಸಿನಕಾಯಿ, ಹೀರೇಕಾಯಿ ಇವೆ ಮೊದಲಾದವು ಬಹುಬೀಜಗಳಲ್ಲಿ ಬರುತ್ತದೆ.

**ಕಾರ್ತಿಕ್ಯಾಂ ವರ್ಜಯೇದ್ ವಿದ್ವಾನ್ ದ್ವಿದಲಂ ಬಹುಬೀಜಕಂ ।**
**ಬೀಜಮೇವ ಸಮುದ್ಭೂತಂ ದ್ವಿದಲಂ ಚಾಂಕುರಂ ವಿನಾ ॥**

**ದೃಶ್ಯತೇ ಯತ್ರ ಸಸ್ಯೇಷು ದ್ವಿದಲಂ ತನ್ನಿಗದ್ಯಥೆ ।**
**ಶಿಲಯಾ ಭಿದ್ಯಮಾನೇ ಚ ದ್ವಿದಲಂ ಯತ್ರ ದೃಶ್ಯತೇ ॥**

**ದ್ವಿದಲಂ ತದ್ಧಿ ವಿಜ್ಞೇಯಂ ತನ್ಮೇ ನಿಗದತಃ ಶೃಣು ।**
**ಮಾಷಂ ಚ ಮುದ್ಗಕಂ ಚೈವ ಚಣಕಂ ಚ ಮಸೂರಕಮ್ ॥**

**ಕುಲಿತ್ಥಂ ಚೈವ ನಿಷ್ಪಾವಂ ಆಢಕಂ ರಾಜಮಾಷಕಮ್ ।**
**ರಾಜಮುದ್ಗಂ ತಿಂತ್ರಿಣೇ ಚ ತಥಾ ವೈ ನಖಪಂಚಕಂ ॥**

**ನೂತನಾನ್ಯಥ ಜೀರ್ಣಾನಿ ಸರ್ವಾಣ್ಯೇತಾನಿ ವರ್ಜಯೇತ್ ।**
**ನಾಲೇ ಫಲೇ ವೈ ದೃಶ್ಯಂತೇ ಬಹುಬೀಜಾನಿ ನಾರದ ।**
**ಬಹುಬೀಜಂ ತದಿತ್ಯಾಹುಃ ಪತ್ರಕೀರಾದಿಕಂ ತಥಾ ॥**

ಕಾರ್ತಿಕ ಮಾಸದಲ್ಲಿ ದ್ವಿದಲವನ್ನು ಬಹುಬೀಜಗಳುಳ್ಳ ಫಲ, ಶಾಕ, ಧಾನ್ಯಗಳನ್ನು ತ್ಯಜಿಸಬೇಕು. ಅಂಕುರವಿಲ್ಲದೆಯೇ (ಮೊಳಕೆ) ಯಾವ ಸಸ್ಯಗಳಲ್ಲಿ ಎರಡು ಭಾಗಗಳುಳ್ಳ ಬೀಜವೂ ಉತ್ಪನ್ನವಾಗಿರುವುದೋ ಅದು ದ್ವಿದಲವೆಂದು ತಿಳಿಯಬೇಕು.

ಕಲ್ಲಿನಿಂದ ಹೊಡೆದಾಗ ಇಬ್ಭಾಗವಾಗುವುದು ಯಾವ ಧಾನ್ಯಗಳಿವೆಯೋ ಅವೆಲ್ಲವೂ ದ್ವಿದಲವೆನಿಸಿವೆ. ಅವುಗಳಲ್ಲಿ ಉದ್ದು, ಹೆಸರು, ಕಡಲೆ, ಮಸೂರ, ಹುರಳೀ, ಅವರೆ, ತೊಗರಿ, ಅಲಸಂದೆ, ಕಾಡು ಹೆಸರು, ಹುಣಸೆ ಹಣ್ಣು, ಮೊಲ, ಮುಳ್ಳುಹಂದಿ, ಉಡ, ಖಡ್ಗಮೃಗ, ಆಮೆ ಇವುಗಳನ್ನು ತಿನ್ನಬಾರದು. (ಚಾತುರ್ಮಾಸ್ಯವು ಮಾಂಸವನ್ನು ತಿನ್ನುವವರಿಗೂ ಕಡ್ಡಾಯವೆಂದು ಇದರಿಂದ ತಿಳಿಯಬಹುದು).

**ಮಾಂಸಾಶಿನಶ್ಚ ಯೇ ಭೂಪಾಃ ತ್ಯಜೇಯುಃ ತೇಽಪಿ ಕಾರ್ತಿಕೇ ।**

ಮೇಲೆ ಹೇಳಿದ ಧಾನ್ಯಗಳು ಹಳೆಯದಾಗಿರಲಿ ನೂತನವಾಗಿ ಬಂದಿರಲಿ ತಿನ್ನಬಾರದು. ಕಾಂಡದಲ್ಲಿ ಹಾಗೂ ಫಲದಲ್ಲಿ ಬಹುಬೀಜವಿರುವ ಸೊಪ್ಪು, ಕೀರೆ ಸೊಪ್ಪು ಇವುಗಳನ್ನು ತ್ಯಜಿಸಬೇಕು.

***ಕ್ರಿಮಿ ಭಕ್ಷಣ :*** ದ್ವಿದಲ ವ್ರತವನ್ನು ಮಾಡದೆ ನಿಷಿದ್ಧ ದ್ವಿದಲವನ್ನು ತಿಂದರೆ ಕ್ರಿಮಿಗಳನ್ನು ತಿಂದ ಪಾಪಕ್ಕೆ ಭಾಗಿಯಾಗುವರು.

**ಚತುರ್ಥೇ ಮಾಸಿ ವಿಪ್ರೇಂದ್ರ ದ್ವಿದಲೇಽಪಿ ಚ ಭಕ್ಷಿತೇ ।**
**ಕ್ರಿಮಯೋ ಭಕ್ಷಿತಸ್ತೇನ ಯಾವದುದ್ಬೋದನಂ ಹರೇಃ ॥**

***ತರಕಾರಿ :*** ದಂಟಿನಸೊಪ್ಪು, ಅಗಸೆ ಸೊಪ್ಪು ಮಾತ್ರ ಸ್ವೀಕರಿಸಬಹುದು. ಮೆಂತ್ಯದ ಸೊಪ್ಪು ಇತ್ಯಾದಿಗಳು ವ್ರತಕ್ಕೆ ಬರುವುದಿಲ್ಲ. ಹಸೀಶುಂಠಿ, ಬಾಳೇಕಾಯಿ, ಸುವರ್ಣಗೆಡ್ಡೆ, ಗೆಣಸು, ಸಾಮೇಗಡ್ಡೆ ಇವುಗಳು ಮಾತ್ರ ವ್ರತಕ್ಕೆ ಉಪಯೋಗಿಸಬಹುದು.

ಆಲೂಗಡ್ಡೆಯಲ್ಲಿ ಮೊಟ್ಟೆಯ ಆಕಾರವಿರುವ ಆಲೂಗಡ್ಡೆಯನ್ನು ತಿನ್ನಲೇಬಾರದು ಭಾವದುಷ್ಟವೆನಿಸಿದೆ. ಈ ಅಭಿಪ್ರಾಯದಿಂದಲೇ ಸಾತ್ವಿಕರು ಆಲೂಗಡ್ಡೆಯನ್ನು ತಿನ್ನುವುದಿಲ್ಲ. ಸರ್ವಥಾ ನಿಷಿದ್ಧವಾದ್ದರಿಂದಲೇ ತಿನ್ನಬಾರದು. ಮಾವು, ದಾಳಿಂಬೆ, ಇವೇ ಮೊದಲಾದ ಹಣ್ಣುಗಳು ದ್ವಿದಲ ವ್ರತದಲ್ಲಿ ನಿಷಿದ್ಧವಾಗಿವೆ. ಬಾಳೇಹಣ್ಣಿಗೆ ನಿಷೇಧವಿಲ್ಲ.

***ದ್ವಿದಳ*** : ತೊಗರಿ, ಉದ್ದು, ಹೆಸರು, ಕಡಲೆ, ಕಡಲೇಕಾಯಿ, ಇವೇ ಮೊದಲಾದವು ದ್ವಿದಲದಲ್ಲಿ ಸೇರಿವೆ. ಮಾವಿನಹಣ್ಣು ದ್ವಿದಲವೆ. ಬಹುಬೀಜ– ಬೀಜಪೂರ, (ಚೇಪೇಕಾಯಿ) ದಾಳಿಂಬೆ, ಹಲಸಿನಹಣ್ಣು, ಕರಬೂಜ, ಸಪೋಟ, ಸೇಬು, ಕಿತ್ತಲೆ, ಮೋಸಂಬಿ, ನಿಂಬೆ, ಮರಸೇಬು, ಇವೆಲ್ಲವೂ ಬಹುಬೀಜ ಫಲಗಳಾಗಿದ್ದು, ಬಹುಬೀಜ ಫಲ ಶಾಖೆಗಳನ್ನೂ ದ್ವಿದಲ ವ್ರತದಲ್ಲಿ ನಿಷೇಧ ಮಾಡಿದ್ದರಿಂದ ಅವುಗಳನ್ನು ಸ್ವೀಕರಿಸಬಾರದು.

ಸಾಸುವೆ, ಮೆಂತ್ಯ, ಗೋಡಂಬಿ, ಬಾದಾಮಿ, ಇವುಗಳಾದರೂ ಬಹುಬೀಜ ಹಾಗೂ ದ್ವಿದಳಗಳಾದ್ದರಿಂದ ಸ್ವೀಕರಿಸುವುದಿಲ್ಲ. ಹಣ್ಣುಗಳಲ್ಲಿ ಬಾಳೇಹಣ್ಣನ್ನು ಮಾತ್ರ ತೆಗೆದುಕೊಳ್ಳಬಹುದು. ಬಾಳೇಹಣ್ಣನ್ನು ಈಗಾಗಲೇ ಶಾಕವ್ರತದಲ್ಲಿ ತ್ಯಜಿಸಿ ಭಗವಂತನಿಗೆ ಅರ್ಪಿಸಿದ್ದರಿಂದ ಬಹುಬೀಜ ಕೋಟಿಯಲ್ಲಿದ್ದರೂ ನಿಷೇಧವಿಲ್ಲ. ತೀರ್ಥಕ್ಕಾಗಿ ಪಚ್ಚಕರ್ಪೂರ, ಕೇಸರೀ ಇವೂ ಬರುತ್ತದೆ.

ಏಲಕ್ಕಿಯೂ ಬಹುಬೀಜವಾದ್ದರಿಂದ ಬರುವುದಿಲ್ಲ. ಪಚ್ಚಕರ್ಪೂರವಾದರೂ ಗಿಡದಿಂದ ತಯಾರಿಸುವರು. ಈ ಹಿಂದಿನ ಶಾಕ ವ್ರತದಲ್ಲಿ ತೆಂಗಿನಕಾಯಿಯನ್ನು ಸ್ವೀಕರಿಸದೇ ಭಗವಂತನಿಗೆ ಅರ್ಪಿಸಿದ್ದರಿಂದ ದ್ವಿದಲವ್ರತದಲ್ಲಿ ಸ್ವೀಕರಿಸಬಹುದು.

ತೆಂಗು ದ್ವಿದಲವೂ ಅಲ್ಲ, ಬಹುಬೀಜವೂ ಅಲ್ಲದಿರುವುದರಿಂದ ಅದನ್ನು ಸ್ವೀಕರಿಸಬಹುದು. ತಾಂಬೂಲಾದಿಗಳಿಗೆ ನಿಷೇಧವಿಲ್ಲ. ತುಪ್ಪ ಮುಂತಾದ ಗೋವಿಕಾರಗಳಿಗೆ ದೋಷವಿಲ್ಲ. ದ್ವಿದಲವ್ರತವನ್ನು ಮಾಡದೆ ಇದ್ದರೆ ಕ್ರಿಮಿಗಳನ್ನು ತಿಂದರೆ ಯಾವ ನರಕಗಳೋ ಅವುಗಳನ್ನು ಹೊಂದುವನು.

***ಋತುಕಾಲದಲ್ಲೂ ವ್ರತಾಚರಣೆ ಕಡ್ಡಾಯ :*** ಸ್ತ್ರೀಯರು, ಕನ್ಯೆಯರು ಮುಂತಾದವರು ವ್ರತಕಾಲದಲ್ಲಿ ರಜಸ್ವಲೆಯರಾದರೂ ಆ ಕಾಲದಲ್ಲಿ ವ್ರತದ ನಿಯಮವನ್ನು ಪಾಲಿಸಲೇ ಬೇಕು. ನಿಷಿದ್ಧವಾದದ್ದನ್ನು ತಿನ್ನಬಾರದು.

***ದ್ವಿದಲ ವ್ರತ ಸಂಕಲ್ಪ :***

**ಕಾರ್ತಿಕೇ ದ್ವಿದಲಂ ಧಾನ್ಯಂ ವರ್ಜಯಿಷ್ಯೇ ಸದಾ ಹರೇ ।**
**ಇಮಂ ಕರಿಷ್ಯೇ ನಿಯಮಂ ನಿರ್ವಿಘ್ನಂ ಕುರು ಮಾಧವ ॥**

ವ್ರತಕಾಲ ಮುಗಿದ ಮೇಲೆ (ಕಾರ್ತಿಕ ಶುಕ್ಲ ಏಕಾದಶಿ) ಮೇಲೆ ದ್ವಿದಲ ಧಾನ್ಯಗಳು, ಶಾಕಗಳು, ಹಣ್ಣುಗಳನ್ನು ಬ್ರಾಹ್ಮಣನಿಗೆ ದಾನ ಮಾಡಿ ಭಗವಂತನಿಗೆ ಸಮರ್ಪಿಸಬೇಕು.

**ಅನಿರುದ್ಧ ನಮಸ್ತುಭ್ಯಂ ದ್ವಿದಳಾಖ್ಯವ್ರತೇನ ಚ ।**
**ಮತ್ಕೃತೇನಾಶ್ವಿನೇ ಮಾಸಿ ಪ್ರೀತ್ಯರ್ಥಂ ಫಲದೋ ಭವ ॥**

- ***ತಪ್ತ ಮುದ್ರಧಾರಣೆ :***

ಪ್ರಥಮೈಕಾದಶಿಯಂದು ಪ್ರತಿಯೊಬ್ಬ ವೈಷ್ಣವನೂ ಸುದರ್ಶನ ಹೋಮ ಮಾಡಿ ತಮ್ಮ ಗುರುಗಳಿಂದ ದೇಹಶುದ್ಧಿಗಾಗಿ ತಪ್ತಮುದ್ರಾಧಾರಣವನ್ನು ಮಾಡಿಸಿಕೊಳ್ಳಬೇಕು. ಎರಡು ಅಥವಾ ಐದು ಮುದ್ರೆಗಳನ್ನು ಧರಿಸುವ ಸಂಪ್ರದಾಯವಿದೆ. ಶಂಖ, ಚಕ್ರ ಎರಡೇ ಮುದ್ರೆಗಳನ್ನೇ ಧರಿಸಬೇಕು.

***ಕ್ರಮ :*** ಗಂಡಸರು ಬಲಭುಜದಲ್ಲಿ ಒಂದು ಚಕ್ರ ಎಡ ಭುಜದಲ್ಲಿ ಒಂದು ಶಂಖ ಧರಿಸಬೇಕು. ಕೆಲವು ಸಂಪ್ರದಾಯದಂತೆ ಬಲಸ್ತನದ ಮೇಲೆ

ಒಂದು ಚಕ್ರ, ಎಡಸ್ತನದ ಮೇಲೆ ಒಂದು ಶಂಖ, ಹೊಟ್ಟೆಗೆ ಒಂದು, ಒಟ್ಟು ಮೂರು, ಬಲಭುಜ ಎಡಭುಜಗಳಲ್ಲಿ ಚಕ್ರ ಶಂಖ ಧಾರಣೆ, ಒಟ್ಟಾಗಿ ಐದು ಧರಿಸುವರು.

**ಶಯನ್ಯಾಂ ಚೈವ ಬೋಧಿನ್ಯಾಂ ಚಕ್ರತೀರ್ಥೇ ತಥೈವ ಚ ।**
**ಶಂಖ-ಚಕ್ರವಿಧಾನೇನ ವಹ್ನಿಪೂತೋ ಭವೇನ್ನರಃ ॥**

**ಅಗ್ನಿಹೋತ್ರಂ ಯಥಾ ನಿತ್ಯಂ ವೇದಸ್ಯಾಧ್ಯಯನಂ ಯಥಾ ।**
**ಬ್ರಾಹ್ಮಣಸ್ಯ ತಥೈವೇದಂ ತಪ್ತಮುದ್ರಾದಿಧಾರಣಮ್ ॥**

ಈ ಪ್ರಮಾಣಗಳು ವೈಷ್ಣವಾದಿಗಳಿಗೆ ಶಯನೀಯಲ್ಲಿ ತಪ್ತಮುದ್ರಾ-ಧಾರಣೆಯನ್ನು ವಿಧಿಸುತ್ತಿವೆ. ನಿತ್ಯೋಪಾಸನ ವೇದಾಧ್ಯಯನವು ಮುಖ್ಯವೋ ಹಾಗೆಯೇ ಮುದ್ರಾಧಾರಣೆಯೂ ಪ್ರಧಾನವಾಗಿದೆ. ತಪ್ತ ಮುದ್ರಾಂಕನವು ಬಾಹ್ಯದೀಕ್ಷೆಯಾಗಿದೆ. ಬಳೆ, ಕುಂಕುಮ ಮೊದಲಾದವುಗಳನ್ನು ಸ್ತ್ರೀಯರು ಧರಿಸುವುದು ಅವರ ಪಾತಿವ್ರತ್ಯಕ್ಕೆ ದ್ಯೋತಕವಾಗಿರುವಂತೆ ಚಕ್ರಾದಿಧಾರಣವು ನಾನು ಹರಿಗೆ ಸಂಬಂಧಪಟ್ಟಿದ್ದು ವೈಷ್ಣವನು ಎಂಬ ಭಾವಕ್ಕೆ ದ್ಯೋತಕವಾಗಿದೆ.

ಪ್ರತಿಸಂವತ್ಸರವೂ ಉಪಾಕರ್ಮದ ದಿವಸದಲ್ಲೂ ಮುದ್ರಾ ಧಾರಣೆಯನ್ನು ಮಾಡಿಸಿಕೊಳ್ಳಬೇಕು. ಜಾತಕರ್ಮದಿಂದ ಪ್ರಾರಂಭಿಸಿ ಚೌಲ-ಉಪನಯನ-ವಿವಾಹಾದಿಗಳಲ್ಲೂ ನಿಯಮೇನ ಮುದ್ರಾಧಾರಣವನ್ನು ಮಾಡಿಸಿಕೊಳ್ಳಬೇಕು. ಶ್ರವಣ ದ್ವಾದಶಿ, ಪ್ರಥಮೈಕಾದಶಿಯಂದು ಸರ್ವರೂ ಮುದ್ರಾಧಾರಣವನ್ನು ಮಾಡಿಸಿಕೊಳ್ಳಲೇಬೇಕು.

***ಯತಿಗಳಿಂದಲೇ ಮುದ್ರಧಾರಣೆ :*** ಸನ್ಯಾಸಿಗಳು ಮಾತ್ರ ಮುದ್ರಾಧಾರಣವನ್ನು ಮಾಡಲು ಅರ್ಹರು ಗೃಹಸ್ಥಾದಿಗಳು ಅರ್ಹರಲ್ಲ. ಸನ್ಯಾಸಿಗಳಲ್ಲಿ ಶ್ರೀಮದ್ವರೇ ಸನ್ನಿಹಿತರಾಗಿದ್ದು ಶಿಷ್ಯರಿಗೆ ಮುದ್ರಾಧಾರಣವನ್ನು ಮಾಡುವರು.

ತಪ್ತಮುದ್ರೆಯನ್ನು ಧರಿಸದ ಬ್ರಾಹ್ಮಣನು ಸ್ಮಶಾನದ ಸುಟ್ಟ ಕಟ್ಟಿಗೆಯಂತೆ ಸರ್ವಕರ್ಮಗಳೆಲ್ಲೂ ಗರ್ಹಿತನಾಗಿರುವನು.

***ದೇವತೆಗಳು-ಮುದ್ರಧಾರಣೆ :*** ದೇವತೆಗಳು ವೃತ್ರಾಸುರನಿಂದ ಪರಾಜಿತರಾಗಿ ವಿಷ್ಣುವನ್ನು ಮೊರೆ ಹೊಂದಿದಾಗ ವಿಷ್ಣುವು ತನ್ನ ಚಕ್ರಾದಿ ಲಾಂಛನವನ್ನು

ಧರಿಸಿ ಯುದ್ಧ ಮಾಡಿರಿ ಎಂದನು. ಹಾಗೆ ಮುದ್ರಾಧಾರಣೆಯನ್ನು ಮಾಡಿಕೊಂಡು ಯುದ್ಧವನ್ನು ಮಾಡಿದಾಗ ಶತ್ರುಗಳು ಸೋತು ಹೋದರು.

ಶ್ರೌತ-ಸ್ಮಾರ್ತ ಸಮಸ್ತ ಕರ್ಮಗಳಿಗೂ ತಪ್ತಮುದ್ರಾಧಾರಣೆ ಅಂಗವಾಗಿರುವುದರಿಂದ ಚಕ್ರಾದಿಗಳನ್ನು ಬಿಸಿ ಮಾಡಿ ಭುಜಗಳ ಮೂಲ ಭಾಗದಲ್ಲಿ ಧರಿಸಬೇಕು. ಹೀಗೆ ಒಟ್ಟು ಐದು ಸ್ಥಳಗಳಲ್ಲಿ ಎರಡು ಮುದ್ರೆಗಳನ್ನು ಧರಿಸುವರು. ಮುತ್ತೈದೆ ಸ್ತ್ರೀಯರಾದರು ಬಳೆಗಳನ್ನು ಧರಿಸುವ ಸ್ಥಳಕ್ಕಿಂತ ಸ್ವಲ್ಪ ಮೇಲೆ ಧರಿಸಬೇಕು. ಉಪನಯನವಾಗದ ಬಾಲಕರು ಹೊಟ್ಟೆಯ ಮೇಲೆ ಒಂದು ಚಕ್ರವನ್ನು ಮಾತ್ರ ಧರಿಸಬೇಕು.

***ತಪ್ತಮುದ್ರೆಯ ಸಾರ್ಥಕತೆ :*** ಮತತ್ರಯರಲ್ಲಿ ಅದ್ವೈತಿಗಳು ತಪ್ತಮುದ್ರಧಾರಣೆಯನ್ನು ಒಪ್ಪಿರುವುದಿಲ್ಲ. ವಿಶಿಷ್ಟಾದ್ವೈತಿಗಳಾದರೂ ಜೀವನದಲ್ಲಿ ಒಂದೇ ಬಾರಿ ಮುದ್ರಧಾರಣೆಯು ಪ್ರತಿವರ್ಷವೂ ಧಾರಣೆಯನ್ನು ಒಪ್ಪಿರುವುದಿಲ್ಲ. ಆದರೆ ದ್ವೈತಿಗಳಾದರೂ ಪ್ರತಿವರ್ಷವೂ ಧರಿಸುವರು. ಸಂಸ್ಕಾರಗಳಲ್ಲಿ ಮೊಟ್ಟ ಮೊದಲ ಸಂಸ್ಕಾರ ಎಂದರೆ ತಪ್ತಮುದ್ರಧಾರಣೆಯಾಗಿದೆ.

**ಸಂಸ್ಕಾರಾಣಾ ಚ ಸರ್ವೇಷಾಂ ಆದ್ಯಂ ಚಕ್ರಾದಿಧಾರಣಂ ।**

ಚಕ್ರಾದಿ ಧಾರಣವಾದರೂ ನಾವು ಭಗವಂತನಿಗೆ ಸಂಬಂಧಪಟ್ಟವರು ಎಂಬ ಅನುಸಂಧಾನವನ್ನು ತೋರಿಸುತ್ತದೆ.

**ಚಕ್ರಾದಿಧಾರಣಂ ಪುಂಸಾಂ ಪರಸಂಬಂಧ ನಿವೇಧನಮ್ ।**

ಚಕ್ರಾದಿಗಳನ್ನು ಧರಿಸದೆ ಅನೇಕ ಕರ್ಮಗಳನ್ನು ಮಾಡುತ್ತಿದ್ದರೂ ಅದು ವ್ಯರ್ಥವಾಗುವುದು. ಬ್ರಹ್ಮಾದಿ ದೇವತೆಗಳೇ ಮುದ್ರಧಾರಣವನ್ನು ಮಾಡಿಸಿಕೊಳ್ಳುವರೆಂದ ಮೇಲೆ ಮಾನವರು ಖಂಡಿತಾ ಮಾಡಿಸಿಕೊಳ್ಳಲೇಬೇಕು. ಮುದ್ರಧಾರಣೆಯನ್ನು ತಮ್ಮ ಗುರುಗಳಿಂದಲೇ ಮಾಡಿಸಿಕೊಳ್ಳಬೇಕು ಎಂಬುದು ನ್ಯಾಯಪ್ರಾಪ್ತ.

ತಮ್ಮ ಗುರುಗಳು ದೂರದಲ್ಲಿದ್ದಾಗ ಬೇರೆ ಗುರುಗಳಿಂದಾದರೂ ಮುದ್ರಧಾರಣೆಯನ್ನು ಅವಶ್ಯವಾಗಿ ಮಾಡಿಸಿಕೊಳ್ಳಬೇಕು. ಈ ಕಾಲ ತಪ್ಪಿದರೆ ಇಂಥಹ ಪರ್ವಕಾಲ ಮುಂದೆ ಒಂದು ವರ್ಷ ಬರಲಾರದು. ಪುನಃ ತಮ್ಮ ಗುರುಗಳು ಬಂದಾಗ ಅವರಿಂದಲೂ ಮುದ್ರಧಾರಣೆಯನ್ನು

ಮಾಡಿಸಿಕೊಳ್ಳುವುದು. ತಮ್ಮ ಗುರುಗಳು ಸಮೀಪದಲ್ಲಿದ್ದರೂ ಇತರ ಗುರುಗಳಿಂದ ಮುದ್ರಾಧಾರಣ ಮಾಡಿಸಿಕೊಂಡರೆ ಗುರುದ್ರೋಹವೆನಿಸುತ್ತದೆ.

***ಮುದ್ರಧಾರಣ ಮಂತ್ರಗಳು :***

**ಸುದರ್ಶನ ಮಹಾಜ್ವಾಲ ಕೋಟಿ ಸೂರ್ಯಸಮಪ್ರಭ ।**
**ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ ॥**
**ಪಾಂಚಜನ್ಯ ನಿಜಧ್ವಾನಧ್ವಸ್ತ ಪಾತಕ ಸಂಚಯ ।**
**ಪಾಹಿ ಮಾಂ ನರಕಾದ್ ಘೋರಾತ್ ಸಂಸಾರಾರ್ಣವತಾರಣ ॥**

- ***ಅರಿಶಿಣ-ಕುಂಕುಮ ದಾನ :***

  ಪ್ರತಿ ದ್ವಾದಶೀ ಒಂದು ಕೊಬ್ಬರಿ ಬಟ್ಟಲಲ್ಲಿ ಅರಿಶಿಣ, ಮತ್ತೊಂದರಲ್ಲಿ ಕುಂಕುಮ ತುಂಬಿ ತಟ್ಟೆಯಲ್ಲಿಟ್ಟು ಖಣ, ತೆಂಗಿನಕಾಯಿ, ಅಕ್ಕಿ, ಅಡಿಕೆ ಸಹಿತ ದಾನ ಕೊಡಬೇಕು. ಕೊನೆ ದ್ವಾದಶೀ ಬೆಳ್ಳಿಯ ಅರಿಶಿಣ-ಕುಂಕುಮ ಬಟ್ಟಲು ದಾನ ಕೊಡಬೇಕು. [ಮದುವೆಯಾದ ಮೊದಲನೆ ವರ್ಷ ಈ ದಾನ ಕೊಟ್ಟಲ್ಲಿ ಉತ್ತಮ ಫಲವುಂಟು]

- ***ಬಳೆ ದಾನ :***

  ಪ್ರತಿ ದ್ವಾದಶಿ ಮುತ್ತೈದೆಗೆ ಬಳೆ ಹಾಕಿಸಿ, ಕುಂಕುಮ ಕೊಟ್ಟು, ಉಡಿ ತುಂಬಬೇಕು.

- ***ಕಾಲು ತೊಳೆಯುವುದು :***

  ಪ್ರತಿ ದ್ವಾದಶೀ ಒಬ್ಬ ಮುತ್ತೈದೆಯ ಕಾಲು ತೊಳೆದು, ಕೊನೆ ದ್ವಾದಶೀ ಕುಂಕುಮ ಕೊಟ್ಟು, ಉಡಿ ತುಂಬಿ, ಕಾಲುಂಗುರ ದಾನ ಮಾಡಬೇಕು.

- ಪ್ರತಿ ಹುಣ್ಣಿಮೆ ಅರಿಶಿಣ-ಕುಂಕುಮ, ಎಣ್ಣೆ, ಸೀಗೆಕಾಯಿ ಎರೆದುಕೊಳ್ಳುವುದಕ್ಕೆ ಕೊಟ್ಟು, ಕೊನೆ ಹುಣ್ಣಿಮೆ ಬಕೆಟ್, ತಂಬಿಗೆ, ಎಣ್ಣೆ ಹಾಕಿದ ಬಟ್ಟಲು, ಸೀಗೆಪುಡಿ ಹಾಕಿದ ಬಟ್ಟಲು, ಅರಿಶಿಣ-ಕುಂಕುಮ ಬಟ್ಟಲು ದಾನ ಕೊಡಬೇಕು.

- ***ತಾಂಬೂಲ ದಾನ :***

  ಪ್ರತಿದಿವಸ ದಂಪತಿಗಳಿಗೆ ಪಾನಬೀಡ ದಾನ ಮಾಡಬೇಕು. ವ್ರತದ ನಿಯಮದ

ಅನುಸಾರ ಬೀಡ ಕಟ್ಟಬೇಕು. ಕೊನೆಯ ದ್ವಾದಶೀ ಎಲೆ, ಅಡಿಕೆ, ಸುಣ್ಣ, ಕಾಚು, ಯಾಲಕ್ಕಿ, ಲವಂಗ, ಜಾಜಿಕಾಯಿ, ಪಚ್ಚಕರ್ಪೂರ, ಕೇಸರ, ಕೊಬ್ಬರಿ, ಅಡಕೊತ್ತು ಇವೆಲ್ಲವನ್ನು ಪಾನದಾನದಲ್ಲಿ ಹಾಕಿ ದಕ್ಷಿಣೆ, ಶಲ್ಯ, ಕುಪ್ಪುಸ ಸಹಿತ ದಾನ ಕೊಡಬೇಕು.

- ***ತಾಂಬೂಲ ತಟ್ಟೆ ದಾನ :***

ಪ್ರತಿ ದ್ವಾದಶಿಯಂದು ತಟ್ಟೆಯಲ್ಲಿ ಎಲೆ, ಅಡಿಕೆ, ಬೀಡ ಕಟ್ಟುವ ಸಾಮಾನು (ವ್ರತದ ನಿಯಮಗಳಿಗೆ ಅನುಸಾರವಾಗಿ) ಹಾಕಿ ದಾನ ಮಾಡಬೇಕು. (ಬೇರೆ ಬೇರೆಯವರಿಗೂ ಕೊಡಬಹುದು). ಕೊನೆಯ ದ್ವಾದಶೀ ತಾಂಬೂಲ ತಟ್ಟೆ ಜತೆಗೆ ಶಲ್ಯ, ಕುಪ್ಪುಸ ಕೊಡಬೇಕು.

- ಪ್ರತಿ ದ್ವಾದಶೀ ಹಿತ್ತಾಳೆ/ಕಂಚಿನ ಬಟ್ಟಲಲ್ಲಿ ಕಡ್ಲೇಬೇಳೆ/ಬೆಲ್ಲ ತುಂಬಿ ದಾನ ಕೊಡಬೇಕು.

- ***ಮುಷ್ಟಿ ಅಕ್ಕಿ ದಾನ :***

ಪ್ರತಿದಿನ ಊಟಕ್ಕೆ ಮೊದಲು ಒಂದು ಮುಷ್ಟಿ ಅಕ್ಕಿ ತೆಗೆದಿಡಬೇಕು. ಏಕಾದಶೀ ಇಲ್ಲವೇ ದ್ವಾದಶೀ ಬೆಲ್ಲ, ದಕ್ಷಿಣೆ ಸೇರಿಸಿ ಬ್ರಾಹ್ಮಣರಿಗೆ ಕೊಡಬೇಕು. ಕೊನೆಯ ದ್ವಾದಶೀ (ಕಾರ್ತಿಕ ಕೃಷ್ಣ ದ್ವಾದಶೀ) ಹಿತ್ತಾಳೆ ತಪ್ಪಲೆಯಲ್ಲಿ (ಬೋಗುಣಿ) ಅಕ್ಕಿ, ದಕ್ಷಿಣೆ, ಬೆಲ್ಲ ಹಾಕಿ ದಾನ ಮಾಡಬೇಕು.

- ***ಬ್ರಹ್ಮಾಂಡ ದಾನ :***

ಕೊಬ್ಬರಿ ಗಿಟಕನ್ನು ಮೇಲಿನ ಸ್ವಲ್ಪವೇ ತೆಗೆಯಬೇಕು. ಅದರೊಳಗೆ ಅಂಬೆಗಾಲು ಕೃಷ್ಣ ದಕ್ಷಿಣೆ ಇಟ್ಟು ಮೊದಲಿನಂತೆ ಮುಚ್ಚಬೇಕು. ಮೇಲೆ ಹಸಿದಾರದಿಂದ ಅಕ್ಷಾಂಶ, ರೇಖಾಂಶ ಸುತ್ತಿ ಪ್ರತಿ ದ್ವಾದಶೀ ದಾನ ಕೊಡಬೇಕು.

- ***ಸಂತಾನ ಗೋಪಾಲ ಕೃಷ್ಣ ದಾನ :***

ಪ್ರತಿ ದ್ವಾದಶೀ ಬೆಳ್ಳಿ ಬಟ್ಟಲಲ್ಲಿ (ಚಿಕ್ಕದಾದರೂ ಸರಿ) ಬೆಣ್ಣೆ ಹಾಕಿ ಅದರಲ್ಲಿ ಬೆಳ್ಳಿ ಕೃಷ್ಣನನ್ನು ಮುಚ್ಚಿಟ್ಟು ದಾನ ಕೊಡಬೇಕು.

- ***ಉಯ್ಯಾಲೆ ಕೃಷ್ಣನ ದಾನ :*** ಬೆಳ್ಳಿ ತೊಟ್ಟಲಲ್ಲಿ ಬೆಳ್ಳಿ ಕೃಷ್ಣನನ್ನು ಇಟ್ಟು ಪ್ರತಿ ದ್ವಾದಶೀ ದಕ್ಷಿಣೆ ಸಹಿತ ದಾನ ಕೊಡಬೇಕು.

- ***ಕರಿಮಣಿ ಕಟ್ಟುವುದು :*** ಪ್ರತಿ ದ್ವಾದಶೀ ಮುತ್ತೈದೆಗೆ ಕುಂಕುಮ ಕೊಟ್ಟು, ಉಡಿತುಂಬಿ, ಮಂಗಳಸೂತ್ರ ಕರಿಮಣಿ ಪೋಣಿಸಿ ಕೊರಳಿಗೆ ಕಟ್ಟಬೇಕು.
- ***ಗುಪ್ತದಾನ:*** ಹಿತ್ತಾಳೆ ಬಟ್ಟಲಲ್ಲಿ ಅಕ್ಕಿ ಹಾಕಿ, ಅದರೊಳಗೆ ಬೆಳ್ಳಿ ಇಲ್ಲವೇ ಬಂಗಾರ ಇಲ್ಲವೇ ದಕ್ಷಿಣೆ ಮುಚ್ಚಿಟ್ಟು ಗುಪ್ತದಾನ ಕೊಡಬೇಕು. (ದ್ವಾದಶೀ)
- ಪ್ರತಿ ದಿನ ಮುತ್ತುಗದ ಎಲೆಯಲ್ಲಿ ಊಟ ಮಾಡಿ ಕೊನೆಗೆ ಬೆಳ್ಳಿ ತಟ್ಟೆ ಇಲ್ಲವೆ ಕಂಚಿನ ತಳಿಗೆ ದಾನ ಕೊಡಬೇಕು.
- ***ಶಿಲಾ ಭೋಜನ :*** ಪ್ರತಿದಿನ ಕಲ್ಲಿನ ಮೇಲೆ ಊಟ ಮಾಡಿ ಕೊನೆಗೆ ಬೆಳ್ಳಿ ಇಲ್ಲವೇ ಕಂಚಿನ ತಳಿಗೆ ದಾನ ಕೊಡಬೇಕು. (ಬೆಳ್ಳಿ ತಟ್ಟೆ ಚಿಕ್ಕದಾಗಿದ್ದರೂ ಸರಿ)
- ***ದಿಕ್ಸಾಧನೆ :*** ಪ್ರತಿ ತಿಂಗಳು ಒಂದೊಂದು ದಿಕ್ಕಿಗೆ ಮುಖ ಮಾಡಿ ಊಟ ಮಾಡಬೇಕು. ಕೊನೆಯಲ್ಲಿ ದೀಪದ ಕಂಬ (ಸಮೆ) ದಾನ ಮಾಡಬೇಕು.

  [ಆಷಾಢ ಶುಕ್ಲ ದ್ವಾದಶಿಯಿಂದ ಶ್ರಾವಣ ಶುಕ್ಲ ದ್ವಾದಶೀ – ಪೂರ್ವ ದಿಕ್ಕಿಗೆ ಮುಖ ; ಶ್ರಾವಣ ಶುಕ್ಲ ದ್ವಾದಶಿಯಿಂದ ಭಾದ್ರಪದ ಶುಕ್ಲ ದ್ವಾದಶೀ – ದಕ್ಷಿಣ ದಿಕ್ಕಿಗೆ ಮುಖ ; ಭಾದ್ರಪದ ಶುಕ್ಲ ದ್ವಾದಶಿಯಿಂದ ಆಶ್ವಿನ ಶುಕ್ಲ ದ್ವಾದಶೀ –ಪಶ್ಚಿಮ ದಿಕ್ಕಿಗೆ ಮುಖ ; ಆಶ್ವಿನ ಶುಕ್ಲ ದ್ವಾದಶಿಯಿಂದ ಕಾರ್ತಿಕ ಶುಕ್ಲ ದ್ವಾದಶಿ – ಉತ್ತರ ದಿಕ್ಕಿಗೆ ಮುಖ]
- ***ಏಕೋಡಿ ಮೂಕೂಟ :*** ಒಂದೇ ಸಲ ಬೇಕಾದಷ್ಟು ಬಡಿಸಿಕೊಂಡು ಮೌನವಾಗಿ ಊಟ ಮಾಡಬೇಕು. ಕೊನೆಯಲ್ಲಿ ಒಂದು ತಾಂಬಾಣದಲ್ಲಿ ಊಟದ ಒಣಪದಾರ್ಥಗಳನ್ನು ದಾನ ಕೊಡಬೇಕು ಹಾಗೂ ಗಂಟೆಯನ್ನು ದಾನ ಕೊಡಬೇಕು.
- ಪ್ರತಿ ದ್ವಾದಶೀ ಸಂಧ್ಯಾವಂದನೆ ಪಾತ್ರೆಗಳನ್ನು ಕೊಡಬೇಕು. [ತಾಮ್ರದ ತಟ್ಟೆ, ಉದ್ದರಣೆ]
- ***ಘೃತ ಗೋದಾನ :*** ಹಿತ್ತಾಳೆ ತಟ್ಟೆಯಲ್ಲಿ ಬಿಸಿ ಮಾಡಿದ ತುಪ್ಪ ಹಾಕಬೇಕು. ಅದು ಗಟ್ಟಿಯಾದ ಮೇಲೆ, ಅದರಲ್ಲಿ ಕರು ಸಹಿತ ಹಸುವನ್ನು ಬರೆದು ಪ್ರತಿ ದ್ವಾದಶೀ ದಾನ ಕೊಡಬೇಕು. ಗೋ ವತ್ಸ ದ್ವಾದಶಿ ದಿವಸ ಕೂಡ ದಾನ ಕೊಡಬೇಕು.
- ***ಲಕ್ಷ್ಮೀ ನಾರಾಯಣ ದೀಪ ದಾನ :*** ಪ್ರತಿದಿನ ಜೊತೆ ನೀಲಾಂಜನದಲ್ಲಿ

ತುಪ್ಪದ ದೀಪ ಹಾಕಬೇಕು. ರಂಗೋಲಿ ಬರೆದು ಅವುಗಳ ಮೇಲೆ ದೀಪವನ್ನಿಟ್ಟು ಹಚ್ಚಿ ಅರಿಶಿಣ, ಕುಂಕುಮ, ಹೂ, ಮಂತ್ರಾಕ್ಷತೆಗಳಿಂದ ಪೂಜೆ ಮಾಡಬೇಕು. ಕೊನೆಯಲ್ಲಿ ಬೆಳ್ಳಿದೀಪ ಇಲ್ಲವೇ ಹಿತ್ತಾಳೆ ಸಮೆ, ಶಲ್ಯ, ಕುಬುಸದ ಜತೆ ದಕ್ಷಿಣೆ ಸಹಿತ ದಾನ ಕೊಡಬೇಕು.

- ಪ್ರತಿ ದ್ವಾದಶೀ ಸಾಣೆಕಲ್ಲು, ಗಂಧದ ಚಕ್ಕೆ, ಗಂಟೆ, ಮಂಗಳಾರತಿ ದೀಪ [ಹಲಗಾರತಿ ದಾನ ಕೊಡಬೇಕು]
- ಪ್ರತಿದಿವಸ ತುಳಸಿಗೆ ಗೆಜ್ಜೆವಸ್ತ್ರ ಏರಿಸಿ, ಕೊನೆಯಲ್ಲಿ ಚಿಕ್ಕ ಹೆಣ್ಣು ಮಗುವಿಗೆ ಲಂಗ-ರವಿಕೆ ಬಟ್ಟೆ ಕೊಡಬೇಕು. ಕಾಲ್ಗೆಜ್ಜೆಯನ್ನಾದರೂ ಕೊಡಬಹುದು.
- ಪ್ರತಿ ದ್ವಾದಶೀ ಸಾಲಂಕೃತ ತುಳಸಿ ಗಿಡವನ್ನು ಅಂಬೆಗಾಲು ಕೃಷ್ಣನನ್ನಿಟ್ಟು ದಾನ ಕೊಡಬೇಕು.
- ***ಸುಧಾಮ ಹಾಗೂ ಸುಧಾಮ ಸಖನ ದಾನ :*** ಅವಲಕ್ಕಿ, ಬೆಲ್ಲ, ದಕ್ಷಿಣೆ, ಅಂಬೆಗಾಲು ಕೃಷ್ಣನನ್ನು ಶಲ್ಯೆಯಲ್ಲಿ ಕಟ್ಟಿ ಪ್ರತಿ ದ್ವಾದಶೀ ಬ್ರಾಹ್ಮಣರಿಗೆ ಕೊಡಬೇಕು.
- ಸಣ್ಣ ಕೂಸಿಗೆ ಅಂಗಿ, ಟೋಪಿ, ಹಾಲಿನ ಬಟ್ಟಲು ಅಥವಾ ಲೊಟ ದಾನ ಕೊಟ್ಟು, ಕೂಸಿನ ತಾಯಿಗೆ ಉಡಿ ತುಂಬಬೇಕು.
- ***ಚಿತ್ರಗುಪ್ತ ದಾನ :*** ಪ್ರತಿದಿವಸ ಮಣೆ ಮೇಲೆ ಅಕ್ಕಿ ಹಾಕಿ ಚಿತ್ರಗುಪ್ತರ ಎರಡು ಬೊಂಬೆ ಬರೆದು ಪೂಜಿಸಬೇಕು. ಅಕ್ಕಿಯನ್ನು ಮರುದಿವಸ ತೆಗೆದು ಬೇರೆ ಅಕ್ಕಿ ಹಾಕಬೇಕು. ಪ್ರತಿ ಏಕಾದಶೀ ಇಲ್ಲವೇ ದ್ವಾದಶೀ ಎಲ್ಲ ಅಕ್ಕಿ ಸೇರಿಸಿ ಬೆಲ್ಲ, ದಕ್ಷಿಣೆ ಜತೆ ಬ್ರಾಹ್ಮಣರಿಗೆ ಕೊಡಬೇಕು. ಕೊನೆಯ ದ್ವಾದಶೀ ಹಿತ್ತಾಳೆ ತಟ್ಟೆಯಲ್ಲಿ ಅಕ್ಕಿ ಹಾಕಿ ಚಿತ್ರಗುಪ್ತರನ್ನು ಬರೆದು ಬೆಲ್ಲ ದಕ್ಷಿಣೆ ಸಹಿತ ಬ್ರಾಹ್ಮಣರಿಗೆ ದಾನ ಕೊಡಬೇಕು.
- ***ಗಂಗೆಪೂಜೆ :*** ಪ್ರತಿದಿನ ಎರಡು ತಾಮ್ರ ಇಲ್ಲವೇ ಬೆಳ್ಳಿ ಗಿಂಡಿಯಲ್ಲಿ ಮೀಸಲು ನೀರು ತುಂಬಿ, ರಂಗೋಲೆ ಬರೆದು, ಮಣೆ ಮೇಲೆ ಗಿಂಡಿಗಳನ್ನಿಟ್ಟು, ಮಾಂಗಲ್ಯ ಕಟ್ಟಬೇಕು. ಅರಿಶಿಣ-ಕುಂಕುಮ, ಹೂ, ಗೆಜ್ಜೆವಸ್ತ್ರ ಏರಿಸಿ ಪೂಜೆ ಮಾಡಬೇಕು. ಕೊನೆಗೆ ಎರಡು ತಾಮ್ರದ ಗಿಂಡಿಗಳಲ್ಲಿ ಸಕ್ಕರೆ ತುಂಬಿ, ಅರಿಶಿಣ-ಕುಂಕುಮ ಏರಿಸಿ ದಾನ ಕೊಡಬೇಕು. ಶಕ್ತಿಯಿದ್ದವರು ಬೆಳ್ಳಿಗಿಂಡಿಗಳನ್ನು ಕೊಡುವುದು ಉತ್ತಮ ಪಕ್ಷ.

- ***ಪಾಯಸ ದಾನ :*** ಪ್ರತಿ ದ್ವಾದಶೀ ಶ್ಯಾವಿಗೆ ಪಾಯಸ ಬಟ್ಟಲಿನಲ್ಲಿಟ್ಟು ದಾನ ಮಾಡಬೇಕು. ಕ್ಷೀರವ್ರತದಲ್ಲಿ ಹಾಲು ಬೆರೆಸಬಾರದು. ವ್ರತದ ನಿಯಮಗಳಿಗೆ ಅನುಸಾರವಾಗಿ ಪಾಯಸ ಮಾಡಬೇಕು. ಕೊನೆಗೆ ಶಲ್ಯ ಕೊಟ್ಟು ಕುಪ್ಪಸ ಉಡಿ ತುಂಬಬೇಕು.

- ***ನಿತ್ಯ ದಾನ :*** ಪ್ರತಿದಿನ ಒಂದೊಂದು ದಿನಸು ದಕ್ಷಿಣೆ ಸಹಿತ ದಾನ ಕೊಡಬೆಕು. ಕೊಟ್ಟ ವಸ್ತುವನ್ನು ಮತ್ತೆ ಕೊಡಬಾರದು. ವ್ರತದ ನಿಯಮಗಳಿಗೆ ಅನುಸಾರವಾಗಿ ದಾನ ನೀಡಬೇಕು.

- ***ತುಳಸೀ ಪೂಜೆ ತಟ್ಟೆ ದಾನ :*** ಪ್ರತಿ ದ್ವಾದಶೀ ತುಳಸೀ ಗಿಡ ಸಮೇತ, ತುಳಸೀ ಪೂಜೆಗೆ ಬೇಕಾಗುವ ಸಾಮಾನುಗಳನ್ನು ಹಿತ್ತಾಳೆ ತಟ್ಟೆಯಲ್ಲಿಟ್ಟು ಮುತ್ತೈದೆಗೆ ಕುಂಕುಮ ಕುಪ್ಪಸಕೊಟ್ಟು ದಾನ ಮಾಡಬೇಕು. ಹಿತ್ತಾಳೆ ತಟ್ಟೆಯಲ್ಲಿ ಅರಿಶಿಣ-ಕುಂಕುಮ ಬಟ್ಟಲು, ಅಂಬೆಗಾಲು ಕೃಷ್ಣ, ಕಲ್ಲುಸಕ್ಕರೆ, ಬಳೆ, ಗೆಜ್ಜೆವಸ್ತ್ರ, ಮಂತ್ರಾಕ್ಷತೆ, ಎಲೆ ಅಡಿಕೆ, ಹೂ, ದಕ್ಷಿಣೆ, ಉಡಿ ಅಕ್ಕಿ, ಮಾಂಗಲ್ಯ, ಹವಳ, ಮುತ್ತು, ಕಾಲುಂಗುರ ಇಡಬೇಕು. ಹಿತ್ತಾಳೆ ಪುಟ್ಟಗಿಂಡಿ, ಜತೆ ದೀಪ, ಕರಿಮಣಿ ಕುಚ್ಚು ಇಟ್ಟು, ದಾನ ಮಾಡಬೇಕು. ಕೊನೆ ದ್ವಾದಶೀ ತಟ್ಟೆಯಲ್ಲಿ ಇವುಗಳ ಜತೆ ಬೆಳ್ಳಿ ಇಲ್ಲವೇ ಪುಟ್ಟ ಹಿತ್ತಾಳೆ ಬೃಂದಾವನ ಇಡಬೇಕು.

- ಕೊನೆಯ ದ್ವಾದಶೀ ದಂಪತೀ ಪೂಜೆ ಮಾಡಬೇಕು. ಕಾಲು ತೊಳೆದು ಬೆಲ್ಲ, ದಕ್ಷಿಣೆ, ಬ್ರಾಹ್ಮಣರಿಗೆ, ಕುಸುಮ, ಕುಂಕುಮ, ಕುಪ್ಪಸ ಮುತ್ತೈದೆಗೆ ಉಡಿ ತುಂಬಬೇಕು.

- ಪ್ರತಿ ದ್ವಾದಶೀ ಸಾಯಂಕಾಲ ರೇಷ್ಮೆ ಮಡಿ ಸೀರೆಯುಟ್ಟು ತುಳಸಿಪೂಜೆ ಮಾಡಬೇಕು. ಕೊನೆ ದ್ವಾದಶೀ ಮೇಲೆ ತಿಳಿಸಿದಂತೆ ತುಳಸಿಪೂಜೆ ತಟ್ಟೆ ದಾನ ಕೊಡಬೇಕು. ಪ್ರತಿ ದ್ವಾದಶೀ ಮುತ್ತೈದೆಗೆ ಉಡಿ ತುಂಬಬೇಕು.

- ಪ್ರತಿ ದ್ವಾದಶೀ ದೊನ್ನೆ ಅಥವಾ ಹಿತ್ತಾಳೆ ಗಿಂಡಿಗಳಲ್ಲಿ ಬೆಲ್ಲ, ಸಕ್ಕರೆ, ತುಪ್ಪ, ಹಾಲು, ಮೊಸರು, ಎಳ್ಳೆಣ್ಣೆ ಹಾಕಿ, ಅವುಗಳನ್ನು ಹಿತ್ತಾಳೆ ತಟ್ಟೆ ಮೇಲಿಟ್ಟು ದಾನ ಮಾಡಬೇಕು. ಎಲ್ಲವನ್ನೂ ಒಟ್ಟಿಗೆ ಕೊಡಲಾಗದಿದ್ದರೆ ಎರಡೆರಡನ್ನಾದರೂ ಕೊಡಬಹುದು. ಉದಾಹರಣೆ : 1) ಬೆಲ್ಲ-ಸಕ್ಕರೆ, 2) ಹಾಲು-ಮೊಸರು, 3) ಎಣ್ಣೆ-ತುಪ್ಪ, ಹಾಲು-ಮೊಸರು ವ್ರತಗಳಲ್ಲಿ ವ್ರತದ ನಿಯಮ ಅನುಸರಿಸಬೇಕು.

- ಚಾತುರ್ಮಾಸ್ಯದಲ್ಲಿ ಒಂದು ದಿನವಾದರೂ ದಂಪತೀ ಭೋಜನ ಮಾಡಿಸಬೇಕು. [ದ್ವಾದಶೀ ಉತ್ತಮ ಪಕ್ಷ]
- ಪ್ರತಿದಿನ ತುಳಸಿಯ ಮುಂದೆ ಪದ್ಮಸಹಿತವಾಗಿ ಗೋಪಾದ ಹಾಕಬೇಕು. ಕೊನೆಯಲ್ಲಿ ಬೆಳ್ಳಿಗೋವು ದಾನ ಕೊಡಬೇಕು.
- ಚಾತುರ್ಮಾಸ್ಯದ ಗೋಪದ್ಮವ್ರತ ರಂಗೋಲಿಯನ್ನು 5 ವರ್ಷ ಹಾಕಬೇಕು.
- ಹಿತ್ತಾಳೆ ಡಬ್ಬದಲ್ಲಿ ವಿಷ್ಣುಪಾದ-ಚಕ್ರಾಂಕಿತಗಳನ್ನಿಟ್ಟು ಪ್ರತಿ ದ್ವಾದಶೀ ಬ್ರಾಹ್ಮಣರಿಗೆ ದಕ್ಷಿಣೆ ಸಹಿತ ದಾನವನ್ನು ಕೊಡಬೇಕು.
- ಪ್ರತಿ ದ್ವಾದಶೀ ಸಾಲಿಗ್ರಾಮ ಇಲ್ಲವೇ ಸುದರ್ಶನವನ್ನು ಬೆಳ್ಳಿ ಬಟ್ಟಲಲ್ಲಿಟ್ಟು ದಾನ ಕೊಡಬೇಕು. [ಎಲ್ಲ ದಾನಗಳಲ್ಲಿ ದಕ್ಷಿಣೆ ಕಡ್ಡಾಯ]
- ಪ್ರತಿ ದ್ವಾದಶೀ ಮರದ ಬಾಗಿಣ ಕೊಡಬೇಕು.
- ***ಚಾತುರ್ಮಾಸ್ಯದಲ್ಲಿ ಹಚ್ಚುವ ಲಕ್ಷ ಬತ್ತಿ :*** 11 ಎಳೆ ತೆಗೆಯಬೇಕು, 22 ಎಳೆಯ 10 ಪಕಳೆ ಮಾಡಬೇಕು. ಈ 10 ಪಕಳೆ ಸೇರಿಸಿ ಹೂಬತ್ತಿ ಮಾಡಬೇಕು. ಇಂಥ 5 ಬತ್ತಿಗಳನ್ನು ತುಪ್ಪದಲ್ಲಿ ನೆನೆಸಬೇಕು. ಪ್ರತಿದಿನ ಈ 5 ಬತ್ತಿಗಳನ್ನು ಬೆಳ್ಳಿ ನೀಲಾಂಜನದಲ್ಲಿಟ್ಟು ರಂಗೋಲಿ ಬರೆದು, ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಹೆಸರುಗಳಿಂದ ದೇವರ ಮುಂದೆ ದೀಪ ಹಚ್ಚಬೇಕು. 8 ದೀಪಗಳ ಪೂಜೆ ಮಾಡಬೇಕು. ಈ ಬತ್ತಿಗಳು ಬಡ್ಡಿ ಸಹಿತ 8 ತಿಂಗಳಲ್ಲಿ 1 ಲಕ್ಷ ಆಗುತ್ತದೆ. ಅಂದರೆ ಚಾತುರ್ಮಾಸ್ಯದಲ್ಲಿ 1 ಲಕ್ಷ ಆಗುತ್ತದೆ. ಕೊನೆಗೆ 2 ಬೆಳ್ಳಿ ನೀಲಾಂಜನ ದಾನ ಕೊಡಬೇಕು.
- ***ಚಾತುರ್ಮಾಸ್ಯದಲ್ಲಿ ಏರಿಸುವ ಲಕ್ಷ ಗೆಜ್ಜೆ ವಸ್ತ್ರ :*** 20 ಎಳೆ ತೆಗೆಯಬೇಕು. ಅವುಗಳನ್ನು ಜೋಡಿಸಿ 20 ಗೆಜ್ಜೆ ತೆಗೆಯಬೇಕು. ಇಂಥ 250 ಗೆಜ್ಜೆವಸ್ತ್ರ ಏರಿಸಿದರೆ ಲಕ್ಷ ಆಗುತ್ತದೆ. ಕೊನೆಗೆ ಮುತ್ತೈದೆಗೆ ಉಡಿ ತುಂಬಿ, ಸೀರೆ-ಕುಪ್ಪಸ ಕೊಡಬೇಕು.
- ***ಭೂದಾನ :*** ಎರಡು ಹಿತ್ತಾಳೆ ಪಾತ್ರೆಗಳಲ್ಲಿ ಒಂದರಲ್ಲಿ ಗೋಧಿ, ಒಂದರಲ್ಲಿ ಭತ್ತ ಹಾಕಿ ಸಸಿ ಬೆಳೆಸಬೇಕು. ದ್ವಾದಶೀ ದಿವಸ ಅರಿಶಿಣ-ಕುಂಕುಮ, ಹೂ, ಗೆಜ್ಜೆವಸ್ತ್ರ, ಮಂತ್ರಾಕ್ಷತೆ ಏರಿಸಿ ಕುಂಕುಮ-ಖಣದ ಜತೆ ದಾನ ಮುತ್ತೈದೆಗೆ ಕೊಡಬೇಕು.

- ಪ್ರತಿ ದ್ವಾದಶೀ ಹಿತ್ತಾಳೆ ಬಟ್ಟಲು ಅಥವಾ ತಟ್ಟೆಯಲ್ಲಿ ಅರಿಶಿಣ–ಕುಂಕುಮ, ಉಡಿ ಅಕ್ಕಿ, ಹಸುವಿನ ಪ್ರತಿಮೆ ಇಟ್ಟು ದಾನ ಕೊಡಬೇಕು. ಕೊನೆಯ ದ್ವಾದಶೀ ಬೆಳ್ಳಿ ಹಸು ಕೊಡುವುದು ಉತ್ತಮ ಪಕ್ಷ.
- ಅಕ್ಕಿಯಲ್ಲಿ ಅನ್ನಪೂರ್ಣೇಶ್ವರಿಯನ್ನಿಟ್ಟು ದಾನ ಕೊಡಬೇಕು. ಹಿತ್ತಾಳೆ ಇಲ್ಲವೇ ಬೆಳ್ಳಿ ಬಟ್ಟಲಲ್ಲಿ ಹಾಕಿ ಕೊಡಬೇಕು, ಕೊನೆಯ ದ್ವಾದಶಿಯಾದರೂ ಬೆಳ್ಳಿಬಟ್ಟಲಲ್ಲಿಟ್ಟು (ಬಟ್ಟಲು ಚಿಕ್ಕದಾದರೂ ಸರಿ) ಕೊಡಬೇಕು.
- ಕುಪ್ಪಸ ಖಣದ ಮೇಲೆ ಗೌರಿಪೆಟ್ಟಿಗೆಯನ್ನಿಟ್ಟು, ಮುತ್ತೈದೆಗೆ ಕುಂಕುಮ ಕೊಟ್ಟು ದಾನ ಕೊಡಬೇಕು. [ಗೌರೀಪೆಟ್ಟಿಗೆಯಲ್ಲಿ ಹಾಕುವ ಸಾಮಾನುಗಳು: ಪಂಚಗೌರಿ, ದೊಗ್ಗಾಲು ಕೃಷ್ಣ, ವಿಷ್ಣುಪಾದ, ಹಸು, ಅನ್ನಪೂರ್ಣೇಶ್ವರಿ, ಗಂಗಾಥಾಲಿ]
- ದ್ವಾದಶೀ ದಾನಗಳನ್ನು ಪಾರಣೆಗಿಂತ ಮೊದಲು ಕೊಡುವುದು ಉತ್ತಮ ಪಕ್ಷ. ಅದಾಗದಿದ್ದರೆ, ತುಳಸಿ–ಗೌರಿಪೂಜೆ ನಂತರ ಅವುಗಳನ್ನು ದೇವರ ಮುಂದಿಟ್ಟು ದಕ್ಷಿಣೆ ಇಟ್ಟು ಅನುಕೂಲವಾದಾಗ ಕೊಡಬಹುದು.
- ದಶಮಿಯ ದಿವಸ ಈ 10 ಪದಾರ್ಥಗಳನ್ನು ಬಿಡಬೇಕು. ಕಂಚಿನ ಪಾತ್ರೆ, ಮಾಂಸ, ಮಸೂರ ಬೇಳೆ, ಕಡಲೆ, ಉದ್ದು, ಶಾಕ, ಜೇನುತುಪ್ಪ, ಪರಾನ್ನ, ಪುನರ್ಭೋಜನ, ಮೈಥುನ.
- ಏಕಾದಶಿಯಲ್ಲಿ ತ್ಯಾಜ್ಯವಾದ 11 ವಿಷಯಗಳು : ಜೂಜು, ನಿದ್ದೆ, ಎಲೆ ಅಡಿಕೆ, ಹಲ್ಲುಜ್ಜುವುದು, ಪರನಿಂದೆ, ಚಾಡಿ, ಕಳ್ಳತನ, ಹಿಂಸೆ, ಮೈಥುನ, ಕ್ರೋಧ, ಅಸತ್ಯ.
- ***ದ್ವಾದಶಿಯಲ್ಲಿ ಬಿಡಬೇಕಾದ 12 ವಸ್ತುಗಳು :*** ಕಂಚಿನ ಪಾತ್ರೆ, ಮಾಂಸ, ಮದಿರಾ, ಜೇನು, ಎಣ್ಣೆ, ಅಸತ್ಯ, ವ್ಯಾಯಾಮ, ಪರದೇಶಗಮನ, ಪುನರ್ಭೋಜನ, ಮೈಥುನ, ಸ್ಪರ್ಶಕ್ಕೆ ಯೋಗ್ಯವಲ್ಲದ ವಸ್ತುಗಳ ಸ್ಪರ್ಶ, ಮಸೂರ ಬೇಳೆ.

* * * * *



# 24. ಅಧಿಕ ಮಾಸ ಕರ್ತವ್ಯಗಳು



- ***ಅಧಿಕಮಾಸದ ಅರ್ಥ :***

  ಸೂರ್ಯನ ಸಂಕ್ರಮಣವಿಲ್ಲದ ಮಾಸವನ್ನು "ಅಧಿಕಮಾಸ" ಎನ್ನುವರು. "*ಅಸಂಕ್ರಾಂತಮಾಸೋऽಧಿಕಮಾಸಃ*" ಎಂಬುದು ನಿರುಕ್ತಿ. ಯಾವ ತಿಂಗಳಲ್ಲಿ ರವಿಯ ಸಂಕ್ರಾಂತಿಯಿಲ್ಲದೆ ಎರಡು ಅಮಾವಾಸ್ಯೆಗಳು ಇರುವುವೋ ಅದನ್ನು ಅಧಿಕಮಾಸ ಎನ್ನುವರು.

  **ಅಮಾವಾಸ್ಯಾದ್ವಯಂ ಯತ್ರ ರವಿಸಂಕ್ರಾಂತಿವರ್ಜಿತಂ ।**
  **ಮಲಮಾಸಃ ಸ ವಿಜ್ಞೇಯ ಹರಿಸ್ಸ್ವಪಿತಿ ಕರ್ಕಟೇ ॥**

  ***ಮಲಮಾಸ:*** ಅಧಿಕಮಾಸವನ್ನೆ ಮಲಮಾಸವೆಂದು ಕರೆಯುವರು.

  **"ಮಲಂ ಕಾಲಸ್ಯ ವದಂತಿ ಮಾಸಂ ಕಾಲವಿದೋऽಧಿಕಮ್" ।**

  ಹೇಗೆ ದೇಹಕ್ಕೆ ಸೇರದ ಅಧಿಕವಾದ ಮಲವನ್ನು "ಮಲ" ಎಂದಂತೆ ವರ್ಷಕ್ಕೆ ಸೇರದೇ ಅಧಿಕವಾದ ದಿನಗಳನ್ನು "ಮಲಮಾಸ" ಎನ್ನುವರು.

  **ಚಾಂದ್ರಮಾಸೋ ಹ್ಯಸಂಕ್ರಾಂತಃ ಮಲಮಾಸಃ ಪ್ರಕೀರ್ತಿತಃ ।**

  ಕಾಲದ ಆಧಿಕ್ಯವನ್ನೇ "ಮಲ" ಎನ್ನಲಾಗಿದೆ.

- ***ಕಾಲಾಧಿಕ್ಯ*** : ಸೌರವರ್ಷವು 365 ದಿವಸಗಳಿಂದ ಕೂಡಿರುತ್ತದೆ. ಚಾಂದ್ರವರ್ಷವು 354 ದಿವಸಗಳು (365–354=11) ಸೌರವರ್ಷಕ್ಕೂ ಚಾಂದ್ರವರ್ಷಕ್ಕೂ ಹನ್ನೊಂದು ದಿವಸಗಳು ವ್ಯತ್ಯಾಸವಾದಂತಾಯಿತು.

**ಸೌರಸಂವತ್ಸರಸ್ಯಾಂತೇ ಮಾನೇನ ಶಶಿಜೇನ ತು ।**
**ಏಕಾದಶಾತಿರಿಚ್ಯಂತೇ ದಿನಾನಿ ಭೃಗುನಂದನ ॥**

ಹೀಗೆ ಒಂದು ವರ್ಷಕ್ಕೆ ಹನ್ನೊಂದು ದಿನಗಳು ವ್ಯತ್ಯಾಸವಾದರೆ ಎರಡು ವರ್ಷ ಹಾಗೂ ಎಂಟು ತಿಂಗಳುಗಳಿಗೆ ಇಪ್ಪತ್ತೊಂಭತ್ತುವರೆ ದಿವಸಗಳು ವ್ಯತ್ಯಾಸವಾದಂತಾಯಿತು (11 + 11 + 7 = 1/2 = 29 1/2)

ಒಂದು ವರ್ಷಕ್ಕೆ 11 ದಿವಸಗಳು

ಎರಡು ವರ್ಷಕ್ಕೆ 11 ದಿವಸಗಳು

ಎಂಟು ತಿಂಗಳಿಗೆ – 7 1/2 ದಿವಸಗಳು

ಒಟ್ಟು 29 1/2 ದಿವಸಗಳು ಚಾಂದ್ರಮಾಸದ ರೀತ್ಯಾ ಕಡಮೆಯಾ–ದಂತಾಯಿತು.

**ಸಮಾದ್ವಯೇ ಸಾಷ್ಟಮಾಸೇ ತಸ್ಮಾನ್ ಮಾಸೋಽತಿರಿಚ್ಯತೇ ।**

ಈ ವ್ಯತ್ಯಾಸವನ್ನು ಸರಿಪಡಿಸಲೆಂದು ಚಾಂದ್ರಮಾನ ರೀತ್ಯಾ 29 1/2 ದಿವಸಗಳನ್ನು ಅಧಿಕಮಾಸವೆಂದು ಪರಿಗಣಿಸಲಾಗುವುದು.

- ***ಮುವ್ವತ್ತಮೂರು ಸಂಖ್ಯೆ :*** ಹಿಂದೆ ತಿಳಿಸಿದಂತೆ ಸೌರಮಾಸ ಹಾಗೂ ಚಾಂದ್ರಮಾಸಗಳಿಗೆ 2 ವರ್ಷ ಎಂಟು ತಿಂಗಳುಗಳಿಗೆ ಎಂದರೆ 32 ತಿಂಗಳಿಗೆ 29 1/2 ದಿವಸಗಳು ವ್ಯತ್ಯಾಸವಾಗುತ್ತದೆ. ಮುವ್ವತ್ತು ದಿವಸಗಳಿಗೆ ಇನ್ನೂ ಅರ್ಧ ದಿವಸವೂ ಉಳಿದಿರುವುದು. ಹೀಗೆ ಉಳಿದ ಅರ್ಧ ದಿವಸವನ್ನು ಪೂರೈಸಲು ಹಿಂದೆ ಹೇಳಿದ 2 ವರ್ಷ ಎಂಟು ತಿಂಗಳುಗಳ (32) ನಂತರ ಬರುವ ಮುವ್ವತ್ತುಮೂರನೇ ತಿಂಗಳ ಹದಿನಾರು ದಿವಸಗಳು ಹಾಗೂ ನಾಲ್ಕು ಘಳಿಗೆಗಳನ್ನು ಸೇರಿಸಿದರೆ ಮುವ್ವತ್ತು ದಿನಗಳ ಒಂದು ಮಾಸವಾಗಿ ಅಧಿಕಮಾಸವೇರ್ಪಡುತ್ತದೆ.

**ದ್ವಾತ್ರಿಂಶದ್ಭಿಃ ಗತೈಃ ಮಾಸೈಃ ದಿನೈ ಷೋಡಶಭಿಸ್ತಥಾ ।**
**ಘಟಿಕಾನಾಂ ಚತುಷ್ಕೇಣ ಪತತ್ಯಧಿಕಮಾಸಕಃ ॥**

- ***ಮಲ್ಲಿಂಮ್ಲುಚ :*** ಯಾವ ಮಾಸದಲ್ಲಿ ಸೂರ್ಯನ ಸಂಕ್ರಾಂತಿ ಇರುವುದಿಲ್ಲವೋ ಆ ಮಾಸವನ್ನು "ಮಲ್ಲಿಂಮ್ಲುಚ" ಅಥವಾ "ನಪುಂಸಕ"ವೆಂದು ಕರೆಯುವರು.

**ನಿಸ್ಸೂರ್ಯೋ ಅಧಿಕಮಾಸೋ ಮಲಿಂಮ್ಲುಚಾಖ್ಯಸ್ತತಃ ಪಾಪಃ ।**

- ***ದ್ವಾದಶಾದಿತ್ಯರು :*** ಮಾಘದಿಂದ ಪ್ರಾರಂಭಿಸಿ ಅರುಣ, ಸೂರ್ಯ, ಭಾನು, ತಪನ, ಇಂದ್ರ, ರವಿ, ಗಭಸ್ತಿ, ಅರ್ಯಮ, ಹಿರಣ್ಯರೇತಸ, ದಿವಾಕರ, ಮಿತ್ರ, ವಿಷ್ಣು ಈ ದ್ವಾದಶಾದಿತ್ಯರು ಆಯಾಯ ಮಾಸಗಳಲ್ಲಿ ಉದಯಿಸುವರು. ಮಲಮಾಸದಲ್ಲಾದರೂ ಯಾವ ಸೂರ್ಯನೂ ಉದಯಿಸಲು ಇರುವುದಿಲ್ಲ–ವಾದ್ದರಿಂದ ಸೂರ್ಯಮಂಡಲವೆ ತಾಪ, ಪ್ರಕಾಶಾದಿಗಳನ್ನು ಕೊಡುವುದು.

**ಮಾಸೇಷು ದ್ವಾದಶಾದಿತ್ಯಾಃ ತಪಂತೇ ಹಿ ಯಥಾಕ್ರಮಮ್ ।**
**ನಪುಂಸಕೇಽಧಿಕೇ ಮಾಸಿ ಮಂಡಲಂ ತಪತೇ ರವೇಃ ॥**

ಅಧಿಕಮಾಸವು ಮಲಿನವಾದ್ದರಿಂದ ಪಾಪವೆಂದು ಕರೆಯಲಾಗಿದೆ. ಅಧಿಕಮಾಸವು ವರ್ಷದಲ್ಲೇ ಸೇರಿ ಪಾಪಿಷ್ಠವೆನಿಸಿದೆ. ಈ ಮಾಸದಲ್ಲಿ ಮಾಡಿದ ಕಾಮ್ಯಯಜ್ಞಗಳ ಫಲವನ್ನು ಪಾಪವು ನಾಶ ಮಾಡುತ್ತದೆ.

**ವತ್ಸರಾಂತರ್ಗತಃ ಪಾಪೋ ಯಜ್ಞಾನಾಂ ಫಲನಾಶಕೃತ್ ।**
**ನೈರ್ಋತ್ಯೈಃ ಯಾತುಧಾನಾದ್ಯೈಃ ಸಮಾಕ್ರಾಂತೋ ವಿನಾಶಕೈಃ ॥**

ನಿರ್ಋತಿಯು ರಾಕ್ಷಸರಾದ ನೈರ್ಋತರಿಂದ ಈ ಮಾಸವು ಆಕ್ರಮಿಸಿರುವುದರಿಂದ ನಿಷ್ಕಾಮನೆಯ ಕರ್ಮವನ್ನು ಹೊರತುಪಡಿಸಿ ಉಳಿದ ಕಾಮ್ಯಕರ್ಮಗಳ ಫಲವನ್ನು ಈ ನೈರ್ಋತರು ನಾಶ ಮಾಡುವರು.

- ***ಅರವತ್ತು ದಿವಸಗಳ ಮಾಸ :*** ಯಾವ ಮಾಸಗಳಲ್ಲಿ ಅಧಿಕಮಾಸವು ತೋರುವುದೋ ಅದು ಉತ್ತರದ ತಿಂಗಳಿನಲ್ಲಿ ಸೇರುತ್ತದೆ ಎಂದು ತಿಳಿಯಬೇಕು. ಜ್ಯೇಷ್ಠವು ಅಧಿಕವಾದರೆ ಅಧಿಕ ಜ್ಯೇಷ್ಠಮಾಸವು ನಿಜಜ್ಯೇಷ್ಠಕ್ಕೆ ಸೇರಿ ಒಟ್ಟು ಅರವತ್ತು ದಿವಸಗಳಿಗೆ ಒಂದು ಮಾಸವಾಗುತ್ತದೆ. ಇವುಗಳಲ್ಲಿ ಪೂರ್ವಾರ್ಧವು (30 ದಿನಗಳು) ಪ್ರಶಸ್ತವಾಗಿರುವುದಿಲ್ಲವಾದ್ದರಿಂದ ಕಾಮ್ಯಕರ್ಮಗಳನ್ನು ಮಾಡದೆ ಮುಂದಿನ ಮುವ್ವತ್ತು ದಿವಸಗಳು ಅದರಲ್ಲಿ ಪ್ರಶಸ್ತವಾದ್ದರಿಂದ ಕರ್ಮಗಳು ಆಚರಿಸಬೇಕು.

**ಷಷ್ಟ್ಯಾ ತು ದಿವಸೈಃ ಮಾಸಃ ಕಥಿತೋ ಬಾದರಾಯಣೈಃ ।**
**ಪೂರ್ವಾರ್ಧಂ ತು ಪರಿತ್ಯಜ್ಯ ಉತ್ತರಾರ್ಧಂ ಪ್ರಶಸ್ಯತೇ ॥**

- ***ಸಂಭವಾಭಿಪ್ರಾಯ :*** ಅಧಿಕಮಾಸವು ಸಾಮಾನ್ಯವಾಗಿ ಮುವ್ವತ್ತು ಮೂರು ತಿಂಗಳಿನಲ್ಲಿ ಬರುವ ಸಂಭವವಿದೆ ಎಂದು ಅರ್ಥವೇ ವಿನಃ

ಮುವ್ವತ್ತುಮೂರನೇ ತಿಂಗಳಿಗೇ ಬರುವುದೆಂಬ ನಿಯಮವಿಲ್ಲ. ಕೆಲವು ಬಾರಿ ಗ್ರಹಗಳ ಅತಿಚಾರದಿಂದ, ಕಾಲದ ಅತಿರೇಕದಿಂದಲೂ 29 ತಿಂಗಳು, 30 ತಿಂಗಳು, 31 ತಿಂಗಳು, ಕೆಲವು ಬಾರಿ 35 ತಿಂಗಳುಗಳಲ್ಲಿಯೂ ಅಧಿಕಮಾಸ ಬರುವ ಸಂಭವವಿದೆ. ಅತಿಚಾರಾದಿಗಳು ಇಲ್ಲದಿರುವಾಗ 33ನೇ ಮಾಸದಲ್ಲಿ ಅಧಿಕಮಾಸವು ಬರುವುದೆಂದರ್ಥ. ಆದ್ದರಿಂದಲೇ ಮಹಾಭಾರತದಲ್ಲಿ 5 ವರ್ಷಕ್ಕೆರಡು ಅಧಿಕಮಾಸವು ಬರುತ್ತದೆ ಎಂದು ಹೇಳಲಾಗಿದೆ.

**ಪಂಚಮೇ ಪಂಚಮೇ ವರ್ಷೇ ದ್ವೌಮಾಸಾವಧಿಮಾಸಕೌ ।**
**ತೇಷಾಂ ಕಾಲಾತಿರೇಕೇಣ ಗ್ರಹಾಣಾಮತಿಚಾರತಃ ॥**

ಹಾಗೆಯೇ ಕಾಠಕಗೃಹ್ಯದಲ್ಲಿ ಮುವ್ವತ್ತನೆಯ ತಿಂಗಳಿನಲ್ಲಿ ಅಧಿಕಮಾಸವು ಬರುತ್ತದೆ ಎಂದು ಹೇಳಲಾಗಿದೆ. ಇವೆಲ್ಲವೂ ಬರುವ ಸಂಭವವಿದೆ ಎಂದಭಿಪ್ರಾಯವುಳ್ಳದ್ದು.

**ಮಲಮಾಸಃ ಸ ವಿಜ್ಞೇಯಃ ಮಾಸೇ ತ್ರಿಂಶತ್ತಮೇ ಭವೇತ್ ॥**

- ***ಪುರುಷೋತ್ತಮ ಮಾಸದ ಶ್ರೇಷ್ಠತೆ :***

ಪುರುಷೋತ್ತಮನು ಅಧಿಕಮಾಸಕ್ಕೆ ನಿಯಾಮಕನಾಗಿರುವನು. ಆದ್ದರಿಂದಲೇ ಅಧಿಕಮಾಸಕ್ಕೆ 'ಪುರುಷೋತ್ತಮ ಮಾಸ' ಎಂದು ಕರೆಯುವರು. ಪುರುಷೋತ್ತಮನಲ್ಲಿ ಗುಣಗಳು ಇರುವಂತೆ, ಈ ಪುರುಷೋತ್ತಮ ಮಾಸದಲ್ಲಿ ಗುಣಗಳು ಇರುವುವು. ಭಗವಂತನ ಸಾದೃಶ್ಯವನ್ನು ಹೊಂದಿ ಮಾಸಗಳಿಗೆ "ಅಧಿಕ"ನಾಗಿ ರಾರಾಜಿಸುತ್ತದೆ.

ಒಂದು ತಿಂಗಳು ಪೂರ್ತಿಯಾಗಿ ಅಧಿಕಮಾಸದಲ್ಲಿ ಆ ಮಾಸೋಕ್ತ ಧರ್ಮವನ್ನು ಆಚರಿಸುವವರಿಗೆ ಇಹ ಹಾಗೂ ಪರಗಳಲ್ಲಿ ಉತ್ತಮಲೋಕ ಪ್ರಾಪ್ತಿಯಾಗುವುವು. ಭಗವಂತನು ಇತರ ಮಾಸಗಳಲ್ಲಿ ಕರ್ಮವಾಚರಿಸುವಾಗ ಮಾಡಿದ ಅಪರಾಧಗಳನ್ನು ಕೆಲವು ಬಾರಿ ಕ್ಷಮಿಸದೆ ಇದ್ದದ್ದು ಇದೆ. ಆದರೆ ಪುರುಷೋತ್ತಮ ಮಾಸದಲ್ಲಿ ಕರ್ಮಗಳನ್ನು ಮಾಡುವಾಗ ಆಗುವ ಅಪರಾಧಗಳನ್ನು ಖಂಡಿತಾ ಕ್ಷಮಿಸುವನು. ಇತರ ಮಾಸಗಳಲ್ಲಿ ಮಾಡಿದ ಕರ್ಮಗಳಿಗೆ ಭಗವಂತನು ಫಲವನ್ನು ವಿಳಂಬವಾಗಿ ಕೊಡುವನು. ಆದರೆ ಪುರುಷೋತ್ತಮ ಮಾಸದಲ್ಲಿ ಫಲವನ್ನು ನೀಡಲು ವಿಳಂಬವನ್ನು ಮಾಡಲಾರನು.

**ಮದೀಯಮಾಸಭಕ್ತಾನಾಂ ನ ವಿಲಂಬಃ ಕದಾಚನ ।**

ಪುರುಷೋತ್ತಮ ಮಾಸದಲ್ಲಿ ಪುಣ್ಯವು ಅಧಿಕವಾಗಿ ಲಭಿಸುವುದರಿಂದ "ಅಧಿಕಮಾಸ"ವೆಂತಲೂ, ಪಾಪಗಳನ್ನು ಭಗವಂತನು ಪರಿಹರಿಸುವುದರಿಂದ "ಮಲಮಾಸ"ವೆಂದು ಹೆಸರು. ಅಧಿಕಮಾಸವನ್ನು ಆಚರಿಸುವ ಸ್ತ್ರೀಯರಿಗೆ ಸೌಭಾಗ್ಯ ಮಾತ್ರವಲ್ಲದೆ ಭಗವನ್ನಿಷ್ಟರಾದ ಅತ್ಯಧಿಕಪ್ರಿಯವೆನಿಸಿದ್ದು ಆ ಮಾಸದಲ್ಲಿ ಧರ್ಮಗಳನ್ನು ಮಾಡದೆ ಇರುವವರಿಗೆ ಎಂದೂ ಭಗವಂತನೂ ಅನುಕೂಲನಾಗುವುದಿಲ್ಲ. ಅಧಿಕಮಾಸದಲ್ಲಿ ಮಾಡುವ ಸ್ನಾನದಿಂದ ಭ್ರೂಣಹತ್ಯೆಯೂ ಪರಿಹೃತವಾಗುತ್ತದೆ. ಕಾರ್ತಿಕಾದಿ ಹನ್ನೆರಡು ಮಾಸಗಳಲ್ಲಿ ಯಾವ ಮಾಸವೂ ಪುರುಷೋತ್ತಮ ಮಾಸಕ್ಕೆ ಸಮವಾಗಲಾರದು.

**ಏತತ್ ತುಲ್ಯೋ ನ ಕೋಪ್ಯನ್ಯಃ ಕಾರ್ತಿಕಾದಿಷು ವಿದ್ಯತೇ॥ –ನಾ–ಉ**

ಈ ಮಾಸದಲ್ಲಿ ಮಾಡಿದ ಒಂದು ದಿನದ ಸ್ನಾನವೂ ದ್ವಾದಶಾಬ್ದ ಸಹಸ್ರ ಫಲಗಳನ್ನು ಕೊಡುತ್ತದೆ. ದುರ್ವಾಸರು ಈ ವ್ರತವನ್ನು ಆಚರಿಸಿದ್ದರಿಂದಲೇ ಭಗವಂತನ ಚಕ್ರವು ಅಟ್ಟಿಸಿಕೊಂಡು ಬಂದಿತೇ ವಿನಹ ಅವರನ್ನು ಸುಡಲಿಲ್ಲ.

**ಪುರುಷೋತ್ತಮವ್ರತಾದೇವ ತಚ್ಚಕ್ರಂ ಸಂನ್ಯವರ್ತತ ।**

ಚತುರ್ಮುಖ ಬ್ರಹ್ಮದೇವರು ದೇವತೆಗಳ ಸಮ್ಮುಖದಲ್ಲಿ ವೇದೋಕ್ತ ಸಾಧನೆಗಳನ್ನು ಸಂಗ್ರಹ ಮಾಡಿ ಅವುಗಳನ್ನು ತಕ್ಕಡಿಯಲ್ಲಿ ಒಂದು ಬದಿಯಲ್ಲಿಟ್ಟು ಇನ್ನೊಂದು ಬದಿಯಲ್ಲಿ ಪುರುಷೋತ್ತಮ ಮಾಸದಲ್ಲಿ ಸಾಧನೆಗಳನ್ನು ಇಟ್ಟು ತೂಗಿದರು. ಆಗ ಪುರುಷೋತ್ತಮ ಮಾಸದ ಸಾಧನೆಗಳೇ ಭಾರವಾಯಿತು.

**ತೋಲಯಾಮಾಸ ದೇವಾನಾಂ ಸನ್ನಿಧೌ ಚತುರಾನನಃ ।**
**ಲಘೂನ್ಯನ್ಯಾನಿ ಜಾತಾನಿ ಗುರುಶ್ಚ ಪುರುಷೋತ್ತಮಃ ॥**

ಅಧಿಕಮಾಸಕ್ಕೆ ಮಲಮಾಸವೆಂದೂ ಹೆಸರಿದೆ. ಸೂರ್ಯನ ಸಂಕ್ರಾಂತಿ ರಹಿತವಾದ ಈ ಮಾಸಗಳಲ್ಲಿ ಮಾಡಬಹುದಾದ ಶುಭಕಾರ್ಯಗಳಿಗೆ ಪ್ರಾಧಾನ್ಯತೆ ಇಲ್ಲವಾದ್ದರಿಂದಲೇ ಮಲಮಾಸವೆನಿಸಿದೆ. ಯಾವ ಪುಣ್ಯ ಕಾರ್ಯಗಳನ್ನು ಮಾಡುವುದಿಲ್ಲವೆಂದಾದರೆ ಧರ್ಮಸಾಧನೆ ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಪುರುಷೋತ್ತಮನು ಹೀಗೆ ತಿಳಿಸಿದ್ದಾನೆ. ವರ್ಷದಲ್ಲಿ ಮಾಡಬಹುದಾದ ಸಮಸ್ತವ್ರತಾದಿಗಳನ್ನು ಮಾಡಲು ಸಾಧ್ಯವಿಲ್ಲದಿದ್ದರೆ

ಚಾತುರ್ಮಾಸ್ಯದಲ್ಲಿ ಉಕ್ತವಾದ ವ್ರತಗಳನ್ನು ಆಚರಿಸಿದರೆ ವಾರ್ಷಿಕಫಲವು ಲಭಿಸುವುದು.

- ***ಮುವ್ವತ್ತಮೂರು ದೇವತೆಗಳು :*** ಏಕಾದಶರುದ್ರರು, ದ್ವಾದಶಾದಿತ್ಯರು, ಅಷ್ಟವಸುಗಳು, ಪ್ರಜಾಪತಿ ಹಾಗೂ ವಷಟ್‌ಕಾರ ಈ ದೇವತೆಗಳು ಅಧಿಕಮಾಸದ ಮುವ್ವತ್ತಮೂರು ದೇವತೆಗಳಾಗಿರುವರು. ಇವರ ಅಂತರ್ಯಾಮಿ ಭಗವಂತನಿಂದ ಅಭಿನ್ನನಾದ ಪುರುಷೋತ್ತಮನೇ ನಿಯಾಮಕ. ಅಧಿಕಮಾಸದ ಸಮಸ್ತ ಕಾರ್ಯಗಳೂ ಈ ಪುರುಷೋತ್ತಮನಿಗೆ ಪ್ರೀತ್ಯಾದಾಯಕವಾಗಿದೆ.

- ***ಅಷ್ಟವಸು – ಅಂತರ್ಯಾಮಿ :***

1. ದ್ರೋಣ ನಾಮಕವಸು – ವಿಷ್ಣು
2. ಧ್ರುವ ನಾಮಕವಸು – ಜಿಷ್ಣು
3. ದೋಷ ನಾಮಕವಸು – ಮಹಾವಿಷ್ಣು
4. ಅರ್ಕ ನಾಮಕವಸು – ಹರಿ
5. ಅಗ್ನಿ ನಾಮಕವಸು – ಕೃಷ್ಣ
6. ದ್ಯೌ ನಾಮಕವಸು – ಅಧೋಕ್ಷಜ
7. ಪ್ರಾಣ ನಾಮಕವಸು – ಕೇಶವ
8. ವಿಭಾವಸು ನಾಮಕವಸು – ಮಾಧವ

- ***ಏಕಾದಶರುದ್ರರು – ಅಂತರ್ಯಾಮಿ :***

1. ಭೀಮ ನಾಮಕ ರುದ್ರ – ರಾಮ
2. ರೈವತ ನಾಮಕ ರುದ್ರ – ಅಚ್ಯುತ
3. ಓಜ ನಾಮಕ ರುದ್ರ – ಪುರುಷೋತ್ತಮ
4. ಅಜೈಕಪಾತ್ ನಾಮಕ ರುದ್ರ – ಗೋವಿಂದ
5. ಮಹಾನ್ ನಾಮಕ ರುದ್ರ – ವಾಮನ

6. ಬಹುರೂಪ ನಾಮಕ ರುದ್ರ – ಶ್ರೀಶ
7. ಭವ ನಾಮಕ ರುದ್ರ – ಶ್ರೀಕಂಠ
8. ವಾಮದೇವ ನಾಮಕ ರುದ್ರ – ವಿಶ್ವಸಾಕ್ಷೀ
9. ಉಗ್ರ ನಾಮಕ ರುದ್ರ – ನಾರಾಯಣ
10. ವೃಷಾಕಪಿ ನಾಮಕ ರುದ್ರ – ಮಧುರಿಪು
11. ಅಹಿರ್ಬುಧ್ನಿ ನಾಮಕ ರುದ್ರ – ಅನಿರುದ್ಧ

- ***ದ್ವಾದಶಾದಿತ್ಯರು – ಅಂತರ್ಯಾಮಿ :***

1. ವಿವಸ್ವಾನ್ ನಾಮಕ ಆದಿತ್ಯ – ತ್ರಿವಿಕ್ರಮ
2. ಅರ್ಯಮಾ ನಾಮಕ ಆದಿತ್ಯ – ವಾಸುದೇವ
3. ಪೂಷಾ ನಾಮಕ ಆದಿತ್ಯ – ಜಗದ್ಯೋನಿ
4. ತ್ವಷ್ಟ ನಾಮಕ ಆದಿತ್ಯ – ಅನಂತ
5. ಸವಿತೃ ನಾಮಕ ಆದಿತ್ಯ – ಶೇಷಶಾಯಿ
6. ಭಗ ನಾಮಕ ಆದಿತ್ಯ – ಸಂಕರ್ಷಣ
7. ಧಾತೃ ನಾಮಕ ಆದಿತ್ಯ – ಪ್ರದ್ಯುಮ್ನ
8. ಪರ್ಜನ್ಯ ನಾಮಕ ಆದಿತ್ಯ – ದೈತ್ಯಾರಿ
9. ವರುಣ ನಾಮಕ ಆದಿತ್ಯ – ವಿಶ್ವತೋಮುಖ
10. ಮಿತ್ರ ನಾಮಕ ಆದಿತ್ಯ – ಜನಾರ್ಧನ
12. ಶಕ್ರ ನಾಮಕ ಆದಿತ್ಯ – ಧರಾವಾಸ
13. ಉರುಕ್ರಮ ನಾಮಕ ಆದಿತ್ಯ – ದಾಮೋದರ .....
32. ಪ್ರಜಾಪತಿ ನಾಮಕ ಆದಿತ್ಯ – ಅಘಾರ್ದನ
33. ವಷಟ್ಕಾರ ನಾಮಕ ಆದಿತ್ಯ – ಶ್ರೀಪತಿ

ಹೀಗೆ ಮುವ್ವತ್ತುಮೂರು ದೇವತೆಗಳು ಹಾಗೂ ಅಂತರ್ಯಾಮಿ ದೇವತೆಯನ್ನು ತಿಳಿದು ದಾನಾದಿಗಳನ್ನು ಮಾಡಬೇಕು. ಅದೇ ರೀತಿ

ಮುವ್ವತ್ತಮೂರು ತಿಂಗಳಲ್ಲಿ ಬರುವ ಅಧಿಕಮಾಸದಲ್ಲಿ ಮುವ್ವತ್ತು ರೂಪಗಳಿಂದ ಅಭಿನ್ನವಾದ ಪುರುಷೋತ್ತಮನ ಪ್ರೀತಿಗಾಗಿ 33 ಸಂಖ್ಯೆಯ ಅಪೂಪಗಳನ್ನು ಪ್ರತಿದಿನವೂ ವಿಪ್ರರಿಗೆ ದಾನ ಮಾಡುವುದರಿಂದ ಆ ತಿಂಗಳಿನಲ್ಲಿ ಬರುವ ಪುಣ್ಯವನ್ನು ಪಡೆಯುವಂತೆ ಅನುಗ್ರಹ ಮಾಡಿರುವನು.

- ***ಅಧಿಕಮಾಸದಲ್ಲಿ ಕರ್ತವ್ಯಗಳು :***

ಪುರುಷೋತ್ತಮಮಾಸದಲ್ಲಿ ಏಕಭುಕ್ತ, ಉಪವಾಸಗಳಿಗೆ ಅಧಿಕಫಲವಿದೆ. ಈ ಮಾಸದಲ್ಲಿ ಕೇವಲ ಒಂದು ದಿನ ಉಪವಾಸವನ್ನು ಮಾಡಿದರೂ ಅವರ ಅನಂತ ಪಾಪರಾಶಿಗಳು ಸುಟ್ಟು ಬೂದಿಯಾಗುವುವು.

**ಏಕಮಪ್ಯಪ್ಯುಪವಾಸಂ ಯಃ ಕರೋತ್ಯಸ್ಮಿನ್ ತಪೋನಿಧೇ ।**
**ಅಸಾವನಂತಪಾಪಾನಿ ಭಸ್ಮೀಕೃತ್ಯ ದ್ವಿಜೋತ್ತಮ ॥**

- ***ಮಾಸಸ್ನಾನ :*** ಈ ಮಾಸ ಪೂರ್ತಿಯಾಗಿ ಮಾಸ ನಿಯಾಮಕನ ಪ್ರೀತಿಗಾಗಿ ಅರುಣೋದಯ ಕಾಲದಲ್ಲೇ ಗಂಗಾದಿ ನದಿಗಳಲ್ಲಿ ತೀರ್ಥಗಳಲ್ಲಿ (ಮಧ್ವಸರೋವರ, ನೃಸಿಂಹತೀರ್ಥ, ಇತ್ಯಾದಿ) ಬಾವಿ ತಟಾಕಗಳಲ್ಲಾಗಲೀ ಸ್ನಾನ ಮಾಡಬೇಕು.
- ***ನಕ್ತಭೋಜನ :*** ಬೆಳಿಗ್ಗೆಯಿಂದ ಉಪವಾಸವಿದ್ದು ರಾತ್ರಿಯಲ್ಲಿ ಮಾತ್ರ ಭೋಜನ ಮಾಡುವುದು. ಇದರಿಂದ ವಿಶೇಷ ಭಗವದನುಗ್ರಹ ಪ್ರಾಪ್ತಿ.
- ***ಅಯಾಚಿತವ್ರತ :*** ಯಾರನ್ನೂ ಏನನ್ನೂ ಯಾಚಿಸದೆ ಒಂದು ತಿಂಗಳು ಪೂರ್ತಿಯಾಗಿ ಯದೃಚ್ಛಾಲಾಭ ಸಂತೃಪ್ತನಾಗಿರುವುದರಿಂದ ಭಗವಂತನು ವಿಶೇಷವಾಗಿ ಪ್ರೀತನಾಗುವನು.
- ***ಧಾರಣ ಪಾರಣ :*** ಒಂದು ದಿನ ಉಪವಾಸ (ಧಾರಣ) ಮರುದಿನ ಪಾರಣೆ ಹೀಗೆ ಹದಿನೈದು ದಿವಸ ಉಪವಾಸ ಹದಿನೈದು ದಿನ ಪಾರಣೆಯಿಂದ ಭಗವಂತನಿಗೆ ವಿಶೇಷವಾಗಿ ಪ್ರೀತಿಯನ್ನುಂಟಾಗುವುದು.
- ***ತಾಂಬೂಲದಾನ :*** ಅಧಿಕಮಾಸ ಪೂರ್ತಿಯಾಗಿ ಬ್ರಾಹ್ಮಣ ದಂಪತಿಯರಿಗೆ ತಾಂಬೂಲವನ್ನು ದಾನ ಮಾಡಿದರೆ ದೌರ್ಭಾಗ್ಯವು ಪರಿಹಾರವಾಗಿ ವಿಶೇಷ ಸೌಭಾಗ್ಯವು ಲಭಿಸುವುದು.
- ***ಅಖಂಡ ದೀಪದಾನ :*** ಪುರುಷೋತ್ತಮನ ಪ್ರೀತಿಗಾಗಿ ದೇವರ ಮುಂದೆ

"ಅಖಂಡ ದೀಪ"ವನ್ನು ಪ್ರಜ್ವಲಿಸಬೇಕು. ಈ ದೀಪವು ಒಂದು ತಿಂಗಳು ಪೂರ್ತಿಯಾಗಿ ಹಗಲು-ರಾತ್ರಿಯಲ್ಲಿ ಉರಿಯುತ್ತಿರಬೇಕು. ಆರದಂತೆ ಎಚ್ಚರವಹಿಸಬೇಕು. ಈ ದೀಪವನ್ನು ಬೆಳಗುವುದರಿಂದ ದಾರಿದ್ರ್ಯವು ಹೋಗಿ ಸಂಪತ್ತನ್ನು ಪಡೆಯಬಹುದು.

- ***ಬಾಗಿಣದಾನ :*** ಸ್ತ್ರೀಯರು ಅಧಿಕಮಾಸದಲ್ಲಿ 33 ಮುತ್ತೈದೆಯರುಗಳಿಗೆ ಮುವ್ವತ್ತಮೂರು ಬಾಗಿಣವನ್ನು ದಾನ ಮಾಡಬೇಕು. ಇದರ ಜೊತೆಗೆ 33 ಅಪೂಪಗಳನ್ನು ಒಂದು ಕಂಚಿನ ಪಾತ್ರೆಯಲ್ಲಿ ಹಾಕಿ ಅದನ್ನೂ ದಾನ ಮಾಡಬೇಕು. ಒಂದು ತಿಂಗಳು ಪೂರ್ತಿಯಾಗಿ ದಾನ ಮಾಡಲು ಶಕ್ತಿಯಿಲ್ಲದವರು ಈ ಕೆಳಗಿನ ವಿಶೇಷ ದಿವಸಗಳಲ್ಲಾದರೂ ದಾನ ಮಾಡಬೇಕು.

- ***ಅಪೂಪದಾನ – ಹಣ್ಣುಗಳ ದಾನ :***

ಒಂದು ತಿಂಗಳು ಪೂರ್ತಿಯಾಗಿ ಮುವ್ವತ್ತಮೂರು (33) ಅತಿರಸ (ಅಪೂಪ)ವನ್ನು ವಿಪ್ರನಿಗೆ ದಾನ ಮಾಡಬೇಕು. ಮುವ್ವತ್ತಮೂರಕ್ಕೆ ಕಡಮೆಯಾಗದಂತೆ ದಾನ ಮಾಡಬೇಕೆಂದು ಅರ್ಥವೇ ವಿನಃ ಸಂಖ್ಯೆಯಲ್ಲಿ ಮುವ್ವತ್ತ ಮೂರೇ ದಾನ ಕೊಡಬೇಕೆಂಬ ನಿಯಮವಿಲ್ಲ. ಅಧಿಕಮಾಸದಲ್ಲಿ ಪ್ರತಿದಿವಸ ಅಪೂಪದ ಜೊತೆಗೆ ಮುವ್ವತಮೂರು ಅಥವಾ ಅಧಿಕ ಸಂಖ್ಯೆಯಲ್ಲಾಗಲೀ ಬಾಳೆಹಣ್ಣು, ಮಾವಿನಹಣ್ಣು, ಹಲಸಿನ ಹಣ್ಣಿನ ತೊಳೆಗಳು ಇವುಗಳನ್ನು ದಾನ ಮಾಡಬಹುದು.

**ಅಧಿಕಮಾಸೇ ತು ಸಂಪ್ರಾಪ್ತೇ ಗುಡಸರ್ಪಿರ್ಯುತಾನಿ ಚ ।**
**ತ್ರಯಸ್ತ್ರಿಂಶದಪೂಪಾನಿ ದಾತವ್ಯಾನಿ ದಿನೇ ದಿನೇ ॥**

ಶುಕ್ಲಪಕ್ಷದ ದ್ವಾದಶೀ, ಕೃಷ್ಣಪಕ್ಷದ ದ್ವಾದಶೀ ಪೂರ್ಣಿಮೆ ಹಾಗೂ ಅಮಾವಾಸ್ಯೆಗಳು, ಕೃಷ್ಣಪಕ್ಷದ ಅಷ್ಟಮೀ, ನವಮೀ, ಹಾಗೂ ಚತುರ್ದಶಿ ದಿವಸಗಳಲ್ಲಾದರೂ ಅಪೂಪಾದಿಗಳನ್ನು ದಾನ ಮಾಡಬಹುದು. ಅದೇ ರೀತಿ ವೈಧೃತಿ ವ್ಯತೀಪಾತಾದಿ ವಿಶೇಷ ದಿವಸಗಳಲ್ಲಾದರೂ ದಾನ ಮಾಡಬಹುದು.

ಅಪೂಪವನ್ನು ಅಕ್ಕಿಯಿಂದ ತಯಾರಿಸಿರಬೇಕು. ಬೆಲ್ಲ-ತುಪ್ಪಗಳಿಂದ ಮಿಶ್ರಿತವಾಗಿರಬೇಕು. ಹೀಗೆ ತಯಾರಿಸಿದ ಅಪೂಪವು ಸಮಸ್ತ ದೇವತೆಗಳಿಗೂ

ಅವರಲ್ಲೂ ಮುವ್ವತ್ತಮೂರು ದೇವತೆಗಳಿಗೆ ಪ್ರೀತಿಯನ್ನುಂಟು ಮಾಡುವುದು. ಈ ದಾನದಿಂದ ಪೃಥಿವಿಯನ್ನು ದಾನ ಮಾಡಿದರೆ ಬರುವ ಪುಣ್ಯವು ಲಭಿಸುವುದು.

**ಅಧಿಕಮಾಸೇ ತು ಸಂಪ್ರಾಪ್ತೇ ತ್ರಯಂಸ್ತ್ರಿಂಶತ್ತು ದೇವತಾಃ ।**
**ಉದ್ಧಿಶ್ಯಾಪೂಪದಾನೇನ ಪೃಥ್ವೀದಾನ ಫಲಂ ಲಭೇತ್ ॥**

- ***ದಾನಕ್ರಮ :*** ಮುವ್ವತ್ತಮೂರು ಅಪೂಪಗಳನ್ನು ತಯಾರಿಸಿ ಒಂದು ಕಂಚಿನ ಪಾತ್ರೆಯಲ್ಲಿ ಇಟ್ಟು, ಬೇರೆ ಪಾತ್ರೆಯಲ್ಲಿ ತುಪ್ಪವನ್ನು ಇಟ್ಟು ಹಿರಣ್ಯ ಸಹಿತವಾಗಿ ದಾನ ಮಾಡಬೇಕು.

**ತ್ರಯಸ್ತ್ರೀಂಶದಪೂಪಾನ್ನಂ ಕಾಂಸ್ಯಪಾತ್ರೇ ನಿಧಾಯ ಚ ।**
**ಸಘೃತಂ ಸಹಿರಣ್ಯಂ ಚ ಬ್ರಾಹ್ಮಣಾಯ ನಿವೇದಯೇತ್ ॥**

ಹಿರಣ್ಯವು ದಾನ ಮಾಡಲು ಶಕ್ತಿಯಿಲ್ಲದಿರುವಾಗ ಮುವ್ವತ್ತಮೂರು ರೂಪಾಯಿಗಳನ್ನು ದಾನ ಮಾಡಬಹುದು.

- ***ಅಪೂಪ ದಾನ ಸಂಕಲ್ಪ :***

**ಆಚಮ್ಯ – ಪ್ರಾಣಾನಾಯಮ್ಯ – ದೇಶಕಾಲೌ ಸಂಕೀರ್ತ್ಯ ಅಷ್ಟವಸು, ಏಕಾದಶರುದ್ರ, ದ್ವಾದಶಾದಿತ್ಯ ಪ್ರಜಾಪತಿ, ವಷಟ್‌ಕಾರಾಖ್ಯ ತ್ರಯಸ್ತ್ರಿಂಶತ್ ದೇವತಾಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ವಿಷ್ಣ್ವಾದಿ ತ್ರಯಸ್ತ್ರಿಂಶನ್ನಾಮಧಾರಿ ಮಲಮಾಸದೇವತಾಭಿನ್ನ ಶ್ರೀ ಪುರುಷೋತ್ತಮ ಪ್ರೇರಣಯಾ ಶ್ರೀ ಪುರುಷೋತ್ತಮ ಪ್ರೀತ್ಯರ್ಥಂ ಪೃಥ್ವೀದಾನ ಸಮಫಲಂ ತ್ರಯಂಸ್ತ್ರಿಂಶತ್ ಅಪೂಪ ದಾನಮಹಂ ಕರಿಷ್ಯೆ ।**

***ಕಾಮ್ಯಸಂಕಲ್ಪ :*** **ಮಮ ನಿಖಿಲ ಪಾಪಶಮನ ಪೂರ್ವಕ ಪುತ್ರ ಪೌತ್ರಾದಿ ಧನ ಧಾನ್ಯಾದಿ ಕ್ಷೇಮಸಮೃದ್ಧಿ ಲೋಕದ್ವಯ ಸುಖಹೇತುಭೂತ ಭೂದಾನ ಫಲಾವಾಪ್ತ್ಯೈ ಅಪೂಪಪಚ್ಛಿದ್ರ ಸಮಸಂಖ್ಯ ವರ್ಷ ಸಹಸ್ರಾವಧಿ ಸ್ವರ್ಗಲೋಕ ನಿವಾಸಸಿದ್ಧ್ಯರ್ಥಂ ಮಲಮಾಸಪ್ರಯುಕ್ತಂ ಅಪೂಪದಾನಮಹಂ ಕರಿಷ್ಯೆ ।**

**ತದಂಗ ಪುರುಷೋತ್ತಮ ಪೂಜಾಂ ಕರಿಷ್ಯೆ ।**

ಅಸ್ಮಿನ್ ಬ್ರಾಹ್ಮಣೇ ಪುರುಷೋತ್ತಮಂ ಆವಾಹಯಿಷ್ಯೇ ಎಂದು ಹೇಳಿ ಮಂತ್ರಾಕ್ಷತೆಯನ್ನು ಬ್ರಾಹ್ಮಣನ ಮೇಲೆ ಹಾಕಬೇಕು.

***ವಿಷ್ಣು ಪ್ರಾರ್ಥನಾ ಮಂತ್ರ :***

ಚಂದ್ರಾಂಶುನಿರ್ಮಲಾಽಪೂಪಾಃ ಶಾಲಿಗೋಧೂಮನಿರ್ಮಿತಾಃ ।
ಆಹಾರಃ ಸರ್ವದೇವಾನಾಂ ತೇ ಮೇ ಕುರ್ವಂತು ಮಂಗಲಂ ॥
ವಿಷ್ಣುರೂಪೀ ಸಹಸ್ರಾಂಶುಃ ಸರ್ವಪಾಪವಿನಾಶನಂ ।
ಅಪೂಪಾನ್ನಪ್ರದಾನೇನ ಮಮ ಪಾಪಂ ವ್ಯಪೋಹತು ॥
ಕುರುಕ್ಷೇತ್ರಮಯಂ ದೇಶಃ ಕಾಲಃ ಸರ್ವದ್ವಿಜೋ ಹರಿಃ ।
ಪೃಥ್ವಿ ಸಮಮಿದಂ ದಾನಂ ಗೃಹಾಣ ಪುರುಷೋತ್ತಮ ॥
ಮಲಾನಾಂ ಚ ವಿಶುದ್ಧ್ಯರ್ಥಂ ಪಾಪಪ್ರಶಮನಾಯ ಚ ।
ಪುತ್ರ ಪೌತ್ರಾಭಿವೃದ್ಧ್ಯರ್ಥಂ ತವ ದಾಸ್ಯಾಮಿ ಭಾಸ್ಕರ ॥
ನಾರಾಯಣ ಜಗದ್ಬೀಜ ಭಾಸ್ಕರ ಪ್ರತಿರೂಪಕ ।
ವ್ರತೇನಾನೇನ ಪುತ್ರಾಂಶ್ಚ ಸಂಪದಂ ಚಾಪಿ ವರ್ಧಯ ॥
ಯಸ್ಯ ಹಸ್ತೇ ಗದಾಚಕ್ರೇ ಗರುಡೋ ಯಸ್ಯ ವಾಹನಃ ।
ಶಂಖಃ ಕರತಲೇ ಯಸ್ಯ ಸ ಮೇ ವಿಷ್ಣುಃ ಪ್ರಸೀದತು ॥
ಕಲಾ ಕಾಷ್ಠಾದಿರೂಪೇಣ ನಿಮೇಷ ಘಟಿಕಾದಿನಾ ।
ಯೋ ವಂಚಯತಿ ಭೂತಾನಿ ತಸ್ಮೈಕಾಲಾತ್ಮನೇ ನಮಃ ॥

- ***ಅಪೂಪದಾನ – ಭಗವದ್ರೂಪ ಚಿಂತನೆ :***

ವಿಷ್ಣು ಜಿಷ್ಣುಂ ಮಹಾವಿಷ್ಣುಂ ಹರಿಂ ಕೃಷ್ಣಂ ಅಧೋಕ್ಷಜಂ ।
ಕೇಶವಂ ಮಾಧವಂ ರಾಮಂ ಅಚ್ಯುತಂ ಪುರುಷೋತ್ತಮಂ ॥
ಗೋವಿಂದಂ ವಾಮನಂ ಶ್ರೀಶಂ ಶ್ರೀಕಂಠಂ ವಿಶ್ವಸಾಕ್ಷಿಣಂ ।
ನಾರಾಯಣಂ ಮಧುರಿಪುಂ ಅನಿರುದ್ಧಂ ತ್ರಿವಿಕ್ರಮಂ ॥
ವಾಸುದೇವಂ ಜಗದ್ಯೋನಿಂ ಅನಂತಂ ಶೇಷಶಾಯಿನಂ ।
ಸಂಕರ್ಷಣಂ ಚ ಪ್ರದ್ಯುಮ್ನಂ ದೈತ್ಯಾರಿಂ ವಿಶ್ವತೋಮುಖಂ ॥
ಜನಾರ್ದನಂ ಧರಾವಾಸಂ ದಾಮೋದರಮಘಾರ್ದನಂ ।
ಶ್ರೀಪತಿಂ ಚ ತ್ರಯಸ್ತ್ರಿಂಶದುದ್ದಿಶ್ಯ ಪ್ರತಿನಾಮಭಿಃ ॥

**ಮಂತ್ರೈರೇತೈಶ್ಚ ಯೋ ದದ್ಯಾತ್ ತ್ರಯಸ್ತ್ರಿಂಶದಪೂಪಕಂ ।**
**ಪ್ರಾಪ್ನೋತಿ ವಿಪುಲಾಂ ಲಕ್ಷ್ಮೀಂ ಪುತ್ರ ಪೌತ್ರಾದಿ ಸಂತತಿಂ ॥**

ಇದಂ ಸೋಪಸ್ಕರಂ ತ್ರಯಸ್ತ್ರಿಂಶದಪೂಪಂ ಸದಕ್ಷಿಣಾಕಂ, ಸತಾಂಬೂಲಂ, ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಪುರುಷೋತ್ತಮಸ್ಯ, ಪ್ರೀತಿಂ ಕಾಮಯಮಾನಃ ತುಭ್ಯಮಹಂ ಸಂಪ್ರದದೇ ನ ಮಮ, ನ ಮಮ – ಇತಿ ನಮಸ್ಕುರ್ಯಾತ್ ।

ಅನೇನ ತ್ರಯಂಸ್ತ್ರಿಂಶದಪೂಪದಾನೇನ
ಶ್ರೀಪುರುಷೋತ್ತಮ ಪ್ರೀಯತಾಂ
ಪ್ರೀತೋ ವರದೊ ಭವತು – ಶ್ರೀಕೃಷ್ಣಾರ್ಪಣಮಸ್ತು

- ***ಅಧಿಕ, ನಿಜ ಎರಡರಲ್ಲೂ ಮಾಡಲೇಬೇಕಾದ್ದು :***

ಪುಂಸವನ, ಬಡ್ಡಿವ್ಯವಹಾರ, ಸೀಮಂತ, ಮಾಸಿಕ ಶ್ರಾದ್ಧ, ಸಪಿಂಡೀಕರಣ, ನಿತ್ಯ ಸಂಧ್ಯಾವಂದನ, ಜಾತಕರ್ಮ, ವೈಶ್ವದೇವಾದಿ ಕಾರ್ಯಗಳಲ್ಲಿ ಅಧಿಕಮಾಸವನ್ನು ಬಿಡಬಾರದು. ಅಂದರೆ ಅಧಿಕಮಾಸ–ನಿಜಮಾಸ ಇವೆರಡರಲ್ಲೂ ಈ ಮೇಲಿನ ಕಾರ್ಯವನ್ನು ಬಿಡಬಾರದು.

**ಗರ್ಭೇ ವಾರ್ಧುಷಿಕೇ ಭೃತ್ಯೇ ಶ್ರಾದ್ಧಕರ್ಮಣಿ ಮಾಸಿಕೇ ।**
**ಸಪಿಂಡೀಕರಣೇ ನಿತ್ಯೇ ನಾಧಿಮಾಸಂ ವಿವರ್ಜಯೇತ್ ॥**

- ***ಕಾಮ್ಯಕರ್ಮವು ನಿಷಿದ್ಧ :***

ಅಧಿಕಮಾಸದಲ್ಲಿ ವಿವಾಹ – ಯಾತ್ರೋತ್ಸವ, ಯಜ್ಞ ಇವುಗಳನ್ನು ಮಾಡಬಾರದು.

**ನ ಕುರ್ಯಾದಧಿಕೇ ಮಾಸಿ ಕಾಮ್ಯಂ ಕರ್ಮ ಕದಾಚನ ।**
**ತದಧಿಮಾಸಃ ಕಥಿತಃ ವಿರಂಚಿನಾ ವಿವಾಹಯಾತ್ರೋತ್ಸವ ಯಜ್ಞ ನಾಶಕೃತ್॥**

***ಕಾಮ್ಯ ಕರ್ಮಗಳನ್ನು ಪ್ರಾರಂಭಿಸಬಾರದು :*** ಅಧಿಕಮಾಸದಲ್ಲಿ ಕಾಮ್ಯಕರ್ಮಗಳನ್ನು ಪ್ರಾರಂಭಿಸಬಾರದು. ಅಧಿಕಮಾಸವು ಪ್ರಾರಂಭವಾಗುವ ಮುಂಚೆಯೇ ಯಾವುದಾದರೂ ಕರ್ಮವನ್ನು ಪ್ರಾರಂಭಿಸಿದ್ದರೆ ಅದರ ಸಮಾಪ್ತಿಯನ್ನು ಅಧಿಕಮಾಸದಲ್ಲಿ ಮಾಡಬಹುದು.

**ಪ್ರಾರಬ್ಧಂ ಕರ್ಮ ಯತ್ಕಿಂಚಿತ್ ತತ್ತು ಕಾರ್ಯಂ ಮಲ್ಲಿಮ್ಲುಚೇ ।**
**ಅಸುರ್ಯಾ ನಾಮ ಯೇ ಮಾಸ ನ ತೇಷು ಮಮ ಸಮ್ಮತಾಃ ॥**

**ವ್ರತಾನಾಂ ಚೈವ ಯಜ್ಞಾನಾಂ ಪ್ರಾರಂಭಾಶ್ಚ ಸಮಾಪ್ತಯಃ ॥**

- ***ವರ್ಜ್ಯ ಸಂಗ್ರಹ :***

ಅಗ್ನ್ಯಾಧೇಯ, ದೇವತಾಪ್ರತಿಷ್ಠೆ, ಯಜ್ಞ, ವ್ರತಗಳು, ಉಪಾಕರ್ಮ, ವೃಷೋತ್ಸರ್ಗ, ಚೂಡಾಕರ್ಮ, (ಚೌಲ) ವಿವಾಹ, ನೂತನ ಸನ್ಯಾಸಿಗಳ ಪಟ್ಟಾಭಿಷೇಕ, ಇವುಗಳನ್ನು ಅಧಿಕದಲ್ಲಿ ಮಾಡಬಾರದು. ತುಲಾಪುರುಷದಾನ, ಹಿರಣ್ಯಗರ್ಭದಾನ, ಬ್ರಹ್ಮಾಂಡದಾನ, ಕಲ್ಪಪಾದಪದಾ, ಗೋಸಹಸ್ರದಾನ ಮುಂತಾದ ಹದಿನಾರು ದಾನಗಳನ್ನು ಅಧಿಕದಲ್ಲಿ ಮಾಡಬಾರದು.

ಬಂಗಾರವನ್ನು ಧರಿಸಬಾರದು, ಹೊಸಮನೆಯನ್ನು ಕಟ್ಟಿಸಿ ಅಧಿಕಮಾಸದಲ್ಲಿ ವಾಸ್ತುದೇವತಾ ಪೂಜೆ, ಗೃಹಪ್ರವೇಶವನ್ನು ಮಾಡಬಾರದು.

- ***ಪ್ರತಿಸಾಂವತ್ಸರಿಕ ಶ್ರಾದ್ಧ ವಿಚಾರ :***

ಪ್ರತಿವರ್ಷವೂ ಮೃತನ ಹನ್ನೆರಡನೆಯ ತಿಂಗಳಿನಲ್ಲಿ ಮೃತವ್ಯಕ್ತಿಯನ್ನುದ್ದೇಶಿಸಿ ಸಾಂವತ್ಸರಿಕ ಶ್ರಾದ್ಧವನ್ನು ಮಾಡಬೇಕು. ಆದರೆ ಅಧಿಕಮಾಸವು ಬಂದಾಗ ಹನ್ನೆರಡರ ಬದಲಾಗಿ ಹದಿಮೂರನೇ ತಿಂಗಳಿನಲ್ಲಿ ಸಾಂವತ್ಸರಿಕ ಶ್ರಾದ್ಧವು ಮಾಡಬೇಕಾಗುತ್ತದೆ.

**ಪ್ರತ್ಯಬ್ಧಂ ದ್ವಾದಶೇ ವರ್ಷೆ ಕಾರ್ಯಾ ಪಿಂಡಕ್ರಿಯಾ ದ್ವಿಜೈಃ ।**
**ಕ್ವಚಿತ್ ತ್ರಯೋದಶೇऽಪಿ ಸ್ಯಾದ್ ಆದ್ಯಂ ಮುಕ್ತ್ವಾ ತು ವತ್ಸರಂ ॥**

ಬೇರೆ ಮಾಸದಲ್ಲಿ ಮೃತನಾದ ವ್ಯಕ್ತಿಯ ಪ್ರಥಮ ಸಾಂವತ್ಸರಿಕ ಶ್ರಾದ್ಧವು ಅಧಿಕಮಾಸದಲ್ಲಿ ಬಂದರೆ ಅಧಿಕಮಾಸದಲ್ಲೇ ಪ್ರಥಮ ಸಾಂವತ್ಸರಿಕ ಶ್ರಾದ್ಧವನ್ನು ಮಾಡಬೇಕು. ಏಕೆಂದರೆ ಶ್ರಾದ್ಧಕ್ಕೆ ಯಾವ ಮಾಸ, ಯಾವ ಪಕ್ಷ, ಯಾವ ತಿಥಿಯಿರುವಾಗ ಮೃತನಾಗಿರುವನೋ ಪ್ರತಿವರ್ಷದಲ್ಲಯೂ ಅದೇ ಮಾಸ, ಅದೇ ಪಕ್ಷ ತಿಥಿಯಲ್ಲಿಯೇ ಮೃತಾಹಶ್ರಾದ್ಧವನ್ನು ಮಾಡಬೇಕೆಂದಿದೆ.

**ಆಬ್ಧಿಕಂ ಪ್ರಥಮಂ ಯತ್ ಸ್ಯಾತ್ ತತ್ ಕುರ್ವೀತ ಮಲ್ಲಿಂಮ್ಲುಚೇ ।**

ಪ್ರಥಮಾಬ್ದಿಕವನ್ನು ಬಿಟ್ಟು ಉಳಿದ ಎರಡು ಮೂರನೆಯ ಸಾಂವತ್ಸರಿಕ ಶ್ರಾದ್ಧವನ್ನು ಮಾಡುವಾಗ ಅಧಿಕಮಾಸದಲ್ಲೂ, ನಿಜಮಾಸದಲ್ಲೂ ಎರಡರಲ್ಲೂ ಮಾಡಬೇಕು. ಆದರೆ ಪದ್ಧತಿಯಲ್ಲಿ ಮಲಮಾಸದಲ್ಲಿ ಸಂಕಲ್ಪ ಮಾತ್ರ ಮಾಡಿ, ನಿಜಮಾಸದಲ್ಲಿ ಪಾರ್ವಣ ಶ್ರಾದ್ಧವನ್ನು ಮಾಡುವರು.

**ಪಿಂಡವರ್ಜಂ ತ್ವಸಂಕ್ರಾಂತೇ ಸಂಕ್ರಾಂತೌ ಪಿಂಡಸಂಯುತಂ ।**

ಆದರೆ ಮೃತನಾದ ಒಂದು ವರ್ಷದ ಅವಧಿಯಲ್ಲೆ ಬರುವ ಊನಷಾಣ್ಮಾಸಿಕಾದಿಗಳನ್ನು ಅಧಿಕದಲ್ಲೇ ಮಾಡುವುದು.

- ***ತೀರ್ಥಯಾತ್ರೆ :***

ವಸ್ತುತಃ ಅಧಿಕಮಾಸದಲ್ಲಿ ತೀರ್ಥಯಾತ್ರೆಯನ್ನು ಮಾಡಬಾರದು ಎಂದು ನಿಷೇಧವನ್ನು ಮಾಡಿರುವರು. ಆದರೆ ಈ ನಿಷೇಧವಾದರೂ ಪ್ರಪ್ರಥಮವಾಗಿ ತೀರ್ಥಯಾತ್ರೆಯನ್ನು ಮಾಡುವವರಿಗೆ ಮಾತ್ರ, ಈ ಮೊದಲೇ ತೀರ್ಥಕ್ಷೇತ್ರ ದರ್ಶನ, ಶ್ರಾದ್ಧಾದಿಗಳನ್ನು ಮಾಡಿ ಎರಡನೇ ಬಾರಿ ತೀರ್ಥಯಾತ್ರೆಯನ್ನು ಕೈಗೊಂಡಿರುವವರಿಗೆ ನಿಷೇಧವಿಲ್ಲ. ಅವರು ತೀರ್ಥಯಾತ್ರೆಯನ್ನು ಮಾಡಬಹುದು.

**ನ ಯಾತ್ರಾಂ ನ ವಿವಾಹಂ ಚ ನ ಚ ವಾಸ್ತುನಿವೇಶನಂ ।**
**ನ ಪ್ರತಿಷ್ಠಾ ಚ ದೇವಾನಾಂ ಪ್ರಾಸಾದ ಗ್ರಾಮ ಭೂರುಹಾಂ ॥**

ಈ ಶ್ಲೋಕಕ್ಕೆ ಸ್ಮೃತಿ ಕೌಸ್ತುಭ (527 ಪುಟ)ದಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ.

**ನ ಯಾತ್ರಾಂ ಇತಿ ಪ್ರಥಮಯಾತ್ರಾಯಾಂ ನಿಷೇಧೇನ**
**ಯಾತ್ರೋದ್ದೇಶ್ಯ ಸ್ನಾನ ಪಿಂಡದಾನಾದೇಃ ಸುತರಾಂ ನಿಷೇಧ ಇತಿ ।**
**ಮಲಮಾಸೇಽಪಿ ಅನಾವೃತ್ತತೀರ್ಥಯಾತ್ರಾಂ ಪರಿತ್ಯಜೇತ್ ।**

ಅನಾವೃತ್ತತೀರ್ಥಯಾತ್ರೆ ಎಂದರೆ ಆವೃತ್ತಿಯಾಗದಿರುವ ತೀರ್ಥಯಾತ್ರೆ ಎಂದರ್ಥ. ಮೊದಲನೆಯ ಬಾರಿಗೆ ಮಾಡುವ ಯಾತ್ರೆ. ಅಧಿಕಮಾಸದಲ್ಲೇ ಮೃತರಾದರೆ ಅವರನ್ನು ಉದ್ದೇಶಿಸಿ ಮಾಡುವ ಹನ್ನೆರಡು ದಿವಸದ ಕರ್ಮಗಳನ್ನು ಅಧಿಕಮಾಸದಲ್ಲಿಯೇ ಮಾಡಬೇಕು. ಜನನವಾದರೆ ಜಾತಕರ್ಮ, ಜ್ವರಾದಿಗಳಿಗೆ ಶಾಂತಿ, ನಾಂದೀಶ್ರಾದ್ಧ, ಪ್ರಾಯಶ್ಚಿತ್ತಗಳು ಇವುಗಳನ್ನು ಅಧಿಕಮಾಸದಲ್ಲಿಯೇ ಮಾಡಬೇಕು.

ನಿಮಿತ್ತಗಳು ಅಧಿಕ ಹಾಗೂ ನಿಜಮಾಸಗಳೆರಡರಲ್ಲಿಯೂ ಬಂದದ್ದಾದರೆ ಎರಡೂ ತಿಂಗಳಿನಲ್ಲೂ ಮಾಡಬೇಕು. ಮೃತತಿಥಿಗಳು ಎರಡೂ ತಿಂಗಳಲ್ಲಿ ಬರುವುದರಿಂದ ಎರಡರಲ್ಲಿಯೂ ಕರ್ಮವು ವಿಹಿತವಾಗಿದೆ. ಪ್ರತಿಸಾಂವತ್ಸರಿಕ ಶ್ರಾದ್ಧ, ಉದುಕುಂಭ ಶ್ರಾದ್ಧ, ಮನ್ವಾದಿ, ಮಹಾಲಯ, ಯುಗಾದಿಗಳಲ್ಲಿ ಮಾಡಬೇಕಾದ ಶ್ರಾದ್ಧಗಳು, ಅಧಿಕವಲ್ಲದ ಶುದ್ಧ ಮಾಸದಲ್ಲಿ ಮೃತರಾದವರಿಗೆ ಮಾಡಬೇಕಾದ ಆಬ್ಧಿಕಶ್ರಾದ್ಧ ಇವುಗಳನ್ನು ನಿತ್ಯತರ್ಪಣ, ಅಮಾವಾಸ್ಯಾ ಪ್ರಯುಕ್ತ ಶ್ರಾದ್ಧವನ್ನು ಉಭಯಮಾಸದಲ್ಲೂ ಮಾಡಲೇಬೇಕು.

ತೀವ್ರವಾದ ಜ್ವರಾದಿಗಳು ಬಂದಾಗ ಪರಿಹಾರಕ್ಕಾಗಿ ಮಾಡುವ ಶ್ರೀರುದ್ರಜಪಾರ್ಚ ನಾದಿಗಳನ್ನು ಅಧಿಕಮಾಸದಲ್ಲೇ ಆಚರಿಸಬೇಕು. ಸೀಮಂತಾದಿಗಳಿಗೆ ನಿಶ್ಚಿತ ತಿಂಗಳು ಅಧಿಕಮಾಸವಾಗಿದ್ದರೆ ಆ ಮಾಸದಲ್ಲೇ ಮಾಡಬೇಕು. ಪುಂಸವನವನ್ನೂ ಅಧಿಕಮಾಸದಲ್ಲೇ ಪ್ರಾಪ್ತವಾದರೆ ಅಲ್ಲಿಯೇ ಆಚರಿಸಬೇಕು.

**ರೋಗೇ ಚಾಲಭ್ಯಯೋಗೇ ಚ ಸೀಮಂತೇ ಪುಂಸವನೇಽಪಿ ಚ ।**
**ಯದ್ ದಾನಾದಿ ಸಮುದ್ದಿಷ್ಟಂ ಕುರ್ವನ್ನತ್ರ ನ ದುಷ್ಯತಿ ॥**

ಮಳೆಗಾಗಿ ಮಾಡಬಹುದಾದ ಕಾರೀರಿಯಾಗ, ಸುಂದರ ಕಾಂಡ, ವಿರಾಟಪರ್ವ ಪಾರಾಯಣ ಪ್ರವಚನಗಳನ್ನು ಅಧಿಕಮಾಸದಲ್ಲೇ ಮಾಡಬಹುದು.

- ***ಗ್ರಹಣ ನಿಮಿತ್ತ ದಾನಾದಿಗಳು :*** ಗ್ರಹಣನಿಮಿತ್ತ ಸ್ನಾನ – ದಾನ – ಜಪಾದಿಗಳನ್ನು ಅಧಿಕದಲ್ಲಿಯೇ ಮಾಡಬೇಕು.
- ***ನೈಮಿತ್ತಿಕ ಕಾರ್ಯಗಳಿಗೆ ನಿಷೇಧವಿಲ್ಲ :*** ಭಾದ್ರಪದ ಮಾಸವು ಅಧಿಕಮಾಸವಾದರೇ ಭಾದ್ರಪದ ಕೃಷ್ಣಪಕ್ಷವು ಅಪರಪಕ್ಷ ಎಂದರೆ "ಮಹಾಲಯ"ವಾದ್ದರಿಂದ ಮಹಾಲಯದ ಹದಿನಾರು ದಿವಸಗಳು ಯಾಗಕ್ಕೆ ಸಮಾನಗಳಾಗಿವೆಯಾದ್ದರಿಂದ ಮಹಾಲಯದಲ್ಲಿ ಕೊಡುವ ತರ್ಪಣ, ಶ್ರಾದ್ಧಾದಿಗಳು ಅಕ್ಷಯವಾಗುತ್ತವೆ ಎಂದಿದೆ. ಆದ್ದರಿಂದ ಮಹಾಲಯ ಶ್ರಾದ್ಧವನ್ನು ಎರಡು ಮಾಸದಲ್ಲಿಯೂ ನೈಮಿತ್ತಕವಾದ್ದರಿಂದ ಎರಡು ಬಾರಿ ಮಾಡಲೇಬೇಕು.

**ಮುಕ್ತ್ವಾ ನೈಮಿತ್ತಿಕಂ ಕರ್ಮ ।**

- ***ಚಾತುರ್ಮಾಸ್ಯ :***

ಚಾತುರ್ಮಾಸ್ಯ ಕಾಲದಲ್ಲಿ ಯಾವುದಾದರೂ ಒಂದು ತಿಂಗಳು ಅಧಿಕಮಾಸವಾದರೆ ಆ ತಿಂಗಳಿನಲ್ಲಿ ಅದನ್ನು ಅಧಿಕ ಹಾಗೂ ನಿಜಮಾಸಗಳೆರಡರಲ್ಲೂ ಆ ವ್ರತವನ್ನು ಆಚರಿಸಲೇಬೇಕು. ಶಾಕವ್ರತದಲ್ಲಿ ಅಧಿಕಮಾಸ ಬಂದಾಗ ಎರಡು ತಿಂಗಳೂ ಶಾಕವ್ರತವನ್ನು ಆಚರಿಸಬೇಕು.

**ಯತ್ತು ಶಾಕವ್ರತಾದಿಕಂ ತತ್ತು ಮಾಸದ್ವಯೇ ಕಾರ್ಯಂ ।**

- ***ಅಧಿಕಮಾಸ ಕಥಾಭಾಗ :***

ಲಕ್ಷ್ಮೀದೇವಿಯು ಭಗವಂತನನ್ನು ಹೀಗೆ ಪ್ರಾರ್ಥಿಸಿದಳು. ಭಗವಂತನೇ ಲೋಕಹಿತಕ್ಕಾಗಿ ನಾನು ಕೇಳುತ್ತಿರುವ ಈ ಪ್ರಶ್ನೆಗೆ ಉತ್ತರಿಸು.

ಈ ಲೋಕದಲ್ಲಿ ನಾವು ಏನು ದಾನಾದಿಗಳನ್ನು ಮಾಡುವೆವೋ ಅವುಗಳೇ ನಮಗೆ ಮುಂದೆ ಲಭಿಸುತ್ತದೆ. ದಾನವಿಹೀನ ನಾದವನ ಜನ್ಮವು ನಿರರ್ಥಕವೇ ಸರಿ. ಅಧಿಕಮಾಸವು ಪ್ರಾಪ್ತವಾದಾಗ ಕ್ಷೌರ, ಉಪನಯನ, ವಿವಾಹ, ವ್ರತಾಚರಣೆ, ಕಾಮ್ಯೋಪವಾಸ ಇವುಗಳನ್ನು ಮಾಡಬಾರದೆಂದು ತಿಳಿಸಲಾಗಿದೆ. ಅದರಿಂದ ಅಧಿಕಮಾಸವು ಬಂದಾಗ ಯಾವ ವ್ರತವನ್ನು ಮಾಡಬೇಕು. ಯಾವ ದಾನವನ್ನು ಮಾಡಬೇಕು.

**ಕ್ಷೌರಂ ಮೌಂಜೀ ವಿವಾಹಶ್ಚ ವ್ರತಂ ಕಾಮ್ಯೋಪವಾಸಕಂ ।**
**ಮಲ್ಲಿಂಮ್ಲುಚೇ ಸದಾ ತ್ಯಾಜ್ಯಂ ಗೃಹಸ್ಥೇನ ವಿಶೇಷತಃ ॥**

ಭಗವಂತನು ಹೀಗೆಂದನು, ದೇವಿಯೇ ಅಧಿಕಮಾಸಕ್ಕೆ ಪುರುಷೋತ್ತಮ ನಾಮಕನಾದ ನಾನೇ ದೇವತೆಯಾಗಿರುವೆನು. ಈ ಕಾಲದಲ್ಲಿ ಅನುಷ್ಠಾನ ಮಾಡಿದ ಸ್ನಾನ, ಜಪ, ಹೋಮಾದಿಗಳು ಅಕ್ಷಯವಾಗುತ್ತವೆ.

ಅಧಿಕಮಾಸದಲ್ಲಿ ಯಾವ ಪುಣ್ಯ ಕಾರ್ಯವನ್ನು ಮಾಡದೆ ಯಾರು ಕಾಲವನ್ನು ಕಳೆಯುವರೋ ಅವರಿಗೆ ದಾರಿದ್ರ್ಯ, ಪುತ್ರಶೋಕ, ಪಾಪಲೇಪಾದಿಗಳು ಉಂಟಾಗುವುವು.

**ಮಲಮಾಸೋ ಗತಃ ಶೂನ್ಯಃ ಯೇಷಾಂ ದೇವಿ ಪ್ರಮಾದತಃ ।**
**ದಾರಿದ್ರ್ಯಂ ಪುತ್ರಶೋಕಂ ಚ ಪಾಪಪಂಕವಿಗ್ಹೂತಮ್ ॥**

ತಿಂಗಳು ಪೂರ್ತಿಯಾಗಿ ಧರ್ಮಾಚರಣೆಯನ್ನು ಮಾಡಲು ಅಶಕ್ಯರಾದವರು ಕೃಷ್ಣಪಕ್ಷದ ಅಷ್ಟಮೀ – ನವಮೀ – ಚತುರ್ದಶಿಯಿಂದಾದರೂ ಅಪೂಪದಾನಾದಿ ಅಧಿಕಮಾಸೋಕ್ತಕರ್ಮಾನುಷ್ಠಾನವನ್ನು ಮಾಡಬೇಕು. ಅಧಿಕಮಾಸದಲ್ಲಿ ವ್ಯತೀಪಾತಯೋಗವಿರುವ ದಿನದಲ್ಲಿ, ದ್ವಾದಶಿಯಂದು, ಪೂರ್ಣಿಮ, ಚತುರ್ದಶಿ, ನವಮ್ಯಾದಿಗಳಲ್ಲಿ ಯಥಾ ಶಕ್ತಿ ಲಭ್ಯವಿರುವ ವಸ್ತುಗಳಿಂದಲೇ ಪೂಜೆಯನ್ನು ಮಾಡಬೇಕು.

ಸೂರ್ಯನಾರಾಯಣನ ಪ್ರೀತಿಗಾಗಿ ಮುವ್ವತ್ತುಮೂರು ಅಪೂಪಗಳನ್ನು ತುಪ್ಪ ಸಹಿತವಾಗಿ ದಾನ ಮಾಡಬೇಕು. ಪೂರ್ವದಲ್ಲಿ ಕೌಶಿಕನೆಂಬ ವಿಪ್ರನಿದ್ದನು. ಮಹಾತಪಸ್ವಿಯೂ ಜಿತೇಂದ್ರಿಯನೂ ಆದ ಕೌಶಿಕನಿಗೆ ಮಹಾಕ್ರೂರಿಯಾದ, ಅಧಮನಾದ ಮೈತ್ರೇಯನೆಂಬ ಪುತ್ರನಿದ್ದನು. ಮದ್ಯಪಾನದಿಂದ ಮತ್ತನಾದ ಮೈತ್ರೇಯನು ಕಾಮಾಂಧನಾಗಿದ್ದನು.

ಒಂದು ದಿನದಲ್ಲಿ ಮೈತ್ರೇಯನು ಬೇಟೆಗಾಗಿ ಕಾಡಿಗೆ ಹೊರಟನು. ಸೌರಾಷ್ಟ್ರನಗರಕ್ಕೆ ಬಂದ ಆ ದುಷ್ಟನು ವಿಪ್ರನೊಬ್ಬನನ್ನು ಕೊಂದು ಹಾಕಿ ಅವನಲ್ಲಿರುವ ಅಪಾರ ಹಣವನ್ನು ಅಪಹರಿಸಿದನು. ಏನೂ ಅರಿಯದ ವಿಪ್ರನನ್ನು ಕೊಂದದ್ದಕ್ಕಾಗಿ ದೇಶದಲ್ಲಿ ಹಾಹಾಕಾರವುಂಟಾಯಿತು. ಆ ರಾಷ್ಟ್ರವೇ ಸುಟ್ಟು ಬೂದಿಯಾದಂತಾಯಿತು. ವಿಷವು ವಿಷವಲ್ಲ ಬ್ರಾಹ್ಮಣರ ಸೋತ್ತೇ ವಿಷ. ಇಂತಹ ಬ್ರಹ್ಮಸ್ವ ಅಪಹರಣ, ಬ್ರಾಹ್ಮಣ ಪ್ರಾಣಹರಣ ಇವೆರಡನ್ನೂ ಮಾಡಿರುವ ಮೈತ್ರೇಯನು ಮೃತನಾಗಿ ನರಕಕ್ಕೆ ಬಿದ್ದನು. ನರಕದಲ್ಲಿ ಯಮದೂತರು ನಾನಾ ವಿಧವಾಗಿ ಹಿಂಸಿಸಿ ಕೃಮಿಕುಂಡದಲ್ಲಿ ಎಸೆದರು.

**ಘೋರೇ ವೈ ಕೃಮಿಕುಂಡೇ ಚ ಮೈತ್ರೇಯಃ ಸ ನಿಪಾತಿತಃ ।**

ಹತ್ತು ಸಾವಿರವರ್ಷಗಳ ಕಾಲ ನರಕದಲ್ಲಿ ದುಃಖವನ್ನು ಅನುಭವಿಸಿದನು. ಈ ವಿಷಯವನ್ನು ನಾರದರ ಮೂಲಕ ತಂದೆ ಕೌಶಿಕನು ತಿಳಿದನು. ಪಾಪಪರಿಹಾರಕ್ಕಾಗಿ ಶೃತಿಶಾಸ್ತ್ರಗಳಲ್ಲಿ ಹುಡುಕಿ ಬ್ರಹ್ಮಹತ್ಯೆಗೆ ಪರಿಹಾರವನ್ನು ಅರಿತುಕೊಂಡನು.

ಪುತ್ರನ ಉದ್ಧಾರಕ್ಕಾಗಿ ಅಧಿಕಮಾಸದ ವ್ರತವನ್ನು ಕೈಗೊಂಡು ತನ್ನ ಪುತ್ರನನ್ನ ನರಕರೂಪದಿಂದ ಉದ್ಧರಿಸಿದನು. ಮುವ್ವತ್ತಮೂರು ಅಪೂಪಗಳನ್ನು ದಾನ ಮಾಡಿದನು.

**ಅಧಿಮಾಸೇ ತು ಸಂಪ್ರಾಪ್ತೇ ಪಾಪಮುಕ್ತ್ಯೈ ಜನಾರ್ದನು ।**
**ದಾನೇನಾನೇನ ವಿಪ್ರೇಂದ್ರ ಸೂರ್ಯೋ ಮೇ ಪ್ರೀಯತಾಮಿತಿ ।**

ಸ್ತ್ರೀಯರೂ ಮಲಮಾಸವ್ರತವನ್ನು ಆಚರಿಸಿದರೆ ದಾರಿದ್ರ್ಯವಾಗಲೀ, ವೈಧವ್ಯವನ್ನಾಗಲೀ ಪುತ್ರಶೋಕವನ್ನಾಗಲೀ ಹೊಂದುವುದಿಲ್ಲ.

**ಅಸಂಕ್ರಾಂತವ್ರತಂ ನಾರೀ ಯಾ ಕರೋತಿ ಹರಿಪ್ರಿಯಂ ।**
**ದಾರಿದ್ರ್ಯಂ ಪುತ್ರಶೋಕಂ ಚ ವೈಧವ್ಯಂ ನ ಭವೇತ್ ಸದಾ ॥**

ಹೀಗೆ ಅಧಿಕಮಾಸವು ಅಧಿಕಫಲವನ್ನು ಕೊಡುವುದರಿಂದ ಅಧಿಕಮಾಸವು ಅಧಿಕ ಫಲ ಕೊಡಲು ಸಮರ್ಥವಾಗಿದೆ.

- ***ಕ್ಷಯಮಾಸ :*** ಮಲಮಾಸವು ಎರಡು ವಿಧ– ಅಧಿಕಮಾಸ ಹಾಗೂ ಕ್ಷಯಮಾಸ ಎಂದು. ಅಧಿಕಮಾಸದಲ್ಲಿ ವರ್ಷಕ್ಕೆ ಹದಿಮೂರು ತಿಂಗಳುಗಳಾದರೇ ಕ್ಷಯಮಾಸದಲ್ಲಿ ಹನ್ನೊಂದೇ ತಿಂಗಳುಗಳು ಇರುತ್ತವೆ. ಕ್ಷಯಮಾಸವು ಶೂನ್ಯಮಾಸವಾಗಿರುತ್ತದೆ. ಚಾಂದ್ರಮಾನ ಮಾಸದಲ್ಲಿ ಶುದ್ಧವಾದ ಎರಡು ಸೂರ್ಯ ಸಂಕ್ರಮಣಗಳು ಬಂದರೆ ಅದನ್ನು ಶೂನ್ಯಮಾಸ ಅಥವಾ ಕ್ಷಯಮಾಸವೆನ್ನುವರು.

**ದ್ವಿಸಂಕ್ರಾಂತಿಮಾಸಃ ಕ್ಷಯಾಖ್ಯಃ ಕದಾಚಿತ್ ।**

ಕ್ಷಯಮಾಸವು 141 ವರ್ಷಕ್ಕೆ ಒಂದು ಬಾರಿ ಬರುತ್ತದೆ. ಪುನಃ ಹತ್ತೊಂಭತ್ತು ವರ್ಷಕ್ಕೆ ಬರುತ್ತದೆ. ಈ ಹಿಂದೆ 1883ರಂದು ಕ್ಷಯಮಾಸವು ಬಂದಿತ್ತು. ಮುಂದೆ 1883+141=2124 ರಂದು ಕ್ಷಯಮಾಸವು ಬರಲಿದೆ. ಕ್ಷಯ ಮಾಸವು ಕಾರ್ತಿಕಮಾಸ, ಮಾರ್ಗಶಿರ, ಪುಷ್ಯ ಈ ಮೂರು ಮಾಸಗಳಲ್ಲಿಯೇ ಬರುತ್ತದೆ. ***"ಕ್ಷಯಃ ಕಾರ್ತಿಕಾದಿತ್ರಯೇ ಸ್ಯಾತ್ ನಾನ್ಯಥಾ"*** ಕ್ಷಯಮಾಸವು ಬಂದಾಗ ವರ್ಷದ ಮಧ್ಯದಲ್ಲೇ ಎರಡು ಅಧಿಕಮಾಸಗಳೂ ಬರುತ್ತವೆ. ಅಂದರೆ ಕಾರ್ತಿಕಾದಿತ್ರಯ ಮಾಸಗಳಲ್ಲಿ ಒಂದು ತಿಂಗಳು ಕ್ಷಯಮಾಸವಾದಾಗ ಅದರ ಮೊದಲು ಒಂದು ಅಧಿಕಮಾಸ ಕ್ಷಯಮಾಸದ ಅನಂತರ ಒಂದು ಅಧಿಕಮಾಸವು ಬರುತ್ತದೆ.

ಈ ಎರಡು ಅಧಿಕಮಾಸಗಳಲ್ಲಿ ಮೊದಲನೆಯದು ಪ್ರಾಕೃತವೆಂದು, ಎರಡನೆಯದು ಮಲ್ಲಿಂಮ್ಲುಚವೆಂದು ಕರೆಯಲ್ಪಟ್ಟಿವೆ. ಇವುಗಳಲ್ಲಿ ಪ್ರಾಕೃತವು

ಸರ್ವಕರ್ಮಗಳನ್ನು ಮಾಡಲು ಯೋಗ್ಯವಾಗಿದ್ದು ಎರಡನೇ ಮಲ್ಲಿಂಮ್ಲುಚವು ಸರ್ವಕರ್ಮ ವರ್ಜ್ಯವಾಗಿದೆ. ಕ್ಷಯಮಾಸವು ಬಂದಾಗ ಆ ಮಾಸದಲ್ಲಿ ಕ್ಲೃಪ್ತವಾಗಿ ಮಾಡಬೇಕಾದ ಶ್ರಾದ್ಧಾದಿ ಕರ್ಮಗಳು ಲೋಪವಾಗುತ್ತವೆ ಎಂದು ಭಾವಿಸಬಾರದು. ಎರಡು ಸಂಕ್ರಮಣ ಬಂದ ಕ್ಷಯಮಾಸದಲ್ಲಿಯೇ ಎರಡು ತಿಂಗಳಲ್ಲಿಯೂ ಮಾಡಬೇಕಾದ ಕರ್ಮವನ್ನು ಮಾಡಬೇಕು. ತಿಥಿಯು ಪೂರ್ವಾರ್ಧವು ಪೂರ್ವಮಾಸವೆಂತಲೂ, ತಿಥಿಯು ಎರಡನೆ ಅರ್ಧವು ಮುಂದಿನ ಮಾಸವೆಂತಲೂ ತಿಳಿದು ಎರಡೂ ತಿಂಗಳ ಕರ್ಮವನ್ನು ಮಾಡಬೇಕು.

**ತಿಥ್ಯರ್ಧೇ ಪ್ರಥಮೇ ಪೂರ್ವೋ ದ್ವಿತೀಯೇರ್ಧೇ ತದುತ್ತರಃ ।**
**ಮಾಸಾವಿತಿ ಬುಧೈಃ ಚಿಂತ್ಯಾ ಕ್ಷಯಮಾಸಸ್ಯ ಮಧ್ಯಗೌ ॥**

ಕ್ಷಯಮಾಸದ ಉದಾಹರಣೆಯನ್ನು ಧರ್ಮಸಿಂಧುವಿನಲ್ಲಿ ಹೀಗೆ ತಿಳಿಸಲಾಗಿದೆ. ಭಾದ್ರಪದಮಾಸ, ಅಮಾವಾಸ್ಯೆ, ಕನ್ಯಾಸಂಕ್ರಮಣ, ಅಶ್ವಯುಜ ಮಾಸವು ಅಧಿಕಮಾಸ, ನಿಜ ಆಶ್ವಯುಜ ಶುದ್ಧಪಾಡ್ಯದಂದು ತುಲಾ ಸಂಕ್ರಮಣ ಕಾರ್ತೀಕ ಶುಕ್ಲ ಪಾಡ್ಯದಂದು ವೃಶ್ಚಿಕ ಸಂಕ್ರಮಣ, ಮಾರ್ಗಶಿರ ಪಾಡ್ಯದಂದು ಧನುಃ ಸಂಕ್ರಮಣ, ಅದೇ ತಿಂಗಳು ಅಮಾವಾಸ್ಯೆ ಮಕರ ಸಂಕ್ರಮಣ.

ಹೀಗೆ ಒಂದೇ ಮಾರ್ಗಶಿರಮಾಸದಲ್ಲಿ ಸೂರ್ಯನು ಧನುರಾಶಿಗೂ ಹಾಗೂ ಮಕರರಾಶಿಗೂ ಪ್ರವೇಶಿಸಿದ್ದರಿಂದ ಒಂದೇ ತಿಂಗಳಲ್ಲಿ ಎರಡು ಸಂಕ್ರಮಣವು ಬಂದದ್ದರಿಂದ ಮಾರ್ಗಶಿರಮಾಸವು ಕ್ಷಯಮಾಸವೆನಿಸುತ್ತದೆ. ಈ ಮಾರ್ಗಶಿರಮಾಸವು ಮಾರ್ಗಶಿರ ಮಾಸವೂ ಪುಷ್ಯಮಾಸವೂ ಎರಡೂ ಆಗಿದೆ. ಆದ್ದರಿಂದ ಮಾರ್ಗಶಿರ ಮಾಸದ ಪಾಡ್ಯ ಮೊದಲಾದ ತಿಥಿಗಳ ಪೂರ್ವಾರ್ಧವು ಮಾರ್ಗಶಿರ ಮಾಸದ ತಿಥಿಗಳೆಂದು, ತಿಥಿಯು ಉತ್ತರಾರ್ಧವು ಪುಷ್ಯ ಮಾಸವೆಂತಲೂ ತಿಳಿದು ಆಯಾಯ ತಿಂಗಳಿನಲ್ಲಿ ಬರುವ ಶ್ರಾದ್ಧಾದಿಗಳನ್ನು ಪೂರ್ವಾರ್ಧ ಹಾಗೂ ಉತ್ತರಾರ್ಧಗಳಲ್ಲಿ ಎರಡರಲ್ಲೂ ಮಾಡಿ ಕರ್ಮಲೋಪವನ್ನು ತಪ್ಪಿಸಬೇಕು. ಕ್ಷಯಮಾಸದ ಅವಧಿಯಲ್ಲಿ ತಿಥಿಯು ಪೂರ್ವಾರ್ಧದಲ್ಲಿ ಮೃತರಾದವರಿಗೆ ಮಾರ್ಗಶಿರ ಮಾಸದಲ್ಲಿ ಸಾಂವತ್ಸರಿಕ ಶ್ರಾದ್ಧವೆಂದು, ತಿಥಿಯು ಉತ್ತರಾರ್ಧದಲ್ಲಿ ಮೃತರಾದವರಿಗೆ ಪುಷ್ಯ ಮಾಸವು ಸಾಂವತ್ಸರಿಕ ಶ್ರಾದ್ಧ ಮಾಸವೆಂದು

ತಿಳಿಯಬೇಕು. ಇದೇ ರೀತಿ ಜನನ, ಹುಟ್ಟುಹಬ್ಬಗಳ ಮಾಸಗಳನ್ನು ತಿಳಿಯಬೇಕು.

- ***ಮುಂದೆ ಬರುವ ಕ್ಷಯಮಾಸಗಳು :***

ಈ ಹಿಂದೆ 974ನೇ ಶಾಲಿವಾಹನಶಕೆಯಲ್ಲಿ ಕ್ಷಯಮಾಸವು ಬಂದಿತ್ತು. ನಂತರ 141 ವರ್ಷಗಳು ಕಳೆದ ಮೇಲೆ ಎಂದರೆ (974+141=1115) ಶಾಲಿವಾಹನ ಶಕೆಯಲ್ಲಿ ಬರಬೇಕು. 1115+141 ಎಂದರೆ 1256ನೇ ಶಾಲಿವಾಹನ ಶಕೆಯ ಸಂವತ್ಸರದಲ್ಲಿ ಬರಬೇಕು. ಪ್ರಸ್ತುತ 1885ರಂದು ಮಾರ್ಗಶಿರ ಮಾಸವು ಕ್ಷಯಮಾಸವಾಗಿ ಪುಷ್ಯ ಮಾಸವು ಒಂದೇ ಒಂದು ಋತುವುಳ್ಳ ಮಾಸವಾಗಿತ್ತು.

ಇದೇ ರೀತಿ ಮುಂದೆ 19 ವರ್ಷಗಳ ನಂತರ ಇನ್ನೊಂದು ಕ್ಷಯ ಮಾಸವಾಗಬೇಕು. 1885+19=1904 ನೇ ಶಾಲಿವಾಹನ ಶಕೆ ಸಂವತ್ಸರದಲ್ಲಿಯೂ, ಪುನಃ 1904+141=2045ರಲ್ಲಿಯೂ ಕ್ಷಯಮಾಸವು ಬರಲಿದೆ.

**ಶ್ರೀಕೃಷ್ಣಾರ್ಪಣಮಸ್ತು**



ಹರಿ ಅನಿರುದ್ಧನಾಗೆ ಸಿರಿ ಶಾಂತಿದೇವಿಯಾದೆ

ಹರಿ ಪ್ರದ್ಯುಮ್ನನಾಗೆ ಸಿರಿ ಕೃತಿದೇವಿಯಾದೆ

ಹರಿ ಸಂಕರುಷಣನಾಗೆ ಸಿರಿ ಜಯದೇವಿಯಾದೆ

ಹರಿ ವಾಸುದೇವನಾಗೆ ಸಿರಿ ಮಾಯಾದೇವಿಯಾದೆ

ಎರಡೆರಡವತಾರಕ್ಕೆ ಮರಳಿ-ಮರಳಿ ಚತುರ ಅವತಾರಗಳು ಆದೆ

ಪರಿಪರಿ ಅವತಾರಕ್ಕೆ ಪರಿಪರಿ ರೂಪಳಾದೆ

ಶರಣರ ಪಾಲಕ ಗೋಪಾಲವಿಠಲನ ಚರಣಕಮಲವನ್ನು ಪರಿಪರಿ ಸೇವಿಸುತ